ಶ್ರೀ:

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ



# ಯುಕ್ತಿಮಲ್ಲಿಕಾ

## ಗುಣಸೌರಭ-೧

ಸಂಪುಟ-೨

॥ ಶ್ರೀಃ ॥

'ಶ್ರೀಶಸ್ತೇ ಸುಶ್ರಿಯಂ ದದ್ಯಾತ್'

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ

# ಯುಕ್ತಿಮಲ್ಲಿಕಾ

ಮೂಲಸಹಿತ ಸಮಗ್ರ ಕನ್ನಡಾನುವಾದ

ಶ್ರೀ ಶ್ರೀ ಸುರೋತ್ತಮತೀರ್ಥಶ್ರೀಪಾದವಿರಚಿತಾ

## ಭಾವವಿಲಾಸಿನೀ

ಸಂಸ್ಕೃತ ವ್ಯಾಖ್ಯಾನ ಹಾಗೂ ಸಮಗ್ರ ಕನ್ನಡಾನುವಾದ

## ಗುಣಸೌರಭಮ್ - ೧

## ಸಂಪುಟ - ೨

ಅನುಗ್ರಹ :

ಪರಮಪೂಜ್ಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರು

ಪ್ರಥಮಪರ್ಯಾಯ, ಸೋದೆ ಶ್ರೀವಾದಿರಾಜಮಠ, ಉಡುಪಿ

ಸಂಪಾದಕರು :

ಪಿ.ಎಸ್. ಶೇಷಗಿರಿ ಆಚಾರ್ಯ

ಪ್ರಕಾಶಕರು :

ಶ್ರೀಮದ್ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನಕೇಂದ್ರ

ಸೋದೆ ಶ್ರೀವಾದಿರಾಜ ಮಠ, ರಥಬೀದಿ, ಉಡುಪಿ.

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತ ಯುಕ್ತಿಮಲ್ಲಿಕಾ-
ಶ್ರೀ ಸುರೋತ್ತಮತೀರ್ಥವಿರಚಿತ ಭಾವವಿಲಾಸಿನೀ ವ್ಯಾಖ್ಯಾನ ಮತ್ತು ಕನ್ನಡ ಅನುವಾದ ಸಹಿತ
**ಗುಣಸೌರಭ - ಭಾಗ ೨**




| | | |
|---|---|---|
| ಪುಟಗಳು | - | V + 506 = 511 |
| ಸಂಪುಟ | - | ೨(೧೦) |
| ಮುದ್ರಿತ ಪ್ರತಿಗಳು | - | ೧೦೦೦ |
| ಪ್ರಕಾಶಕರು | - | ಶ್ರೀಮದ್ ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನ ಕೇಂದ್ರ, ಸೋದೆ ಶ್ರೀವಾದಿರಾಜಮಠ, ರಥಬೀದಿ, ಉಡುಪಿ. |
| ಮುಖಪುಟವಿನ್ಯಾಸ | : | ಲಕ್ಷ್ಮೀನಾರಾಯಣ ತಂತ್ರಿ |
| ಪುಟ ಸಂಯೋಜನೆ | : | ಬದರಿನಾರಾಯಣಾಚಾರ್ಯ ಎಸ್. ಕಡ್ಡಿ |
| ಅಕ್ಷರ ಜೋಡಣೆ | : | ಕೆ. ಗಣಪತಿ ಭಟ್<br>ಶ್ರೀಮತಿ ನಾಗಲತಾ (ಸುಧಾ),<br>ಎಂ. ಶರತ್ ಚಂದ್ರ |
| ಮುದ್ರಕರು | : | ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್<br>ಮೈಸೂರು. ✆ : 7899779255 |
| ಗ್ರಂಥಪ್ರಾಪ್ತಿ | : | ಸೋದೆ ಶ್ರೀವಾದಿರಾಜಮಠ, ಉಡುಪಿ. |

# ಉತ್ತರಕಲ್ಪಸಮೀರರ ಪರಾಕು



★ ''ಉದ್ದಂಡೋದ್ದಂಡ, ಪರವಾದಿ ಪ್ರಚಂಡ, ಗಂಡಭೇರುಂಡ, ಮಾಯಿಮತ ವಿಧ್ವಂಸಕ, ಮಧ್ವಮತೋದ್ಧಾರಕ, ಸುಧಾರಸ ಆಸ್ವಾದ, ದಿಗ್ವಿಜಯೀಕೃತ ಆಸೇತುಮರ್ಯಾದ, ಭಾವಿಹನುಮಚ್ಚಕ್ರವರ್ತಿನ್, ಗುರುಸಾರ್ವಭೌಮ ಹಂಸಾರೂಢವಾದಿರಾಜ ಭೋ ಪರಾಕ್!''

★ ''ಮಧ್ವಾಗಮ ಸಿದ್ಧಾಗಮ. ಈ ಮಧ್ವಮತವೆ ಸಕಲಮತಕೆ ಮೇಲೆನಿಸಿದ ಮತ. ಈ ಮಧ್ವಮತವನು ಪಿಡಿದು ಅಬದ್ಧಮತವನು ತ್ಯಜಿಸಿ ನಡೆದರೆ (ಜಯಿಸಿದರೆ) ಮುಕ್ತಿಗೈವುದಾ ಸುಕೃತವು (ಸುಕೃತಂ) ಒಂದು ಕ್ಷಣದಲ್ಲಿ ವಾದಿರಾಜರ ದ್ವಂದ್ವಪದವನು ಭಜಿಸಿದವರಿಗೆ ಬೆಂದು ಹೋಗ್ವುದು ಪೂರ್ವಜನ್ಮದ ದುರಿತಕಾನನವು; ಈ ಮಂದಮತಿಗಳು ಬಲ್ಲರೇ ಗೋವಿಂದ ಭಕ್ತಮಹಿಮೆಯನು ಪುರಂದರಾದಿಗಳು ಅರಿವರಲ್ಲದೇ ಮಿಕ್ಕವರರಿಯಬಹುದೇ! ಪಾರಮೇಷ್ಠಿ ಪದಾಧಿಕಾರಿ ಋಜುಗಣಸ್ಥ (ಪದಸ್ಥ) ಗುರುರಾಜ ಪಟ್ಟಭದ್ರವ್ಯಾಖ್ಯಾನಸಿಂಹಾಸನಾಧೀಶ್ವರ ಅಜ್ಞಾನತಿಮಿರಮಾರ್ತಾಂಡ ಸುಜ್ಞಾನ ತೇಜೋಮಯ!''

## ರಾಜರ ಸಂದೇಶ



### ''ಸೋऽಹಂ ಎನ್ನದಿರಿ''

ಯೋ ಸೋಹಂಭಾವನಾಮೂಲಾಸ್ತೇ
ಬಾಲಾಃ ಕಿಲ ಸರ್ವಶಃ ।
ವಂಚನಂ ಕಿಲ ತತ್ಜ್ಞಾನಂ
ಕತ್ಥನಂ ಕಿಲ ತದ್ವಚಃ ॥

ಯಾರು ಅಹಂಕಾರ ಮೂಲಕವಾದ ನಾನೇ ಬ್ರಹ್ಮನೆಂಬ ಭಾವನೆಯನ್ನು ಹೊಂದಿರುತ್ತಾರೆಯೋ ಅವರೆಲ್ಲರೂ ಖಲರಷ್ಟೆ. ಅವರ ಜ್ಞಾನವು ವಂಚನೆಯಷ್ಟೆ! ಅವರ ಮಾತುಗಳು ನಿಂದನೀಯ ಮಾತುಗಳಷ್ಟೆ!

### ''ಸೂತ್ರವಿರೋಧಿ ಮತಗಳ ನಂಬದಿರಿ...''

ತಸ್ಮಾದವಿದ್ಯಮಾನಸ್ಯ ಭೇದಸ್ಯೋತ್ಕೀರ್ತನಂ ಶ್ರುತೌ ।
ಉಪಾಸನಾರ್ಥಮಿತಿ ಯನ್ಮತಂ ತಚ್ಚ ವಿಗರ್ಹಿತಮ್ ॥

ಶ್ರುತಿಗಳು ಕೇವಲ ಉಪಾಸನೆಗೋಸ್ಕರವಾಗಿ ಭೇದವನ್ನು ಹೇಳುತ್ತವೆ ಎಂಬ ಮತವು ಯುಕ್ತಿಗಳಿಂದಲೂ, ಬ್ರಹ್ಮಸೂತ್ರಗಳಿಂದಲೂ ಮತ್ತು ಸ್ವಾನುಭವ- ಗಳಿಂದಲೂ ವಿರೋಧವು ಬರುವುದರಿಂದ ಅತ್ಯಂತ ನಿಂದ್ಯವಾದುದು.





# ಗುಣಸೌರಭಮ್ - ಸಂಪುಟ - ೨

## ವಿಷಯಾನುಕ್ರಮಣಿಕೆ



—೦—

॥ ಶ್ರೀಮದ್ಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಲಕ್ಷ್ಮೀಹಯಗ್ರೀವಾಯನಮಃ ॥

**ನಾಪಿ ಪ್ರಮಾಯಾ ಜನಕೋ ದೋಷಾಭಾವೋ ಗುಣೋಽಪಿ ವಾ ।**
**ಅಸಲ್ಲಿಂಗಪರಾಮರ್ಶಾದ್ ಯತೋ ಯಾದೃಚ್ಛಿಕಾನುಮಾ ॥ ೪೧೧ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಅಸಲ್ಲಿಂಗಪರಾಮರ್ಶಾತ್ = ಭ್ರಾಂತಿರೂಪವಾದ ಪರಾಮರ್ಶದಿಂದ, ಯಾದೃಚ್ಛಿಕಾನುಮಾ = ಯಾದೃಚ್ಛಿಕವಾದ ಪ್ರಮಾರೂಪವಾದ ಅನುಮಿತಿಯು ಉಂಟಾಗುತ್ತದೆಯೋ, ಆ ಕಾರಣದಿಂದ, ದೋಷಾಭಾವಃ = ದೋಷಾಭಾವವಾಗಲೀ, ವಾ = ಅಥವಾ, ಗುಣೋಽಪಿ = ಗುಣವಾಗಲೀ, ಪ್ರಮಾಯಾಃ = ಪ್ರಾಮಾಣ್ಯೋತ್ಪತ್ತಿಯನ್ನು ಕುರಿತು, ನಾಪಿಜನಕಃ = ಕಾರಣವಾಗುವುದಿಲ್ಲ.

**ಅನುವಾದ–** ಪ್ರಮಾರೂಪವಾದ ಜ್ಞಾನವನ್ನು ಕುರಿತು ದೋಷಾಭಾವವಾಗಲೀ, ಅಥವಾ ಗುಣವಾಗಲೀ ಕಾರಣವಲ್ಲ. ಏಕೆಂದರೆ ಅಸಲ್ಲಿಂಗಪರಾಮರ್ಶದಿಂದಲೂ ಯಾದೃಚ್ಛಿಕವಾಗಿ ಪ್ರಮಾತ್ಮಕವಾದ ಅನುಮಿತಿಯು ಉಂಟಾಗುತ್ತದೆ.

**ಭಾವವಿಲಾಸಿನೀ–**ಉತ್ಪತ್ತಾವಪಿ ಪ್ರಾಮಾಣ್ಯಸ್ವತಸ್ತ್ವಂ ಸಮರ್ಥಯಿತುಮಾರಭತೇ– **ನಾಪೀತಿ** ॥ ಕುತೋ ನೇತ್ಯತ ಆಹ – **ಅಸಲ್ಲಿಂಗೇತಿ** ॥ ಅಸಚ್ಚ ತಲ್ಲಿಂಗಂ ಚ ಬಾಷ್ಪಾರೋಪಿತಧೂಮಾದಿಕಂ ತಸ್ಯ ಪರಾಮರ್ಶ ಇತಿ ವಿಗ್ರಹಃ। ವಸ್ತುಗತ್ಯಾಽಧೂಮಸ್ಯಾಪಿ ತಸ್ಯ ವಹ್ನಿವ್ಯಾಪ್ಯಧೂಮವಾನಿತ್ಯೇವ ಪರಾಮೃಶ್ಯಮಾನತ್ವಾಲ್ಲಿಂಗಪರಾಮರ್ಶ ಇತ್ಯುಕ್ತಮ್ । ಯಾದೃಚ್ಛಿಕಾನುಮಾ । ಪ್ರಮಾರೂಪೇತಿ ಶೇಷಃ ॥ ೪೧೧ ॥

**ವಿವರಣೆ–** ಇಲ್ಲಿಯವರೆಗೆ ಪ್ರಾಮಾಣ್ಯಕ್ಕೆ ಜ್ಞಪ್ತಿಯಲ್ಲಿ ಸ್ವತಸ್ತ್ವವನ್ನು ಸಮರ್ಥನೆ ಮಾಡಿ ಇನ್ನುಮುಂದೆ ಉತ್ಪತ್ತಿಯಲ್ಲೂ ಸ್ವತಸ್ತ್ವವನ್ನು ಸಮರ್ಥನೆ ಮಾಡುತ್ತಾರೆ. ಎಲ್ಲಿ ವಹ್ನಿಯಿದೆಯೋ, ಆ ಸ್ಥಳದಲ್ಲಿರುವ ಬಾಷ್ಪವನ್ನು ನೋಡಿ, ಭಾಷ್ಪವನ್ನು ಧೂಮವೆಂದು ಗ್ರಹಿಸಿ 'ವಹ್ನಿವ್ಯಾಪ್ಯಧೂಮವಾನ್ ಅಯಂ' ಎಂಬ ಪರಾಮರ್ಶವನ್ನು ಹೊಂದಿ 'ಅಯಂ ವಹ್ನಿಮಾನ್' ಎಂಬ ಅನುಮಿತಿಯು ಉಂಟಾಗುತ್ತದೆ. ಈ ಅನುಮಿತಿಯು

ಪ್ರಮಾರೂಪವಾದದ್ದೇ. ಆದರೆ ಇಲ್ಲಿ ಪರಾಮರ್ಶೆಯು ಭ್ರಾಂತಿರೂಪವಾದದ್ದು. ಬಾಷ್ಪವನ್ನು ಧೂಮವೆಂದು ತಿಳಿದು ಪರಾಮರ್ಶೆ ಉಂಟಾಗಿದೆ. ಸಲ್ಲಿಂಗಪರಾಮರ್ಶವೇ ಅನುಮಿತಿಯಲ್ಲಿ ತಾರ್ಕಿಕರು ಒಪ್ಪಿರುವ ಗುಣ. ಅಂತಹ ಗುಣವಿಲ್ಲದಿದ್ದರೂ ಮತ್ತು ಭ್ರಾಂತಿರೂಪವಾದ ದೋಷವೇ ಇದ್ದರೂ ಇಲ್ಲಿ ಪ್ರಮಾರೂಪವಾದ ಅನುಮಿತಿಯು ಉಂಟಾಗಿದೆ. ಆದ್ದರಿಂದ ಪ್ರಮೆಯನ್ನು ಕುರಿತು ಗುಣವಾಗಲೀ, ದೋಷಾಭಾವವಾಗಲೀ ಕಾರಣವಲ್ಲ.

ಸಲ್ಲಿಂಗಸ್ಯ ಪರಾಮರ್ಶೋ ಗುಣಸ್ತೇಽನುಮಿತೌ ಮತಃ ।
ತದಭಾವೇಽಪಿ ಜಾತೇಯಮನುಮಾ ಯತ್ಪ್ರಮಾತ್ಮಿಕಾ ॥
ಸರ್ವತ್ರ ಚ ಪ್ರಮಾಯಾಸ್ತದ್ಗುಣಜತ್ವಕಥಾ ವೃಥಾ ॥ ೪೧೨ ॥

**ಅರ್ಥ–** ತೇ = ನಿನಗೆ, ಅನುಮಿತೌ = ಅನುಮಿತಿಸ್ಥಳದಲ್ಲಿ, ಸಲ್ಲಿಂಗಸ್ಯ = ಸಮಿಚೀನವಾದ ಲಿಂಗದ, ಪರಾಮರ್ಶಃ = ಪರಾಮರ್ಶೆಯು, ಗುಣಃ = ಗುಣವೆಂದು, ಮತಃ = ಸಮ್ಮತವಾಗಿದೆ. ಯತ್ = ಯಾವಕಾರಣದಿಂದ, ತದಭಾವೇಽಪಿ = ಸಲ್ಲಿಂಗ ಪರಾಮರ್ಶೆ ಇಲ್ಲದಿದ್ದರೂ, ಪ್ರಮಾತ್ಮಿಕಾ= ಪ್ರಮಾತ್ಮಕವಾದ, ಗುಣವಿಲ್ಲದಿದ್ದರೂ, ಇಯಂ ಅನುಮಾ = ಈ ಅನುಮಿತಿಯು, ಜಾತಾ = ಹುಟ್ಟಿದೆಯೋ, ಆ ಕಾರಣದಿಂದ, ಸರ್ವತ್ರ ಚ = ಎಲ್ಲಾ ಕಡೆಗಳಲ್ಲಿಯೂ ಕೂಡ, ಪ್ರಮಾಯಾಃ = ಪ್ರಾಮಾಣ್ಯಕ್ಕೆ, ಗುಣಜತ್ವಕಥಾ = ಗುಣದಿಂದ ಜನ್ಯವಾಗಿದೆ ಎಂಬ ಕಥೆಯು, ವೃಥಾ = ವ್ಯರ್ಥವಾದುದು.

**ಅನುವಾದ–** ನೀನು ಸಲ್ಲಿಂಗಪರಾಮರ್ಶವನ್ನು ಅನುಮಿತಿಯಲ್ಲಿ ಗುಣ ಎಂದು ಅಂಗೀಕರಿಸಿದ್ದೀಯೆ. ಅಂತಹ ಗುಣವಿಲ್ಲದಿದ್ದರೂ ಇಲ್ಲಿ ಪ್ರಮಾತ್ಮಕವಾದ ಅನುಮಿತಿಯು ಉಂಟಾಗಿದೆ. ಆದ್ದರಿಂದ ಸರ್ವಸ್ಥಳದಲ್ಲಿ ಪ್ರಮಾವನ್ನು ಕುರಿತು ಗುಣವು ಕಾರಣ ಎಂದು ಹೇಳುವುದು ಅಯುಕ್ತವಾಗುತ್ತದೆ.

**ಭಾವವಿಲಾಸಿನೀ–**ಯಾದೃಚ್ಛಿಕಾನುಮಿತಿರೂಪಪ್ರಮಾಯಾಂ ಗುಣಾಭಾವಂ ವಿಶದಯತಿ – **ಸಲ್ಲಿಂಗಸ್ಯೇತಿ** ॥ ತದಭಾವೇಽಪಿ ಸಲ್ಲಿಂಗಪರಾಮರ್ಶಾಭಾವೇಽಪಿ ಯತ್ಪ್ರಮಾತ್ಮಿಕೇಯಮನುಮಾ ಜಾತೇತಿ ಸಂಬಂಧಃ । ತತ್ ತಸ್ಮಾತ್ ಸರ್ವತ್ರಾಪಿ ಪ್ರಮಾಯಾ ಗುಣಜನ್ಯತ್ವಕಥಾ ವೃಥೇತಿ ಸಂಬಂಧಃ ॥ ೪೧೨ ॥

ಯೋ ಧರ್ಮೋ ವ್ಯತಿರೇಕೇಣ ವ್ಯಭಿಚಾರೀ ಸ ಕಾರ್ಯಕೃತ್ ।
ಕಥಂ ಸ್ಯಾತ್ಕಾರಣಂ ಯಸ್ಮಾದನ್ವಯಿ ವ್ಯತಿರೇಕಿ ಚ ॥ ೪೧೩ ॥

**ಅರ್ಥ–** ಯಸ್ಮಾತ್= ಯಾವ ಕಾರಣದಿಂದ, ಅನ್ವಯಿ ವ್ಯತಿರೇಕಿ ಚ= ಕಾರ್ಯದ ಜೊತೆಗೆ ಅನ್ವಯವನ್ನು ಮತ್ತು ವ್ಯತಿರೇಕವನ್ನು ಹೊಂದಿದ ವಸ್ತುವೇ, ಕಾರಣಂ=

ಕಾರಣವಾಗುತ್ತದೆಯೋ, ತಸ್ಮಾತ್= ಆ ಕಾರಣದಿಂದ, ಯಃ ಧರ್ಮಃ = ಯಾವ ಧರ್ಮವು, ವ್ಯತಿರೇಕೇಣ ವ್ಯಭಿಚಾರೀ = ಕಾರ್ಯದ ಜೊತೆಯಲ್ಲಿ ವ್ಯತಿರೇಕಸಂಬಂಧವನ್ನು ಹೊಂದಿರುವುದರಲ್ಲಿ ವ್ಯಭಿಚಾರಿಯಾಗಿದೆಯೋ, ಸಃ = ಅಂತಹ ಧರ್ಮವು, ಕಥಂ = ಹೇಗೆ, ಕಾರ್ಯಕೃತ್ = ಕಾರ್ಯವನ್ನು ಕುರಿತು ಕಾರಣವಾಗುತ್ತದೆ?

**ಅನುವಾದ–** ಯಾವಧರ್ಮವು ಇಲ್ಲದಿದ್ದರೂ ಕಾರ್ಯವುಂಟಾಗುತ್ತದೆಯೋ, ಅಂತಹ ಧರ್ಮವು ಕಾರ್ಯವನ್ನು ಕುರಿತು ಕಾರಣವಾಗುವುದು ಹೇಗೆ. ಏಕೆಂದರೆ ಯಾವುದು ಕಾರಣವಾಗುತ್ತದೋ, ಅದು ಕಾರ್ಯದ ಜೊತೆಯಲ್ಲಿ ಅನ್ವಯವನ್ನು ಮತ್ತು ವ್ಯತಿರೇಕವನ್ನು ಹೊಂದಿರಬೇಕು.

**ಭಾವವಿಲಾಸಿನೀ–**ತದುಪಪಾದಯತಿ – ಯ ಇತಿ ॥ ಧರ್ಮೋ ಗುಣರೂಪಃ ವ್ಯತಿರೇಕೇಣ ವ್ಯಭಿಚಾರೀ । ಗುಣಾಭಾವೇಽಪಿ ಪ್ರಮೋದಯಾದಿತಿ ಭಾವಃ । ಸಗುಣಃ । ಕಾರ್ಯಕೃತ್ ಪ್ರಮಾರೂಪಕಾರ್ಯಕೃತ್ । ಕುತಃ? ಇತ್ಯತ ಆಹ – **ಕಾರಣಮಿತಿ** ॥ ಯಸ್ಮಾತ್ಕಾರಣಮನ್ವಯಿ ವ್ಯತಿರೇಕಿ ಚೇತಿ ಸಂಬಂಧಃ ॥ ೪೧೩ ॥

**ವಿವರಣೆ–** ಮೇಲೆ ಹೇಳಿದ ವಿಷಯವನ್ನೇ ಈ ಶ್ಲೋಕದಲ್ಲಿ ಉಪಪಾದನೆ ಮಾಡುತ್ತಾರೆ. ಧರ್ಮ ಎಂದರೆ ಇಲ್ಲಿ ಗುಣರೂಪವಾದದು ಗುಣ ಎಂದರ್ಥ. ವ್ಯತಿರೇಕ ವ್ಯಭಿಚಾರಿ ಎಂದರೆ ಆ ಧರ್ಮವು ಇಲ್ಲದಿದ್ದರೂ ಭ್ರಮೆಯು (ಕಾರ್ಯವು) ಉಂಟಾಗುತ್ತದೆ ಎಂದು ಅರ್ಥ. ಅಂತಹ ಗುಣವು ಹೀಗೆ ಪ್ರಮಾರೂಪ ಕಾರ್ಯವನ್ನು ಕುರಿತು ಕಾರಣವಾಗುವುದಿಲ್ಲ. ಏಕೆಂದರೆ ಕಾರಣವು ಕಾರ್ಯದ ಜೊತೆಯಲ್ಲಿ ಅನ್ವಯವನ್ನು ಮತ್ತು ವ್ಯತಿರೇಕವನ್ನು ಹೊಂದಿರುತ್ತದೆ ಎಂದು ಯೋಜನೆ.

**ದಂಡೇ ಸತಿ ಘಟಾಭಾವಾದನ್ವಯಸ್ಯ ನಿರೂಪಣಮ್ ।**
**ಯಸ್ಮಿನ್ ಸತ್ಯೇವ ಯದಿತಿ ಪ್ರಾಜ್ಞಾಃ ಪ್ರಾಹುರ್ವಿವೇಕಿನಃ ॥ ೪೧೪ ॥**

**ಅರ್ಥ–** ದಂಡೇ ಸತಿ = ದಂಡವು ಇದ್ದರೂ, ಘಟಾಭಾವಾತ್ = ಘಟವು ಉತ್ಪತ್ತಿಯಾಗುವುದಿಲ್ಲವಾದ್ದರಿಂದ, ವಿವೇಕಿನಃ = ವಿವೇಕವುಳ್ಳ, ಪ್ರಾಜ್ಞಾಃ = ಪ್ರಾಜ್ಞರು, ಯಸ್ಮಿನ್ ಸತ್ಯೇವ = ಯಾವುದು ಇದ್ದರೆ ಮಾತ್ರ, ಯದಿತಿ = ಯಾವುದು ಉಂಟಾಗುತ್ತದೆಯೋ ಎಂದು, ಅನ್ವಯಸ್ಯ ನಿರೂಪಣಮ್ = ಕಾರ್ಯಕಾರಣದ ಅನ್ವಯದ ನಿರೂಪಣೆಯನ್ನು, ಪ್ರಾಹುಃ = ಹೇಳುತ್ತಾರೆ.

**ಅನುವಾದ–** ಯಾವುದು ಇದ್ದರೆ ಯಾವುದು ಉಂಟಾಗುತ್ತದೋ, ಅದು ಅದನ್ನು ಕುರಿತು ಕಾರಣ ಎಂದು ಅನ್ವಯನಿರೂಪಣೆಯನ್ನು ಮಾಡಬಾರದು. ದಂಡವಿದ್ದರೂ ಕೆಲವು ವೇಳೆ ಘಟವು ಉಂಟಾಗುವುದಿಲ್ಲ. ಆದ್ದರಿಂದ ದಂಡವು ಘಟಕ್ಕೆ

ಕಾರಣವಲ್ಲ ಎಂಬ ಪ್ರಸಂಗವು ಬರುತ್ತದೆ. ಆದ್ದರಿಂದ ಯಾವುದು ಇದ್ದರೆ ಮಾತ್ರ ಯಾವುದು ಉಂಟಾಗುತ್ತದೋ, ಅದು ಅದಕ್ಕೆ ಕಾರಣ ಎಂದು ಅನ್ವಯವನ್ನು ನಿರೂಪಿಸಬೇಕು. ಆಗ ಯಾವುದು ಇಲ್ಲದಿದ್ದರೆ ಕಾರ್ಯವು ಉಂಟಾಗುವುದಿಲ್ಲವೋ, ಅದು ಕಾರಣವಲ್ಲ ಎಂದು ಸಿದ್ಧವಾಗುತ್ತದೆ. ದಂಡವಿಲ್ಲದೇ ಘಟವು ಉಂಟಾಗುವುದಿಲ್ಲವಾದ್ದರಿಂದ ದಂಡವು ಘಟಕ್ಕೆ ಕಾರಣ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ**–ನನ್ವನ್ವಯನಿರೂಪಣಂ ಕಥಮ್? ಇತ್ಯತ ಆಹ – **ದಂಡ ಇತಿ** ॥ ದಂಡೇ ಸತಿ ಘಟ ಇತಿ ನಾನ್ವಯಃ । ದಂಡೇ ಸತ್ಯಪಿ ಘಟಾಭಾವಾತ್ । ಕಿಂತ್ವನ್ವಯಸ್ಯ ನಿರೂಪಣಂ ಯಸ್ಮಿನ್ ಸತ್ಯೇವ ಯತ್ತತ್ತಸ್ಯ ಕಾರಣಮಿತ್ಯನ್ವಯನಿರೂಪಣಂ ವಿವೇಕಿನ ಆಹುರಿತಿ ಸಂಬಂಧಃ ॥ ೪೧೪ ॥

**ವಿವರಣೆ**– ಅನ್ವಯನಿರೂಪಣೆಯನ್ನು ಹೇಗೆ ಮಾಡಬೇಕೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ. ದಂಡ ಇದ್ದರೆ ಘಟವುಂಟಾಗುತ್ತದೆ ಎಂಬುದು ಅನ್ವಯರೂಪವಲ್ಲ. ಏಕೆಂದರೆ ದಂಡವಿದ್ದರೂ ಕೆಲವೊಮ್ಮೆ ಘಟವು ಉಂಟಾಗುವುದಿಲ್ಲ. ದಂಡವಿದ್ದರೆ ಮಾತ್ರ ಘಟವು ಉಂಟಾಗುತ್ತದೆ ಎಂಬುದೇ ಅನ್ವಯನಿರೂಪಣೆ ಎಂದು ವಿವೇಕಿಗಳು ಹೇಳುತ್ತಾರೆ ಎಂದು ಯೋಜನೆ.

ದಂಡೇ ಸತ್ಯೇವ ಹಿ ಘಟೋ ದಂಡಾಭಾವೇ ನ ಕುತ್ರಚಿತ್ ।
ಅತೋಽನ್ವಯೋಕ್ತಿರ್ಮಾನ್ಯೈವಂ ನಾನ್ಯಥಾ ವ್ಯಭಿಚಾರತಃ ॥ ೪೧೫ ॥

**ಅರ್ಥ**– ದಂಡೇ ಸತ್ಯೇವ = ದಂಡವು ಇದ್ದರೆ ಮಾತ್ರ, ಘಟೋ ಹಿ = ಘಟವು ಉತ್ಪತ್ತಿಯಾಗುವುದಷ್ಟೆ, ದಂಡಾಭಾವೇ = ದಂಡವು ಇಲ್ಲದಿದ್ದರೆ, ಕುತ್ರಚಿತ್ = ಎಲ್ಲಿಯೂ, ನ = ಘಟವು ಉತ್ಪತ್ತಿಯಾಗುವುದಿಲ್ಲ. ಅತಃ = ಆದ್ದರಿಂದ,ಏವಂ = ಈ ರೀತಿಯ, ಅನ್ವಯೋಕ್ತಿಃ = ಕಾರ್ಯಕಾರಣಗಳ ಅನ್ವಯೋಕ್ತಿಯೇ, ಮಾನ್ಯಾ = ಮಾನ್ಯವಾದುದು. ವ್ಯಭಿಚಾರತಃ = ವ್ಯಭಿಚಾರ ಬರುವುದರಿಂದ, ಅನ್ಯಥಾ = ಬೇರೆ ರೀತಿಯ ನಿರೂಪಣೆಯು, ನ = ಮಾನ್ಯವಾಗುವುದಿಲ್ಲ.

**ಅನುವಾದ**– ದಂಡವು ಇದ್ದರೆ ಮಾತ್ರ ಘಟವು ಉಂಟಾಗುತ್ತದೆ. ದಂಡವಿಲ್ಲದಿದ್ದರೆ ಘಟವು ಎಂದೂ ಉಂಟಾಗುವುದಿಲ್ಲ. ಆದ್ದರಿಂದ ಈ ರೀತಿಯ ಅನ್ವಯವಚನವೇ ಮಾನ್ಯವಾದುದು. ಮೊದಲು ಹೇಳಿದ ಅನ್ವಯವನ್ನು ಸ್ವೀಕರಿಸಿದರೆ ವ್ಯಭಿಚಾರವು ಬರುತ್ತದೆ.

**ಭಾವವಿಲಾಸಿನೀ**–ತಚ್ಚೋಪಪನ್ನಮಿತ್ಯಾಹ – **ದಂಡ ಇತಿ** ॥ ದಂಡಾಭಾವೇ ಕುತ್ರಚಿತ್ಕ್ವಾಪಿ ಘಟೋ ನೇತಿ ಸಂಬಂಧಃ । ಅತಃ ಯತ ಏವಮುಕ್ತೇ ನ ವ್ಯಭಿಚಾರಃ ಅತ ಇತ್ಯರ್ಥಃ । ಏವಂ ಯಸ್ಮಿನ್

**ಸತ್ಯೇವೇತ್ಯುಕ್ತರೀತ್ಯಾ । ಅನ್ಯಥಾ ಯಸ್ಮಿನ್ ಸತಿ ಯದಿತ್ಯನ್ವಯೋಕ್ತಿಃ ವ್ಯಭಿಚಾರತೋ ನೇತಿ ಸಂಬಂಧಃ ॥ ೪೧೫ ॥**

**ವಿವರಣೆ–** ಮೇಲೆ ಹೇಳಿದುದು ಯುಕ್ತವಾಗಿದೆ ಎಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ. ದಂಡವು ಇಲ್ಲದಿದ್ದರೆ ಎಲ್ಲಿಯೂ ಯಾವಾಗಲೂ ಘಟವುಂಟಾಗುವುದಿಲ್ಲವೆಂದು ಯೋಜನೆ. ಹೀಗೆ ಹೇಳಿದರೆ ಮಾತ್ರ ವ್ಯಭಿಚಾರವು ಇಲ್ಲ ಎಂದು ಅರ್ಥ. ಆದ್ದರಿಂದ 'ಯಸ್ಮಿನ್ ಸತ್ಯೇವ' ಎಂಬ ಕ್ರಮದಲ್ಲಿ ಅನ್ವಯವನ್ನು ಹೇಳಬೇಕು. ಅದನ್ನು ಬಿಟ್ಟು 'ಯಸ್ಮಿನ್ ಸತಿ' ಎಂಬ ಕ್ರಮದಿಂದ ಅನ್ವಯವನ್ನು ಹೇಳಿದರೆ ವ್ಯಭಿಚಾರವು ಬಂದೇ ಬರುತ್ತದೆ.

**ದಂಡೇ ಸತ್ಯಪಿ ಮೃತ್ಪಿಂಡಾದ್ಯಭಾವೇ ಯದ್‌ಘಟೋಽಪಿ ನ ।**
**ರಾಸಭೇ ಸತ್ಯಪಿ ಘಟೋ ಜಾಯತೇ ಚ ಸ್ವಕಾರಣಾತ್ ॥ ೪೧೬ ॥**

**ಅರ್ಥ–** ಯತ್ =ಏಕೆಂದರೆ, ದಂಡೇ ಸತ್ಯಪಿ = ದಂಡವು ಇದ್ದರೂ ಸಹ, ಮೃತ್ಪಿಂಡಾದ್ಯಭಾವೇ = ಮೃತ್ಪಿಂಡಾದಿಗಳು ಇಲ್ಲದಿದ್ದರೆ, ಘಟೋಽಪಿ = ಘಟವೂ ಸಹ, ನ = ಉತ್ಪತ್ತಿಯಾಗುವುದಿಲ್ಲ. ಚ = ಮತ್ತು, ರಾಸಭೇ ಸತ್ಯಪಿ = ರಾಸಭವು ಇದ್ದರೂ ಸಹ, ಸ್ವಕಾರಣಾತ್ = ತನ್ನ ಕಾರಣ ಸಾಮಗ್ರಿಯಿಂದ, ಘಟಃ = ಘಟವು, ಜಾಯತೇ = ಉತ್ಪತ್ತಿಯಾಗುತ್ತದೆ.

**ಅನುವಾದ– ದಂಡವಿದ್ದರೂ ಮೃತ್ಪಿಂಡವು ಇಲ್ಲದಿದ್ದರೆ ಘಟವು ಉಂಟಾಗುವುದಿಲ್ಲ. ರಾಸಭವು ಇದ್ದರೂ ಮೃದಾದಿ ಕಾರಣಸಮುದಾಯದಿಂದ ಘಟವು ಉಂಟಾಗುತ್ತದೆ.**

**ಭಾವವಿಲಾಸಿನೀ–**ವ್ಯಭಿಚಾರಮೇವ ವಿಶದಯತಿ – **ದಂಡ ಇತಿ ॥** ದಂಡೇ ಸತಿ ಘಟ ಇತ್ಯನ್ವಯಸ್ಯ ಕಾರಣ ಏವ ದಂಡೇಽಭಾವಾದ್ ಅನ್ವಯಭಂಗರೂಪೋ ವ್ಯಭಿಚಾರ ಇತ್ಯರ್ಥಃ । ಏತಾದೃಶಾನ್ವಯಸ್ಯಾಕಾರಣೇ ರಾಸಭೇಽಪಿ ಸತ್ತ್ವಾದ್ ಅಲಕ್ಷ್ಯಗಮನರೂಪವ್ಯಭಿಚಾರೋಽಪೀತ್ಯಾಹ – **ರಾಸಭ ಇತಿ ॥** ಸತ್ಯಪಿ ರಾಸಭೇ ಘಟಃ ಸ್ವಕಾರಣಾನ್ಮೃದಾದೇರ್ಜಾಯತೇ ಚೇತಿ ಸಂಬಂಧಃ । ತಸ್ಮಾದ್ ಯಸ್ಮಿನ್ ಸತಿ ಯತ್ತತ್ತಸ್ಯ ಕಾರಣಮಿತ್ಯನ್ವಯಸ್ಯ ನಿರೂಪಣಂ ರಾಸಭೇಽತಿಪ್ರಸಕ್ತಮಿತಿ ಭಾವಃ ॥ ೪೧೬ ॥

**ವಿವರಣೆ–** ಹಿಂದೆ ಹೇಳಿದ ವ್ಯಭಿಚಾರವನ್ನೇ ಈ ಶ್ಲೋಕದಿಂದ ಸ್ಪಷ್ಟಪಡಿಸುತ್ತಾರೆ. ದಂಡವಿದ್ದರೆ ಘಟವು ಉಂಟಾಗುತ್ತದೆ ಎಂಬ ಅನ್ವಯವು ಕಾರಣವಾದ ದಂಡದಲ್ಲಿಯೇ ಭಗ್ನವಾಗುತ್ತದೆ. ಏಕೆಂದರೆ ದಂಡವಿದ್ದರೂ ಮೃತ್ಪಿಂಡವಿಲ್ಲದಿದ್ದರೆ ಘಟವು ಉಂಟಾಗುವುದಿಲ್ಲ. ಅದೂ ಅಲ್ಲದೇ ಹೀಗೆ ಅನ್ವಯವನ್ನು ಹೇಳಿದರೆ ಘಟಕಾರಣ ಲಕ್ಷಣಕ್ಕೆ ರಾಸಭದಲ್ಲಿ ಅತಿವ್ಯಾಪ್ತಿಯುಂಟಾಗುತ್ತದೆ. ಏಕೆಂದರೆ ರಾಸಭವಿರುವ ಸ್ಥಳದಲ್ಲಿ

ತನ್ನ ಕಾರಣಕಲಾಪದಿಂದಲೇ ಘಟವು ಉತ್ಪತ್ತಿಯಾಗುತ್ತದೆ. ಆಗ 'ಯಸ್ಮಿನ್ ಸತಿ' ಇತ್ಯಾದಿಗಳ ಅನ್ವಯವು ರಾಸಭದಲ್ಲಿಯೂ ಬರುವುದರಿಂದ ಘಟವನ್ನು ಕುರಿತು ರಾಸಭವು ಕಾರಣವಾಗಲಿ ಎಂಬ ಅತಿಪ್ರಸಂಗವೂ ಬರುತ್ತದೆ.

**ಅತೋಽತ್ರ ದೋಷೇ ಸತಿ ಚ ಭ್ರಮಾಭಾವೋ ನ ದೂಷಣಮ್ ।**
**ದೋಷೇ ಸತ್ಯೇವ ತು ಭ್ರಾಂತಿರಿತಿ ಸೋಽಪಿ ಯತೋಽನ್ವಯೀ ॥ ೪೧೭ ॥**

**ಅರ್ಥ–** ಅತಃ = ಆದ್ದರಿಂದ, ಅತ್ರ = ಯಾದೃಚ್ಛಿಕ ಪ್ರಮಾಸ್ಥಳದಲ್ಲಿ, ದೋಷೇ ಸತಿ ಚ = ದೋಷವು ಇದ್ದರೂ ಕೂಡ, ಭ್ರಮಾಭಾವಃ = ಭ್ರಮೆಯ ಉತ್ಪತ್ತಿ ಇಲ್ಲದಿರುವುದು, ದೂಷಣಮ್ ನ = ದೋಷವಾಗುವುದಿಲ್ಲ. ಯತಃ= ಯಾವ ಕಾರಣದಿಂದ, ದೋಷೇ ಸತ್ಯೇವ = ದೋಷವು ಇದ್ದರೆ ಮಾತ್ರ, ಭ್ರಾಂತಿಃ = ಭ್ರಾಂತಿಯು ಉಂಟಾಗುತ್ತದೆ, ಇತಿ = ಎಂಬ ಕಾರಣದಿಂದ, ಸೋಽಪಿ = ಆ ದೋಷವೂ ಕೂಡ, ಅನ್ವಯೀ = ಭ್ರಾಂತಿರೂಪಕಾರ್ಯದ ಜೊತೆಯಲ್ಲಿ ಅನ್ವಯವನ್ನೇ ಉಳ್ಳದ್ದಾಗುತ್ತದೆ.

**ಅನುವಾದ–** ಆದ್ದರಿಂದ ದೋಷವಿದ್ದರೆ ಭ್ರಮವು ಉಂಟಾಗಲಿಲ್ಲ ಎಂಬುದು ವಿರೋಧಿಯಾಗುವುದಿಲ್ಲ. ದೋಷವಿದ್ದರೆ ಮಾತ್ರ ಭ್ರಾಂತಿಯು ಉಂಟಾಗುತ್ತದೆ ಎಂಬುದೇ ದೋಷಕ್ಕೂ ಮತ್ತು ಭ್ರಾಂತಿಗೂ ಇರುವ ಅನ್ವಯ.

**ಭಾವವಿಲಾಸಿನೀ–ಅಸ್ತು ಯಸ್ಮಿನ್ ಸತ್ಯೇವ ಯದಿತ್ಯನ್ವಯನಿರೂಪಣಮ್, ತಥಾಪಿ ಪ್ರಕೃತೇ ಕಿಮಾಗತಮ್? ಇತ್ಯತ ಆಹ – ಅತ ಇತಿ ॥ ಯತೋಽನ್ವಯನಿರೂಪಣಮೇವ ಮತ ಇತ್ಯರ್ಥಃ । ಅತ್ರ ಯಾದೃಚ್ಛಿಕಪ್ರಮಾಯಾಂ ಸತಿ ಚ ಸತ್ಯಪಿ ಭ್ರಮಾಭಾವಃ ಭ್ರಮಲಕ್ಷಣ-ಕಾರ್ಯಾಭಾವೋ ನ ದೂಷಣಮ್, ದೋಷಸ್ಯ ಭ್ರಮಾನ್ವಯಘಾತಕಂ ನೇತ್ಯರ್ಥಃ । ಸೋಽಪಿ ದೋಷೋಽಪಿ । ತಸ್ಮಾದ್ದೋಷೇ ಸತ್ಯೇವ ಭ್ರಮೋ ದೋಷಾಭಾವೇ ನ ಭ್ರಮ ಇತಿ ದೋಷಾನ್ವಯವ್ಯತಿರೇಕಾನುವಿಧಾನಾದ್ ಭ್ರಮಸ್ಯ ದೋಷಜನ್ಯತ್ವಂ ಸಿದ್ಧಮಿತಿ ಭಾವಃ । ಗುಣಸ್ಯ ತು ಸಲ್ಲಿಂಗಪರಾಮರ್ಶಸ್ಯ ಯಾದೃಚ್ಛಿಕಪ್ರಮಾರೂಪಾನುಮಿತಾವಭಾವೇನ ಗುಣೇ ಸತ್ಯೇವ ಪ್ರಮೇತ್ಯನ್ವಯಸ್ಯ ಗುಣಾಭಾವೇ ಪ್ರಮಾಭಾವ ಇತಿ ವ್ಯತಿರೇಕಸ್ಯ ಚಾಭಾವೇನ ಪ್ರಮಾಯಾ ಗುಣಜನ್ಯತ್ವಂ ಭಗ್ನಮಿತ್ಯಪಿ ದ್ರಷ್ಟವ್ಯಮ್ ॥ ೪೧೭ ॥**

**ವಿವರಣೆ–** ಅನ್ವಯನಿರೂಪಣೆಯನ್ನು ಹೀಗೆ ಮಾಡಬೇಕೆಂಬ ನಿರ್ಣಯಕ್ಕೆ ಪ್ರಕೃತೋಪಯೋಗವನ್ನು ಈ ಶ್ಲೋಕದಲ್ಲಿ ತೋರಿಸುತ್ತಾರೆ. 'ಅತಃ' ಎಂದರೆ ಅನ್ವಯನಿರೂಪಣೆಯನ್ನು ಹೀಗೆಯೇ ಮಾಡಬೇಕಾದ ಕಾರಣದಿಂದ ಎಂದು ಅರ್ಥ. 'ಅತ್ರ' ಎಂದರೆ ಯಾದೃಚ್ಛಿಕ ಪ್ರಮಾಸ್ಥಳದಲ್ಲಿ ಎಂದು ಅರ್ಥ. ಯಾದೃಚ್ಛಿಕ ಪ್ರಮಾಸ್ಥಳದಲ್ಲಿ ದೋಷವಿದ್ದರೂ ಭ್ರಮರೂಪವಾದ ಕಾರ್ಯವು ಉಂಟಾಗಲಿಲ್ಲ ಎಂಬುದು 'ನ ದೂಷಣಂ' ಎಂದರೆ ದೋಷಾಸ್ಪದವಾಗುವುದಿಲ್ಲ ಎಂದರೆ ದೋಷಕ್ಕೂ ಮತ್ತು ಭ್ರಮಕ್ಕೂ

ಇರುವ ಅನ್ವಯಕ್ಕೆ ವಿಘಾತಕವಾಗುವುದಿಲ್ಲ ಎಂದು ಅರ್ಥ. 'ಅಪಿ' ಎಂದರೆ ಧರ್ಮವೂ ಸಹ ಎಂದು ಅರ್ಥ. ಆದ್ದರಿಂದ ದೋಷವಿದ್ದರೆ ಮಾತ್ರ ಭ್ರಮವು ಉಂಟಾಗುತ್ತದೆ. ದೋಷವು ಇಲ್ಲದಿದ್ದರೆ ಭ್ರಮವು ಉಂಟಾಗುವುದಿಲ್ಲ ಎಂಬ ಅನ್ವಯವ್ಯತಿರೇಕವು ಬರುವುದರಿಂದ ದೋಷಕ್ಕೆ ಭ್ರಮಕಾರಣತ್ವವು ಸಿದ್ಧವಾಗುತ್ತದೆ. ಗುಣಕ್ಕೂ ಮತ್ತು ಪ್ರಮೆಗೂ ಕಾರಣಕಾರ್ಯಭಾವವಿಲ್ಲ. ಏಕೆಂದರೆ ಯಾದೃಚ್ಛಿಕಪ್ರಮಾರೂಪವಾದ ಮೊದಲು ಹೇಳಿದ ಅನುಮಿತಿಸ್ಥಳದಲ್ಲಿ ಸಲ್ಲಿಂಗಪರಾಮರ್ಶರೂಪವಾದ ಗುಣವಿಲ್ಲದಿದ್ದರೂ ಪ್ರಮಾರೂಪವಾದ ಅನುಮಿತಿಯು ಉಂಟಾಗುತ್ತದೆ. ಆ ಸ್ಥಳದಲ್ಲಿ ಗುಣವಿಲ್ಲದಿದ್ದರೆ ಪ್ರಮರೂಪವಾದ ಜ್ಞಾನವು ಇಲ್ಲವೆಂಬ ವ್ಯತಿರೇಕವು ಭಗ್ನವಾಗುತ್ತದೆ. ಏಕೆಂದರೆ ಗುಣವಿಲ್ಲದಿದ್ದರೂ ಪ್ರಮೆಯು ಉಂಟಾಗಿದೆ. ಆ ಕಾರಣದಿಂದ ಗುಣಕ್ಕೆ ಪ್ರಮಾಕಾರಣತ್ವವು ಇಲ್ಲ ಎಂದು ತಿಳಿಯಬೇಕು.

**ಏವಂಚ ಜ್ಞಾನಸಾಮಗ್ರ್ಯಾಂ ಸತ್ಯಾಮೇವ ಪ್ರಮಾ ಭವೇತ್ ।**
**ತದಭಾವೇ ತು ನ ಭವೇದಿತ್ಯೇವಾಲಂ ಮಮಾಪಿ ಹಿ ॥ ೪೧೮ ॥**

**ಅರ್ಥ–** ಏವಂಚ = ಆದ್ದರಿಂದ, ಜ್ಞಾನಸಾಮಗ್ರ್ಯಾಂ = ಜ್ಞಾನಸಾಮಗ್ರಿಯು, ಸತ್ಯಾಮೇವ = ಇದ್ದರೆ ಮಾತ್ರ, ಪ್ರಮಾ = ಪ್ರಮೆಯು, ಭವೇತ್ = ಜನಿಸುತ್ತದೆ, ತದಭಾವೇತು = ಜ್ಞಾನಸಾಮಾನ್ಯಸಾಮಗ್ರಿಯಿಲ್ಲದಿದ್ದರೆ, ನ ಭವೇತ್ = ಉಂಟಾಗುವುದಿಲ್ಲ, ಇತ್ಯೇವ= ಎಂದು ಇಷ್ಟು ಮಾತ್ರ, ಮಮಾಪಿ = ನನಗೂ ಕೂಡ, ಅಲಂ ಹಿ = ಸಾಕಾಗುವುದಷ್ಟೆ.

**ಅನುವಾದ–** ಆದ್ದರಿಂದ ಜ್ಞಾನ ಸಾಮಗ್ರಿಯು ಇದ್ದಾಗ ಮಾತ್ರ ಪ್ರಮೆಯು ಉಂಟಾಗುತ್ತದೆ. ಜ್ಞಾನ ಸಾಮಗ್ರಿಯು ಇಲ್ಲದಿದ್ದರೆ ಪ್ರಮೆಯು ಉಂಟಾಗುವುದಿಲ್ಲ ಎಂಬುದಿಷ್ಟೇ ನಾವು ಅಂಗೀಕಾರ ಮಾಡುವ ಅನ್ವಯವ್ಯತಿರೇಕಗಳು.

**ಭಾವವಿಲಾಸಿನೀ–**ಏತೇನಾನ್ಯದಪಿ ಸಿದ್ಧಮಿತ್ಯಾಹ – **ಏವಂಚೇತಿ** ॥ ತದಭಾವೇ ಜ್ಞಾನಸಾಮಗ್ರ್ಯಭಾವೇ ನ ಭವೇತ್ । ಪ್ರಮೇತ್ಯನುವರ್ತತೇ । ಮಮಾಪಿ ಮತ ಏವಮೇವಾ-ನ್ವಯವ್ಯತಿರೇಕನಿರೂಪಣಮಲಂ ಹೀತಿ ಸಂಬಂಧಃ ॥ ೪೧೮ ॥

**ವಿವರಣೆ–** ಇದರಿಂದ ಸಿದ್ಧವಾಗುವ ಪ್ರಕೃತೋಪಯೋಗಿಯಾದ ಈ ವಿಷಯವನ್ನು ತಿಳಿಸುತ್ತಾರೆ. 'ತದಭಾವೇ' ಎಂದರೆ ಜ್ಞಾನಸಾಮಗ್ರಿಯು ಇಲ್ಲದಿದ್ದರೆ ಎಂದು ಅರ್ಥ. 'ನ ಭವೇತ್' ಎಂದರೆ ಪ್ರಮೆಯು ಉಂಟಾಗುವುದಿಲ್ಲ ಎಂದು ಅರ್ಥ. ನನಗೂ ಸಹ ಈ ರೀತಿಯ ಅನ್ವಯವ್ಯತಿರೇಕಗಳೇ ಸಾಕು ಎಂದು ಯೋಜನೆಯನ್ನು ಇಟ್ಟುಕೊಳ್ಳಬೇಕು.

**ತಸ್ಮಾದ್ ಭ್ರಮಸ್ಯ ಸಾಮಗ್ರ್ಯಾಂ ಪ್ರಮಾಸಾಮಗ್ರ್ಯಪಿ ಪ್ರಮಾಮ್ ।**
**ಸಾಮಾನ್ಯರೂಪಾಂ ಕುರ್ಯಾದಿತ್ಯಾಕ್ಷೇಪೋ ನಿರ್ನಿಬಂಧನಃ ॥ ೪೧೯ ॥**

**ಅರ್ಥ–** ತಸ್ಮಾತ್ = ಆ ಕಾರಣದಿಂದ, ಭ್ರಮಸ್ಯ ಸಾಮಗ್ರ್ಯಾಂ = ಭ್ರಮದ ಸಾಮಗ್ರಿಯಲ್ಲಿ ಇರುವ, ಪ್ರಮಾಸಾಮಗ್ರ್ಯಪಿ = ಪ್ರಮಾಸಾಮಗ್ರಿಯೂ ಕೂಡ, ಸಾಮಾನ್ಯರೂಪಾಂ ಪ್ರಮಾಂ = ಪ್ರಮಾಸಾಮಾನ್ಯವನ್ನು, ಕುರ್ಯಾತ್ = ಉಂಟುಮಾಡಲಿ, ಇತಿ = ಎಂಬ, ಆಕ್ಷೇಪಃ = ಆಕ್ಷೇಪವು, ನಿರ್ನಿಬಂಧನಃ = ನಿರ್ನಿಮಿತ್ತಕವಾದುದು.

**ಅನುವಾದ–** ಆದ್ದರಿಂದ ಭ್ರಮಸಾಮಗ್ರಿಯಿರುವಾಗ ಜ್ಞಾನಸಾಮಾನ್ಯ ಸಾಮಗ್ರಿಯೂ ಇರುವುದರಿಂದ ಮತ್ತು ಜ್ಞಾನಸಾಮಾನ್ಯಸಾಮಗ್ರಿಯೇ ಪ್ರಮಾಸಾಮಗ್ರಿಯೆಂದು ನೀವು ಅಂಗೀಕರಿಸಿರುವುದರಿಂದ ಭ್ರಮ ಬರುವ ಸ್ಥಳದಲ್ಲಿ ಪ್ರಮೆಯೇ ಬರಲಿ ಎಂಬ ಆಪತ್ತಿಯನ್ನು ನಮ್ಮ ಮೇಲೆ ಮಾಡುವಂತಿಲ್ಲ. ಏಕೆಂದರೆ ಅದು ನಿರ್ನಿಬಂಧನವಾದುದು.

**ಭಾವವಿಲಾಸಿನೀ–ತಸ್ಮಾದಿತಿ ॥** ಯಸ್ಮಾಜ್ಜ್ಞಾನಸಾಮಗ್ರ್ಯಾಂ ಸತ್ಯಾಮೇವ ಪ್ರಮಾ, ತದಭಾವೇ ತದಭಾವ ಇತ್ಯನ್ವಯವ್ಯತಿರೇಕನಿರೂಪಣಮ್, ತಸ್ಮಾದಿತ್ಯರ್ಥಃ । ಭ್ರಮಸ್ಯ ಸಾಮಗ್ರ್ಯಾಂ ಜ್ಞಾನಸಾಮಾನ್ಯಸಾಮಗ್ರೀರೂಪಪ್ರಮಾಸಾಮಗ್ರ್ಯಪಿ ಸಾಮಾನ್ಯರೂಪಾಂ ಪ್ರಮಾಮ್ । ಆಕ್ಷೇಪೋ ನಿರ್ನಿಬಂಧನಃ । ತಸ್ಮಿನ್ ಸತಿ ತದಿತ್ಯನ್ವಯಸ್ಯಾನಿರೂಪಣಾದಿತಿ ಭಾವಃ ॥ ೪೧೯ ॥

**ವಿವರಣೆ–** ಜ್ಞಾನಸಾಮಗ್ರಿಯಿರುವಾಗ ಮಾತ್ರ ಪ್ರಮೆಯು ಉಂಟಾಗುತ್ತದೆ. ಜ್ಞಾನಸಾಮಗ್ರಿಯು ಇಲ್ಲದಿದ್ದರೆ ಪ್ರಮೆಯು ಉಂಟಾಗುವುದಿಲ್ಲ ಎಂಬ ನಮ್ಮ ನಿರೂಪಣೆಯಿರುವುದರಿಂದ ಎಂದು 'ತಸ್ಮಾತ್' ಶಬ್ದದ ಅರ್ಥ. ಆದ್ದರಿಂದ ಭ್ರಮ ಸಾಮಗ್ರಿ ಇರುವಾಗ ಜ್ಞಾನಸಾಮಗ್ರಿಯೂ ಇರುವುದರಿಂದ ಭ್ರಮ ಹುಟ್ಟುವ ಸ್ಥಳದಲ್ಲಿ ಪ್ರಮೆಯು ಉಂಟಾಗಲಿ ಎಂಬ ಆಕ್ಷೇಪವು ನಿರ್ನಿಬಂಧನವಾದುದು. ಏಕೆಂದರೆ ಯಾವುದು ಇದ್ದರೆ ಯಾವುದು ಉಂಟಾಗುತ್ತದೋ ಅದು ಅದಕ್ಕೆ ಕಾರಣ ಎಂದು ಅನ್ವಯವನ್ನು ಹೇಳಿದ್ದರೆ ಈ ಆಕ್ಷೇಪವು ಬರುತ್ತಿತ್ತು. ಯಾವುದು ಇದ್ದರೆ ಮಾತ್ರ ಯಾವುದು ಉಂಟಾಗುತ್ತದೋ ಎಂದು ಅನ್ವಯವನ್ನು ಹೇಳಿದ್ದರಿಂದ ಪ್ರಮೆಯು ಉಂಟಾಗುವ ಸ್ಥಳದಲ್ಲಿ ಜ್ಞಾನಸಾಮಾನ್ಯ ಸಾಮಗ್ರಿಯು ಇರಬೇಕೆಂದು ಸಿದ್ಧಿಸುತ್ತದೆ. ಜ್ಞಾನಸಾಮಾನ್ಯ ಸಾಮಗ್ರಿಯಿರುವಾಗಲೆಲ್ಲಾ ಪ್ರಮೆಯು ಉಂಟಾಗಬೇಕೆಂದು ಸಿದ್ಧಿಸುವುದಿಲ್ಲ. ಆದ್ದರಿಂದ ನಮ್ಮ ಮೇಲೆ ಈ ಆಕ್ಷೇಪವಿಲ್ಲ.

**ಸುಹೃದ್ಭಾವೇನ ಪೃಚ್ಛಂತಂ ಪ್ರತಿ ತು ಪ್ರತಿಬಂಧಿಕಾ ।**
**ಏಕಾ ಫಲಬಲಾತ್ತತ್ರ ನಾಪರೇತ್ಯುತ್ತರಂ ವದೇತ್ ॥ ೪೨೦ ॥**

**ಅರ್ಥ–** ಸುಹೃದ್ಭಾವೇನ = ಮಿತ್ರಭಾವದಿಂದ, ಪೃಚ್ಛಂತಂ ಪ್ರತಿ ತು = ಕೇಳುವವನನ್ನು ಕುರಿತಾದರೋ, ಫಲಬಲಾತ್ = ಪ್ರಮೋತ್ಪತ್ತ್ಯಭಾವ ಎಂಬ ಫಲಬಲದಿಂದ, ಏಕಾ = ದೋಷಸಾಮಗ್ರಿಯು, ತತ್ರ = ಪ್ರಮೆಯನ್ನು ಕುರಿತು, ಪ್ರತಿಬಂಧಿಕಾ =

ಪ್ರತಿಬಂಧಕವಾಗುತ್ತದೆ, ಅಪರಾ = ಯಾದೃಚ್ಛಿಕ ಸ್ಥಲದಲ್ಲಿರುವ ಭ್ರಮಸಾಮಗ್ರಿಯು ಪ್ರತಿಬಂಧಕವಾಗುವುದಿಲ್ಲ, ಇತಿ = ಎಂದು, ಉತ್ತರಂ= ಉತ್ತರವನ್ನು ತತ್ತ್ವವಾದೀ= ತತ್ತ್ವವಾದಿಯು, ವದೇತ್= ಹೇಳುತ್ತಾನೆ.

**ಅನುವಾದ–** ಜ್ಞಾನಸಾಮಾನ್ಯ ಸಾಮಗ್ರಿಯಿದ್ದರೂ ಭ್ರಮಸ್ಥಳದಲ್ಲಿ ಏಕೆ ಪ್ರಮಾ ಉಂಟಾಗಲಿಲ್ಲ ಎಂದು ಸೌಹಾರ್ದದಿಂದ ಕೇಳಿದರೆ ಅದಕ್ಕೆ ಉತ್ತರವನ್ನು ಹೀಗೆ ಹೇಳುತ್ತೇವೆ. ಜ್ಞಾನಸಾಮಾನ್ಯ ಸಾಮಗ್ರಿಯಿದ್ದರೂ ದೋಷರೂಪವಾದ ಪ್ರತಿಬಂಧಕವಿರುವುದರಿಂದ ಪ್ರಮೆಯು ಉಂಟಾಗಲಿಲ್ಲ. ದೋಷವಿರುವಾಗ ಎಂದೂ ಪ್ರಮೆಯು ಉಂಟಾಗುವುದಿಲ್ಲವಾದ್ದರಿಂದ ಈ ಪ್ರಮಾರೂಪಕಾರ್ಯ ಬಲದಿಂದ ನಾವು ದೋಷಕ್ಕೆ ಪ್ರತಿಬಂಧಕತ್ವವನ್ನು ಕಲ್ಪನೆ ಮಾಡುತ್ತೇವೆ. ಪ್ರಮಾ ಸಾಮಗ್ರಿಯಿದ್ದರೂ ಭ್ರಮೆಯು ಉಂಟಾಗುವುದರಿಂದ ಪ್ರಮಾಸಾಮಗ್ರಿಯು ಭ್ರಮೆಯನ್ನು ಕುರಿತು ಪ್ರತಿಬಂಧಕವಲ್ಲ ಎಂದು ಫಲಬಲದಿಂದ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–**ಭ್ರಮಸಾಮಗ್ರ್ಯಾಂ ಜ್ಞಾನಸಾಮಾನ್ಯಸಾಮಗ್ರೀರೂಪಪ್ರಮಾಸಾಮಗ್ರ್ಯಾ ಅಪಿ ಸತ್ತ್ವಾತ್ ಕಥಂ ಪ್ರಮಾರೂಪಕಾರ್ಯಾಭಾವ ಇತಿ ಸುಹೃದ್ಭಾವೇನ ಪೃಚ್ಛಾಮೀತಿ ಚೇತ್ತತ್ರಾಹ – **ಸುಹೃದ್ಭಾವೇನೇತಿ** ॥ ಏಕಾ ಭ್ರಮಸಾಮಗ್ರೀ ಫಲಬಲಾತ್ ಪ್ರಮಾನುತ್ಪಾದ-ಲಕ್ಷಣಫಲಬಲಾತ್ । ಪ್ರತಿಬಂಧಿಕಾ ಪ್ರಮೋತ್ಪತ್ತೇಃ ಪ್ರತಿಬಂಧಿಕಾ । ಅಪರಾ ಭ್ರಮ-ಸಾಮಗ್ರೀಪ್ರವಿಷ್ಟಪ್ರಮಾಸಾಮಗ್ರೀ ಪ್ರತಿಬಂಧಿಕಾ ಪ್ರಮೋತ್ಪತ್ತಿಪ್ರತಿಬಂಧಿಕಾ ನೇತ್ಯುತ್ತರಂ ವದೇದಿತ್ಯರ್ಥಃ ॥ ೪೨೦ ॥

**ವಿವರಣೆ–** ಭ್ರಮಸಾಮಗ್ರಿಯಲ್ಲಿ ಜ್ಞಾನಸಾಮಾನ್ಯಸಾಮಗ್ರಿರೂಪವಾದ ಪ್ರಮಾ-ಸಾಮಗ್ರಿಯೂ ಇರುವುದರಿಂದ ಭ್ರಾಂತಿಸ್ಥಳದಲ್ಲಿ ಏಕೆ ಪ್ರಮೆಯು ಉಂಟಾಗುವುದಿಲ್ಲ ಎಂದು ಸೌಹಾರ್ದದಿಂದ ಪ್ರಶ್ನೆ ಮಾಡಿದರೆ, ಅದಕ್ಕೆ ಈ ಶ್ಲೋಕದಲ್ಲಿ ಉತ್ತರವನ್ನು ಹೇಳುತ್ತಾರೆ. 'ಏಕೆ' ಎಂದರೆ ಭ್ರಮಸಾಮಗ್ರಿ ಎಂದರ್ಥ. 'ಫಲಬಲಾತ್' ಎಂದರೆ ಪ್ರಮಾನುತ್ಪತ್ತಿರೂಪವಾದ ಫಲಬಲದಿಂದ ಎಂದು ಅರ್ಥ. 'ಪ್ರತಿಬಂಧಕ' ಎಂದರೆ ಪ್ರಮೋತ್ಪತ್ತಿಗೆ ಪ್ರತಿಬಂಧಕ ಎಂದು ಅರ್ಥ. 'ಅಪರ' ಎಂದರೆ ಭ್ರಮಸಾಮಗ್ರಿಯಲ್ಲಿ ಸೇರಿದ ಪ್ರಮಾಸಾಮಗ್ರಿ ಎಂದು ಅರ್ಥ. 'ನ' ಎಂದರೆ ಭ್ರಮೋತ್ಪತ್ತಿ ಪ್ರತಿಬಂಧಕವಲ್ಲ ಎಂದು ಅರ್ಥ. ಹೀಗೆ ಉತ್ತರವನ್ನು ಹೇಳಬೇಕು ಎಂದು ಅಭಿಪ್ರಾಯ.

**ಯಾದೃಚ್ಛಿಕೇ ಯದೃಚ್ಛೈವ ಭ್ರಮಸ್ಯ ಪ್ರತಿಬಂಧಿಕಾ ।**
**ದೋಷಸ್ಯ ಜಾಗರೂಕತ್ವಾತ್ತದ್ರೋಧೇ ತದಪೇಕ್ಷಣಮ್ ॥ ೪೨೧ ॥**

**ಅರ್ಥ–** ಯಾದೃಚ್ಛಿಕೇ = ಯಾದೃಚ್ಛಿಕಪ್ರಮಾಸ್ಥಳದಲ್ಲಿ, ಯದೃಚ್ಛೈವ = ಯದೃಚ್ಛೆಯೇ, ಭ್ರಮಸ್ಯ = ಭ್ರಮೆಯನ್ನು ಕುರಿತು, ಪ್ರತಿಬಂಧಿಕಾ = ಪ್ರತಿಬಂಧಕವಾಗುತ್ತದೆ, ದೋಷಸ್ಯ =

ದೋಷವು, ಜಾಗರೂಕತ್ವಾತ್ = ಜಾಗರೂಕವಾಗಿರುವುದರಿಂದ, ತದ್ರೋಧೇ = ದೋಷದಶಕ್ತಿಯನ್ನು ಪ್ರತಿರೋಧ ಮಾಡಲು, ತದಪೇಕ್ಷಣಮ್ = ಯದೃಚ್ಛೆಯ ಅಪೇಕ್ಷೆಯಿದೆ.

**ಅನುವಾದ–** ಯಾದೃಚ್ಛಿಕಪ್ರಮಾಸ್ಥಳದಲ್ಲಿ ಯದೃಚ್ಛೆಯೇ ಭ್ರಮೋತ್ಪತ್ತಿಗೆ ಪ್ರತಿಬಂಧಕವಾಗುತ್ತದೆ. ಅಲ್ಲಿ ದೋಷವು ಜಾಗೃತವಾಗಿರುವುದರಿಂದ ದೋಷದ ಶಕ್ತಿಯನ್ನು ಪ್ರತಿರೋಧ ಮಾಡಲು ಯದೃಚ್ಛೆಯ ಅಪೇಕ್ಷೆಯೂ ಇದೆ.

**ಭಾವವಿಲಾಸಿನೀ–**ಏವಂ ತರ್ಹಿ ಯಾದೃಚ್ಛಿಕಸಂವಾದಿಪ್ರಮಾಯಾಂ ವಿದ್ಯಮಾನಾ ಭ್ರಮಸಾಮಗ್ರೀ ಕಥಂ ನ ಪ್ರಮೋತ್ಪತ್ತಿಪ್ರತಿಬಂಧಿಕೇತ್ಯತ ಆಹ – **ಯಾದೃಚ್ಛಿಕೇತಿ** ॥ ಭ್ರಮಸ್ಯ ಭ್ರಾಂತೇಃ । ಭ್ರಮಕಾರಣದೋಷಸ್ಯ ಚೇತ್ಯಪಿ ದ್ರಷ್ಟವ್ಯಮ್ । ಯದೃಚ್ಛಾಪ್ರತಿಬದ್ಧೋ ದೋಷಃ ಭ್ರಮಂ ಜನಯಿತುಂ ಪ್ರಮಾಂ ಪ್ರತಿಬದ್ಧುಂ ಚ ನಾಶಕ್ನೋದಿತಿ ಭಾವಃ । ಅತ ಏವಾತ್ರ ಯದೃಚ್ಛಾ-ಪೇಕ್ಷಣಮಿತ್ಯಾಹ – **ದೋಷಸ್ಯೇತಿ** ॥ ಜಾಗರೂಕತ್ವಾದ್ ವಿದ್ಯಮಾನತ್ವಾದಿತಿ ಯಾವತ್ । ತದ್ರೋಧೇ ದೋಷಶಕ್ತಿಪ್ರತಿರೋಧೇ ತದಪೇಕ್ಷಣಮ್ ಉತ್ತೇಜಕೇ ಸತಿ ಮಣಿಶಕ್ತಿಪ್ರತಿಬನ್ಧೇನ ದಾಹವದತ್ರಾಪಿ ಪ್ರಮೋತ್ಪತ್ತೇರಿತಿ ಭಾವಃ । ತಥಾಚ ಯಾದೃಚ್ಛಿಕಪ್ರಮಾಯಾಂ ದೋಷಸ್ಯಾಪ್ರತಿಬಂಧಕತ್ವಾನ್ನ ತದಭಾವಾಪೇಕ್ಷಣಮಿತಿ ಭಾವಃ ॥ ೪೨೧ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಭ್ರಮಸ್ಥಳದಲ್ಲಿ ಪ್ರಮಾಸಾಮಗ್ರಿಯಿದ್ದರೂ ಭ್ರಮಸಾಮಗ್ರಿಯು ಅಥವಾ ಭ್ರಮಸಾಮಗ್ರಿಘಟಕವಾದ ದೋಷವು ಪ್ರತಿಬಂಧಕವಾಗಿರುವುದರಿಂದ ಪ್ರಮಾ ಉಂಟಾಗುವುದಿಲ್ಲವೆಂದು ಹೇಳಿದರು. ಅದರ ಮೇಲೆ ಶಂಕೆಯನ್ನು ಮಾಡುತ್ತಾರೆ. ಹಾಗಾದರೆ ಪ್ರಮಾಸಾಮಗ್ರಿಗಿಂತಲೂ ಭ್ರಮಸಾಮಗ್ರಿಯೇ ಪ್ರಬಲವೆಂದಂತಾಯಿತು. ಆ ಪಕ್ಷದಲ್ಲಿ ಯಾದೃಚ್ಛಿಕ ಪ್ರಮಾಸ್ಥಳದಲ್ಲಿ ಭ್ರಮಸಾಮಗ್ರಿಯಿರುವಾಗ ಅದು ಪ್ರಮಾಸಾಮಗ್ರಿಗಿಂತಲೂ ಪ್ರಬಲವಾಗಿರುವಾಗ ಏಕೆ ಭ್ರಮೆಯು ಉಂಟಾಗಲಿಲ್ಲ ಎಂಬ ಈ ಶಂಕೆಗೆ ಈ ಶ್ಲೋಕದಲ್ಲಿ ಉತ್ತರವನ್ನು ಕೊಡುತ್ತಾರೆ. ಯಾದೃಚ್ಛಿಕಪ್ರಮಾಸ್ಥಳದಲ್ಲಿ ದೋಷವಿದ್ದರೂ ಯದೃಚ್ಛೆಯೇ ಭ್ರಮಕ್ಕೆ ಮತ್ತು ದೋಷಕ್ಕೆ ಪ್ರತಿಬಂಧಕವಾಗುತ್ತದೆ. ದೋಷವು ಜಾಗ್ರತವಾಗಿರುವಾಗ ದೋಷದ ಶಕ್ತಿಯನ್ನು ಪ್ರತಿರೋಧಮಾಡಿ, ದೋಷದ ಕಾರ್ಯವಾದ ಭ್ರಮವನ್ನು ಪ್ರತಿರೋಧ ಮಾಡುವುದರಿಂದ ಅಲ್ಲಿ ಪ್ರಮೆಯು ಉಂಟಾಗುತ್ತದೆ. ಯದೃಚ್ಛೆಯಿಂದ ಪ್ರತಿಬದ್ಧವಾದ ದೋಷವು ಭ್ರಮವನ್ನು ಉತ್ಪತ್ತಿಮಾಡುವುದಕ್ಕಾಗಲೀ ಅಥವಾ ಪ್ರಮಾವನ್ನು ಪ್ರತಿರೋಧ ಮಾಡುವುದಕ್ಕಾಗಲೀ ಸಮರ್ಥವಾಗುವುದಿಲ್ಲ. ಆದ್ದರಿಂದಲೇ ಅಂತಹ ಸ್ಥಳದಲ್ಲಿ ಯದೃಚ್ಛೆಯ ಅಪೇಕ್ಷೆಯಿದೆ. ಮಣಿಇದ್ದಾಗ ಅಗ್ನಿಯ ದಾಹಶಕ್ತಿಯು ಪ್ರತಿಬದ್ಧವಾದರೂ ಉತ್ತೇಜಕವಿರುವಾಗ ಮಣಿಯ ಪ್ರತಿಬಂಧಕತ್ವವು ಪ್ರತಿರುದ್ಧವಾಗಿ ಅಗ್ನಿಯು ದಾಹವನ್ನುಂಟುಮಾಡುವಂತೆ ಉತ್ತೇಜಕಸ್ಥಾನದಲ್ಲಿರುವ ಯದೃಚ್ಛೆಯು ಮಣಿಸ್ಥಾನ

ದಲ್ಲಿರುವ ದೋಷವನ್ನು ಪ್ರತಿರೋಧಿಸಿದ ನಂತರ ಜ್ಞಾನಸಾಮಾನ್ಯಸಾಮಗ್ರಿಯಿಂದಲೇ ಪ್ರಮೆಯು ಉಂಟಾಗುತ್ತದೆ.

**ಪ್ರಮಾಸಾಮಗ್ರ್ಯೇವ ಶಕ್ತಾ ಸ್ವಫಲಂ ಸಾಧಯೇತ್ತದಾ ।**
**ಅತೋ ಯಾದೃಚ್ಛಿಕೀ ಸಾಽಭೂತ್ತನ್ಮಾತ್ರೇ ತದಪೇಕ್ಷಣಾತ್ ॥ ೪೨೨ ॥**

**ಅರ್ಥ–** ತದಾ = ಆಗ, ಪ್ರಮಾಸಾಮಗ್ರ್ಯೇವ = ಪ್ರಮಾಸಾಮಗ್ರಿಯೇ, ಶಕ್ತಾ = ಸಮರ್ಥವಾದ್ದರಿಂದ, ಸ್ವಫಲಂ = ತನ್ನ ಫಲವಾದ ಪ್ರಮೆಯನ್ನು, ಸಾಧಯೇತ್ = ಉತ್ಪಾದಿಸುತ್ತದೆ, ಅತಃ = ಆದ್ದರಿಂದ, ತನ್ಮಾತ್ರೇ = ದೋಷಶಕ್ತಿಯನ್ನು ಪ್ರತಿರೋಧ ಮಾಡುವುದಕ್ಕೆ ಮಾತ್ರ, ತದಪೇಕ್ಷಣಾತ್ = ಯದೃಚ್ಛೆಯನ್ನು ಅಪೇಕ್ಷಿಸುವುದರಿಂದ, ಸಾ = ಆ ಪ್ರಮೆಯು, ಯಾದೃಚ್ಛಿಕೀ ಅಭೂತ್ = ಯಾದೃಚ್ಛಿಕೀ ಎಂದು ಆಯಿತು. (ಯಾದೃಚ್ಛಿಕೀ ಎಂದು ಕರೆಯಲ್ಪಡುತ್ತದೆ.)

**ಅನುವಾದ–** ಆಗ ಜ್ಞಾನಸಾಮಾನ್ಯ ಸಾಮಗ್ರಿಯೇ ಪ್ರಮಾಸಾಮಗ್ರಿಯೂ ಆಗಿರುತ್ತದೆ. ಅದಕ್ಕೆ ಪ್ರಮೆಯನ್ನು ಉಂಟುಮಾಡುವುದರಲ್ಲಿ ಸಹಜವಾದ ಶಕ್ತಿಯಿದೆ. ಆದ್ದರಿಂದ ಅದು ಪ್ರಮೆಯನ್ನೇ ಹುಟ್ಟಿಸುತ್ತದೆ. ದೋಷವಿದ್ದರೂ ಉಂಟಾಗುವ ಈ ಪ್ರಮೆ ಅಲ್ಲಿ ಮಾತ್ರ ಅದೃಷ್ಟವನ್ನು ಅಪೇಕ್ಷಿಸುತ್ತದೆ. ಅದೃಷ್ಟದ ಅಪೇಕ್ಷೆಯಿರುವ ಕಾರಣದಿಂದಲೇ ಈ ಪ್ರಮೆಯನ್ನು ಅದೃಷ್ಟಪ್ರಮಾ ಎಂದು ಕರೆಯುತ್ತೇವೆ.

**ಭಾವವಿಲಾಸಿನೀ–**ತದಾ ಪ್ರಮಾಸಾಮಗ್ರ್ಯೇವ ಜ್ಞಾನಸಾಮಗ್ರೀರೂಪಪ್ರಮಾಸಾಮಗ್ರ್ಯೇವ ಶಕ್ತಾ ಪ್ರಮೋತ್ಪಾದನೇ ಸಹಜಶಕ್ತಿಮತೀ ಸ್ವಫಲಂ ಪ್ರಮಾಲಕ್ಷಣಸ್ವಕಾರ್ಯಂ ಸಾಧಯೇ-ದಿತ್ಯರ್ಥಃ । ಏತದೇವ ವಿಶದಯತಿ – **ಅತ ಇತಿ** ॥ ಯತೋ ಯಾದೃಚ್ಛಿಕಪ್ರಮಾಯಾಮೇವ ಯದೃಚ್ಛಾಪೇಕ್ಷಾಽತ ಇತ್ಯರ್ಥಃ॥ ಸಾ ದೋಷೇ ಸತ್ಯಪಿ ಜಾಯಮಾನಾ ಪ್ರಮಾ । ತನ್ಮಾತ್ರೇ ತಾದೃಶಮಾತ್ರೇ । ತದಪೇಕ್ಷಣಾತ್ । ಯದೃಚ್ಛಾಪೇಕ್ಷಣಾತ್ ॥ ೪೨೨ ॥

**ಅನ್ಯತ್ರ ಸಾಪಿ ನಾಪೇಕ್ಷ್ಯಾ ಗುಣಾತ್ತತ್ಕ್ವ ಪ್ರಮೋದಯಃ ॥ ೪೨೩ ॥**

**ಅರ್ಥ–** ಅನ್ಯತ್ರ = ಬೇರೆಯ ಘಟ-ಪಟಾದಿ ಪ್ರಮಾಸ್ಥಳದಲ್ಲಿ, ಸಾಪಿ = ಆ ಯದೃಚ್ಛೆಯಾದರೂ ಕೂಡ, ನಾಪೇಕ್ಷ್ಯಾ = ಅಪೇಕ್ಷಿಸಲ್ಪಡುವುದಿಲ್ಲ, ತತ್ = ಆ ಕಾರಣದಿಂದ, ಗುಣಾತ್ = ಗುಣದಿಂದ, ಕ್ವ = ಎಲ್ಲಿ, ಪ್ರಮೋದಯಃ = ಪ್ರಮೆಯ ಉತ್ಪತ್ತಿ ಉಂಟಾಗುತ್ತದೆ?

**ಅನುವಾದ–** ಬೇರೆಯ ಕಡೆಯಲ್ಲಿ ಎಂದರೆ ಘಟ-ಪಟಾದಿ ಪ್ರಮಾಸ್ಥಳದಲ್ಲಿ ಯದೃಚ್ಛೆಯ ಅಪೇಕ್ಷೆಯಿಲ್ಲ. ಆದ್ದರಿಂದ ಎಲ್ಲಿ ಪ್ರಮೆಯನ್ನು ಕುರಿತು ಗುಣವು ಕಾರಣ ಎಂಬುದು ಸಿದ್ಧವಾಗುತ್ತದೆ?

**ಭಾವವಿಲಾಸಿನೀ**–ಅನ್ಯತ್ರ ಯಾದೃಚ್ಛಿಕಪ್ರಮಾಯಾ ಅನ್ಯತ್ರ ಘಟಪಟಾದಿಪ್ರಮಾಸ್ವಿತಿ ಯಾವತ್ । ಸಾಪಿ ಯದೃಚ್ಛಾಪಿ । ಏತೇನ ಯದೃಚ್ಛಾಯಾ ಅಪಿ ಪ್ರಮಾಮಾತ್ರೇಽನಪೇಕ್ಷಣಾತ್ ನ ತಸ್ಯಾಃ ಪ್ರಮಾಜನಕಗುಣತ್ವಮಿತಿ ಸೂಚಯತಿ । ತತ್ತಸ್ಮಾದ್ ದೋಷಾಭಾವಸ್ಯ ಗುಣಸ್ಯ ಚೋಕ್ತರೀತ್ಯಾ ವ್ಯಭಿಚಾರೇಣ ಪ್ರಮಾಕಾರಣತ್ವಾಯೋಗಾದ್ ಯದೃಚ್ಛಾಯಾಃ ಕ್ವಾಚಿತ್ಕತ್ವೇನ ಗುಣತ್ವಾಯೋಗಾತ್ ಕ್ವ ಗುಣಾತ್ಪ್ರಮೋದಯ ಇತಿ ಸಂಬಂಧಃ ॥ ೪೨೩ ॥

**ವಿವರಣೆ**– ಯಾದೃಚ್ಛಿಕ ಪ್ರಮಾಸ್ಥಳವನ್ನು ಬಿಟ್ಟು, ಘಟ-ಪಟಾದಿ ಪ್ರಮಾಸ್ಥಳದಲ್ಲಿ ಯದೃಚ್ಛೆಯ ಅಪೇಕ್ಷೆಯೂ ಇಲ್ಲ. ಆದ್ದರಿಂದ ಪ್ರಮಾಸ್ಥಳದಲ್ಲಿ ಯದೃಚ್ಛೆಯು ಸಾರ್ವತ್ರಿಕವಾಗಿ ಕಾರಣವಾಗಲಾರದು. ಇನ್ನು ದೋಷಾಭಾವಕ್ಕೆ ಮತ್ತು ಗುಣಕ್ಕೆ ವ್ಯಭಿಚಾರ ಬರುವುದರಿಂದ ಪ್ರಮಾಕಾರಣತ್ವವು ಇಲ್ಲ ಎಂದು ಹೇಳಿದ್ದೇವೆ. ಆದ್ದರಿಂದ ಯದೃಚ್ಛೆಯಾಗಲೀ, ದೋಷಾಭಾವವಾಗಲೀ ಅಥವಾ ಗುಣವಾಗಲೀ ಪ್ರಮಾವನ್ನು ಕುರಿತು ಕಾರಣವಲ್ಲವಾದ್ದರಿಂದ ಪ್ರಮಾಕ್ಕೆ ಗುಣಾದಿಜನ್ಯತ್ವವನ್ನು ಹೇಗೆ ಹೇಳುತ್ತೀರಿ?

**ಯತೋ ವಹ್ನ್ಯನುಮಾ ಸೇಯಂ ತತೋ ಧೂಮತ್ವಧೀಬಲಾತ್ ।**
**ತಜ್ಜನ್ಮ ವಾಚ್ಯಂ ನಾನ್ಯಸ್ಮಾದ್ ಯದ್ಧೂಮಸ್ಯಾಗ್ನಿಲಿಂಗತಾ ॥ ೪೨೪ ॥**

**ಅರ್ಥ**– ಯತಃ = ಯಾವ ಕಾರಣದಿಂದ, ಸೇಯಂ = ಅಂತಹ ಈ ಜ್ಞಾನವು, ವಹ್ನ್ಯನುಮಾ = ವಹ್ನಿಯ ಅನುಮಿತಿ ರೂಪವಾಗಿದೆಯೋ, ತತಃ = ಆ ಕಾರಣದಿಂದ, ಧೂಮತ್ವಧೀಬಲಾತ್ = ಧೂಮತ್ವಪ್ರಕಾರಕ ಧೂಮಜ್ಞಾನ ಸಾಮರ್ಥ್ಯದಿಂದ, ತಜ್ಜನ್ಮ = ವಹ್ನಿಯ ಅನುಮಿತಿಯ ಉತ್ಪತ್ತಿಯು, ವಾಚ್ಯಂ = ಹೇಳಲ್ಪಡಬೇಕು, ನಾನ್ಯಸ್ಮಾದ್ = ಬೇರೆ ಯಾವ ಕಾರಣದಿಂದಲೂ ಅಲ್ಲ, ಯತ್ = ಏಕೆಂದರೆ, ಧೂಮಸ್ಯ = ಧೂಮಕ್ಕೆ, ಅಗ್ನಿಲಿಂಗತಾ = ಅಗ್ನಿಯನುಮಾಪಕತ್ವವು ಇದೆ.

**ಅನುವಾದ**– ಈ ಯಾದೃಚ್ಛಿಕಪ್ರಮೆಯು ವಹ್ನಿಯ ಅನುಮಿತಿರೂಪವಾದ ಸ್ಥಳದಲ್ಲಿ ಧೂಮತ್ವಪ್ರಕಾರಕಜ್ಞಾನದಿಂದಲೇ ಅನುಮಿತಿಯ ಉತ್ಪತ್ತಿಯನ್ನು ಅಂಗೀಕರಿಸಬೇಕು. ಧೂಮಕ್ಕೆ ಮಾತ್ರ ಅಗ್ನಿಲಿಂಗತ್ವವಿರುವುದರಿಂದ ಬೇರೆ ಯಾವ ಜ್ಞಾನದಿಂದಲೂ ವಹ್ನಿಯ ಅನುಮಿತಿಯು ಉಂಟಾಗುವುದಿಲ್ಲ.

**ಭಾವವಿಲಾಸಿನೀ**–ನನು ಭವೇದಯಂ ದೋಷಾಭಾವಸ್ಯ ಗುಣಸ್ಯ ಚ ಪ್ರಮಾಕಾರಣತ್ವಾಭಾವಃ । ಯದಿ ಬಾಷ್ಪಾರೋಪಿತಧೂಮಜ್ಞಾನಸ್ಯ ಯಾದೃಚ್ಛಿಕವಹ್ನ್ಯನುಮಿತಿರೂಪಪ್ರಮಾಂ ಪ್ರತಿ ಕಾರಣತ್ವಂ ಸ್ಯಾತ್ । ತದೇವ ಕುತಃ? ಇತ್ಯತ ಆಹ – **ಯತ ಇತಿ** ॥ ಯದ್ಯಪಿ ಕಾರಣಾಂತರಾಭಾವಾತ್ ಜನ್ಯಜ್ಞಾನೇ ಚ ಕಾರಣಸ್ಯಾವಶ್ಯಕತ್ವಾದ್ ಧೂಮಭ್ರಮಜನ್ಯತ್ವಮನಿಚ್ಛತಾಪಿ ವಕ್ತವ್ಯಮ್ । ತಥಾಪಿ ಯುಕ್ತ್ಯಾ ಸಾಧನಂ ಯುಕ್ತಿಮಲ್ಲಿಕಾಯಾಃ ಸ್ವಭಾವ ಇತಿ ದ್ರಷ್ಟವ್ಯಮ್ । ಯತಶ್ಚೇಯಂ ಯಾದೃಚ್ಛಿಕಪ್ರಮಾರೂಪಾ ವಹ್ನ್ಯನುಮಾ । ತತೋ ವಹ್ನ್ಯನುಮಿತಿತ್ವಾತ್ ।

**ತಜ್ಜನ್ಯ ವಹ್ನ್ಯನುಮಿತಿಜನ್ಮ ಅನ್ಯಸ್ಮಾದ್ ಧೂಮಜ್ಞಾನಾದನ್ಯಸ್ಮಾತ್ । ತತ್ರ ಹೇತುಃ – ಯದಿತಿ ॥ ಯದ್ಯಸ್ಮಾದ್ ಧೂಮಸ್ಯಾಗ್ನಿಲಿಂಗತಾ, ತಸ್ಮಾದ್ಬಾಷ್ಪೇ ಧೂಮತ್ವಪ್ರಕಾರಕಜ್ಞಾನಾದೇವ ತಜ್ಜನಿರಿತಿ ಭಾವಃ ॥ ೪೨೪ ॥**

**ವಿವರಣೆ–** ಬಾಷ್ಪಾರೋಪಿತ ಧೂಮದಲ್ಲಿ ಧೂಮತ್ವಪ್ರಕಾರಕಜ್ಞಾನವು ಯಾದೃಚ್ಛಿಕವಾದ ವಹ್ನಿಯ ಅನುಮಿತಿರೂಪಪ್ರಮಾಕ್ಕೆ ಕಾರಣವೆಂದು ಸಿದ್ಧವಾದ ಮೇಲೆ ಗುಣಕ್ಕಾಗಲೀ, ಅಥವಾ ದೋಷಾಭಾವಕ್ಕಾಗಲೀ ಪ್ರಮಾಕಾರಣತ್ವವು ಇಲ್ಲವೆಂದು ಸಿದ್ಧವಾಗುತ್ತದೆ. ಅನುಮಿತಿಯೇ ಹೇಗೆ ಉಂಟಾಗುತ್ತದೆ ಎಂದು ಪ್ರಶ್ನಿಸಿದರೆ ಈ ಶ್ಲೋಕದಲ್ಲಿ ಉತ್ತರವನ್ನು ಹೇಳುತ್ತಾರೆ. ಯದ್ಯಪಿ ಇದಕ್ಕೆ ಉತ್ತರವನ್ನು ಹೇಳಲು ಕಷ್ಟಪಡಬೇಕಾಗಿಲ್ಲ. ಅನುಮಿತಿಯು ಜನ್ಯಜ್ಞಾನ. ಅದಕ್ಕೆ ಒಂದು ಕಾರಣವಿರಲೇಬೇಕು. ಇಲ್ಲಿ ಬಾಷ್ಪಾರೋಪಿತ ಧೂಮಜ್ಞಾನವನ್ನು ಬಿಟ್ಟು ಬೇರೆ ಕಾರಣವಿಲ್ಲ. ಆದ್ದರಿಂದ ಬಾಷ್ಪಾರೋಪಿತ ಧೂಮಜ್ಞಾನದಿಂದಲೇ ಅನುಮಿತಿಯು ಉಂಟಾಗಿದೆಯೆಂದು ಸ್ಪಷ್ಟ. ಆದರೂ ಈ ಗ್ರಂಥಕ್ಕೆ ಯುಕ್ತಿಮಲ್ಲಿಕೆ ಎಂದು ಹೆಸರಿರುವುದರಿಂದ ಯುಕ್ತಿಯಿಂದಲೇ ಈ ವಿಷಯವನ್ನು ಪ್ರತಿಪಾದಿಸುತ್ತಾರೆ. ವಹ್ನಿ ಅನುಮಿತಿ ಉಂಟಾಗಬೇಕಾದರೆ ವಹ್ನಿವ್ಯಾಪ್ಯವಾದ ಲಿಂಗದ ಜ್ಞಾನದಿಂದಲೇ ಉಂಟಾಗಬೇಕು. ಧೂಮ ಒಂದೇ ವಹ್ನಿವ್ಯಾಪ್ಯವಾದ ಲಿಂಗ. ಆದ್ದರಿಂದ ಧೂಮಜ್ಞಾನವಿಲ್ಲದಿದ್ದರೆ ವಹ್ನಿಯ ಅನುಮಿತಿಯು ಉಂಟಾಗಲು ಸಾಧ್ಯವಿಲ್ಲ. ಆದ್ದರಿಂದ ಧೂಮಜ್ಞಾನವನ್ನು ಅವಶ್ಯಕವಾಗಿ ಒಪ್ಪಬೇಕು. ಈ ಧೂಮಜ್ಞಾನವಾದರೂ ಬಾಷ್ಪವನ್ನು ನೋಡಿ ಧೂಮ ಎಂದು ಭ್ರಮಿಸಿದ ಜ್ಞಾನ. ಆದ್ದರಿಂದ ಭ್ರಾಂತಿರೂಪವಾದ ಧೂಮಜ್ಞಾನದಿಂದ ಪ್ರಮಾರೂಪವಾದ ಅನುಮಿತಿಯು ಉಂಟಾಗುವುದು ಎಂದು ಅಂಗೀಕರಿಸಬೇಕು.

ಯಥಾನ್ಯತ್ರ ಭ್ರಮಾಕಾರಾ ಸಾ ಧೀರ್ಧೂಮಭ್ರಮಾದಭೂತ್ ।
ತಥೈವೇಯಂ ಜನೌ ಕೋಽಪಿ ನ ವಿಶೇಷೋಽನಯೋರ್ದ್ವಯೋಃ ॥೪೨೫॥

**ಅರ್ಥ–** ಯಥಾ = ಹೇಗೆ, ಅನ್ಯತ್ರ = ಭ್ರಾಂತಿಯ ಸ್ಥಳದಲ್ಲಿ, ಧೂಮಭ್ರಮಾತ್ = ಧೂಮಭ್ರಾಂತಿಯಿಂದ, ಸಾ = ಆ, ಭ್ರಮಾಕಾರಾ = ಭ್ರಮರೂಪವಾದ, ಧೀಃ = ಅನುಮಿತಿರೂಪವಾದ ಜ್ಞಾನವು, ಅಭೂತ್ = ಉಂಟಾಯಿತೋ, ಇಯಂ = ಈ ಪ್ರಮಾತ್ಮಕನೀತಿಯೂ ಸಹ, ತಥೈವ = ಹಾಗೆಯೇ ಉತ್ಪತ್ತಿಯಾಗಿದೆ, ಅನಯೋರ್ದ್ವಯೋಃ = ಈ ಎರಡು ಅನುಮಿತಿಗಳಿಗೆ, ಜನೌ = ಉತ್ಪತ್ತಿಯ ವಿಷಯದಲ್ಲಿ, ಕೋಽಪಿ ವಿಶೇಷಃ = ಯಾವ ವೈಲಕ್ಷಣ್ಯವಾಗಲೀ, ನ = ಇಲ್ಲ.

**ಅನುವಾದ– ಎಲ್ಲಿ ಭ್ರಮರೂಪವಾದ ವಹ್ನ್ಯನುಮಿತಿಯು ಉಂಟಾಗುವುದೋ ಅಲ್ಲಿ ಧೂಮಭ್ರಮದಿಂದಲೇ ಆ ಅನುಮಿತಿಯು ಉಂಟಾಗುವುದು ಎಂದು ಸರ್ವಸಮ್ಮತ. ಹಾಗೆಯೇ ಈ ಯಾದೃಚ್ಛಿಕಪ್ರಮಾರೂಪವಾದ ವಹ್ನ್ಯನುಮಿತಿಯು**

**ಉಂಟಾಗಬೇಕಾದರೆ ಧೂಮಜ್ಞಾನವು ಬೇಕೇ ಬೇಕು. ಈ ಭ್ರಾಂತಿರೂಪವಾದ ಮತ್ತು ಪ್ರಮಾರೂಪವಾದ ವಹ್ನ್ಯನುಮಿತಿಗಳಲ್ಲಿ ಉತ್ಪತ್ತಿಯ ವಿಷಯದಲ್ಲಿ ಯಾವ ವ್ಯತ್ಯಾಸವೂ ಇಲ್ಲ.**

**ಭಾವವಿಲಾಸಿನೀ**–ಪ್ರಕಾರಾಂತರೇಣಾಪಿ ತದುಪಪಾದಯತಿ – **ಯಥೇತಿ ॥** ಯಥಾನ್ಯತ್ರ ಯಾದೃಚ್ಛಿಕಪ್ರಮಾತೋಽನ್ಯತ್ರ ವಹ್ನಿಭ್ರಮಸ್ಥಲ ಇತ್ಯರ್ಥಃ । ಸಾ ಧೀಃ ವಹ್ನ್ಯನುಮಿತಿರೂಪಾ ಧೀಃ । ಇಯಂ ಯಾದೃಚ್ಛಿಕವಹ್ನ್ಯನುಮಿತಿರೂಪಾ ಪ್ರಮಾ । ಪ್ರಮಾಽಪ್ರಮಾರೂಪಯೋ-ರನಯೋರ್ದ್ವಯೋರ್ವಹ್ನ್ಯನುಮಿತ್ಯೋರಿತ್ಯರ್ಥಃ । ಜನೌ ಉತ್ಪತ್ತೌ ॥ ೪೨೫ ॥

ಬೇರೆ ರೀತಿಯಿಂದ ಇದೇ ಅರ್ಥವನ್ನು ಉಪಪಾದನೆ ಮಾಡುತ್ತಾರೆ. ಯಾದೃಚ್ಛಿಕ ಪ್ರಮಾಸ್ಥಳವನ್ನು ಬಿಟ್ಟು ಬೇರೆ ಸ್ಥಳದಲ್ಲಿ ಧೂಮಭ್ರಮದಿಂದ ಭ್ರಮರೂಪವಾದ ವಹ್ನ್ಯನುಮಿತಿಯು ಉಂಟಾಗುತ್ತದಷ್ಟೇ. ಯಾದೃಚ್ಛಿಕ ಪ್ರಮಾರೂಪವಾದ ವಹ್ನ್ಯನುಮಿತಿಯೂ ಸಹ ಹಾಗೆಯೇ ಉಂಟಾಗಿದೆ. ಇವೆರಡರ ಉತ್ಪತ್ತಿಯಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಆದ್ದರಿಂದ ಭ್ರಮಾತ್ಮಕ ಧೂಮಜ್ಞಾನದಿಂದ ಪ್ರಮಾತ್ಮಕ ಅನುಮಿತಿಯನ್ನು ಅಂಗೀಕರಿಸಬೇಕು.

ಪ್ರವೃತ್ತ್ಯುತ್ತರಕಾಲಂ ತು ವಿಸಂವಾದಾದಸೌ ಭ್ರಮಃ ।
ಸಂವಾದೇನ ಪ್ರಮಾ ಸೇಯಮಿತಿ ನಿರ್ಣೀಯತೇ ಬುಧೈಃ ॥ ೪೨೬ ॥

**ಅರ್ಥ**– ಪ್ರವೃತ್ತ್ಯುತ್ತರಕಾಲಂ = ಪ್ರವೃತ್ತಿಮಾಡಿದ ನಂತರದ ಕಾಲದಲ್ಲಿ, ವಿಸಂವಾದಾತ್ ತು = ವಿಸಂವಾದದಿಂದಲೇ, ಅಸೌ = ಈ ಜ್ಞಾನವು, ಭ್ರಮಃ ಇತಿ = ಭ್ರಮ ಎಂದೂ, ಸಂವಾದೇನ ತು = ಸಂವಾದಿಂದಲೇ, ಇಯಂ= ಇದು, ಪ್ರಮಾ ಇತಿ= ಯಥಾರ್ಥಜ್ಞಾನವೆಂದೂ, ಬುಧೈಃ = ವಿವೇಕಿಗಳಿಂದ, ನಿರ್ಣೀಯತೇ = ನಿರ್ಧರಿಸಲ್ಪಡುತ್ತದೆ.

**ಅನುವಾದ– ಎರಡು ಅನುಮಿತಿಗಳು ಒಂದೇ ರೀತಿಯಾಗಿದ್ದರೂ ಒಂದು ಸ್ಥಳದಲ್ಲಿ ಪ್ರವೃತ್ತಿಯ ಅನಂತರದಲ್ಲಿ ವಿಸಂವಾದ ಉಂಟಾಗುವುದರಿಂದ ಆ ಅನುಮಿತಿಯು ಭ್ರಮವೆಂದು ನಿಶ್ಚಯವಾಗುತ್ತದೆ. ಇನ್ನೊಂದು ಸ್ಥಳದಲ್ಲಿ ಸಂವಾದವು ದೊರೆಯುವುದರಿಂದ ವಿವೇಕಿಗಳಾದವರು ಅದನ್ನು ಪ್ರಮಾ ಎಂದು ನಿರ್ಣಯಿಸುತ್ತಾರೆ.**

**ಭಾವವಿಲಾಸಿನೀ–ತರ್ಹ್ಯೇಕಸ್ಯಾಃ ಪ್ರಮಾತ್ವಮಪರಸ್ಯಾ ಅಪ್ರಮಾತ್ವಂ ಚ ಕುತೋ ಜ್ಞಾಯತ ಇತ್ಯತ ಆಹ–ಪ್ರವೃತ್ತೀತಿ॥ ಅಸೌ ಯಾದೃಚ್ಛಿಕಪ್ರಮಾತಿರಿಕ್ತಾ ಧೂಮಭ್ರಮಜನ್ಯಾ ವಹ್ನ್ಯನುಮಿತಿಃ ಸೇಯಂ ಯಾದೃಚ್ಛಿಕಪ್ರಮಾರೂಪಾ ವಹ್ನ್ಯನುಮಿತಿಃ । ಅತಿದೂರಸ್ಥಲೀಯಜ್ಞಾನಪ್ರಾಮಾಣ್ಯತ್ವಾತ್ ಪ್ರಾಕ್ ಸಾಕ್ಷಿಣಾ ಪ್ರಾಮಾಣ್ಯಾಗ್ರಹಣಂ ನ ದೋಷ ಇತಿ ಭಾವಃ ॥ ೪೨೬ ॥**

**ವಿವರಣೆ–** ಎರಡು ಅನುಮಿತಿಗಳು ಒಂದೇ ರೀತಿ ಆದರೆ ಒಂದು ಪ್ರಮಾ ಮತ್ತು ಇನ್ನೊಂದು ಭ್ರಮ ಎಂದು ಹೇಗಾಗುತ್ತದೆ ಎಂಬ ಶಂಕೆಗೆ ಈ ಶ್ಲೋಕದಲ್ಲಿ ಉತ್ತರವನ್ನು ಕೊಡುತ್ತಾರೆ. ವಿಸಂವಾದ ಬಂದ ಸ್ಥಳದಲ್ಲಿ ವಿಸಂವಾದದಿಂದ ಅಪ್ರಾಮಾಣ್ಯವು ನಿಶ್ಚಿತವಾಗುತ್ತದೆ. ಯಾದೃಚ್ಛಿಕಪ್ರಮಾಸ್ಥಳದಲ್ಲಿ ಸಂವಾದವಿರುವುದರಿಂದ ಪ್ರಮಾತ್ವವು ನಿಶ್ಚಿತವಾಗುತ್ತದೆ. ಯಾದೃಚ್ಛಿಕಪ್ರಮಾಸ್ಥಳದಲ್ಲಿ ಸಂವಾದಕ್ಕಿಂತಲೂ ಮುಂಚೆ ಏಕೆ ಪ್ರಮಾಣ್ಯನಿಶ್ಚಯವಾಗಿಲ್ಲ ಎಂಬ ಪ್ರಶ್ನೆ ಬರುತ್ತದೆ. ಆದರೆ ಈ ಅನುಮಿತಿಯು ದೂರದಲ್ಲಿರುವ ವಹ್ನಿಜ್ಞಾನರೂಪವಾದ್ದರಿಂದ ವಿಷಯದಲ್ಲಿ ದೂರಸ್ಥತ್ವರೂಪವಾದ ದೋಷವು ಇರುವ ಕಾರಣ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸಿ, ಪ್ರಾಮಾಣ್ಯವನ್ನು ಗ್ರಹಿಸಲಿಲ್ಲ ಎಂಬ ಉತ್ತರವನ್ನು ನಾವು ಕೊಡುತ್ತೇವೆ. ಪ್ರಮೆ ಹುಟ್ಟಲು ತಾರ್ಕಿಕರು ಹೇಳುವಂತೆ ಗುಣ ಅಥವಾ ದೋಷಾಭಾವವು ಕಾರಣವಲ್ಲ ಎನ್ನುವ ಸಿದ್ಧಾಂತವನ್ನು ಮುಂದಿನ ಶ್ಲೋಕದಲ್ಲಿ ಉಪಸಂಹರಿಸುತ್ತಿದ್ದಾರೆ.

**ಉತ್ಪತ್ತಿಸ್ತೂಭಯೋರೇಕಪ್ರಕಾರಾ ನಾತ್ರ ಸಂಶಯಃ ।**
**ತಸ್ಮಾದುಕ್ತೋ ಗುಣೋನ್ಯೋ ವಾ ಕಲ್ಪನೀಯೋ ನ ಜನ್ಮನಿ ॥ ೪೨೭ ॥**

**ಅರ್ಥ–** ಉಭಯೋಃ = ಭ್ರಮ ಮತ್ತು ಪ್ರಮಾರೂಪದ ಎರಡು ಅನುಮಿತಿಗಳ, ಉತ್ಪತ್ತಿಃ ತು = ಉತ್ಪತ್ತಿಯಾದರೂ, ಏಕಪ್ರಕಾರಾ= ಒಂದೇ ರೀತಿಯ ಕಾರಣವುಳ್ಳದ್ದೇ, ಅತ್ರ = ಈ ವಿಷಯದಲ್ಲಿ, ಸಂಶಯಃ = ಸಂದೇಹವು, ನ = ಇಲ್ಲ. ತಸ್ಮಾತ್ = ಯಾದೃಚ್ಛಿಕಸ್ಥಳದಲ್ಲಿ ಗುಣ ಅಥವಾ ದೋಷಾಭಾವವಿಲ್ಲದೆ ಪ್ರಮೆ ಹುಟ್ಟಿದ್ದರಿಂದ, ಉಕ್ತಃ = ಹಿಂದೆ ಹೇಳಿದ, ಗುಣಃ = ಗುಣವು, ವಾ = ಅಥವಾ, ಅನ್ಯಃ = ದೋಷಾಭಾವವು, ಜನ್ಮನಿ = ಪ್ರಮೆಯ ಉತ್ಪತ್ತಿಯಲ್ಲಿ, ನ ಕಲ್ಪನೀಯಃ = ಕಲ್ಪಿಸಲ್ಪಡಬಾರದು.

**ಅನುವಾದ–** ಉತ್ಪತ್ತಿಯು ಮಾತ್ರ ಎರಡು ಸ್ಥಳಗಳಲ್ಲಿಯೂ ಒಂದೇ ರೀತಿಯಾಗಿದೆ. ಈ ವಿಷಯದಲ್ಲಿ ಸಂಶಯವಿಲ್ಲ. ಆದ್ದರಿಂದ ಸಲ್ಲಿಂಗಪರಾಮರ್ಶರೂಪವಾದ ಗುಣವನ್ನಾಗಲೀ, ಅಥವಾ ಬೇರೆ ದೋಷಾಭಾವನ್ನಾಗಲೀ ಪ್ರಾಮಾಣ್ಯದ ಉತ್ಪತ್ತಿಗೆ ಕಾರಣವೆಂದು ಕಲ್ಪನೆ ಮಾಡುವ ಅಗತ್ಯವಿಲ್ಲ.

**ಭಾವವಿಲಾಸಿನೀ–**ಉಭಯೋರ್ಭ್ರಮಾಭ್ರಮಯೋಃ । ಸಲ್ಲಿಂಗಸ್ಯ ಪರಾಮರ್ಶ ಇತ್ಯಾದಿನೋಕ್ತಮರ್ಥಮುಪಸಂಹರತಿ –**ತಸ್ಮಾದಿತಿ** ॥ ಯಸ್ಮಾದಿಯಂ ಯಾದೃಚ್ಛಿಕಪ್ರಮಾರೂಪಾ ವಹ್ನ್ಯನುಮಿತಿಃ ಸಲ್ಲಿಂಗಪರಾಮರ್ಶಲಕ್ಷಣಗುಣಂ ದೋಷಾಭಾವಂ ಚಾಂತರೇಣ ಧೂಮಜ್ಞಾನಮಾತ್ರೇಣೈವೋತ್ಪನ್ನಾ ತಸ್ಮಾದಿತ್ಯರ್ಥಃ । ಉಕ್ತೋ ಗುಣಃ ಸಲ್ಲಿಂಗಪರಾಮರ್ಶಲಕ್ಷಣಃ । ಅನ್ಯೋ ದೋಷಾಭಾವಃ । ಜನ್ಮನಿ ಪ್ರಮೋತ್ಪತ್ತೌ ನ ಕಲ್ಪನೀಯ ಇತ್ಯುಕ್ತ್ಯಾ ಯಾ ತಾರ್ಕಿಕಾಣಾಂ ಸ್ವಮತದುರಾಗ್ರಹೇಣ ಗುಣಾಂತರಕಲ್ಪನಾ ಸಾಪಿ ನೇತಿ

**ಸೂಚಯತಿ । ವಹ್ನಿಪ್ರಕಾರಿಕಾಯಾ ಅಸ್ಯಾ ಧೂಮತ್ವಪ್ರಕಾರಕ- ಜ್ಞಾನಾದೇವೋತ್ಪತ್ತಿಸಂಭವೇನ ಕಲ್ಪನಾಯಾ ನಿರ್ಮೂಲತ್ವಾದಿತಿ ॥ ೪೨೭ ॥**

**ವಿವರಣೆ–** ಎರಡು ಸ್ಥಳಗಳಲ್ಲಿಯೂ ಎಂದರೆ ಭ್ರಮ ಮತ್ತು ಪ್ರಮಾ ಸ್ಥಳಗಳಲ್ಲಿ ಎಂದು ಅರ್ಥ. ಈ ಯಾದೃಚ್ಛಿಕ ವಹ್ನ್ಯನುಮಿತಿಯು ಸಲ್ಲಿಂಗ ಪರಾಮರ್ಶರೂಪವಾದ ಗುಣವಿಲ್ಲದಿದ್ದರೂ ಹಾಗೆಯೇ ದೋಷಾಭಾವವಿಲ್ಲದಿದ್ದರೂ (ಧೂಮಭ್ರಮರೂಪವಾದ ದೋಷವಿರುವುದರಿಂದ) ಕೇವಲ ಧೂಮಜ್ಞಾನದಿಂದಲೇ ಉತ್ಪನ್ನವಾಗಿದೆ. ಆದ್ದರಿಂದ ಸಲ್ಲಿಂಗಪರಾಮರ್ಶರೂಪವಾದ ಗುಣವಾಗಲೀ ಅಥವಾ ಬೇರೆ ಯಾವ ದೋಷಾಭಾವವಾಗಲೀ ಪ್ರಮೆಯನ್ನು ಕುರಿತು ಕಾರಣವಲ್ಲ. ವಹ್ನಿಪ್ರಕಾರಕ ಅನುಮಿತಿಯನ್ನು ಕುರಿತು ಧೂಮತ್ವಪ್ರಕಾರಕಜ್ಞಾನವು ಕಾರಣ ಎಂಬ ಸಾಮಾನ್ಯ ಕಾರ್ಯಕಾರಣಭಾವದಿಂದಲೇ ಎರಡೂ ಕಡೆಯು ಅನುಮಿತಿಯೂ ಉಂಟಾಗುತ್ತದೆ.

**ಲಿಂಗಭ್ರಮಾಖ್ಯಾನುಮಾನದೋಷೇ ಸತ್ಯೇವ ಯಾಭವತ್ ।**
**ದೋಷಾಭಾವಾನಪೇಕ್ಷ್ಯೈವ ಸೇಯಂ ಯಾದೃಚ್ಛಿಕಪ್ರಮಾ ॥ ೪೨೮ ॥**

**ಅರ್ಥ–** ಯಾ = ಯಾವ ಪ್ರಮಾತ್ಮಕ ಅನುಮಿತಿಯು, ಲಿಂಗಭ್ರಮಾಖ್ಯಾನುಮಾನ-ದೋಷೇ = ಹೇತುಭ್ರಮೆಯೆಂಬ ಅನುಮಾನದೋಷವು, ಸತ್ಯೇವ = ಇರುವಾಗಲೇ, ಅಭವತ್ = ಉಂಟಾಗಿದೆಯೋ, ಸಾ = ಅಂತಹ, ಇಯಂ ಯಾದೃಚ್ಛಿಕಪ್ರಮಾ = ಈ ಯಾದೃಚ್ಛಿಕವಹ್ನ್ಯನುಮಿತಿರೂಪದ ಪ್ರಮೆಯು, ದೋಷಾಭಾವಾನಪೇಕ್ಷಾ ಏವ = ದೋಷಾಭಾವದ ಅಪೇಕ್ಷೆಯಿಲ್ಲದಿರುವುದೇ ಆಗಿದೆ.

**ಅನುವಾದ–** ಈ ಯಾದೃಚ್ಛಿಕ ಪ್ರಮಾಸ್ಥಳದಲ್ಲಿ ಲಿಂಗಭ್ರಮವೆಂಬ ದೋಷವೇ ಇದೆ. ಆದರೂ ಅನುಮಿತಿಯು ಉತ್ಪತ್ತಿಯಾಗಿರುವುದರಿಂದ ದೋಷಾಭಾವವು ಪ್ರಮಾರೂಪದ ಅನುಮಿತಿಯನ್ನು ಕುರಿತು ಕಾರಣವಲ್ಲ.

**ಭಾವವಿಲಾಸಿನೀ–**ಯಾಽನುಮಿತಿರೂಪಾ ಪ್ರಮಾ ಸೇಯಮಿತಿ ಸಂಬಂಧಃ ॥ ೪೨೮ ॥

**ಪ್ರಮಯಾ ನಾನ್ವಯೋ ಯಸ್ಯ ವ್ಯತಿರೇಕೋಽಪಿ ಯಸ್ಯ ನ ।**
**ದೋಷಾಭಾವಃ ಸ ಕುತ್ರಾಪಿ ನ ಪ್ರಮಾಂ ಪ್ರತಿಕಾರಣಂ ॥ ೪೨೯ ॥**

**ಅರ್ಥ–** ಯಸ್ಯ = ಯಾವ ದೋಷಾಭಾವಕ್ಕೆ, ಪ್ರಮಯಾ = ಯಾದೃಚ್ಛಿಕಸ್ಥಳದ ಪ್ರಮೆಯೊಂದಿಗೆ, ಅನ್ವಯಃ = ಅನ್ವಯವು, ನ = ಇಲ್ಲವೋ, ಯಸ್ಯ = ಯಾವ ದೋಷಾಭಾವಕ್ಕೆ, ವ್ಯತಿರೇಕಃ ಅಪಿ = ಪ್ರಮೆಯೊಂದಿಗೆ ವ್ಯತಿರೇಕವಾಗಲೀ ಕೂಡ, ನ = ಇಲ್ಲವೋ, ಸಃ = ಉಭಯವಿಧವ್ಯಾಪ್ತಿಶೂನ್ಯವಾದ ಅಂತಹ, ದೋಷಾಭಾವಃ =

ದೋಷಾಭಾವವು, ಕುತ್ರಾಪಿ = ಎಲ್ಲಿಯೂ ಕೂಡ, ಪ್ರಮಾಂ ಪ್ರತಿ = ಪ್ರಮೆಯನ್ನು ಕುರಿತು, ನ ಕಾರಣಂ = ಕಾರಣವಲ್ಲ.

**ಅನುವಾದ–** ದೋಷಾಭಾವಕ್ಕೆ ಪ್ರಮೆಯ ಜೊತೆಯಲ್ಲಿ ಅನ್ವಯವೂ ಇಲ್ಲ. ವ್ಯತಿರೇಕವೂ ಇಲ್ಲ. ಅನ್ವಯವ್ಯತಿರೇಕಗಳಿಲ್ಲದಿರುವುದರಿಂದ ದೋಷಾಭಾವವು ಪ್ರಮೆಗೆ ಎಲ್ಲಿಯೂ ಕಾರಣವಲ್ಲ.

**ಭಾವವಿಲಾಸಿನೀ–**ಯಾದೃಚ್ಛಿಕಪ್ರಮಾಯಾಂ ದೋಷಾಭಾವಸ್ಯಾನ್ವಯತೋ ವ್ಯತಿರೇಕತಶ್ಚ ವ್ಯಭಿಚಾರೇಣ ಅನ್ಯತ್ರ ಘಟಪಟಾದಿಪ್ರಮಾಸು ವಿದ್ಯಮಾನೋಽಪಿ ದೋಷಾಭಾವೋ ನ ಕಾರಣಮಭೂದಿತ್ಯಾಹ – **ಪ್ರಮಯೇತಿ** ॥ ಯಸ್ಯ ದೋಷಾಭಾವಸ್ಯ ಪ್ರಮಯಾ ನಾನ್ವಯಃ ಸತ್ಯೇವ ತಸ್ಮಿನ್ ಪ್ರಮೇತ್ಯನ್ವಯೋ ನೇತ್ಯರ್ಥಃ। ಯಸ್ಯ ದೋಷಾಭಾವಸ್ಯ ಚ ವ್ಯತಿರೇಕೋಽಪಿ ದೋಷಾಭಾವಾಭಾವೇ ಪ್ರಮಾಯಾ ಅಭಾವ ಇತಿ ವ್ಯತಿರೇಕೋಽಪಿ ನೇತ್ಯರ್ಥಃ। ಉಭಯೋ-ರಪಿ ಯಾದೃಚ್ಛಿಕಪ್ರಮಾಯಾಂ ವ್ಯಭಿಚಾರಾತ್। ಸ ವ್ಯಭಿಚಾರೀ ದೋಷಾಭಾವಃ। ದೋಷಾ-ಭಾವ ಇತ್ಯುಪಲಕ್ಷಣಮ್। ಸಲ್ಲಿಂಗಪರಾಮರ್ಶರೂಪಗುಣಸ್ಯಾಪ್ಯತ್ರೈವಾನ್ವಯತೋ ವ್ಯತಿರೇಕತಶ್ಚ ವ್ಯಭಿಚಾರಾತ್ತದ್ವಾ ತಾದೃಗ್ ವಾ ಗುಣಾಂತರಮಪಿ ನ ಕುತ್ರಾಪಿ ಕಾರಣಮಿತಿ ಭಾವಃ ॥ ೪೨೯ ॥

**ವಿವರಣೆ–** ದೋಷಾಭಾವವಿದ್ದರೆ ಮಾತ್ರ ಪ್ರಮೆಯು ಉಂಟಾಗುತ್ತದೆ ಎಂಬುದು ಅನ್ವಯ. ದೋಷಾಭಾವವಿಲ್ಲದಿದ್ದರೆ ಪ್ರಮೆಯು ಉಂಟಾಗುವುದಿಲ್ಲ ಎಂಬುದು ವ್ಯತಿರೇಕ. ಈ ಯಾದೃಚ್ಛಿಕ ಪ್ರಮಾಸ್ಥಳದಲ್ಲಿ ಈ ಅನ್ವಯವ್ಯತಿರೇಕಗಳೆರಡೂ ಭಗ್ನವಾಗುತ್ತವೆ. ಆದ್ದರಿಂದ ದೋಷಾಭಾವವು ಕಾರಣವಲ್ಲ. ಹಾಗೆಯೇ ಸಲ್ಲಿಂಗಪರಾಮರ್ಶಕ್ಕೆ ಪ್ರಮಾತ್ಮಕ ಅನುಮಿತಿ ಕಾರಣತ್ವವನ್ನು ಹೇಳಿದರೂ ಧೂಮಭ್ರಮದಿಂದ ಯಾದೃಚ್ಛಿಕವಾಗಿ ಉಂಟಾದ ವಹ್ನ್ಯನುಮಿತಿರೂಪ ಪ್ರಮಾಸ್ಥಳದಲ್ಲಿ ಅನ್ವಯವ್ಯತಿರೇಕಗಳು ಭಗ್ನವಾಗುತ್ತವೆ. ಆದ್ದರಿಂದ ಸಲ್ಲಿಂಗಪರಮಾರ್ಶರೂಪವಾದ ಗುಣವೂ ಸಹ ಪ್ರಮಾತ್ಮಕ ಅನುಮಿತಿಯನ್ನು ಕುರಿತು ಕಾರಣವಲ್ಲ.

**ಏವಂ ಚ ಭಾವಾಭಾವಾಖ್ಯಗುಣಜಾ ನೈವ ಯಾ ಪ್ರಮಾ ।**
**ತತ್ಸ್ವತಸ್ತ್ವಂ ಮಹತ್ತತ್ತ್ವಮಿತ್ಯಾಹುಸ್ತತ್ತ್ವವಾದಿನಃ ॥ ೪೩೦ ॥**

**ಅರ್ಥ–** ಏವಂ ಚ = ಹಿಂದೆ ಸಮರ್ಥಿಸಿದಂತೆ, ಯಾ = ಯಾದೃಚ್ಛಿಕಸ್ಥಳದ, ಪ್ರಮಾ = ಪ್ರಮೆಯು, ಭಾವಾಭಾವಾಖ್ಯಗುಣಜಾ= ಗುಣ ಮತ್ತು ದೋಷಾಭಾವದಿಂದ ಹುಟ್ಟಿದ್ದು ನೈವ = ಅಲ್ಲವೋ, ತತ್ = ಆದ್ದರಿಂದ, ಸ್ವತಸ್ತ್ವಂ = ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿನ ಸ್ವತಸ್ತ್ವವು, ಮಹತ್ತತ್ತ್ವಂ = ಶ್ರೇಷ್ಠವಾದ ತತ್ತ್ವವು, ಇತಿ = ಎಂದು, ತತ್ತ್ವವಾದಿನಃ = ತತ್ತ್ವವಾದಿಗಳು, ಆಹುಃ = ಹೇಳುತ್ತಾರೆ.

**ಅನುವಾದ–** ಈ ರೀತಿಯಲ್ಲಿ ಪ್ರಮೆಯು ಭಾವರೂಪವಾದ ಗುಣದಿಂದಾಗಲೀ, ಅಭಾವರೂಪವಾದ ಗುಣದಿಂದಾಗಲೀ ಉತ್ಪನ್ನವಾಗುವುದಿಲ್ಲವಾದ ಕಾರಣ ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಸ್ವತಸ್ತ್ವವು ಶ್ರೇಷ್ಠವಾದ ತತ್ತ್ವವೆಂದು ತತ್ತ್ವವಾದಿಗಳು ಹೇಳುತ್ತಾರೆ.

**ಭಾವವಿಲಾಸಿನೀ–**ತಸ್ಮಾದುತ್ಪತ್ತಾವಪಿ ಸ್ವತಸ್ತ್ವಮೇವ ತತ್ತ್ವಮಿತ್ಯಾಹ – **ಏವಂಚೇತಿ ||** ಯಾ ಪ್ರಮಾ ತತ್ತ್ವತಸ್ತ್ವಮ್, ತಸ್ಯಾಃ ಪ್ರಮಾಯಾಃ ಜ್ಞಾನಸಾಮಾನ್ಯಸಾಮಗ್ರೀಮಾತ್ರಜನ್ಯತ್ವಂ ಸ್ವತಸ್ತ್ವಂ ಮಹದ್ಯುಕ್ತಿಯುಕ್ತತ್ವೇನ ಸರ್ವಜನೈರ್ಮಾನನೀಯಮಿತ್ಯರ್ಥಃ || ೪೩೦ ||

**ವಿವರಣೆ–** ಜ್ಞಾನಸಾಮಾನ್ಯಸಾಮಗ್ರಿಯಿಂದಲೇ ಪ್ರಮೆಯು ಉಂಟಾಗುತ್ತದೆ. ಪ್ರಮೆಯು ಉತ್ಪತ್ತಿಯಾಗಲು ಜ್ಞಾನಸಾಮಾನ್ಯಸಾಮಗ್ರಿಗೆ ವ್ಯತಿರಿಕ್ತವಾದ ಯಾವಕಾರಣದ ಅಪೇಕ್ಷೆಯೂ ಇಲ್ಲ. ಆದ್ದರಿಂದ ಜ್ಞಾನಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಸ್ವತಸ್ತ್ವವು ಸಿದ್ಧವಾಗುತ್ತದೆ. ಸ್ವತಸ್ತ್ವಸಿದ್ಧಾಂತಕ್ಕೆ ಬಾಧಕವೇ ಇಲ್ಲ ಎಂದು ಸಮರ್ಥಿಸುತ್ತಾರೆ.

**ಕಾರ್ಯಸ್ಯೈವಂ ವ್ಯವಸ್ಥಿತ್ಯಾ ಸರ್ವಮಾಸೀದನಾಕುಲಂ || ೪೩೧ ||**

**ಅರ್ಥ–** ಕಾರ್ಯಸ್ಯ = ಪ್ರಮಾರೂಪಕಾರ್ಯಕ್ಕೆ, ಏವಂ ವ್ಯವಸ್ಥಿತ್ಯಾ = ಈ ರೀತಿಯ ವ್ಯವಸ್ಥೆಯಿಂದ, ಸರ್ವಂ = ವೇದಪ್ರಾಮಾಣ್ಯ, ಅಪೌರುಷೇಯತ್ವ ಮೊದಲಾದುದು, ಅನಾಕುಲಂ ಆಸೀತ್ = ಸುಗಮವಾಗಿ ಸಾಧಿಸುವಂತಾಯಿತು.

**ಅನುವಾದ–** ಪ್ರಮಾರೂಪ ಕಾರ್ಯವನ್ನು ನಾವು ಹೀಗೆ ಸ್ಥಾಪನೆ ಮಾಡುವುದರಿಂದ ಎಲ್ಲವೂ ನಿರ್ದುಷ್ಟವಾಗಿದೆ.

**ಭಾವವಿಲಾಸಿನೀ–**ಕಾರ್ಯಸ್ಯ ಪ್ರಮಾರೂಪಕಾರ್ಯಸ್ಯ || ೪೩೧ ||

**ತಸ್ಯಾಪಿ ಚೋತ್ತರಂ ಬ್ರೂಮೋ ಯಸ್ತಥಾಪಿ ದುರಾಗ್ರಹೀ |**
**ಯದ್ಯರ್ಥಸತ್ತಾऽತ್ರ ಗುಣಸ್ತಥಾಪಿ ನ ಗುಣಾಜ್ಜನಿಃ || ೪೩೨ ||**

**ಅರ್ಥ–** ತಥಾಪಿ = ಗುಣವಿಲ್ಲದೇ ಪ್ರಮೆಹುಟ್ಟಿದರೂ, ದುರಾಗ್ರಹೀ = ತನ್ನ ಮತದಲ್ಲಿ ದುರಾಗ್ರಹವುಳ್ಳ, ಯಃ = ಗುಣವಿಶೇಷವನ್ನು ಕಾರಣವೆಂದು ನಿರೂಪಣೆ ಮಾಡುವ ಯಾವ ತಾರ್ಕಿಕನಿರುವನೋ, ತಸ್ಯ ಅಪಿ = ಅವನಿಗೂ ಕೂಡ, ವಯಂ= ನಾವು, ಉತ್ತರಂ = ಉತ್ತರವನ್ನು, ಬ್ರೂಮಃ = ಹೇಳುತ್ತೇವೆ. ಅತ್ರ = ಯಾದೃಚ್ಛಿಕಸ್ಥಳದಲ್ಲಿ, ಯದಿ = ಒಂದು ವೇಳೆ, ಅರ್ಥಸತ್ತಾ = ವಸ್ತುವಿನ ಇರುವಿಕೆಯು, ಗುಣಃ = ಗುಣವಾಗುವುದಾದರೆ, ತಥಾಪಿ = ಹಾಗೆ ಹೇಳಿದಾಗಲೂ, ಗುಣಾತ್ = ಅಂತಹ ಗುಣದಿಂದ, ಜನಿಃ = ಪ್ರಮೆಯ ಉತ್ಪತ್ತಿಯು, ನ = ಅಲ್ಲ.

**ಅನುವಾದ–** ಯಾವನು ದುರಾಗ್ರಹದಿಂದ ಯಾದೃಚ್ಛಿಕಪ್ರಮಾರೂಪವಾದ ಅನುಮಿತಿಸ್ಥಳದಲ್ಲಿಯೂ ಗುಣವನ್ನು ಕಲ್ಪನೆಮಾಡುತ್ತಾನೆಯೋ, ಅವನಿಗೆ ನಾವು ಉತ್ತರವನ್ನು ಹೇಳುತ್ತೇವೆ. ಆ ಸ್ಥಳದಲ್ಲಿ ಗುಣ ಯಾವುದು? ಅರ್ಥಸತ್ವಗುಣ ಎಂದುಹೇಳಿದರೂ ಆ ಅನುಮಿತಿಯು ಅರ್ಥಸತ್ವದ ಕಾರ್ಯವಲ್ಲ.

**ಭಾವವಿಲಾಸಿನೀ–**ತಥಾಪಿ ಉಕ್ತರೀತ್ಯಾ ಗುಣಂ ವಿನೈವ ಪ್ರಮಾಯಾಃ ಸಂಭವೇಽಪಿ ದುರಾಗ್ರಹೀ ಸ್ವಮತಪರಿರಕ್ಷಣಾಯಾನಾನುಭವಿಕಮಪಿ ಕಂಚಿದ್ಗುಣಂ ವಕ್ತ್ಯಾಗ್ರಹವಾನ್ ತಸ್ಯಾಪ್ಯುತ್ತರಂ ಬ್ರೂಮ ಇತಿ ಸಂಬಂಧಃ । ಕೋಽತ್ರ ಕಲ್ಪಿತೋ ಗುಣಃ? ಕಿಂಚ ತಸ್ಯೋತ್ತರಮ್? ಇತ್ಯತ ಆಹ – **ಯದ್ಯರ್ಥೇತಿ** ॥ ಅತ್ರ ಯಾದೃಚ್ಛಿಕಸಂವಾದಿಪ್ರಮಾಯಾಮ್ । ಅರ್ಥಸತ್ತಾ ವಹ್ನಿರೂಪಸ್ಯಾರ್ಥಸ್ಯ ವಿದ್ಯಮಾನತಾ । ಉತ್ತರಮಾಹ – **ತಥಾಪೀತಿ** ॥ ಗುಣಾದರ್ಥಸತ್ತಾಖ್ಯತ್ವದುಕ್ತಗುಣಾತ್ । ಜನಿಃ ಯಾದೃಚ್ಛಿಕಸಂವಾದಿವಹ್ನ್ಯನುಮಿತಿಜನ್ಮ ॥ ೪೩೨ ॥

**ವಿವರಣೆ–** ಮೇಲೆ ಹೇಳಿದಂತೆ ಗುಣವಿಲ್ಲದೆಯೇ ಪ್ರಮೋತ್ಪತ್ತಿಯಾಗಬಹುದಾದರೂ ದುರಾಗ್ರಹದಿಂದ ತನ್ನ ಮತವನ್ನು ರಕ್ಷಣೆ ಮಾಡಿಕೊಳ್ಳುವುದಕ್ಕೋಸ್ಕರ ಅನುಭವವಿರುದ್ಧವಾಗಿ ಯಾರು ಯಾದೃಚ್ಛಿಕ ಪ್ರಮಾರೂಪ ಅನುಮಿತಿಸ್ಥಳದಲ್ಲಿ ಗುಣವನ್ನು ಅಂಗೀಕಾರ ಮಾಡುತ್ತಾನೆಯೋ ಅವನಿಗೆ ನಾವು ಉತ್ತರವನ್ನು ಹೇಳುತ್ತೇವೆ. ಅಲ್ಲಿ ಗುಣವನ್ನು ಅಂಗೀಕಾರ ಮಾಡುವವನು ಅರ್ಥಸತ್ವವನ್ನೇ ಗುಣವೆಂದು ಅಂಗೀಕಾರ ಮಾಡಬೇಕು. ಆದರೆ ಅಲ್ಲಿ ಅರ್ಥಸತ್ವವನ್ನು ಒಪ್ಪಿದರೂ ಅದು ಪ್ರಮೆಯನ್ನು ಕುರಿತು ಕಾರಣವಾಗುವುದಿಲ್ಲ.

ಪರೋಕ್ಷಾನುಮಿತೇರ್ಜನ್ಮನ್ಯರ್ಥೋ ಯತ್ತೇ ನ ಕಾರಣಂ ।
ಅನ್ಯಥಾ ಭಾವ್ಯನುಮಿತೇರಸಂಭವಮನುಸ್ಮರ ॥ ೪೩೩ ॥

**ಅರ್ಥ–** ಯತ್ = ಏಕೆಂದರೆ, ತೇ = ನಿನಗೆ (ನಿನ್ನ ಮತದಲ್ಲಿ), ಪರೋಕ್ಷಾನುಮಿತೇಃ = ಪರೋಕ್ಷಜ್ಞಾನರೂಪವಾದ ಅನುಮಿತಿಯ, ಜನ್ಮನಿ = ಹುಟ್ಟುವಿಕೆಯಲ್ಲಿ, ಅರ್ಥಃ = ವಸ್ತುವು, ನ ಕಾರಣಂ = ಕಾರಣವಲ್ಲ, ಅನ್ಯಥಾ = ಕಾರಣವೆನ್ನುವುದಾದರೆ, ಭಾವ್ಯನುಮಿತೇಃ = ಭವಿಷ್ಯತ್‌ಕಾಲದ ವಸ್ತುವಿನ ಅನುಮಿತಿಯ, ಅಸಂಭವಂ = ಅನುತ್ಪತ್ತಿಯನ್ನು, ಅನುಸ್ಮರ = ನೆನಪಿಸಿಕೋ.

**ಅನುವಾದ–** ನಿನ್ನ ಮತರೀತ್ಯಾ ಅರ್ಥವು ಹಾಗೂ ಅರ್ಥಸತ್ವವು ಪ್ರತ್ಯಕ್ಷವನ್ನು ಮಾತ್ರ ಕುರಿತು ಕಾರಣ. ಇಲ್ಲಿ ಉಂಟಾಗಿರುವುದು ಅನುಮಿತಿ. ಆದ್ದರಿಂದ ಅನುಮಿತಿಗೆ ಅರ್ಥಸತ್ತ್ವವು ಕಾರಣವಾಗಲು ಸಾಧ್ಯವಿಲ್ಲ. ಅನುಮಿತಿಯಲ್ಲಿಯೂ ಅರ್ಥಸತ್ವವು ಕಾರಣ ಎಂದು ಹೇಳಿದರೆ ಭವಿಷ್ಯತ್ಕಾಲದ ವೃಷ್ಟ್ಯಾದಿಗಳನ್ನು ಈಗ ಅನುಮಾನದಿಂದ ತಿಳಿಯಲು ಸಾಧ್ಯವಿಲ್ಲವೆಂಬುದನ್ನು ಗಮನಿಸು.

**ಭಾವವಿಲಾಸಿನೀ**–ಕುತೋ ನ ಜನಿರಿತ್ಯತ ಆಹ – **ಪರೋಕ್ಷೇತಿ** ॥ ಪರೋಕ್ಷಾ ಚ ಸಾಽನುಮಿತಿಶ್ಚೇತಿ ವಿಗ್ರಹಃ । ತೇ ಮತೇ । ಅರ್ಥಃ ವಿಷಯಃ । ಯದ್ಯಸ್ಮಾನ್ನ ಕಾರಣಮ್, ತಸ್ಮಾನ್ನ ಗುಣಾಜ್ಜನಿರಿತಿ ಪೂರ್ವೇಣಾನ್ವಯಃ । ಪರೋಕ್ಷಜ್ಞಾನಂ ಪ್ರತ್ಯರ್ಥಸ್ಯಾಜನಕತ್ವಾಂಗೀಕಾರಾತ್ । ಅರ್ಥಸ್ಯಾ-ಜನಕತ್ವೇ ಚ ತತ್ಸತ್ತಾಯಾಸ್ತುತರಾಮಜನಕತ್ವಮಿತಿ ಭಾವಃ । ತದನಂಗೀಕಾರೇ ಬಾಧಕಮಾಹ – **ಅನ್ಯಥೇತಿ** ॥ ಭಾವ್ಯನುಮಿತೇಃ ಭವಿಷ್ಯದ್ವೃಷ್ಟ್ಯಾದಿವಿಷಯಕಾನುಮಿತೇಃ । ವ್ಯಾಪಕವತಿ ವ್ಯಾಪ್ಯಜ್ಞಾನಮನುಮಿತೌ ಗುಣಃ, ಸ ಚ ಯಾದೃಚ್ಛಿಕಾನುಮಿತಾವಪ್ಯಸ್ತೀತಿ ಕಶ್ಚಿತ್ । ತದಪ್ಯನೇನೈವ ನಿರಸ್ತಮ್ । ಸಾಧ್ಯವತ್ತಾಽಪರಪರ್ಯಾಯಸ್ಯ ವ್ಯಾಪಕವತ್ತ್ವಸ್ಯ ಪರೋಕ್ಷವಿಷಯತಯಾ ಜನಕತ್ವಾಯೋಗೇನ ತಜ್ಜ್ಞಾನಸ್ಯ ಚಾತ್ಮಾಶ್ರಯತಯಾ ಜನಕತ್ವಾಯೋಗೇನ ವ್ಯಾಪ್ಯಜ್ಞಾನಮಾತ್ರಸ್ಯ ಚ ಭ್ರಮಸಾಧಾರಣ್ಯೇನ ಜನಕಗುಣಾಸಿದ್ಧೇಃ ॥ ೪೩೩ ॥

**ವಿವರಣೆ**– ಏಕೆ ಕಾರಣವಲ್ಲ ಎಂಬುದನ್ನು ಈ ಶ್ಲೋಕದಿಂದ ಮೂಲಕಾರರು ತಿಳಿಸುತ್ತಾರೆ. ಅವರ ಮತದಲ್ಲಿ ಅರ್ಥವು ಪ್ರತ್ಯಕ್ಷಕ್ಕೆ ಮಾತ್ರ ಕಾರಣ. ಅನುಮಿತಿಗೆ ಅರ್ಥವು ಕಾರಣವಲ್ಲ. ಆದ್ದರಿಂದ ಅರ್ಥಸತ್ತ್ವವೂ ಕಾರಣವಲ್ಲ. ಆದ್ದರಿಂದ ಪ್ರಮಾರೂಪವಾದ ಯಾದೃಚ್ಛಿಕ ಅನುಮಿತಿಯು ಅರ್ಥಸತ್ವರೂಪವಾದ ಗುಣದಿಂದವುಂಟಾಗಿದೆ ಎಂದು ಹೇಳಲು ಬರುವುದಿಲ್ಲ. ಅನುಮಿತಿಯಲ್ಲಿಯೂ ಅರ್ಥಸತ್ತ್ವವು ಕಾರಣವೆಂದು ಅಂಗೀಕಾರ ಮಾಡಿದರೆ ಈ ಮುಂದಿನ ದೋಷವು ಬರುತ್ತದೆ. ನಾವು ಮೋಡಗಳನ್ನು ನೋಡಿ ಭವಿಷ್ಯತ್ಕಾಲದಲ್ಲಿ ಮಳೆಯು ಉಂಟಾಗುವುದೆಂದು ಅನುಮಾನ ನಾವು ಮಾಡುತ್ತೇವೆ. ಇಂತಹ ಅನುಮಾನಕ್ಕೆ ಅರ್ಥ ಎಂದರೆ ಭವಿಷ್ಯತ್ಕಾಲದ ಮಳೆ. ಅನುಮಿತಿಗೆ ಅದು ಕಾರಣವಾಗಬೇಕಾದರೆ ಅನುಮಿತಿಗಿಂತ ಮುಂಚೆ ಅದು ಇರಬೇಕು. ಅನುಮಿತಿಗಿಂತ ಮುಂಚಿನ ಈ ಕಾಲದಲ್ಲಿ ಭವಿಷ್ಯತ್ಕಾಲದ ಮಳೆಯು ಇಲ್ಲದಿರುವುದರಿಂದ ಅಲ್ಲಿ ಅರ್ಥಸತ್ವವೇ ಇಲ್ಲ. ಆದ್ದರಿಂದ ಭವಿಷ್ಯತ್ಕಾಲದ ಮಳೆಯನ್ನು ಅನುಮಾನದಿಂದ ತಿಳಿಯಲು ಸಾಧ್ಯವಿಲ್ಲ ಎಂಬ ಪ್ರಸಂಗವು ಬರುತ್ತದೆ. ಹೀಗೆ ಹೇಳಿರುವುದರಿಂದಲೇ ಜ್ಞಾಪಕವುಳ್ಳದ್ದರಲ್ಲಿ ವ್ಯಾಪ್ಯದ ಜ್ಞಾನವು ಗುಣವಾಗಿ ಅನುಮಿತಿಗೆ ಕಾರಣ ಎಂಬ ಯಾದೃಚ್ಛಿಕಸ್ಥಳದ ಕೆಲವರ ನಿರ್ವಾಹವೂ ನಿರಸ್ತವಾಗುತ್ತದೆ. ಏಕೆಂದರೆ ವ್ಯಾಪಕದಲ್ಲಿ ವ್ಯಾಪ್ಯವತ್ತ್ವವು ಗುಣವೋ, ಅಥವಾ ವ್ಯಾಪಕದಲ್ಲಿ ವ್ಯಾಪ್ಯವತ್ತಾಜ್ಞಾನವು ಗುಣವೋ ಎಂದು ನಮ್ಮ ಪ್ರಶ್ನೆ. ವ್ಯಾಪಕದಲ್ಲಿ ವ್ಯಾಪ್ಯವತ್ತ್ವವು ಗುಣವೆಂದು ಹೇಳಿದರೆ ಭವಿಷತ್ಕಾಲದ ವೃಷ್ಟಿಯು ವ್ಯಾಪಕವಾದ ಈ ದೇಶದಲ್ಲಿ ಇಲ್ಲದಿರುವುದರಿಂದ ಆ ವೃಷ್ಟಿಯನ್ನು ಅನುಮಾನ ಮಾಡಿ ತಿಳಿಯಲು ಸಾಧ್ಯವಿಲ್ಲ ಎಂಬ ಪ್ರಸಂಗವನ್ನು ಮೊದಲೇ ಹೇಳಿದ್ದೇವೆ. ವ್ಯಾಪಕದಲ್ಲಿ ವ್ಯಾಪ್ಯವತ್ತ್ವಜ್ಞಾನವು ಗುಣ ಎಂದರೆ ಆ ಜ್ಞಾನವನ್ನೇ ಅನುಮಿತಿಯೆಂದು ಕರೆಯುವುದು. ಪ್ರಮಾರೂಪವಾದ ಅನುಮಿತಿಗೆ ಕಾರಣವಾದ ಈ ಗುಣವು ಪ್ರಮಾಕ್ಕಿಂತ ಮುಂಚೆ ಇರಬೇಕಷ್ಟೇ. ಹಾಗ

ಇದೆಯೆಂದು ಒಪ್ಪಿದರೆ ಅನುಮಿತಿಗಿಂತ ಮುಂಚೆಯೇ ಅನುಮಿತಿಯಿದೆಯೆಂದು ಒಪ್ಪಿದಂತಾಗಿ ಆತ್ಮಾಶ್ರಯದೋಷವು ಬರುವುದರಿಂದ ಈ ಪಕ್ಷವೂ ಸರಿಯಲ್ಲ.

**ನಾಪ್ಯೈಶ್ವರಾರ್ಥಧೀರತ್ರ ಗುಣೋ ಭವಿತುಮರ್ಹತಿ ।**
**ಯದ್ಧೀತ್ವೇನಾಖಿಲೇ ಕಾರ್ಯೇ ಸಾ ಹೇತುರ್ನ ಗುಣತ್ವತಃ ॥ ೪೩೪ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಅಖಿಲೇ = ಎಲ್ಲ ಕಾರ್ಯೇ = ಕಾರ್ಯಗಳಲ್ಲಿ, ಐಶ್ವರಾರ್ಥಧೀಃ =ಈಶ್ವರನಲ್ಲಿರುವ ವಸ್ತುವಿಷಯಕ ಜ್ಞಾನವು, ಧೀತ್ವೇನ = ಈಶ್ವರಜ್ಞಾನತ್ವರೂಪದಿಂದ, ಹೇತುಃ = ಕಾರಣವಾಗಿದೆಯೋ, ತತ್=ಆದ್ದರಿಂದ, ಸಾ = ಆ ಈಶ್ವರಪ್ರಮೆಯು, ಗುಣತ್ವತಃ = ಗುಣತ್ವರೂಪದಿಂದ, ಅತ್ರ = ಈ ಯಾದೃಚ್ಛಿಕಸ್ಥಳದಲ್ಲಿ ಗುಣಃ ಭವಿತುಂ = ಗುಣವಾಗಲು, ನ ಅರ್ಹತಿ = ಯೋಗ್ಯವಾಗುವುದಿಲ್ಲ.

**ಅನುವಾದ–** ಈ ಸ್ಥಳದಲ್ಲಿ ಈಶ್ವರಜ್ಞಾನವು ಗುಣತ್ವೇನ ಪ್ರಮಾವನ್ನು ಕುರಿತು ಕಾರಣವಾಗುತ್ತದೆಂಬುದು ಸರಿಯಲ್ಲ. ಏಕೆಂದರೆ ಈಶ್ವರಜ್ಞಾನವು ಎಲ್ಲಾ ಕಾರ್ಯಗಳಲ್ಲಿಯೂ ಜ್ಞಾನತ್ವರೂಪದಿಂದಲೇ ಕಾರಣವಾಗುತ್ತದೆಯೇ ಹೊರತು, ಗುಣತ್ವೇನ ಕಾರಣವಾಗುವುದಿಲ್ಲ.

**ಭಾವವಿಲಾಸಿನೀ–**ಪಕ್ಷಧರ್ಮತಾಮಾಶಂಕ್ಯ ದೂಷಯತಿ – **ನಾಪೀತಿ** ॥ ಈಶ್ವರಸಂಬಂಧಿನ್ಯರ್ಥಧೀಃ ಈಶ್ವರಪ್ರಮೇತ್ಯರ್ಥಃ । ಅತ್ರ ಯಾದೃಚ್ಛಿಕಸಂವಾದ್ಯನುಮಿತಿಪ್ರಮಾಯಾಮ್ । ಯದ್ಯಸ್ಮಾದ್ಧೀತ್ವೇನ ಈಶ್ವರಜ್ಞಾನತ್ವೇನ ಸಾ ಈಶ್ವರಧೀಃ, ತಸ್ಮಾದೀಶ್ವರಪ್ರಮಾಯಾ ಗುಣತ್ವೇನ ಹೇತುತ್ವಕಲ್ಪನಮನುಚಿತಮಿತಿ ಭಾವಃ । ಕಿಂಚಾರ್ಥಸತ್ತಾ ಗುಣ ಇತಿ ವದತಾ ಪ್ರಮಾಯಾಂ ಸ್ವಸ್ವವಿಷಯಸತ್ತಾ ಗುಣ ಇತ್ಯುಕ್ತಂ ಸ್ಯಾತ್। ತತ್ರಚ ಯಸ್ಯ ಕಸ್ಯಚಿದ್ವಿಷಯಸ್ಯ ಸತ್ತಾಯಾಂ ಸರ್ವಾಂಶೇನಾಪಿ ಪ್ರಮೇತ್ಯುಚ್ಯತೇ ವಾ ಉತ ಯಾವದ್ವಿಷಯಿಣೀ ಪ್ರಮಾ ತಾವತಸ್ಸರ್ವಸ್ಯಾಪಿ ಸತ್ತಾ ಗುಣ ಇತ್ಯುಚ್ಯತೇ ವಾ। ನಾದ್ಯಃ । ಇದಮಂಶಸತ್ತಯಾ ರಜತಾಂಶೇಽಪಿ ಪ್ರಮಾಪ್ರಸಂಗಾತ್ । ನ ದ್ವಿತೀಯಃ। ರಜತಂ ಜಾನಾಮೀತಿ ಭ್ರಮಾನುವ್ಯವಸಾಯೇ ನೇದಂ ರಜತಮಿತಿ ಬಾಧಪ್ರತ್ಯಯೇ ಚ ಪ್ರಮಯೋಲ್ಲಿಖ್ಯಮಾನತಯಾ ವಿಷಯಸ್ಯ ರಜತಸ್ಯ ಸತ್ತಾಭಾವೇನ ವ್ಯಭಿಚಾರಾದ್ ಯತ್ರ ಯತ್ರಾರ್ಥಸತ್ತಾ, ತತ್ರೈವ ಪ್ರಮೇತಿ ವ್ಯಾಪ್ತೇರೇಕಾಂಶೇನ ಭಂಗೇಽಪಿ ಗುಣಕಾರಣತಾವಾದಸ್ಯ ಭಂಗೇನ ತತ್ರೈವ ಸ್ವತಸ್ತ್ವಾಪರಿಹಾರಾತ್ । ಅಗತ್ಯಾತ್ರೈಕಾಂಶಸತ್ತಯೈವ ಸರ್ವಾಂಶೇಽಪಿ ಪ್ರಮೋದಯಾಂಗೀಕಾರೇ ತದಂಶೇನ ವ್ಯಭಿಚಾರಾಪರಿಹಾರಾತ್ । ಭ್ರಮೇಽಪ್ಯಗತ್ಯೇದಮಂಶಸತ್ತಯೈವ ರಜತಾಂಶೇಽಪಿ ಪ್ರಮೋದಯಪ್ರಸಂಗಾತ್ । ಸರ್ವಾಸಾಮಪಿ ಪ್ರಮಾಣಾಂ ಸರ್ವಾಂಶೇನಾಪಿ ಗುಣಂ ವಿನೈವೋದಯಸ್ಯ ನ್ಯಾಯಪ್ರಾಪ್ತತ್ವಾಚ್ಚ । ತಥಾಚೇಯಮುಭಯತಃ ಪಾಶಾರಜ್ಜುಃ । ಅಸ್ಮಾಕಂ ತು ಪ್ರಮಾಯಾ ಗುಣಜನ್ಯತ್ವನಿಯಮಾಭಾವೇನ ನ ಸರ್ವತ್ರ ಪ್ರಮಾಯಾ ಅರ್ಥಸತ್ತಾನಿಯಮಾಪೇಕ್ಷಾ । ಅತ ಏವ ಜಗತ್ಸತ್ಯತ್ವಂ ಪ್ರಮಾವಿಶೇಷೇಣೈವ ಸಾಧಯಂತಿ । ಅನಯೈವ ದಿಶಾ ವಿಶೇಷ್ಯನಿಷ್ಠ-

ವಿಶೇಷಣೇಂದ್ರಿಯಸನ್ನಿಕರ್ಷಾದೇಃ (ಸನ್ನಿಕರ್ಷಸ್ಯ ನಿಷೇಧಾಪ್ರಕಾರಕ ಸಾಕ್ಷಾತ್ ವಿಷಯವಿಷಯಕಪ್ರಮಾಯಾಂ) ಪ್ರತ್ಯಕ್ಷಪ್ರಮಾಯಾಂ ಗುಣತಾಪಿ ನಿರಸನೀಯಾ ॥ ೪೩೪ ॥

**ವಿವರಣೆ–** ಈ ಶ್ಲೋಕದಲ್ಲಿ ಪಕ್ಷಧರಮಿಶ್ರನ ಮತವನ್ನು ಆಶಂಕಿಸಿ ದೂಷಿಸುತ್ತಾರೆ. ಯಾದೃಚ್ಛಿಕಸಂವಾದಿಸ್ಥಳದಲ್ಲಿ ಈಶ್ವರಜ್ಞಾನವು ಕಾರಣ ಎಂದು ಪಕ್ಷಧರಮಿಶ್ರನ ಮತ. ಆದರೆ ಈಶ್ವರಜ್ಞಾನಕ್ಕೆ ಈಶ್ವರಜ್ಞಾನತ್ವೇನ ಕಾರಣತ್ವವಿದೆ ಹೊರತಾಗಿ, ಈಶ್ವರಪ್ರಮಾತ್ವೇನ ಕಾರಣತ್ವವು ಇಲ್ಲ. (ಈಶ್ವರಜ್ಞಾನವನ್ನು ಪ್ರಮಾ ಮತ್ತು ಅಪ್ರಮಾಗಳಿಂದ ಬಹಿರ್ಭೂತ ಎಂದು ಅವರು ಅಂಗೀಕರಿಸುವುದರಿಂದ ಈಶ್ವರಪ್ರಮಾತ್ವೇನ ಕಾರಣತ್ವವನ್ನು ಹೇಳಲು ಬರುವುದಿಲ್ಲ.) ಅಲ್ಲದೇ ಪ್ರಮೆಯಲ್ಲಿ ಅರ್ಥಸತ್ವವು ಗುಣ ಎಂದು ಹೇಳಿದರೆ ಆಯಾ ಪ್ರಮೆಗಳಲ್ಲಿ ಆಯಾಪ್ರಮೆಗಳ ವಿಷಯಸತ್ತ್ವವು ಗುಣ ಎಂದು ಹೇಳಿದಂತಾಯಿತು. ಒಂದು ಪ್ರಮೆಯಲ್ಲಿ ಅನೇಕ ವಿಷಯಗಳು ತೋರಿದರೆ ಯಾವುದಾದರೊಂದು ವಿಷಯದ ಸತ್ತ್ವವು ಗುಣವೋ, ಅಥವಾ ಎಲ್ಲಾ ವಿಷಯಗಳ ಸತ್ತ್ವಗಳು ಗುಣವೋ ಎಂದು ನಮ್ಮ ಪ್ರಶ್ನೆ. ಯಾವುದಾದರೊಂದು ವಿಷಯದ ಸತ್ತ್ವವು ಗುಣ ಎಂದು ಹೇಳಿದರೆ 'ಇದಂ ರಜತಂ' ಎಂಬ ಭ್ರಮಸ್ಥಳದಲ್ಲಿ 'ಇದಂ' ಅಂಶಕ್ಕೆ ಸತ್ತ್ವವಿರುವುದರಿಂದ ಅದನ್ನು ಪ್ರಮೆಯೆಂದು ಅಂಗೀಕರಿಸಬೇಕಾದೀತು. ಎಲ್ಲಾ ವಿಷಯಗಳ ಸತ್ತ್ವಗಳೂ ಗುಣ ಎಂದು ಹೇಳುವುದಾದರೆ ಇದಂ ರಜತಂ ಇತಿ ಜ್ಞಾನವಾನಹಮ್' ಎಂಬ ಪ್ರಮಾರೂಪವಾದ ಅನುವ್ಯವಸಾಯದಲ್ಲಿ ಕೂಡ ಅನೇಕ ವಿಷಯಗಳಲ್ಲಿ ಒಂದಾದ ರಜತಕ್ಕೆ ಸತ್ವವಿಲ್ಲದ ಕಾರಣ ಈ ಅನುವ್ಯವಸಾಯವು ಪ್ರಮೆಯಾಗಲಾರದು. ಹಾಗೆಯೇ 'ನೇದಂ ರಜತಂ' ಎಂಬ ಬಾಧಕ ಜ್ಞಾನವಿದೆ. ಇದೂ ಸಹ ಪ್ರಮಾರೂಪವಾದುದು. ಇದರಲ್ಲಿ ತೋರುವ ಅನೇಕ ಅರ್ಥಗಳಲ್ಲಿ ಒಂದಾದ ರಜತದಲ್ಲಿ ಸತ್ತ್ವವಿಲ್ಲದಿರುವುದರಿಂದ ಇದೂ ಸಹ ಪ್ರಮೆಯಾಗಲಾರದು ಎಂಬ ಆಪತ್ತಿಯು ಬರುತ್ತದೆ. ಯಾವ ಯಾವ ಅರ್ಥದಲ್ಲಿ ಸತ್ತ್ವವಿದೆಯೋ, ಆ ಅಂಶದಲ್ಲಿ ಪ್ರಮಾ ಎಂದು ಹೇಳಿದರೆ ಒಟ್ಟಿನಲ್ಲಿ ಈ ಬಾಧಕಾದಿ ಜ್ಞಾನವು ಪ್ರಮಾವಾಗಿರುವುದರಿಂದ ಯಾವ ಅರ್ಥಸತ್ವವಿಲ್ಲವೋ ಆ ವಿಷಯದಲ್ಲಿ ವ್ಯಭಿಚಾರವು ಬಂದೇ ಬರುತ್ತದೆ. ಆದ್ದರಿಂದ ಏಕಾಂಶಸತ್ವದಿಂದ ಪ್ರಮೆಯನ್ನು ಒಪ್ಪಿದರೂ, ಅಥವಾ ಸಮಸ್ತಾಂಶಸತ್ವದಿಂದ ಪ್ರಮೆಯನ್ನು ಒಪ್ಪಿದರೂ ದೋಷವು ಬಂದೇ ಬರುತ್ತದೆ. ನಮ್ಮ ಮತದಲ್ಲಾದರೆ ಪ್ರಮೆಗೆ ಗುಣಜನ್ಯತ್ವನಿಯಮವು ಇಲ್ಲದಿರುವುದರಿಂದ ಸಾರ್ವತ್ರಿಕವಾಗಿ ಅರ್ಥಸತ್ತಾನಿಯಮದ ಅಪೇಕ್ಷೆಯಿಲ್ಲ. ಆದ್ದರಿಂದಲೇ ಪ್ರಮಾವಿಶೇಷದಿಂದ ಜಗತ್‌ಸತ್ಯತ್ತ್ವವನ್ನು ಸಮರ್ಥನೆ ಮಾಡುತ್ತೇವೆ. ಜಗತ್‌ಸತ್ಯತ್ತ್ವರೂಪವಾದ ಅರ್ಥಸತ್ವವೇ ಪ್ರಮೆಯನ್ನು ಕುರಿತು ಕಾರಣವಾಗಿದ್ದರೆ ಹಾಗೇ ಮಾಡಲು ಬರುತ್ತಿರಲಿಲ್ಲ.

**ಗುಣತ್ವೇನಾಪಿ ಹೇತುತ್ವೇ ಕಲ್ಪನಾಗೌರವಂ ಭವೇತ್ ।**
**ಸ್ವತಸ್ತ್ವೇನಾನ್ಯಥಾಸಿದ್ಧೇಃ ಕಲ್ಪಕಂ ಚ ನ ಕಿಂಚನ ॥ ೪೩೫ ॥**

**ಅರ್ಥ–** ಗುಣತ್ವೇನ ಅಪಿ = ಗುಣತ್ವರೂಪದಿಂದಲೂ, ಹೇತುತ್ವೇ = ಪ್ರಮಾಕಾರಣತ್ವವನ್ನು ಹೇಳುವುದಾದರೆ, ಕಲ್ಪನಾಗೌರವಂ = ಕಲ್ಪನಾಗೌರವವೆನ್ನುವ ದೋಷವು, ಭವೇತ್ = ಉಂಟಾದೀತು. ಸ್ವತಸ್ತ್ವೇನ = ಸ್ವತಸ್ತ್ವದಿಂದ, ಅನ್ಯಥಾಸಿದ್ಧೇಃ = ಅನ್ಯಥಾಸಿದ್ಧಿಯಿರುವುದರಿಂದ, ಕಲ್ಪಕಂ = ಗುಣತ್ವೇನ ಕಾರಣತ್ವವನ್ನು ಕಲ್ಪಿಸಲು ಬೇಕಾದ ಅಂಶವು, ಕಿಂಚನ = ಯಾವುದೂ, ನ = ಇಲ್ಲ.

**ಅನುವಾದ– ಪ್ರಮೆಯನ್ನು ಕುರಿತು ಈಶ್ವರಜ್ಞಾನವು ಈಶ್ವರಜ್ಞಾನತ್ತ್ವೇನ ಮತ್ತು ಗುಣತ್ತ್ವೇನ ಹೇತು ಎಂದು ಕಲ್ಪನೆ ಮಾಡಿದರೆ ಒಂದೇ ಕಾರಣಕ್ಕೆ ಎರಡು ಕಾರ್ಯಕಾರಣ ಭಾವಗಳನ್ನು ಕಲ್ಪನೆಮಾಡುವುದರಿಂದ ಕಲ್ಪನಾಗೌರವವು ಬರುತ್ತದೆ. ಮತ್ತು ಜ್ಞಾನಸಾಮಾನ್ಯ ಸಾಮಗ್ರಿಯಿಂದಲೇ ಪ್ರಮೆಯು ಸಿದ್ಧವಾಗುವುದರಿಂದ ಈಶ್ವರಜ್ಞಾನಕ್ಕೆ ಗುಣತ್ತ್ವೇನ ಕಾರಣತ್ವವನ್ನು ಕಲ್ಪನೆ ಮಾಡಲು ಯಾವ ಸಮರ್ಥನೆಯೂ ಇಲ್ಲ.**

**ಭಾವವಿಲಾಸಿನೀ–**ನನು ಪ್ರಮಾಯಾ ಗುಣಜನ್ಯತ್ವಾನ್ಯಥಾನುಪಪತ್ತ್ಯೇಶ್ವರಬುದ್ಧೇರೀಶ್ವರ-ಜ್ಞಾನತ್ವೇನ ಗುಣತ್ವೇನ ಚ ಕಾರಣತ್ವಂ (ನ) ಕಲ್ಪ್ಯತ ಇತ್ಯತ ಆಹ – **ಸ್ವತಸ್ತ್ವೇನೇತಿ** ॥ ಸ್ವತಸ್ತ್ವೇನ ಪ್ರಮಾಯಾ ಜ್ಞಾನಸಾಮಾನ್ಯಸಾಮಗ್ರೀಮಾತ್ರಜನ್ಯತ್ವರೂಪಸ್ವತಸ್ತ್ವೇನ । ಕಲ್ಪಕಮೀಶ್ವರಜ್ಞಾನಸ್ಯ ಗುಣತ್ವಕಲ್ಪಕಮ್ ॥ ೪೩೫ ॥

**ಲಿಂಗಭ್ರಮಾದೇವ ಸಾ ಭೂದನುಮಾ ಲೈಂಗಿಕೀ ಯತಃ ।**
**ಅರ್ಥಸತ್ತಾದಯಸ್ತದ್ಧೀಮಾನತ್ವಸ್ಯಾನುಮಾಪಕಾಃ ॥ ೪೩೬ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಅನುಮಾ = ಅನುಮಿತಿಯು, ಲೈಂಗಿಕೀ = ಲಿಂಗಜನ್ಯವಾಗಿರುತ್ತದೆಯೋ, ಯತಃ = ಯಾವ ಕಾರಣದಿಂದ, ಲಿಂಗಭ್ರಮಾತ್ = ಹೇತುಭ್ರಮೆಯಿಂದ, ಸಾ = ಆ ಯಾದೃಚ್ಛಿಕಪ್ರಮಾತ್ಮಕ ಅನುಮಿತಿಯು, ಅಭೂತ್ = ಉಂಟಾಗಿದೆಯೋ, ತತಃ = ಆ ಕಾರಣದಿಂದ, ಅರ್ಥಸತ್ತಾದಯಃ = ಇಲ್ಲಿರುವ ಅರ್ಥಸತ್ತೆ ಮೊದಲಾದವುಗಳು, ತದ್ಧೀಮಾನತ್ವಸ್ಯ = ಆ ಅನುಮಿತಿಯ ಪ್ರಾಮಾಣ್ಯಕ್ಕೆ, ಅನುಮಾಪಕಾಃ = ಜ್ಞಾಪಕಗಳಾಗಿವೆ.

**ಅನುವಾದ– ಅನುಮಿತಿಯನ್ನು ಲೈಂಗಿಕವಾದುದು ಎಂದು ಹೇಳುತ್ತಾರೆ ಎಂದರೆ ಲಿಂಗಜ್ಞಾನಜನ್ಯವಾದುದು ಎಂದರ್ಥ. ಆದ್ದರಿಂದ ಈ ಸ್ಥಳದಲ್ಲಿ ಲಿಂಗಭ್ರಮದಿಂದಲೇ ಅನುಮಿತಿ ಉಂಟಾಗಿದೆ. ಅರ್ಥಸತ್ತ್ವವು ಅಪ್ರಯೋಜಕ, ಹಾಗಾದರೆ ಅರ್ಥಸತ್ತ್ವಕ್ಕೆ ಏನು ಉಪಯೋಗ ಎಂದು ಕೇಳಿದರೆ ಅದು ಅನುಮಿತಿಯ ಪ್ರಾಮಾಣ್ಯವನ್ನು ಅನುಮಾನದಿಂದ ತಿಳಿಯಲು ಮಾತ್ರ ಸಹಕಾರಿಯಾಗುತ್ತದೆ.**

**ಭಾವವಿಲಾಸಿನೀ–**ಯತೋಽನುಮಾ ಲೈಂಗಿಕೀ ಲಿಂಗಜನ್ಯತ್ವಾಲ್ಲೈಂಗಿಕೀತ್ಯುಚ್ಯತೇ । ಯತಸ್ಸಾ ಯಾದೃಚ್ಛಿಕಪ್ರಮಾರೂಪಾಽನುಮಾ । ಲಿಂಗಭ್ರಮಾಲ್ಲಿಂಗಜ್ಞಾನಾತ್ ಪ್ರಕೃತಾಪೇಕ್ಷಯಾ ಭ್ರಮಾದಿತ್ಯುಕ್ತಮ್ । ಲಿಂಗಜ್ಞಾನಾದಿತ್ಯುಪಲಕ್ಷಣಮ್ । ವ್ಯಾಪ್ತಿಜ್ಞಾನಧರ್ಮಿಜ್ಞಾನ (ಸಾಮಾನ್ಯ) ರೂಪಸಾಮಗ್ರ್ಯಾ ಶ್ಚೇತ್ಯಪಿ ದ್ರಷ್ಟವ್ಯಮ್ । ಏವೇತ್ಯನೇನಾರ್ಥಸತ್ತಾದಿಕಂ ವ್ಯಾವರ್ತಯತಿ । ತರ್ಹ್ಯರ್ಥಸತ್ತಾಯಾಃ (ದೇಃ) ಕುತ್ರೋಪಯೋಗ ಇತ್ಯತ ಆಹ – **ಅರ್ಥಸತ್ತಾದಯ ಇತಿ॥** ಆದಿಪದೇನ ಸಂವಾದಾದೇರ್ಗ್ರಹಣಮ್ । ತದ್ಧೀಮಾನತ್ವಸ್ಯ ತಾದೃಶಾನುಮಿತಿಮಾನತ್ವಸ್ಯ । ದೂರತ್ವಾದಿದೋಷಗ್ರಸ್ತತಯಾ ಪ್ರಾಕ್ ಸಾಕ್ಷಿಣೋಪೇಕ್ಷಿತಸ್ಯೇತಿ ಭಾವಃ ॥ ೪೩೬ ॥

**ವಿವರಣೆ–** ಲೈಂಗಿಕೀ ಎಂದರೆ ಲಿಂಗಜನ್ಯವಾದುದು ಎಂದರ್ಥ. ಲಿಂಗಜ್ಞಾನ-ಜನ್ಯವಾದುದು ಎಂದು ತಾತ್ಪರ್ಯ. ಈ ಯಾದೃಚ್ಛಿಕ ಸ್ಥಳದಲ್ಲಿಯೂ ಸಹ ಲಿಂಗಜ್ಞಾನದಿಂದಲೇ ಜನ್ಯವಾಗಿದೆ. ಲಿಂಗಜ್ಞಾನವು ಇಲ್ಲಿ ಭ್ರಮರೂಪವಾಗಿದೆಯೆಂಬುದು ಬೇರೆ ವಿಚಾರ. ಲಿಂಗಜ್ಞಾನವಿಷ್ಟೇ ಅಲ್ಲ, ವ್ಯಾಪ್ತಿಜ್ಞಾನ, ಧರ್ಮಜ್ಞಾನ ಮುಂತಾದ ಸಾಮಗ್ರಿಗಳಿಂದಲೂ ಅನುಮಿತಿ ಉಂಟಾಗಿದೆ ಹೊರತು ಅರ್ಥಸತ್ವದಿಂದ ಅಲ್ಲ. ಹಾಗಾದರೆ ಅರ್ಥಸತ್ವಕ್ಕೆ ಏನು ಉಪಯೋಗ ಎಂದು ಕೇಳಿದರೆ ಅದು ಉಂಟಾದ ಜ್ಞಾನದ ಪ್ರಾಮಾಣ್ಯದಲ್ಲಿ ಸಂಶಯವುಂಟಾದಾಗ ಅರ್ಥಸತ್ವದಿಂದ ಜ್ಞಾನದ ಪ್ರಾಮಾಣ್ಯವನ್ನು ಸಾಧಿಸಲು ಬರುತ್ತದೆ ಎಂದು ಉತ್ತರ. ಸಂವಾದದಿಂದ ಹೇಗೆ ಪ್ರಾಮಾಣ್ಯವನ್ನು ಸಾಧಿಸಬಹುದೋ, ಹಾಗೇ ಅರ್ಥಸತ್ವದಿಂದಲೂ ಪ್ರಾಮಾಣ್ಯವನ್ನು ಸಾಧಿಸಬಹುದು.

**ಕಿಂಚಾರ್ಥಧೀತ್ವತಃ ಸಾ ಸ್ಯಾತ್ತತ್ತದರ್ಥೇಷು ಕಾರಣಮ್ ।**
**ಜ್ಞಾನಧೀತ್ವೇನ ಚ ಜ್ಞಾನೇ ನ ಗುಣೋಽಸೌ ಭ್ರಮೇಽಪಿ ಯತ್ ।**
**ತತ್ತ್ವದುಕ್ತಗುಣೋತ್ಥಾಭೂದೇವಮಪ್ಯನುಮಾ ನ ಸಾ ॥ ೪೩೭ ॥**

**ಅರ್ಥ–** ಕಿಂಚ = ಅಷ್ಟೇ ಅಲ್ಲದೆ, ಯತ್ = ಯಾವಕಾರಮದಿಂದ, ಸಾ = ಆ ಈಶ್ವರಪ್ರಮೆಯು, ಅರ್ಥಽೀತ್ವತಃ = ಅರ್ಥವಿಷಯಕಜ್ಞಾನತ್ವರೂಪದಿಂದ, ತತ್ತದರ್ಥೇಷು= ಆಯಾಯ ವಸ್ತುಗಳ ವಿಷಯದಲ್ಲಿ, ಕಾರಣಂ = ಕಾರಣವಾಗಿದೆಯೋ, ಚ = ಮತ್ತು, ಜ್ಞಾನೇ = ಜ್ಞಾನದವಿಷಯದಲ್ಲಿ, ಭ್ರಮೇ ಅಪಿ = ಭ್ರಮದವಿಷಯದಲ್ಲೂ, ಜ್ಞಾನಧೀತ್ವೇನ = ಜ್ಞಾನವಿಷಯಕಜ್ಞಾನವತ್ವ- ರೂಪದಿಂದ, ಕಾರಣಂ = ಕಾರಣವಾಗಿದೆ. ತತ್ = ಆದ್ದರಿಂದ, ಸಾ = ಯಾದೃಚ್ಛಿಕಸ್ಥಳದಲ್ಲಿನ, ಅನುಮಾ = ಅನುಮಿತಿಯು, ತ್ವದುಕ್ತಗುಣೋತ್ಥಾ= ನೀನು ಹೇಳುವ ಗುಣದಿಂದ ಹುಟ್ಟಿದ್ದು ನ ಅಭೂತ್= ಆಗಲಿಲ್ಲ ಏವಂ= ಈ ರೀತಿಯಾಗಿ, ಅಸೌ= ಈಶ್ವರಜ್ಞಾನವು, ಗುಣಃ ಅಪಿ= ಗುಣವೂ ಕೂಡ, ನ=ಅಲ್ಲ.

**ಅನುವಾದ–** ಈಶ್ವರಜ್ಞಾನವು ಕಾರಣವಾಗುವುದಾದರೆ ಅದು ತತ್ತದರ್ಥಜ್ಞಾನತ್ವೇನ ಕಾರಣವಾಗುತ್ತದೆ. ಆದ್ದರಿಂದ ಜ್ಞಾನದ ಉತ್ಪತ್ತಿಯಾಗಬೇಕಾದರೆ ಜ್ಞಾನಜ್ಞಾನತ್ವೇನ ಈಶ್ವರಜ್ಞಾನಕ್ಕೆ ಪ್ರಮೆಯನ್ನು ಕುರಿತು ಕಾರಣತ್ವವನ್ನು ಹೇಳಬೇಕು. ಆದರೆ ಹಾಗೆ ಹೇಳಲು ಬರುವುದಿಲ್ಲ. ಜ್ಞಾನಜ್ಞಾನತ್ವೇನ ಈಶ್ವರಜ್ಞಾನವು ಭ್ರಮವನ್ನೂ ಕುರಿತು ಕಾರಣವಾಗಿದೆ. ಆದ್ದರಿಂದ ಈ ಪ್ರಮೆಯಲ್ಲಿ ಅರ್ಥಧೀತ್ವೇನ ಈಶ್ವರಜ್ಞಾನವು ಗುಣವಾಗುತ್ತದೆ ಎಂದು ಹೇಳಲು ಬರುವುದಿಲ್ಲ.

**ಭಾವವಿಲಾಸಿನೀ–**ಈಶ್ವರಜ್ಞಾನಸ್ಯ ಗುಣತ್ವಂ ಪ್ರಕಾರಾಂತರೇಣ ದೂಷಯತಿ – **ಕಿಂಚೇತಿ ॥** ಸಾ ಈಶ್ವರಧೀಃ । ಅರ್ಥಧೀತ್ವತಃ ಇಮಮರ್ಥಂ ಕರೋಮೀತ್ಯರ್ಥಜ್ಞಾನತ್ವತಃ । ತತ್ತದರ್ಥೇಷು ಘಟಪಟಾದ್ಯರ್ಥೇಷು । ಜ್ಞಾನೇ ಜನಯಿತವ್ಯೇ ಜ್ಞಾನಧೀತ್ವೇನೇದಂ ಜ್ಞಾನಂ ಕರೋಮೀತಿ ಜ್ಞಾನವಿಷಯಕಧೀತ್ವೇನ ತಸ್ಮಿನ್ ಜ್ಞಾನೇ ಕಾರಣಂ ಸ್ಯಾತ್ । ಕರ್ತಾರೋ ಹಿ ತತ್ತತ್ಕಾರ್ಯ-ಮೇವಂ ಸಂಕಲ್ಪ್ಯ ಕುರ್ವಂತಿ । ಅತಸ್ಸಮ್ಭಾವಿತತ್ವಾದಿದಂ ಪಕ್ಷದ್ವಯಮಾಶಂಕಾತಮ್ । ಅಸಾವೇತಾದೃಶೀ ಈಶ್ವರಧೀರಪಿ ನ ಗುಣಃ ಪ್ರಮಾಜನಕೀಭೂತೋ ಗುಣೋ ನ । ತತ್ರ ಹೇತುಃ – **ಭ್ರಮೇಽಪೀತಿ ॥** ಯದ್ಯಸ್ಮಾಜ್ಜ್ಞಾನಂ ಕರೋಮೀತಿ ಜ್ಞಾನಧೀತ್ವೇನೇಶ್ವರಜ್ಞಾನಸ್ಯ ಕಾರಣತಾ ಭ್ರಮೇಽಪ್ಯಸ್ತಿ । ತಸ್ಮಾದ್ ಭ್ರಮಸಾಧಾರಣತ್ವಾನ್ನ ಗುಣ ಇತಿ ಪೂರ್ವೇಣ ಸಂಬಂಧಃ । ಉಪಸಂಹರತಿ – **ತದಿತಿ ॥** ತ್ವದುಕ್ತಃ ಪ್ರಮಾಮಾತ್ರಕಾರಣೀಭೂತಃ ॥ ೪೩೭ ॥

**ವಿವರಣೆ–** ಈಶ್ವರಜ್ಞಾನವು ಗುಣವಲ್ಲ ಎಂಬುದನ್ನು ಬೇರೆರೀತಿಯಿಂದ ಸಮರ್ಥನೆ ಮಾಡುತ್ತಾರೆ. ಘಟವು ಉತ್ಪನ್ನವಾಗುವಾಗ 'ಘಟಂ ಕರೋಮಿ' ಎಂಬ ಈಶ್ವರಜ್ಞಾನವು ಕಾರಣ. ಪಟ ಉತ್ಪತ್ತಿಯಾಗುವಾಗ 'ಪಟಂ ಕರೋಮಿ' ಎಂಬ ಈಶ್ವರಜ್ಞಾನವು ಕಾರಣ. ಆದ್ದರಿಂದ ಘಟವನ್ನು ಕುರಿತು ಘಟಧೀತ್ವೇನ, ಪಟವನ್ನು ಕುರಿತು ಪಟಧೀತ್ವೇನ ಈಶ್ವರಜ್ಞಾನವು ಕಾರಣ. ಹಾಗೆಯೇ ಜ್ಞಾನವು ಉತ್ಪನ್ನವಾಗಬೇಕಾದರೆ 'ಜ್ಞಾನಂ ಕರೋಮಿ' ಎಂಬ ಈಶ್ವರಜ್ಞಾನವು ಕಾರಣ. ಅದು ಜ್ಞಾನಜ್ಞಾನತ್ವೇನ ಮಾತ್ರ ಕಾರಣವಾಗುತ್ತವೆ. ಕರ್ತೃಗಳಾದವರು ಇಂತಹ ಕಾರ್ಯಗಳನ್ನು ಮಾಡುತ್ತೇವೆಂದು ಸಂಕಲ್ಪಮಾಡಿಯೇ ಆಯಾ ಕಾರ್ಯಗಳನ್ನು ಮಾಡುತ್ತಾರಷ್ಟೇ. ಆದರೆ ಈಶ್ವರನ ಇಂತಹ ಜ್ಞಾನವೂ ಸಹ ಪ್ರಮಾಜನಕಗುಣವಲ್ಲ. ಏಕೆಂದರೆ 'ಜ್ಞಾನಂ ಕರೋಮಿ' ಎಂಬ ಈಶ್ವರಜ್ಞಾನವು ಭ್ರಮಸ್ಥಳದಲ್ಲಿಯೂ ಇದೆ. ಆದ್ದರಿಂದ ಪ್ರಮಾವ್ಯಭಿಚಾರಿಯಾದ್ದರಿಂದ ಅದು ಪ್ರಮೆಯನ್ನು ಕುರಿತು ಕಾರಣವಾದ ಗುಣವಲ್ಲ.

**ಕರೋಮೀದಮಿದಂ ಚೇತಿ ತತ್ತತ್ಕಾರ್ಯಂ ಕರೋತ್ಯಪಿ ।**
**ಅನ್ಯಬುದ್ಧ್ಯಾನ್ಯಕರಣಮಭ್ರಾಂತಸ್ಯ ಕಥಂ ವದ ॥ ೪೩೮ ॥**

**ಅರ್ಥ–** ಚ = ಮತ್ತು, ಕರ್ತಾ= ಕರ್ತೃವು, ಇದಂ ಕರೋಮಿ, ಇದಂ ಕರೋಮಿ ಇತಿ = ಈ ಕಾರ್ಯವನ್ನು ಮಾಡುತ್ತೇನೆ, ಈ ಕಾರ್ಯವನ್ನು ಮಾಡುತ್ತೇನೆ ಎಂದು ಸಂಕಲ್ಪಿಸಿ,

ತತ್ತತ್ಕಾರ್ಯಂ = ಆಯಾಯ ಕಾರ್ಯಗಳನ್ನು, ಕರೋತಿ ಅಪಿ = ಮಾಡುತ್ತಾನಷ್ಟೇ! ಅಭ್ರಾಂತಸ್ಯ = ಭ್ರಾಂತಿರಹಿತನಾದ ಈಶ್ವರನಿಗೆ, ಅನ್ಯಬುದ್ಧ್ಯಾ = ಬೇರೊಂದು ಬುದ್ಧಿಯಿಂದ, ಅನ್ಯಕರಣಂ = ಇನ್ನೊಂದನ್ನು ಮಾಡುವಿಕೆಯು, ಕಥಂ = ಹೇಗೆ ಕೂಡುತ್ತದೆ? ತ್ವಂ= ನೀನು, ವದ = ಹೇಳು.

**ಅನುವಾದ–** ಇದನ್ನು ಮಾಡುತ್ತೇನೆ, ಇದನ್ನು ಮಾಡುತ್ತೇನೆ (ಘಟವನ್ನು ಮಾಡುತ್ತೇನೆ, ಪಟವನ್ನು ಮಾಡುತ್ತೇನೆ) ಎಂದು ಸಂಕಲ್ಪಿಸಿ ಕರ್ತೃಗಳು ಆಯಾಕಾರ್ಯಗಳನ್ನು ಮಾಡುತ್ತಾರೆ. ಈಶ್ವರನು ಅರ್ಥವನ್ನು ಮಾಡುತ್ತೇನೆಂದು ಸಂಕಲ್ಪಿಸಿ ಜ್ಞಾನವನ್ನು ಮಾಡಿದರೆ ಈಶ್ವರನು ಭ್ರಾಂತನಾಗುವುದಿಲ್ಲವೇ? ಆದ್ದರಿಂದ ಈಶ್ವರಜ್ಞಾನಕ್ಕೆ ಗುಣತ್ವವನ್ನು ಹೇಳಲು ಬರುವುದಿಲ್ಲ.

**ಭಾವವಿಲಾಸಿನೀ–** ನನು ಜ್ಞಾನೇಽಪ್ಯರ್ಥಧೀತ್ವೇನೈವ ಕಾರಣತಾ । ತಚ್ಚ ಪ್ರಮಾಯಾಮೇವ ಘಟತೇ, ನ ಭ್ರಮ ಇತಿ ಮಂದಾಶಂಕಾಂ ನಿರಾಕರೋತಿ – **ಕರೋಮೀತಿ** ॥ ಇದಂ ಘಟಲಕ್ಷಣ-ಕಾರ್ಯಮಿದಂ ಪಟಲಕ್ಷಣಕಾರ್ಯಂ ಚ ಕರೋಮೀತಿ ತತ್ತತ್ಕಾರ್ಯಂ ಘಟಪಟಲಕ್ಷಣ-ಕಾರ್ಯಮೇವ ಕರೋತಿ । ಅಪಿಸ್ಸಂಭಾವನಾಯಾಮ್ । ಅನ್ಯಬುದ್ಧ್ಯಾ ಅರ್ಥಂ ಕರೋಮೀ-ತ್ಯರ್ಥಬುದ್ಧ್ಯಾ ಅನ್ಯಕರಣಮನ್ಯಸ್ಯ ಜ್ಞಾನಸ್ಯ ಕರಣಭ್ರಾಂತಸ್ಯೇಶ್ವರಸ್ಯ ಕಥಂ ಸ್ಯಾತ್ । ಅತೋ ಜ್ಞಾನಧೀತ್ವೇನೈವ ಜ್ಞಾನಂ ಕರೋತಿ । ಸ ಚ ಭ್ರಮಸಾಧಾರಣತ್ವಾನ್ನ ಗುಣ ಇತಿ ಭಾವಃ । ನನು ಪ್ರಮಾಂ ಕರೋಮೀತಿ ಧೀಃ ಪ್ರಮಾಯಾಂ ಗುಣಃ । ಸ ಚ ಭ್ರಮೇ ನಾಸ್ತೀತಿ ಚೇತ್, ತರ್ಹಿ ಭ್ರಮಂ ಕರೋಮೀತಿ ಧೀಃ ಭ್ರಮೇ ಗುಣಃ । ಸಚ ಪ್ರಮಾಯಾಂ ನಾಸ್ತೀತಿ ಸಮಮತೋ ಯತ್ಕಿಂಚಿದೇತತ್ ॥ ೪೩೮ ॥

**ವಿವರಣೆ–** ಈಶ್ವರಜ್ಞಾನವು ಕಾರಣವೆಂದು ಹೇಳಿದರೂ ಜ್ಞಾನಜ್ಞಾನತ್ವೇನ ಕಾರಣ ಎಂದು ಹೇಳುವುದಿಲ್ಲ. ಅರ್ಥಜ್ಞಾನತ್ವೇನ ಕಾರಣ ಎಂದು ಹೇಳುತ್ತೇವೆ. ಅರ್ಥಜ್ಞಾನತ್ವೇನ ಕಾರಣತ್ವವು ಪ್ರಮಾಸ್ಥಳದಲ್ಲಿ ಮಾತ್ರ ಕೂಡುತ್ತದೆ. ಭ್ರಮಸ್ಥಳದಲ್ಲಿ ಕೂಡುವುದಿಲ್ಲ ಎಂಬ ಪಾಮರರ ಶಂಕೆಯನ್ನು ಈ ಶ್ಲೋಕದಲ್ಲಿ ಪರಿಹರಿಸುತ್ತಾರೆ. ಈಶ್ವರನ ಜ್ಞಾನವು ಅರ್ಥಧೀತ್ವೇನ ಕಾರಣ ಎಂದು ಹೇಳಿದರೆ ಆಗ ಘಟಾದಿಸ್ಥಳಗಳಿದ್ದಂತೆ ಈ ಸ್ಥಳದಲ್ಲಿಯೂ 'ಅರ್ಥಂ ಕರೋಮಿ' ಎಂದು ಸಂಕಲ್ಪಿಸಿ ಪ್ರಮಾರೂಪವಾದ ಜ್ಞಾನವನ್ನು ಮಾಡಬೇಕಾಗುತ್ತದೆ. ಅರ್ಥವನ್ನು ಮಾಡುತ್ತೇನೆ ಎಂದು ಸಂಕಲ್ಪ ಮಾಡಿದರೆ ಅರ್ಥವನ್ನೇ ಮಾಡಬೇಕು. ಜ್ಞಾನವನ್ನು ಮಾಡುತ್ತೆನೆ ಎಂದು ಸಂಕಲ್ಪ ಮಾಡಿದರೆ ಜ್ಞಾನವನ್ನೇ ಮಾಡಬೇಕು. ಅರ್ಥವನ್ನು ಮಾಡುತ್ತೇನೆಂದು ಸಂಕಲ್ಪಿಸಿ ಜ್ಞಾನವನ್ನು ಮಾಡಿದರೆ ಈಶ್ವರನು ಭ್ರಾಂತನಾಗುತ್ತಾನೆ. ಆದ್ದರಿಂದ ಜ್ಞಾನವನ್ನು ಮಾಡುತ್ತೇನೆ ಎಂದೇ ಸಂಕಲ್ಪಿಸಿ ಜ್ಞಾನವನ್ನು ಮಾಡಬೇಕು. ಈ ಜ್ಞಾನವನ್ನು ಮಾಡುತ್ತೇನೆಂಬ ಸಂಕಲ್ಪವು ಭ್ರಮಸಾಧಾರಣ ವಾದುದರಿಂದ ಅದು ಪ್ರಮೋತ್ಪತ್ತಿಯಲ್ಲಿ ಗುಣವಾಗುವುದಿಲ್ಲ.

**ಗುಣಾನಪೇಕ್ಷ ಏವಾಸೌ ಭ್ರಮಂ ಕುರ್ಯಾತ್ಕಿಲ ಪ್ರಭುಃ ।**
**ಗುಣೈಃ ಕಿಲ ಪ್ರಮಾಂ ಕುರ್ಯಾತ್ ನ ಸ್ವತಂತ್ರೇನ್ಯತಂತ್ರತಾ ॥ ೪೩೯ ॥**

**ಅರ್ಥ–** ಪ್ರಭುಃ = ಸಮರ್ಥನಾದ, ಅಸೌ = ಈಶ್ವರನು, ಗುಣಾನಪೇಕ್ಷಃ ಏವ = ಗುಣವನ್ನು ಅಪೇಕ್ಷಿಸದವನಾಗಿಯೇ, ಭ್ರಮಂ = ಭ್ರಮೆಯನ್ನು ಕುರ್ಯಾತ್ ಕಿಲ = ಮಾಡುವವನಾದರೆ, ಗುಣೈಃ = ಗುಣಗಳಿಂದ, ಪ್ರಮಾಂ = ಪ್ರಮೆಯನ್ನು ಕುರ್ಯಾತ್ ಕಿಲ = ಮಾಡುತ್ತಾನೆಂದಾಯಿತಷ್ಟೇ. ಸ್ವತಂತ್ರೇ = ಸ್ವತಂತ್ರನಾದ ಈಶ್ವರನಲ್ಲಿ, ಅನ್ಯತಂತ್ರತಾ = ಪರಾಧೀನತೆಯು, ನ = ಇಲ್ಲ.

**ಅನುವಾದ– ಸರ್ವಸಮರ್ಥನಾದ ಪರಮಾತ್ಮನು ಗುಣಗಳನ್ನು ಅವಲಂಬಿಸದೇ ಭ್ರಮವನ್ನೂ, ಗುಣಗಳನ್ನು ಅವಲಂಬಿಸಿ ಪ್ರಮಾವನ್ನು ನಿರ್ಮಿಸುತ್ತಾನೆಂದು ನಿನ್ನ ಅಭಿಪ್ರಾಯವೇ? ಸರ್ವತಂತ್ರ ಸ್ವತಂತ್ರನಾದ ಅವನು ತನ್ನ ಕಾರ್ಯಗಳಲ್ಲಿ ಯಾವುದನ್ನೂ ಅವಲಂಬಿಸುವುದಿಲ್ಲ (ಎಂದು ನಿನಗೆ ತಿಳಿಯದೇ?)**

**ಭಾವವಿಲಾಸಿನೀ–**ನನು ಪ್ರಮಾಯಾಂ ಕಲ್ಪ್ಯಮಾನಗುಣಸ್ಯ ಭ್ರಮೇ ಸಂಭವೇಽಪಿ ತದನಪೇಕ್ಷಯೈವ ಭ್ರಮಂ ಕುರುತೇ । ಪ್ರಮಾಂ ತು ನ ತಥೇತಿ ಫಲಬಲಾತ್ಕಲ್ಪ್ಯತ ಇತಿ ಪರಸ್ಯಾಶಂಕಾಮನೂದ್ಯ ಸೋಪಹಾಸಂ ದೂಷಯತಿ – **ಗುಣಾನಪೇಕ್ಷ ಇತಿ** ॥ ಅಸೌ ಪ್ರಭುಃ ಗುಣಾನಪೇಕ್ಷ ಏವ ಭ್ರಮಂ ಕುರ್ಯಾತ್ಕಿಲ । ಗುಣೈಃ ಪ್ರಮಾಂ ಕುರ್ಯಾತ್ಕಿಲ । ಕಿಲೇತ್ಯನೇನ ಫಲಸ್ಯ ಸ್ವತಸ್ತ್ವೇನಾನ್ಯಥೋಪಪತ್ತಿ- ರೂಪಮಸ್ವಾರಸ್ಯಂ ಸೂಚಯತಿ । ದೋಷಾಂತರಂ ಚಾಹ – **ನೇತಿ** ॥ ಸ್ವತಂತ್ರೇ ಈಶ್ವರೇಽನ್ಯತಂತ್ರತಾ ಗುಣಫಲಾದಿತಂತ್ರತಾ ನೇತಿ ಸಂಬಂಧಃ ॥ ೪೩೯ ॥

**ವಿವರಣೆ–** ಪ್ರಮೆಯಲ್ಲಿ ನಾವು ಕಲ್ಪಿಸುವ ಗುಣವು ಯದ್ಯಪಿ ಭ್ರಮಸ್ಥಳದಲ್ಲಿಯೂ ಇದೆ. ಆದರೆ ಭ್ರಮಸ್ಥಳದಲ್ಲಿ ಆ ಗುಣವನ್ನು ಅಪೇಕ್ಷಿಸದೇ ಭ್ರಮವನ್ನು ಉಂಟುಮಾಡುತ್ತಾನೆ. ಪ್ರಮಾಸ್ಥಳದಲ್ಲಿ ಮಾತ್ರ ಹಾಗೆ ಮಾಡುವುದಿಲ್ಲ. ಗುಣವನ್ನು ಅಪೇಕ್ಷಿಸಿಯೇ ಪ್ರಮೆಯನ್ನು ಉಂಟುಮಾಡುತ್ತಾನೆ ಎಂದು ನಾವು ಫಲಬಲದಿಂದ ಕಲ್ಪಿಸುತ್ತೇವೆ ಎಂಬ ಆಶಂಕೆಗೆ ಇಲ್ಲಿ ಹಾಸ್ಯಪೂರ್ವಕವಾಗಿ ದೋಷವನ್ನು ಹೇಳುತ್ತಾರೆ. 'ಕಿಲ' ಎಂಬ ಶಬ್ದದಿಂದ ಪ್ರಮೆಯು ಜ್ಞಾನಸಾಮಾನ್ಯಸಾಮಗ್ರಿಜನ್ಯವಾದುದರಿಂದ ಗುಣನಿರಪೇಕ್ಷವಾಗಿ ಉತ್ಪನ್ನವಾಗುವುದರಿಂದ ಗುಣಕಲ್ಪನೆಯು ಅನ್ಯಥೋಪಪನ್ನ ಎಂದು ತಿಳಿಸುತ್ತಾರೆ. ಸ್ವತಂತ್ರನಾದ ಈಶ್ವರನು ಗುಣ ಮತ್ತು ಫಲಗಳನ್ನು ಅನುಸರಿಸಿ ಸೃಷ್ಟಿಮಾಡುವುದಿಲ್ಲ ಎಂದು ಅಭಿಪ್ರಾಯ.

**ಭ್ರಮಜ್ಞಾನಂ ಯಥಾ ಕುರ್ಯಾತ್ ಪ್ರಮಾಂ ಕುರ್ಯಾತ್ತಥೈವ ಹಿ ।**
**ದ್ವಿಪ್ರಕಾರತಯಾ ಕರ್ತುಂ ಕಿಂ ಸ ತಾರ್ಕಿಕಕಿಂಕರಃ ॥ ೪೪೦ ॥**

**ಅರ್ಥ–** ಸಃ = ಈಶ್ವರನು, ಯಥಾ = ಯಾವರೀತಿಯಾಗಿ, ಭ್ರಮಜ್ಞಾನಂ = ಭ್ರಮರೂಪಜ್ಞಾನವನ್ನು ಕುರ್ಯಾತ್ = ಮಾಡುವನೋ, ತಥೈವ = ಹಾಗೆಯೇ, ಪ್ರಮಾಂ = ಪ್ರಮೆಯನ್ನು ಕುರ್ಯಾತ್ = ಮಾಡುವನಷ್ಟೇ! ದ್ವಿಪ್ರಕಾರತಯಾ = ಎರಡನ್ನೂ ವಿಭಿನ್ನವಾಗಿ, ಕರ್ತುಂ = ಮಾಡಲು, ಸಃ = ಅವನು, ತಾರ್ಕಿಕಕಿಂಕರಃ ಕಿಂ? = ತಾರ್ಕಿಕರ ಸೇವಕನೇ?

**ಅನುವಾದ–** ಈಶ್ವರನು ಭ್ರಮವನ್ನು ಹೇಗೆ ಸೃಷ್ಟಿಮಾಡುತ್ತಾನೆಯೋ, ಪ್ರಮೆಯನ್ನೂ ಹಾಗೆಯೇ ಸೃಷ್ಟಿಮಾಡುತ್ತಾನೆ. ಎರಡು ರೀತಿಯಲ್ಲಿ ಸೃಷ್ಟಿಯನ್ನು ಮಾಡಲು ಅವನೇನು ತಾರ್ಕಿಕನ ಮನೆಯ ಸೇವಕನೇ?

**ಭಾವವಿಲಾಸಿನೀ–**ತದ್ ವಿಶದಯತಿ – ಭ್ರಮಜ್ಞಾನಮಿತಿ॥ ಯಥಾ ಗುಣಂ ವಿನೈವ ಭ್ರಮರೂಪಂ ಜ್ಞಾನಂ ಕುರ್ಯಾತ್, ತಥಾ ಗುಣಂ ವಿನಾ ಪ್ರಮಾಮಪಿ ಕುರ್ಯಾದ್ಧಿತಿ ಸಂಬಂಧಃ । ಸ ಈಶ್ವರೋ ದ್ವಿಪ್ರಕಾರಕತಯಾ ತಾರ್ಕಿಕಾಭಿಲಷಿತಪ್ರಕಾರದ್ವಯಘಟಿತತಯಾ ಕರ್ತುಂ ತಾರ್ಕಿಕಕಿಂಕರಃ ಕಿಮ್? ನೇತಿ ಸಂಬಂಧಃ ॥ ೪೪೦ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ವಿಷಯವನ್ನೇ ಸ್ಪಷ್ಟಪಡಿಸುತ್ತಾರೆ. ಈಶ್ವರನು ಗುಣವಿಲ್ಲದೆಯೇ ಭ್ರಮವನ್ನು ಸೃಷ್ಟಿಮಾಡುತ್ತಾನೆ. ಗುಣವನ್ನು ಅಪೇಕ್ಷಿಸಿ ಪ್ರಮೆಯನ್ನು ಸೃಷ್ಟಿಮಾಡುತ್ತಾನೆಂದು ಹೇಳಿದರೆ ಎರಡು ಪ್ರಕಾರದ ಸೃಷ್ಟಿಯಾಯಿತು. ತಾರ್ಕಿಕರ ಮತವನ್ನು ಉಳಿಸಲು ಹೀಗೆ ಎರಡು ರೀತಿಯ ಸೃಷ್ಟಿಯನ್ನು ಮಾಡಲು ಹೊರಟರೆ ಈಶ್ವರನು ತಾರ್ಕಿಕನ ಸೇವಕನಾದಾನು. ಅವನು ಎಂದೂ ಯಾರಿಗೂ ಸೇವಕನಲ್ಲ. ಆದ್ದರಿಂದ ಈ ಗುಣದ ಕಲ್ಪನೆಯನ್ನು ಬಿಡಬೇಕು.

**ಅರ್ಥಪ್ರಮಾ ಯದಿ ಗುಣಃ ಪ್ರಮಾಯಾಮೈಶ್ವರೀರ್ಯತೇ ।**
**ಭ್ರಾಂತಾರ್ಥೋ ರಜತಾದಿಃ ಸನ್ನನ್ಯಥಾಖ್ಯಾತಿವಾದಿನಃ ।**
**ಅರ್ಥಸತ್ತಾಪ್ರಮಾ ಚೈಶೀ ತದ್ ಭ್ರಮೇಪ್ಯಸ್ತಿ ತೇ ಮತೇ ॥ ೪೪೧ ॥**

**ಅರ್ಥ–** ಯದಿ = ಒಂದು ವೇಳೆ, ಪ್ರಮಾಯಾಂ = ಪ್ರಮೆಯಲ್ಲಿ, ಐಶ್ವರೀ = ಈಶ್ವರನಿಷ್ಠವಾದ, ಅರ್ಥಪ್ರಮಾ = ವಸ್ತುವಿಷಯಕಯಥಾರ್ಥಜ್ಞಾನವು, ಗುಣಃ = ಗುಣವೆಂದು, ಈರ್ಯತೇ = ಹೇಳಲ್ಪಟ್ಟರೆ, ತತ್ = ಆ ಕಾರಣದಿಂದ, ತೇ = ನಿನ್ನ ಮತೇ = ಮತದಲ್ಲಿ (ಮತದ ಪ್ರಕಾರ), ಐಶೀ = ಈಶ್ವರನಿಷ್ಠವಾದ, ಅರ್ಥಪ್ರಮಾ ಚ = ಅರ್ಥಪ್ರಮೆಯಾದರೂ, ಭ್ರಮೇ ಅಪಿ = ಭ್ರಮಸ್ಥಳದಲ್ಲಿಯೂ ಕೂಡ, ಅಸ್ತಿ = ಇದೆ. (ಏಕೆಂದರೆ) ಅನ್ಯಥಾಖ್ಯಾತಿವಾದಿನಃ = ಅನ್ಯಥಾಖ್ಯಾತಿಯಾದ ತಾರ್ಕಿಕನಿಗೆ, ಭ್ರಾಂತಾರ್ಥಃ = ಭ್ರಾಂತಿವಿಷಯವಾದ, ರಜತಾದಿಃ = ರಜತ ಮೊದಲಾದವುಗಳು, ಸನ್ = ಇರುವಂಥಾದ್ದೇ ಆಗಿದೆ. (ಸತ್ಯವೇ ಆಗಿದೆ.)

**ಅನುವಾದ–** ಈಶ್ವರನ ಅರ್ಥಪ್ರಮೆಯು ಗುಣವೆಂದು ಹೇಳಿದರೆ ಭ್ರಾಂತಿಸ್ಥಳದಲ್ಲಿಯೂ ಕೂಡ ಈಶ್ವರನ ಅರ್ಥಪ್ರಮಾರೂಪ ಗುಣವಿದೆ. ಏಕೆಂದರೆ ಅನ್ಯಥಾಖ್ಯಾತ-ವಾದಿಯಾದ ನೀನು ಬೇರೆಕಡೆಯಲ್ಲಿ ಸತ್ಯವಾಗಿರುವ ರಜತವೇ ಶುಕ್ತಿಯಲ್ಲಿ ತೋರುತ್ತದೆ ಎಂದು ಹೇಳುತ್ತೀಯೆ. ಆ ಬೇರೆಕಡೆಯಲ್ಲಿ ಎಂದರೆ ಅಂಗಡಿಯಲ್ಲಿರುವ ರಜತದ ಸತ್ವದ ಪ್ರಮೆಯು ಈಶ್ವರನಿಗೆ ಇದೆ. ಆದ್ದರಿಂದ ಅರ್ಥಪ್ರಮೆಯು ಈಶ್ವರನಿಗಿರುವುದರಿಂದ ಭ್ರಾಂತಿಯ ಸ್ಥಳದಲ್ಲಿಯೂ ಇರುವ ಈ ಗುಣವು ಪ್ರಮೆಯನ್ನು ಕುರಿತು ಕಾರಣವಾಗಲಾರದು. ಅರ್ಥಸತ್ತಾಪ್ರಮೆಯು ಗುಣವೆಂದು ಹೇಳಿದರೂ ಸಹ ಭ್ರಾಂತಿಯಸ್ಥಲದಲ್ಲಿ ಈಶ್ವರಸಂಬಂಧಿಯಾದ ಅರ್ಥಸತ್ವಪ್ರಮೆಯೂ ಇದೆ. ಆದ್ದರಿಂದ ಅದೂ ಗುಣವಾಗುವುದಿಲ್ಲ.

**ಭಾವವಿಲಾಸಿನೀ–** ಕಿಂಚಾರ್ಥಸತ್ತಾರ್ಥಪ್ರಮಾ ಚ ತಾರ್ಕಿಕಮತೇ ಭ್ರಮೇಽಪ್ಯಸ್ತಿ । ಅತೋ ಭ್ರಮಸಾಧಾರಣತ್ವಾನ್ನ ದ್ವಾವಪಿ ಗುಣಾವಿತ್ಯಾಹ – **ಅರ್ಥಪ್ರಮೇತಿ ॥** ಯದ್ಯೈಶ್ವರೀ ಅರ್ಥಪ್ರಮಾ ಪ್ರಮಾಯಾಂ ಗುಣ ಇತೀರ್ಯತೇ, ತರ್ಹಿ । ಭ್ರಾಂತಾರ್ಥಃ ಭ್ರಾಂತಿವಿಷಯೋಽರ್ಥಃ ರಜತಾದಿಃ ರಜತಸರ್ಪಾದಿಃ- ಅನ್ಯಥಾಖ್ಯಾತಿವಾದಿನಸ್ತಾರ್ಕಿಕಸ್ಯ ಮತೇ ಸನ್ನೇವ । ಅನ್ಯಥಾಖ್ಯಾತಿವಾದಿನ ಇತಿ ತತ್ರ ಹೇತುಗರ್ಭಂ ವಿಶೇಷಣಮ್ । ಅನ್ಯತ್ರ ಸತ ಏವಾನ್ಯತ್ರ ಖ್ಯಾತಿರ್ಹ್ಯನ್ಯಥಾಖ್ಯಾತಿಃ । ತತ್ತಸ್ಮಾದರ್ಥಸ್ಯಾಸತ್ತ್ವಾಭಾವಾದ್ ಅರ್ಥಸತ್ತಾ ಐಶೀ ಸರ್ವಜ್ಞೇಶ್ವರಸಂಬಂಧಿನೀ ತತ್ಪ್ರಮಾ ಚ ತೇ ತಾರ್ಕಿಕಾಭಿಮತಸ್ಯ ತವ ಮತೇ ಭ್ರಮೇಽಪ್ಯಸ್ತೀತಿ ಸಂಬಂಧಃ । ತೇನ ಪ್ರಮಾಭ್ರಮೌ ದ್ವೌ ಚ ತ್ವದುಕ್ತಗುಣಸಂಜಾತೌ ತ್ವದುಕ್ತಗುಣಾಭ್ಯಾ-ಮರ್ಥಸತ್ತಾಽರ್ಥಪ್ರಮಾರೂಪಾಭ್ಯಾಮುತ್ಪನ್ನೌ ಜಾತೌ ಅಭೂತಾಮಿತಿ ಸಂಬಂಧಃ । ದ್ವಯೋರ್ಭ್ರಮಾಭ್ರಮಯೋಃ । ತತ್ ಪ್ರಮಾತ್ವಮ್ ॥ ೪೪೧ ॥

**ವಿವರಣೆ–** ಅನ್ಯಥಾಖ್ಯಾತವಾದಿಗಳು 'ಇದಂ ರಜತಂ' ಎಂಬ ಸ್ಥಳದಲ್ಲಿ ಅಂಗಡಿಯಲ್ಲಿರುವ ರಜತವೇ ಶುಕ್ತಿಯಲ್ಲಿ ತೋರುತ್ತದೆ ಎಂದು ಹೇಳುತ್ತಾರೆ. ಆಪಣಸ್ಥವಾದ ರಜತವು ಸತ್ಯವೇ ಆಗಿದೆ. ಆದ್ದರಿಂದ ಅರ್ಥಸತ್ವವಿದೆ. ಆಪಣಸ್ಥ ರಜತದ ಪ್ರಮೆಯು ಈಶ್ವರನಿಗೆ ಇದೆ. ಆದ್ದರಿಂದ ಅರ್ಥಸತ್ವಪ್ರಮೆಯೂ ಇದೆ. ಆ ಕಾರಣದಿಂದ ಅರ್ಥಪ್ರಮೆಯಾಗಲೀ, ಅರ್ಥಸತ್ವಪ್ರಮೆಯಾಗಲೀ, ಪ್ರಮಾಸ್ಥಳದಲ್ಲಿಯೂ ಭ್ರಮಸ್ಥಳದಲ್ಲಿಯೂ ಸಾಧಾರಣವಾಗಿದೆ. ಆದ್ದರಿಂದ ಇವೆರಡೂ ಪ್ರಮೆಯನ್ನುಂಟುಮಾಡುವ ಗುಣವಾಗಲಾರವು. ಅರ್ಥಪ್ರಮಾ ಅಥವಾ ಅರ್ಥಸತ್ವಪ್ರಮಾರೂಪಗುಣದಿಂದ ಜನ್ಯವಾದ ಮೇಲೆ ಎರಡೂ ಪ್ರಮೆಯೇ ಆಗಬೇಕು. ಒಂದು ಪ್ರಮೆ, ಇನ್ನೊಂದು ಭ್ರಮೆಯಾಗುವುದು ಹೇಗೆ ಸಾಧ್ಯ?

**ತ್ವದುಕ್ತಗುಣಸಂಜಾತೌ ದ್ವೌ ಚ ಜಾತೌ ಭ್ರಮಾಭ್ರಮೌ ।**
**ಗುಣಜತ್ವಾತ್ ಪ್ರಮಾತ್ವಂ ಚೇತ್ ದ್ವಯೋರಪಿ ಕುತೋ ನ ತತ್ ॥೪೪೨॥**

**ಅರ್ಥ–** ಚ = ಮತ್ತು, ಭ್ರಮಾಭ್ರಮೌ ದ್ವೌ = ಭ್ರಮ ಮತ್ತು ಪ್ರಮೆಗಳೆರಡೂ, ತ್ವದುಕ್ತಗುಣಸಂಜಾತೌ = ನೀನು ಹೇಳಿದ ಅರ್ಥವಿಷಯಕ ಈಶ್ವರಜ್ಞಾನವೆಂಬ ಗುಣದಿಂದ ಹುಟ್ಟಿದವುಗಳಾಗಿ, ಜಾತೌ = ಆದವು, ಗುಣಜತ್ವಾತ್ = ಗುಣಜನ್ಯತ್ವವಿರುವುದರಿಂದ, ಪ್ರಮಾತ್ವಂ ಚೇತ್ = ಪ್ರಮಾತ್ವವಿರುವುದಾದರೆ, ತತ್ = ಆ ಪ್ರಮಾತ್ವವು, ದ್ವಯೋಃ ಅಪಿ = ಭ್ರಮ ಮತ್ತು ಪ್ರಮೆಗಳೆರಡಕ್ಕೂ, ಕುತಃ ನ = ಏಕೆ ಇಲ್ಲ?

**ಅನುವಾದ–** ಭ್ರಮ ಮತ್ತು ಪ್ರಮಾ ಇವೆರಡೂ ನೀನು ಹೇಳಿದ ಗುಣದಿಂದಲೇ ಹುಟ್ಟಿದವುಗಳಾಗಿವೆ. ಹೀಗಿರುವಾಗ ಎರಡೂ ಪ್ರಮೆಯೇ ಆಗಬೇಕು. ಏಕೆ ಹಾಗೆ ಆಗಲಿಲ್ಲ?

**ಯದಿ ತತ್ರ ಸತೋಽರ್ಥಸ್ಯ ಪ್ರಮೈಶೀ ತೇ ಗುಣಸ್ತದಾ ।**
**ಲಘ್ವೀ ತತ್ರಾರ್ಥಸತ್ತೈವ ಗುಣೋಽಭೂನ್ನತು ತತ್ಪ್ರಮಾ ॥ ೪೪೩ ॥**

**ಅರ್ಥ–** ಯದಿ = ಒಂದು ವೇಳೆ, ತೇ = ನಿನಗೆ, ತತ್ರ ಸತಃ = ಮುಂದಿರುವ, ಅರ್ಥಸ್ಯ = ವಸ್ತುವಿನ, ಐಶೀ ಪ್ರಮಾ = ಈಶ್ವರನ ಪ್ರಮೆಯು, ಗುಣಃ = ಗುಣವಾಗುವುದಾದರೆ, ತದಾ = ಆಗ, ಲಘ್ವೀ = ಲಘುಭೂತವಾದ, ತತ್ರಾರ್ಥಸತ್ತಾ ಏವ = ಮುಂದಿರುವ ವಸ್ತುವಿನ ಸತ್ತೆಯೇ, ಗುಣಃ ಅಭೂತ್ = ಗುಣವಾಯಿತು. ತತ್ಪ್ರಮಾ = ಮುಂದಿನ ವಸ್ತುವಿನ ಈಶ್ವರಪ್ರಮೆಯು, ನ = ಅಲ್ಲ

**ಅನುವಾದ–** ಒಂದು ಪಕ್ಷ ಅಲ್ಲಿ ಸತ್ಯವಾಗಿರುವ ಅರ್ಥದ ವಿಷಯಕವಾದ ಈಶ್ವರಪ್ರಮೆಯು ಗುಣವೆಂದು ಹೇಳುವುದಾದರೆ ಅದು ಗುರುಭೂತವಾಗುತ್ತದೆ. ಅದಕ್ಕಿಂತ ಲಘುವಾದ ಅಲ್ಲಿಯ ಅರ್ಥಸತ್ವವು ಗುಣವೆಂದು ಹೇಳುವುದೇ ಲಘುಭೂತವಾದುದು. ಆದ್ದರಿಂದ ಅರ್ಥಸತ್ವಪ್ರಮೆಯನ್ನು ಗುಣವೆಂದು ಹೇಳಬಾರದು.

**ಭಾವವಿಲಾಸಿನೀ–**ನನು ತತ್ರ ಸತೋಽರ್ಥಸ್ಯ ಪ್ರಮೈವ ಗುಣಃ। ಭ್ರಮೇ ಚ ನ ತತ್ರ ಸತೋಽರ್ಥಸ್ಯ ಪ್ರಮಾಸ್ತಿ । ರಜತಾದೇರ್ದೇಶಾಂತರೇ ಸತ್ತ್ವಾದಿತಿ ಚೋದ್ಯಮನೂದ್ಯ ದೂಷಯತಿ – **ಯದೀತಿ ॥** ಐಶೀ ತತ್ರ ಸತೋಽರ್ಥಸ್ಯ ಪ್ರಮೇತಿ ಸಂಬಂಧಃ। ತದಾ ತರ್ಹಿ ಲಘ್ವೀ ಅರ್ಥಸತ್ತೈವ ಗುಣೋಽಭೂನ್ನತು ತತ್ಪ್ರಮಾ ಗೌರವಾದಿತಿ ಭಾವಃ ॥ ೪೪೨-೪೪೩ ॥

**ವಿವರಣೆ–** ಘಟಕಾಂಶಕ್ಕೆ ಒಂದು ಸ್ಥಿತಿಯನ್ನು ಕಲ್ಪಿಸಲು ಸಾಧ್ಯವಾಗುವಾಗ ಘಟಿತಕ್ಕೆ ಕಲ್ಪಿಸುವುದು ಗೌರವ ದೋಷಕ್ಕೆ ಎಡೆ ಮಾಡಿಕೊಡುತ್ತದೆ. ಯಾವುದೇ ಪ್ರಮೆಯಲ್ಲಿ ಅರ್ಥಸತ್ತೆಯು ಘಟಕವಾಗಿರುತ್ತದೆ. ಅದನ್ನೇ ಗುಣವೆಂದು ಹೇಳುವುದು ಲಾಘವ. ಅರ್ಥಸತ್ತಾಘಟಿತವಾದ ಪ್ರಮೆಗೆ ಗುಣತ್ವವನ್ನು ಕಲ್ಪಿಸುವುದು ಗೌರವ.

**ಸಾ ಚಾನುಮಾಯಾಂ ಹೇತುರ್ನ ಗುಣಜಾ ಸಾ ಪ್ರಮಾ ಕಥಮ್ ॥೪೪೪॥**

**ಅರ್ಥ–** ಸಾಚ = ಮುಂದಿರುವ ವಸ್ತುವಿನ ಸತ್ತೆಯು, ಅನುಮಾಯಾಂ = ಯಾದೃಚ್ಛಿಕ ಅನುಮಿತಿಯಲ್ಲಿ, ಹೇತುಃ ನ = ಕಾರಣವಲ್ಲ, ಸಾ ಪ್ರಮಾ = ಆ ಯಾದೃಚ್ಛಿಕಪ್ರಮಾರೂಪದ ಅನುಮಿತಿಯು, ಗುಣಜಾ ಕಥಂ = ಗುಣಜನ್ಯಹೇಗಾದೀತು?

**ಅನುವಾದ– ಆ ಅರ್ಥಸತ್ವವೂ ಸಹ ಅನುಮಿತಿಸ್ಥಳದಲ್ಲಿ ಹೇತುವಲ್ಲ. ಆದ್ದರಿಂದ ಪ್ರಮೆಯು ಗುಣಜನ್ಯವಾಗುವುದು ಹೇಗೆ?**

**ಭಾವವಿಲಾಸಿನೀ–ಸಾ ಚ ತತ್ರಾರ್ಥಸತ್ತಾ ಚಾಽನುಮಾಯಾಂ ಯಾದೃಚ್ಛಿಕ-ಸಂವಾದಿನ್ಯಾಮನುಮಿತೌ ಹೇತುರ್ನ। ಪರೋಕ್ಷಜ್ಞಾನಸ್ಯ ವಿಷಯಾಜನ್ಯತ್ವಾದಿತಿ ಭಾವಃ। ತಥಾಚ ಸಾ ಪ್ರಮಾ ಗುಣಜಾ ಕಥಮ್? ನ ಕಥಂಚಿದಿತ್ಯರ್ಥಃ ॥ ೪೪೪ ॥**

**ವಿವರಣೆ–** ಅನುಮಿತಿಯು ಪರೋಕ್ಷವಾದ ಜ್ಞಾನ. ಪ್ರತ್ಯಕ್ಷಾತ್ಮಕಜ್ಞಾನಕ್ಕೆ ಮಾತ್ರ ಅರ್ಥಸತ್ವವು ಕಾರಣ. ಪರೋಕ್ಷಜ್ಞಾನಕ್ಕೆ ಅರ್ಥಸತ್ವವು ಕಾರಣವಲ್ಲವೆಂದು ನೈಯಾಯಿಕರು ಒಪ್ಪುತ್ತಾರೆ. ಆದ್ದರಿಂದ ಅನುಮಿತಿಸ್ಥಳದಲ್ಲಿ ಅರ್ಥಸತ್ವವಿದ್ದರೂ ಅದು ಕಾರಣವಲ್ಲವಾದ್ದರಿಂದ ಪ್ರಮೆಯನ್ನು ಕುರಿತು ಅರ್ಥಸತ್ವವು ಕಾರಣವಾದ ಗುಣ ಎಂದು ಹೇಗೆ ಹೇಳುವುದು?

**ಗುಣಸ್ಯ ಸತ್ವಮಾತ್ರೇಣ ಪ್ರಾಮಾಣ್ಯಂ ಭಣ್ಯತೇ ಯದಿ ।**
**ತದಾ ಸಾಮಾನ್ಯಸಾಮಗ್ರೀಮಾತ್ರಜನ್ಯಾ ಪ್ರಮಾ ಮಮ ।**
**ಸರ್ವಾಪ್ಯಭೂತ್ ಸ್ವತಸ್ತ್ವಸ್ಯ ಕೇನ ವಾ ಹಾನಿರುಚ್ಯತಾಮ್ ॥ ೪೪೫ ॥**

**ಅರ್ಥ–** ಯದಿ = ಒಂದು ವೇಳೆ, ಪ್ರಾಮಾಣ್ಯಂ = ಯಾದೃಚ್ಛಿಕ ಅನುಮಿತಿಯ ಪ್ರಾಮಾಣ್ಯವು, ಗುಣಸ್ಯ = ಅರ್ಥಸತ್ತಾರೂಪವಾದ ಗುಣದ, ಸತ್ವಮಾತ್ರೇಣ = ಇರುವಿಕೆ ಮಾತ್ರದಿಂದಲೇ, ಭಣ್ಯತೇ = ಹೇಳಲ್ಪಡುವುದಾದರೆ, ತದಾ = ಆಗ, ಮಮ ಅಪಿ = ನನಗೂ ಕೂಡ, ಸರ್ವಾ ಪ್ರಮಾ = ಎಲ್ಲ ಪ್ರಮೆಯೂ, ಸಾಮಾನ್ಯಸಾಮಗ್ರೀಮಾತ್ರಜನ್ಯಾ = ಕೇವಲ ಜ್ಞಾನಸಾಮಾನ್ಯಸಾಮಗ್ರಿಯಿಂದ ಹುಟ್ಟಿದ್ದಾಗಿ, ಅಭೂತ್ = ಆಯಿತು. ಕೇನ ವಾ = ಯಾವುದರಿಂದ ತಾನೆ, ಸ್ವತಸ್ತ್ವಸ್ಯ = ಪ್ರಾಮಾಣ್ಯದ ಉತ್ಪತ್ತಿಸ್ವತಸ್ತ್ವಕ್ಕೆ, ಹಾನಿಃ = ಹಾನಿಯು? ಉಚ್ಯತಾಂ = ಹೇಳಲ್ಪಡಲಿ.

**ಅನುವಾದ– ಅಂತಹ ಅನುಮಿತಿ ಸ್ಥಳದಲ್ಲಿ ಅರ್ಥಸತ್ವವು ಇದ್ದರೆ ಸಾಕು. ಅದು ಕಾರಣವಾಗಬೇಕಾಗಿಲ್ಲ. ಹಾಗೆಯೇ ಪ್ರಮೆಯು ಹುಟ್ಟುತ್ತದೆ ಎಂದು ಒಪ್ಪಿದರೆ ಜ್ಞಾನಸಾಮಾನ್ಯಸಾಮಗ್ರಿಯಿಂದಲೇ ಪ್ರಮೆಯು ಉತ್ಪನ್ನವಾಯಿತು ಎಂದಾಯಿತು.**

ಇದನ್ನೇ ಜ್ಞಾನಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಸ್ವತಸ್ತ್ವ ಎಂದು ಹೇಳುತ್ತೇವೆ. ಅದಕ್ಕೆ ಯಾವ ಹಾನಿಯೂ ಉಂಟಾಗುವುದಿಲ್ಲ.

**ಭಾವವಿಲಾಸಿನೀ—**ಪುನಃ ಶಂಕತೇ – **ಗುಣಸ್ಯ ಸತ್ತ್ವಮಾತ್ರೇಣೇತಿ** ॥ ಪ್ರಾಮಾಣ್ಯಂ ಯಾದೃಚ್ಛಿಕಾನುಮಿತೇಃ ಪ್ರಾಮಾಣ್ಯಂ ಗುಣಸ್ಯ ತತ್ರಾರ್ಥಸತ್ತಾರೂಪಗುಣಸ್ಯ ಸತ್ತ್ವಮಾತ್ರೇಣ । ತದಾ ತರ್ಹಿ । ತ್ವಯಾಪಿ ಗುಣಸ್ಯ ಕಾರಣತ್ವಾನಂಗೀಕಾರಾತ್ । ಜ್ಞಾನಸಾಮಾನ್ಯಸಾಮಗ್ರೀಮಾತ್ರಜನ್ಯಾ ಸರ್ವಾಪಿ ಪ್ರಮಾ ಮಮಾಭೂದಿತಿ ಸಂಬಂಧಃ ॥ ೪೪೫ ॥

**ವಿವರಣೆ—** ಯಾದೃಚ್ಛಿಕ ಪ್ರಮಾರೂಪವಾದ ಅನುಮಿತಿಸ್ಥಳದಲ್ಲಿ ಅರ್ಥಸತ್ವವೇನೋ ಇದೆ. ಆದರೆ ಅದು ಕಾರಣವಲ್ಲ ಎಂದು ಒಪ್ಪಿದರೆ ಪ್ರಮಾಸಾಮಾಗ್ರಿಯಲ್ಲಿ ಅರ್ಥಸತ್ವವು ಸೇರಲಿಲ್ಲ ಎಂದಾಯಿತು. ಹಾಗಾದರೆ ಜ್ಞಾನಸಾಮಾನ್ಯಸಾಮಗ್ರಿಯಿಂದಲೇ ಪ್ರಮೆಯು ಉತ್ಪನ್ನವಾಯಿತು ಎಂದಾಯಿತು. ಇದನ್ನೇ 'ಪ್ರಾಮಾಣ್ಯಸ್ವತಸ್ತ್ವ' ಎಂದು ಕರೆಯುವುದು. ನಿನ್ನ ಇಂತಹ ಅಂಗೀಕಾರದಿಂದ ಪ್ರಾಮಾಣ್ಯಸ್ವತಸ್ತ್ವಕ್ಕೆ ಯಾವ ಹಾನಿಯೂ ಬರುವುದಿಲ್ಲ.

**ಈದೃಗ್ಗುಣಾತ್ ಶ್ರುತೀನಾಂ ಚ ಮಾನತಾ ಜಾನತಾಂ ಭವೇತ್ ।**
**ಕೇನ ತಾಸಾಂ ಜನಿಃ ಕಲ್ಪ್ಯಾ ತೇನ ತೇ ಹೀನತಾಪ್ಯಭೂತ್ ॥ ೪೪೬ ॥**

**ಅರ್ಥ—** ಚ = ಮತ್ತು, ಈದೃಗ್ಗುಣಾತ್ = ಹಿಂದೆ ನಿರೂಪಿಸಿದ ಅರ್ಥಸತ್ತೆಯಿಂದಾಗಲೀ, ಅದರ ಪ್ರಮೆಯಿಂದಾಗಲೀ, ಶ್ರುತೀನಾಂ = ಶ್ರುತಿಗಳಿಗೆ, ಮಾನತಾ = ಪ್ರಾಮಾಣ್ಯವು, ಜಾನತಾಂ (ಮತೇ) = ಜ್ಞಾನಿಗಳ ಮತದಲ್ಲಿ, ಭವೇತ್ = ಆದೀತು. ಕೇನ = ಯಾವಕಾರಣದಿಂದ, ತಾಸಾಂ = ಶ್ರುತಿಗಳಿಗೆ, ಜನಿಃ = ಉತ್ಪತ್ತಿಯು, ಕಲ್ಪ್ಯಾ = ಕಲ್ಪಿಸಲ್ಪಡಬೇಕು? ತೇನ = ಹಾಗೆ ಕಲ್ಪಿಸುವುದರಿಂದ, ತೇ = ನಿನಗೆ, ಹೀನತಾ ಅಪಿ = ವಿವೇಕಶೂನ್ಯತೆಯೂ ಕೂಡ, ಅಭೂತ್ = ಉಂಟಾಯಿತು.

**ಅನುವಾದ—** ಇಂತಹ ಗುಣದಿಂದ ಎಂದರೆ ಅರ್ಥಸತ್ವ ಅಥವಾ ಅರ್ಥಸತ್ವಪ್ರಮಾರೂಪವಾದ ಗುಣದಿಂದ ಶ್ರುತಿಗಳಿಗೂ ಪ್ರಾಮಾಣ್ಯವು ವಿವೇಕಿಗಳ ಮತದಲ್ಲಿ ಕೂಡುತ್ತದೆ. ಹೀಗಿರುವಾಗ ಶ್ರುತಿಗಳಿಗೆ ಏಕೆ ಜನ್ಯತ್ವವನ್ನು ಕಲ್ಪಿಸುತ್ತೀಯೇ? ಹಾಗೆ ಮಾಡಿದರೆ ಇಲ್ಲಿ ಪೂರ್ವೋತ್ತರ ವಿವೇಕಶೂನ್ಯತ್ವದಿಂದಾಗಿ ನಿನಗೆ ಹೀನತ್ವವುಂಟಾಗುತ್ತದೆ.

**ಭಾವವಿಲಾಸಿನೀ—**ಕಿಂಚ ತತ್ರ ಸತೋಽರ್ಥಸ್ಯ ವಾ ತತ್ಪ್ರಮಾಯಾ ವಾ ಗುಣತ್ವೇ ಶ್ರುತಿಜನ್ಯಪ್ರಮಾಯಾ ಅಪಿ ಈದೃಶಗುಣೇನೈವ ಪ್ರಮಾತ್ವಸಂಭವಾದಾಪ್ತೋಕ್ತತ್ವ- ಗುಣಸಿದ್ಧ್ಯರ್ಥಂ ಶ್ರುತೀನಾಮನಿತ್ಯತ್ವಕಲ್ಪನಂ ಚ ತವ ಮತೇ ವ್ಯರ್ಥಮಿತ್ಯಾಹ – **ಈದೃಗಿತಿ** ॥ ಈದೃಗ್ಗುಣಾದರ್ಥಸತ್ತಾದಿರೂಪಗುಣಾಚ್ಛ್ರುತೀನಾಂ ಚ ಮಾನತಾ ಜಾನತಾಂ ಮತೇ ಭವೇತ್ । ತತಶ್ಚ ಕೇನ

**ಕಾರಣೇನ ತಾಸಾಂ ಜನಿರುತ್ತಿಃ ಕಲ್ಪ್ಯೇತಿ ಸಂಬಂಧಃ । ಆಪ್ತೋಕ್ತತ್ವಸ್ಯೈವ ಗುಣತ್ವೇ ಹಿ ತತ್ ಕಲ್ಪ್ಯಮ್ । ಅರ್ಥಸತ್ತಾದೇರಪಿ ಗುಣತ್ವೇ ವೃಥಾ ತತ್ಕಲ್ಪನೇತಿ ಭಾವಃ । ತೇನ ನಿರ್ನಿಮಿತ್ತಂ ಶ್ರುತೀನಾಮುತ್ಪತ್ತ್ಯಂಗೀಕಾರೇಣ ಹೀನತಾ ಪೂರ್ವೋತ್ತರವಿವೇಕಹೀನತಾಽಪಿ ತೇಽಭೂದಿತ್ಯರ್ಥಃ ।। ೪೪೬ ।।**

**ವಿವರಣೆ–** ತಾರ್ಕಿಕರು ವೇದಕ್ಕೆ ಪ್ರಾಮಾಣ್ಯವನ್ನು ಒಪ್ಪುತ್ತಾರೆ. ಆದರೆ ಪ್ರಾಮಾಣ್ಯವು ಈ ಸ್ಥಳದಲ್ಲಿ ಆಪ್ತೋಕ್ತತ್ವರೂಪಗುಣಜನ್ಯವೆಂದೇ ಅವರ ಅಂಗೀಕಾರ. ಇಲ್ಲದಿದ್ದರೆ ವೇದಕ್ಕೆ ಪ್ರಾಮಾಣ್ಯವು ಸಿದ್ಧಿಸುವುದಿಲ್ಲವೆಂದು ತಿಳಿದು ಅವರು ಆಪ್ತನಾದ ಈಶ್ವರನಿಂದ ಸೃಷ್ಟವಾದುದರಿಂದ ವೇದಗಳು ಅನಿತ್ಯ ಮತ್ತು ಆದರೂ ಪ್ರಮಾಣ ಎಂದು ಅಂಗೀಕರಿಸುತ್ತಾರೆ. ಇದನ್ನು ವಾದಿರಾಜರು ಈ ಶ್ಲೋಕದಲ್ಲಿ ಆಕ್ಷೇಪಿಸುತ್ತಾರೆ. ನಿನ್ನ ಅಂಗೀಕಾರದಂತೆ ಶಬ್ದಪ್ರಾಮಾಣ್ಯವುಂಟಾಗಬೇಕಾದರೆ ಅರ್ಥಸತ್ವವಾಗಲೀ, ಅರ್ಥಸತ್ತ್ವ ಪ್ರಮೆಯಾಗಲೀ ಸಾಕು. ವೇದಗಳ ವಿಷಯದಲ್ಲಿಯೂ ಸಹ ಇಂತಹ ಅರ್ಥಸತ್ವವಿರುವುದರಿಂದ ಅಥವಾ ಈಶ್ವರನಿಗೆ ಅರ್ಥಸತ್ತ್ವಪ್ರಮೇಯು ಇರುವುದರಿಂದ ವೇದಗಳು ಪ್ರಮಾಣವೆಂದು ಸಿದ್ಧವಾಗುತ್ತದೆ. ಆಪ್ತೋಕ್ತತ್ತ್ವವಿಲ್ಲದೆಯೂ ವೇದಗಳಿಗೆ ಪ್ರಾಮಾಣ್ಯವನ್ನು ಸಮರ್ಥನೆ ಮಾಡಲು ಬರುವಾಗ ಆಪ್ತೋಕ್ತತ್ತ್ವವನ್ನು ಒಪ್ಪಿ ಅದರಿಂದ ವೇದಗಳಿಗೆ ಜನ್ಯತ್ವವನ್ನು ಹೇಳುವುದು ವಿವೇಕಶೂನ್ಯವಾದ ವಿಚಾರ ಎಂದು ಅಭಿಪ್ರಾಯ.

**ಅನುಭೂತಾರೋಪಕಾಲೇ ಗುರ್ವೀ ಸಾಪ್ಯಸ್ತಿ ತೇ ಮತೇ ।**
**ಲಘುಶ್ಚ ಪಕ್ಷೋ ಹಂತಿ ತ್ವಾಂ ಗುರುಶ್ಚಾಪಿ ನಿಹಂತ್ಯಹೋ ।। ೪೪೭ ।।**

**ಅರ್ಥ–** ತೇ = ನಿನ್ನ ಮತೇ = ಮತದಲ್ಲಿ, ಅನುಭೂತಾರೋಪಕಾಲೇ = ಗೃಹ್ಯಮಾಣಾರೋಪಮಾಡುವ ಸಮಯದಲ್ಲಿ, ಗುರ್ವೀ = ಗುರುಭೂತವಾದ, ಸಾ ಅಪಿ = ಅಂತಹ ಈಶಪ್ರಮೆಯೂ ಕೂಡ, ಅಸ್ತಿ = ಇದೆ. ತ್ವಾಂ = ನಿನ್ನನ್ನು, ಲಘುಃ = ಲಘುವಾದ, ಪಕ್ಷಃ ಚ = ಪಕ್ಷವೂ ಕೂಡ, ಹಂತಿ = ಕೊಲ್ಲುತ್ತದೆ. ಚ = ಮತ್ತು, ಗುರುಃ ಚ = ಗುರುಪಕ್ಷವೂ ಕೂಡ, ನಿಹಂತಿ = ಕೊಲ್ಲುತ್ತದೆ. ಅಹೋ = ಆಶ್ಚರ್ಯವು.

**ಅನುವಾದ– ವಸ್ತುವು ಬೇರೊಂದು ಕಡೆ ಇರುವುದೇ ಗುಣವೆಂದು ಹೇಳಿದರೆ ಅಥವಾ ಬೇರೊಂದು ಕಡೆ ಇರುವ ವಸ್ತುವಿನ ಯಥಾರ್ಥಜ್ಞಾನವು ಗುಣವೆಂದು ಹೇಳಿದರೂ ಸಹ ಗೃಹ್ಯಮಾಣಾರೂಪಸ್ಥಳದಲ್ಲಿ ಅವೆರಡೂ ನಿನ್ನ ಮತದ ರೀತಿಯಲ್ಲಿಯೂ ಇವೆ. ಆದ್ದರಿಂದ ಲಘುವಾದ ಪಕ್ಷವು ನಿನಗೆ ಹಾನಿಯನ್ನುಂಟು ಮಾಡುತ್ತದೆ. ಗುರುವಾದ ಪಕ್ಷವೂ ನಿನಗೆ ಹಾನಿಯನ್ನುಂಟು ಮಾಡುತ್ತದೆ.**

**ಭಾವವಿಲಾಸಿನೀ**—ಅಧುನಾ ತತ್ರ ಸತೋಽರ್ಥಸ್ಯ ಪ್ರಮಾ ಗುಣ ಇತಿಗೌರವಗ್ರಸ್ತ-ಪಕ್ಷಾಂಗೀಕಾರೇಽಪಿ ತಾರ್ಕಿಕಮತೇ ಭ್ರಮಸಾಧಾರಣ್ಯಮೇವೇತ್ಯಾಹ – **ಅನುಭೂತೇತಿ** ॥ ಸಾ ತತ್ರ ಸತೋಽಪ್ಯರ್ಥಸ್ಯ ಪ್ರಮಾ । ಲಘುಶ್ಚ ಪಕ್ಷಃ ಅರ್ಥಸತ್ತಾಯಾ ಗುಣತ್ವಪಕ್ಷಃ । ಗುರುಶ್ಚಾರ್ಥಸತ್ತಾ ಪ್ರಮಾಯಾ ಗುಣತ್ವಪಕ್ಷಶ್ಚ । (ನಾಪಿ ಪ್ರತೀಯಮಾನ-ವಿಶೇಷ್ಯಾಭಿನ್ನಸದರ್ಥೋ ವಾ ತತ್ಪ್ರಮಾ ವಾ ಗುಣಃ । ಯಾದೃಚ್ಛಿಕಸಂವಾದ್ಯನುಮಿತಾವೇವ ಭಾವೇನ ಪ್ರಕೃತಾನುಪಯೋಗಾತ್ । ಅರ್ಥಪದೇನ ವಿಶೇಷ್ಯಸ್ಯೈವ ಗ್ರಹೇ ರಜತಭ್ರಮೇಽತಿಪ್ರಸಂಗತಾದವಸ್ಥ್ಯಮ್) (ಪ್ರಕ್ಷಿಪ್ತೋಽಯಂ ಗ್ರಂಥಃ) । ಅಭಿನ್ನಪದಸ್ಥಾನೇ ನಿಷ್ಠಪದದಾನೇಽಪಿ ರಜತಾಧಾರಶುಕ್ತಿಶಕಲೇ ಜಾಯಮಾನಾನುಭೂಯಮಾನಾ-ರೋಪೇಽತಿಪ್ರಸಂಗತಾದವಸ್ಥ್ಯಮೇವ ॥

**ವಿವರಣೆ**— ಭ್ರಾಂತಿಯು ಎರಡು ವಿಧ. ಸ್ಮರಣಕ್ಕೆ ವಿಷಯವಾದ ವಸ್ತುವಿನ ಆರೋಪ ಮತ್ತು ಅನುಭವಕ್ಕೆ ವಿಷಯವಾದ ವಸ್ತುವಿನ ಆರೋಪ ಎಂದು. ಸ್ಮರ್ಯಮಾಣಾರೋಪಸ್ಥಳದಲ್ಲಿ ಆರೋಪ್ಯಮಾಣವಾದುದು ಅಧಿಷ್ಠಾನದೇಶದಲ್ಲಿರದೇ ಬೇರೆ ದೇಶದಲ್ಲಿರುತ್ತದೆ. ಅನುಭವಕ್ಕೆ ವಿಷಯವಾದ ವಸ್ತುವಿನ ಆರೋಪದಲ್ಲಿ ಮಾತ್ರ ಆರೋಪ್ಯಮಾನವಾದುದು ಅಧಿಷ್ಠಾನದೇಶದಲ್ಲಿಯೇ ಇದೆ. ಶಂಖಪೀತಿಮಾರೋಪ ಗುಡತಿಕ್ತತಾರೋಪ ಇವು ಗೃಹ್ಯಮಾಣಾರೋಪಕ್ಕೆ ಉದಾಹರಣೆಗಳು. ಅಲ್ಲಿ ಶಂಖವಿದ್ದ ಕಡೆಯೇ ಪೀತವರ್ಣವೂ ಇದೆ. ಬೆಲ್ಲವಿದ್ದ ಕಡೆ ಕಹಿರಸವೂ ಇದೆ. ಆದ್ದರಿಂದ ಅರ್ಥಸತ್ವವೂ ಇದೆ. ಅರ್ಥಸತ್ವಪ್ರಮೆಯೂ ಇದೆ. ಅರ್ಥಸತ್ವವು ಲಘುಭೂತವಾದುದು, ಅರ್ಥಸತ್ವಪ್ರಮೆಯು ಗುರುಭೂತವಾದುದು. ಲಘುಭೂತವಾದ ಪಕ್ಷವನ್ನು ಒಪ್ಪಿದರೂ ನಿನ್ನ ಮತಕ್ಕೆ ಹಾನಿಯಾಗುತ್ತದೆ. ಗುರುಭೂತವಾದ ಪಕ್ಷವನ್ನು ಒಪ್ಪಿದರೂ ನಿನ್ನ ಮತಕ್ಕೆ ಹಾನಿಯಾಗುತ್ತದೆ. ಏಕೆಂದರೆ ಪ್ರಮೆಗೆ ಕಾರಣವೆಂದು ನೀನು ಒಪ್ಪುವ ಗುಣವು ಭ್ರಮಸ್ಥಳದಲ್ಲಿಯೂ ಇರುವುದರಿಂದ ವ್ಯಭಿಚಾರಿಯಾಗುವುದರಿಂದ ಅದು ಪ್ರಮೆಗೆ ಕಾರಣವಾಗುವುದಿಲ್ಲ.

ಉಪಾದಾನಾಪರೋಕ್ಷತ್ವೇನೈವ ಸಾ ಕಾರಣಂ ಕಿಲ ॥ ೪೪೮ ॥

**ಅರ್ಥ**— ಸಾ = ಆ ಈಶ್ವರಪ್ರಮೆಯು, ಉಪಾದಾನಾಪರೋಕ್ಷತ್ವೇನೈವ = ಉಪಾದಾನ-ವಿಷಯಕ ಅಪರೋಕ್ಷಜ್ಞಾನತ್ವರೂಪದಿಂದಲೇ, ಕಾರಣಂ ಕಿಲ = ಕಾರಣವಷ್ಟೇ.

**ಅನುವಾದ**— ಈಶ್ವರಜ್ಞಾನವು ಉಪಾದಾನಾಪರೋಕ್ಷಜ್ಞಾನತ್ವರೂಪದಿಂದಲೇ ಕಾರಣವಷ್ಟೇ.

**ಭಾವವಿಲಾಸಿನೀ**—ಯುಕ್ತಿಸಂಚಾರಾಯೈತಾವಚ್ಚರ್ಚಿತಂ ವಸ್ತುತಸ್ತು ತಾರ್ಕಿಕೇಣೇಶ್ವರಜ್ಞಾನಸ್ಯ ಗುಣತಾ ವಕ್ತುಂ ನ ಶಕ್ಯತ ಇತ್ಯಾಹ – **ಉಪಾದಾನೇತಿ** ॥ ಉಪಾದಾನಾಪರೋಕ್ಷಜ್ಞಾನತ್ವೇನೇಶ್ವರ-

ಪ್ರಮಾಕಾರಣಂ ತತ್ತತ್ಕಾರ್ಯಕಾರಣಮ್ । ಕಿಲೇತ್ಯನೇನೋಪಾದಾನಾಪರೋಕ್ಷಜ್ಞಾನ-ಚಿಕೀರ್ಷಾ ಕೃತಿಮಜ್ಞಾನೀತಿ ತದೀಯಪ್ರಕ್ರಿಯಾಂ ಸೂಚಯತಿ ॥ ೪೪೮ ॥

**ವಿವರಣೆ–** ಯುಕ್ತಿಯಿಂದ ವಿಮರ್ಶೆಮಾಡುವ ಸಲುವಾಗಿ ಇದುವರೆಗೆ ಈಶ್ವರಜ್ಞಾನವು ಗುಣ ಎಂಬ ಪಕ್ಷವನ್ನು ಚರ್ಚಿಸಿದೆವು. ಆದರೆ ತಾರ್ಕಿಕರು ಈಶ್ವರಜ್ಞಾನವನ್ನು ಗುಣವೆಂದು ಹೇಳಲು ಬರುವುದಿಲ್ಲ. ಏಕೆಂದರೆ ಕಾರ್ಯಮಾತ್ರವನ್ನು ಕುರಿತು ಈಶ್ವರಜ್ಞಾನವು ಉಪಾದಾನವಿಷಯಕ ಅಪರೋಕ್ಷಜ್ಞಾನತ್ವೇನ ಕಾರಣ ಎಂದು ಅಂಗೀಕರಿಸುತ್ತಾರೆ. ಅವರ ಕಾರ್ಯತ್ವಾನುಮಾನರೀತಿಯೂ ಹಾಗೆಯೇ ಇದೆ. ಆದ್ದರಿಂದ ಅರ್ಥಪ್ರಮಾರೂಪವಾಗಲೀ ಅಥವಾ ಅರ್ಥಸತ್ವಪ್ರಮಾರೂಪವಾಗಿಯೇ ಆಗಲಿ ಈಶ್ವರಜ್ಞಾನವು ಪ್ರಮೇಯನ್ನು ಕುರಿತು ಕಾರಣವಾಗಲು ಸಾಧ್ಯವಿಲ್ಲ.

**ಕರ್ತೃಜ್ಞಾನಂ ತಥೈವಾನುತ್ಪನ್ನಕಾರ್ಯೇಷು ಕಾರಣಮ್ ।**
**ನ ಚೇತ್ ಘಟಾದಿಕರ್ತೃತ್ವಂ ಕುಲಾಲಸ್ಯ ನ ಶೋಭತೇ ॥ ೪೪೯ ॥**

**ಅರ್ಥ–** ಅನುತ್ಪನ್ನಕಾರ್ಯೇಷು = ಮುಂದೆ ಹುಟ್ಟಲಿರುವ ಕಾರ್ಯಗಳಲ್ಲಿ ಕರ್ತೃಜ್ಞಾನಂ = ಕರ್ತೃವಿನ ಜ್ಞಾನವು, ತಥೈವ = ಉಪಾದಾನವಿಷಯಕ ಪ್ರತ್ಯಕ್ಷಜ್ಞಾನತ್ವ-ರೂಪದಿಂದಲೇ, ಕಾರಣಂ = ಕಾರಣವು, ನ ಚೇತ್ = ಇದನ್ನೊಪ್ಪದಿದ್ದರೆ, ಕುಲಾಲಸ್ಯ = ಕುಂಬಾರನಿಗೆ, ಘಟಾದಿಕರ್ತೃತ್ವಂ = ಘಟಾದಿಕರ್ತೃತ್ವವು, ನ ಶೋಭತೇ = ಶೋಭಿಸುವುದಿಲ್ಲ.

**ಅನುವಾದ–** ಇನ್ನೂ ಹುಟ್ಟದಿರುವ ಮುಂದೆ ಹುಟ್ಟಲಿರುವ ಕಾರ್ಯಗಳನ್ನು ಕುರಿತು ಕರ್ತೃಜ್ಞಾನವು ಉಪಾದಾನವಿಷಯಕಜ್ಞಾನತ್ವೇನ ಕಾರಣವೆಂದೇ ಅಂಗೀಕರಿಸಬೇಕು. ಇಲ್ಲದಿದ್ದರೆ ಕುಂಬಾರ ಮೊದಲಾದವರಿಗೆ ಘಟಕರ್ತೃತ್ವವು ಹೊಂದುವುದಿಲ್ಲ.

**ಭಾವವಿಲಾಸಿನೀ–**ಯುಕ್ತಿಮಪ್ಯಾಹ – **ಕರ್ತೃಜ್ಞಾನಮಿತಿ** ॥ ಕರ್ತೃಜ್ಞಾನಂ ಕರ್ತುರ್ಜ್ಞಾನಂ ತಥೈವೋಪಾದಾನಾಪರೋಕ್ಷಜ್ಞಾನತ್ವೇನೈವ । ಅನುತ್ಪನ್ನಕಾರ್ಯೇಷು ಪೂರ್ವಮನುತ್ಪನ್ನಾನಿ ಪಶ್ಚಾದುತ್ಪತ್ಸ್ಯಮಾನಾನಿ ವಾ ಘಟಾದಿಕಾರ್ಯಾಣಿ ತೇಷ್ವಿತ್ಯರ್ಥಃ । ನ ಚೇದ್ ಉಪಾದಾನಾಪರೋಕ್ಷಜ್ಞಾನತ್ವೇನ ಕರ್ತೃಜ್ಞಾನಂ ಕಾರಣಂ ನಚೇದಿತ್ಯರ್ಥಃ । ಕುಲಾಲಸ್ಯ ಘಟಾದಿಕರ್ತೃತ್ವಂ ನ ಶೋಭತೇ । ಅನುತ್ಪನ್ನಘಟಾದಿಕಾರ್ಯಾಪರೋಕ್ಷಾಸಂಭವೇನ ಮೃದಾದ್ಯಪರೋಕ್ಷ- ಜ್ಞಾನೇನೈವ ತಸ್ಯ ಕರ್ತೃತ್ವಾವಶ್ಯಮ್ಭಾವಾದಿತಿ ಭಾವಃ ॥ ೪೪೯ ॥

**ವಿವರಣೆ–** ಕುಂಬಾರನು ಘಟಕ್ಕೆ ಕರ್ತೃರೂಪನಾದ ಕಾರಣ ಎಂದು ಪ್ರಸಿದ್ಧವಾಗಿದೆ. ಕರ್ತೃವಿನ ಜ್ಞಾನವೂ ಕಾರ್ಯವನ್ನು ಕುರಿತು ಕಾರಣ. ಇದರಲ್ಲಿ ವಿವಾದ ಕರ್ತೃವಿನ

ಎಂತಹ ಜ್ಞಾನವು ಕಾರ್ಯವನ್ನು ಕುರಿತು ಕಾರಣ? ಕಾರ್ಯವಿಷಯಕ ಅಪರೋಕ್ಷಜ್ಞಾನವು ಕಾರಣವೋ, ಅಥವಾ ಉಪಾದಾನವಿಷಯಕ ಅಪರೋಕ್ಷಜ್ಞಾನವು ಕಾರಣವೋ ಎಂದು ವಿಮರ್ಶೆ ಮಾಡಿದರೆ, ಕುಂಬಾರನು ಘಟವನ್ನು ಮಾಡುವಾಗ ಇನ್ನೂ ಕಾರ್ಯರೂಪವಾದ ಘಟವು ಉತ್ಪನ್ನವೇ ಆಗಿಲ್ಲ. ಆದ್ದರಿಂದ ಕಾರ್ಯವಾದ ಘಟದ ಅಪರೋಕ್ಷಜ್ಞಾನವು ಕಾರ್ಯೋತ್ಪತ್ತಿಗಿಂತ ಮುಂಚೆ ಅವನಿಗೆ ಇರಲು ಸಾಧ್ಯವಿಲ್ಲ. ಮಣ್ಣಿನ ಅಪರೋಕ್ಷಜ್ಞಾನ ಮಾತ್ರ ಇದೆ. ಮಣ್ಣು ಘಟವನ್ನು ಕುರಿತು ಉಪಾದಾನ ಕಾರಣ. ಆದ್ದರಿಂದ ಕುಲಾಲನ ಜ್ಞಾನವು ಉಪಾದಾನವಿಷಯಕ ಅಪರೋಕ್ಷಜ್ಞಾನತ್ವೇನ ಘಟವನ್ನು ಕುರಿತು ಕಾರಣ ಎಂದು ಒಪ್ಪಬೇಕು. ಹಾಗೆಯೇ ಈಶ್ವರನಿಗೆ ಎಲ್ಲವನ್ನೂ ಕುರಿತು ಕರ್ತೃತ್ವವಿರುವುದರಿಂದ ಸರ್ವವಿಷಯಗಳಲ್ಲಿಯೂ ಉಪಾದಾನವಿಷಯಕ ಅಪರೋಕ್ಷಜ್ಞಾನತ್ವೇನ ಕಾರಣತ್ವವನ್ನು ಹೇಳಬೇಕು. ಉಪಾದಾನವಿಷಯಕ ಅಪರೋಕ್ಷಜ್ಞಾನತ್ವೇನ ಮತ್ತು ಅರ್ಥಸತ್ವಪ್ರಮಾತ್ವೇನ ಎಂದು ಎರಡೆರಡು ರೀತಿಯಲ್ಲಿ ಕಾರಣತ್ವವನ್ನು ಹೇಳಲು ಬರುವುದಿಲ್ಲ.

> ಜ್ಞಾನೋಪಾದನಮಾತ್ಮಾ ತೇ ತದ್ಧೀತ್ವೇನೈಶ್ವರೀ ಮತಿಃ ।
> ಕಾರಣಂ ಸ್ಯಾದರ್ಥಧೀತ್ವೇನಾಪಿ ಹೇತುತ್ವಕಲ್ಪನಮ್ ।
> ತ್ವಚ್ಛಾಸ್ತ್ರಗೌರವಾಯೈವ ಭಾರಸ್ತೇ ಗೌರವಾಯ ನ ॥ ೪೫೦ ॥

**ಅರ್ಥ–** ತೇ = ನಿನಗೆ, ಆತ್ಮಾ = ಆತ್ಮನು, ಜ್ಞಾನೋಪಾದಾನಂ = ಜ್ಞಾನಕ್ಕೆ ಉಪಾದಾನಕಾರಣನು. ಐಶ್ವರೀ ಮತಿಃ = ಈಶ್ವರನ ಪ್ರತ್ಯಕ್ಷವು, ತದ್ಧೀತ್ವೇನ = ಆತ್ಮ (ಉಪಾದಾನ) ವಿಷಯಕಪ್ರತ್ಯಕ್ಷತ್ವೇನ, ಕಾರಣಂ ಸ್ಯಾತ್ = ಕಾರಣವಾದೀತು. ಅರ್ಥಧೀತ್ವೇನ ಅಪಿ= ಅರ್ಥವಿಷಯಕಪ್ರತ್ಯಕ್ಷರೂಪದಿಂದಲೂ ಕೂಡ, ಹೇತುತ್ವಕಲ್ಪನಂ = ಕಾರಣತ್ವವನ್ನು ಕಲ್ಪಿಸುವುದು, ತ್ವಚ್ಛಾಸ್ತ್ರಗೌರವಾಯ = ನಿನ್ನ ಶಾಸ್ತ್ರದ ವಿಸ್ತಾರಕ್ಕೆ ಕಾರಣವಾಗಿ, ಭಾರಃ = ಹೊರೆಯಾಯಿತು. ತೇ = ನಿನ್ನ ಗೌರವಾಯ ನ = ಮರ್ಯಾದೆಗೆ ಕಾರಣವಾಗಲಿಲ್ಲ.

**ಅನುವಾದ–** ನಿನ್ನ (ತಾರ್ಕಿಕರ) ಮತದಲ್ಲಿ ಆತ್ಮನು ಜ್ಞಾನಕ್ಕೆ ಉಪಾದಾನ. ಆದ್ದರಿಂದ ಜ್ಞಾನವು ಉತ್ಪನ್ನವಾಗುವಾಗ ಉಪಾದಾನವಾದ ಆತ್ಮನ ಅಪರೋಕ್ಷಜ್ಞಾನವನ್ನು ಈಶ್ವರನಿಗೆ ಒಪ್ಪಬೇಕು. ಜ್ಞಾನಕ್ಕೆ ಉಪಾದಾನನಾದ ಆತ್ಮನ ಅಪರೋಕ್ಷ ಜ್ಞಾನದ ರೂಪದಿಂದ ಮತ್ತು ವಸ್ತುವಿನ ಜ್ಞಾನದ ರೂಪದಿಂದ ಕಾರಣತ್ವವನ್ನು ಒಪ್ಪಿದರೆ ಕಲ್ಪನಾಗೌರವವು ಉಂಟಾಗುತ್ತದೆ. ಈ ಭಾರವು ನಿನ್ನ ಶಾಸ್ತ್ರವನ್ನು ಮುಳುಗಿಸುತ್ತದೆ. ನಿನಗೆ ಗೌರವವನ್ನು ತರುವುದಿಲ್ಲ.

**ಭಾವವಿಲಾಸಿನೀ–ಅಸ್ತೂಕ್ತವಿಧಯೈವ ಕರ್ತೃತಾ, ತಥಾಪಿ ಪ್ರಕೃತೇ ಕಿಮಾಯಾತಮ್? ಇತ್ಯತ ಆಹ – ಜ್ಞಾನೋಪಾದಾನಮಿತಿ ॥ ತೇ ಮತೇ ಆತ್ಮಾ ಜೀವಃ ಜ್ಞಾನೋಪಾದಾನಮ್ । ತದ್ಧೀತ್ವೇನ**

ಜ್ಞಾನೋಪಾದಾನಾತ್ಮಗೋಚರಧೀತ್ವೇನ । ಸಾ ಚ ನ ಗುಣೋ ಭ್ರಮಸಾಧಾರಣತ್ವಾದಿತಿ ಭಾವಃ । ತ್ವಚ್ಛಾಸ್ತ್ರಗೌರವಾಯ ತವ ಶಾಸ್ತ್ರವಿಸ್ತಾರಾಯ ಭಾರಃ ಅಪ್ರಾಮಾಣಿಕಕಲ್ಪನಾ-ರೂಪತ್ವೇನ ಭಾರವಮ್। ಏತಾದೃಶಾ ಪ್ರಾಮಾಣಿಕಾರ್ಥನಿರೂಪಣಾರ್ಥಂ ಶಾಸ್ತ್ರಮೇವ ಬಹುಕೃತಂ ಸ್ಯಾತ್ । ತೇ ತವ ಗೌರವಾಯ ನ । ಗೌರವಗ್ರಸ್ತಪ್ರಮೇಯನಿರೂಪಣೇನ ತ್ವಂ ವಿದ್ವಜ್ಜನಮಧ್ಯೇ ಲಘುಃ ಸ್ಯಾ ಇತಿ ಭಾವಃ ॥ ೪೫೦ ॥

**ವಿವರಣೆ–** ತಾರ್ಕಿಕಮತದಲ್ಲಿ ಆತ್ಮನು ಜ್ಞಾನೋಪದಾನ. ಉಪಾದಾನ ವಿಷಯಕ ಅಪರೋಕ್ಷಜ್ಞಾನತ್ವೇನ ಕಾರಣತ್ವವನ್ನು ಹೇಳಿ ಅಂತಹ ಈಶ್ವರಜ್ಞಾನವು ಗುಣ ಎಂದು ಒಪ್ಪಿದರೆ ಅದು ಭ್ರಮಸ್ಥಳದಲ್ಲಿಯೂ ಇದೆ. ಆದ್ದರಿಂದ ಇಂತಹ ಅಪ್ರಾಮಾಣಿಕ ವಸ್ತುಗಳನ್ನು ಅಂಗೀಕಾರ ಮಾಡಿದರೆ ನಿನ್ನ ಶಾಸ್ತ್ರಕ್ಕೆ ಕಲ್ಪನಾಗೌರವ ರೂಪವಾದ ದೋಷವು ಬರುತ್ತದೆ. ಗೌರವಗ್ರಸ್ತವಾದ ವಿಷಯವು ವಿದ್ವತ್ ಜನರಿಗೆ ಮಾನ್ಯವಾಗುವುದಿಲ್ಲ.

**ಪುಂನಿಷ್ಠಸ್ತು ಗುಣೋ ಲೋಕೇ ಪುಂಸಿ ತಜ್ಞಾನಧರ್ಮಿಣಿ ।**
**ಗುಣೋಽನ್ಯತ್ರಾನುಮಾನ್ಯತ್ರ ಚಿತ್ರಂ ಶಾಸ್ತ್ರಪ್ರವರ್ತನಮ್ ॥ ೪೫೧ ॥**

**ಅರ್ಥ–** ಲೋಕೇ = ಲೋಕದಲ್ಲಿ, ಪುಂನಿಷ್ಠಸ್ತು ಗುಣಃ = ಪುರುಷನಲ್ಲಿರುವಂತಹ ಗುಣವು, ತಜ್ಞಾನಧರ್ಮಿಣಿ = ಆ ಜ್ಞಾನಕ್ಕೆ ಆಶ್ರಯನಾಗಿರುವಂತಹ, ಪುಂಸಿ = ಪುರುಷನಲ್ಲಿ (ಕಂಡಿದೆ), ಗುಣಃ = ಯಥಾರ್ಥಜ್ಞಾನವು, ಅನ್ಯತ್ರ = ಪರಮಾತ್ಮನಲ್ಲಿ, ಅನುಮಾ = ಅನುಮಿತಿಯು, ಅನ್ಯತ್ರ = ಜೀವನಲ್ಲಿ (ಎಂದು), ಶಾಸ್ತ್ರಪ್ರವರ್ತನಮ್ = ಶಾಸ್ತ್ರವನ್ನು ಹೇಳುವ ರೀತಿಯು, ಚಿತ್ರಂ = ಆಶ್ಚರ್ಯಕರವಾದುದ್ದು.

**ಅನುವಾದ–** ಎಲ್ಲಿ ಜ್ಞಾನವುಂಟಾಗುತ್ತದೆಯೋ, ಅಲ್ಲಿಯೇ ಇರುವ ಧರ್ಮವು ಲೋಕದಲ್ಲಿ ಗುಣವೆಂದು ಕರೆಸಿಕೊಳ್ಳಲ್ಪಡುತ್ತದೆ. ಆದರೆ ನಿನಗೆ ಮಾತ್ರ ಯಾದೃಚ್ಛಿಕಸಂವಾದಿಯಾದ ಅನುಮಿತಿಸ್ಥಳದಲ್ಲಿ ಅನುಮಿತಿಯಿರುವುದು ಚೈತ್ರಾದಿಜೀವನಲ್ಲಿ. ಆ ಅನುಮಿತಿಗೆ ಕಾರಣವಾದ ಈಶ್ವರ ಪ್ರಮಾರೂಪವಾದ ಗುಣವು ಇರುವುದು ಈಶ್ವರನಲ್ಲಿ. ಆದ್ದರಿಂದ ನಿನ್ನ ಶಾಸ್ತ್ರದ ಪ್ರವರ್ತನೆಯು ವಿಚಿತ್ರವಾಗಿದೆ.

**ಭಾವವಿಲಾಸಿನೀ–** ಈಶ್ವರಪ್ರಮಾಯಾ ಗುಣತ್ವಕಥನೇಽದೃಷ್ಟಕಲ್ಪನಾ ಚೇತ್ಯಾಹ – **ಪುನ್ನಿಷ್ಠ ಇತಿ** ॥ ಲೋಕೇಽಜನಾದಿಗುಣಃ ತಜ್ಞಾನಧರ್ಮಿಣಿ। ಅಂಜನಜನ್ಯಜ್ಞಾನವತಿ ಪುಂಸಿ ಪುರುಷೇ ಪುನ್ನಯನ ಇತ್ಯರ್ಥಃ । ಪ್ರಕೃತೇ ತು ಗುಣೋ ಗ್ರಾಹ್ಯಪ್ರಮಾಲಕ್ಷಣೋ ಗುಣಃ ಅನ್ಯತ್ರೇಶ್ವರೇ । ಅನುಮಾ ಯಾದೃಚ್ಛಿಕಾನುಮಾ ಅನ್ಯತ್ರಾನುಮಾತರಿ ಪುರುಷೇ । ತಥಾಚ ಚಿತ್ರಂ ಶಾಸ್ತ್ರಪ್ರವರ್ತನಮಿತಿ ಸಂಬಂಧಃ। ತಥಾ ಸತಿ ದೇವದತ್ತನಯನಗುಣೇನ ಯಜ್ಞದತ್ತಸ್ಯ ಪ್ರಮಾ ಸ್ಯಾದಿತಿ ಭಾವಃ ॥೪೫೧॥

**ವಿವರಣೆ–** ಈಶ್ವರಪ್ರಮೆಯು ಗುಣವೆಂದು ಕಲ್ಪನೆ ಮಾಡಿದರೆ, ಅದು ಅದೃಷ್ಟಕಲ್ಪನೆಯೆಂದು ಈ ಶ್ಲೋಕದಲ್ಲಿ ಉಪಪಾದನೆ ಮಾಡುತ್ತಾರೆ. ಲೋಕದಲ್ಲಿ ಅಂಜನಾದಿಗಳನ್ನು ಹಾಕಿಕೊಂಡು ಯಾವ ಪುರುಷನು ವಿಶೇಷಜ್ಞಾನವನ್ನು ಸಂಪಾದನೆ ಮಾಡುತ್ತಾನೆಯೋ, ಅಂತಹವನಿಗೆ ಆ ವಿಶೇಷಜ್ಞಾನಕ್ಕೆ, ಅಥವಾ ಜ್ಞಾನದ ವಿಶೇಷತೆಗೆ ಕಾರಣವಾದ ಅಂಜನವು ಅವನ ಕಣ್ಣಿನಲ್ಲಿಯೇ ಇದೆ. ಆದರೆ ನೀನು ಮಾತ್ರ ಯಾದೃಚ್ಛಿಕಸಂವಾದಿಯಾದ ಅನುಮಿತಿಯು ಚೈತ್ರನಿಗೆ ಬರುತ್ತದೆ. ಅದಕ್ಕೆ ಕಾರಣವಾದ ಗುಣವು ಮಾತ್ರ ಈಶ್ವರನಲ್ಲಿದೆಯೆಂದು ಹೇಳುತ್ತೀಯೇ. ಇದು ಅದೃಷ್ಟ ಕಲ್ಪನೆ.

**ಸರ್ವಜ್ಞೇಶಪ್ರಮಾ ನೃಣಾಂ ಗುಣಶ್ಚೇತ್ ಕ್ವ ಭ್ರಮೋ ಭವೇತ್ ।**
**ಗುಣೇ ಸತಿ ಪ್ರಮಾಽವಶ್ಯಂಭಾವಾದ್ದೋಷವಿರೋಧಿನಿ ॥ ೪೫೨ ॥**

**ಅರ್ಥ–** ಸರ್ವಜ್ಞೇಶಪ್ರಮಾ = ಸರ್ವಜ್ಞನಾದ ಪರಮಾತ್ಮನ ಯಥಾರ್ಥಜ್ಞಾನವು, ಗುಣಶ್ಚೇತ್ = ಗುಣದಿಂದಾಗುವದಾದರೆ, ನೃಣಾಂ = ಮನುಷ್ಯರಿಗೆ, ಭ್ರಮಃ = ಭ್ರಮೆಯು, ಕ್ವ ಭವೇತ್ = ಎಲ್ಲಿ ಉಂಟಾದೀತು? ದೋಷವಿರೋಧಿನಿ = ದೋಷಕ್ಕೆ ವಿರೋಧಿಯಾದ, ಗುಣೇ ಸತಿ = ಗುಣವು ಇರುತ್ತಿರಲು, ಪ್ರಮಾಽವಶ್ಯಂಭಾವಾತ್ = ಯಥಾರ್ಥಜ್ಞಾನವು ನಿಶ್ಚಿತವಾಗಿಯೂ ಬರಬೇಕಾಗುತ್ತದೆ.

**ಅನುವಾದ–** ಸರ್ವಜ್ಞನಾದ ಈಶ್ವರಪ್ರಮೆಯು ಎಲ್ಲ ಜ್ಞಾನಸ್ಥಳದಲ್ಲಿಯೂ ಇದೆ. ಆದ್ದರಿಂದ ಜೀವನಿಗೆ ಎಲ್ಲಿ ಭ್ರಮೆಯು ಬರಲು ಸಾಧ್ಯ? ಈಶ್ವರಪ್ರಮೆಯು ಗುಣವಾದ್ದರಿಂದ, ಗುಣವು ದೋಷವಿರೋಧಿಯಾದ್ದರಿಂದ ದೋಷವನ್ನು ಪ್ರತಿರೋಧಿಸಿ ಎಲ್ಲಾ ಕಡೆಯಲ್ಲಿಯೂ ಪ್ರಮೆಯೇ ಉಂಟಾಗಲಿ ಎಂಬ ಆಪತ್ತಿಯಿದೆ. ಈಶ್ವರಪ್ರಮೆಯನ್ನು ಗುಣವೆಂದು ಅಂಗೀಕರಿಸಿದರೆ ಈ ಶ್ಲೋಕದಲ್ಲಿ ಇನ್ನೊಂದು ದೋಷವನ್ನು ಹೇಳುತ್ತಾರೆ. ಜೀವನಿಗೆ ಶುಕ್ತಿರಜತ ಭ್ರಮೆಯು ಬರುವುದಷ್ಟೇ. ಅಲ್ಲಿಯೂ ಕೂಡ ಶುಕ್ತಿವಿಷಯಕ ಈಶ್ವರಪ್ರಮೇಯು ಇದ್ದೇಇದೆ. ಏಕೆಂದರೆ ಈಶ್ವರನು ಸರ್ವಜ್ಞನಾದವನು. ಆದ್ದರಿಂದ ಚೈತ್ರನಿಗೆ ಭ್ರಮೆ ಬರುವಾಗಲೂ ಶುಕ್ತಿವಿಷಯಕವಾದ ಈಶ್ವರಪ್ರಮಾ ಗುಣವೇ ಆಗಿ ಸಿದ್ಧವಾಗಿದೆ. ಆದ್ದರಿಂದ ಚೈತ್ರನಿಗೆ ಶುಕ್ತಿಪ್ರಮೆಯೇ ಉಂಟಾಗಲಿ ರಜತಭ್ರಮವು ಉಂಟಾಗುವುದು ಬೇಡ ಎಂಬ ಆಪತ್ತಿಯೂ ಇರುತ್ತದೆ. ಯದ್ಯಪಿ ಪುರುಷನಲ್ಲಿ ಕಾಚಾದಿ ದೋಷವಿದೆ. ಆದರೂ ಗುಣವು ದೋಷವಿರೋಧಿಯಾದುದರಿಂದ ಆ ಕಾಚಾದಿ ದೋಷವನ್ನು ಪ್ರತಿರೋಧ ಮಾಡಿ ಈಶ್ವರಪ್ರಮಾರೂಪವಾದ ಗುಣವು ಪ್ರಮೆಯನ್ನೇ ಹುಟ್ಟಿಸಲಿ ಎಂಬ ಆಪತ್ತಿ ಬರುತ್ತದೆ.

**ಭಾವವಿಲಾಸಿನೀ–**ಈಶಪ್ರಮಾಯಾ ಗುಣತ್ವಾಂಗೀಕಾರೇ ದೋಷಾಂತರಂ ಚಾಹ–ಸರ್ವಜ್ಞೇತಿ ॥ ನೃಣಾಂ ಗುಣಶ್ಚೇತ್ ಪ್ರಮಾಜನಕಗುಣಶ್ಚೇದ್ ತರ್ಹಿ ಕ್ವ ಭ್ರಮೋ ನೃಣಾಂ ಭವೇತ್ । ಸರ್ವಜ್ಞೇತಿ

ಹೇತುಗರ್ಭವಿಶೇಷಣವಮ್ । ಯತ್ರ ಶುಕ್ತೌ ರಜತಭ್ರಮೋ ನೃಣಾಂ ತತ್ರಾಪ್ಯೈಶ್ವರೀ ಶುಕ್ತಿರೂಪಾರ್ಥಪ್ರಮಾಽಸ್ತ್ಯೇವ । ಸರ್ವಜ್ಞತ್ವಾದೀಶ್ವರಸ್ಯ । ಸಾ ಚ ಯಸ್ಯ ಪುರುಷಸ್ಯ ಭ್ರಮೋ ಭವೇತ್, ತಸ್ಯೈವ ತತ್ರತ್ಯಶುಕ್ತಿಪ್ರಮಾಯಾ ತ್ವದುಕ್ತರೀತ್ಯಾ ಗುಣೋಽಭೂತ್ । ತಥಾಚ ತಸ್ಯ ಶುಕ್ತಿಪ್ರಮೈವ ಸ್ಯಾನ್ನ ರಜತಭ್ರಮ ಇತಿ ಭಾವಃ । ತತ್ರ ಕಾರಣಮಾಹ – **ಗುಣೇ ಸತೀತಿ** ॥ ದೋಷವಿರೋಧಿನಿ ಗುಣೇ ಸತಿ ಪ್ರಮಾವಶ್ಯಮ್ಭಾವಾದಿತಿ ಯೋಜನಾ । ಈಶ್ವರಪ್ರಮಾ ತಸ್ಯ ಗುಣಶ್ಚೇತ್ತದೀಯದೋಷಂ ನಿರುಧ್ಯ ತಸ್ಯ ಪ್ರಮಾಂ ಜನಯೇತ್ । ಗುಣಸ್ಯ ದೋಷವಿರೋಧಿತ್ವಾವಶ್ಯಮ್ಭಾವಾದಿತಿ ಭಾವಃ ॥ ೪೫೨ ॥

**ಪ್ರಸಿದ್ಧಗುಣಸಂತ್ಯಾಗೇನಾಪ್ರಸಿದ್ಧಗುಣೋಹನಮ್ ।**
**ನ ಗುಣಃ ಶೋಧಿತಧಿಯಾಂ ಸುಧಿಯಾಂ ಕುಧಿಯಾಮಪಿ ॥ ೪೫೩ ॥**

**ಅರ್ಥ–** ಪ್ರಸಿದ್ಧ = ಪ್ರಸಿದ್ಧವಾದ, ಗುಣ = ಗುಣವನ್ನು, ಸಂತ್ಯಾಗೇನ = ಬಿಡುವುದರ ಮೂಲಕ, ಅಪ್ರಸಿದ್ಧಗುಣೋಹನಮ್ = ಅಪ್ರಸಿದ್ಧವಾದ ಗುಣವನ್ನು ಊಹಿಸುವುದು. ಶೋಧಿತಧಿಯಾಂ= ಶುದ್ಧವಾದ ಬುದ್ಧಿಯುಳ್ಳ, ಸುಧಿಯಾಂ= ವಿವೇಕಿಗಳಿಗೆ, ಕುಧಿಯಾಂ ಅಪಿ= ವಿವೇಕರಹಿತರಿಗೂ ಕೂಡ, ನ ಗುಣಃ= ಉಚಿತವೆನಿಸುವುದಿಲ್ಲ.

**ಅನುವಾದ–** ಪ್ರಸಿದ್ಧವಾದ ಗುಣವನ್ನು ಬಿಟ್ಟು, ಅಪ್ರಸಿದ್ಧವಾದ ಈಶ್ವರಪ್ರಮೆಯನ್ನು ಗುಣವೆಂದು ಅಂಗೀಕಾರ ಮಾಡುವುದು ಶಾಸ್ತ್ರಾಧ್ಯಯನಾದಿಗಳಿಂದ ಶುದ್ಧವಾದ ಬುದ್ಧಿಯನ್ನು ಪಡೆದುಕೊಂಡ ವಿವೇಕಿಗಳಿಗೆ ಮತ್ತು ವಿವೇಕರಹಿತರಿಗೂ ಕೂಡ ಶೋಭಿಸುವುದಿಲ್ಲ.

**ಭಾವವಿಲಾಸಿನೀ–**ದೋಷಾಂತರಂ ಚಾಹ – **ಪ್ರಸಿದ್ಧೇತಿ** ॥ ಪ್ರಸಿದ್ಧಗುಣಸನ್ತ್ಯಾಗೇನ ಅನುಮಾನಮಾತ್ರೇ ಗುಣತ್ವೇನ ಪರಸಮಯಪ್ರಸಿದ್ಧಸಲ್ಲಿಂಗಪರಾಮರ್ಶಾಖ್ಯಗುಣತ್ಯಾಗೇನ ॥ ೪೫೩ ॥

**ವಿವರಣೆ–** ಯಾದೃಚ್ಛಿಕಸಂವಾದಿಯಾದ ಅನುಮಿತಿ ಸ್ಥಳದಲ್ಲಿ ಈಶ್ವರಪ್ರಮೆಯು ಗುಣವೆಂದು ಹೇಳುತ್ತಿದ್ದೀಯೆ. ಆದರೆ ಅನುಮಿತಿಯನ್ನು ಕುರಿತು ಸಲ್ಲಿಂಗ-ಪರಾಮರ್ಶೆಯು ಗುಣ ಎಂದು ನೀನೇ ಹೇಳುತ್ತೀಯೆ. ಆದ್ದರಿಂದ ಈ ಅನುಮಿತಿ ಸ್ಥಳದಲ್ಲಿ ಸಲ್ಲಿಂಗಪರಾಮರ್ಶರೂಪವಾದ ಪ್ರಸಿದ್ಧಗುಣವನ್ನು ಬಿಟ್ಟು, ಅಪ್ರಸಿದ್ಧವಾದ ಈಶ್ವರಪ್ರಮಾ ಎಂಬ ಗುಣವನ್ನು ಒಪ್ಪಿದರೆ ನಿನಗೆ ಅದು ಶೋಭೆಯನ್ನು ತರುವುದಿಲ್ಲ. ಇಲ್ಲಿ ಸಲ್ಲಿಂಗ ಪರಾಮರ್ಶರೂಪವಾದ ಗುಣವನ್ನು ಒಪ್ಪುವುದಕ್ಕೂ ಸಹ ಬರುವುದಿಲ್ಲ. ಏಕೆಂದರೆ ಈ ಪರಾಮರ್ಶೆಯು ಭ್ರಮಾತ್ಮಕವಾದುದು.

**ದೋಷೇ ಸತ್ಯಪ್ರಮಾ ಸರ್ವಾ ದೋಷಾಭಾವೇ ನ ಸಾ ಕ್ವಚಿತ್ ।**
**ತತ್ಸತ್ತ್ವಂ ನ ತತ್ತತ್ತ್ವಮಿತಿ ತತ್ತ್ವವಿದಾಂ ಮತಮ್ ॥ ೪೫೪ ॥**

**ಅರ್ಥ–** ದೋಷೇ ಸತಿ = ದೋಷವು ಇರುತ್ತಿರಲು, ಸರ್ವಾ ಅಪ್ರಮಾ = ಎಲ್ಲವೂ ಅಯಥಾರ್ಥ ಜ್ಞಾನವು, ದೋಷಾಭಾವೇ = ದೋಷವಿಲ್ಲದಿರುತ್ತಿರಲು, ಕ್ವಚಿತ್ = ಎಲ್ಲಿಯೂ, ಸಾ = ಅಯಥಾರ್ಥಜ್ಞಾನವು, ನ = ಇರುವುದಿಲ್ಲ, ತತ್= ಆದ್ದರಿಂದ, ತತ್‌ಸ್ವತಸ್ತ್ವಂ = ಅಪ್ರಾಮಾಣ್ಯಸ್ವತಸ್ತ್ವವು, ನ ತತ್ವಂ = ಶ್ರೇಷ್ಠತತ್ವವಲ್ಲ, ಇತಿ = ಎಂದು, ತತ್ತ್ವವಿದಾಂ = ತತ್ವವಾದಿಗಳ, ಮತಮ್ = ಮತವು.

**ಅನುವಾದ–** ದೋಷವಿದ್ದರೆ ಮಾತ್ರ ಎಲ್ಲ ಸ್ಥಳಗಳಲ್ಲಿಯೂ ಅಪ್ರಾಮಾಣ್ಯವು ಉಂಟಾಗುತ್ತದೆ. ದೋಷವಿಲ್ಲದಿದ್ದರೆ ಎಲ್ಲೂ ಉಂಟಾಗುವುದಿಲ್ಲ. ಆದ್ದರಿಂದ ಅಪ್ರಾಮಾಣ್ಯಸ್ವತಸ್ತ್ವವು ತತ್ವವಾದಿಗಳ ಮತದಲ್ಲಿ ಎಂದೂ ಸತ್ಯವಾದ ಸಂಗತಿಯಲ್ಲ.

**ಭಾವವಿಲಾಸಿನೀ–ಅಪ್ರಾಮಾಣ್ಯಪ್ರತಿಬಂದೀಂ ಪರಿಹರತಿ – ದೋಷ ಇತಿ ॥ ದೋಷೇ ಸತಿ ದೋಷೇ ಸತ್ಯೇವೇತ್ಯರ್ಥಃ । ಸಾ ಅಪ್ರಮಾ ಕ್ವಚಿನ್ನೇತಿ ಸಂಬಂಧಃ । ತತ್ತಸ್ಮಾದಪ್ರಮಾಯಾ ಅವ್ಯಭಿಚರಿತದೋಷಾನ್ವಯವ್ಯತಿರೇಕಾನುವಿಧಾಯಿತ್ವಾತ್ ತತ್ಸ್ವತಸ್ತ್ವಂ ತಸ್ಯಾಪ್ರಾಮಾಣ್ಯಸ್ಯ ಸ್ವತಸ್ತ್ವಮ್ ॥ ೪೫೪ ॥**

**ವಿವರಣೆ–** ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಒಪ್ಪಿದರೆ ಅಪ್ರಾಮಾಣ್ಯಕ್ಕೂ ಉತ್ಪತ್ತಿಯಲ್ಲಿ ಸ್ವತಸ್ತ್ವವನ್ನು ಒಪ್ಪಿ ಎಂದು ತಾರ್ಕಿಕರು ನಮಗೆ ಪ್ರತಿಬಂದಿಯನ್ನು ಹೇಳಿದ್ದಾರೆ. ಈ ಶ್ಲೋಕದಲ್ಲಿ ಆ ಪ್ರತಿಬಂದಿಯನ್ನು ಪರಿಹರಿಸುತ್ತಾರೆ. ದೋಷವಿದ್ದರೆ ಮಾತ್ರ ಅಪ್ರಮೆಯು ಉಂಟಾಗುತ್ತದೆ. ದೋಷವಿಲ್ಲದಿದ್ದರೆ ಎಂದೂ ಅಪ್ರಮೆಯು ಉಂಟಾಗುವುದಿಲ್ಲ. ಹೀಗೆ ದೋಷಕ್ಕೂ ಮತ್ತು ಅಪ್ರಮೆಗೂ ವ್ಯಭಿಚಾರರಹಿತವಾದ ಅನ್ವಯವ್ಯತಿರೇಕಗಳಿವೆ. ಆದ್ದರಿಂದ ಅಪ್ರಾಮಾಣ್ಯವನ್ನು ಕುರಿತು ದೋಷವು ಕಾರಣ. ಕೇವಲ ಜ್ಞಾನಸಾಮಗ್ರಿಯಿಂದಲೇ ಅಪ್ರಾಮಾಣ್ಯವು ಉಂಟಾಗುವುದಿಲ್ಲ. ಇದು ತತ್ವವಾದಿಗಳ ಸಿದ್ಧಾಂತ.

**ಜ್ಞಾನಸಾಮಾನ್ಯಸಾಮಗ್ರೀ ಜ್ಞಾನಂ ಸಂಜನಯೇದ್ ಧ್ರುವಮ್ ।**
**ಕಾರ್ಯಸ್ಯೋಪಾರ್ಜಿಕಾಮೇವ ಯತ್ಸಾಮಗ್ರೀಂ ವಿದುರ್ಬುಧಾಃ॥ ೪೫೫ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಬುಧಾಃ = ವಿವೇಕಿಗಳು, ಕಾರ್ಯಸ್ಯೋಪಾರ್ಜಿಕಾಮೇವ = ಕಾರ್ಯದ ನಿಷ್ಪತ್ತಿಯನ್ನು ಮಾಡುವುದನ್ನೇ, ಸಾಮಗ್ರೀಂ = ಸಾಮಗ್ರಿ ಎಂದು, ವಿದುಃ = ತಿಳಿದಿದ್ದಾರೆಯೋ ಆ ಕಾರಣದಿಂದ, ಜ್ಞಾನಸಾಮಾನ್ಯಸಾಮಗ್ರೀ = ಜ್ಞಾನಸಾಮಾನ್ಯಸಾಮಗ್ರಿಯು, ಜ್ಞಾನಂ = ಜ್ಞಾನವನ್ನು ಧ್ರುವಂ = ನಿಶ್ಚಿತವಾಗಿಯೂ, ಸಂಜನಯೇತ್ = ಉಂಟುಮಾಡುತ್ತದೆ.

**ಅನುವಾದ–** ಜ್ಞಾನಸಾಮಾನ್ಯ ಸಾಮಗ್ರಿಯು ಖಂಡಿತವಾಗಿ ಜ್ಞಾನವನ್ನುಂಟು ಮಾಡಿಯೇ ಕೊಡುತ್ತದೆ. ಯಾವುದು ತನ್ನ ಕಾರ್ಯವನ್ನು ಸಾಧಿಸಿ

**ಕೊಡುತ್ತದೆಯೋ, ಅದನ್ನೇ ವಿವೇಕಿಗಳಾದವರು ಸಾಮಗ್ರಿಯೆಂದು ಕರೆಯುತ್ತಾರಷ್ಟೇ?**

**ಭಾವವಿಲಾಸಿನೀ**–ಜ್ಞಾನಸಾಮಾನ್ಯಸಾಮಗ್ರ್ಯಾ ಉತ್ಸರ್ಗತಃ ಪ್ರಮಾಜನಕತ್ವಮುಪಪಾದಯತಿ – **ಜ್ಞಾನೇತಿ** ॥ ಯದ್ಯಸ್ಮಾದ್ ಬುಧಾ ಕಾರ್ಯಸ್ಯೋಪಾರ್ಜಿಕಾಮೇವ ಸಾಮಗ್ರೀಂ ವಿದುಃ । ತತ್ ಜ್ಞಾನಸಾಮಾನ್ಯಸಾಮಗ್ರೀ ಧ್ರುವಂ ಜ್ಞಾನಂ ಜನಯೇದಿತಿ ಸಂಬಂಧಃ । ಬುಧಾ ಇತ್ಯನೇನ ಸಾಮಗ್ರ್ಯಾಃ ಕಾರ್ಯೋಪಾರ್ಜಕತ್ವನಿಯಮಾದಿತಿ ವಾಕ್ಯಂ ಸೂಚಯತಿ । ತಥಾಚ ಜ್ಞಾನಾನುತ್ಪಾದಕತ್ವೇ ಜ್ಞಾನಸಾಮಾನ್ಯಸಾಮಗ್ರ್ಯೇವ ಸಾ ನ ಸ್ಯಾದಿತಿ ಭಾವಃ ॥ ೪೫೫ ॥

**ವಿವರಣೆ**– ಇನ್ನು ಜ್ಞಾನಸಾಮಾನ್ಯಸಾಮಗ್ರಿಯೇ ಸ್ವಾಭಾವಿಕವಾಗಿ ಪ್ರಮೆಯನ್ನು ಉಂಟುಮಾಡುತ್ತದೆ ಎಂಬ ವಿಷಯವನ್ನು ಉಪಪಾದನೆ ಮಾಡುತ್ತಾರೆ. ಜ್ಞಾನಸಾಮಾನ್ಯಸಾಮಗ್ರಿಯು ಜ್ಞಾನವನ್ನು ಉಂಟುಮಾಡಿಯೇ ಕೊಡುತ್ತದೆ. 'ಸಾಮಾಗ್ರ್ಯಾಃ ಕಾರ್ಯಜನಕತ್ವ ನಿಯಮಾತ್' ಎಂಬ ಬುಧರ ವಾಕ್ಯವು ಈ ವಿಷಯದಲ್ಲಿ ಸಮ್ಮತಿಯನ್ನು ಕೊಡುತ್ತದೆ. ಜ್ಞಾನವನ್ನು ಉಂಟುಮಾಡದಿದ್ದರೆ ಅದು ಜ್ಞಾನಸಾಮಗ್ರಿಯೇ ಆಗುವುದಿಲ್ಲವಾದ ಕಾರಣ ಅವಶ್ಯವಾಗಿ ಜ್ಞಾನವನ್ನು ಉಂಟುಮಾಡಿಕೊಡಲೇಬೇಕು.

**ಜ್ಞಾನಂ ಚ ಜ್ಞೇಯಸಾಪೇಕ್ಷಂ ಜ್ಞೇಯಂ ಚಾಸ್ತಿ ಯಥಾಯಥಾ ।**
**ತಥೈವ ವಿಷಯೀಕುರ್ಯಾತ್ ಸ್ವಯೋಗ್ಯಂ ಸತಿ ಸಾಧನೇ ॥ ೪೫೬ ॥**

**ಅರ್ಥ**– ಜ್ಞೇಯಸಾಪೇಕ್ಷಂ = ತಿಳಿಯಬೇಕಾದ ಪದಾರ್ಥಗಳ ಅಪೇಕ್ಷೆಯುಳ್ಳ, ಜ್ಞಾನಂ ಚ = ಜ್ಞಾನವಾದರೂ, ಜ್ಞೇಯಂ ಚ = ಜ್ಞೇಯವೂ ಕೂಡ, ಯಥಾಯಥಾ ಅಸ್ತಿ = ಹೇಗೆ ಹೇಗೆ ಇದೆಯೋ, ತಥೈವ = ಅದೇ ರೀತಿಯಾಗಿ, ಸ್ವಯೋಗ್ಯಂ = ತನಗೆ ಯೋಗ್ಯವಾದ, ಸಾಧನೇ ಸತಿ = ಸಾಧನೆಯು ಇರುತ್ತಿರಲು, ವಿಷಯೀಕುರ್ಯಾತ್ = ವಿಷಯೀಕರಿಸುತ್ತದೆ.

**ಅನುವಾದ**– ಜ್ಞಾನವು ಜ್ಞೇಯಸಾಪೇಕ್ಷವಾಗಿದೆ. ಜ್ಞಾನವು ತನ್ನ ಸಾಮಗ್ರಿಯಿರುವಾಗ ಜ್ಞೇಯವು ಯಾವಯಾವರೀತಿಯಲ್ಲಿದೆಯೋ, ಅದೇ ರೀತಿಯಲ್ಲಿ ತನಗೆ ಯೋಗ್ಯವಾದ ವಿಷಯವನ್ನು ವಿಷಯೀಕರಿಸುತ್ತದೆ.

**ಭಾವವಿಲಾಸಿನೀ**–ತರ್ಹಿ ಸಾಮಗ್ರೀ ಭ್ರಮಮೇವ ಜನಯತ್ವಿತ್ಯಾಶಂಕ್ಯಾಹ – **ಜ್ಞಾನಂ ಚೇತಿ** ॥ ಜ್ಞೇಯಸಾಪೇಕ್ಷಂ ಜ್ಞೇಯಾಪೇಕ್ಷೆಯಾ ಸಹಿತಮ್ । ಜ್ಞಾನಂ ಚ ಯಥಾ ಯಥಾ ಜ್ಞೇಯಂ ಚಾಸ್ತಿ, ತಥೈವ ಸ್ವಯೋಗ್ಯಜ್ಞೇಯಂ ಸಾಧನೇ ಇಂದ್ರಿಯಾದೌ ಸತಿ ವಿಷಯೀಕುರ್ಯಾದಿತಿ ಯೋಜನಾ ॥ ೪೫೬ ॥

**ವಿವರಣೆ**– ಜ್ಞಾನಸಾಮಾನ್ಯಸಾಮಗ್ರಿಯು ಭ್ರಮವನ್ನೇ ಉಂಟುಮಾಡಲಿ ಎಂಬ ಆಶಂಕೆಗೆ ಈ ಶ್ಲೋಕದಲ್ಲಿ ಉತ್ತರವನ್ನು ಹೇಳುತ್ತಾರೆ. ಜ್ಞಾನಕ್ಕೆ ಜ್ಞೇಯದ ಅಪೇಕ್ಷೆಯಿದೆ.

ಇಂದ್ರಿಯಾದಿಗಳು ಇದ್ದರೆ ತನ್ನ ಜ್ಞೇಯವು ಯಾವಯಾವ ರೀತಿಯಲ್ಲಿದೆಯೋ, ಅದೇ ರೀತಿಯಲ್ಲಿ ತನಗೆ ಯೋಗ್ಯವಾದ ವಿಷಯವನ್ನು ಜ್ಞಾನವು ವಿಷಯೀಕರಿಸುತ್ತದೆ.

**ಘಟೋಽಯಮಿತಿ ಹಿ ಜ್ಞಾನೇ ಚಕ್ಷುಷಾ ಚ ಘಟೇನ ಚ ।**
**ತತ್ಸಂಸರ್ಗೇಣೈವ ಚಾಲಮೇವಮೇವ ಸ್ಥಲಾಂತರೇ ॥ ೪೫೭ ॥**

**ಅರ್ಥ–** ಅಯಂಘಟಃ = ಇದು ಘಟವು, ಇತಿ ಜ್ಞಾನೇ = ಈ ಜ್ಞಾನದಲ್ಲಿಯಾದರೂ, ಚಕ್ಷುಷಾ ಚ= ಕಣ್ಣಿನಿಂದ, ಘಟೇನ ಚ = ಮಡಿಕೆಯಿಂದಲೂ, ತತ್ಸಂಸರ್ಗೇಣೈವ ಚ= ಅವೆರಡರ ಸಂಬಂಧದಿಂದಲೇ, ಅಲಂ ಹಿ = ಸಾಕಷ್ಟೇ?, ಏವಮೇವ = ಇದೇ ರೀತಿಯಾಗಿ, ಸ್ಥಲಾಂತರೇ = ಬೇರೆಕಡೆಯಲ್ಲಿಯೂ ಕೂಡ.

**ಅನುವಾದ–** ಚಕ್ಷುಸ್ಸು, ಘಟ ಮತ್ತು ಅವುಗಳ ಸಂಸರ್ಗವಿರುವಾಗ, ಇದು ಘಟ ಎಂಬ ಜ್ಞಾನವು ಉತ್ಪನ್ನವಾಗುತ್ತದೆ. ಇದು ಘಟ ಎಂಬ ಜ್ಞಾನವು ಉತ್ಪನ್ನವಾಗಲು ಇಷ್ಟೇ ಸಾಮಗ್ರಿಯು ಸಾಕು. ಬೇರೆ ಶಬ್ದಾದಿಸ್ಥಳದಲ್ಲಿಯೂ ಸಹ ಹೀಗೆಯೇ ಕಲ್ಪನೆ ಮಾಡಬೇಕು.

**ಭಾವವಿಲಾಸಿನೀ–**ತದೇವ ವಿಶದಯತಿ – **ಘಟೋಽಯಮಿತಿ** ॥ ತತ್ಸಂಸರ್ಗೇಣ ಚಕ್ಷುರ್ಘಟ-ಸಂಸರ್ಗೇಣ । ಏವಮೇವ ಸ್ಥಲಾಂತರೇ ಪಟಾದಿಜ್ಞಾನಸ್ಥಲೇ ॥ ೪೫೭ ॥

**ವಿವರಣೆ–** ಹಿಂದೆ ಹೇಳಿದ ವಿಷಯವನ್ನೇ ಈ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾರೆ. ಚಕ್ಷುಸ್ಸು ಘಟ ಮತ್ತು ಅವುಗಳ ಸನ್ನಿಕರ್ಷ ಇದರಿಂದ ಘಟಜ್ಞಾನವಾಗುತ್ತದೆ. ಚಕ್ಷುಸ್ಸು , ಪಟ ಮತ್ತು ಅವುಗಳ ಸನ್ನಿಕರ್ಷ ಇದರಿಂದ ಪಟಜ್ಞಾನವಾಗುತ್ತದೆ. ಶ್ರೋತ್ರ, ಶಬ್ದ ಮತ್ತು ಅವುಗಳ ಸನ್ನಿಕರ್ಷ ಇದರಿಂದ ಶಬ್ದಜ್ಞಾನವಾಗುತ್ತದೆ. ಹೀಗೆ ತಿಳಿಯಬೇಕು.

**ಸೇಯಂ ಜ್ಞಾನಸ್ಯ ಸಾಮಾನ್ಯಸಾಮಗ್ರೀ ಸಾ ಚ ಧೀಃ ಪ್ರಮಾ ।**
**ತನ್ನ ಪ್ರಮಾಖ್ಯಬೋಧಸ್ಯ ಸಾಧನೇಽನ್ಯಾನುಧಾವನಮ್ ॥ ೪೫೮ ॥**

**ಅರ್ಥ–** ಸಾ = ಅಂತಹ, ಇಯಂ = ಇದು, ಜ್ಞಾನಸ್ಯ = ಜ್ಞಾನದ, ಸಾಮಾನ್ಯಸಾಮಗ್ರೀ = ಸಾಮಾನ್ಯಸಾಮಗ್ರಿಯಾಗಿದೆ, ಸಾ ಚ ಧೀಃ = ಜ್ಞಾನ ಸಾಮಾನ್ಯಬುದ್ಧಿಯು, ಪ್ರಮಾ = ಯಥಾರ್ಥವಾಗಿದೆ. ತತ್ = ಆದ್ದರಿಂದ, ಪ್ರಮಾಖ್ಯಬೋಧಸ್ಯ = ಪ್ರಮೆಯೆಂಬ ಯಥಾರ್ಥಜ್ಞಾನವನ್ನು , ಸಾಧನೇ = ಸಾಧಿಸಲು, ಅನ್ಯನುಧಾವನಮ್ = ಇತರ ಪದಾರ್ಥಗಳನ್ನು ಅನುಸರಿಸಿ ಓಡುವ ಅವಶ್ಯಕತೆಯು, ನ = ಇರುವುದಿಲ್ಲ.

**ಅನುವಾದ–** ಅಂತಹ ಈ ಸಾಮಗ್ರಿಯು ಜ್ಞಾನಸಾಮಾನ್ಯಸಾಮಗ್ರಿಯಾಗಿದೆ. ಅದರಿಂದಲೇ ಪ್ರಮೆಯು ಉಂಟಾಗುತ್ತದೆ. ಆದ್ದರಿಂದ ಪ್ರಮೆಯುಂಟಾಗಲು

ಜ್ಞಾನಸಾಮಾನ್ಯ-ಸಾಮಗ್ರಿಯನ್ನು ಬಿಟ್ಟು ಬೇರೆ ಇನ್ನೊಂದು ಕಾರಣವನ್ನು ಕಲ್ಪಿಸುವ ಅಗತ್ಯವಿಲ್ಲ.

**ಭಾವವಿಲಾಸಿನೀ–**ಶೇಯವಮುಕ್ತಾ ಜ್ಞಾನಸ್ಯ ಸಾಮಾನ್ಯಸಾಮಗ್ರೀ । ಇಂದ್ರಿಯಾರ್ಥ-ಸನ್ನಿಕರ್ಷರೂಪತ್ವಾತ್ । ಉಕ್ತಾ ಸರ್ವಾಪಿ ಸಾಮಗ್ರೀ ಸಾಮಾನ್ಯಸಾಮಗ್ರೀತ್ಯರ್ಥಃ । ಸಾ ಚ ಧೀಃ ಏವಂ ಚಕ್ಷುರ್ಘಟಸನ್ನಿಕರ್ಷೇ ಸತಿ ಜಾತಾ ಧೀಃ ಪ್ರಮಾ ಯಥಾರ್ಥೇತಿ ಸಂಬಂಧಃ । ಅವಿದ್ಯಮಾನಘಟತ್ವಾಭಾವಸ್ಯ ಸ್ವಾಯೋಗ್ಯತ್ವಾತ್ತಜ್ಜ್ಞಾನಮಜನಯಂತೀ ಜ್ಞಾನಸಾಮಾನ್ಯ-ಸಾಮಗ್ರೀ ಸ್ವಸಾಮಗ್ರೀತ್ವರಕ್ಷಣಾಯ ಸ್ವಯೋಗ್ಯಘಟಾದಿಜ್ಞಾನಮೇವ ಜನಯತಿ । ಅತಃ ಪರಿಶೇಷಾತ್ ಪ್ರಮಾಜನಕತ್ವಮೇವ ಸಾಮಾನ್ಯಸಾಮಗ್ರ್ಯಾಃ ಸ್ವಭಾವ ಇತಿ ಸಿದ್ಧಮಿತಿ ಭಾವಃ । ತತ್ತಸ್ಮಾತ್ ಸಾಮಾನ್ಯಸಾಮಗ್ರ್ಯಾ ಪ್ರಮಾಜನಕತ್ವಸ್ವಭಾವಾತ್ ಪ್ರಮಾಖ್ಯಬೋಧಸ್ಯ ಸಾಧನೇ ಉತ್ಪಾದನೇ ಅನ್ಯಸ್ಯ ಸಾಮಾನ್ಯಸಾಮಗ್ರೀ- ವ್ಯತಿರಿಕ್ತಗುಣಾದೇರನುಧಾವನಮನುಸರಣಂ ನೇತಿ ಸಂಬಂಧಃ ॥ ೪೫೮ ॥

(ಇಂದ್ರಿಯಾರ್ಥಸನ್ನಿಕರ್ಷಸಾಮಾನ್ಯ ಸಾಮಗ್ರ್ಯಾ... ಸಾಂಸರ್ಗಿಕತ್ವಾತ್ ತಮೇವ ಜ್ಞಾನಸಾಮಾನ್ಯಂ ತಜ್ಜನಕೇಂದ್ರಿಯಾರ್ಥಸನ್ನಿಕರ್ಷಶ್ಚ ಸಾಮಾನ್ಯಸಾಮಗ್ರೀ ವ್ಯಕ್ತಂ ಭವತಿ । ಏವಂ ಚ ಯಸ್ಯ ಯಸ್ಯ ಪ್ರಮಾತಸ್ಯ ತಸ್ಯ ಸನ್ನಿಕರ್ಷೋಽಪಿ ವಿಷಯೇಂದ್ರಿಯ ಸನ್ನಿಕರ್ಷವತ್ ಸಾಮಾನ್ಯ ಸಾಮಗ್ರೀ ಏವ ನ ಗುಣಃ ಅತಃ ಜ್ಞಾನಸಾಮಾನ್ಯಸಾಮಗ್ರೀಜನಕತ್ವರೂಪಸ್ವತಸ್ತ್ವಂ ಪ್ರಾಮಾಣ್ಯಸ್ಯ ದುಷ್ಪರಿಹರಮಿತಿ ಭಾವೇನ ಆಹ)

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಸಾಮಗ್ರಿಗಳು ಕೇವಲ ಇಂದ್ರಿಯ, ಅರ್ಥ ಮತ್ತು ಅದರ ಸನ್ನಿಕರ್ಷ ರೂಪವಾದವು. ಅದರಿಂದ ಹುಟ್ಟುವ ಅಯಂ ಘಟ ಮೊದಲಾದ ಜ್ಞಾನಗಳು ಯಥಾರ್ಥವಾಗಿಯೇ ಇವೆ. ಅಲ್ಲಿ ಘಟತ್ವಾಭಾವವೂ ಇಲ್ಲ. ಇಲ್ಲದಿರುವ ಘಟತ್ವಾಭಾವವು ಚಕ್ಷುಸ್ಸಿಗೆ ಅಯೋಗ್ಯವಾಗಿದೆ. ಆದ್ದರಿಂದ ಚಕ್ಷುಸ್ಸು ಘಟತ್ವಾಭಾವಪ್ರಕಾರಕಜ್ಞಾನವನ್ನು ಉಂಟುಮಾಡುವುದಿಲ್ಲ. 'ಅಯಂ ಘಟ' ಎಂಬ ಘಟತ್ವಪ್ರಕಾರಕಜ್ಞಾನವನ್ನೇ ಉಂಟುಮಾಡಿಕೊಡುತ್ತದೆ. ಚಕ್ಷುಸ್ಸಿನಿಂದ ಘಟಜ್ಞಾನ-ವುಂಟಾಗುತ್ತದೆ. ಅದು ಘಟತ್ವಾಭಾವಪ್ರಕಾರಕವಲ್ಲ. ಘಟತ್ವಪ್ರಕಾರಕ ಎಂದರೆ ಘಟತ್ವವುಳ್ಳ ವಸ್ತುವಿನಲ್ಲಿ ಘಟತ್ವಪ್ರಕಾರಕಜ್ಞಾನ ಎಂದಾಯಿತು. ಆದ್ದರಿಂದ ಇದು ಪರಿಶೇಷದಿಂದ ಪ್ರಮೆಯಾಗುತ್ತದೆ. ಆದ್ದರಿಂದ ಜ್ಞಾನಸಾಮಾನ್ಯಸಾಮಗ್ರಿಯೇ ಪ್ರಮೆಯನ್ನು ಉಂಟುಮಾಡಿಕೊಡುತ್ತದೆ. ಪ್ರಮೆಗೆ ಕಾರಣವಾಗಿ ಬೇರೆ ಯಾವ ಗುಣವನ್ನೂ ಹುಡುಕುವ ಅವಶ್ಯಕತೆಯಿಲ್ಲ.

ಗೋವತ್ಸಜನನೇ ಗೋಭಿರ್ಗೋರ್ವೃಷೈರೇವ ಪೂರ್ಯತೇ ।
ವಿಜಾತೀಯಸ್ಯ ವತ್ಸಸ್ಯ ತತ್ಸದೃಕ್ಷೋಽಪರೋಽಪಿ ಚ ॥ ೪೫೯ ॥

**ಮಹಿಷೋ ವಾ ಪಿಶಾಚೋ ವಾ ಕಶ್ಚಿನ್ನಿಶ್ಚೀಯತೇ ಯತಃ ।**
**ಅತಃ ಸ್ವಯೋಗ್ಯಾರ್ಥಬೋಧೇ ಚಕ್ಷುಷಾऽನ್ಯನ್ನ ಮಾನ್ಯತೇ ॥ ೪೬೦ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಗೋವತ್ಸಜನನೇ = ದನದ ಕರುವು ಹುಟ್ಟಬೇಕಾದರೆ, ಗೋಭಿಃ = ಹಸುಗಳಿಂದ, ಗೋವೃಷೈರೇವ = ಎತ್ತುಗಳಿಂದಲೇ, ಪೂರ್ಯತೇ = ಪೂರೈಸಲ್ಪಡುತ್ತದೆ. ವಿಜಾತೀಯಸ್ಯ = ವಿಲಕ್ಷಣವಾದ, ವತ್ಸಸ್ಯ = ಕರುವಿನ, ಜನನೇ = ಹುಟ್ಟಿಗಾಗಿ, ತತ್ಸದೃಕ್ಷಃ = ಅದಕ್ಕೆ ಸರಿಯಾದ,ಅಪರಃ ಅಪಿ ಚ= ಬೇರೆ ರೀತಿಯಾದ, ಮಹಿಷೋ ವಾ = ಮಹಿಷವೋ, ಪಿಶಾಚೋ ವಾ = ಪಿಶಾಚಿಯೋ, ಕಶ್ಚಿತ್ = ಯಾವುದೋ ಒಂದು, ನಿಶ್ಚೀಯತೇ= ನಿಶ್ಚಯಿಸಲ್ಪಡುತ್ತದೆ. ಇದರಂತೆ, ಸ್ವಯೋಗ್ಯಾರ್ಥಬೋಧೇ = ತನಗೆ ಯೋಗ್ಯವಾದ ಪದಾರ್ಥಜ್ಞಾನದ ವಿಷಯದಲ್ಲಿ, ಚಕ್ಷುಷಾ = ಕಣ್ಣಿನಿಂದ, ಅನ್ಯತ್= ಬೇರೆ ಯಾವ ಪದಾರ್ಥವೂ, ನ ಮಾನ್ಯತೇ = ಅಪೇಕ್ಷಿಸಲ್ಪಡುವುದಿಲ್ಲ.

**ಅನುವಾದ– ಹಸುವಿನ ಕರು ಹುಟ್ಟಬೇಕಾದರೆ ಹಸು ಮತ್ತು ಹೋರಿ ಎರಡು ಇದ್ದರೆ ಸಾಕು. ಆದರೆ ವಿಜಾತೀಯವಾದ ಕರು ಉಂಟಾಗಬೇಕಾದರೆ ಹಸುವಿಗೆ ಸದೃಶವಾದದ್ದಾಗಲೀ ಅಥವಾ ಹಸುವಿಗೆ ವಿಸದೃಶವಾದುದ್ದಾಗಲೀ ಇನ್ನೊಂದು ಪ್ರಾಣಿಯು ಬೇಕು. ನಾಲ್ಕು ಕಾಲುಳ್ಳ ಹಸುವಿನಂತಿರುವ ಇನ್ನೊಂದು ವಿಜಾತೀಯ ಪ್ರಾಣಿಯು ಬೇಕಾದರೆ ಕೋಣವು ಬೇಕು. ಅಥವಾ ವಿಚಿತ್ರವಾದ ಕೈಕಾಲುಗಳುಳ್ಳ ಪ್ರಾಣಿಯು ಬೇಕಾದರೆ ಪಿಶಾಚಿಯು ಬೇಕು. ಆದ್ದರಿಂದ ಚಕ್ಷುಸ್ಸು ಸ್ವಯೋಗ್ಯವಾದ ಅರ್ಥದ ಜ್ಞಾನವನ್ನುಂಟುಮಾಡಿಕೊಡಬೇಕಾದರೆ ಬೇರೆ ಏನನ್ನೂ ಅಪೇಕ್ಷಿಸುವುದಿಲ್ಲ.**

**ಭಾವವಿಲಾಸಿನೀ–ತತ್ರ ದೃಷ್ಟಾಂತಮಾಹ – ಗೋವತ್ಸೇತಿ ॥ ಗೋಭಿರ್ಧೇನುಭಿಃ । ಗೋವೃಷೈರ್ಗೋವೃಷಭೈಃ । ವಿಜಾತೀಯಸ್ಯ ವತ್ಸಸ್ಯ ತಸ್ಯಾಮೇವ ಗವಿ ವಿಜಾತೀಯಸ್ಯ ಗೋವಿಜಾತೀಯಸ್ಯ ಮಹಿಷಾದ್ಯಾಕಾರವತ್ಸಸ್ಯ । ತತ್ಸದೃಕ್ಷಃ ಮಹಿಷೋ ವಾ । ಅಪರಃ ಕಶ್ಚಿತ್ ಪಿಶಾಚೋऽಪಿ ವಾ । ಮಹಿಷಾಕಾರವತ್ಸಸ್ಯ ಮಹಿಷಃ ಶೃಂಗಪುಚ್ಛಾದಿಭಿರ್ವಿಕೃತಸ್ಯ ತು ವತ್ಸಸ್ಯ ಪಿಶಾಚ ಇತಿ (ಕಿಂ೦ ವಿವೇಕಃ । ಯತೋ ನಿಶ್ಚೀಯತೇऽತ ಇತಿ ಸಂಬಂಧಃ ॥ ೪೫೯-೪೬೦ ॥**

**ವಿವರಣೆ–** ಚಾಕ್ಷುಷಜ್ಞಾನ ಮತ್ತು ಸಾಮಾನ್ಯಸಾಮಗ್ರಿಗಳೆಂದರೆ ಹಸು ಮತ್ತು ಹೋರಿಗಳಿದ್ದಂತೆ. ಅವುಗಳಿಂದ ಇನ್ನೊಂದು ಗೋವತ್ಸವೇ ಉಂಟಾಗುತ್ತದೆ. ಗೋವತ್ಸವುಂಟಾಗಲು ಇನ್ನೊಂದು ಕಾರಣದ ಅಪೇಕ್ಷೆಯಿಲ್ಲ. ಹಾಗೇ ಚಾಕ್ಷುಷಪ್ರಮೆಯು ಉಂಟಾಗಬೇಕಾದರೆ ಚಕ್ಷುಸ್ಸು ಘಟ ಮತ್ತು ಅವುಗಳ ಸನ್ನಿಕರ್ಷವನ್ನು ಬಿಟ್ಟು ಬೇರೆ ಕಾರಣದ ಅಪೇಕ್ಷೆಯಿಲ್ಲ. ಆದ್ದರಿಂದ ಜ್ಞಾನಸಾಮಾನ್ಯ ಸಾಮಗ್ರಿಯೇ ಪ್ರಮಾಜನನ-ಸಾಮಗ್ರಿ. ವಿಜಾತೀಯವಾದ ಅಥವಾ ವಿಚಿತ್ರವಾದ ಕರುವನ್ನು ಪಡೆಯಲು ಮಹಿಷ

ಜ್ಞಾನಸಾಮಾನ್ಯ-ಸಾಮಗ್ರಿಯನ್ನು ಬಿಟ್ಟು ಬೇರೆ ಇನ್ನೊಂದು ಕಾರಣವನ್ನು ಕಲ್ಪಿಸುವ ಅಗತ್ಯವಿಲ್ಲ.

**ಭಾವವಿಲಾಸಿನೀ–**ಸೇಯಮುಕ್ತಾ ಜ್ಞಾನಸ್ಯ ಸಾಮಾನ್ಯಸಾಮಗ್ರೀ । ಇಂದ್ರಿಯಾರ್ಥ-ಸನ್ನಿಕರ್ಷರೂಪತ್ವಾತ್ । ಉಕ್ತಾ ಸರ್ವಾಪಿ ಸಾಮಗ್ರೀ ಸಾಮಾನ್ಯಸಾಮಗ್ರೀತ್ಯರ್ಥಃ । ಸಾ ಚ ಧೀಃ ಏವಂ ಚಕ್ಷುರ್ಘಟಸನ್ನಿಕರ್ಷೇ ಸತಿ ಜಾತಾ ಧೀಃ ಪ್ರಮಾ ಯಥಾರ್ಥೇತಿ ಸಂಬಂಧಃ । ಅವಿದ್ಯಮಾನಘಟತ್ವಾಭಾವಸ್ಯ ಸ್ವಾಯೋಗ್ಯತ್ವಾತ್ತಜ್ಜ್ಞಾನಮಜನಯಂತೀ ಜ್ಞಾನಸಾಮಾನ್ಯ-ಸಾಮಗ್ರೀ ಸ್ವಸಾಮಗ್ರೀತ್ವರಕ್ಷಣಾಯ ಸ್ವಯೋಗ್ಯಘಟಾದಿಜ್ಞಾನಮೇವ ಜನಯತಿ । ಅತಃ ಪರಿಶೇಷಾತ್ ಪ್ರಮಾಜನಕತ್ವಮೇವ ಸಾಮಾನ್ಯಸಾಮಗ್ರ್ಯಾಃ ಸ್ವಭಾವ ಇತಿ ಸಿದ್ಧಮಿತಿ ಭಾವಃ । ತತ್ತಸ್ಮಾತ್ ಸಾಮಾನ್ಯಸಾಮಗ್ರ್ಯಾ ಪ್ರಮಾಜನಕತ್ವಸ್ವಭಾವಾತ್ ಪ್ರಮಾಖ್ಯಬೋಧಸ್ಯ ಸಾಧನೇ ಉತ್ಪಾದನೇ ಅನ್ಯಸ್ಯ ಸಾಮಾನ್ಯಸಾಮಗ್ರೀ- ವ್ಯತಿರಿಕ್ತಗುಣಾದೇರನುಧಾವನಮನುಸರಣಂ ನೇತಿ ಸಂಬಂಧಃ ॥ ೪೫೮ ॥

(ಇಂದ್ರಿಯಾರ್ಥಸನ್ನಿಕರ್ಷಸಾಮಾನ್ಯ ಸಾಮಗ್ರ್ಯಾ… ಸಾಂಸರ್ಗಿಕತ್ವಾತ್ ತಮೇವ ಜ್ಞಾನಸಾಮಾನ್ಯಂ ತಜ್ಜನಕೇಂದ್ರಿಯಾರ್ಥಸನ್ನಿಕರ್ಷಶ್ಚ ಸಾಮಾನ್ಯಸಾಮಗ್ರೀ ವ್ಯಕ್ತಂ ಭವತಿ । ಏವಂ ಚ ಯಸ್ಯ ಯಸ್ಯ ಪ್ರಮಾತಸ್ಯ ತಸ್ಯ ಸನ್ನಿಕರ್ಷೋಽಪಿ ವಿಷಯೇಂದ್ರಿಯ ಸನ್ನಿಕರ್ಷವತ್ ಸಾಮಾನ್ಯ ಸಾಮಗ್ರೀ ಏವ ನ ಗುಣಃ ಅತಃ ಜ್ಞಾನಸಾಮಾನ್ಯಸಾಮಗ್ರೀಜನಕತ್ವರೂಪಸ್ವತಸ್ತ್ವಂ ಪ್ರಾಮಾಣ್ಯಸ್ಯ ದುಷ್ಪರಿಹರಮಿತಿ ಭಾವೇನ ಆಹ)

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಸಾಮಗ್ರಿಗಳು ಕೇವಲ ಇಂದ್ರಿಯ, ಅರ್ಥ ಮತ್ತು ಅದರ ಸನ್ನಿಕರ್ಷ ರೂಪವಾದವು. ಅದರಿಂದ ಹುಟ್ಟುವ ಅಯಂ ಘಟ ಮೊದಲಾದ ಜ್ಞಾನಗಳು ಯಥಾರ್ಥವಾಗಿಯೇ ಇವೆ. ಅಲ್ಲಿ ಘಟತ್ವಾಭಾವವೂ ಇಲ್ಲ. ಇಲ್ಲದಿರುವ ಘಟತ್ವಾಭಾವವು ಚಕ್ಷುಸ್ಸಿಗೆ ಅಯೋಗ್ಯವಾಗಿದೆ. ಆದ್ದರಿಂದ ಚಕ್ಷುಸ್ಸು ಘಟತ್ವಾಭಾವಪ್ರಕಾರಕಜ್ಞಾನವನ್ನು ಉಂಟುಮಾಡುವುದಿಲ್ಲ. 'ಅಯಂ ಘಟ' ಎಂಬ ಘಟತ್ವಪ್ರಕಾರಕಜ್ಞಾನವನ್ನೇ ಉಂಟುಮಾಡಿಕೊಡುತ್ತದೆ. ಚಕ್ಷುಸ್ಸಿನಿಂದ ಘಟಜ್ಞಾನ-ವುಂಟಾಗುತ್ತದೆ. ಅದು ಘಟತ್ವಾಭಾವಪ್ರಕಾರಕವಲ್ಲ. ಘಟತ್ವಪ್ರಕಾರಕ ಎಂದರೆ ಘಟತ್ವವುಳ್ಳ ವಸ್ತುವಿನಲ್ಲಿ ಘಟತ್ವಪ್ರಕಾರಕಜ್ಞಾನ ಎಂದಾಯಿತು. ಆದ್ದರಿಂದ ಇದು ಪರಿಶೇಷದಿಂದ ಪ್ರಮೆಯಾಗುತ್ತದೆ. ಆದ್ದರಿಂದ ಜ್ಞಾನಸಾಮಾನ್ಯಸಾಮಗ್ರಿಯೇ ಪ್ರಮೆಯನ್ನು ಉಂಟುಮಾಡಿಕೊಡುತ್ತದೆ. ಪ್ರಮೆಗೆ ಕಾರಣವಾಗಿ ಬೇರೆ ಯಾವ ಗುಣವನ್ನೂ ಹುಡುಕುವ ಅವಶ್ಯಕತೆಯಿಲ್ಲ.

ಗೋವತ್ಸಜನನೇ ಗೋಭಿರ್ಗೋರ್ವೃಷೈರೇವ ಪೂರ್ಯತೇ ।
ವಿಜಾತೀಯಸ್ಯ ವತ್ಸಸ್ಯ ತತ್ಸದೃಕ್ಷೋಽಪರೋಽಪಿ ಚ ॥ ೪೫೯ ॥

**ಮಹಿಷೋ ವಾ ಪಿಶಾಚೋ ವಾ ಕಶ್ಚಿನ್ನಿಶ್ಚೀಯತೇ ಯತಃ ।**
**ಅತಃ ಸ್ವಯೋಗ್ಯಾರ್ಥಬೋಧೇ ಚಕ್ಷುಷಾಽನ್ಯನ್ನ ಮಾನ್ಯತೇ ॥ ೪೬೦ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಗೋವತ್ಸಜನನೇ = ದನದ ಕರುವು ಹುಟ್ಟಬೇಕಾದರೆ, ಗೋಭಿಃ = ಹಸುಗಳಿಂದ, ಗೋವೃಷೈರೇವ = ಎತ್ತುಗಳಿಂದಲೇ, ಪೂರ್ಯತೇ = ಪೂರೈಸಲ್ಪಡುತ್ತದೆ. ವಿಜಾತೀಯಸ್ಯ = ವಿಲಕ್ಷಣವಾದ, ವತ್ಸಸ್ಯ = ಕರುವಿನ, ಜನನೇ = ಹುಟ್ಟಿಗಾಗಿ, ತತ್ಸದೃಕ್ಷಃ = ಅದಕ್ಕೆ ಸರಿಯಾದ,ಅಪರಃ ಅಪಿ ಚ= ಬೇರೆ ರೀತಿಯಾದ, ಮಹಿಷೋ ವಾ = ಮಹಿಷವೋ, ಪಿಶಾಚೋ ವಾ = ಪಿಶಾಚಿಯೋ, ಕಶ್ಚಿತ್ = ಯಾವುದೋ ಒಂದು, ನಿಶ್ಚೀಯತೇ= ನಿಶ್ಚಯಿಸಲ್ಪಡುತ್ತದೆ. ಇದರಂತೆ, ಸ್ವಯೋಗ್ಯಾರ್ಥಬೋಧೇ = ತನಗೆ ಯೋಗ್ಯವಾದ ಪದಾರ್ಥಜ್ಞಾನದ ವಿಷಯದಲ್ಲಿ, ಚಕ್ಷುಷಾ = ಕಣ್ಣಿನಿಂದ, ಅನ್ಯತ್= ಬೇರೆ ಯಾವ ಪದಾರ್ಥವೂ, ನ ಮಾನ್ಯತೇ = ಅಪೇಕ್ಷಿಸಲ್ಪಡುವುದಿಲ್ಲ.

**ಅನುವಾದ– ಹಸುವಿನ ಕರು ಹುಟ್ಟಬೇಕಾದರೆ ಹಸು ಮತ್ತು ಹೋರಿ ಎರಡು ಇದ್ದರೆ ಸಾಕು. ಆದರೆ ವಿಜಾತೀಯವಾದ ಕರು ಉಂಟಾಗಬೇಕಾದರೆ ಹಸುವಿಗೆ ಸದೃಶವಾದದ್ದಾಗಲೀ ಅಥವಾ ಹಸುವಿಗೆ ವಿಸದೃಶವಾದುದ್ದಾಗಲೀ ಇನ್ನೊಂದು ಪ್ರಾಣಿಯು ಬೇಕು. ನಾಲ್ಕು ಕಾಲುಳ್ಳ ಹಸುವಿನಂತಿರುವ ಇನ್ನೊಂದು ವಿಜಾತೀಯ ಪ್ರಾಣಿಯು ಬೇಕಾದರೆ ಕೋಣವು ಬೇಕು. ಅಥವಾ ವಿಚಿತ್ರವಾದ ಕೈಕಾಲುಗಳುಳ್ಳ ಪ್ರಾಣಿಯು ಬೇಕಾದರೆ ಪಿಶಾಚಿಯು ಬೇಕು. ಆದ್ದರಿಂದ ಚಕ್ಷುಸ್ಸು ಸ್ವಯೋಗ್ಯವಾದ ಅರ್ಥದ ಜ್ಞಾನವನ್ನುಂಟುಮಾಡಿಕೊಡಬೇಕಾದರೆ ಬೇರೆ ಏನನ್ನೂ ಅಪೇಕ್ಷಿಸುವುದಿಲ್ಲ.**

**ಭಾವವಿಲಾಸಿನೀ–ತತ್ರ ದೃಷ್ಟಾಂತಮಾಹ – ಗೋವತ್ಸೇತಿ ॥ ಗೋಭಿರ್ಧೇನುಭಿಃ । ಗೋವೃಷೈರ್ಗೋವೃಷಭೈಃ । ವಿಜಾತೀಯಸ್ಯ ವತ್ಸಸ್ಯ ತಸ್ಯಾಮೇವ ಗವಿ ವಿಜಾತೀಯಸ್ಯ ಗೋವಿಜಾತೀಯಸ್ಯ ಮಹಿಷಾದ್ಯಾಕಾರವತ್ಸಸ್ಯ । ತತ್ಸದೃಕ್ಷಃ ಮಹಿಷೋ ವಾ । ಅಪರಃ ಕಶ್ಚಿತ್ ಪಿಶಾಚೋಽಪಿ ವಾ । ಮಹಿಷಾಕಾರವತ್ಸಸ್ಯ ಮಹಿಷಃ ಶೃಂಗಪುಚ್ಛಾದಿಭಿರ್ವಿಕೃತಸ್ಯ ತು ವತ್ಸಸ್ಯ ಪಿಶಾಚ ಇತಿ (ಕಂ೦ ವಿವೇಕಃ । ಯತೋ ನಿಶ್ಚೀಯತೇಽತ ಇತಿ ಸಂಬಂಧಃ ॥ ೪೫೯-೪೬೦ ॥**

**ವಿವರಣೆ–** ಚಾಕ್ಷುಷಜ್ಞಾನ ಮತ್ತು ಸಾಮಾನ್ಯಸಾಮಗ್ರಿಗಳೆಂದರೆ ಹಸು ಮತ್ತು ಹೋರಿಗಳಿದ್ದಂತೆ. ಅವುಗಳಿಂದ ಇನ್ನೊಂದು ಗೋವತ್ಸವೇ ಉಂಟಾಗುತ್ತದೆ. ಗೋವತ್ಸವುಂಟಾಗಲು ಇನ್ನೊಂದು ಕಾರಣದ ಅಪೇಕ್ಷೆಯಿಲ್ಲ. ಹಾಗೇ ಚಾಕ್ಷುಷಪ್ರಮೆಯು ಉಂಟಾಗಬೇಕಾದರೆ ಚಕ್ಷುಸ್ಸು ಘಟ ಮತ್ತು ಅವುಗಳ ಸನ್ನಿಕರ್ಷವನ್ನು ಬಿಟ್ಟು ಬೇರೆ ಕಾರಣದ ಅಪೇಕ್ಷೆಯಿಲ್ಲ. ಆದ್ದರಿಂದ ಜ್ಞಾನಸಾಮಾನ್ಯ ಸಾಮಗ್ರಿಯೇ ಪ್ರಮಾಜನನ-ಸಾಮಗ್ರಿ. ವಿಜಾತೀಯವಾದ ಅಥವಾ ವಿಚಿತ್ರವಾದ ಕರುವನ್ನು ಪಡೆಯಲು ಮಹಿಷ

ಅಥವಾ ಪಿಶಾಚಿಯು ಬೇಕಾದಂತೆ ಅಪ್ರಾಮಾಣ್ಯವನ್ನು ಪಡೆಯಲು ದೋಷವು ಬೇಕಾಗುತ್ತದೆ. ದೋಷವಿಲ್ಲದಿದ್ದರೆ ಅಪ್ರಾಮಾಣ್ಯವು ಉಂಟಾಗುವುದೇ ಇಲ್ಲ. ಆದ್ದರಿಂದ ಅಪ್ರಾಮಾಣ್ಯಕ್ಕೆ ಪರತಸ್ತ್ವವನ್ನೂ, ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಒಪ್ಪುತ್ತೇವೆ.

**ಸ್ವಾಯೋಗ್ಯವಿಪರೀತಾರ್ಥಧೀಷು ದೋಷೋಽಪ್ಯಪೇಕ್ಷ್ಯತೇ ॥ ೪೬೧ ॥**

**ಅರ್ಥ–** ಸ್ವಾಯೋಗ್ಯ = ತನಗೆ ಅಯೋಗ್ಯವಾದ, ವಿಪರೀತಾರ್ಥಧೀಷು = ವಿಪರೀತ ಜ್ಞಾನವು ಬರುವ ಸ್ಥಳಗಳಲ್ಲಿ, ದೋಷಃ ಅಪಿ= ಕಣ್ಣಿನ ಜೊತೆಗೆದೋಷವೂ ಕೂಡ, ಅಪೇಕ್ಷ್ಯತೇ = ಅಪೇಕ್ಷಿಸಲ್ಪಡುತ್ತದೆ.

**ಅನುವಾದ–** ಚಕ್ಷುರಾದೀಂದ್ರಿಯಗಳಿಗೆ ಅಯೋಗ್ಯವಾದ ವಿಪರೀತಾರ್ಥ ವಿಷಯದ ಜ್ಞಾನದಲ್ಲಿ ದೋಷದ ಅವಶ್ಯಕತೆಯಿರುತ್ತದೆ.

**ಭಾವವಿಲಾಸಿನೀ–**ಸ್ವಾಯೋಗ್ಯವಿಜಾತೀಯಕಾರ್ಯೇ ಏವ ವಿಜಾತೀಯ- ಕಾರಣಾಂತರಾಪೇಕ್ಷಣಾದಿತಿ ಭಾವಃ । ಅನ್ಯದ್ ಗುಣಾದಿಕಮ್ । ಸ್ವಾಯೋಗ್ಯವಿಪರೀತಾರ್ಥ- ಧೀಷ್ವತ್ಯನ್ತಾಸತ್ತ್ವೇನ ಚಕ್ಷುರಯೋಗ್ಯ ವಿಪರೀತಾರ್ಥರಜತಾದಿಭ್ರಮೇಷು ॥ ೪೬೧ ॥

**ವಿವರಣೆ–** 'ಇದಂ ರಜತಂ' ಎಂಬುವುದು ಒಂದು ವಿಪರೀತಾರ್ಥಜ್ಞಾನ. ಇದರಲ್ಲಿ ತೋರುವ ರಜತವು ಅತ್ಯಂತ ಅಸತ್ ಆಗಿದೆ. ಚಕ್ಷುಸ್ಸಿಗೆ ಸ್ವತಃ ಅಸತ್ತಾದ ವಿಷಯವನ್ನು ಗ್ರಹಿಸುವ ಯೋಗ್ಯತೆ ಇಲ್ಲ. ಆದರೆ ಜ್ಞಾನವು ಬರುತ್ತಿದೆಯಾದ್ದರಿಂದ ಇಲ್ಲಿ ದೋಷದ ಅಪೇಕ್ಷೆ ಇದೆ.

**ಇಂದ್ರಿಯಸ್ಯಾರ್ಥಸಂಬಂಧೋ ಜ್ಞಾನಸಾಮಾನ್ಯಕಾರಣಮ್ ।**
**ಯಚ್ಚಕ್ಷುಃಶುಕ್ತಿಸಂಯೋಗಿ ಸಾ ಚ ರೂಪ್ಯೋಪಮಾ ರುಚಾ ।**
**ಪ್ರತೀತ್ಯಾ ವ್ಯವಹೃತ್ಯಾ ಚಾರೋಪ್ಯಂ ರೂಪ್ಯೋಪಮಂ ಕಿಲ ॥ ೪೬೨ ॥**

**ಅರ್ಥ–** ಇಂದ್ರಿಯಸ್ಯ= ಇಂದ್ರಿಯಕ್ಕೆ, ಅರ್ಥಸಂಬಂಧಃ= ಪದಾರ್ಥದ ಸಂಬಂಧವು, ಜ್ಞಾನಸಾಮಾನ್ಯಕಾರಣಮ್ = ಜ್ಞಾನಸಾಮಾನ್ಯವನ್ನು ಕುರಿತು ಕಾರಣ, ಯತ್ = ಯಾವ ಕಾರಣದಿಂದ, ಚಕ್ಷುಃ = ಚಕ್ಷುರಿಂದ್ರಿಯವು, ಶುಕ್ತಿಸಂಯೋಗಿ = ಕಪ್ಪೆಚಿಪ್ಪಿನಿಂದ ಸಂಯುಕ್ತವಾಗಿದೆ. ಚ= ಮತ್ತು, ಸಾ= ಆ ಕಪ್ಪೆಚಿಪ್ಪು, ರುಚಾ = ಕಾಂತಿಯಿಂದ, ಪ್ರತೀತ್ಯಾ = ಪ್ರತೀತಿಯಿಂದ, ವ್ಯವಹೃತ್ಯಾ = ವ್ಯವಹಾರದಿಂದ, ರೂಪ್ಯೋಪಮಾ = ಬೆಳ್ಳಿಗೆ ಸದೃಶವಾಗಿದೆ, ತತ್= ಆದ್ದರಿಂದ, ಆರೋಪ್ಯಂ = ಅರೋಪ್ಯವಾದರಜತವು, ರೂಪ್ಯೋಪಮಂ ಕಿಲ = ವಾಸ್ತವ ರಜತಕ್ಕೆ ಸದೃಶವಾಗಿದೆಯಷ್ಟೇ.

**ಅನುವಾದ–** ಜ್ಞಾನಸಾಮಾನ್ಯವನ್ನು ಕುರಿತು ಇಂದ್ರಿಯ ಮತ್ತು ಅರ್ಥದ ಸನ್ನಿಕರ್ಷವು ಕಾರಣ. 'ಇದಂ ರಜತಂ' ಎಂಬ ಭ್ರಾಂತಿಯ ಸ್ಥಳದಲ್ಲಿ ಚಕ್ಷುಸ್ಸಿಗೂ ಶುಕ್ತಿಗೂ

**ಸನ್ನಿಕರ್ಷವಿದೆ. ಶುಕ್ತಿಯು ಕಾಂತಿಯಿಂದಲೂ, ರಜತ ಎಂಬ ವ್ಯವಹಾರದಿಂದಲೂ, ರಜತಕ್ಕೆ ಸದೃಶವಾಗಿದೆ. ಆದ್ದರಿಂದ ಅಲ್ಲಿ ಆರೋಪ್ಯವಾದ ರಜತವು ವಾಸ್ತವರಜತಕ್ಕೆ ಸದೃಶವಾಗಿದೆಯಷ್ಟೇ?**

**ಭಾವವಿಲಾಸಿನೀ**—ನನ್ವಯಂ ಘಟ ಇತಿ ಪ್ರಮಾಯಾಂ ವಿಶೇಷಣೀಭೂತಘಟೇನಾಪಿ ಸನ್ನಿಕರ್ಷಶ್ಚಕ್ಷುಷೋಽಸ್ತಿ । ಭ್ರಮೇ ತು ರಜತಚಕ್ಷುಸ್ಸನ್ನಿಕರ್ಷಾಭಾವಾದ್ವಿಶೇಷಣ- ಸನ್ನಿಕರ್ಷೋ ನಾಸ್ತಿ । ಅತಃ ಕಥಮುಕ್ತಾ ಪ್ರಮಾಸಾಮಗ್ರೀ ಸಾಮಾನ್ಯಸಾಮಗ್ರೀತ್ಯತಸ್ತದುಪಪಾದಯತಿ – **ಇಂದ್ರಿಯಸ್ಯೇತಿ** ॥ ಜ್ಞಾನಸಾಮಾನ್ಯಕಾರಣಭೂತೇಂದ್ರಿಯಾರ್ಥಸನ್ನಿಕರ್ಷೋ ಭ್ರಮೇಽಪ್ಯಸ್ತಿ । ಯದ್ಯಸ್ಮಾಚ್ಚಕ್ಷುಶ್ಶುಕ್ತಿಸಂಯೋಗಿ । ಸಾ ಚ ಶುಕ್ತಿಃ ರುಚಾ ಕಾನ್ತ್ಯಾ ರಜತೋಪಮಾ। ಆರೋಪ್ಯಂ ಶುಕ್ತಿಕಾಯಾಮಾರೋಪ್ಯಂ ರಜತಂ ಪ್ರತೀತ್ಯಾ ವ್ಯವಹೃತ್ಯಾ ಚ ರಜತತ್ವಪ್ರಕಾರಕಪ್ರತೀತ್ಯು- ಲ್ಲೇಖ್ಯತ್ವೇನ ರಜತಮಿತ್ಯಭಿಧಾವಿಷಯತ್ವೇನ ಚ ರೂಪ್ಯೋಪಮಂ ಪ್ರಧಾನಭೂತ- ರೂಪ್ಯಸದೃಶಮ್ । ಕಿಲೇತ್ಯನೇನಾಸ್ಯ ಸರ್ವಸ್ಯ ಪ್ರಮೇಯಸ್ಯ ವ್ಯವಹಾರಸಿದ್ಧತಾಂ ದರ್ಶಯತಿ । ತಥಾಚ ಚಕ್ಷುಸ್ಸನ್ನಿಕೃಷ್ಟಶುಕ್ತಿಶಕಲಸದೃಶಸದ್ರೂಪ್ಯಸಾದೃಶ್ಯಮಾರೋಪ್ಯೇಽಪ್ಯಸ್ತಿ । ತಸ್ಮಾತ್ಪರ- ಮ್ಪರಯಾಽರೋಪ್ಯರಜತಮಪಿ ಚಕ್ಷುಸ್ಸನ್ನಿಕೃಷ್ಟಮೇವೇತಿ ವಿಶೇಷಣಸನ್ನಿಕರ್ಷಸ್ಯಾಪಿ ಭ್ರಮ- ಸಾಧಾರಣತ್ವಾತ್ ಸಾಮಾನ್ಯಸಾಮಗ್ರೀತ್ವಮ್ । ನಹಿ ಸರ್ವತ್ರೈಕವಿಧ ಏವ ಸನ್ನಿಕರ್ಷ ಇತಿ ನಿಯಮೋಽಸ್ತಿ । ಕ್ವಚಿತ್ಸಂಯೋಗಃ ಕ್ವಚಿತ್ಸಮವಾಯಃ ಕ್ವಚಿದ್ವಿಶೇಷಣವಿಶೇಷ್ಯಭಾವಶ್ಚೇತಿ ತ್ವಯಾಽಪ್ಯಂಗೀಕಾರಾದಿತಿ ಭಾವಃ ॥ ೪೬೨ ॥

**ವಿವರಣೆ**— ಜ್ಞಾನಸಾಮಾನ್ಯಸಾಮಗ್ರಿಯೇ, ಪ್ರಮಾಸಾಮಗ್ರಿ ಎಂದು ಹಿಂದೆ ಹೇಳಿದೆವು. ಅದನ್ನು ಆಕ್ಷೇಪಿಸಿ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ. 'ಅಯಂ ಘಟಃ' ಎಂಬ ಪ್ರಮಾಸ್ಥಳದಲ್ಲಿ ಘಟವು ಅಭೇದ ಸಂಬಂಧದಿಂದ ಪೂರ್ವವರ್ತಿಯಲ್ಲಿ ವಿಶೇಷಣವಾಗಿ ತೋರುತ್ತದೆ. ಅಂತಹ ಘಟಕ್ಕೂ ಮತ್ತು ಚಕ್ಷುಸ್ಸಿಗೂ ಸನ್ನಿಕರ್ಷವಿದೆ. ಭ್ರಮಸ್ಥಳದಲ್ಲಿ ರಜತವು ಅಭೇದ ಸಂಬಂಧದಿಂದ ವಿಶೇಷಣವಾಗಿ ತೋರುತ್ತದೆ. ಆದರೆ ರಜತಕ್ಕೂ ಮತ್ತು ಚಕ್ಷುಸ್ಸಿಗೂ ಸನ್ನಿಕರ್ಷವಿಲ್ಲ. ಜ್ಞಾನಸಾಮಾನ್ಯ ಸಾಮಗ್ರಿಯೇ ಪ್ರಮಾಸಾಮಗ್ರಿಯೂ ಆಗುವುದಾದರೆ, ಭ್ರಾಂತಿಸ್ಥಳದಲ್ಲಿಯೂ ಆ ಸಾಮಗ್ರಿಯು ಇರಬೇಕಾಗುತ್ತದೆ. ಆದರೆ ವಿಶೇಷಣಚಕ್ಷುಸ್ಸನ್ನಿಕರ್ಷರೂಪವಾದ ಪ್ರಮಾಸಾಮಗ್ರಿಯು ಭ್ರಾಂತಿಸ್ಥಳದಲ್ಲಿ ಇಲ್ಲವಾದ್ದರಿಂದ ಜ್ಞಾನಸಾಮಾನ್ಯಸಾಮಗ್ರಿಯೇ ಹೇಗೆ ಪ್ರಮಾಸಾಮಗ್ರಿಯಾಗುತ್ತದೆ ಎಂದು ಆಕ್ಷೇಪ. ಇದಕ್ಕೆ ಸಮಾಧಾನವೇನೆಂದರೆ, ಚಕ್ಷುಸ್ಸಿಗೂ ಶುಕ್ತಿಗೂ ಸನ್ನಿಕರ್ಷವಿದೆ. ಆ ಶುಕ್ತಿಗೂ ವಾಸ್ತವವಾದ ರೂಪ್ಯಕ್ಕೂ ಕಾಂತಿಯಿಂದ ಸಾದೃಶ್ಯವಿದೆ. ವಾಸ್ತವವಾದ ರೂಪ್ಯಕ್ಕೂ ಭ್ರಾಂತಿಯಲ್ಲಿ ತೋರುವ ರೂಪ್ಯಕ್ಕೂ ಸಹ ಕಾಂತಿಯಿಂದಲೂ ಮತ್ತು ರಜತಶಬ್ದವ್ಯವಹಾರದಿಂದಲೂ ಸಾದೃಶ್ಯವಿದೆ. ಆದ್ದರಿಂದ ಚಕ್ಷುಸನ್ನಿಕೃಷ್ಟ ಶುಕ್ತಿಸದೃಶ ವಾಸ್ತವರೂಪ್ಯಸಾದೃಶ್ಯವು ಅಸತ್ತಾದ ರಜತದಲ್ಲಿದೆ. ಈ ಸಾದೃಶ್ಯವನ್ನೇ ಸನ್ನಿಕರ್ಷವೆಂದು ಹೇಳುವುದು. ಅಂದರೆ ವಿಶೇಷಣಕ್ಕೂ ಮತ್ತು ಚಕ್ಷುಸ್ಸಿಗೂ ಇಲ್ಲಿಯೂ ಸನ್ನಿಕರ್ಷವಿದೆ.

ಸನ್ನಿಕರ್ಷವು ಕೆಲವು ಕಡೆ ಸಂಯೋಗರೂಪವಾದುದು, ಕೆಲವು ಕಡೆ ಸಮವಾಯ-ರೂಪವಾದುದು, ಕೆಲವು ಕಡೆ ವಿಶೇಷಣವಿಶೇಷ್ಯಭಾವರೂಪವಾದುದು ಎಂದು ನೀನೂ ಒಪ್ಪುತ್ತೀಯೆ. ಆದ್ದರಿಂದ ಭ್ರಾಂತಿಯಸ್ಥಳದಲ್ಲಿಯೂ ವಿಶೇಷಣಸನ್ನಿಕರ್ಷವಿರುವುದರಿಂದ ಭ್ರಮಸಾಮಗ್ರಿ ಇದೆ. ಆದ್ದರಿಂದ ಜ್ಞಾನಸಾಮಾನ್ಯಸಾಮಗ್ರಿಯೇ ಭ್ರಮಸಾಮಗ್ರಿ ಎಂದು ಹೇಳುವುದಕ್ಕೆ ಯಾವ ವಿರೋಧವೂ ಇಲ್ಲ.

**ಇತ್ಥಂ ರೂಪ್ಯಭ್ರಮಸ್ತಸ್ಯಾಂ ಮಷ್ಯಾದೇರ್ನಭ್ರಮೋಽತ್ರ ತತ್ ॥ ೪೬೩ ॥**

**ಅರ್ಥ–** ಇತ್ಥಂ = ಈ ಸಾದೃಶ್ಯದಿಂದಾಗಿ, ತಸ್ಯಾಂ = ಶುಕ್ತಿಯಲ್ಲಿ, ರೂಪ್ಯಭ್ರಮಃ = ಬೆಳ್ಳಿಯೆಂಬ ಭ್ರಮೆಯು ಬರುತ್ತದೆ. ಅತ್ರ = ಇಲ್ಲಿ, ಮಷ್ಯಾದೇಃ = ಇದ್ದಿಲು ಮೊದಲಾದುವುಗಳ, ತತ್ = ಆ, ಭ್ರಮಃ = ಭ್ರಮೆಯು, ನ = ಬರುವುದಿಲ್ಲ.

**ಅನುವಾದ– ಹೀಗೆ, ಸಾದೃಶ್ಯವು ಅವಶ್ಯಕವಾದ ಕಾರಣದಿಂದಲೇ ಶುಕ್ತಿಯಲ್ಲಿ ರೂಪ್ಯಭ್ರಮವು ಉಂಟಾಗುತ್ತದೆ. ಇದ್ದಿಲು ಎಂಬ ಭ್ರಮವು ಉಂಟಾಗುವುದಿಲ್ಲ.**

**ಭಾವವಿಲಾಸಿನೀ–**ಉಕ್ತಸಾದೃಶ್ಯಸ್ಯಾವಶ್ಯಕತಾಮಾಹ – **ಇತ್ಥಮಿತಿ** ॥ ಇತ್ಥಂ ಪೂರ್ವೋಕ್ತ-ಸಾದೃಶ್ಯಘಟಿತತ್ವೇನ ತಸ್ಯಾಂ ಶುಕ್ತೌ ರೂಪ್ಯಭ್ರಮಃ ರೂಪ್ಯಭ್ರಮ ಏವಾಸ್ತಿ । ತತ್ತಸ್ಮಾತ್ಸಾದೃಶ್ಯ-ಸ್ಯಾಪೇಕ್ಷಿತತ್ವಾದೇವಾತ್ರ ಶುಕ್ತೌ ಮಷ್ಯಾದೇರ್ವಿಸದೃಶಸ್ಯ ಭ್ರಮೋ ನೇತಿ ಸಂಬಂಧಃ । ಅಥವಾ ಯದ್ವಸ್ಮಾತ್ತಸ್ಯಾಂ ಶುಕ್ತೌ ರೂಪ್ಯಭ್ರಮ ಏವಾಸ್ತಿ । ಅತ್ರ ಶುಕ್ತೌ ಮಷ್ಯಾದೇರ್ವಿಸದೃಶಸ್ಯ ಭ್ರಮೋ ನ । ತತ್ತಸ್ಮಾತ್ ಸಾದೃಶ್ಯಸ್ಯ ನಿರುಪಾಧಿಕಭ್ರಮೇಽನ್ವಯವ್ಯತಿರೇಕಾನುವಿಧಾಯಕತ್ವಾದ್ ಇತ್ಥಂ ಪ್ರಾಗುಕ್ತಪ್ರಮೇಯಮಿತ್ಥಮೇವೇತ್ಯರ್ಥಃ । ಅನ್ಯಥಾಖ್ಯಾತಿಮತೇ ತು ಚಕ್ಷುಸ್ಸನ್ನಿಕೃಷ್ಟಶುಕ್ತ್ಯಾ ಸಾಕ್ಷಾತ್ಸಾದೃಶ್ಯಮೇವ ಸಂಬಂಧ ಇತಿ ದ್ರಷ್ಟವ್ಯಮ್ । ವ್ಯಾಪ್ತಿಗ್ರಹಣಸ್ಥಲೇ ಚಕ್ಷುಸ್ಸನ್ನಿಕೃಷ್ಟಧೂಮಸಾದೃಶ್ಯಸ್ಯ ವಾ ಧೂಮತ್ವಸಾಮಾನ್ಯಪ್ರತ್ಯಾಸತ್ತೇರ್ವಾಽತೀತಾನಾಗತ-ಧೂಮಸಂಬಂಧತ್ವಾಂಗೀಕಾರಾನ್ನೇದಮಪೂರ್ವಮ್ । ವಸ್ತುತಸ್ಸಮಾನಸ್ಯ ಭಾವಸ್ಸಾಮಾನ್ಯ-ಮಿತಿ ವ್ಯುತ್ಪತ್ತೇಸ್ಸಾಮಾನ್ಯಮಪಿ ಸಾದೃಶ್ಯಘಟಕಮೇವ ॥ ೪೬೩ ॥

**ವಿವರಣೆ–** ಮೇಲೆ ಹೇಳಿದ ಸಾದೃಶ್ಯವನ್ನು ಅವಶ್ಯಕವಾಗಿ ಅಂಗೀಕರಿಸಬೇಕೆಂದು ಈ ಶ್ಲೋಕದಲ್ಲಿ ಉಪಪಾದನೆ ಮಾಡುತ್ತಾರೆ. ಹಿಂದೆ ಹೇಳಿದ ಪರಂಪರಾ ಸಂಬಂಧದಿಂದ ಶುಕ್ತಿಯಲ್ಲಿ ರಜತಭ್ರಮವೇ ಇದೆ. ಸಾದೃಶ್ಯವು ಕಾರಣವಾಗದಿದ್ದರೆ, ಶುಕ್ತಿಯಲ್ಲಿ ಏಕೆ ಇದ್ದಿಲು ಎಂಬ ಭ್ರಮೆಯು ಬರಲಿಲ್ಲ? ಇದ್ದಿಲು ವಿಸದೃಶವಾದ ಕಾರಣ ಬರಲಿಲ್ಲ ಎಂದು ಹೇಳಬೇಕು. ಆದ್ದರಿಂದ ಭ್ರಾಂತಿಯಸ್ಥಳದಲ್ಲಿ ಅಧಿಷ್ಠಾನಸಾದೃಶ್ಯವನ್ನು ಅವಶ್ಯಕವಾಗಿ ಒಪ್ಪಬೇಕು. ಅನ್ಯಥಾಖ್ಯಾತಿವಾದಿಗಳು ಮಾತ್ರ ಆರೋಪ್ಯಮಾಣ-ವಾದುದರಲ್ಲಿ ಚಕ್ಷುಸನ್ನಿಕೃಷ್ಟವಾದ ಶುಕ್ತಿಯ ಸಾಕ್ಷಾತ್ಸಾದೃಶ್ಯವನ್ನೇ ಒಪ್ಪುತ್ತಾರೆ. ನಾವು ಚಕ್ಷುಸನ್ನಿಕೃಷ್ಟ ಶುಕ್ತಿಸದೃಶ ವಾಸ್ತವರೂಪ್ಯಸಾದೃಶ್ಯವನ್ನು ಒಪ್ಪುತ್ತೇವೆ. ವ್ಯಾಪ್ತಿಗ್ರಹಣಸ್ಥಳದಲ್ಲಿ

ಒಂದು ಧೂಮವನ್ನು ನೋಡಿದಾಗ ಸಾದೃಶ್ಯದಿಂದ ಅಥವಾ ಧೂಮತ್ವಸಾಮಾನ್ಯ ಎಂಬ ಸನ್ನಿಕರ್ಷದಿಂದ ಅತೀತಾನಾಗತ ಎಲ್ಲಾ ಧೂಮಗಳ ಜ್ಞಾನವು ಬರುತ್ತದೆ ಎಂದು ಅವರು ಒಪ್ಪುತ್ತಾರೆ. ಧೂಮತ್ವಸಾಮಾನ್ಯ ಎಂದರೆ ಸಮಾನಗಳ ಭಾವಸಾಮಾನ್ಯ ಎಂದಿರುವುದರಿಂದ, ಸಮಾನ ಎಂದರೆ ಸದೃಶ ಎಂದು ಅರ್ಥವಾಗುವುದರಿಂದ, ಸಾಮಾನ್ಯವು ಸಾದೃಶ್ಯಘಟಿತವಾಗಿಯೇ ಇದೆ. ಆದ್ದರಿಂದ ಭ್ರಾಂತಿಯಸ್ಥಳದಲ್ಲಿಯೂ ಸಹ ವಿಶೇಷಣಸನ್ನಿಕರ್ಷವನ್ನು ಉಪಪಾದನೆ ಮಾಡಿರುವುದರಿಂದ ಯಾವ ವಿರೋಧವೂ ಇಲ್ಲ.

**ಚಕ್ಷುಃಸ್ಥಪೀತಪಿತ್ತೇನ ಯೋಗಾಚ್ಛಂಖೇऽಪಿ ಪೀತಧೀಃ ।**
**ಅತಃ ಪಾರಂಪರ್ಯತೋऽರ್ಥಸಂಬಂಧೋऽಸ್ತಿ ಭ್ರಮೇऽಪಿ ಚ ॥ ೪೬೪ ॥**

**ಅರ್ಥ–** ಚಕ್ಷುಃಸ್ಥಪೀತಪಿತ್ತೇನ = ಕಣ್ಣಿನಲ್ಲಿರುವ ಪೀತವಾದ ಪಿತ್ತದ್ರವ್ಯದ, ಯೋಗಾತ್ = ಸಂಬಂಧದಿಂದ, ಶಂಖೇ ಅಪಿ = ಶಂಖದಲ್ಲಿಯೂ, ಪೀತಧೀಃ = ಹಳದಿಯೆಂಬ ಬುದ್ಧಿಯು ಉಂಟಾಗುತ್ತದೆ. ಅತಃ = ಆದ್ದರಿಂದ, ಪಾರಂಪರ್ಯತಃ = ಪರಂಪರೆದಿಂದ, ಅರ್ಥಸಂಬಂಧಃ = ಚಕ್ಷುಸ್ಸಿಗೆ ಅರ್ಥ ಸಂಬಂಧವು, ಭ್ರಮೇ ಅಪಿ ಚ= ಭ್ರಮಸ್ಥಳದಲ್ಲಿಯೂ ಕೂಡ, ಅಸ್ತಿ = ಇದೆ.

**ಅನುವಾದ–** 'ಪೀತಃ ಶಂಖಃ' ಎಂದು ಭ್ರಮವು ಬರುವ ಸ್ಥಳದಲ್ಲಿ ಚಕ್ಷುಃಸಂಯುಕ್ತವಾದುದು ಶಂಖ. ಶಂಖಸನ್ನಿಕೃಷ್ಟವಾದುದು ಪೀತವಾದ ಪಿತ್ತದ್ರವ್ಯ. ಅದರಲ್ಲಿರುವುದು ಪೀತಿಮಾ (ಹಳದಿ ಬಣ್ಣ). ಆದ್ದರಿಂದ ಚಕ್ಷುಸಂಯುಕ್ತ ಶಂಖಸಂಯುಕ್ತ ಪಿತ್ತದ್ರವ್ಯಸಂಬಂಧಿತ್ವವು ವಿಶೇಷಣವಾಗಿ ತೋರುವ ಪೀತಿಮಾಗುಣದಲ್ಲಿ ಇದೆ. ಆದ್ದರಿಂದ ಅಲ್ಲಿಯೂ ಪರಂಪರಾಸಂಬಂಧದಿಂದ ವಿಶೇಷಣ ಸನ್ನಿಕರ್ಷವೂ ಇದ್ದೇ ಇದೆ.

**ಭಾವವಿಲಾಸಿನೀ–ಸೋಪಾಧಿಕಭ್ರಮೇऽಪಿ ಚಕ್ಷುಸ್ಸನ್ನಿಕರ್ಷಮುಪಪಾದಯತಿ – ಚಕ್ಷುಃಸ್ಥೇತಿ॥** ಚಕ್ಷುಸ್ಸ್ಥಂ ಯತ್ಪೀತಂ ಪಿತ್ತಂ ತೇನ ಯೋಗಾಚ್ಛಂಖೇऽಪಿ ಪೀತಧೀಃ ಪೀತಶ್ಶಂಖ ಇತಿ ಧೀರ್ಭವತಿ ಯತೋऽತಃ ಪೀತಶ್ಶಂಖ ಇತಿ ಭ್ರಮೇऽಪಿ ಪಾರಂಪರ್ಯತಃ ಚಕ್ಷುಸ್ಸಂಯೋಗಃ ಶಂಖೇ ತಸ್ಮಿಂಶ್ಚ ನಾಯನಪಿತ್ತಸಂಬಂಧಸ್ತತ್ರ ಚ ಪೀತಿಮೇತಿ ಪರಮ್ಪರಯಾ ಶಂಖೇऽಪಿ ಪೀತಗುಣಸಂಬಂಧೋऽಸ್ತಿ । ಅತಃ ಪೀತಶ್ಶಂಖ ಇತಿ ಭ್ರಮ ಇತಿ ಭಾವಃ । ತಥಾಚ ವಿಶೇಷ್ಯೇಂದ್ರಿಯಸನ್ನಿಕರ್ಷೋ ವಿಶೇಷಣೇಂದ್ರಿಯಸನ್ನಿಕರ್ಷಶ್ಚೇತಿ ದ್ವಯಮಪಿ ಜ್ಞಾನಸಾಮಾನ್ಯಸಾಮಗ್ರೀತ್ಯುಕ್ತಂ ಭವತಿ ॥ ೪೬೪ ॥

**ವಿವರಣೆ–** ಹಿಂದೆ ನಿರುಪಾಧಿಕ ಭ್ರಮಸ್ಥಳವನ್ನು ಹೇಳಿ ಈಗ ಸೋಪಾಧಿಕ ಭ್ರಮಸ್ಥಳದಲ್ಲಿಯೂ ವಿಶೇಷಣ ಸನ್ನಿಕರ್ಷವನ್ನು ಉಪಪಾದನೆ ಮಾಡುತ್ತಾರೆ.

ಸನ್ನಿಕರ್ಷವು ಕೆಲವು ಕಡೆ ಸಂಯೋಗರೂಪವಾದುದು, ಕೆಲವು ಕಡೆ ಸಮವಾಯ-ರೂಪವಾದುದು, ಕೆಲವು ಕಡೆ ವಿಶೇಷಣವಿಶೇಷ್ಯಭಾವರೂಪವಾದುದು ಎಂದು ನೀನೂ ಒಪ್ಪುತ್ತೀಯೆ. ಆದ್ದರಿಂದ ಭ್ರಾಂತಿಯಸ್ಥಳದಲ್ಲಿಯೂ ವಿಶೇಷಣಸನ್ನಿಕರ್ಷವಿರುವುದರಿಂದ ಭ್ರಮಸಾಮಗ್ರಿ ಇದೆ. ಆದ್ದರಿಂದ ಜ್ಞಾನಸಾಮಾನ್ಯಸಾಮಗ್ರಿಯೇ ಭ್ರಮಸಾಮಗ್ರಿ ಎಂದು ಹೇಳುವುದಕ್ಕೆ ಯಾವ ವಿರೋಧವೂ ಇಲ್ಲ.

**ಇತ್ಥಂ ರೂಪ್ಯಭ್ರಮಸ್ತಸ್ಯಾಂ ಮಷ್ಯಾದೇರ್ನಭ್ರಮೋಽತ್ರ ತತ್ ॥ ೪೬೩ ॥**

**ಅರ್ಥ–** ಇತ್ಥಂ = ಈ ಸಾದೃಶ್ಯದಿಂದಾಗಿ, ತಸ್ಯಾಂ = ಶುಕ್ತಿಯಲ್ಲಿ, ರೂಪ್ಯಭ್ರಮಃ = ಬೆಳ್ಳಿಯೆಂಬ ಭ್ರಮೆಯು ಬರುತ್ತದೆ. ಅತ್ರ = ಇಲ್ಲಿ, ಮಷ್ಯಾದೇಃ = ಇದ್ದಿಲು ಮೊದಲಾದುವುಗಳ, ತತ್ = ಆ, ಭ್ರಮಃ = ಭ್ರಮೆಯು, ನ = ಬರುವುದಿಲ್ಲ.

**ಅನುವಾದ– ಹೀಗೆ, ಸಾದೃಶ್ಯವು ಅವಶ್ಯಕವಾದ ಕಾರಣದಿಂದಲೇ ಶುಕ್ತಿಯಲ್ಲಿ ರೂಪ್ಯಭ್ರಮವು ಉಂಟಾಗುತ್ತದೆ. ಇದ್ದಿಲು ಎಂಬ ಭ್ರಮವು ಉಂಟಾಗುವುದಿಲ್ಲ.**

**ಭಾವವಿಲಾಸಿನೀ–ಉಕ್ತಸಾದೃಶ್ಯಸ್ಯಾವಶ್ಯಕತಾಮಾಹ – ಇತ್ಥಮಿತಿ ॥** ಇತ್ಥಂ ಪೂರ್ವೋಕ್ತ-ಸಾದೃಶ್ಯಘಟಿತತ್ವೇನ ತಸ್ಯಾಂ ಶುಕ್ತೌ ರೂಪ್ಯಭ್ರಮಃ ರೂಪ್ಯಭ್ರಮ ಏವಾಸ್ತಿ । ತತ್ತಸ್ಮಾತ್ಸಾದೃಶ್ಯ-ಸ್ಯಾಪೇಕ್ಷಿತತ್ವಾದೇವಾತ್ರ ಶುಕ್ತೌ ಮಷ್ಯಾದೇರ್ವಿಸದೃಶಸ್ಯ ಭ್ರಮೋ ನೇತಿ ಸಂಬಂಧಃ । ಅಥವಾ ಯದ್ಯಸ್ಮಾತ್ತಸ್ಯಾಂ ಶುಕ್ತೌ ರೂಪ್ಯಭ್ರಮ ಏವಾಸ್ತಿ । ಅತ್ರ ಶುಕ್ತೌ ಮಷ್ಯಾದೇರ್ವಿಸದೃಶಸ್ಯ ಭ್ರಮೋ ನ । ತತ್ತಸ್ಮಾತ್ ಸಾದೃಶ್ಯಸ್ಯ ನಿರುಪಾಧಿಕಭ್ರಮೇಽನ್ವಯವ್ಯತಿರೇಕಾನುವಿಧಾಯಕತ್ವಾದ್ ಇತ್ಥಂ ಪ್ರಾಗುಕ್ತಪ್ರಮೇಯಮಿತ್ಥಮೇವೇತ್ಯರ್ಥಃ । ಅನ್ಯಥಾಖ್ಯಾತಿಮತೇ ತು ಚಕ್ಷುಸ್ಸನ್ನಿಕೃಷ್ಟಶುಕ್ತ್ಯಾ ಸಾಕ್ಷಾತ್ಸಾದೃಶ್ಯಮೇವ ಸಂಬಂಧ ಇತಿ ದ್ರಷ್ಟವ್ಯಮ್ । ವ್ಯಾಪ್ತಿಗ್ರಹಣಸ್ಥಲೇ ಚಕ್ಷುಸ್ಸನ್ನಿಕೃಷ್ಟಧೂಮಸಾದೃಶ್ಯಸ್ಯ ವಾ ಧೂಮತ್ವಸಾಮಾನ್ಯಪ್ರತ್ಯಾಸತ್ತೇರ್ವಾಽತೀತಾನಾಗತ-ಧೂಮಸಂಬಂಧತ್ವಾಂಗೀಕಾರಾನ್ನೇದಮಪೂರ್ವಮ್ । ವಸ್ತುತಸ್ಸಮಾನಸ್ಯ ಭಾವಸ್ಸಾಮಾನ್ಯ-ಮಿತಿ ವ್ಯುತ್ಪತ್ತೇಸ್ಸಾಮಾನ್ಯಮಪಿ ಸಾದೃಶ್ಯಘಟಕಮೇವ ॥ ೪೬೩ ॥

**ವಿವರಣೆ–** ಮೇಲೆ ಹೇಳಿದ ಸಾದೃಶ್ಯವನ್ನು ಅವಶ್ಯಕವಾಗಿ ಅಂಗೀಕರಿಸಬೇಕೆಂದು ಈ ಶ್ಲೋಕದಲ್ಲಿ ಉಪಪಾದನೆ ಮಾಡುತ್ತಾರೆ. ಹಿಂದೆ ಹೇಳಿದ ಪರಂಪರಾ ಸಂಬಂಧದಿಂದ ಶುಕ್ತಿಯಲ್ಲಿ ರಜತಭ್ರಮವೇ ಇದೆ. ಸಾದೃಶ್ಯವು ಕಾರಣವಾಗದಿದ್ದರೆ, ಶುಕ್ತಿಯಲ್ಲಿ ಏಕೆ ಇದ್ದಿಲು ಎಂಬ ಭ್ರಮೆಯು ಬರಲಿಲ್ಲ? ಇದ್ದಿಲು ವಿಸದೃಶವಾದ ಕಾರಣ ಬರಲಿಲ್ಲ ಎಂದು ಹೇಳಬೇಕು. ಆದ್ದರಿಂದ ಭ್ರಾಂತಿಯಸ್ಥಳದಲ್ಲಿ ಅಧಿಷ್ಠಾನಸಾದೃಶ್ಯವನ್ನು ಅವಶ್ಯಕವಾಗಿ ಒಪ್ಪಬೇಕು. ಅನ್ಯಥಾಖ್ಯಾತಿವಾದಿಗಳು ಮಾತ್ರ ಆರೋಪ್ಯಮಾಣ-ವಾದುದರಲ್ಲಿ ಚಕ್ಷುಸನ್ನಿಕೃಷ್ಟವಾದ ಶುಕ್ತಿಯ ಸಾಕ್ಷಾತ್‌ಸಾದೃಶ್ಯವನ್ನೇ ಒಪ್ಪುತ್ತಾರೆ. ನಾವು ಚಕ್ಷುಸನ್ನಿಕೃಷ್ಟ ಶುಕ್ತಿಸದೃಶ ವಾಸ್ತವರೂಪ್ಯಸಾದೃಶ್ಯವನ್ನು ಒಪ್ಪುತ್ತೇವೆ. ವ್ಯಾಪ್ತಿಗ್ರಹಣಸ್ಥಳದಲ್ಲಿ

ಒಂದು ಧೂಮವನ್ನು ನೋಡಿದಾಗ ಸಾದೃಶ್ಯದಿಂದ ಅಥವಾ ಧೂಮತ್ವಸಾಮಾನ್ಯ ಎಂಬ ಸನ್ನಿಕರ್ಷದಿಂದ ಅತೀತಾನಾಗತ ಎಲ್ಲಾ ಧೂಮಗಳ ಜ್ಞಾನವು ಬರುತ್ತದೆ ಎಂದು ಅವರು ಒಪ್ಪುತ್ತಾರೆ. ಧೂಮತ್ವಸಾಮಾನ್ಯ ಎಂದರೆ ಸಮಾನಗಳ ಭಾವಸಾಮಾನ್ಯ ಎಂದಿರುವುದರಿಂದ, ಸಮಾನ ಎಂದರೆ ಸದೃಶ ಎಂದು ಅರ್ಥವಾಗುವುದರಿಂದ, ಸಾಮಾನ್ಯವು ಸಾದೃಶ್ಯಘಟಿತವಾಗಿಯೇ ಇದೆ. ಆದ್ದರಿಂದ ಭ್ರಾಂತಿಯಸ್ಥಳದಲ್ಲಿಯೂ ಸಹ ವಿಶೇಷಣಸನ್ನಿಕರ್ಷವನ್ನು ಉಪಪಾದನೆ ಮಾಡಿರುವುದರಿಂದ ಯಾವ ವಿರೋಧವೂ ಇಲ್ಲ.

**ಚಕ್ಷುಃಸ್ಥಪೀತಪಿತ್ತೇನ ಯೋಗಾಚ್ಛಂಖೇಽಪಿ ಪೀತಧೀಃ ।**
**ಅತಃ ಪಾರಂಪರ್ಯತೋಽರ್ಥಸಂಬಂಧೋಽಸ್ತಿ ಭ್ರಮೇಽಪಿ ಚ ॥ ೪೬೪ ॥**

**ಅರ್ಥ–** ಚಕ್ಷುಃಸ್ಥಪೀತಪಿತ್ತೇನ = ಕಣ್ಣಿನಲ್ಲಿರುವ ಪೀತವಾದ ಪಿತ್ತದ್ರವ್ಯದ, ಯೋಗಾತ್ = ಸಂಬಂಧದಿಂದ, ಶಂಖೇ ಅಪಿ = ಶಂಖದಲ್ಲಿಯೂ, ಪೀತಧೀಃ = ಹಳದಿಯೆಂಬ ಬುದ್ಧಿಯು ಉಂಟಾಗುತ್ತದೆ. ಅತಃ = ಆದ್ದರಿಂದ, ಪಾರಂಪರ್ಯತಃ = ಪರಂಪರೆದಿಂದ, ಅರ್ಥಸಂಬಂಧಃ = ಚಕ್ಷುಸ್ಸಿಗೆ ಅರ್ಥ ಸಂಬಂಧವು, ಭ್ರಮೇ ಅಪಿ ಚ= ಭ್ರಮಸ್ಥಳದಲ್ಲಿಯೂ ಕೂಡ, ಅಸ್ತಿ = ಇದೆ.

**ಅನುವಾದ–** 'ಪೀತಃ ಶಂಖಃ' ಎಂದು ಭ್ರಮವು ಬರುವ ಸ್ಥಳದಲ್ಲಿ ಚಕ್ಷುಃಸಂಯುಕ್ತ-ವಾದುದು ಶಂಖ. ಶಂಖಸನ್ನಿಕೃಷ್ಟವಾದುದು ಪೀತವಾದ ಪಿತ್ತದ್ರವ್ಯ. ಅದರಲ್ಲಿರುವುದು ಪೀತಿಮಾ (ಹಳದಿ ಬಣ್ಣ). ಆದ್ದರಿಂದ ಚಕ್ಷುಸಂಯುಕ್ತ ಶಂಖಸಂಯುಕ್ತ ಪಿತ್ತದ್ರವ್ಯಸಂಬಂಧಿತ್ವವು ವಿಶೇಷಣವಾಗಿ ತೋರುವ ಪೀತಿಮಾಗುಣದಲ್ಲಿ ಇದೆ. ಆದ್ದರಿಂದ ಅಲ್ಲಿಯೂ ಪರಂಪರಾಸಂಬಂಧದಿಂದ ವಿಶೇಷಣ ಸನ್ನಿಕರ್ಷವೂ ಇದ್ದೇ ಇದೆ.

**ಭಾವವಿಲಾಸಿನೀ–ಸೋಪಾಧಿಕಭ್ರಮೇಽಪಿ ಚಕ್ಷುಸ್ಸನ್ನಿಕರ್ಷಮುಪಪಾದಯತಿ – ಚಕ್ಷುಃಸ್ಥೇತಿ॥** ಚಕ್ಷುಷ್ಷ್ಠಂ ಯತ್ಪೀತಂ ಪಿತ್ತಂ ತೇನ ಯೋಗಾಚ್ಛಂಖೇಽಪಿ ಪೀತಧೀಃ ಪೀತಶ್ಶಂಖ ಇತಿ ಧೀರ್ಭವತಿ ಯತೋಽತಃ ಪೀತಶ್ಶಂಖ ಇತಿ ಭ್ರಮೇಽಪಿ ಪಾರಂಪರ್ಯತಃ ಚಕ್ಷುಸ್ಸಂಯೋಗಃ ಶಂಖೇ ತಸ್ಮಿಂಶ್ಚ ನಾಯನಪಿತ್ತಸಂಬಂಧಸ್ತತ್ರ ಚ ಪೀತಿಮೇತಿ ಪರಮ್ಪರಯಾ ಶಂಖೇಽಪಿ ಪೀತಗುಣ-ಸಂಬಂಧೋಽಸ್ತಿ । ಅತಃ ಪೀತಶ್ಶಂಖ ಇತಿ ಭ್ರಮ ಇತಿ ಭಾವಃ । ತಥಾಚ ವಿಶೇಷ್ಯೇಂದ್ರಿಯ-ಸನ್ನಿಕರ್ಷೋ ವಿಶೇಷಣೇಂದ್ರಿಯಸನ್ನಿಕರ್ಷಶ್ಚೇತಿ ದ್ವಯಮಪಿ ಜ್ಞಾನಸಾಮಾನ್ಯಸಾಮಗ್ರೀತ್ಯುಕ್ತಂ ಭವತಿ ॥ ೪೬೪ ॥

**ವಿವರಣೆ–** ಹಿಂದೆ ನಿರುಪಾಧಿಕ ಭ್ರಮಸ್ಥಳವನ್ನು ಹೇಳಿ ಈಗ ಸೋಪಾಧಿಕ ಭ್ರಮಸ್ಥಳದಲ್ಲಿಯೂ ವಿಶೇಷಣ ಸನ್ನಿಕರ್ಷವನ್ನು ಉಪಪಾದನೆ ಮಾಡುತ್ತಾರೆ.

**ಚಕ್ಷುಸಂಯುಕ್ತವಾದ ಶಂಖದಲ್ಲಿ ಹಳದಿ ಬಣ್ಣದ ಭ್ರಮವು ಬರುತ್ತದೆ. ಇದು ಸೋಪಾಧಿಕ ಭ್ರಮ. ಚಕ್ಷುಸಂಯುಕ್ತವಾದ ಪಿತ್ತದ್ರವ್ಯವು ಹಳದಿ ಬಣ್ಣವುಳ್ಳದ್ದರಿಂದ ಶಂಖವು ಹಳದಿಯಾಗಿ ತೋರುತ್ತದೆ. ಇಲ್ಲಿಯೂ ಕೂಡ ಶಂಖ ಮತ್ತು ಪಿತ್ತದ್ರವ್ಯದ್ವಾರಾ ಚಕ್ಷುಸ್ಸಿಗೆ ಪೀತಿಮಾಗುಣದ ಸನ್ನಿಕರ್ಷವು ಇದ್ದೇ ಇದೆ. ಆದ್ದರಿಂದ ವಿಶೇಷ್ಯ ಮತ್ತು ಇಂದ್ರಿಯಸನ್ನಿಕರ್ಷ, ವಿಶೇಷಣ ಮತ್ತು ಇಂದ್ರಿಯಸನ್ನಿಕರ್ಷ, ಈ ಎರಡೂ ಸನ್ನಿಕರ್ಷಗಳು ಜ್ಞಾನಸಾಮಾನ್ಯ ಸಾಮಗ್ರಿ. ಏಕೆಂದರೆ, ಭ್ರಾಂತಿಯ ಸ್ಥಳದಲ್ಲೂ ಇವು ಇವೆ.**

**ಸಾದೃಶ್ಯಂ ಸದೃಶಾನ್ಯಾರ್ಥಜ್ಞಾಪನಾಯ ಸ್ವಯಂ ಪಟು ।**
**ತದೇಕತ್ವಜ್ಞಾಪನಾಯ ದೋಷಾಶ್ಲೇಷಮಪೇಕ್ಷತೇ ॥ ೪೬೫ ॥**

**ಅರ್ಥ–** ಸಾದೃಶ್ಯಂ = ಸಾದೃಶ್ಯವು, ಸದೃಶ = ಸದೃಶವಾದ, ಅನ್ಯ = ಇನ್ನೊಂದು, ಅರ್ಥಜ್ಞಾಪನಾಯ = ಅರ್ಥವನ್ನು ತಿಳಿಸಿಕೊಡುವುದರಲ್ಲಿ ಮಾತ್ರ, ಸ್ವಯಂ = ತಾನಾಗಿಯೇ, ಪಟು = ಸಾಮರ್ಥ್ಯವನ್ನು ಹೊಂದಿದೆ. ಆದರೇ, ತದೇಕತ್ವಜ್ಞಾಪನಾಯ = ಪುರೋವರ್ತಿಯಾದ ವಸ್ತುವಿನಲ್ಲಿ ಇನ್ನೊಂದು ಅರ್ಥದ ಅಭೇದವನ್ನು ತಿಳಿಸಬೇಕಾದರೆ, ದೋಷಾಶ್ಲೇಷಂ = ದೋಷದ ಸಂಬಂಧವನ್ನು, ಅಪೇಕ್ಷತೇ = ಅಪೇಕ್ಷಿಸುತ್ತದೆ.

**ಅನುವಾದ– ಸಾದೃಶ್ಯವು ಸದೃಶವಾದ ಇನ್ನೊಂದು ಅರ್ಥವನ್ನು ಜ್ಞಾಪಿಸಿ ಕೊಡುವುದರಲ್ಲಿ ಮಾತ್ರ ಸಾಮರ್ಥ್ಯವುಳ್ಳದ್ದು. ಆದರೆ ಪೂರೋವೃತ್ತಿಯಲ್ಲಿ ಇನ್ನೊಂದು ಅರ್ಥದ ಅಭೇದವು ಗ್ರಹಿಸಲ್ಪಡಬೇಕಾದರೆ, ದೋಷದ ಅಪೇಕ್ಷೆಯು ಇದ್ದೇ ಇದೆ.**

**ಭಾವವಿಲಾಸಿನೀ–ತರ್ಹಿ** ಭ್ರಮೇಽಪಿ ಸಾದೃಶ್ಯಾದಿನೈವಾಲಮ್, ಕಿಂ ದೋಷೇಣ? ಇತ್ಯತ ಆಹ **–ಸಾದೃಶ್ಯಮಿತಿ ॥** ಸಾದೃಶ್ಯಂ ಶುಕ್ತೌ ರಜತಸಾದೃಶ್ಯಂ ಶುಕ್ತಿಸದೃಶೋ ಯೋಽಯಮನ್ಯೋಽರ್ಥೋ ರಜತಾದಿಃ ತಜ್ಞಾಪನಾಯ ಸ್ವಯಂ ಪಟು । ರಜತಂ ಕೀದೃಶಮಿತ್ಯುಕ್ತೇ ಶುಕ್ತಿಸದೃಶಮಿತ್ಯುಕ್ತೇ ಯಥಾ ಶುಕ್ತಿಸ್ತಥೇತಿ ದೋಷಂ ನಾಪೇಕ್ಷತ ಇತಿ ಭಾವಃ । ತದೇಕತ್ವಜ್ಞಾಪನಾಯ ಯಚ್ಛುಕ್ತಿ-ಸದೃಶಂ ರಜತಾದಿ, ತಸ್ಯೈಕತ್ವಮಭೇದಸ್ತಜ್ಞಾಪನಾಯ ರಜತಮೇವೇದಮಿತಿ ಜ್ಞಾಪ-ನಾಯೇತ್ಯರ್ಥಃ । ದೋಷಾಶ್ಲೇಷಂ ಕಾಚಾದಿದೋಷಸಂಬಂಧಮಪ್ಯಪೇಕ್ಷತೇ । ಚಕ್ಷುರಪೇಕ್ಷತೇ ಇತಿ ಯೋಜನಾ ॥ ೪೬೫ ॥

**ವಿವರಣೆ–** ಹಾಗಾದರೆ ಭ್ರಮದಲ್ಲಿಯೂ ಸಾದೃಶ್ಯವು ಇಷ್ಟೇ ಸಾಕು, ದೋಷ ಏತಕ್ಕೆ ಬೇಕು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ರಜತದಲ್ಲಿ ಶುಕ್ತಿಸಾದೃಶ್ಯವಿದೆ. ಹಾಗೆಯೇ ಶುಕ್ತಿಯಲ್ಲಿಯೂ ರಜತಸಾದೃಶ್ಯವಿದೆ. ಈ ಸಾದೃಶ್ಯವು ಶುಕ್ತಿಯು ರಜತಸದೃಶ ಅಥವಾ ರಜತವೂ ಶುಕ್ತಿಸದೃಶ ಎಂಬ ಜ್ಞಾನವನ್ನು ಉಂಟುಮಾಡಿಕೊಡಲು ಸಮರ್ಥವಾಗಿದೆ. ಆದರೆ, ಪುರೋವರ್ತಿಯಾದ ಶುಕ್ತಿಯಲ್ಲಿ ರಜತದ ಅಭೇದವನ್ನು

ತಿಳಿಸಿಕೊಡಲು ಸಾದೃಶ್ಯಕ್ಕೆ ಸಾಮರ್ಥ್ಯವಿಲ್ಲ. ಅಭೇದ ತಿಳಿಯಬೇಕಾದರೆ, ದೋಷವು ಬೇಕೇಬೇಕು. ಆದ್ದರಿಂದ ಕೇವಲ ಸಾದೃಶ್ಯದಿಂದಲೇ ಭ್ರಾಂತಿಯನ್ನು ನಿರ್ವಾಹ ಮಾಡಲು ಸಾಧ್ಯವಿಲ್ಲ. ಜ್ಞಾನಸಾಮಾನ್ಯಸಾಮಗ್ರಿಯ ಜೊತೆಯಲ್ಲಿ ದೋಷವೂ ಬೇಕಾಗುತ್ತದೆ. ಆದ್ದರಿಂದಲೇ ಅಪ್ರಾಮಾಣ್ಯವು ಪರತಃ ಎಂದು ಹೇಳುತ್ತೇವೆ.

**ಅತೋಽನ್ಯಸ್ಯಾನ್ಯತಾಬೋಧೇ ದೋಷೋಽಪ್ಯನ್ವಿಷ್ಯತೇ ಬುಧೈಃ ।**
**ಅತ್ಯಂತಮಸತೋಽರ್ಥಸ್ಯ ಸತ್ತಾಧೀಃ ಕಥಮನ್ಯಥಾ ॥ ೪೬೬ ॥**

**ಅರ್ಥ–** ಅತಃ = ಆದ್ದರಿಂದ, ಅನ್ಯಸ್ಯ = ಒಂದು ಪದಾರ್ಥದ, ಅನ್ಯತಾಬೋಧೇ = ಇನ್ನೊಂದು ಪದಾರ್ಥದ ರೂಪದಿಂದ ಜ್ಞಾನ ಬರುವ ಸಂದರ್ಭದಲ್ಲಿ, ಬುಧೈಃ = ವಿವೇಕಿಗಳಿಂದ, ದೋಷೋಽಪಿ = ದೋಷವೂ ಕೂಡ, ಅನ್ವಿಷ್ಯತೇ= ಹುಡುಕಲ್ಪಡುತ್ತದೆ. ಅನ್ಯಥಾ= ಹೀಗಿಲ್ಲವಾದರೆ, ಅತ್ಯಂತಂ ಅಸತಃ ಅರ್ಥಸ್ಯ = ಅತ್ಯಂತ ಅಸತ್ತಾದ ಪದಾರ್ಥದಲ್ಲಿ, ಸತ್ತಾಧೀಃ = ಸತ್ತ್ವಪ್ರಕಾರಕ ಜ್ಞಾನವು, ಕಥಂ = ಹೇಗೆ ಉಂಟಾಗುತ್ತದೆ?

**ಅನುವಾದ– ಆದ್ದರಿಂದ ಒಂದು ಪದಾರ್ಥವು ಇನ್ನೊಂದು ಪದಾರ್ಥವಾಗಿ ತೋರುವ ಸಂದರ್ಭದಲ್ಲಿ ವಿವೇಕಿಗಳಾದವರು ದೋಷವನ್ನೂ ಅನ್ವೇಷಣೆ ಮಾಡುತ್ತಾರೆ. ಆ ಇನ್ನೊಂದು ಪದಾರ್ಥವು ಅತ್ಯಂತ ಅಸತ್ತಾಗಿರುವುದರಿಂದ ಆ ಪದಾರ್ಥದ ಸತ್ತ್ವಪ್ರಕಾರಕಜ್ಞಾನವು ದೋಷವಿಲ್ಲದಿದ್ದರೆ ಹೇಗೆ ಉಂಟಾಗುತ್ತದೆ ?**

**ಭಾವವಿಲಾಸಿನೀ–ತದೇವ ವಿಶದಯತಿ– ಅತ ಇತಿ ॥** ಅನ್ಯಥಾಬೋಧೇ ಅನ್ಯಾಭೇದಬೋಧೇ । ಅನ್ಯಥಾ ದೋಷಾಭಾವೇ ಅತ್ಯಂತಮಸತಃ ಸರ್ವದಾ ಅವಿದ್ಯಮಾನಸ್ಯಾರ್ಥಸ್ಯ ಶುಕ್ತಿರಜತ-ತಾದಾತ್ಮ್ಯಸ್ಯ ॥ ೪೬೬ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಅಭಿಪ್ರಾಯವನ್ನು ಈ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾರೆ. ಶುಕ್ತಿಯು ರಜತಾತ್ಮನಾ ತೋರುತ್ತದೆ. ಆ ರಜತವು ಅತ್ಯಂತ ಅಸತ್. ಅದಕ್ಕೆ ಶುಕ್ತಿಸಾದೃಶ್ಯವಿದ್ದರೂ ಸನ್ನಿಕರ್ಷವಿಲ್ಲ. ಆದರೆ ದೋಷವಿಲ್ಲದಿದ್ದರೆ, ರಜತವಾಗಲೀ (ಅಥವಾ ಶುಕ್ತಿರಜತತಾದಾತ್ಮ್ಯವಾಗಲೀ) ತೋರಲು ಸಾಧ್ಯವಿಲ್ಲ. ಆದ್ದರಿಂದ ದೋಷವನ್ನು ಅವಶ್ಯಕವಾಗಿ ಭ್ರಾಂತಿಗೆ ಕಾರಣವೆಂದು ಅಂಗೀಕರಿಸಬೇಕು.

**ವಿಶೇಷಣಾಭೇದಬೋಧೇ ವಿಶೇಷ್ಯೇಂದ್ರಿಯಸಂಗಮಃ ।**
**ಪ್ರಮಾಸ್ವಲಂ ಮೇ ಸಾಮಾನ್ಯಸಾಮಗ್ರೀ ಸಾ ಭ್ರಮೇಽಪಿ ಯತ್॥ ೪೬೭ ॥**

**ಅರ್ಥ–** ವಿಶೇಷಣಾಭೇದಬೋಧೇ = ವಿಶೇಷಣವು ಅಭೇದ ಸಂಬಂಧದಿಂದ ತೋರುವಾಗ, ಮೇ = ನನಗೆ, ಪ್ರಮಾಸು = ಪ್ರಮಾಸ್ಥಳದಲ್ಲಿ, ವಿಶೇಷ್ಯೇಂದ್ರಿಯಸಂಗಮಃ = ವಿಶೇಷ್ಯೇಂದ್ರಿಯಸನ್ನಿಕರ್ಷವು ಮಾತ್ರ, ಅಲಂ = ಸಾಕು, ಯತ್ = ಏಕೆಂದರೆ, ಸಾ = ಆ,

ಸಾಮಾನ್ಯಸಾಮಗ್ರೀ = ಜ್ಞಾನ- ಸಾಮಾನ್ಯಸಾಮಗ್ರಿಯು, ಭ್ರಮೇ ಅಪಿ = ಭ್ರಾಂತಿ-ಸ್ಥಳದಲ್ಲಿಯೂ ಇದೆ.

**ಅನುವಾದ–** ವಿಶೇಷಣವು ಅಭೇದ ಸಂಬಂಧದಿಂದ ತೋರುವಾಗ ನನಗೆ ಜ್ಞಾನಸಾಮಾನ್ಯಸಾಮಗ್ರಿಯಲ್ಲಿ ವಿಶೇಷ್ಯೇಂದ್ರಿಯ ಸನ್ನಿಕರ್ಷವಿಷ್ಟೇ ಸಾಕು. ಇದು ಜ್ಞಾನಸಾಮಾನ್ಯಸಾಮಗ್ರಿ. ಏಕೆಂದರೆ, ಭ್ರಾಂತಿಸ್ಥಳದಲ್ಲಿಯೂ ಇದು ಇದೆ.

**ಭಾವವಿಲಾಸಿನೀ**–ಪ್ರಕಾರಾಂತರೇಣ ಪ್ರಮಾಯಾ ಜ್ಞಾನಸಾಮಾನ್ಯಸಾಮಗ್ರೀಜನ್ಯತ್ವ-ಮುಪಪಾದಯತಿ – **ವಿಶೇಷಣೇತಿ** ॥ ವಿಶೇಷಣಂ ಘಟಾದಿ ವಿಶೇಷ್ಯಂ ಅಯಮಿತ್ಯುಲ್ಲಿಖ್ಯಮಾನಃ ಪುರೋವರ್ತೀ । ತತ್ರ ವಿಶೇಷಣಸ್ಯ ಘಟಾದೇರ್ವಿಶೇಷ್ಯೇಣ ಪುರೋವರ್ತಿನಾ ಸಹಾಭೇದಬೋಧೇ ವಿಶೇಷಣತಾದಾತ್ಮ್ಯಬೋಧೇ ಘಟೋಽಯಮಿತಿ ತಾದಾತ್ಮ್ಯಬೋಧ ಇತಿ ಯಾವತ್ । ವಿಶೇಷ್ಯಂ ಪುರೋವರ್ತಿ । ಇದ್ರಿಯಂ ಚಕ್ಷುರಾದಿ । ತಯೋಸ್ಸಂಗಮಸ್ಸಂಬಂಧಃ ಪ್ರಮಾಸು ಘಟೋಽಯಮಿತ್ಯಾದಿತಾದಾತ್ಮ್ಯಪ್ರಮಾಸು ಮೇ ಮಮ ಮತೇ ಅಲಂ ಪರ್ಯಾಪ್ತಮ್ । ವಿಶೇಷಣಘಟಸ್ಯೈವ ಪುರೋವರ್ತಿವಿಶೇಷ್ಯಾತ್ಮಕತ್ವೇನಾತಿ- ಪ್ರಸಂಗಾ-ಭಾವಾತ್ । ಪೃಥಗ್ವಿಶೇಷಣಸನ್ನಿಕರ್ಷರೂಪಗುಣೋ ನಾಪೇಕ್ಷ್ಯತ ಇತಿ ಭಾವಃ । ವಿಶೇಷ್ಯ-ಸನ್ನಿಕರ್ಷಶ್ಚ ಭ್ರಮಸಾಧಾರಣತ್ವಾತ್ ಜ್ಞಾನಸಾಮಾನ್ಯಸಾಮಗ್ರೀತ್ಯಾಹ – **ಸಾಮಾನ್ಯೇತಿ** ॥ ಸಾ ವಿಶೇಷ್ಯೇಂದ್ರಿಸನ್ನಿಕರ್ಷರೂಪಾ ಸಾಮಗ್ರೀ ಜ್ಞಾನಸಾಮಾನ್ಯಸಾಮಗ್ರೀ । ತತ್ರ ಹೇತುಃ – **ಭ್ರಮೇಽಪೀತಿ**॥ ಯದ್ಯಸ್ಮಾತ್ಕಾರಣಾತ್ ಭ್ರಮೇಽಪಿ ವಿಶೇಷ್ಯೇಂದ್ರಿಯಸಂಯೋಗರೂಪಾ ಸಾಮಗ್ರ್ಯಸ್ತಿ । ವಿಶೇಷ್ಯಭೂತಶುಕ್ತಿಶಕಲೇನೇಂದ್ರಿಯಸನ್ನಿಕರ್ಷಸ್ಯ ತತ್ರಾಪಿ ಸತ್ತ್ವಾತ್ ॥೪೬೭॥

**ವಿವರಣೆ–** ಹಿಂದಿನ ಶ್ಲೋಕಗಳಲ್ಲಿ ವಿಶೇಷ್ಯೇಂದ್ರಿಯಸನ್ನಿಕರ್ಷ ಮತ್ತು ವಿಶೇಷಣೇಂದ್ರಿಯ ಸನ್ನಿಕರ್ಷ ಇವೆರಡೂ ಜ್ಞಾನಸಾಮಾನ್ಯಸಾಮಗ್ರಿ ಎಂದು ಅಂಗೀಕರಿಸಿ, ಇವು ಭ್ರಾಂತಿಸ್ಥಳದಲ್ಲಿಯೂ ಇವೆ ಎಂದು ಉಪಪಾದನೆ ಮಾಡಿದರು. ಈಗ ವಿಶೇಷಣವು ಅಭೇದ ಸಂಬಂಧದಿಂದ ತೋರುವ ಸ್ಥಳದಲ್ಲಿ ವಿಶೇಷ್ಯೇಂದ್ರಿಯಸನ್ನಿಕರ್ಷವೊಂದೇ ಸಾಮಗ್ರೀಘಟಕವಾದುದು ಎಂದು ಉಪಪಾದನೆ ಮಾಡುತ್ತಾರೆ. ಅಯಂ ಘಟಃ ಎಂಬುದು ಪ್ರಮೆ. ಇದರಲ್ಲಿ ಪುರೋವರ್ತಿಯಲ್ಲಿ ಘಟವು ಅಭೇದ ಸಂಬಂಧದಿಂದ ವಿಶೇಷಣವಾಗಿ ತೋರುತ್ತದೆ. ಚಕ್ಷುಸ್ಸಿಗೂ ಪುರೋವರ್ತಿಗೂ ಸನ್ನಿಕರ್ಷವಿದೆ. ವಿಶೇಷಣಕ್ಕೂ ಮತ್ತು ಚಕ್ಷುಸ್ಸಿಗೂ ಬೇರೆ ಸನ್ನಿಕರ್ಷವನ್ನು ಒಪ್ಪುವುದಿಲ್ಲ. ಏಕೆಂದರೆ, ವಿಶೇಷಣವಾದ ಘಟಕ್ಕೂ ಮತ್ತು ಪುರೋವರ್ತಿಗೂ ಅಭೇದವಿರುವುದರಿಂದ ಚಕ್ಷುಸ್ಸು ಮತ್ತು ಪುರೋವರ್ತಿಯ ಸನ್ನಿಕರ್ಷವೇ ವಿಶೇಷಣಸನ್ನಿಕರ್ಷವೂ ಆಗುತ್ತದೆ. ಆದ್ದರಿಂದ ಬೇರೆ ವಿಶೇಷಣಸನ್ನಿಕರ್ಷವನ್ನು ಒಪ್ಪುವುದು ಬೇಡ. ಭ್ರಾಂತಿಸ್ಥಳದಲ್ಲಿ ಎಲ್ಲಿ ಶುಕ್ತಿಯಲ್ಲಿ ಅಭೇದಸಂಬಂಧದಿಂದ ರಜತವು ತೋರುತ್ತದೆಯೋ, ಅಲ್ಲಿಯೂ ಕೂಡ ವಿಶೇಷ್ಯೇಂದ್ರಿಯ ಸನ್ನಿಕರ್ಷವಿದೆ. ಇದು ಪ್ರಮೆ ಮತ್ತು ಭ್ರಮ ಸಾಧಾರಣವಾದುದರಿಂದ

ಇದನ್ನೇ ಜ್ಞಾನಸಾಮಾನ್ಯಸಾಮಗ್ರಿ ಎಂದು ಕರೆಯುತ್ತೇವೆ. ಆದ್ದರಿಂದ ಯಾವ ಅನುಪಪತ್ತಿಯೂ ಇಲ್ಲ.

**ಅತೋ ಘಟೋಽಯಮಿತ್ಯಾದ್ಯಾ ಘಟಾದ್ಯೈಕ್ಯಪ್ರಮಾ ಮಮ ।**
**ಸಾಕ್ಷಾತ್ಕಾರಿಜ್ಞಾನಹೇತುಮಾತ್ರಜನ್ಯಾಖಿಲಾಽಭವತ್ ॥ ೪೬೮ ॥**

**ಅರ್ಥ–** ಅತಃ = ಆದ್ದರಿಂದ, ಘಟಃ ಅಯಂ = ಇದು ಘಟವು, ಇತ್ಯಾದ್ಯಾಃ = ಇದೇ ಮೊದಲಾದ, ಅಖಿಲಾಃ= ಎಲ್ಲ, ಘಟಾದ್ಯೈಕ್ಯಪ್ರಮಾಃ = ಘಟಾದಿ ಐಕ್ಯ ಪ್ರಮೆಯು, ಮಮ = ನನಗೆ, ಸಾಕ್ಷಾತ್ಕಾರಜ್ಞಾನಹೇತುಮಾತ್ರಜನ್ಯಾ = ಜ್ಞಾನಸಾಮಾನ್ಯ ಸಾಮಗ್ರಿಯಿಂದಲೇ ಉಂಟಾಗುತ್ತವೆ, ಇತಿ= ಎಂದು, ಅಭವತ್ = ಸಿದ್ಧವಾಯಿತು.

**ಅನುವಾದ–** **ಆದ್ದರಿಂದ ಅಯಂ ಘಟ ಇತ್ಯಾದಿ ರೂಪವಾದ ಎಲ್ಲಾ ಪ್ರಮಾತ್ಮಕ ಜ್ಞಾನಗಳೂ ಸಹ, ಜ್ಞಾನಸಾಮಾನ್ಯ ಸಾಮಗ್ರಿಯಿಂದಲೇ ಉಂಟಾಗುತ್ತವೆ ಎಂದು ಸಿದ್ಧವಾಗುತ್ತವೆ.**

**ಭಾವವಿಲಾಸಿನೀ–**ತಾದಾತ್ಮ್ಯಪ್ರಮಾಸ್ಥಲೇ ಉಪಪಾದಿತಮರ್ಥಮುಪಸಂಹರತಿ ॥ **ಅತ ಇತಿ** ॥ ಅತ ಉಕ್ತರೀತ್ಯಾ ವಿಶೇಷ್ಯೇಂದ್ರಿಯಸನ್ನಿಕರ್ಷೇಣೈವಪೂರ್ತ್ಯೇಃ ತಸ್ಯಚ ವಿಶೇಷ್ಯೇಂದ್ರಿಯಸನ್ನಿಕರ್ಷೋ ವಿಶೇಷಣಜ್ಞಾನಂ ತಯೋರಸಂಸರ್ಗಾಗ್ರಹ ಇತ್ಯುಕ್ತಸಾಮಾನ್ಯಸಾಮಗ್ರೀರೂಪತ್ವಾದಿತ್ಯರ್ಥಃ । ಸಾಕ್ಷಾತ್ಕಾರಜ್ಞಾನ ಹೇತುಮಾತ್ರಜನ್ಯಾ ಸಾಕ್ಷಾತ್ಕಾರಜ್ಞಾನಸಾಮಾನ್ಯಸಾಮಗ್ರೀಜನ್ಯೇತಿ ಯಾವತ್ ॥ ೪೬೮ ॥

**ವಿವರಣೆ–** ವಿಶೇಷ್ಯೇಂದ್ರಿಯ ಸನ್ನಿಕರ್ಷವೇ ಸಾಕು ಎಂದುಹೇಳಿದುದರಿಂದ ವಿಶೇಷ್ಯೇಂದ್ರಿಯ ಸನ್ನಿಕರ್ಷ, ವಿಶೇಷಣ ಜ್ಞಾನ, ವಿಶೇಷ್ಯವಿಶೇಷಣಗಳ ಅಸಂಸರ್ಗದ ಅಗ್ರಹ ಇವಿಷ್ಟೇ ಜ್ಞಾನಸಾಮಾನ್ಯ ಸಾಮಗ್ರಿ. ಇದರಿಂದಲೇ ಪ್ರಮೆ ಉಂಟಾಗುತ್ತದೆ. ಭ್ರಾಂತಿಸ್ಥಳದಲ್ಲಿಯೂ ಕೂಡ ಈ ಸಾಮಗ್ರಿಯು ಇದ್ದೇ ಇದೆ.

**ಭ್ರಮೇ ವಿಶೇಷ್ಯಶುಕ್ತ್ಯಕ್ಷಿಸಂಯೋಗೋಽಸ್ತಿ ವಿಶೇಷಣಮ್ ।**
**ರಜತಂ ತು ನ ತತ್ಸಂಗಿ ಭಿನ್ನತ್ವಾತ್ತನ್ನ ತಸ್ಯ ಧೀಃ ॥ ೪೬೯ ॥**

**ಪ್ರಮಾಯಾಂ ಕ್ಲೃಪ್ತಸಾಮಾನ್ಯಸಾಮಗ್ರೀಮಾತ್ರತೋ ಭವೇತ್ ।**
**ಅಸನ್ನಿಕೃಷ್ಟತದ್ದೃಷ್ಟ್ಯೈ ದೋಷೋಽಪ್ಯೇಷ್ಟವ್ಯ ಏವ ಹಿ ॥ ೪೭೦ ॥**

**ಅರ್ಥ–** ಭ್ರಮೇ = ಭ್ರಮಸ್ಥಳದಲ್ಲಿ, ವಿಶೇಷ್ಯಶುಕ್ತ್ಯಕ್ಷಿಸಂಯೋಗಃ = ವಿಶೇಷ್ಯವಾದ ಶುಕ್ತಿಗೂ ಮತ್ತು ಅಕ್ಷಿಗೂ, ಸಂಯೋಗಃ = ಸಂಯೋಗವು, ಅಸ್ತಿ = ಇದೆ. ವಿಶೇಷಣಮ್ = ವಿಶೇಷಣವಾದ, ರಜತಂ ತು = ರಜತವಾದರೊ, ನ ತತ್ಸಂಗಿ = ಚಕ್ಷುಸ್ಸನ್ನಿಕರ್ಷವನ್ನು

ಹೊಂದಿಲ್ಲ, ಏಕೆಂದರೆ, ಭಿನ್ನತ್ವಾತ್ = ರಜತವು ಶುಕ್ತಿಗಿಂತ ಭಿನ್ನವಾದುದರಿಂದ. ತತ್ = ಆದ್ದರಿಂದ, ತಸ್ಯ = ರಜತದ, ಧೀಃ = ಜ್ಞಾನವು, ನ = ಬರಲು ಸಾಧ್ಯವಿಲ್ಲ. ಪ್ರಮಾಯಾಂ = ಪ್ರಮಾಸ್ಥಳದಲ್ಲಿ, ಕ್ಲೃಪ್ತಸಾಮಾನ್ಯಸಾಮಗ್ರೀಮಾತ್ರತಃ= ನಿಶ್ಚಿತವಾದ ಜ್ಞಾನಸಾಮಾನ್ಯ ಸಾಮಗ್ರಿಯಿಂದಲೇ, ಭವೇತ್ = ಜ್ಞಾನವು ಉಂಟಾಗುತ್ತದೆ. ಅಸನ್ನಿಕೃಷ್ಟತದ್ಧಿಯೈ= ಸನ್ನಿಕರ್ಷವಿಲ್ಲದೇ ಇರುವ ರಜತದ ಜ್ಞಾನಕ್ಕಾಗಿ, ದೋಷೋಪೇಕ್ಷ್ಯೈವ ಏವ ಹಿ = ದೋಷವನ್ನು ಅಪೇಕ್ಷಿಸಲೇಬೇಕಾಗಿದೆ.

**ಅನುವಾದ–** ಭ್ರಾಂತಿಯು ಜ್ಞಾನಸಾಮಾನ್ಯ ಸಾಮಗ್ರಿಜನ್ಯವಲ್ಲವೆಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಭ್ರಮಸ್ಥಳದಲ್ಲಿ ವಿಶೇಷ್ಯವಾದ ಶುಕ್ತಿಗೂ ಮತ್ತು ಚಕ್ಷುಸ್ಸಿಗೂ ಸನ್ನಿಕರ್ಷವಿದೆ. ವಿಶೇಷಣವಾದ ರಜತಕ್ಕೂ, ಚಕ್ಷುಸ್ಸಿಗೂ ಸನ್ನಿಕರ್ಷವಿಲ್ಲ. ಏಕೆಂದರೆ, ರಜತವು ಶುಕ್ತಿಗಿಂತ ಭಿನ್ನವಾಗಿದೆ. ಆದ್ದರಿಂದ ಸನ್ನಿಕರ್ಷವಿಲ್ಲದ ಕಾರಣದಿಂದ ರಜತದ ಜ್ಞಾನ ಬರಲು ಸಾಧ್ಯವಿಲ್ಲ. ಆ ಅಸನ್ನಿಕೃಷ್ಟವಾದ ರಜತದ ಜ್ಞಾನವು ಬರಬೇಕಾದರೆ, ದೋಷವು ಬೇಕೇ ಬೇಕು. ಪ್ರಮಾಸ್ಥಳದಲ್ಲಿ ಮಾತ್ರ ಕ್ಲೃಪ್ತವಾದ ಈ ಸಾಮಗ್ರಿಯಿಂದಲೇ ಪ್ರಮೆಯು ಉಂಟಾಗುತ್ತದೆ. ಪ್ರಮಾಸ್ಥಳದಲ್ಲಿ ಪುರೋವರ್ತಿಗೂ ಮತ್ತು ಘಟಕ್ಕೂ ಅಭೇದವಿರುವುದರಿಂದ ಪೂರ್ವವರ್ತಿಯ ಸನ್ನಿಕರ್ಷವೇ ವಿಶೇಷಣವಾದ ಘಟದ ಸನ್ನಿಕರ್ಷವಾಯಿತು. ಆದ್ದರಿಂದ ಘಟವು ಅಭೇದ ಸಂಬಂಧದಿಂದ ವಿಶೇಷಣವಾಗಿ ತೋರುತ್ತದೆ. ಇದಂ ರಜತಂ ಎಂಬ ಭ್ರಾಂತಿಸ್ಥಳದಲ್ಲಿ ಪೂರೋವರ್ತಿಯಾದ ಶುಕ್ತಿಗೂ ಮತ್ತು ವಿಶೇಷಣವಾಗಿ ತೋರುವ ರಜತಕ್ಕೂ ಅಭೇದ-ವಿಲ್ಲದಿರುವುದರಿಂದ ಶುಕ್ತಿಯ ಸನ್ನಿಕರ್ಷವೇ ರಜತಸನ್ನಿಕರ್ಷವಲ್ಲ. ರಜತ-ಸನ್ನಿಕರ್ಷವಿಲ್ಲದಿರುವಾಗ ಚಕ್ಷುಸ್ಸಿಗೆ ರಜತವು ಅಯೋಗ್ಯವಾಗುತ್ತದೆ. ಆದ್ದರಿಂದ ಅಂತಹ ರಜತವು ಭ್ರಾಂತಿಯಲ್ಲಿ ತೋರಲು ದೋಷದ ಅಪೇಕ್ಷೆ ಇದ್ದೇ ಇದೆ. ಹೀಗಾಗಿ ಜ್ಞಾನಸಾಮಾನ್ಯಸಾಮಗ್ರಿಯಿಂದ ಭ್ರಾಂತಿಯು ಉಂಟಾಗುವುದಿಲ್ಲ. ಅಧಿಕವಾಗಿ ದೋಷವನ್ನೂ ಅಪೇಕ್ಷಿಸುತ್ತದೆ.

**ಭಾವವಿಲಾಸಿನೀ–**ಅಪ್ರಮಾಯಾ ಉಕ್ತಸಾಮಾನ್ಯಸಾಮಗ್ರೀಜನ್ಯತ್ವಾಭಾವಮುಪಪಾದಯತಿ – **ಭ್ರಮ ಇತಿ ॥** ವಿಶೇಷ್ಯಾ ಚ ಸಾ ಶುಕ್ತಿಶ್ಚೇತಿ ವಿಗ್ರಹಃ। ವಿಶೇಷಣಂ ರಜತಂ ತು ತತ್ಸಂಗ್ಯಕ್ಷಿಸಂಗಿನೇತಿ ಸಂಬಂಧಃ। ಭಿನ್ನತ್ವಾದ್ ವಿಶೇಷ್ಯಶುಕ್ತಿಭಿನ್ನತ್ವಾತ್ । ಅತಃ ಪ್ರಮಾಯಾಮಿವ ವಿಶೇಷ್ಯಸನ್ನಿಕರ್ಷ ಏವ ವಿಶೇಷಣಸನ್ನಿಕರ್ಷೋ ನಾಭೂದಿತಿ ಭಾವಃ। ತತ್ತಸ್ಮಾದ್ ವಿಶೇಷಣಭೂತರಜತ-ಸನ್ನಿಕರ್ಷಾಭಾವಾತ್ ತಸ್ಯ ರಜತಸ್ಯ ಧೀಃ ಪ್ರಮಾಯಾಂ ಕ್ಲೃಪ್ತಸಾಮಾನ್ಯಸಾಮಗ್ರೀಮಾತ್ರತಃ ಪ್ರಮಾಯಾಂ ಕ್ಲೃಪ್ತಾ ಯಾ ಸಾಮಾನ್ಯಸಾಮಗ್ರೀ ವಿಶೇಷ್ಯಸನ್ನಿಕರ್ಷಮಾತ್ರರೂಪಾ ತನ್ಮಾತ್ರ-ತಸ್ತಸ್ಮಾದೇವೇತ್ಯರ್ಥಃ। ನ ಭವೇದಿತಿ ಯೋಜನಾ। ಪ್ರಮಾಯಾಮಿವ ವಿಶೇಷ್ಯವಿಶೇಷಣ-

ಯೋರಭೇದಾಭಾವೇನ ವಿಶೇಷ್ಯಸನ್ನಿಕರ್ಷಸ್ಯೈವ ವಿಶೇಷಣಸನ್ನಿಕರ್ಷತ್ವಾಭಾವಾತ್ಪೃಥಕ್ ಸನ್ನಿಕರ್ಷಸ್ಯ ಚ ರಜತರೂಪವಿಶೇಷಣಸ್ಯಾತ್ಯಂತಾಸತ್ತ್ವೇನಾಸಂಭವಾದಸನ್ನಿಕೃಷ್ಟೇ ಚಾರ್ಥೇ ಚಕ್ಷುಷೋ ಜ್ಞಾನಜನಕತ್ವಾದರ್ಶನಾದಿತಿ ಭಾವಃ। ತಥಾಚಾಕ್ಷ್ಣಾಽಸನ್ನಿಕೃಷ್ಟ- ರಜತಬೋಧನಾಯ ದೋಷೋಽಪ್ಯವಶ್ಯಮಪೇಕ್ಷ್ಯತ ಇತಿ ಭಾವೇನಾಹ – **ಅಸನ್ನಿಕೃಷ್ಟೇತಿ** ॥ ಅಸನ್ನಿಕೃಷ್ಟಂ ಯದ್ರಜತಂ ತದ್ವೃಷ್ಟ್ಯೈ ॥ ೪೬೯-೪೭೦ ॥

ವಿಶೇಷಣಸ್ಯ ಭೇದೇಽಕ್ಷ್ಣಾ ತತ್ಸಂಸರ್ಗೋಽಪ್ಯಪೇಕ್ಷ್ಯತೇ ।
ಸಾಪಿ ಸಾಮಾನ್ಯಸಾಮಗ್ರೀ ಯದ್ಭ್ರಮೇಽಪ್ಯಸ್ತಿ ತಾದೃಶೀ ॥ ೪೭೧ ॥

**ಅರ್ಥ–** ವಿಶೇಷಣಸ್ಯ ಭೇದೇ = ವಿಶೇಷಣಕ್ಕೂ, ವಿಶೇಷ್ಯಕ್ಕೂ ಭೇದ ಇರುವ ಸಂದರ್ಭದಲ್ಲಿ, ಅಕ್ಷ್ಣಾ = ಚಕ್ಷುಸ್ಸಿನಿಂದ, ತತ್ಸಂಯೋಗಃ = ವಿಶೇಷಣಸಂಯೋಗವೂ, ಅಪೇಕ್ಷ್ಯತೇ = ಅಪೇಕ್ಷಿಸಲ್ಪಡುತ್ತದೆ. ಯತ್ = ಯಾವ ಕಾರಣದಿಂದ, ತಾದೃಶೀ = ವಿಶೇಷಣ ಸನ್ನಿಕರ್ಷವು, ಭ್ರಮೇ ಅಪಿ= ಭ್ರಾಂತಿಸ್ಥಳದಲ್ಲಿಯೂ, ಅಸ್ತಿ = ಇದೆ. ಅತಃ= ಆದ್ದರಿಂದ, ಸಾ ಅಪಿ = ಅದೂ ಕೂಡ, ಸಾಮಾನ್ಯಸಾಮಗ್ರೀ = ಜ್ಞಾನಸಾಮಾನ್ಯಸಾಮಗ್ರಿಯೇ ಆಗುತ್ತದೆ.

**ಅನುವಾದ–** ವಿಶೇಷಣಕ್ಕೂ ಮತ್ತು ವಿಶೇಷ್ಯಕ್ಕೂ ಭೇದ ಇರುವ ಸಂದರ್ಭದಲ್ಲಿ ಪ್ರಮೆಯು ಉಂಟಾಗಲು ಚಕ್ಷುಸ್ಸಿಗೂ ಮತ್ತು ವಿಶೇಷಣಕ್ಕೂ ಸಂಸರ್ಗವು ಬೇಕಾಗುತ್ತದೆ. ಈ ವಿಶೇಷಣಸನ್ನಿಕರ್ಷವು ಭ್ರಾಂತಿಯ ಸ್ಥಳದಲ್ಲಿಯೂ ಇರುವುದರಿಂದ ಅದು ಜ್ಞಾನಸಾಮಾನ್ಯಸಾಮಗ್ರಿಯೇ ಆಗುತ್ತದೆ.

**ಭಾವವಿಲಾಸಿನೀ–**ದಣ್ಡೀ ಕುಣ್ಡಲೀತ್ಯಾದಿವಿಶೇಷಣಸಂಸರ್ಗಪ್ರಮಾಯಾಂ ತು ವಿಶೇಷಣ-ತಾದಾತ್ಮ್ಯಪ್ರಮಾಯಾಮಿವ ನ ವಿಶೇಷ್ಯಸನ್ನಿಕರ್ಷಮಾತ್ರೇಣಾಲಮ್ । ಪೃಷ್ಠನಿಹಿತದಣ್ಡೇ ದಣ್ಡೀತಿ ಜ್ಞಾನಾಭಾವಾತ್ । ಅತೋ ವಿಶೇಷಣಸನ್ನಿಕರ್ಷೋಽಪ್ಯಧಿಕೋಪೇಕ್ಷಿತಃ । ಸ ಚ ತಾದೃಶ-ಸಂಸರ್ಗಾರೋಪೇಽಪಿ ವಿದ್ಯಮಾನತ್ವಾನ್ನ ವಿಶೇಷಸಾಮಗ್ರೀತ್ಯಾಹ – **ವಿಶೇಷಣಸ್ಯೇತಿ** ॥ ಭೇದೇ ವಿಶೇಷ್ಯಾದ್ಭೇದೇ । ತತ್ಸಂಸರ್ಗಃ ವಿಶೇಷಣಸಂಸರ್ಗಃ । ಸಾಪಿ ವಿಶೇಷಣಸಂಸರ್ಗಘಟಿತಾಪಿ । ಯದ್ಯಸ್ಮಾತ್ತಾದೃಶಿ ತತ್ಸಂಸರ್ಗಪ್ರಮಾಸದೃಶಿ ಸಂಸರ್ಗಾರೋಪರೂಪ ಇತಿ ಯಾವತ್ । ಅಸ್ತಿ ತಸ್ಮಾದ್ಭ್ರಮಸಾಧಾರಣತ್ವಾತ್ ಸಾಮಾನ್ಯಸಾಮಗ್ರೀತಿ ಪೂರ್ವೇಣಾನ್ವಯಃ ॥ ೪೭೧ ॥

**ವಿವರಣೆ–** ಎಲ್ಲಿ ವಿಶೇಷಣಕ್ಕೂ ಮತ್ತು ವಿಶೇಷ್ಯಕ್ಕೂ ಭೇದ ಇರುತ್ತದೆಯೋ ಅಂತಹ ದಂಡೀ ಕುಂಡಲೀ ಇತ್ಯಾದಿ ಜ್ಞಾನದ ಸ್ಥಳದಲ್ಲಿ ಕೇವಲ ವಿಶೇಷ್ಯ ಸನ್ನಿಕರ್ಷವು ಸಾಕಾಗುವುದಿಲ್ಲ. ವಿಶೇಷಣ ಸನ್ನಿಕರ್ಷವೂ ಬೇಕಾಗುತ್ತದೆ. ಬೆನ್ನಿನ ಹಿಂದೆ ದಂಡವನ್ನು ಹಿಡಿದಾಗ ದಂಡೀ ಎಂಬ ಜ್ಞಾನವು ಬರುವುದಿಲ್ಲವಾದ ಕಾರಣ ವಿಶೇಷಣಸನ್ನಿಕರ್ಷವು ಬೇಕಾಗುತ್ತದೆ. ಇಲ್ಲಿ ದಂಡವು ಸಂಯೋಗಸಂಬಂಧದಿಂದ ಪುರುಷನಲ್ಲಿ ತೋರುತ್ತದೆ. ಇದು ಸಂಸರ್ಗಬೋಧ ಸ್ಥಳ. ಹಾಗೆಯೇ ಸಂಸರ್ಗಾರೋಪಸ್ಥಳದಲ್ಲಿಯೂ

ವಿಶೇಷಣಸನ್ನಿಕರ್ಷವು ಬೇಕೇ ಆಗುತ್ತದೆ. ಆದ್ದರಿಂದ ವಿಶೇಷಣಸನ್ನಿಕರ್ಷವು ಇಂತಹ ಸ್ಥಳದಲ್ಲಿ ಜ್ಞಾನಸಾಮಾನ್ಯ ಸಾಮಗ್ರಿಯೇ ಆಗುತ್ತದೆ.

**ವಸ್ತುತಃ ಕಾಕಿನಿ ಗೃಹೇ ಕಾಕಕೋಕಿಲವತ್ತಯೋಃ ।**
**ಪ್ರಮಾಯಾಂ ಚ ಭ್ರಮೇ ಚಾಕ್ಷ್ಣಃ ಕಿಂ ನ ಕಾಕಗೃಹಾನ್ವಯಃ ॥ ೪೭೨ ॥**

**ತತ್ರಾಪಿ ಕೋಕಿಲೋಽಸಂಗೀ ತದ್ಭ್ರಾಂತಿರ್ದೋಷಜೈವ ತತ್ ।**
**ಅತಶ್ಚೋಕ್ತಂ ಸಮಸ್ತಂ ಚ ತತ್ತ್ವಮಾಸೀದನಾಕುಲಮ್ ॥ ೪೭೩ ॥**

**ಅರ್ಥ–** ವಸ್ತುತಃ= ವಾಸ್ತವಿಕವಾಗಿ, ಕಾಕಿನಿ= ಕಾಗೆಯುಳ್ಳ, ಗೃಹೇ= ಮನೆಯಲ್ಲಿ, ಕಾಕಕೋಕಿಲವತ್ತಯೋಃ = ಕಾಗೆಯುಳ್ಳದ್ದು ಮತ್ತು ಕೋಗಿಲೆಯುಳ್ಳದ್ದು ಎಂಬ, ಪ್ರಮಾಯಾಂ = ಪ್ರಮೆಯಲ್ಲಿ, ಭ್ರಮೇ ಚ = ಮತ್ತು ಭ್ರಮೆಯಲ್ಲಿ, ಅಕ್ಷ್ಣಃ = ಚಕ್ಷುಸ್ಸಿನ ಜೊತೆಗೆ, ಕಾಕಗೃಹಾನ್ವಯಃ = ಕಾಕ ಮತ್ತು ಗೃಹಗಳ ಸನ್ನಿಕರ್ಷವು, ಕಿಂ ನ = ಉಂಟಾಗುವುದಿಲ್ಲವೇನು?

ತತ್ರಾಪಿ = ಈ ಸ್ಥಳದಲ್ಲಿಯೂ, ಕೋಕಿಲಃ = ಕೋಗಿಲೆಯೂ, ಅಸಂಗೀ= ಚಕ್ಷುಸ್ಸಿ ಸಂಬಂಧವುಳ್ಳದ್ದಲ್ಲ, ತದ್ಭ್ರಾಂತಿಃ = ಕೋಕಿಲವತ್‌ಗೃಹಂ ಎನ್ನುವ ಭ್ರಾಂತಿಯು, ದೋಷಜೈವ = ದೋಷದಿಂದಲೇ ಉಂಟಾಗಿದೆ. ಅತಶ್ಚ = ಆದ ಕಾರಣದಿಂದಲೂ, ಉಕ್ತಂ = ನಮ್ಮಿಂದ ಹೇಳಲ್ಪಟ್ಟ, ಸಮಸ್ತಂ ಚ = ಎಲ್ಲವೂ ಕೂಡ, ಅನಾಕುಲಂ = ನಿರ್ದುಷ್ಟವಾದ, ತತ್ತ್ವಂ = ತತ್ತ್ವವು, ಆಸೀತ್ = ಆಯಿತು.

**ಅನುವಾದ– ಗೃಹದಲ್ಲಿ ವಸ್ತುತಃ ಕಾಗೆಯು ಇರುವಾಗ ಕಾಕವದ್‌ಗೃಹಂ ಎಂಬುದು ಪ್ರಮೆ. ಕೋಕಿಲವದ್‌ಗೃಹಂ ಎನ್ನುವುದು ಭ್ರಾಂತಿ. ಆದರೆ ಎರಡೂ ಸ್ಥಳಗಳಲ್ಲಿಯೂ ಚಕ್ಷುಸ್ಸಿಗೂ ಮತ್ತು ಕಾಕಕ್ಕೂ ಸನ್ನಿಕರ್ಷವಿದೆ. ಭ್ರಾಂತಿಯ ಸ್ಥಳದಲ್ಲಿ ಕೋಗಿಲೆಗೂ ಮತ್ತು ಚಕ್ಷುಸ್ಸಿಗೂ ಸನ್ನಿಕರ್ಷವಿಲ್ಲ. ಏಕೆಂದರೆ ಕೋಕಿಲೆಯು ಅಸತ್. ಅದರ ಜ್ಞಾನವು ದೋಷದಿಂದಲೇ ಬರಬೇಕು. ಆದ್ದರಿಂದ ಇದುವರೆಗೆ ನಾವು ಹೇಳಿದ ಪ್ರಮೇಯವೆಲ್ಲಾ ನಿರ್ದುಷ್ಟವಾಗಿಯೇ ಇದೆ.**

**ಭಾವವಿಲಾಸಿನೀ–**ಸಂಸರ್ಗಪ್ರಮಾಯಾಂ ಸಂಸರ್ಗಭ್ರಮೇ ಚ ವಿಶೇಷಣಸನ್ನಿಕರ್ಷಸ್ಯ ಸಾಧಾರಣ್ಯಂ ಪ್ರದರ್ಶಯತಿ – **ವಸುತ್ತ ಇತಿ** ॥ ವಸ್ತುತಃ ಸ್ವಭಾವತಃ । ಕಾಕಿನಿ ಕಾಕವತಿ ಕಾಕಕೋಕಿಲವತ್ತಯೋಃ ಪ್ರಮಾಯಾಂ ಭ್ರಮೇಚ ಕಾಕವದಿತಿ ಕಾಕಸಂಸರ್ಗಪ್ರಮಾಯಾಂ ಕಾಕೇ ಕೋಕಿಲತ್ವಮಾರೋಪ್ಯ ಕೋಕಿಲವದಿತಿ ವಿಶೇಷಣಸಂಸರ್ಗಭ್ರಮೇ ಚಾಕ್ಷ್ಣಃ ಕಾಕಗೃಹಾನ್ವಯಃ ವಿಶೇಷಣೀಭೂತಕಾಕಸಂಸರ್ಗಃ ವಿಶೇಷ್ಯಭೂತಗೃಹಸಂಸರ್ಗಃ ಪೃಥಕ್ಪೃಥಕ್ ಕಿಂ ನ? ಇತಿ

ಸಂಬಂಧಃ । ತಸ್ಮಾದ್ವಿಶೇಷಣಪ್ರಮಾಯಾಂ ವಿಶೇಷಣಭ್ರಮೇ ಚ ವಿಶೇಷ್ಯವಿಶೇಷಣಯೋ-ರುಭಯೋರಪಿ ಸಂಸರ್ಗಃ ಸಾಧಾರಣ ಏವೇತಿ ಭಾವಃ ॥ ೪೭೨ ॥

ತರ್ಹಿ ಭ್ರಮೇ ದೋಷೋಽಪಿ ನಾಪೇಕ್ಷಿತಃ ಕಿಮ್? ನೇತ್ಯಾಹ **– ತತ್ರಾಪೀತಿ ॥ ಕೋಕಿಲವದ್** ಗೃಹಮಿತಿ ಜ್ಞಾನೇಽಪಿ ಕೋಕಿಲಃ ಕಾಕಾಭಿನ್ನತಯಾ ಜ್ಞಾಯಮಾನಃ ಕೋಕಿಲೋಽಸಂಗೀ ಚಕ್ಷುರಸಂಗೀ । ತತ್ತಸ್ಮಾತ್ ಕೋಕಿಲಸಂಸರ್ಗಾಭಾವಾತ್ ತದ್ಭ್ರಾಂತಿರ್ದೋಷಜೈವೇತಿ ಯೋಜನಾ । ಉಕ್ತಮರ್ಥಮುಪಸಂಹರತಿ **– ಅತ ಇತಿ ॥** ಉಕ್ತಂ ಸಮಸ್ತಂ ಪ್ರಮಾಯಾ ಜ್ಞಾನ-ಸಾಮಾನ್ಯಸಾಮಗ್ರೀಮಾತ್ರಜನ್ಯತ್ವಂ ಅಪ್ರಮಾಯಾಶ್ಚ ದೋಷಸಹಿತ- ಜ್ಞಾನ-ಸಾಮಾನ್ಯಸಾಮಗ್ರೀಜನ್ಯತ್ವಮ್ ॥ ೪೭೩ ॥

**ವಿವರಣೆ–** ಸಂಸರ್ಗಪ್ರಮೆಯಲ್ಲಿಯೂ ಮತ್ತು ಸಂಸರ್ಗಭ್ರಮದಲ್ಲಿಯೂ ವಿಶೇಷಣಸನ್ನಿಕರ್ಷವು ಸಾಧಾರಣವಾದುದೆಂದು ಈ ಶ್ಲೋಕಗಳಲ್ಲಿ ತಿಳಿಸುತ್ತಾರೆ. ಗೃಹದಲ್ಲಿ ಇರುವುದು ಕಾಗೆ. ಕಾಗೆಯನ್ನು ಕೋಗಿಲೆಯೆಂದು ತಿಳಿದುಕೊಂಡು 'ಕೋಕಿಲವದ್‌ಗೃಹಂ' ಎಂಬ ಭ್ರಾಂತಿಯು ಉಂಟಾಗುತ್ತದೆ. ಇದು ಸಂಸರ್ಗಭ್ರಾಂತಿ. ಆಗಲೂ, ಗೃಹಕ್ಕೂ ಮತ್ತು ವಿಶೇಷಣವಾದ ಕಾಗೆಗೂ ಸಂಸರ್ಗವು ಇದ್ದೇ ಇದೆ. ಚಕ್ಷುಸ್ಸಿಗೂ, ಗೃಹಕ್ಕೂ ಇರುವ ಸನ್ನಿಕರ್ಷವು ಬೇರೆ. ಚಕ್ಷುಸ್ಸಿಗೂ ಮತ್ತು ಕಾಗೆಗೂ ಇರುವ ಸನ್ನಿಕರ್ಷವು ಬೇರೆ. ಈ ಸಂಸರ್ಗವು ಪ್ರಮಾ ಮತ್ತು ಭ್ರಮಾ ಎರಡೂ ಸ್ಥಳಗಳಲ್ಲಿಯೂ ಸಾಧಾರಣವಾದುದು. ಆದರೆ ಭ್ರಾಂತಿಯಲ್ಲಿ ಕೋಗಿಲೆಯು ಕಾಕಾಭಿನ್ನತ್ವೇನ ಜ್ಞಾತವಾಗುತ್ತದೆ. ಕೋಗಿಲೆಯು ಅಸತ್ತಾದ್ದರಿಂದ ಅಲ್ಲಿ ಅದರ ಸಂಸರ್ಗವಿಲ್ಲ. ಸಂಸರ್ಗವಿಲ್ಲದಿದ್ದರೂ ಉಂಟಾಗುವ ಕಾಕಾಭೇದ ಭ್ರಾಂತಿಯು ದೋಷದಿಂದಲೇ ಉಂಟಾಗುವುದು ಎಂದು ಒಪ್ಪಬೇಕು. ಆದ್ದರಿಂದ ನಾವು ಇದುವರೆಗೆ ಹೇಳಿದ ಪ್ರಮೆಯು ಜ್ಞಾನಸಾಮಾನ್ಯ-ಸಾಮಗ್ರಿಜನ್ಯವಾದುದು ಮತ್ತು ಭ್ರಾಂತಿಯು ಜ್ಞಾನಸಾಮಾನ್ಯಸಾಮಗ್ರಿಯ ಜೊತೆಯಲ್ಲಿ ದೋಷವು ಅಧಿಕವಾಗಿ ಸೇರಿ ಅದರಿಂದ ಜನ್ಯವಾದುದು ಎಂಬ ಪ್ರಮೇಯವು ನಿರ್ಬಾಧವಾಗಿ ಸಿದ್ಧಿಸುತ್ತದೆ.

**ಯಥಾ ಘಟಾದಿಕಾರ್ಯೇಷು ದಂಡತ್ವೇನೈವ ಲಾಘವಾತ್ ।**
**ಹೇತುತಾ ದಂಡದಾರ್ಢ್ಯಾದಿ ತ್ವವಚ್ಛೇದಕಮೇವ ತೇ ॥ ೪೭೪ ॥**

**ತಥಾಚ ಚಕ್ಷುಶ್ಚಕ್ಷುಷ್ಟ್ವೇನೈವ ಹೇತುರ್ಲಘುತ್ವತಃ ।**
**ಅದುಷ್ಟತ್ವಂ ತು ತನ್ನಿಷ್ಠಮವಚ್ಛೇದಕಮಸ್ತು ಮೇ ॥ ೪೭೫ ॥**

**ಅರ್ಥ–** ಯಥಾ = ಯಾವರೀತಿಯಾಗಿ, ಘಟಾದಿಕಾರ್ಯೇಷು = ಘಟಾದಿ-ಕಾರ್ಯಗಳಲ್ಲಿ, ಲಾಘವಾತ್ = ಲಾಘವದಿಂದ, ಹೇತುತಾ = ಕಾರಣತ್ವವು, ದಂಡತ್ವೇನ ಏವ = ದಂಡರೂಪದಿಂದಲೇ ಇದೆಯೋ, ತೇ = ನಿನಗೂ ಕೂಡ, ದಂಡದಾರ್ಢ್ಯಾದಿ ತು =

ದಂಡದ ದಾರ್ಢ್ಯಾದಿಗಳು, ಅವಚ್ಛೇದಕಂ ಏವ = ಕಾರಣದಲ್ಲಿ ಅವಚ್ಛೇದಕವಾಗಿಯೇ ಇದೆಯೋ.

ತಥಾ = ಅದೇ ರೀತಿಯಾಗಿ, ಲಘುತ್ವತಃ = ಲಾಘವಕಾರಣದಿಂದ, ಚಕ್ಷುಶ್ಚ = ಚಕ್ಷುರಿಂದ್ರಿಯವು, ಚಕ್ಷುಷ್ಟ್ವೇನ ಏವ = ಚಕ್ಷುಷ್ಟ್ವೇನರೂಪೇಣ, ಹೇತುಃ = ಕಾರಣವಾಗಿದೆ. ತನ್ನಿಷ್ಠಂ = ಚಕ್ಷುಸ್ಸಿನಲ್ಲಿರುವ, ಅದುಷ್ಟತ್ವಂ ತು = ದೋಷಾಭಾವವಾದರೋ, ಅವಚ್ಛೇದಕಂ = ಅವಚ್ಛೇದಕವು, ಅಸ್ತು = ಆಗಲಿ.

**ಅನುವಾದ–** ಘಟವನ್ನು ಕುರಿತು ದಂಡವು ಕಾರಣ ಎಂದು ಹೇಳುವಾಗ ದಂಡಕ್ಕೆ ದಂಡತ್ವರೂಪದಿಂದಲೇ ಕಾರಣತ್ವವನ್ನು ಹೇಳಬೇಕು. ಯದ್ಯಪಿ, ದಂಡದಿಂದ ಘಟವು ಜನಿಸಬೇಕಾದರೆ, ದಂಡದ ದಾರ್ಢ್ಯವೂ ಬೇಕು. ಆದರೆ, ದಾರ್ಢ್ಯವು ಕಾರಣವಲ್ಲ. ಕಾರಣದಲ್ಲಿ ಅವಚ್ಛೇದಕವಾಗಿರುತ್ತದೆ. ಹಾಗೆಯೇ, ಚಕ್ಷುಸ್ಸಿನಿಂದ ಜ್ಞಾನ ಉಂಟಾಗಬೇಕಾದರೆ, ಚಕ್ಷುಸ್ಸಿಗೆ ಚಕ್ಷುಷ್ಟ್ವೇನ ರೂಪೇಣ ಕಾರಣತ್ವವನ್ನು ಹೇಳಬೇಕು. ಯದ್ಯಪಿ ಚಕ್ಷುಸ್ಸಿನಲ್ಲಿ ದೋಷಾಭಾವವಿರಬೇಕು. ಆದರೆ ಅದು ಕಾರಣವಲ್ಲ. ಕಾರಣದಲ್ಲಿ ವಿಶೇಷಣವಾಗಿ ಅವಚ್ಛೇದಕವಾಗುತ್ತದೆ.

**ಭಾವವಿಲಾಸಿನೀ–**ದೋಷಾಭಾವಸ್ಯ ಯಾದೃಚ್ಛಿಕಸಂವಾದಿನಿ ವ್ಯಭಿಚಾರಾತ್ ನ ಪ್ರಮಾಕರಣ-ತೇತ್ಯುಕ್ತಮ್ । ಪ್ರಕಾರಾಂತರೇಣಾಪಿ ತಸ್ಯ ಕಾರಣತಾಂ ನಿರಾಕರೋತಿ – **ಯಥೇತಿ** ॥ ದಂಡಸ್ಯೇತಿ ಶೇಷಃ ॥ ೪೭೪ ॥

ದೃಷ್ಟಾಂತಮುಕ್ತ್ವಾ ದಾರ್ಷ್ಟಾಂತಿಕಮಾಹ – **ತಥೇತಿ** ॥ ಹೇತುಃ ಪ್ರಮಾಹೇತುಃ । ತನ್ನಿಷ್ಠಂ ಚಕ್ಷುರ್ನಿಷ್ಠಮ್ ॥ ೪೭೫ ॥

**ವಿವರಣೆ–** ಯಾದೃಚ್ಛಿಕ ಸಂವಾದಿಸ್ಥಳದಲ್ಲಿ ದೋಷಾಭಾವಕ್ಕೆ ವ್ಯಭಿಚಾರ ಬರುವುದರಿಂದ ದೋಷಾಭಾವವು ಪ್ರಮೆಯನ್ನು ಕುರಿತು ಕಾರಣವಲ್ಲ ಎಂದು ಹೇಳಿದ್ದಾಯಿತು. ಈಗ ಇನ್ನೊಂದು ರೀತಿಯಿಂದ ದೋಷಾಭಾವಕ್ಕೆ ಕಾರಣತ್ವವನ್ನು ನಿರಾಕರಿಸುತ್ತಾರೆ. ದೋಷಾಭಾವವು ಕಾರಣದಲ್ಲಿದ್ದು ಅವಚ್ಛೇದಕವಾಗಬಹುದು, ಆದರೆ ಕಾರಣವಲ್ಲ. ಆದ್ದರಿಂದ ಪ್ರಮೆಗೂ ಮತ್ತು ದೋಷಾಭಾವಕ್ಕೂ ಕಾರ್ಯಕಾರಣಭಾವವಿಲ್ಲ.

**ಅಭಾವಗುಣಜಾಽಪ್ಯೇವಂ ಯಾ ನ ಸಾ ನ ಗುಣಾಂತರಾತ್॥ ೪೭೬ ॥**

**ಅರ್ಥ–** ಯಾ= ಯಾವ ಪ್ರಮೆಯು, ಅಭಾವಗುಣಜಾ ಅಪಿ = ದೋಷಾಭಾವರೂಪವಾದ ಗುಣವನ್ನು ಅಪೇಕ್ಷಿಸಿದರೂ, ಏವಂ ನ = ದೋಷಾಭಾವ ಜನ್ಯವಲ್ಲವೋ, ಸಾ = ಆ ಪ್ರಮೆಯು, ಗುಣಾಂತರಾತ್ = ಭಾವರೂಪವಾದ ಬೇರೆ ಗುಣದಿಂದ, ನ = ಜನ್ಯವಾದುದಲ್ಲ.

**ಅನುವಾದ–** ಯಾವ ಪ್ರಮೆಯು ದೋಷಾಭಾವರೂಪವಾದ ಗುಣವನ್ನು ಅಪೇಕ್ಷಿಸಿದರೂ ದೋಷಾಭಾವಜನ್ಯವಲ್ಲವೋ ಅಂತಹ ಪ್ರಮೆಯು ಭಾವರೂಪವಾದ ಬೇರೆ ಗುಣದಿಂದ ಹೇಗೆ ಜನ್ಯವಾಗುತ್ತದೆ?

**ಭಾವವಿಲಾಸಿನೀ–**ದೋಷಾಭಾವಸ್ಯಾವಚ್ಛೇದಕತ್ವೇ ಕಿಂ ಸಿದ್ಧಮ್? ಇತ್ಯತ ಆಹ– **ಅಭಾವೇತಿ ॥** ಯಾ ಪ್ರಮಾ । ಗುಣಾಂತರಾತ್ ಭಾವರೂಪಗುಣಾತ್ । ಸಾ ಪ್ರಮಾ ತದುತ್ಪನ್ನಾ ನೇತ್ಯರ್ಥಃ ॥ ೪೭೬ ॥

**ವಿವರಣೆ–** ದೋಷಾಭಾವವನ್ನು ಕಾರಣತಾವಚ್ಛೇದಕ ಎಂದು ಹೇಳಿದ್ದರಿಂದ ಸಿದ್ಧವಾದ ಪ್ರಮೇಯವನ್ನು ಇಲ್ಲಿ ಹೇಳುತ್ತಾರೆ. ದೋಷಾಭಾವವು ಪ್ರಮೆಯನ್ನು ಕುರಿತು ಕಾರಣವಲ್ಲ. ಅಭಾವರೂಪವಾದ ದೋಷಾಭಾವವೇ ಕಾರಣವಾಗದಿರುವಾಗ ಬೇರೆ ಭಾವರೂಪವಾದ ಗುಣವನ್ನು ಏಕೆ ಕಾರಣ ಎಂದು ಒಪ್ಪಬೇಕು.

ಭ್ರಮೇ ತ್ವತ್ಯನ್ತಾಸತೋಽಪಿ ಸತ್ತಾಯಾ ಬೋಧಸಾಧನೇ ।
ದೋಷಸ್ಯ ಹೇತುತಾಽವಶ್ಯಂ ವಾಚ್ಯಾ ತತ್ಪರತೋಽಪ್ರಮಾ ॥ ೪೭೭ ॥

**ಅರ್ಥ–** ಭ್ರಮೇ ತು = ಭ್ರಮಸ್ಥಳದಲ್ಲಿಯಾದರೂ, ಅತ್ಯಂತಅಸತಃ ಅಪಿ = ಅತ್ಯಂತ ಅಸತ್ತಾದ, ಸತ್ತಾಯಾಃ = ಸತ್ತ್ವಕ್ಕೆ, ಬೋಧಸಾಧನೇ = ಜ್ಞಾನವನ್ನು ಸಾಧಿಸುವಾಗ, ದೋಷಸ್ಯ= ದೋಷಕ್ಕೆ, ಹೇತುತಾ = ಕಾರಣತ್ವವು, ಅವಶ್ಯಂ = ಅವಶ್ಯವಾಗಿ, ತತ್ = ಆದ್ದರಿಂದ, ಅಪ್ರಮಾ= ಅಯಾಥಾರ್ಥಜ್ಞಾನವು, ಪರತಃ= ಜ್ಞಾನಗ್ರಾಹಕಾರಿಕ್ತ ಮೂಲದಿಂದ, ವಾಚ್ಯಾ = ಹೇಳಲ್ಪಡಬೇಕು,

**ಅನುವಾದ–** ಭ್ರಮದಲ್ಲಿ ಮಾತ್ರ ಅತ್ಯಂತ ಅಸತ್ತಾದ ವಸ್ತುವಿನ ಜ್ಞಾನವೂ ಸಹ ಉಂಟಾಗುತ್ತದೆ. ಆದ್ದರಿಂದ ಅಲ್ಲಿ ಅವಶ್ಯವಾಗಿ ದೋಷಕ್ಕೆ ಕಾರಣತ್ವವನ್ನು ಹೇಳಬೇಕು. ಆದ್ದರಿಂದ ಅಪ್ರಾಮಾಣ್ಯವು ಪರತಃ ಎಂದಾಯಿತು.

**ಭಾವವಿಲಾಸಿನೀ–**ಅಪ್ರಾಮಾಣ್ಯಪರತಸ್ತ್ವಮಾವಶ್ಯಕಮಿತ್ಯಾಹ – **ಭ್ರಮೇ ತ್ವಿತಿ ॥** ಅತ್ಯನ್ತಾಸತೋಽಪೀತ್ಯನೇನ ಸನ್ನಿಕರ್ಷಾಭಾವಂ ಸೂಚಯತಿ । ತತ್ ತಸ್ಮಾದ್ದೋಷಸ್ಯಾ-ವಶ್ಯಂಭಾವಾತ್॥

**ವಿವರಣೆ–** ಅಪ್ರಾಮಾಣ್ಯದ ಪರತಸ್ತ್ವವನ್ನು ಈ ಶ್ಲೋಕದಲ್ಲಿ ಸಮರ್ಥಿಸುತ್ತಾರೆ. ಭ್ರಾಂತಿಯಲ್ಲಿ ತೋರುವ ವಿಷಯವು ಅತ್ಯಂತ ಅಸತ್ತಾಗಿರುವುದರಿಂದ ಅಲ್ಲಿ ಸನ್ನಿಕರ್ಷವಿಲ್ಲ. ಸನ್ನಿಕರ್ಷವಿಲ್ಲದೆ ವಸ್ತುವು ತೋರಬೇಕಾದರೆ, ಸನ್ನಿಕರ್ಷದ ಪ್ರತಿನಿಧಿ ಯಾಗಿ ದೋಷವನ್ನು ಅವಶ್ಯಕವಾಗಿ ಅಂಗೀಕಾರ ಮಾಡಬೇಕು. ಆದ್ದರಿಂದ ಅಪ್ರಾಮಾಣ್ಯಕ್ಕೆ ಪರತಸ್ತ್ವವು ಸಿದ್ಧವಾಗುತ್ತದೆ.

**ಯದ್ವಾ ಚಕ್ಷುಃ ಪ್ರಮಾಹೇತುರ್ದೋಷಸ್ತು ಪ್ರತಿಬಂಧಕಃ ।**
**ಪ್ರತಿಬಂಧಸ್ಯ ಚಾಭಾವೋ ನ ಹೇತುರಿತಿ ಸಾಧಿತಮ್ ॥ ೪೭೮ ॥**

**ಅರ್ಥ–** ಯದ್ವಾ= ಅಥವಾ, ಚಕ್ಷುಃ = ಚಕ್ಷುರಿಂದ್ರಿಯವು, ಪ್ರಮಾಹೇತುಃ = ಪ್ರಮೆಯನ್ನು ಕುರಿತು ಕಾರಣವು, ದೋಷಃ ತು= ದೋಷವಾದರೊ, ಪ್ರತಿಬಂಧಕಃ = ಪ್ರಮೋತ್ಪತ್ತಿಗೆ ಪ್ರತಿಬಂಧಕವು. ಪ್ರತಿಬಂಧಸ್ಯ ಚ = ಪ್ರತಿಬಂಧಕಕ್ಕಾದರೂ, ಅಭಾವಃ = ಅಭಾವವು, ನ ಹೇತುಃ ಇತಿ = ಕಾರಣವಲ್ಲ ಎಂದು, ಸಾಧಿತಮ್ = ಹಿಂದೆ ಸಮರ್ಥಿಸಲ್ಪಟ್ಟಿದೆ.

**ಅನುವಾದ–** ಅಥವಾ ಪ್ರಮೆಯನ್ನು ಕುರಿತು ಚಕ್ಷುಸ್ಸು ಕಾರಣ. ದೋಷವು ಪ್ರಮೋತ್ಪತ್ತಿಯನ್ನು ಕುರಿತು ಪ್ರತಿಬಂಧಕ ಎಂದು ಕಲ್ಪನೆ ಮಾಡಿದರೇ ಸಾಕು, ದೋಷಾಭಾವವು ಕಾರಣ ಎಂದು ಸಿದ್ಧವಾಗುವುದಿಲ್ಲ. ಏಕೆಂದರೆ ಪ್ರತಿಬಂಧಕಾಭಾವಕ್ಕೆ ಕಾರಣತ್ವವು ಇಲ್ಲವೆಂದು ನಾವು ಹಿಂದೆ ಸಮರ್ಥಿಸಿದ್ದೇವೆ.

**ಭಾವವಿಲಾಸಿನೀ–ದೋಷಾಭಾವಸ್ಯ ಪ್ರಮಾಕರಣತ್ವಾಭಾವಂ ಪ್ರಕಾರಾಂತರೇಣ ಸಾಧಯತಿ – ಯದ್ವೇತಿ ॥ ಪ್ರತಿಬಂಧಕಃ ಪ್ರಮಾಪ್ರತಿಬಂಧಕಃ ॥ ೪೭೮ ॥**

**ವಿವರಣೆ–** ದೋಷಾಭಾವಕ್ಕೆ ಪ್ರಮಾಕಾರಣತ್ವ ಇಲ್ಲವೆಂಬ ವಿಷಯವನ್ನು ಬೇರೆ ರೀತಿಯಿಂದ ಈ ಶ್ಲೋಕದಲ್ಲಿ ಸಮರ್ಥನೆ ಮಾಡುತ್ತಾರೆ. ದೋಷಕ್ಕೆ ಪ್ರತಿಬಂಧಕತ್ವವನ್ನು ಒಪ್ಪಿದರೆ ಸಾಕು. ಆಗ ದೋಷಾಭಾವವು ಕಾರಣವಾಗುವುದಿಲ್ಲ. ಪ್ರತಿಬಂಧಕಾಭಾವವು ಕಾರಣವೆಂದು ಒಪ್ಪಿದರೆ, ಅನ್ಯೋನ್ಯಾಶ್ರಯಾದಿದೋಷಗಳು ಬರುತ್ತವೆಂದು ಹಿಂದೆಯೇ ಸಾಧಿಸಲಾಗಿದೆ.

**ಯಾದೃಚ್ಛಿಕಾರ್ಥನಿರ್ಬಾಧಬೋಧೇಽಸ್ಮಿನ್ ದೃಷ್ಟಿಲಿಂಗಜೇ ।**
**ವ್ಯಭಿಚಾರಾತ್ ಪ್ರಮಾಹೇತುರ್ದೋಷಾಭಾವೋ ನ ಕುತ್ರಚಿತ್ ॥ ೪೭೯ ॥**

**ಗುಣಾಂತರಂ ಚ ಸಲ್ಲಿಂಗಪರಾಮರ್ಶಾದಿಶಬ್ದಿತಮ್ ।**
**ಯತೋಽತ್ಯೈವ ನ ತಚ್ಚಾತ್ತೋ ನ ಪ್ರಮಾಕಾರಣಂ ಕ್ವಚಿತ್ ॥ ೪೮೦ ॥**

**ಅರ್ಥ–** ದೃಷ್ಟಿಲಿಂಗಜೇ = ಪ್ರತ್ಯಕ್ಷಜನ್ಯವಾದ ಅಥವಾ ಲಿಂಗಜನ್ಯವಾದ, ಅಸ್ಮಿನ್ = ಈ, ಯಾದೃಚ್ಛಿಕಾರ್ಥನಿರ್ಬಾಧಬೋಧೇ = ಯಾದೃಚ್ಛಿಕಸಂವಾದಿಯಾದ ಬಾಧರಹಿತವಾದ ಜ್ಞಾನದಲ್ಲಿ(ಪ್ರಮೆಯಲ್ಲಿ), ವ್ಯಭಿಚಾರಾತ್ = ವ್ಯಭಿಚಾರವಿರುವುದರಿಂದ, ದೋಷಾಭಾವಃ = ದೋಷಾಭಾವವು, ಕುತ್ರಚಿತ್= ಎಲ್ಲಿಯೂ ಕೂಡ, ಪ್ರಮಾಹೇತುಃ ನ= ಪ್ರಮೆಯನ್ನು ಕುರಿತು ಕಾರಣವಲ್ಲ.

ಯತಃ= ಯಾವ ಕಾರಣದಿಂದ, ಸಲ್ಲಿಂಗಪರಾಮರ್ಶಾದಿಶಬ್ದಿತಂ= ನಿರ್ದುಷ್ಟಲಿಂಗ ಪರಾಮರ್ಶ ಮೊದಲಾದ ಶಬ್ದದಿಂದ ವಾಚ್ಯವಾದ (ನಿರ್ದುಷ್ಟಲಿಂಗ ಪರಾಮರ್ಶ ಮೊದಲಾದ) ಗುಣಾಂತರಂ ಚ= ಬೇರೆಯ ಗುಣವೂ ಕೂಡ, ಅತ್ರ ಏವ= ಈ ಸ್ಥಳದಲ್ಲಿಯೇ, ನ= ಇಲ್ಲವೋ, ಅತಃ= ಆ ಕಾರಣದಿಂದ, ತತ್ ಚ= ಆ ಗುಣವೂ ಕೂಡ, ಕ್ವಚಿತ್= ಎಲ್ಲಿಯೂ ಕೂಡ, ನ ಪ್ರಮಾಕಾರಣಂ= ಯಥಾರ್ಥಜ್ಞಾನಕ್ಕೆ ಕಾರಣವಲ್ಲ.

**ಅನುವಾದ–** **ಯಾದೃಚ್ಛಿಕ ಸಂವಾದಿಯಾದ ಪ್ರತ್ಯಕ್ಷಜನ್ಯವಾದ ಅಥವಾ ಲಿಂಗಜನ್ಯವಾದ ಪ್ರಮಾಸ್ಥಳದಲ್ಲಿ ದೋಷಾಭಾವವಿಲ್ಲದಿರುವುದರಿಂದ ದೋಷಾಭಾವಕ್ಕೆ ಪ್ರಮೆಯನ್ನು ಕುರಿತು ಅನ್ವಯವು ಭಗ್ನವಾಗುತ್ತದೆ. ಆದ್ದರಿಂದ ದೋಷಾಭಾವವು ಪ್ರಮೆಯನ್ನು ಕುರಿತು ಎಲ್ಲಿಯೂ ಕಾರಣವಲ್ಲ. ಅಷ್ಟೇ ಅಲ್ಲದೆ, ನೀನು ಅಂಗೀಕರಿಸುವ ಆಪ್ತೋಕ್ತತ್ವ, ನಿರ್ದುಷ್ಟಲಿಂಗ ಪರಾಮರ್ಶಜನ್ಯತ್ವ ಮೊದಲಾದ ಪ್ರಮಾತ್ಮಕ ಶಾಬ್ದಬೋಧ ಮತ್ತು ಪ್ರಮಾತ್ಮಕವಾದ ಅನುಮಿತಿಗೆ ಕಾರಣವಾದ ಗುಣಗಳು ಈ ಸ್ಥಳದಲ್ಲಿಯೇ ಇಲ್ಲ. ಆದ್ದರಿಂದ ಎಲ್ಲಿಯೂ ನಿನಗೆ ಅಭಿಪ್ರೇತವಾದ ಗುಣಾಂತರವು ಪ್ರಮೆಯನ್ನು ಕುರಿತು ಕಾರಣವಲ್ಲ.**

**ಭಾವವಿಲಾಸಿನೀ–**ವ್ಯಭಿಚಾರಾದ್ದೋಷಾಭಾವಸ್ಯ ಗುಣಸ್ಯ ಚ ನ ಕಾರಣತೇತ್ಯುಕ್ತಮ್ । ತದ್ವಿಶದಯನ್ನುಕ್ತಪಕ್ಷದ್ವಯಂ ಸಹ ಸಂಗೃಹ್ಣಾತಿ – **ಯಾದೃಚ್ಛಿಕೇತಿ ॥** ಯಾದೃಚ್ಛಿಕಶ್ಚಾಸಾವರ್ಥನಿರ್ಬಾಧಬೋಧಶ್ಚೇತಿ ವಿಗ್ರಹಃ । ಯಾದೃಚ್ಛಿಕಪ್ರಮಾಯಾಮಿತಿ ಯಾವತ್ ॥ ೪೭೯ ॥

ಅತ್ರೈವ ಪ್ರಮಾರೂಪಯಾದೃಚ್ಛಿಕಾನುಮಿತಾವೇವ ತದ್ಗುಣಾಂತರಮ್ ॥ ೪೮೦ ॥

**ವಿವರಣೆ–** ವ್ಯಭಿಚಾರ ದೋಷವಿರುವುದರಿಂದ ದೋಷಾಭಾವಕ್ಕಾಗಲೀ ಅಥವಾ ಗುಣಕ್ಕಾಗಲೀ ಪ್ರಮೆಯನ್ನು ಕುರಿತು ಕಾರಣತ್ವವಿಲ್ಲ ಎಂದು ಹಿಂದೆ ಹೇಳಿದ ಪ್ರಮೇಯವನ್ನೇ ಈ ಶ್ಲೋಕಗಳಿಂದ ಸ್ಪಷ್ಟಪಡಿಸುತ್ತಾರೆ. ನದೀತೀರೇ ಪಂಚಫಲಾನಿ ಸಂತಿ ಎಂಬುದು ಪ್ರತಾರಕನ ವಾಕ್ಯ. ಇಲ್ಲಿ ಆಪ್ತೋಕ್ತತ್ವರೂಪವಾದ ಗುಣವಿಲ್ಲ. ವಿಪ್ರಲಂಭರೂಪವಾದ ದೋಷವೂ ಇದೆ. ಹಾಗೆಯೇ ಬಾಷ್ಪವನ್ನು ನೋಡಿ ಧೂಮವೆಂದು ತಿಳಿದು ಉಂಟಾದ ವಹ್ನಿಮಾನ್ ಎಂಬ ಅನುಮಿತಿಯೂ ಪ್ರಮಾರೂಪವಾಗಿದೆ. ಇಲ್ಲಿ ಸಲ್ಲಿಂಗಪರಾಮರ್ಶರೂಪವಾದ ಗುಣವೂ ಇಲ್ಲ. ಲಿಂಗಭ್ರಾಂತಿರೂಪವಾದ ದೋಷವೂ ಇದೆ. ಆದ್ದರಿಂದ ಈ ಸ್ಥಳದಲ್ಲಿ ಪ್ರಮೆಯೆಂಬ ಕಾರ್ಯವಿದ್ದರೂ ದೋಷಾಭಾವವೆಂಬ ಕಾರಣವಾಗಲೀ ಗುಣವೆಂಬ ಕಾರಣವಾಗಲೀ ಇಲ್ಲದಿರುವುದರಿಂದ ಕಾರ್ಯಕಾರಣಭಾವಕ್ಕೆ ವ್ಯಭಿಚಾರವು ಬರುತ್ತದೆ. ಆ ಕಾರಣದಿಂದ ಪ್ರಮೆಯನ್ನು ಕುರಿತು ದೋಷಾಭಾವವಾಗಲೀ ಅಥವಾ ಗುಣವಾಗಲೀ ಎಂದೂ ಕಾರಣವಲ್ಲ ಎಂದು ಸಿದ್ಧವಾಗುತ್ತದೆ.

**ತಸ್ಮಾದ್ ದ್ವಿರೂಪಜ್ಞಾನಸ್ಯ ಸಾಮಗ್ರೀ ಚ ದ್ವಿರೂಪಿಣೀ ।**
**ಸಾಮಾನ್ಯಾ ಪ್ರಾಯಿಕೇ ಜ್ಞಾನೇ ಯತಃ ಸರ್ವತ್ರ ಸರ್ವದಾ ॥ ೪೮೧ ॥**

**ಪ್ರಮೈವ ಪ್ರಾಯಶೋ ನೃಣಾಂ ಕ್ವಾಚಿತ್ಕೇ ತು ತತೋಽಪರಾ ।**
**ಕಾಚಾದಿದೋಷಜಾ ಭ್ರಾಂತಿರ್ನಹಿ ಸರ್ವಸ್ಯ ಸರ್ವದಾ ॥ ೪೮೨ ॥**

**ಅರ್ಥ–** ತಸ್ಮಾತ್ = ಆದ್ದರಿಂದ, ದ್ವಿರೂಪಜ್ಞಾನಸ್ಯ = ಪ್ರಮಾ, ಅಪ್ರಮಾ ಎಂಬ ಎರಡು ವಿಧದ ಜ್ಞಾನಕ್ಕೆ, ಸಾಮಗ್ರೀ ಚ = ಸಾಮಗ್ರಿಯು, ದ್ವಿರೂಪಿಣೀ = ಎರಡು ವಿಧವಾಗಿಯೇ ಇದೆ. ಯತಃ = ಯಾವಕಾರಣದಿಂದ, ಸರ್ವತ್ರ = ಎಲ್ಲ ಕಡೆಯೂ, ಸರ್ವದಾ = ಯಾವಾಗಲೂ, ಪ್ರಾಯಿಕೇ = ಹೆಚ್ಚಾಗಿ ಇರುವ, ಜ್ಞಾನೇ = ಜ್ಞಾನದಲ್ಲಿ, ಸಾಮಾನ್ಯಾ = ಸಾಮಾನ್ಯವೆಂದು (ಜ್ಞಾನಸಾಮಾನ್ಯಸಾಮಗ್ರಿಯೆಂದು) ಅಂಗೀಕೃತವಾಗಿದೆ. ಪ್ರಾಯಶಃ = ಪ್ರಾಯಶಃ, ನೃಣಾಂ = ಮನುಷ್ಯರಿಗೆ, ಪ್ರಮಾ ಏವ = ಪ್ರಮಾರೂಪವಾದ ಜ್ಞಾನವೇ ಉಂಟಾಗುತ್ತದೆ. ಕ್ವಾಚಿತ್ಕೇ ತು = ಕೆಲವುಕಡೆ ಮಾತ್ರ, ತತಃ ಅಪರಾ = ಪ್ರಮೆಗಿಂತ ಬೇರೆಯಾದ, ಕಾಚಾದಿದೋಷಜಾ = ಕಾಚಾದಿದೋಷದಿಂದ ಉಂಟಾಗುವ, ಭ್ರಾಂತಿಃ = ಭ್ರಾಂತಿಯು ಉಂಟಾಗುತ್ತದೆ, ಇದು, ಸರ್ವಸ್ಯ = ಎಲ್ಲರಿಗೂ, ಸರ್ವದಾ = ಯಾವಾಗಲೂ, ನ ಹಿ = ಉಂಟಾಗುವುದಿಲ್ಲವಷ್ಟೆ.

**ಅನುವಾದ– ಆದ್ದರಿಂದ ಜ್ಞಾನವು ಪ್ರಮೆ ಮತ್ತು ಅಪ್ರಮೆ ಎಂದು ಎರಡು ವಿಧವಾದದ್ದು. ಎರಡುವಿಧವಾದ ಜ್ಞಾನದ ಸಾಮಗ್ರಿಯೂ ಎರಡು ವಿಧವಾಗಿಯೇ ಇರುತ್ತದೆ. ಯಾವವಿಧದ ಜ್ಞಾನವು ಎಲ್ಲ ಕಡೆಗಳಲ್ಲಿಯೂ, ಯಾವಾಗಲೂ ಹೆಚ್ಚಾಗಿ ಉತ್ಪನ್ನವಾಗುತ್ತದೆಯೋ ಅಂತಹ ಜ್ಞಾನದ ಸಾಮಗ್ರಿಯನ್ನು ಜ್ಞಾನಸಾಮಾನ್ಯ-ಸಾಮಗ್ರಿಯೆಂದೇ ಅಂಗೀಕರಿಸಬೇಕು. ಹಾಗೆ ಹೆಚ್ಚಾಗಿ ಉಂಟಾಗುವುದು ಪ್ರಮಾರೂಪವಾದ ಜ್ಞಾನವೇ. ಕಾಚಾದಿದೋಷದಿಂದ ಉಂಟಾಗುವ ಭ್ರಾಂತಿಯು ಎಲ್ಲರಿಗೂ ಯಾವಾಗಲೂ ಉಂಟಾಗುವುದಿಲ್ಲ. ಅದು ತುಂಬಾ ವಿರಳವಾದುದು.**

**ಭಾವವಿಲಾಸಿನೀ–**ತಸ್ಮಾದುಕ್ತವಿಧಯಾ ಪ್ರಮಾಯಾ ಗುಣಜನ್ಯತ್ವಾಭಾವಾತ್ । ದ್ವಿರೂಪಜ್ಞಾನಸ್ಯ ಪ್ರಮಾಽಪ್ರಮಾರೂಪಜ್ಞಾನಸ್ಯ ಸಾಮಗ್ರೀ ಚ ದ್ವಿರೂಪಿಣೀ। ಜ್ಞಾನಸ್ಯ ಪ್ರಮಾಽಪ್ರಮಾ-ರೂಪತಯಾ ದ್ವಿರೂಪತ್ವೇನ ತೃತೀಯಜ್ಞಾನಕೋಟೇರಭಾವಾತ್ ಸಾಮಗ್ರ್ಯಪಿ ಪ್ರಮಾಸಾಮಗ್ರೀ ಭ್ರಮಸಾಮಗ್ರೀ ಚೇತಿ ದ್ವಿರೂಪಿಣ್ಯೇವ । ನನು ಪ್ರಮಾಸಾಮಗ್ರ್ಯತಿರಿಕ್ತಜ್ಞಾನಸಾಮಾನ್ಯ ಸಾಮಗ್ರೀಮಾದಾಯ ತ್ರಿರೂಪಿಣೀ । ಕಿಂತು ಸಾಮಾನ್ಯಸಾಮಗ್ರೀ ಪ್ರಮಾಯಾಂ ದೋಷ-ಘಟಿತಸಾಮಗ್ರ್ಯಪ್ರಮಾಯಾಮಿತ್ಯೇವಾಲಮ್। ಸಾಮಾನ್ಯ ಸಾಮಗ್ರ್ಯಾ ಏವ ಪ್ರಮಾ-ಸಾಮಗ್ರೀತ್ವಮುಪಪಾದಯತಿ – **ಸಾಮಾನ್ಯೇತಿ** ॥ ಪ್ರಾಯಿಕೇ ಬಾಹುಲ್ಯೇನ ಜಾಯಮಾನೇ ಜ್ಞಾನೇ ಪ್ರಮಾರೂಪಜ್ಞಾನೇ । ಸಾಮಾನ್ಯಾ ಜ್ಞಾನಸಾಮಾನ್ಯಸಾಮಗ್ರೀ ಯುಕ್ತಾ ।

ಉಭಯೋರಪಿ ಸಾಮಾನ್ಯರೂಪತ್ವೇನ ಯೋಗ್ಯಂ ಯೋಗ್ಯೇನ ಸಂಬಧ್ಯತ ಇತಿ ನ್ಯಾಯಾದಿತಿ ಭಾವಃ । ಪ್ರಮಾಯಾಂ ಪ್ರಾಯಿಕತ್ವಂ ಸಾಧಯತಿ – **ಯತ ಇತಿ** ॥ ಯತೋ ನೃಣಾಂ ಸರ್ವತ್ರ ಸರ್ವದಾ ಪ್ರಮೈವ ಭವತಿ । ನಹಿ ಕೋऽಪಿ ಮನುಷ್ಯಃ ಸ್ವಗೃಹಕಲತ್ರಪುತ್ರವಿತ್ತಾದೌ ಸರ್ವದಾ ಭ್ರಾಮ್ಯತಿ। ಯತಃ ಪಶುಪಕ್ಷ್ಯಾದಯೋऽಪಿ ಸ್ವಗೋಷ್ಠಸ್ವನೀಡಾದೌ ನ ಭ್ರಾಂತಾ ಭವಂತಿ । ಅತಃ ಪ್ರಮಾಯಾ ಔತ್ಸರ್ಗಿಕತ್ವೇನ ಸಾಮಾನ್ಯರೂಪತ್ವಮಿತಿ ಭಾವಃ । ಕ್ವಾಚಿತ್ಕೇ ತು ಅತಿದೂರತ್ವಾದಿ-ದೋಷವಶಾತ್ಕದಾಚಿಜ್ಜಾಯಮಾನೇ ಭ್ರಮೇ ತು । ತತಃ ಸಾಮಾನ್ಯಸಾಮಗ್ರೀತೋऽಪರಾ ದೋಷಸಹಿತಾ ವಿಶೇಷಸಾಮಗ್ರೀತಿ ಯೋಜನಾ । ಭ್ರಮಸ್ಯ ತತ್ಸಾಮಗ್ರ್ಯಾಶ್ಚ ವಿಶೇಷರೂಪತ್ವಾದಿತಿ ಭಾವಃ । ಭ್ರಮಸ್ಯ ಕ್ವಾಚಿತ್ಕತ್ವಮುಪಪಾದಯತಿ – **ಕಾಚಾದೀತಿ॥** ಏವಂಚ ಪ್ರಮಾಭ್ರಮಯೋಸ್ಸಾಮಾನ್ಯವಿಶೇಷರೂಪಯೋಸ್ತಾದೃಶಸಾಮಗ್ರೀಜನ್ಯತ್ವಾವಶ್ಯಮ್ಭಾವಾ-ದೇಕತ್ರ ಸ್ವತಸ್ತ್ವಮಪರತ್ರಪರತಸ್ತ್ವಮಿತಿ ಯುಕ್ತ್ಯಂತರಮೇತದಿತಿ ಭಾವಃ ॥ ೪೮೧-೪೮೨ ॥

**ವಿವರಣೆ–** ಹಿಂದೆ ಹೇಳಿದಂತೆ ಪ್ರಮೆಯು ಗುಣಜನ್ಯವಲ್ಲವಾದ್ದರಿಂದ ಜ್ಞಾನವು ಪ್ರಮಾ ಮತ್ತು ಅಪ್ರಮಾ ಎಂದು ಎರಡೇ ಕೋಟಿಗಳನ್ನು ಹೊಂದಿದ್ದು ಮೂರನೇ ಕೋಟಿ ಇಲ್ಲದ್ದರಿಂದ ಸಾಮಗ್ರಿಯೂ ಸಹ ಪ್ರಮಾಸಾಮಗ್ರಿ ಮತ್ತು ಭ್ರಮ ಸಾಮಗ್ರಿ ಎಂದು ಎರಡೇ ವಿಧವಾಗಿರಬೇಕು. ಹೊರತಾಗಿ ಪ್ರಮಾಸಾಮಗ್ರಿ ಅತಿರಿಕ್ತವಾಗಿ ಒಂದು ಜ್ಞಾನಸಾಮಾನ್ಯಸಾಮಗ್ರಿಯನ್ನು ಅಂಗೀಕಾರ ಮಾಡಬೇಕಾಗಿಲ್ಲ. ಜ್ಞಾನಸಾಮಾನ್ಯ ಸಾಮಗ್ರಿಯೇ ಪ್ರಮೆಯನ್ನು ಉಂಟು ಮಾಡುತ್ತದೆ. ಆ ಸಾಮಗ್ರಿಯ ಜೊತೆಯಲ್ಲಿ ದೋಷವು ಸೇರಿದಾಗ ಭ್ರಾಂತಿ ಉಂಟಾಗುತ್ತದೆ ಎಂಬುದನ್ನು ಈ ಶ್ಲೋಕಗಳಿಂದ ಉಪಪಾದನೆ ಮಾಡುತ್ತಾರೆ. ಪ್ರಮೆಯು ಉಂಟಾಗುವುದೇ ಹೇರಳವಾಗಿ ಕಂಡಿದೆ. ಯಾವ ಮನುಷ್ಯನಿಗೂ ತನ್ನ ಹೆಂಡತಿ, ಮಕ್ಕಳು, ಧನ ಮೊದಲಾದ ವಿಷಯಗಳಲ್ಲಿ ಸರ್ವದಾ ಭ್ರಾಂತಿ ಉಂಟಾಗುವುದಿಲ್ಲ. ಪಶುಪಕ್ಷಿಗಳಿಗೂ ಕೂಡ ತಮ್ಮ ಕೊಟ್ಟಿಗೆ, ಗೂಡುಗಳ ವಿಷಯದಲ್ಲಿ ಭ್ರಾಂತಿ ಉಂಟಾಗುವುದಿಲ್ಲ. ಆದ್ದರಿಂದ ಪ್ರಮೆಯು ಔತ್ಸರ್ಗಿಕವಾದುದು. ಆದ್ದರಿಂದ ಸಾಮಾನ್ಯರೂಪವಾದುದು. ಸಾಮಾನ್ಯರೂಪವಾದ ಪ್ರಮೆಗೆ, ಸಾಮಾನ್ಯಸಾಮಗ್ರಿಯೇ ಸಾಕು. ಕೆಲವು ಸಲ ವಿಷಯದಲ್ಲಿ ಅತಿದೂರತ್ವಾದಿ ದೋಷವಿರುವುದರಿಂದ ಆಗೊಮ್ಮೆ ಈಗೊಮ್ಮೆ ಭ್ರಾಂತಿಯು ಉಂಟಾಗುತ್ತದೆ. ಆದ್ದರಿಂದ ಅಲ್ಲಿ ಅತಿದೂರತ್ವಾದಿ ದೋಷದ ಅಪೇಕ್ಷೆ ಇರುವುದರಿಂದ ಸಾಮಗ್ರಿ ಕೋಟಿಯಲ್ಲಿ ಅದೂ ಪ್ರವಿಷ್ಟವಾಗಿ ವಿಶೇಷಸಾಮಗ್ರಿ ಎನಿಸಿಕೊಳ್ಳುತ್ತದೆ. ಭ್ರಮವೂ ವಿಶೇಷವಾದುದು, ಭ್ರಮದ ಸಾಮಗ್ರಿಯೂ ವಿಶೇಷವಾದುದು. ಆ ಕಾರಣದಿಂದ ಸಾಮಾನ್ಯವಾದ ಪ್ರಮೆಗೆ ಸ್ವತಸ್ತ್ವ, ವಿಶೇಷವಾದ ಭ್ರಮಕ್ಕೆ ಪರತಸ್ತ್ವವನ್ನು ಒಪ್ಪುವುದು ಯುಕ್ತವಾಗುತ್ತದೆ.

**ಉತ್ಪತ್ತಾವಪಿ ಚ ಜ್ಞಪ್ತೌ ತಸ್ಮಾತ್ ಸದ್ಭಿರುದೀರಿತಮ್ ।**
**ಸ್ವತಸ್ತ್ವಂ ಪರತಸ್ತ್ವಂ ಚ ತತ್ತ್ವಂ ವಿತ್ತ್ವಸ್ಯ ಸಾಧಕಮ್ ॥ ೪೮೩ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಸದ್ಭಿಃ= ಜ್ಞಾನಿಗಳಿಂದ, ಉದೀರಿತಾ= ಹೇಳಲ್ಪಟ್ಟ, ಪ್ರಾಮಾಣ್ಯಸ್ಯ= ಪ್ರಾಮಾಣ್ಯಕ್ಕೆ, ಉತ್ಪತ್ತೌ= ಹುಟ್ಟಿಗೆ ಸಂಬಂಧಿಸಿದಂತೆ, ಅಪಿ ಚ= ಮತ್ತೂ ಕೂಡ, ಜ್ಞಪ್ತೌ= ಜ್ಞಾನಕ್ಕೆ ಸಂಬಂಧಿಸಿದಂತೆ, ಸ್ವತಸ್ತ್ವಂ ತತ್ತ್ವಂ= ಸ್ವತಸ್ತ್ವವೆಂಬ ತತ್ತ್ವವು, ಚ= ಮತ್ತು, ಅಪ್ರಾಮಾಣ್ಯಸ್ಯ= ಅಪ್ರಾಮಾಣ್ಯಕ್ಕೆ, ಪರತಸ್ತ್ವಂ ತತ್ತ್ವಂ= ಪರತಸ್ತ್ವವೆಂಬ ತತ್ತ್ವವು, ವಿತ್ತ್ವಸ್ಯ= ಜ್ಞಾನಿಗಳ ಜ್ಞಾನಕ್ಕೆ, ಸಾಧಕಂ= ಸಾಧಕವಾಗಿದೆ.

**ಅನುವಾದ– ಆದ್ದರಿಂದ ಜ್ಞಾನಿಗಳು ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲೂ ಮತ್ತು ಜ್ಞಪ್ತಿಯಲ್ಲಿಯೂ ಹೇಳಿರುವ ಸ್ವತಸ್ತ್ವವೂ ಹಾಗೆ ಅಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲೂ ಮತ್ತು ಜ್ಞಪ್ತಿಯಲ್ಲಿಯೂ ಹೇಳಿರುವ ಪರತಸ್ತ್ವವೂ ಸಹ ಅವರ ಶ್ರೇಷ್ಠವಾದ ಜ್ಞಾನಕ್ಕೆ (ವಿದ್ವತ್ತಿಗೆ) ಸಾಧಕವಾಗಿದೆ.**

**ಭಾವವಿಲಾಸಿನೀ–**ಪ್ರಾಮಾಣ್ಯಸ್ಯ ಸ್ವತಸ್ತ್ವಸಾಧನಮುಪಸಂಹರತಿ – **ಉತ್ಪತ್ತಾವಿತಿ** ॥ ಪ್ರಾಮಾಣ್ಯಸ್ಯ ಸ್ವತಸ್ತ್ವಮಪ್ರಾಮಾಣ್ಯಸ್ಯ ಪರತಸ್ತ್ವಮ್ । ವಿತ್ತ್ವಸ್ಯ ವಿದೋ ಭಾವೋ ವಿತ್ತ್ವಮ್ । ವಿದ್ವತ್ತ್ವಸ್ಯೇತ್ಯರ್ಥಃ ॥ ೪೮೩ ॥

ವಿಮತಾ ಸನ್ನಿಕೃಷ್ಟಾಪೂರ್ವಾರ್ಥಾದೋಷಜದೃಷ್ಟಿದೃಕ್ ।
ಜ್ಞಾನಪ್ರಾಮಾಣ್ಯಾರ್ಥಸತ್ತ್ವೋಲ್ಲೇಖೇನ ನಿಯತಾ ಮತಾ ॥ ೪೮೪ ॥

ಪ್ರಾಮಾಣ್ಯಸಂಶಯಘ್ನಾಪ್ರಾಮಾಣ್ಯಾಗ್ರಾಹಿಪ್ರಮಾತ್ವತಃ ।
ಯಥಾ ತವಾನುಮೇತ್ಯುಕ್ತಸ್ವತಸ್ತ್ವೇऽಸ್ತ್ಯನುಮಾಪಿ ಮೇ ॥ ೪೮೫ ॥

**ಅರ್ಥ–** ವಿಮತಾ = ವಿವಾದಕ್ಕೆ ವಿಷಯವಾದ, ಸನ್ನಿಕೃಷ್ಟಾಪೂರ್ವಾರ್ಥಾ-ದೋಷಜದೃಷ್ಟಿದೃಕ್, ಸನ್ನಿಕೃಷ್ಟ= ಇಂದ್ರಿಯಸಂಬಂಧವುಳ್ಳ, ಅಪೂರ್ವ = ಹಿಂದೆ ತಿಳಿಯದ, ಅರ್ಥ = ವಸ್ತುವಿನ, ಅದೋಷಜ = ಕಾಚಕಾಮಾಲೆ ಮೊದಲಾದ ದೋಷದಿಂದ ಹುಟ್ಟದಿರುವ, ದೃಷ್ಟಿ = ಜ್ಞಾನದ, ದೃಕ್ = ಜ್ಞಾನವು (ಅನುವ್ಯವಸಾಯ), ಜ್ಞಾನಪ್ರಾಮಾಣ್ಯಾರ್ಥಸತ್ತ್ವೋಲ್ಲೇಖೇನ, ಜ್ಞಾನ = ಜ್ಞಾನದ, ಪ್ರಾಮಾಣ್ಯ = ಪ್ರಾಮಾಣ್ಯ ಹಾಗೂ, ಅರ್ಥ = ವಸ್ತುವಿನ, ಸತ್ತ್ವ = ಇರುವಿಕೆ ಇವುಗಳ, ಉಲ್ಲೇಖೇನ = ವಿಷಯೀಕರಿಸುವಿಕೆಯಿಂದ, ನಿಯತಾ = ಎಂದಿಗೂ ಕೂಡಿಕೊಂಡಿದೆ ಎಂದು, ಮತಾ = ತಿಳಿಯಲ್ಪಟ್ಟಿದೆ. ಪ್ರಾಮಾಣ್ಯಸಂಶಯಘ್ನಾ ಪ್ರಾಮಾಣ್ಯಾಗ್ರಾಹಿ- ಪ್ರಮಾತ್ವತಃ, ಪ್ರಾಮಾಣ್ಯ = ಪ್ರಾಮಾಣ್ಯದ, ಸಂಶಯ = ಸಂದೇಹವನ್ನು ಘ್ನ = ನಾಶಿಸುವ, ಅಪ್ರಾಮಾಣ್ಯ = ಅಪ್ರಾಮಾಣ್ಯವನ್ನು ಅಗ್ರಾಹಿ = ವಿಷಯೀಕರಿಸದಿರುವ, ಪ್ರಮಾತ್ವತಃ = ಯಥಾರ್ಥಜ್ಞಾನ-ವಾಗಿರುವುದರಿಂದ, ಯಥಾ = ಹೇಗೆ, ತವ = ನಿನ್ನ ಅನುಮಾ = ಅನುಮಾನವೋ ಹಾಗೆ ಎಂದು, ಮೇ = ನಮಗೆ, ಉಕ್ತ = ಹಿಂದೆ ಹೇಳಲ್ಪಟ್ಟ ಸ್ವತಸ್ತ್ವೇ = ಸ್ವತಸ್ತ್ವವಿಷಯದಲ್ಲಿ ಅಸ್ತಿ = ಅನುಮಾನರೂಪವಾದ ಪ್ರಮಾಣವು ಇದೆ.

**ಅನುವಾದ–** ವಿಮತವಾದ ಸನ್ನಿಕೃಷ್ಟವಾದ ಅಪೂರ್ವಾರ್ಥದ ದೋಷಜನ್ಯವಲ್ಲದ ಜ್ಞಾನದ ಜ್ಞಾನವು, ಜ್ಞಾನಪ್ರಾಮಾಣ್ಯ ಸಾಧಕವಾದ ಅರ್ಥಸತ್ತ್ವ ಉಲ್ಲೇಖವನ್ನು ನಿಯಮೇನ ಮಾಡುತ್ತದೆ. ಪ್ರಾಮಾಣ್ಯ ಸಂಶಯವನ್ನು ನಿವಾರಿಸುವ ಅಪ್ರಾಮಾಣ್ಯವನ್ನು ಗ್ರಹಿಸದಿರುವ ಪ್ರಮೆಯು ಆದ ಕಾರಣ ತಾರ್ಕಿಕರ ಪ್ರಾಮಾಣ್ಯ ಅನುಮಿತಿಯಂತೆ ಎಂಬ ಅನುಮಾನ ಪ್ರಯೋಗವು ನನಗೆ ಪ್ರಾಮಾಣ್ಯ ಸ್ವತಸ್ತ್ವಕ್ಕೆ ಸಾಧಕವಾಗುತ್ತದೆ.

**ಭಾವವಿಲಾಸಿನೀ–**ಜ್ಞಪ್ತೌ ಸ್ವತಸ್ತ್ವೇऽನುಮಾನಮಾಹ – **ವಿಮತೇತಿ ॥** ವಿಮತಾ ಸ್ವತಸ್ತ್ವಪರತಸ್ತ್ವವಿಪ್ರತಿಪತ್ತಿಧರ್ಮಿಭೂತಾ । ವಿಮತಾಮೇವ ಶೃಂಗಗ್ರಾಹಕತಯಾ ದರ್ಶಯತಿ – **ಸನ್ನಿಕೃಷ್ಟೇತಿ ॥** ಸನ್ನಿಕೃಷ್ಟಶ್ಚಾಸಾವಪೂರ್ವಾರ್ಥಶ್ಚ ತಸ್ಯ ಅದೋಷಜಾ ಯಾ ದೃಷ್ಟಿಸ್ತಸ್ಯಾಃ ದೃಗ್ ಅನುವ್ಯವಸಾಯ ಇತಿ ಯಾವತ್। ಸನ್ನಿಕೃಷ್ಟೇತಿ ದೋಷಾಜನ್ಯತ್ವೇ ಹೇತುಸೂಚನಮ್ । ಅಪೂರ್ವೇತ್ಯನೇನಾನಭ್ಯಾಸದಶಾಪನ್ನತ್ವಂ ಸೂಚಯತಿ । ಅದೋಷಜೇತ್ಯನೇನ ದೋಷ-ಜನ್ಯಸಂಶಯಾದಿಜ್ಞಾನಾನುವ್ಯವಸಾಯೇ ಬಾಧಃ ಪರಿಹೃತಃ। ಅಪೂರ್ವೇತ್ಯನೇನ ದ್ವಿತೀಯಾನು-ವ್ಯವಸಾಯಮಾದಾಯ ಸಿದ್ಧಸಾಧನತಾಪಿ ಪರಿಹೃತಾ । ಜ್ಞಾನಪ್ರಾಮಾಣ್ಯಸ್ಯಾರ್ಥಸತ್ತ್ವೋ-ಲ್ಲೇಖೇನಾರ್ಥಸತ್ತಾನಿಶ್ಚಯರೂಪೇ ಯೋऽಯಮುಲ್ಲೇಖಃ ತೇನ ನಿಯತೇತಿ ಸಾಧ್ಯಮ್ । ಪ್ರಾಮಾಣ್ಯಸಂಶಯಘ್ನಾಪ್ರಾಮಾಣ್ಯಾಗ್ರಾಹಿಪ್ರಮಾತ್ವತಃ ಪ್ರಮಾತ್ವಾದಿತಿ ಹೇತುಃ । ಘಟಾದಿಜ್ಞಾನೇ ವ್ಯಭಿಚಾರಪರಿಹಾರಾಯ ಪ್ರಾಮಾಣ್ಯ- ಸಂಶಯಘ್ನೇತಿ । ಅಪ್ರಾಮಾಣ್ಯ-ನಿಶ್ಚಯೇ ವ್ಯಭಿಚಾರಪರಿಹಾರಾರ್ಥಂ ಅಪ್ರಾಮಾಣ್ಯಾಗ್ರಹೀ ಇತ್ಯುಕ್ತಮ್ । ಮಾನಸವಿಪರೀತಾ-ನುವ್ಯವಸಾಯೇ ವ್ಯಭಿಚಾರಪರಿಹಾರಾರ್ಥಂ ಪ್ರಮಾತ್ವತ ಇತಿ । ಯಾ ಇತ್ಥಂ ಸಾ ತಥಾ । ಯಥೇದಂ ಜ್ಞಾನಂ ಪ್ರಮಾ ಸಮರ್ಥಪ್ರವೃತ್ತಿಜನಕತ್ವಾದಿತಿ ತವಾನುಮೇತಿ ॥ ೪೮೪-೪೮೫ ॥

**ವಿವರಣೆ–** ವಿಮತಾ-ಸನ್ನಿಕೃಷ್ಟ-ಅಪೂರ್ವಾರ್ಥ-ಅದೋಷಜ-ದೃಷ್ಟಿದೃಕ್ (ಪಕ್ಷ) ಅರ್ಥಸತ್ತ್ವೋಲ್ಲೇಖನಿಯತಾ (ಸಾಧ್ಯ) ಪ್ರಾಮಾಣ್ಯಸಂಶಯಘ್ನ - ಅಪ್ರಾಮಾಣ್ಯಅಗ್ರಾಹಿ ಪ್ರಮಾತ್ವಾತ್ (ಹೇತು) ನೈಯಾಯಿಕ ಅನುಮಿತಿವತ್ (ದೃಷ್ಟಾಂತ) ಎಂದು ಅನುಮಾನ ಪ್ರಯೋಗ. ಇಲ್ಲಿ ಹೇತುವಿನಲ್ಲಿ ಪ್ರಾಮಾಣ್ಯಸಂಶಯಘ್ನ ಎಂಬ ದಳವನ್ನು ಕೊಡದಿದ್ದರೆ, ಅಯಂ ಘಟ ಎಂಬ ಜ್ಞಾನದಲ್ಲಿ ವ್ಯಭಿಚಾರವು ಬರುತ್ತದೆ. ಏಕೆಂದರೆ, ಅದು ಅಪ್ರಾಮಾಣ್ಯ ಅಗ್ರಾಹಕವಾಗಿದೆ. ಆದರೆ ಜ್ಞಾನಪ್ರಾಮಾಣ್ಯರೂಪವಾದ ಅರ್ಥಸತ್ತ್ವವನ್ನು ಉಲ್ಲೇಖ ಮಾಡುವುದಿಲ್ಲ. ಆದ್ದರಿಂದ ಪ್ರಾಮಾಣ್ಯಸಂಶಯಘ್ನ ಎಂದು ಕೊಡಬೇಕು. ಅಯಂ ಘಟ ಎಂಬ ಜ್ಞಾನವು ಪ್ರಾಮಾಣ್ಯಸಂಶಯವನ್ನು ನಿವಾರಣೆ ಮಾಡುವುದಿಲ್ಲ. ಆದ್ದರಿಂದ ಹೇತುವೂ ಇಲ್ಲ, ಸಾಧ್ಯವೂ ಇಲ್ಲ, ವ್ಯಭಿಚಾರವಿಲ್ಲ. ಪ್ರಾಮಾಣ್ಯಸಂಶಯಘ್ನ ಎಂಬ ವಿಶೇಷ್ಯವನ್ನು ಮಾತ್ರ ಕೊಟ್ಟರೆ, ಅಪ್ರಾಮಾಣ್ಯ ನಿಶ್ಚಯದಲ್ಲಿ ವ್ಯಭಿಚಾರವು ಬರುತ್ತದೆ. ಅದೂ ಪ್ರಾಮಾಣ್ಯಸಂಶಯ ನಿವರ್ತಕವಾಗಿದೆ. ಆದರೆ ಜ್ಞಾನಪ್ರಾಮಾಣ್ಯ ಉಲ್ಲೇಖಿಯಾಗಿಲ್ಲ. ಆದ್ದರಿಂದ ಅಪ್ರಾಮಾಣ್ಯ ಅಗ್ರಾಹಿ ಎಂಬ ವಿಶೇಷಣವನ್ನು

ಕೊಡಬೇಕು. ಅಪ್ರಾಮಾಣ್ಯ ನಿಶ್ಚಯವು ಅಪ್ರಾಮಾಣ್ಯಗ್ರಾಹಿಯಾಗಿರುವುದರಿಂದ ಈಗ ಅಲ್ಲಿ ಹೇತುವೂ ಬರುವುದಿಲ್ಲ, ಸಾಧ್ಯವೂ ಬರುವುದಿಲ್ಲ, ಆದ್ದರಿಂದ ವ್ಯಭಿಚಾರವಿಲ್ಲ. ಪ್ರಾಮಾಣ್ಯಸಂಶಯಘ್ನ ಅಪ್ರಾಮಾಣ್ಯ ಅಗ್ರಾಹಿತ್ವಾತ್ ಎಂಬ ಇಷ್ಟೇ ಹೇತುವನ್ನು ಇಟ್ಟುಕೊಂಡರೆ, ಮಾನಸ ವಿಪರೀತ ಅನುವ್ಯವಸಾಯದಲ್ಲಿ ವ್ಯಭಿಚಾರವು ಬರುತ್ತದೆ. ಅದು ಪ್ರಾಮಾಣ್ಯಸಂಶಯ ನಾಶಕವೂ ಆಗಿದೆ, ಅಪ್ರಾಮಾಣ್ಯ ಅಗ್ರಾಹಿಯೂ ಆಗಿದೆ. ಆದರೆ, ಜ್ಞಾನಪ್ರಾಮಾಣ್ಯರೂಪ ಅರ್ಥಸತ್ವವನ್ನು ಉಲ್ಲೇಖಮಾಡುವುದಿಲ್ಲ. ಅದಕ್ಕಾಗಿ ಪ್ರಮಾತ್ವ ವಿಶೇಷಣವನ್ನು ಕೊಡಬೇಕು. ಮಾನಸ ವಿಪರೀತ ಅನುವ್ಯವಸಾಯವು ಭ್ರಾಂತಿರೂಪವಾದದ್ದು. ಆದ್ದರಿಂದ ಈಗ ಅಲ್ಲಿ ಹೇತುವೂ ಬರುವುದಿಲ್ಲ, ಸಾಧ್ಯವೂ ಬರುವುದಿಲ್ಲ, ಆದ್ದರಿಂದ ವ್ಯಭಿಚಾರವಿಲ್ಲ. ಸಾಧ್ಯದಲ್ಲಿ ಅದೋಷಜ ಎಂಬ ವಿಶೇಷಣವನ್ನು ಕೊಡದಿದ್ದರೆ, ದೋಷಜನ್ಯವಾದ ಸಂಶಯಾತ್ಮಕವಾದ ಜ್ಞಾನದ ಅನುವ್ಯವಸಾಯದಲ್ಲಿ ಬಾಧ ಬರುತ್ತದೆ. ಏಕೆಂದರೆ, ಅಲ್ಲಿ ಅರ್ಥಸತ್ವ ಉಲ್ಲೇಖವಿಲ್ಲ. ಅಪೂರ್ವಾರ್ಥ ಎಂದು ಕೊಡದಿದ್ದರೆ, ಅಭ್ಯಾಸದಶಾಪನ್ನ ಜ್ಞಾನದ ಅನುವ್ಯವಸಾಯದಲ್ಲಿ ಜ್ಞಾನಪ್ರಾಮಾಣ್ಯಾತ್ಮಕವಾದ ಅರ್ಥಸತ್ವೋಲ್ಲೇಖವಿರುವುದರಿಂದ ಸಿದ್ಧಸಾಧನವು ಬರುತ್ತದೆ. ಅದಕ್ಕಾಗಿ ಅಪೂರ್ವಾರ್ಥ ಎಂದು ಕೊಡಬೇಕು. ಸಾಧ್ಯದಲ್ಲಿ ಸನ್ನಿಕೃಷ್ಟ ಎಂದು ಕೊಟ್ಟಿರುವುದು ಆ ಜ್ಞಾನವು ದೋಷಜನ್ಯವಲ್ಲ ಎಂದು ಸೂಚಿಸುವುದಕ್ಕಾಗಿ. ಹೊರತಾಗಿ ಬಾಧ ಅಥವಾ ಸಿದ್ಧಸಾಧನ ಪರಿಹಾರಕ್ಕಾಗಿ ಅಲ್ಲ. ಈ ಅನುಮಾನದಿಂದ ಪ್ರಾಮಾಣ್ಯ ಸ್ವತಸ್ತ್ವವು ಸಿದ್ಧವಾಗುತ್ತದೆ.

**ಪ್ರಾಮಾಣ್ಯಸ್ಯ ವಿರೋಧ್ಯೇವಾಪ್ರಾಮಾಣ್ಯಂ ಭಣ್ಯತೇ ಯತಃ ।**
**ತತ್ಸಾ ಕುತ್ಸಿತಶಂಕಾಂ ಚ ಹುಂಕಾರೇಣೈವ ವಾರಯೇತ್ ॥ ೪೮೬ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಅಪ್ರಾಮಾಣ್ಯಂ = ಅಪ್ರಾಮಾಣ್ಯವು, ಪ್ರಾಮಾಣ್ಯಸ್ಯ = ಪ್ರಾಮಾಣ್ಯಕ್ಕೆ, ವಿರೋಧಿ ಏವ = ವಿರೋಧಿ ಎಂದೇ, ಭಣ್ಯತೇ = ಹೇಳಲ್ಪಡುತ್ತದೆಯೋ. ತತ್ = ಆ ಕಾರಣದಿಂದ, ಸಾ = ಆ ಜ್ಞಾನವು, ಕುತ್ಸಿತಶಂಕಾಂ ಚ = ಕೆಟ್ಟ ಸಂದೇಹವನ್ನಾದರೋ, ಹುಂಕಾರೇಣ ಏವ = ಹುಂಕಾರದಿಂದಲೇ, ವಾರಯೇತ್ = ಪರಿಹರಿಸುತ್ತದೆ.

**ಅನುವಾದ–** ಮೇಲಿನ ಅನುಮಾನದಲ್ಲಿ ಅಪ್ರಾಮಾಣ್ಯಾಗ್ರಾಹಿ ಎಂಬ ಹೇತುವಿಶೇಷಣದಲ್ಲಿ ಘಟಕವಾದ ಅಪ್ರಾಮಾಣ್ಯ ಶಬ್ದಕ್ಕೆ ಪ್ರಾಮಾಣ್ಯವಿರೋಧಿ ಎಂದು ಅರ್ಥ. ಆದ್ದರಿಂದ ಕುತ್ಸಿತಶಂಕೆಗಳೆಲ್ಲವೂ ಹುಂಕಾರದಿಂದಲೇ ನಿವಾರಣೆಯಾಗುತ್ತವೆ.

**ಭಾವವಿಲಾಸಿನೀ–**ನನು ಯಸ್ಮಿನ್ ಜ್ಞಾನೇಽನುವ್ಯವಸಾಯೇನಾತದ್ವತಿ ತತ್ಪ್ರಕಾರಕತ್ವ-ರೂಪಾಪ್ರಾಮಾಣ್ಯಂ ನ ಗೃಹ್ಯತೇ ಕಿಂತು ತದ್ವತಿ ತತ್ಪ್ರಕಾರಕತ್ವಲಕ್ಷಣ- ಪ್ರಾಮಾಣ್ಯಾಭಾವ ಏವ

ಗೃಹೀತೋಽನುವ್ಯವಸಾಯೇನ । ತಸ್ಮಿನ್ನನುವ್ಯವಸಾಯೇ ವ್ಯಭಿಚಾರಃ । ತತ್ರಾಪ್ರಾಮಾಣ್ಯಾಗ್ರಹೇಽಪಿ ಪ್ರಾಮಾಣ್ಯಾಭಾವಸ್ಯ ಗ್ರಹಣೇನ ಜ್ಞಾನಂ ಪ್ರಮಾ ನ ವೇತಿ ಸಂಶಯಾಜನನೇನೋಕ್ತಹೇತೋರ್ವಿದ್ಯಮಾನತ್ವಾದುಕ್ತಸಾಧ್ಯಸ್ಯ ಚಾಭಾವಾದ್ವ್ಯಭಿಚಾರ ಇತ್ಯತ ಆಹ– **ಪ್ರಾಮಾಣ್ಯಸ್ಯೇತಿ** ॥ ಅಪ್ರಾಮಾಣ್ಯಾಗ್ರಾಹಿಪ್ರಮಾತ್ವಾದಿತ್ಯತ್ರಾಪ್ರಾಮಾಣ್ಯಪದೇನ ಪ್ರಾಮಾಣ್ಯವಿರೋಧ್ಯೇವಾಪ್ರಾಮಾಣ್ಯಂ ಭಣ್ಯತೇ ಯತಸ್ತಸ್ಮಾದಿತಿ ಸಂಬಂಧಃ । ತಥಾಚ ಪ್ರಾಮಾಣ್ಯಸಂಶಯಘ್ನಪ್ರಾಮಾಣ್ಯವಿರೋಧ್ಯಗ್ರಾಹಿಪ್ರಮಾತ್ವಾದಿತಿ ನಿಷ್ಕೃಷ್ಟಂ ಹೇತುಸ್ವರೂಪಮ್ । ತಥಾಚ ಪ್ರಾಮಾಣ್ಯವಿರೋಧಿನಃ ಪ್ರಾಮಾಣ್ಯಾಭಾವಸ್ಯೈವ ಗ್ರಹಣೇನಾಪ್ರಾಮಾಣ್ಯಾಗ್ರಾಹಿಪ್ರಮಾತ್ವಸ್ಯೈವಾಭಾವಾತ್ ತಾದೃಶಾನುವ್ಯವಸಾಯೇನ ವ್ಯಭಿಚಾರ ಇತಿ ಭಾವಃ । ಸಮಾನಪ್ರಕಾರಕಯೋರೇವ ನಿವರ್ತ್ಯನಿವರ್ತಕಭಾವಾಂಗೀಕಾರಾತ್ ಸಂಶಯಘ್ನಪದೇನೈವ ವ್ಯಾಪ್ಯದರ್ಶನಸ್ಯಾಪಿ ವ್ಯಾವಾರ್ತಕತ್ವಾನ್ನ ತದ್ವ್ಯಾವೃತ್ತ್ಯರ್ಥಂ ಪೃಥಗ್ವಿಶೇಷಣಮಿತಿ ದ್ರಷ್ಟವ್ಯಮ್ ॥೪೮೬॥

**ವಿವರಣೆ–** ಮೇಲೆ ಹೇಳಿದ ಅನುಮಾನಕ್ಕೆ ಎಲ್ಲಿ ತದಭಾವವತಿ ತತ್‌ಪ್ರಕಾರಕತ್ವ ರೂಪವಾದ ಅಪ್ರಾಮಾಣ್ಯವು ಗೃಹೀತವಾಗುವುದಿಲ್ಲವೋ ಆದರೆ, ತದ್ವತಿ ತತ್‌ಪ್ರಕಾರಕತ್ವ ರೂಪವಾದ ಪ್ರಾಮಾಣ್ಯದಅಭಾವವು ಗೃಹೀತವಾಗುತ್ತದೋ ಅಂತಹ ಅನುವ್ಯವಸಾಯದಲ್ಲಿ ವ್ಯಭಿಚಾರ ಉಂಟಾಗುತ್ತದೆ ಎಂಬ ಶಂಕೆ. ಏಕೆಂದರೆ, ಆ ಅನುವ್ಯವಸಾಯವು ಪ್ರಾಮಾಣ್ಯಾಭಾವಗ್ರಹರೂಪವಾಗಿರುವುದರಿಂದ, ಪ್ರಾಮಾಣ್ಯಸಂಶಯಘ್ನವೂ ಆಗಿದೆ, ಅಪ್ರಾಮಾಣ್ಯ ಅಗ್ರಾಹಿಯೂ ಆಗಿದೆ ಮತ್ತು ಪ್ರಮೆಯೂ ಆಗಿದೆ. ಅಲ್ಲಿ ಜ್ಞಾನಪ್ರಾಮಾಣ್ಯದ ಉಲ್ಲೇಖವಿಲ್ಲ. ಆದ್ದರಿಂದ ವ್ಯಭಿಚಾರವು ಬರುತ್ತದೆ. ಇಂತಹ ಅಲ್ಪ ಶಂಕೆಗೆ ಉತ್ತರವೆಂದರೆ, ಅಪ್ರಾಮಾಣ್ಯವೆಂದರೆ ಪ್ರಾಮಾಣ್ಯವಿರೋಧಿ ಎಂದು ಅರ್ಥ. ಪ್ರಾಮಾಣ್ಯಸಂಶಯಘ್ನ ಪ್ರಾಮಾಣ್ಯವಿರೋಧ್ಯಗ್ರಾಹಿಪ್ರಮಾತ್ವಾತ್ ಎಂದು ನಮ್ಮ ಹೇತು. ತದಭಾವವತಿ ತತ್‌ಪ್ರಕಾರಕತ್ವರೂಪವಾದ ಅಪ್ರಾಮಾಣ್ಯವು ಹೇಗೆ ಪ್ರಾಮಾಣ್ಯ ವಿರೋಧಿಯೋ, ಹಾಗೆಯೇ, ತದ್ವತಿ ತತ್‌ಪ್ರಕಾರಕತ್ವ ರೂಪವಾದ ಪ್ರಾಮಾಣ್ಯದ ಅಭಾವವೂ ಸಹ ಪ್ರಾಮಾಣ್ಯ- ವಿರೋಧಿಯೇ. ನೀನು ತೋರಿಸಿದ ಸ್ಥಳದಲ್ಲಿ ಅನುವ್ಯವಸಾಯದಲ್ಲಿ ತದಭಾವವತಿ ತತ್‌ಪ್ರಕಾರಕತ್ವರೂಪ ಅಪ್ರಾಮಾಣ್ಯಗ್ರಹವಿಲ್ಲದಿದ್ದರೂ ತದ್ವತಿ ತತ್‌ಪ್ರಕಾರಕತ್ವಾಭಾವರೂಪವಾದ ಪ್ರಾಮಾಣ್ಯವಿರೋಧಿಗ್ರಾಹಕತ್ವವು ಇದ್ದೇ ಇದೆ. ಆದ್ದರಿಂದ ಪ್ರಾಮಾಣ್ಯವಿರೋಧ್ಯಗ್ರಾಹಿತ್ವರೂಪವಾದ ಹೇತುವು ಅಲ್ಲಿ ಬರುವುದಿಲ್ಲ. ಆದ್ದರಿಂದ ವ್ಯಭಿಚಾರವೂ ಇಲ್ಲ. ಹೀಗೆ ಅತ್ಯಲ್ಪ ಪ್ರಯತ್ನದಿಂದಲೇ ವ್ಯಭಿಚಾರವನ್ನು ಪರಿಹಾರ ಮಾಡಬಹುದಾದ್ದರಿಂದ ಈ ಶಂಕೆಯು ಹುಂಕಾರದಿಂದಲೇ ನಿವೃತ್ತವಾಗುತ್ತದೆ ಎಂದು ಗ್ರಂಥಕಾರರು ಹೇಳುತ್ತಾರೆ.

ಜಾನಾಮಿ ಘಟಮೇವಾಹಮಿತ್ಯಾಕೃತ್ಯೈವ ಕೀರ್ತ್ಯತೇ ।
ಯತ್ಸಾ ತತ್ ಸಾಧಯೇದೇವ ಕೃತ್ಸ್ನಾಪಿ ಜ್ಞಾನಮಾನತಾಮ್ ॥ ೪೮೭ ॥

**ಅರ್ಥ–** ಯತ್ = ಯಾವ ಕಾರಣದಿಂದ, ಅಹಂ = ನಾನು, ಘಟಮೇವ = ಮಡಿಕೆಯನ್ನೇ, ಜಾನಾಮಿ = ತಿಳಿದಿದ್ದೇನೆ. ಇತಿ = ಎಂಬ, ಆಕೃತ್ಯಾ ಏವ = ಆಕಾರದಿಂದಲೇ, ಸಾ = ಆ ಹತ್ತಿರದಲ್ಲಿ ಕಂಡ ಮಡಿಕೆಯ ಜ್ಞಾನದ ಅನುವ್ಯವಸಾಯವು, ಕೀರ್ತ್ಯತೇ = ಹೇಳಲ್ಪಡುತ್ತದೆಯೋ. ತತ್ = ಆ ಕಾರಣದಿಂದ, ಕೃತ್ಸ್ನಾಪಿ = ಸಮಗ್ರವಾಗಿಯೂ, ಸಾ = ಆ ಅನುವ್ಯವಸಾಯವು, ಜ್ಞಾನಮಾನತಾಂ = ಜ್ಞಾನದ ಪ್ರಾಮಾಣ್ಯವನ್ನು ಸಾಧಯೇತ್ ಏವ = ಅವಶ್ಯವಾಗಿ ಸಾಧಿಸುತ್ತದೆ.

**ಅನುವಾದ–** **ಹತ್ತಿರದಲ್ಲಿ ಕಂಡ ಮಡಿಕೆಯ ಜ್ಞಾನದ ಅನುವ್ಯವಸಾಯಕ್ಕೂ, ದೂರದಲ್ಲಿ ಕಂಡ ಮಡಿಕೆಯ ಜ್ಞಾನದ ಅನುವ್ಯವಸಾಯಕ್ಕೂ ವ್ಯತ್ಯಾಸವಿದೆ. ಹತ್ತಿರದಲ್ಲಿ ಕಂಡರೆ ನಾನು ಮಡಿಕೆಯನ್ನೇ ನೋಡಿದ್ದು ಎಂಬುದಾಗಿ ನಿಶ್ಚಯಾತ್ಮಕಜ್ಞಾನವಿದೆ. ಇಂತಹ ನಿಶ್ಚಯಾತ್ಮಕಜ್ಞಾನವು ಪ್ರಾಮಾಣ್ಯದ ಸಂಶಯವನ್ನು ಹೋಗಲಾಡಿಸುತ್ತದೆ. ಪ್ರಾಮಾಣ್ಯವನ್ನು ಗ್ರಹಿಸುತ್ತದೆ.**

**ಭಾವವಿಲಾಸಿನೀ–**ದೂರಸ್ಥ ಸಮೀಪಸ್ಥಘಟಜ್ಞಾನಾನುವ್ಯವಸಾಯಯೋರಾಕಾರವೈಚಿತ್ರ್ಯಚ್ಚೈಕತ್ರ ಪ್ರಾಮಾಣ್ಯಗ್ರಹಣಮಾವಶ್ಯಕಮಿತ್ಯನುಕೂಲತರ್ಕಂ ವಕ್ತುಮಾಕಾರವೈಚಿತ್ರ್ಯಂ ದರ್ಶಯತಿ – **ಜಾನಾಮೀತಿ** ॥ ಘಟಮೇವಾಹಂ ಜಾನಾಮಿ ನತ್ವನ್ಯಮಿತ್ಯಾಕೃತ್ಯೈವ ಸಾಽನುವ್ಯವಸಿತಿಃ ಯದ್ಯಸ್ಮಾತ್ಕೀರ್ತ್ಯತೇ ಸಮೀಪಸ್ಥಘಟಾದಿದರ್ಶಿಭಿಃ ಪೂರ್ವೈರ್ಜನೈಃ ॥ ೪೮೭ ॥

**ವಿವರಣೆ–** ಸಾ ಎಂಬ ಪದದಿಂದ ಅನುವ್ಯವಸಿತಿಯನ್ನು ಪರಾಮರ್ಶಿಸಬೇಕು.

**ದೂರಸ್ಥೇ ತು ಘಟಂ ಜಾನಾಮೀತಿ ಧೀರ್ಜಾಯತೇ ಪರಮ್ ।**
**ನ ತು ಸಾಽವಧೃತಿಸ್ತತ್ರ ಮಾನತ್ವಾವಧೃತಿಶ್ಚ ನ ॥ ೪೮೮ ॥**

**ಅರ್ಥ–** ಪರಂ = ಆದರೆ, ದೂರಸ್ಥೇ = ದೂರದಲ್ಲಿರುವ ಮಡಿಕೆಯ ವಿಷಯದಲ್ಲಿ, ಘಟಂ= ಮಡಿಕೆಯನ್ನು, ಜಾನಾಮಿ = ತಿಳಿದಿದ್ದೇನೆ, ಇತಿ = ಎಂದು, ಧೀಃ= ಬುದ್ಧಿಯು, ಜಾಯತೇ = ಹುಟ್ಟುತ್ತದೆ. ತತ್ರ = ದೂರದಲ್ಲಿರುವ ವಸ್ತುವಿನ ವಿಷಯದಲ್ಲಿ, ಸಾವಧೃತಿಃ = ನಿಶ್ಚಯದಿಂದ ಕೂಡಿದ್ದು ನ = ಆಗಿಲ್ಲ, ಚ = ಮತ್ತು, ಮಾನತ್ವಾವಧೃತಿಃ = ಪ್ರಾಮಾಣ್ಯದ ನಿಶ್ಚಯವವು, ನ = ಇಲ್ಲ.

**ಅನುವಾದ–** **ದೂರದಲ್ಲಿ ಮಡಿಕೆಯನ್ನು ಕಂಡರೆ ಮಡಿಕೆಯನ್ನು ನೋಡಿದೆ ಎಂಬುದಾಗಿಯೇ ಜ್ಞಾನ ಬರುತ್ತದೆ. ಹೊರತಾಗಿ ಮಡಿಕೆಯನ್ನೇ ನಾನು ನೋಡಿದ್ದು ಎಂದು ಹೇಗೆ ಹತ್ತಿರದಲ್ಲಿ ಕಂಡ ಮಡಿಕೆಯಲ್ಲಿ ನಿಶ್ಚಯವಿದ್ದಿತೋ ಆ ರೀತಿಯಲ್ಲಿ ನಿಶ್ಚಯವಿಲ್ಲ. ಹಾಗೆಯೇ, ನಾನು ಮಡಿಕೆಯನ್ನು ಕಂಡೆ ಎಂಬ ಜ್ಞಾನವು ಪ್ರಮಾಣವಾಗಿದೆ ಎಂಬ ನಿಶ್ಚಯವೂ ಬರುವುದಿಲ್ಲ. ದೂರದಲ್ಲಿ ಕಂಡಿರುವುದರಿಂದ**

ಮಡಿಕೆಯ ಆಕಾರವುಳ್ಳದ್ದಾಗಿ ಕಾಣಿಸಿದೆ. ಅದು ಮಡಿಕೆಯೂ ಆಗಿರಬಹುದು, ಬೇರೆಯೂ ಆಗಿರಬಹುದು, ನಿರ್ಣಯವಿಲ್ಲ. ಆದ ಕಾರಣ ಪ್ರಾಮಾಣ್ಯನಿಶ್ಚಯವಾಗುವುದಿಲ್ಲ.

**ಭಾವವಿಲಾಸಿನೀ–**ದೂರಸ್ಥೇ ತು ಪರಂ ಕೇವಲಂ ಘಟಂ ಜಾನಾಮೀತಿ ಧೀಃ ಸಮ್ಮುಗ್ಧಾಕಾರೇಣೈವ ಜಾಯತೇ । ನ ತು ಸಾವಧೃತಿಃ ಘಟಮೇವೇತ್ಯವಧಾರಣಸಹಿತಾ । ತತ್ರ ದೂರಸ್ಥವಸ್ತು-ದರ್ಶನೇ ॥ ೪೮೮ ॥

**ವ್ಯವಹಾರಸ್ಯ ವೈಚಿತ್ರ್ಯೇ ಕಥಂ ನ ಜ್ಞಾನಚಿತ್ರತಾ ।**
**ಅತೋಽನುಕೂಲಸ್ತರ್ಕೋಽಪಿ ಕರ್ಕಶೀಕುರುತೇಽನುಮಾಮ್ ॥ ೪೮೯ ॥**

**ಅರ್ಥ–** ವ್ಯವಹಾರಸ್ಯ = ವ್ಯವಹಾರವು (ಕ್ಕೆ), ವೈಚಿತ್ರ್ಯೇ = ನಾನಾ ರೀತಿ ಇರುವಾಗ, ಜ್ಞಾನಚಿತ್ರತಾ = ಅದಕ್ಕೆ ಕಾರಣವಾದ ಜ್ಞಾನದ ನಾನಾ ರೀತಿಯು, ಕಥಂ ನ = ಹೇಗೆ ಇಲ್ಲ? ಅತಃ = ನಾನಾ ಬಗೆಯ ವ್ಯವಹಾರದಿಂದ ಜ್ಞಾನಗಳಲ್ಲಿ ವ್ಯತ್ಯಾಸಗಳು ಕಂಡಿರುವುದರಿಂದ, ಅನುಕೂಲಃ ತರ್ಕಃ ಅಪಿ = ಅನುಕೂಲತರ್ಕವೂ ಕೂಡ, ಕರ್ಕಶೀಕುರುತೇ = ಪ್ರಬಲವನ್ನಾಗಿ ಮಾಡುತ್ತದೆ.

**ಅನುವಾದ–** ಒಂದು ಜ್ಞಾನದಲ್ಲಿ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಮತ್ತೊಂದು ಜ್ಞಾನದಲ್ಲಿ ಗ್ರಹಿಸುವುದಿಲ್ಲ. ಈ ವ್ಯತ್ಯಾಸ ಏಕೆ? ಎಂದರೆ ವ್ಯವಹಾರದಲ್ಲಿ ಭೇದ ಇರುವುದರಿಂದಲೇ ಜ್ಞಾನದಲ್ಲಿಯೂ ಒಂದು ಕಡೆ ನಿಶ್ಚಯ ಮತ್ತೊಂದು ಕಡೆ ಅನಿಶ್ಚಯ ಈ ವ್ಯತ್ಯಾಸವಿದೆ. ಇದರಿಂದ ಹಿಂದೆ ಯಾವ ಅಪ್ರಯೋಜಕತ್ವಶಂಕೆ ಬಂದಿತ್ತೋ, ಅದು ಪರಿಹಾರವಾಯಿತು. ಅನುವ್ಯವಸಾಯವು ಪ್ರಮೆಯಾದರೂ ಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವುದು ಬೇಡ ಎಂದು ಅಪ್ರಯೋಜಕತ್ವಶಂಕೆ ಬಂದ್ದಿದಿತು. ಅದಕ್ಕೆ ಈಗ ಅನುಕೂಲತರ್ಕವನ್ನು ಹೇಳಿದ್ದಾರೆ - ಗ್ರಾಹ್ಯಪ್ರಾಮಾಣ್ಯವೈಚಿತ್ರ್ಯಂ ಯದಿ ನ ಸ್ಯಾತ್ ತರ್ಹಿ ಗ್ರಾಹಕಾನು ವ್ಯವಸಾಯವೈಚಿತ್ರ್ಯಂ ನ ಸ್ಯಾತ್ ಎಂದು. ಗ್ರಹಿಸುವ ಜ್ಞಾನದಪ್ರಾಮಾಣ್ಯದಲ್ಲಿ ವ್ಯತ್ಯಾಸವಿಲ್ಲವಾದರೆ ಅನುವ್ಯವಸಾಯದಲ್ಲಿಯೂ ವ್ಯತ್ಯಾಸವಿಲ್ಲವಾದೀತು. ಅನುವ್ಯವಸಾಯದಲ್ಲಿ ವ್ಯತ್ಯಾಸವು ಸ್ಪಷ್ಟವಾಗಿ ಇದೆ. ಘಟಮೇವ ಜಾನಾಮಿ. ಘಟಂ ಜಾನಾಮಿ ಎಂಬುದಾಗಿ. ಆದ್ದರಿಂದ ಪ್ರಾಮಾಣ್ಯದ ಗ್ರಹಣದಲ್ಲಿಯೂ ವ್ಯತ್ಯಾಸವಿದ್ದೇ ಇರುತ್ತದೆ. ಅಂತಹ ದೂರದಲ್ಲಿ ಕಂಡ ಮಡಿಕೆಯ ಅನುವ್ಯವಸಾಯದ ದೃಷ್ಟಾಂತದಿಂದ ಹತ್ತಿರದಲ್ಲಿ ಕಂಡ ಮಡಿಕೆಯ ಅನುವ್ಯವಸಾಯದಲ್ಲಿ ಪ್ರಾಮಾಣ್ಯಗ್ರಹಣವಾಗುವುದು ಬೇಡ ಎಂದು ಆಪಾದಿಸಲು ಸಾಧ್ಯವಿಲ್ಲ.

**ಭಾವವಿಲಾಸಿನೀ**–ನನ್ವೇವಂ ವ್ಯವಹಾರವೈಚಿತ್ರ್ಯೇಽಪಿ ಕುತೋಽನುವ್ಯವಸಾಯಯೋಃ ಪ್ರಾಮಾಣ್ಯ-ಗ್ರಹಣಾಗ್ರಹಣರೂಪವೈಚಿತ್ರ್ಯಮಿತ್ಯತ ಆಹ – **ವ್ಯವಹಾರಸ್ಯೇತಿ॥** ಘಟಮೇವಾಹಂ ಜಾನಾಮೀತಿ ಘಟಮಹಂ ಜಾನಾಮೀತಿ ದ್ವಿಪ್ರಕಾರಕಾಭಿಲಪನರೂಪವ್ಯವಹಾರಸ್ಯ । ಅತೋ ವಿಚಿತ್ರ-ವ್ಯವಹಾರಸಿದ್ಧಾನುವ್ಯವಸಾಯವೈಚಿತ್ರ್ಯಸ್ಯ ಸರ್ವಜನಸಿದ್ಧತ್ವಾತ್ । ಅನುಕೂಲತರ್ಕಃ ಗ್ರಾಹ್ಯ-ಪ್ರಾಮಾಣ್ಯವೈಚಿತ್ರ್ಯಾಭಾವೇ ಗ್ರಾಹಕಾನುವ್ಯವಸಾಯವೈಚಿತ್ರ್ಯಂ ನ ಸ್ಯಾದಿತ್ಯನುಕೂಲತರ್ಕ ಇತ್ಯರ್ಥಃ ॥ ೪೮೯ ॥

ಇಲ್ಲಿಯವರೆಗೆ ಜ್ಞಪ್ತಿಯಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಸಾಧಿಸಿ ಈಗ ಅನುಮಾನದಿಂದ ಉತ್ಪತ್ತಿಯಲ್ಲಿ ಸ್ವತಸ್ತ್ವವನ್ನು ಸಾಧಿಸುತ್ತಾರೆ-

ಪ್ರಮಾ ನ ಗುಣತೋ ಜನ್ಯಾ ಜ್ಞಾನತ್ವಾದಪ್ರಮಾ ಯಥಾ ।
ಇತ್ಯುತ್ಪತ್ತೌ ಚಾನುಮಿತಿರ್ಬಾಧಾಭಾವಾದ್ಭವೇದ್ಧಿ ನಃ ॥ ೪೯೦ ॥

**ಅರ್ಥ**– ಪ್ರಮಾ = ಯಥಾರ್ಥಜ್ಞಾನವು, ಗುಣತಃ= ಗುಣದಿಂದ, ನ ಜನ್ಯಾ = ಹುಟ್ಟುವುದಿಲ್ಲ, ಜ್ಞಾನತ್ವಾತ್ = ಜ್ಞಾನವಾಗಿರುವುದರಿಂದ, ಯಥಾ = ಹೇಗೆ, ಅಪ್ರಮಾ = ಅಯಥಾರ್ಥಜ್ಞಾನವೋ ಅದರಂತೆ, ಇತಿ = ಎಂದು, ನಃ = ನಮಗೆ, ಬಾಧಾಭಾವಾತ್ = ಬಾಧ ಇಲ್ಲದಿರುವುದರಿಂದ, ಉತ್ಪತ್ತೌ ಚ = ಪ್ರಾಮಾಣ್ಯದ ಉತ್ಪತ್ತಿಯಲ್ಲಿಯೂ, ಅನುಮಿತಿಃ= ಅನುಮಿತಿಯು, ಭವೇತ್ ಹಿ = ಆಗುತ್ತದಷ್ಟೇ!

**ಅನುವಾದ**– ಪ್ರಮಾ ಗುಣತೋ ನ ಜನ್ಯಾ ಜ್ಞಾನತ್ವಾತ್, ಅಪ್ರಮಾವತ್ ಎಂಬುದು ಅನುಮಾನ. ಈ ಅನುಮಾನದಿಂದ ಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವವನ್ನು ರಾಜರು ತೋರಿಸುತ್ತಾರೆ. ತಾರ್ಕಿಕರು ಮೊದಲಾದ ಪರವಾದಿಗಳು ಇದಂ ರಜತಂ ಮೊದಲಾದ ಭ್ರಾಂತಿಗಳಲ್ಲಿ ಅಪ್ರಮಾತ್ವವು ಗುಣದಿಂದ ಹುಟ್ಟಲಿಲ್ಲ,ಹೊರತಾಗಿ ದೋಷದಿಂದ ಹುಟ್ಟಿದೆ ಎಂದು ಒಪ್ಪಿದ್ದಾರೆ. ನಾವು ಇದರಲ್ಲಿ ಗುಣದಿಂದ ಹುಟ್ಟಲಿಲ್ಲ ಎಂಬ ಅಂಶವನ್ನು ಮಾತ್ರ ಸ್ವೀಕರಿಸಿ ಪ್ರಕೃತಪಕ್ಷವಾದ ಪ್ರಮಾದಲ್ಲಿ ಗುಣಜನ್ಯತ್ವ-ವಿಲ್ಲವೆಂದು ಸಾಧಿಸುತ್ತೇವೆ. ಹಾಗಾದರೆ ಯಾವುದರಿಂದ ಹುಟ್ಟಿದ್ದು ಎಂದರೆ ಬೇರೆ ಯಾವುದರಿಂದಲೂ ಇಲ್ಲ, ಸ್ವತಃ ತನ್ನ ಹುಟ್ಟಿಗೆ ಯಾವುದು ಕಾರಣವೋ ಅದೇ ತನ್ನ ಪ್ರಾಮಾಣ್ಯದ ಹುಟ್ಟಿಗೂ ಕಾರಣ ಎಂದು ಸಾಧಿಸುತ್ತೇವೆ. ಹೀಗೆ ಅನುಮಾನದಿಂದ ಪ್ರಾಮಾಣ್ಯದ ಉತ್ಪತ್ತೌ ಸ್ವತಸ್ತ್ವವನ್ನು ಸಾಧಿಸುತ್ತೇವೆ.

**ಭಾವವಿಲಾಸಿನೀ**–ಉತ್ಪತ್ತಿಸ್ವತಸ್ತ್ವೇಽನುಮಾನಮಾಹ – **ಪ್ರಮೇತಿ** ॥ ಪ್ರಮಾ ಜನ್ಯ - ಪ್ರಮಾ ॥ ೪೯೦ ॥

**ವಿವರಣೆ**– ಗುಣ ಎಂಬ ಶಬ್ದವನ್ನು ತಾರ್ಕಿಕರು ಇಲ್ಲಿ ವಿಶಿಷ್ಟವಾದ ಅರ್ಥದಲ್ಲಿ ಬಳಸುತ್ತಾರೆ. ವೇದವು ಪ್ರಮಾಣ ಯಾಕೆ? ಆಪ್ತನು ಹೇಳಿದ್ದಾನೆ. ಆಪ್ತೋಕ್ತತ್ವವು

ವೇದದಲ್ಲಿರುವ ಗುಣ. ಈ ಗುಣದಿಂದ ಶಬ್ದರೂಪವಾದ ವೇದದಲ್ಲಿ ಪ್ರಾಮಾಣ್ಯವು ಹುಟ್ಟುತ್ತದೆ. ಅದರಂತೆ ಪ್ರತ್ಯಕ್ಷ, ಅನುಮಾನ, ಉಪಮಾನಗಳಲ್ಲಿ ಗುಣದಿಂದ ಪ್ರಾಮಾಣ್ಯವು ಹುಟ್ಟುತ್ತದೆ ಎಂಬುವುದು ತಾರ್ಕಿಕರ ಅಭಿಪ್ರಾಯ.

**ದೋಷಾಭಾವೋऽಪಿ ಯದ್ದೋಷೀ ಕೋऽಸಾವತ್ರ ಗುಣೋ ಗುಣೀ ॥ ೪೯೧ ॥**

**ಅರ್ಥ–** ಯತ್ = ಯಾವ ಕಾರಣದಿಂದ, ದೋಷಾಭಾವಃ ಅಪಿ = ದೋಷಾಭಾವವೂ ಕೂಡ, ದೋಷೀ = ವ್ಯಭಿಚಾರರೂಪದೋಷ ಉಳ್ಳದ್ದಾಗಿದೆ. ತತ್= ಆದ್ದರಿಂದ, ಅತ್ರ = ಈ ಪ್ರಾಮಾಣ್ಯವಿಷಯದಲ್ಲಿ, ಕಃ ಅಸೌ ಗುಣಃ = ಯಾವ ಗುಣವು, ಗುಣೀ = ಸಹಚಾರರೂಪಗುಣವುಳ್ಳದ್ದು?

**ಅನುವಾದ–** ವಾದಿರಾಜರು ಚಮತ್ಕಾರವಾಗಿ ಪ್ರಾಮಾಣ್ಯಪರತಸ್ತ್ವವನ್ನು ನಿರಾಕರಿಸುತ್ತಿದ್ದಾರೆ. ಗುಣದಿಂದ ಪ್ರಾಮಾಣ್ಯವು ಹುಟ್ಟುತ್ತದೆ ಎಂದು ಪರವಾದಿಯ ಮತ. ದೋಷಾಭಾವಕ್ಕೇ ವ್ಯಭಿಚಾರರೂಪದೋಷವಿರುವಾಗ ಆಪ್ತೋಕ್ತತ್ವಾದಿ ಗುಣಗಳಿಗೆ ಸುತರಾಂ ವ್ಯಭಿಚಾರರೂಪದೋಷವಿರುವುದರಿಂದ ಕಾರಣವೆಂದು ನಿಶ್ಚಯವಾಗುವುದಿಲ್ಲ. ದೋಷಾಭಾವವೇ ದೋಷಿಯಾಗಿರುವಾಗ ಗುಣವಂತವಾದ ಗುಣವು ಯಾವುದು ಎಂಬುದು ರಾಜರ ಶೈಲಿ.

**ಭಾವವಿಲಾಸಿನೀ–**ಇದಾನೀಂ ಸಾಹಿತ್ಯಮುದ್ರಯಾ ಗುಣಂ ನಿರಾಕರೋತಿ – **ದೋಷಾಭಾವ ಇತಿ॥** ಯದ್ಯಸ್ಮಾದ್ದೋಷಾಭಾವೋऽಪಿದೋಷೀ ಪ್ರಮಾನ್ವಯವ್ಯತಿರೇಕವ್ಯಭಿಚಾರರೂಪ-ದೋಷವಾನ್ । ತಸ್ಮಾತ್ಪ್ರಮಾಯಾಂ ಕೋऽಸೌ ಗುಣೋ ಗುಣೀ ಅನ್ವಯವ್ಯತಿರೇಕಾಖ್ಯಗುಣ-ವಾನಿತ್ಯರ್ಥಃ । ಯೇ ದೋಷಾಭಾವಮಪಿ ಸದೋಷಂ ಚಕ್ರುಸ್ತೇ ಗುಣಂ ಸದೋಷಂ ಕಥಂ ನ ಕುರ್ಯುಃ? ಅತಿವಿರುದ್ಧಯೋರ್ಭಾವಾಭಾವಯೋರ್ಘಟನಂ ಕುರ್ವಂತೋ ಭಾವಯೋಃ ಕಥಂ ಘಟನಾಂ ನ ಕುರ್ಯುಃ? ಇತಿ ವಿರೋಧಾಭಾಸಸ್ಫೋರಣೇನ ಸಾಹಿತ್ಯೋಕ್ತಿಃ । ಭಾವಾ-ಭಾವರೂಪಯೋರುಭಯೋರಪಿ ಗುಣಯೋರ್ವ್ಯಭಿಚಾರಾತ್ ಸ್ವತಸ್ತ್ವೇ ನ ಕಶ್ಚಿತ್ ಕ್ಷುದ್ರೋಪದ್ರವ ಇತಿ ಹೃದಯಮ್ ॥ ೪೯೧ ॥

**ವಿವರಣೆ–** ಕಾರ್ಯಕಾರಣಭಾವನಿಶ್ಚಯವಾಗಬೇಕಾದರೆ ಅನ್ವಯ ಸಹಚಾರ ಮತ್ತು ವ್ಯತಿರೇಕಸಹಚಾರಗಳಿರಬೇಕು. ಕಾರಣ ಇದ್ದಲ್ಲಿ ಮಾತ್ರ ಕಾರ್ಯವಿದೆ ಎಂಬುದು ಅನ್ವಯ ಸಹಚಾರ. ಕಾರಣ ಇಲ್ಲದಲ್ಲಿ ಕಾರ್ಯವಿಲ್ಲ ಎಂಬುದು ವ್ಯತಿರೇಕಸಹಚಾರ. ದಂಡವು ಘಟಕ್ಕೆ ಕಾರಣ ಎಂದು ನಿಶ್ಚಯವಾಗಿದ್ದು ಅನ್ವಯಸಹಚಾರ ಮತ್ತು ವ್ಯತಿರೇಕಸಹಚಾರ ನಿಶ್ಚಯದಿಂದ. ಈ ಸಹಚಾರಗಳನ್ನೇ ಈ ಪದ್ಯದಲ್ಲಿ ಗುಣವೆಂದು ಕರೆದಿದ್ದಾರೆ. ಪರವಾದಿಯು ಹೇಳುವ ಆಪ್ತೋಕ್ತತ್ವಾದಿ ಯಾವ ಗುಣದಲ್ಲಿಯೂ ಈ

ಸಹಚಾರರೂಪಗುಣ ಕಾಣಸುವುದಿಲ್ಲ ಎಂಬುದು ರಾಜರ ಅಭಿಪ್ರಾಯ. ಏಕೆಂದರೆ ಸಹಚಾರನಿಶ್ಚಯಕ್ಕೆ ವ್ಯಭಿಚಾರನಿಶ್ಚಯವು ಪ್ರತಿಬಂಧಕ. ಆ ವ್ಯಭಿಚಾರನಿಶ್ಚಯವೂ ಎರಡು ವಿಧವಾಗಿದೆ. ಅನ್ವಯವ್ಯಭಿಚಾರನಿಶ್ಚಯ ಮತ್ತು ವ್ಯತಿರೇಕವ್ಯಭಿಚಾರ-ನಿಶ್ಚಯವೆಂದು. ಕಾರಣವಿದ್ದರೂ ಕಾರ್ಯ ಹುಟ್ಟಿಲ್ಲ ಎಂಬ ನಿಶ್ಚಯವು ವ್ಯತಿರೇಕವ್ಯಭಿಚಾರನಿಶ್ಚಯ. ಕಾರಣವಿಲ್ಲದಿದ್ದರೂ ಕಾರ್ಯವು ಹುಟ್ಟಿದೆ ಎಂಬ ನಿಶ್ಚಯವು ವ್ಯತಿರೇಕವ್ಯಭಿಚಾರನಿಶ್ಚಯ. ಈ ವ್ಯಭಿಚಾರವನ್ನೇ ಇಲ್ಲಿ ದೋಷ ಎಂಬ ಪದದಿಂದ ಹೇಳಿದ್ದಾರೆ. ದೋಷಾಭಾವದಲ್ಲಿಯೂ ದೋಷವಿದೆ, ಗುಣದಲ್ಲಿಯೂ ದೋಷವಿದೆ. ಆದ್ದರಿಂದ ಪ್ರಾಮಾಣ್ಯಕ್ಕೆ ಯಾವುದೂ ಕಾರಣವೆಂದು ತೀರ್ಮಾನಿಸಲು ಸಾಧ್ಯವಿಲ್ಲ. ಪ್ರಾಮಾಣ್ಯಸ್ವತಸ್ತ್ವವು ತಾನೇ ಸಿದ್ಧವಾಯಿತು.

ವಿಸ್ತರಸ್ತ್ವಸ್ಯ ಸರ್ವಸ್ಯ ಮೂಲಶಾಸ್ತ್ರಮಹಾರ್ಣವೇ ।
ದ್ರಷ್ಟವ್ಯಸ್ತತ್ತಟಸ್ಥಾಣುಮಣಿಸಂಗ್ರಾಹಿಣೋ ವಯಮ್ ॥ ೪೯೨ ॥

**ಅರ್ಥ–** ಅಸ್ಯ= ಈ, ಸರ್ವಸ್ಯ = ಎಲ್ಲ ಪ್ರಮೇಯದ, ವಿಸ್ತರಃ ತು = ವಿಸ್ತಾರವಾದರೋ, ಮೂಲಶಾಸ್ತ್ರಮಹಾರ್ಣವೇ = ಮೂಲಶಾಸ್ತ್ರವೆಂಬ ದೊಡ್ಡ ಸಮುದ್ರದಲ್ಲಿ, ದ್ರಷ್ಟವ್ಯಃ = ನೋಡಲ್ಪಡಬೇಕು. ವಯಂ= ನಾವು, ತತ್= ಆ ದೊಡ್ಡ ಸಮುದ್ರದ, ತಟ= ತೀರದಲ್ಲಿ, ಸ್ಥ= ಇರುವ, ಅಣು= ಸಣ್ಣ, ಮಣಿ= ಮಣಿಯನ್ನು, ಸಂಗ್ರಾಹಿಣಃ= ಸಂಗ್ರಹಿಸುವ ಸ್ವಭಾವವುಳ್ಳವರು.

**ಅನುವಾದ–** ಈ ಪ್ರಾಮಾಣ್ಯಸ್ವತಸ್ತ್ವದ ಬಗ್ಗೆ ಹೆಚ್ಚಿನ ವಿಷಯಗಳನ್ನು ಅರಿಯ ಬಯಸುವವರು ಆಚಾರ್ಯ ಮಧ್ವರ ಸರ್ವಮೂಲ ಗ್ರಂಥಗಳೆಂಬ ಮಹಾಸಮುದ್ರವನ್ನೇ ನೋಡಬೇಕು. ಆ ಸಮುದ್ರದಾಳದಿಂದ ವಾಯುವಿನ ಪ್ರೇರಣೆಯಿಂದ ತೀರಕ್ಕೆ ಬಂದು ಬಿದ್ದಿರುವ ಸಣ್ಣ ಸಣ್ಣ ಯುಕ್ತಿಗಳೆಂಬ ಮುತ್ತು, ಮಣಿಗಳನ್ನು ಮಾತ್ರ ಸಂಗ್ರಹಿಸುವ ಸ್ವಭಾವವುಳ್ಳವರು ನಾವು.

**ಭಾವವಿಲಾಸಿನೀ**—ಯದ್ಬಲಾದೇತಾವಚ್ಚರ್ಚಿತಂ ತನ್ಮೂಲಶಾಸ್ತ್ರಂ ಸ್ತೌತಿ – ವಿಸ್ತರಸ್ತ್ವಿತಿ ॥ ಅಸ್ಯ ಸರ್ವಸ್ಯ ಪ್ರಮೇಯಸ್ಯ । ತತ್ತಟಸ್ಥಾಣುಮಣಿಸಂಗ್ರಾಹಿಣಃ ತಸ್ಯ ಮೂಲಶಾಸ್ತ್ರಮಹಾರ್ಣವಸ್ಯ ತಟಸ್ಥೋ ವಾಯುಪ್ರೇರಣಯಾ ತಟೇ ಆಗತೋಽಣುರ್ಮಣಿರ್ಯುಕ್ತಿರೂಪವಮೌಕ್ತಿಕಂ ತತ್ಸಂಗ್ರಾಹಿಣ ಇತ್ಯರ್ಥಃ ॥ ೪೯೨ ॥

ಪ್ರಾಮಾಣ್ಯಸ್ವತಸ್ತ್ವವನ್ನು ಸಾಧಿಸಿ ತಾರ್ಕಿಕರ ಅನ್ಯಥಾಖ್ಯಾತಿವಾದವನ್ನು ನಿರಾಕರಿಸುತ್ತಿದ್ದಾರೆ-

ಅತ್ರ ಪ್ರತೀತರಜತಸ್ಯಾತ್ರ ಸತ್ತ್ವಂ ನ ಬಾಧಕಾತ್ ।
ಸಾಧಕಾಭಾವತಶ್ಚಾನ್ಯತ್ರಾಪಿ ಸತ್ತಾ ನ ಸೇತ್ಸ್ಯತಿ ॥ ೪೯೩ ॥

**ಅರ್ಥ–** ಅತ್ರ = ಎದುರಿನಲ್ಲಿ ಕಾಣುವ ಕಪ್ಪೆಚಿಪ್ಪಿನಲ್ಲಿ, ಪ್ರತೀತರಜತಸ್ಯ = ತೋರುವ ಬೆಳ್ಳಿಯ, ಸತ್ತ್ವಂ = ಇರುವಿಕೆಯು, ಬಾಧಕಾತ್ = 'ನೇದಂರಜತಮ್' ಎಂಬ ಬಾಧಜ್ಞಾನವಿರುವುದರಿಂದ, ಅತ್ರ = ಇಲ್ಲಿ, ನ = ಇಲ್ಲ, ಚ = ಮತ್ತು, ಅನ್ಯತ್ರ ಅಪಿ = ಅಂಗಡಿ ಮೊದಲಾದ ಬೇರೆ ಸ್ಥಳದಲ್ಲಿಯೂ, ಸತ್ತಾ = ಇರುವಿಕೆಯು, ಸಾಧಕಾಭಾವತಃ = ಸಾಧಕವಿಲ್ಲದಿರುವುದರಿಂದ, ನ ಸೇತ್ಸ್ಯತಿ = ಸಿದ್ಧಿಸುವುದಿಲ್ಲ.

**ಅನುವಾದ–** ನೈಯಾಯಿಕರು ಅನ್ಯಥಾಖ್ಯಾತಿವಾದಿಗಳು. ನಾವು ದ್ವೈತವೇದಾಂತಿಗಳು ಅಭಿನವಾನ್ಯಥಾಖ್ಯಾತಿವಾದಿಗಳು. ನೈಯಾಯಿಕರು ಯಾವ ಅಂಶದಲ್ಲಿ ತಪ್ಪುತ್ತಾರೆ ಅದನ್ನು ರಾಜರು ತೋರಿಸುತ್ತಿದ್ದಾರೆ ಹಾಗೂ ಅವರನ್ನು ನಿರಾಕರಿಸುತ್ತಿದ್ದಾರೆ. ವ್ಯಕ್ತಿಯೊಬ್ಬನು ಎದುರಿನಲ್ಲಿ ಕಾಣುವ ಕಪ್ಪೆಚಿಪ್ಪನ್ನು ಬೆಳ್ಳಿ ಎಂದು ಭ್ರಮಿಸುತ್ತಾನೆ. ಇಲ್ಲಿ ಆರೋಪಿಸುವ ಬೆಳ್ಳಿ ಎಲ್ಲಿಯೂ ಇಲ್ಲ ಎಂದು ಸಮರ್ಥಿಸುವವರು ನಾವು. ನೈಯಾಯಿಕರು ನಾವು ಆರೋಪಿಸುವ ಬೆಳ್ಳಿಯು ಅಂಗಡಿಯಲ್ಲಿದೆ ಎಂದು ವಾದಿಸುತ್ತಾರೆ. ಇಲ್ಲಿ ರಾಜರು ಹೇಳುತ್ತಾರೆ, ಎದುರಿನಲ್ಲಿ ಅರೋಪಿಸುವ ಬೆಳ್ಳಿ ಎದುರಿನಲ್ಲಿ ಇಲ್ಲ. 'ನೇದಂ ರಜತಮ್' 'ನಾತ್ರ ರಜತಮ್' 'ಇಲ್ಲಿ ಬೆಳ್ಳಿ ಇಲ್ಲ' 'ಇದು ಬೆಳ್ಳಿ ಅಲ್ಲ' ಎಂಬುದಾಗಿ ಬಾಧಜ್ಞಾನ ನಮಗೆ ಬರುತ್ತಿದೆ. ಇಲ್ಲಿ ಆರೋಪಿಸುವ ಬೆಳ್ಳಿಯು ಬೇರೆ ಸ್ಥಳದಲ್ಲಿಯೂ ಇಲ್ಲ. ಅಂಗಡಿಯಲ್ಲಿ ಇರುವ ಬೆಳ್ಳಿಯನ್ನೇ ನಾವು ಇಲ್ಲಿ ನೋಡುತ್ತಿದ್ದೇವೆ ಎನ್ನುವುದಕ್ಕೂ ಯಾವ ಸಾಧಕಗಳು ಇಲ್ಲವಾದ್ದರಿಂದ ನಾವು ಎದುರಿನಲ್ಲಿ ಆರೋಪಿಸುವ ಬೆಳ್ಳಿಯು ಎಲ್ಲಿಯೂ ಇಲ್ಲ.

**ಭಾವವಿಲಾಸಿನೀ–**ಅನ್ಯಥಾಖ್ಯಾತಿವಾದಿನಾಮಿತ್ಯನೇನ ಸ್ವಸ್ಯ ತತ್ರಾಸ್ವರಸಃ ಪ್ರಾಕ್ಸೂಚಿತಃ । ತಮಿದಾನೀಮುಪಪಾದಯತಿ – ಅತ್ರ ಪ್ರತೀತೇತ್ಯಾದಿನಾ ॥ ಅತ್ರ ಪುರೋವರ್ತಿದೇಶೇ । ಬಾಧಕಾತ್ ನೇದಂ ರಜತಮಿತ್ಯನುಭವಾತ್ । ಅನ್ಯತ್ರ ಪುರೋವರ್ತಿದೇಶಾದನ್ಯದೇಶೇ ॥೪೯೩॥

ಸಾಧಕವಿಲ್ಲವೆನ್ನುವುದನ್ನೇ ತೋರಿಸುತ್ತಾರೆ-

> ನಹ್ಯತ್ರ ದೃಷ್ಟಂ ರಜತಮನ್ಯತ್ರಾಸ್ತೀತಿ ಧೀರ್ನೃಣಾಮ್ ।
> ಪ್ರತೀತಿರೇವ ಹಿ ಗತಿಸ್ತತ್ತದರ್ಥವ್ಯವಸ್ಥಿತೌ ॥ ೪೯೪ ॥

**ಅರ್ಥ–** ನೃಣಾಮ್ = ಜನರಿಗೆ, ಅತ್ರ = ಎದುರಿನಲ್ಲಿ, ದೃಷ್ಟಂ = ಕಂಡ, ರಜತಂ = ಬೆಳ್ಳಿಯು, ಅನ್ಯತ್ರ = ಬೇರೆಯ ಸ್ಥಳದಲ್ಲಿ, ಅಸ್ತಿ = ಇದೆ, ಇತಿ = ಎಂದು, ಧೀಃ = ಬುದ್ಧಿಯು, ನಹಿ = ಇಲ್ಲವಷ್ಟೇ. ತತ್ತದರ್ಥವ್ಯವಸ್ಥಿತೌ = ಆಯಾಯ ಪದಾರ್ಥಗಳ ಸಿದ್ಧಿಯಲ್ಲಿ, ಪ್ರತೀತಿಃ ಏವ = ಜ್ಞಾನವೇ, ಗತಿಃ ಹಿ = ನಿಶ್ಚಾಯಕವಷ್ಟೇ.

**ಅನುವಾದ–** ಒಂದು ವಿಷಯವು ಸಿದ್ಧವಾಗಬೇಕಾದರೆ, ಆ ವಿಷಯಕವಾದ ಜ್ಞಾನವೇ ನಮಗೆ ಪ್ರಮಾಣವಾಗುತ್ತದೆ. ಎದುರು ಇರುವ ಕಪ್ಪೆಚಿಪ್ಪಿನಲ್ಲಿ ಕಾಣುವ ಬೆಳ್ಳಿ

ಅಂಗಡಿಯಲ್ಲಿದೆ ಎಂದು ಹೇಳಲು ಆ ರೀತಿಯಾದ ಅನುಭವ ನಮಗಿಲ್ಲ. ಹೀಗಿರುವಾಗ ಅಂಗಡಿಯಲ್ಲಿರುವ ಬೆಳ್ಳಿಯೇ ಎದುರು ಕಂಡಿದ್ದು ಎಂದು ಹೇಳಲು ಸಾಧ್ಯವಿಲ್ಲ.

**ಭಾವವಿಲಾಸಿನೀ**—ಸಾಧಕಾಭಾವಮೇವ ದರ್ಶಯತಿ – **ನಹ್ಯತ್ರೇತಿ** ॥ ನನ್ವನ್ಯತ್ರಾಸ್ತೀತಿ ಬುದ್ಧ್ಯಭಾವೇऽಪಿ ತತ್ರ ತದಂಗೀಕಾರೇ ಕೋ ದೋಷಃ? ಇತ್ಯತ ಆಹ—**ಪ್ರತೀತಿರೇವೇತಿ** ॥೪೯೪॥

ಕಪ್ಪೆಚಿಪ್ಪಿನಲ್ಲಿ ಕಂಡ ಬೆಳ್ಳಿ ಎಲ್ಲಿಯೂ ಇಲ್ಲ ಎಂಬುದನ್ನು ಆಕ್ಷೇಪಿಸಿ ಪರಿಹರಿಸುತ್ತಾರೆ-

ಇಂದ್ರಿಯಸ್ಯೈವ ಸಂಬಂಧಾದ್ ವಿಶೇಷಣವಿಶೇಷ್ಯಯೋಃ ।
ದ್ವಯೋಶ್ಚ ಧೀರ್ಭವೇತ್ ತತ್ರ ಪ್ರಾಗ್‌ವಿಶೇಷಣಧೀರ್ವೃಥಾ ॥ ೪೯೫ ॥

**ಅರ್ಥ**— ಇಂದ್ರಿಯಸ್ಯ = ಇಂದ್ರಿಯದ, ಸಂಬಂಧಾತ್ ಏವ = ಸನ್ನಿಕರ್ಷದಿಂದಲೇ, ವಿಶೇಷಣವಿಶೇಷ್ಯಯೋಃ = ವಿಶೇಷಣ ಮತ್ತು ವಿಶೇಷ್ಯ ಎಂಬ, ದ್ವಯೋಃ ಚ= ಎರಡರದ್ದೂ, ಧೀಃ = ಜ್ಞಾನವು, ಭವೇತ್ = ಬರುತ್ತದೆ, ತತ್ರ = ವಿಶೇಷಣ ಮತ್ತು ವಿಶೇಷ್ಯಗಳಿಗೆ ಇಂದ್ರಿಯದ ಸಂಬಂಧವಿರುವಸ್ಥಳದಲ್ಲಿ, ಪ್ರಾಕ್ = ವಿಶಿಷ್ಟಜ್ಞಾನಕ್ಕಿಂತಲೂ ಮೊದಲು, ವಿಶೇಷಣಧೀಃ = ವಿಶೇಷಣಜ್ಞಾನವು ವೃಥಾ = ವ್ಯರ್ಥವು.

**ಅನುವಾದ**— 'ಇದಂ ರಜತಂ' 'ಇದು ಬೆಳ್ಳಿ' ಎಂಬುದು ವಿಶಿಷ್ಟಜ್ಞಾನ. ವಿಶಿಷ್ಟಜ್ಞಾನ ಬರಬೇಕಾದರೆ ವಿಶೇಷಣಜ್ಞಾನ ಮೊದಲಿರಬೇಕು ಎಂದು ಲೋಕದಲ್ಲಿ ಸಿದ್ಧವಾಗಿದೆ. 'ದಂಡೀ' ಎಂಬುದು ವಿಶಿಷ್ಟಜ್ಞಾನ. ಈ ಜ್ಞಾನ ಬರುವ ಮೊದಲು ದಂಡದ ಜ್ಞಾನ ಇದ್ದವನಿಗೆ ಈ ವಿಶಿಷ್ಟಜ್ಞಾನ ಹುಟ್ಟುತ್ತದೆ. ಇಲ್ಲವಾದಲ್ಲಿ ಇಲ್ಲ. ಅದರಂತೆ ಮೊದಲು ರಜತವನ್ನು ಕಂಡವನಿಗೆ ಮಾತ್ರ ಈ ವಿಶಿಷ್ಟಜ್ಞಾನ ಬರಲು ಸಾಧ್ಯ. ಅದಕ್ಕಾಗಿ ಅಂಗಡಿಯಲ್ಲಿಯೋ, ಮತ್ತೊಂದು ಕಡೆಯೋ, ಬೆಳ್ಳಿಯನ್ನು ಕಂಡವನಿಗೆ ಮಾತ್ರ ಭ್ರಮೆ ಬರುತ್ತದೆ ಎಂಬುದು ತಾರ್ಕಿಕರ ವಾದ. ಅದಕ್ಕೆ ಉತ್ತರವನ್ನು ನೀಡುತ್ತಾರೆ. ಕಣ್ಣಿನಿಂದ ಎದುರು ನೋಡುವಾಗಲೇ ವಿಶೇಷಣ ಮತ್ತು ವಿಶೇಷ್ಯ ಎರಡನ್ನೂ ಕಾಣುತ್ತಾನಾದ್ದರಿಂದ ಮೊದಲು ವಿಶೇಷಣದ ಜ್ಞಾನದ ಅಗತ್ಯವಿಲ್ಲ.

**ಭಾವವಿಲಾಸಿನೀ**—ನನು ವಿಶಿಷ್ಟಜ್ಞಾನಸ್ಯ ವಿಶೇಷಣಜ್ಞಾನತ್ವನಿಯಮಾದಸ್ಯೈವ ವಿಶೇಷಣಸ್ಯ ಪ್ರಾಗ್‌ಜ್ಞಾನಾಯಾನ್ಯತ್ರ ಸತ್ತ್ವಂ ವಾಚ್ಯಮಿತ್ಯತಸ್ಯ ಏವ ನಿಯಮೋನಾಪೇಕ್ಷಿತ ಇತ್ಯಾಹ ॥ **ಇಂದ್ರಿಯಸ್ಯೈವೇತಿ** ॥ ತತ್ರ ವಿಶೇಷಣವಿಶೇಷ್ಯಯೋರುಭಯೋರವೇಂದ್ರಿಯಸಂಬಂಧಸ್ಥಲೇ । ಪ್ರಾಗ್‌ಪಂಡೀತಿ ವಿಶಿಷ್ಟಜ್ಞಾನಾತ್ಪೂರ್ವಮ್ ॥ ೪೯೫ ॥

**ವಿವರಣೆ**— 'ಇದಂ ರಜತಂ' ಎಂಬುದು ವಿಶಿಷ್ಟ ಜ್ಞಾನ. ಈ ಜ್ಞಾನದಲ್ಲಿ ಕಪ್ಪೆಚಿಪ್ಪು ವಿಶೇಷ್ಯ. ತಾದಾತ್ಮ್ಯೇನ ರಜತ ಅಥವಾ ಸಮವಾಯೇನ ರಜತತ್ವವು ವಿಶೇಷಣ.

ವಿಮತಂ ವಿಶಿಷ್ಟಜ್ಞಾನಂ ವಿಶೇಷಣಜ್ಞಾನಜನ್ಯಂ ವಿಶಿಷ್ಟಜ್ಞಾನತ್ವಾತ್ ದಂಡೀತಿ ವಿಶಿಷ್ಟಜ್ಞಾನವತ್ ಎಂಬ ಅನುಮಾನದಿಂದ ತಾರ್ಕಿಕರು ಮೊದಲು ಬೆಳ್ಳಿಯ ಜ್ಞಾನ ಬೇಕು ಎಂದು ಸಾಧಿಸುತ್ತಾರೆ. ರಾಜರು ಈ ಅನುಮಾನಕ್ಕೆ ವ್ಯಭಿಚಾರವೆಂಬ ದೋಷವನ್ನು ತೋರಿಸುತ್ತಾರೆ. ಯಾವ ವಿಶಿಷ್ಟಜ್ಞಾನದಲ್ಲಿ ವಿಶೇಷ್ಯ ಮತ್ತು ವಿಶೇಷಣ ಎರಡಕ್ಕೂ ಇಂದ್ರಿಯಸಂಬಂಧವಿದೆಯೋ. ಅಂತಹ ಸ್ಥಳದಲ್ಲಿ ಇಂದ್ರಿಯಸಂಬಂಧದಿಂದಲೇ ವಿಶಿಷ್ಟಜ್ಞಾನ ಹುಟ್ಟುತ್ತಿರುವುದರಿಂದ ಮೊದಲು ವಿಶೇಷಣಜ್ಞಾನ ಬೇಕು ಎಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ದೋಷದಿಂದ ಎದುರಿನಲ್ಲಿ ಬೆಳ್ಳಿ ಕಾಣುತ್ತಿರುವುದರಿಂದ ಈ ಜ್ಞಾನಕ್ಕಿಂತ ಮೊದಲು ಬೆಳ್ಳಿಯ ಜ್ಞಾನ ಅಗತ್ಯವಿಲ್ಲ.

**ಪೂರ್ವಂ ಜ್ಞಾತೋऽಪ್ಯನುಮಿತೌ ವಿಶೇಷ್ಯಃ ಪರ್ವತೋ ಯತಃ ।**
**ಪ್ರಾಗ್ವಿಶೇಷಣಧೀರರ್ಥಸಾಕ್ಷಾತ್ಕಾರೋ ವೃಥೈವ ತತ್ ॥ ೪೯೬ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಪರ್ವತಃ = ಪರ್ವತವು, ಪೂರ್ವಂ = ಅನುಮಾನದ ಮೊದಲು, ಜ್ಞಾತೋऽಪಿ = ತಿಳಿಯಲ್ಪಟ್ಟಿದ್ದರೂ, ಅನುಮಿತೌ = ಅನುಮಿತಿಯಲ್ಲಿ, ವಿಶೇಷ್ಯಃ = ವಿಶೇಷ್ಯವಾಗಿದೆಯೋ, ತತ್ = ಆ ಕಾರಣದಿಂದ, ಅರ್ಥಸಾಕ್ಷಾತ್ಕಾರೇ = ವಿಷಯದ ಪ್ರತ್ಯಕ್ಷದಲ್ಲಿ, ಪ್ರಾಕ್ = ವಿಶಿಷ್ಟಜ್ಞಾನಕ್ಕಿಂತಲೂ ಮೊದಲು, ವಿಶೇಷಣಧೀಃ = ವಿಶೇಷಣದ ಜ್ಞಾನವು, ವೃಥಾ ಏವ = ವ್ಯರ್ಥವೇ ಸರಿ.

**ಅನುವಾದ–** 'ಇದಂ ರಜತಂ' ಎಂಬ ಜ್ಞಾನದಲ್ಲಿ ಬೆಳ್ಳಿಯು ವಿಶೇಷಣ ಎಂದಾಗಬೇಕಾದರೆ, ಅದರ ಜ್ಞಾನ ಮೊದಲೇ ಬೇಕು ಎಂದು ತಾರ್ಕಿಕರು ಹೇಳಿದ್ದಾರೆ. ಹಾಗಾದರೆ ಮೊದಲು ಯಾವುದನ್ನು ತಿಳಿದಿದ್ದಾನೆಯೋ; ನಂತರ ಬರುವ ಜ್ಞಾನದಲ್ಲಿ ಅದು ವಿಶೇಷಣವಾಗಿ ತೋರಬೇಕು ಎಂದು ಹೇಳಿದಂತಾಯಿತು. ಅದಕ್ಕೆ ಅಪವಾದವನ್ನು ತೋರಿಸುತ್ತಾರೆ. ಪರ್ವತವನ್ನು ಮೊದಲೇ ಕಂಡ ನಂತರ ಪರ್ವತದಲ್ಲಿ ಬೆಂಕಿಯನ್ನು ಅನುಮಾನದಿಂದ ಸಾಧಿಸುತ್ತಾನೆ. ಆ ಅನುಮಿತಿಯಲ್ಲಿ ಪರ್ವತವು ವಿಶೇಷ್ಯ, ಬೆಂಕಿಯು ವಿಶೇಷಣ ಎಂದು ಎಲ್ಲರೂ ಒಪ್ಪಿದ್ದಾರೆ. ಆದರೆ, ನೀವು ಹೇಳುವಂತೆ ಪರ್ವತ ಮೊದಲೇ ತಿಳಿದಿರುವುದರಿಂದ ಅದು ವಿಶೇಷ್ಯವಲ್ಲ, ಹೊರತಾಗಿ ವಿಶೇಷಣ ಎಂದಾಗಬೇಕಾದೀತು. ಆದ್ದರಿಂದ ವಿಶಿಷ್ಟಜ್ಞಾನದ ಮೊದಲು ವಿಶೇಷಣಜ್ಞಾನ ಬೇಕು ಎಂಬುದು ವ್ಯರ್ಥವೇ ಆಗಿದೆ.

**ಭಾವವಿಲಾಸಿನೀ–**ನನುವಿಶೇಷಣತ್ವನಿರ್ವಾಹಾಯ ಪೂರ್ವಂ ತಸ್ಯಜ್ಞಾನಮಿತ್ಯತ ಆಹ ॥ **ಪೂರ್ವಮಿತಿ** ॥ ಪೂರ್ವಂ ಅನುಮಿತೇಃ ಪೂರ್ವಂ । ಅನುಮಾನಮಾತ್ರೇ ಧರ್ಮಿಜ್ಞಾನಸ್ಯ ಕಾರಣತ್ವಾದಿತಿ ಭಾವಃ। ತತ್‌ತಸ್ಮಾತ್ । ಪ್ರಾಕ್‌ಜ್ಞಾತಸ್ಯಾಪಿ ಪರ್ವತಸ್ಯ ವಿಶೇಷ್ಯತ್ವಾತ್ ॥೪೯೬॥

ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನ ನಿಯತವಾಗಿ ಮೊದಲು ಬೇಕಾಗಿಲ್ಲ ಎಂದು ಹೇಳುವುದಾದಲ್ಲಿ ಅನುಮಾನದಲ್ಲಿ ಮೊದಲು ವಿಶೇಷಣಜ್ಞಾನ ಬೇಕು ಎಂಬ ವಾದವೇಕೆ ಎಂಬ ಶಂಕೆಗೆ ಉತ್ತರವನ್ನು ನೀಡುತ್ತಿದ್ದಾರೆ-

**ವ್ಯಾಪ್ತಿಜ್ಞಾನಾಯ ವಹ್ನ್ಯಾದೇರ್ವ್ಯಾಪಕತ್ವೇನ ಧೀಃ ಪುರಾ ।**
**ಅಪೇಕ್ಷ್ಯತೇ ಪರಂ ಸಾಧ್ಯವೈಶಿಷ್ಟ್ಯೇ ಧೀರ್ನ ಸಿದ್ಧಧೀಃ ॥ ೪೯೭ ॥**

**ಅರ್ಥ–** ಪುರಾ = ಅನುಮಿತಿಗಿಂತ ಮೊದಲು, ವ್ಯಾಪಕತ್ವೇನ = ವ್ಯಾಪಕತ್ವ ಎಂಬ ಧರ್ಮದೊಂದಿಗೆ, ವಹ್ನ್ಯಾದೇಃ = ವಹ್ನಿ ಮೊದಲಾದುದರ, ಧೀಃ = ಜ್ಞಾನವು, ವ್ಯಾಪ್ತಿಜ್ಞಾನಾಯ = ವ್ಯಾಪ್ತಿಜ್ಞಾನಕ್ಕಾಗಿ, ಅಪೇಕ್ಷ್ಯತೇ = ಅಪೇಕ್ಷಿಸಲ್ಪಡುತ್ತದೆ, ಪರಂ = ಹೊರತಾಗಿ, ಧೀಃ = ವಹ್ನಿ ಮೊದಲಾದುದರ ಜ್ಞಾನವು, ಸಾಧ್ಯವೈಶಿಷ್ಟ್ಯೇ = ಸಾಧ್ಯವೈಶಿಷ್ಟ್ಯದ ವಿಷಯದಲ್ಲಿ, ನ ಸಿದ್ಧಧೀಃ = ತಿಳಿಯಲ್ಪಟ್ಟ ಜ್ಞಾನವಲ್ಲ.

**ಅನುವಾದ–** ವಿಶಿಷ್ಟಜ್ಞಾನ ಹುಟ್ಟುವಾಗಲೆಲ್ಲ ವಿಶೇಷಣಜ್ಞಾನದ ಅಗತ್ಯವಿದೆ ಎಂಬುದು ಪರಕೀಯರ ವಾದ. ಅದನ್ನು ವೇದಾಂತಿಗಳೂ ಒಪ್ಪಿದ್ದಾರೆ ಎಂದು ಅವರು ಆಕ್ಷೇಪಿಸುತ್ತಾರೆ. ಅನುಮಾನದಿಂದ ಪರ್ವತದಲ್ಲಿ ಬೆಂಕಿಯನ್ನು ಸಾಧಿಸಲು ಹೊರಟವನಿಗೆ ಬೆಂಕಿಯ ಜ್ಞಾನವು ಇರಲೇಬೇಕು. ಹೀಗೆಂದು ಎಲ್ಲರೂ ಒಪ್ಪಿರುವವರೇ. ಹೀಗಿರುವಾಗ ವಿಶಿಷ್ಟಜ್ಞಾನಕ್ಕೆ ವಿಶೇಷಣಜ್ಞಾನವು ಕಾರಣ ಎಂದು ಒಂದು ಕಡೆಯಿಂದ ಒಪ್ಪಿ ಮತ್ತೊಂದೆಡೆ ನಿರಾಕರಣೆ ಮಾಡುವುದು ಉಚಿತವಲ್ಲ ಎಂದು ಆಕ್ಷೇಪ. ಅದಕ್ಕೆ ರಾಜರು ಉತ್ತರಿಸುತ್ತಾರೆ. ಪರ್ವತದಲ್ಲಿ ಬೆಂಕಿಯಿದೆ ಎಂಬ ವಿಶಿಷ್ಟಜ್ಞಾನಕ್ಕಾಗಿ ಬೆಂಕಿಯ ಜ್ಞಾನವು ಮೊದಲು ಬೇಕು ಎಂದು ಹೇಳುವುದೇ ಇಲ್ಲ. ಹಾಗೆ ಹೇಳಿದರೆ, ಮೊದಲೇ ಬೆಂಕಿ ತಿಳಿದವನಿಗೆ ಬೆಂಕಿಯನ್ನು ಸಾಧಿಸಿದರೆ ಸಿದ್ಧಸಾಧನತಾ ಬಂದೀತು. ಹೊರತಾಗಿ ಹೊಗೆ ಇದ್ದಲ್ಲೆಲ್ಲ ಬೆಂಕಿ ಇದೆ ಎಂಬ ವ್ಯಾಪ್ತಿಜ್ಞಾನಕ್ಕಾಗಿ ಬೆಂಕಿಯು ವ್ಯಾಪಕ ಎಂಬ ಜ್ಞಾನ ಬೇಕಾಗಿದೆ. ಅದಕ್ಕಾಗಿಯೇ ಬೆಂಕಿಯ ಜ್ಞಾನದ ಅಗತ್ಯ, ಹೊರತಾಗಿ ವಿಶಿಷ್ಟಜ್ಞಾನಕ್ಕಾಗಿ ಅಲ್ಲ.

**ಭಾವವಿಲಾಸಿನೀ–**ತರ್ಹ್ಯನುಮಾನೇ ಕುತೋಽವಿಶೇಷಣಜ್ಞಾನಾನುಸರಣಮಿತ್ಯತೋಽನ್ಯಥಾಸಿದ್ಧಂ ತದಿತ್ಯಾಹ ॥ **ವ್ಯಾಪ್ತಿಜ್ಞಾನಾಯೇತಿ** ॥ ವ್ಯಾಪಕತ್ವೇನ ವ್ಯಾಪ್ಯಂ ಹೇತುಂ ಪ್ರತಿವ್ಯಾಪಕಾಖ್ಯಾಪರ ಸಂಬಂಧಿತ್ವೇನ । ವ್ಯಾಪ್ಯವ್ಯಾಪಕಭಾವರೂಪವ್ಯಾಪ್ತಿಜ್ಞಾನೇ ವ್ಯಾಪಕಸ್ಯಾಪಿ ಜ್ಞೇಯತಯಾ ನಿವಿಷ್ಟತ್ವಾತ್ ತದ್‌ಜ್ಞಾನಂ ನ ತು ಭಾವ್ಯನುಮಿತಿರೂಪವಿಶಿಷ್ಟಜ್ಞಾನೋಪಯೋಗಿತಯೇತಿ ಭಾವಃ । ಪುರಾ ಅನುಮಿತೇಃ ಪೂರ್ವಂ । ಸಾಧ್ಯವೈಶಿಷ್ಟ್ಯೇ ಪರ್ವತಸ್ಯ ಸಾಧ್ಯವೈಶಿಷ್ಟ್ಯೇ । ವಿಷಯಸಪ್ತಮೀಯಮ್ । ವಿಶಿಷ್ಟವಿಷಯೇ ಧೀರಿತ್ಯರ್ಥಃ । ಸಿದ್ಧಧೀಃ ಪ್ರಾಗ್‌ಜ್ಞಾತತ್ವಧೀಃ । ಅನುಮತಿ ವಿಶೇಷಣಸ್ಯ ಸಾಧ್ಯಸ್ಯ ಪೂರ್ವಂ ಜ್ಞಾತತ್ವನಿಯಮಾಂಗೀಕಾರೇ ಹೇತೋಸ್ಸಿದ್ಧಸಾಧನತಾ ಸ್ಯಾದಿತಿ ಸೂಚನಾಯ ಸಿದ್ಧಧೀರಿತ್ಯುಕ್ತಮ್ ॥ ೪೯೭ ॥

**ವಿವರಣೆ–** ಈ ಶ್ಲೋಕದಲ್ಲಿ ಪರಕೀಯರು ಅಪಸಿದ್ಧಾಂತವನ್ನು ಆಪಾದನೆ ಮಾಡಿದ್ದನ್ನು ರಾಜರು ಪರಿಹರಿಸಿದ್ದಾರೆ. ತಾನು ಒಪ್ಪಿದ್ದನ್ನೇ ತಾನು ನಿರಾಕರಿಸಿದ ಅದು ಅಪಸಿದ್ಧಾಂತ. 'ಪರ್ವತೋ ವಹ್ನಿಮಾನ್' ಎಂಬುದು ವಿಶಿಷ್ಟಜ್ಞಾನ. ಈ ವಿಶಿಷ್ಟಜ್ಞಾನದಲ್ಲಿ ವಿಶೇಷಣವಾಗಿ ವಹ್ನಿಯು ತೋರಿದೆ. ಈ ವಹ್ನಿಯ ಜ್ಞಾನವು ಮೊದಲೇ ಬೇಕು ಎಂಬುದಾಗಿ ತತ್ತ್ವವಾದಿಗಳು ಒಪ್ಪಿ ವಿಶಿಷ್ಟಜ್ಞಾನಕ್ಕೆ ಪೂರ್ವದಲ್ಲಿ ವಿಶೇಷಣಜ್ಞಾನದ ಅಗತ್ಯವಿಲ್ಲ ಎಂದು ನಿರಾಕರಿಸಿದ್ದಾರೆ. ಆದ್ದರಿಂದ ಅಪಸಿದ್ಧಾಂತ ಎಂದು ಆಪಾದನೆ. ಇದನ್ನು ರಾಜರು ಹೀಗೆ ಪರಿಹರಿಸಿದ್ದಾರೆ. ವಿಶಿಷ್ಟಜ್ಞಾನಕ್ಕಿಂತ ಮೊದಲು ಬೆಂಕಿಯ ಜ್ಞಾನ ಒಂದು ದೃಷ್ಟಿಯಿಂದ ಬೇಕು ಹಾಗೂ ಇನ್ನೊಂದು ದೃಷ್ಟಿಯಿಂದ ಬೇಡ. ವ್ಯಾಪಕತ್ವೇನ ವಹ್ನಿಯ ಜ್ಞಾನ ಬೇಕು, ಪರ್ವತದಲ್ಲಿ ವಿಶೇಷಣತ್ವೇನ ಬೇಡ. ಅನುಮಿತಿ ಹುಟ್ಟಬೇಕಾದರೆ ವ್ಯಾಪ್ತಿಯ ಜ್ಞಾನ ಬೇಕು. 'ಯತ್ರ ಧೂಮ ತತ್ರ ವಹ್ನಿಃ' ಎಂಬುದು ವ್ಯಾಪ್ತಿ. ಇಲ್ಲಿ ಧೂಮದಲ್ಲಿ ವ್ಯಾಪ್ಯತ್ವ ಎಂಬುವ ಧರ್ಮವಿದೆ. ವಹ್ನಿಯಲ್ಲಿ ವ್ಯಾಪಕತ್ವ ಎಂಬುವ ಧರ್ಮವಿದೆ. ಹೀಗೆ ಅನುಮಿತಿ ಹುಟ್ಟುವ ಮೊದಲು ವಹ್ನಿಯು ವ್ಯಾಪಕ ಎಂಬುದಾಗಿ ತಿಳಿಯಲ್ಪಡಬೇಕು. ಆದ್ದರಿಂದ ಈ ರೀತಿಯಲ್ಲಿ ವಹ್ನಿಯ ಜ್ಞಾನ ಬೇಕು. ಪರ್ವತದಲ್ಲಿ ವಹ್ನಿಯ ಜ್ಞಾನ ಬೇಡ. ಒಂದು ವೇಳೆ ಅನುಮಿತಿ ಹುಟ್ಟುವ ಮೊದಲೇ ಪರ್ವತದಲ್ಲಿ ವಹ್ನಿಜ್ಞಾನವಿದ್ದರೆ, ಸಿದ್ಧಸಾಧನತಾ ಎಂಬ ದೋಷವಿದೆ. ಎಂದರೆ, ಮೊದಲೇ ತಿಳಿದಿದ್ದನ್ನು ಸಾಧಿಸುವುದು ಎಂದು ಅರ್ಥ. ಅನುಮಿತಿ ಎಂದರೆ ಪರ್ವತದಲ್ಲಿ ವಹ್ನಿಯ ಜ್ಞಾನ. ಅದಕ್ಕಿಂತ ಮೊದಲು ವಿಶೇಷಣ ಜ್ಞಾನ ಎಂದರೆ ಪರ್ವತದಲ್ಲಿ ವಹ್ನಿಯ ಜ್ಞಾನ. ಎರಡೂ ಒಂದೇ ಆಗಿರುವುದರಿಂದ ಸಿದ್ಧಸಾಧನತಾ. ಅದಕ್ಕಾಗಿ ಇದನ್ನು ನಾವು ನಿರಾಕರಿಸುತ್ತೇವೆ.

ನಿರಾಕರಿಸಿದ್ದು ಪರ್ವತದಲ್ಲಿ ವಹ್ನಿಯ ಜ್ಞಾನವನ್ನು, ಅಂಗೀಕರಿಸಿದ್ದು ವ್ಯಾಪಕತ್ವೇನ ವಹ್ನಿಯ ಜ್ಞಾನವನ್ನು. ಆದ್ದರಿಂದ ಅಪಸಿದ್ಧಾಂತಕ್ಕೆ ಅವಕಾಶವಿಲ್ಲ ಎಂಬುವುದು ಮರ್ಮ.

**ಯಥಾರ್ಥಜ್ಞಾನದ ಸ್ಥಳದಲ್ಲಿ ವಿಶಿಷ್ಟಜ್ಞಾನಕ್ಕೆ ನಿಯತವಾಗಿ ವಿಶೇಷಣಜ್ಞಾನದ ಅಪೇಕ್ಷೆ ಇಲ್ಲದಿರಬಹುದು. ಆದರೆ ಭ್ರಮದ ಸ್ಥಳದಲ್ಲಿ ವಿಶೇಷಣಕ್ಕೂ, ಇಂದ್ರಿಯಕ್ಕೂ ಸಂಬಂಧವೇ ಇಲ್ಲವಾದ್ದರಿಂದ ವಿಶೇಷಣವಿಶಿಷ್ಟದ ಜ್ಞಾನ ಬರುವುದು ಹೇಗೆ? ಅದಕ್ಕಾಗಿ ವಿಶೇಷಣಜ್ಞಾನ ಮೊದಲೇ ಇರಬೇಕಲ್ಲವೇ ಎಂಬ ಶಂಕೆಗೆ ಉತ್ತರವನ್ನು ನೀಡುತ್ತಾರೆ-**

**ಅಸನ್ನಿಕೃಷ್ಟದೃಷ್ಟಿಂ ಚ ಯೋ ದೋಷಃ ಸಾಧಯೇದ್ ಭ್ರಮೇ ।**
**ಸ ತಸ್ಯಾಜ್ಞಾತತಾಮಾತ್ರಾನ್ನ ಬಿಭೇತೀತಿ ಮೇ ಮತಿಃ ॥ ೪೯೮ ॥**

**ಅರ್ಥ–** ಭ್ರಮೇ = ಅಯಥಾರ್ಥಜ್ಞಾನ ಹುಟ್ಟುವಲ್ಲಿ, ಯಃ ದೋಷಃ = ಯಾವ ದೋಷವು, ಅಸನ್ನಿಕೃಷ್ಟದೃಷ್ಟಿಂ ಚ = ಸನ್ನಿಕರ್ಷವಿಲ್ಲದ ವಸ್ತುವಿನ ಜ್ಞಾನವನ್ನೂ, ಸಾಧಯೇತ್ = ಹುಟ್ಟಿಸುತ್ತದೋ, ಸಃ = ಆ ದೋಷವು, ತಸ್ಯ = ಆ ವಿಶೇಷಣವಾದ ಬೆಳ್ಳಿಯ, ಅಜ್ಞಾತತಾಮಾತ್ರಾತ್ = ಜ್ಞಾನವಿಲ್ಲ ಎಂಬ ಕಾರಣದಿಂದಲೇ, ನ ಬಿಭೇತಿ = ಹೆದರುವುದಿಲ್ಲ ಇತಿ = ಎಂದು, ಮೇ ಮತಿಃ = ನನ್ನ ಅನಿಸಿಕೆಯು.

**ಅನುವಾದ–** ಪ್ರತ್ಯಕ್ಷಜ್ಞಾನ ಬರಬೇಕಾದರೆ ವಿಷಯದೊಂದಿಗೆ ಇಂದ್ರಿಯಕ್ಕೆ ಸಂಬಂಧವಾಗಬೇಕು. ಇಲ್ಲದ ಬೆಳ್ಳಿಯೊಂದಿಗೆ ಇಂದ್ರಿಯಕ್ಕೆ ಸಂಬಂಧ ಹೇಗೆ? ಸಂಬಂಧವೇ ಇಲ್ಲದಿದ್ದ ಮೇಲೆ ಜ್ಞಾನ ಬಂದದ್ದಾದರೂ ಹೇಗೆ? ಅದಕ್ಕೆ ಉತ್ತರ ದೋಷದಿಂದ ಎಂದು. ದೋಷ ಇಂದ್ರಿಯದಲ್ಲೋ, ವಸ್ತುವಿನಲ್ಲೋ ಇದ್ದುದರಿಂದ ವಿಷಯ ಸಂಬಂಧವಾಗದಿದ್ದರೂ, ಜ್ಞಾನ ಹುಟ್ಟಿತು. ಪ್ರತ್ಯಕ್ಷಕ್ಕೆ ಅಸಾಧಾರಣ-ಕಾರಣವಾದ ವಿಷಯಸನ್ನಿಕರ್ಷವಿಲ್ಲದಿದ್ದರೂ ಆ ವಿಷಯದ ಜ್ಞಾನವನ್ನುಂಟು ಮಾಡಿಕೊಡುವ ದೋಷವು ವಿಷಯವು ಅಜ್ಞಾತವಾಗಿದೆ ಎಂಬ ಕಾರಣದಿಂದ ಅದಕ್ಕೆ ಹೆದರಿ ಜ್ಞಾನವನ್ನುಂಟು ಮಾಡಿಕೊಡದೆ ಇರುವುದಿಲ್ಲ.

**ಭಾವವಿಲಾಸಿನೀ–**ನನು ತರ್ಹಿ ಮಾಸ್ತು ಪ್ರಮಾಸ್ಥಲೇ ವಿಶೇಷಣಜ್ಞಾನಸ್ಯೋಪಯೋಗಃ। ಇಂದ್ರಿಯಸಂಬಂಧೇನೈವ ಚರಿತಾರ್ಥತ್ವಾತ್। ಭ್ರಮೇ ವಿಶೇಷಣೇಂದ್ರಿಯಸಂಬಂಧಾಭಾವಾತ್ ತದುಪಯೋಗ ಇತ್ಯತ ಆಹ ॥ ಅಸನ್ನಿಕೃಷ್ಟೇತಿ ॥ ಅಸನ್ನಿಕೃಷ್ಟದೃಷ್ಟಿಮಿಂದ್ರಿಯಾಸಂಬಂಧಿರಜತ ದರ್ಶನಮ್। ಸಃ ಪ್ರತ್ಯಕ್ಷೇ ಅಸಾಧಾರಣಕಾರಣೇಂದ್ರಿಯಸನ್ನಿಕರ್ಷಭಾವೇಽಪಿ ರಜತಾದಿಕಂ ದರ್ಶಯನ್ ತಸ್ಯ ರಜತಸ್ಯ ಅಜ್ಞಾತತಾಮಾತ್ರಾತ್ ಪೂರ್ವಂ ಜ್ಞಾನಾಭಾವಮಾತ್ರಾತ್। ಮಾತ್ರಪದೇನ ವಿಶೇಷಣಜ್ಞಾನಸ್ಯ ಪ್ರಮಾಯಾಮನುಪಯೋಗದರ್ಶನೇನಾವಶ್ಯಕತ್ವಂ ಸೂಚಯತಿ। ಅಸಾಧಾರಣಕಾರಣಮುಪ್ಯನಪೇಕ್ಷಮಾಣಸ್ಯ ದೋಷಸ್ಯ ಸಂದಿಗ್ಧಕಾರಣಾನಪೇಕ್ಷಾ ಕಿಂ ವಾಚ್ಯೇತಿ ಭಾವಃ ॥ ೪೯೮ ॥

**ವಿವರಣೆ–** ಯಥಾರ್ಥಜ್ಞಾನ ಬರುವಾಗ ವಿಶೇಷಣ ಮತ್ತು ವಿಶೇಷ್ಯ ಇವುಗಳೊಂದಿಗೆ ಇಂದ್ರಿಯಕ್ಕೆ ನೇರವಾಗಿ ಸಂಬಂಧವಿರುವದರಿಂದ ವಿಶಿಷ್ಟಜ್ಞಾನ ಹುಟ್ಟುವ ಮೊದಲು ನಿಯತವಾಗಿ ವಿಶೇಷಣಜ್ಞಾನದ ಅಪೇಕ್ಷೆ ಇಲ್ಲದಿರಬಹುದು. ಆದರೆ ಭ್ರಮೆ ಬರುವಾಗ ವಿಶೇಷಣವಿಲ್ಲ. ಆದ್ದರಿಂದ ಅದರ ಜ್ಞಾನವೇ ಇಲ್ಲದೇ ವಿಶಿಷ್ಟದ ಜ್ಞಾನ ಬರುವುದು ಹೇಗೆ? ವಿಶೇಷಣ ಬೆಳ್ಳಿ, ವಿಶೇಷ್ಯ ಎದುರು ಕಾಣುವ ವಸ್ತು. 'ಇದು ಬೆಳ್ಳಿ' ಎಂಬುದು ವಿಶಿಷ್ಟಜ್ಞಾನ. ಇಲ್ಲಿ 'ಇದಂ' ವಿಶೇಷ್ಯ ಕಂಡಿದೆ. 'ಬೆಳ್ಳಿ' ವಿಶೇಷಣ ಅದರ ಸಂಪರ್ಕವೇ ಇಲ್ಲ. ಆದರಿಂದ ಕೂಡಿದ ವಿಶಿಷ್ಟಜ್ಞಾನ ಬರುವುದು ಹೇಗೆ? ಎಂಬುದು ಶಂಕೆ.

ಇದಕ್ಕೆ ರಾಜರು ಉತ್ತರ ನೀಡುತ್ತಾರೆ-

**ಸರ್ವತ್ರಾಪ್ಯಸತೋ ಜ್ಞಾನೇ ಯದಿ ಚೈಕತ್ರ ನೇಷ್ಯತೇ ।**
**ತರ್ಹಿ ತತ್ರ ಸತೋ ಜ್ಞಾನಂ ಕಥಂ ತತ್ರೇತಿ ಚಿಂತ್ಯತಾಮ್।**
**ದೋಷಾಚ್ಚೇತ್ತದ್ಬಲಾದೇವ ಸರ್ವತ್ರಾಪ್ಯಸತೋಽಸ್ತು ಧೀಃ ॥ ೪೯೯ ॥**

**ಅರ್ಥ–** ಯದಿ = ಒಂದು ವೇಳೆ, ಸರ್ವತ್ರ = ಎಲ್ಲಕಡೆ, ಅಸತಃ ಅಪಿ = ಇಲ್ಲದ ವಸ್ತುವಿನದ್ದೂ, ಜ್ಞಾನಂ = ಜ್ಞಾನವು, ಏಕತ್ರ = ಒಂದು ಕಡೆ, ನ ಇಷ್ಯತೇ =

ಸ್ವೀಕರಿಸಲ್ಪಡದಿದ್ದರೆ, ತರ್ಹಿ = ಹಾಗಾದರೆ, ತತ್ರ = ಆ ಭ್ರಮದ ಸ್ಥಳದಲ್ಲಿ, ತತ್ರ = ಆ ಎದುರಿನ ಸ್ಥಳದಲ್ಲಿ, ಅಸತಃ = ಇಲ್ಲದ ವಸ್ತುವಿನ, ಜ್ಞಾನಂ = ಜ್ಞಾನವು, ಕಥಂ = ಹೇಗೆ, ಇತಿ = ಎಂದು, ಚಿಂತ್ಯತಾಮ್ = ಆಲೋಚಿಸಲ್ಪಡಲಿ, ದೋಷಾತ್ ಚೇತ್ = ದೋಷದಿಂದ ಎಂದು ಹೇಳುವುದಾದರೆ, ತದ್ಬಲಾತ್ ಏವ = ಆ ದೋಷದ ಬಲದಿಂದಲೇ, ಸರ್ವತ್ರ ಅಪಿ = ಎಲ್ಲ ಕಡೆಯೂ, ಅಸತಃ = ಅಸತ್ತಿನ, ಧೀಃ = ಜ್ಞಾನವು, ಅಸ್ತು = ಇರಲಿ.

**ಅನುವಾದ–** ಪರವಾದಿಯು ಆಕ್ಷೇಪಿಸುತ್ತಾನೆ - 'ಇದಂ ರಜತಂ' ಎಂಬ ವಿಶಿಷ್ಟಜ್ಞಾನದ ಮೊದಲು ವಿಶೇಷಣಜ್ಞಾನವನ್ನು ವೇದಾಂತಿಗಳು ಅಂಗೀಕರಿಸುವುದಿಲ್ಲ. ಅದಕ್ಕೆ ಕಾರಣ ಆ ಬೆಳ್ಳಿ ಅಂಗಡಿಯಲ್ಲಿ ಇಲ್ಲ. ಎಲ್ಲೂ ಇಲ್ಲ. ಹಾಗಾದರೆ ಎಲ್ಲೂ ಇಲ್ಲದ ವಸ್ತುವಿನ ಜ್ಞಾನ ಎದುರಿನಲ್ಲಿ ಬರುವುದು ಹೇಗೆ?

**ರಾಜರ ಉತ್ತರ -** ಎಲ್ಲೂ ಇಲ್ಲದ ವಸ್ತುವಿನ ಜ್ಞಾನವನ್ನು ನಾವು ಅಂಗೀಕರಿಸಿದ್ದೇವೆ, ಇರಲಿ. ನಿಮ್ಮ ಅಭಿಪ್ರಾಯದಂತೆ ಎದುರಿನಲ್ಲಿ ಇಲ್ಲದ ವಸ್ತುವಿನ ಜ್ಞಾನ ಎದುರಿನಲ್ಲಿ ಬರುವುದು ಹೇಗೆ.

**ಪರವಾದಿಯ ಪರಿಹಾರ -** ಎದುರಿನಲ್ಲಿ ಇಲ್ಲದಿದ್ದರೂ ಎಲ್ಲೋ ಇರುವ ವಸ್ತುವಿನ ಜ್ಞಾನವು ದೋಷದಿಂದಾಗಿ ಬರುತ್ತದೆ.

**ರಾಜರ ಪರಿಹಾರ-** ದೋಷದಿಂದ ಎದುರಿನಲ್ಲಿ ಇಲ್ಲದ ವಸ್ತುವಿನ ಜ್ಞಾನ ಬರುವುದಾದರೆ ಎಲ್ಲೂ ಇಲ್ಲದ ವಸ್ತುವಿನ ಜ್ಞಾನವು ದೋಷದಿಂದ ಏಕೆ ಬರಬಾರದು.

**ಭಾವವಿಲಾಸಿನೀ–**ನನು ಪುರೋವರ್ತಿನ್ಯಸತೋ ರಜತಸ್ಯಾನ್ಯತ್ರಾಪ್ಯಸತ್ತ್ವೇ ಸರ್ವಥಾಽಸತ್ತ್ವ ಪ್ರಸಂಗೇನ ಕಥಂ ತದ್ದರ್ಶನಮಿತಿ ಚೋದ್ಯಂ ಪ್ರತಿಚೋದ್ಯೇನ ಪರಿಹರತಿ ॥ **ಸರ್ವತ್ರೇತಿ** ॥ ತರ್ಹಿ ಸರ್ವತ್ರಾಸತ ಏಕತ್ರ ಜ್ಞಾನಾಭಾವೇ। ತತ್ರ ಪುರೋವರ್ತಿದೇಶೇ। ಭೂತಲೇಽವಿದ್ಯಮಾನಘಟಸ್ಯ ತತ್ರೈವಾದರ್ಶನಾದಿತಿ ಭಾವಃ। ದೋಷಾಚ್ಚೇತ್ ತತ್ರಾಸತೋಽಪಿ ತತ್ರಜ್ಞಾನಂ ಚೇತ್‌ಬಲಾತ್ ದೋಷಬಲಾತ್ । ತತ್ರಾಸಂತಂ ತತ್ರ ದರ್ಶಯಿತುಂ ಸಮರ್ಥೋ ದೋಷಃ ಕಥಮನ್ಯತ್ರಾಸಂತಮೇಕತ್ರ ನ ದರ್ಶಯೇತ್ । ಅಸ್ಯ ಚ ಪ್ರಕಾರಸ್ಯ ಘಟಾದೌ ದೃಷ್ಟತ್ವೇನ ಸುಲಭತ್ವಾತ್ ಸುಖೇನೇದಂ ದರ್ಶಯೇದಿತಿ ಭಾವಃ ॥ ೪೯ ॥

ಅಸತ್ತಿಗೆ ಪ್ರತೀತಿ ಇದೆ ಎಂಬ ವಿಷಯದಲ್ಲಿ ಪ್ರಮಾಣವನ್ನು ತೋರಿಸುತ್ತಾರೆ-

**ಅಸತ್ಪ್ರತೀತೌ ಮಾನಂಚ ಪ್ರತೀತಿರಿಯಮೇವ ನಃ ।**
**ಅತ್ರ ಪ್ರತೀತಂ ಯನ್ಮೂರ್ತಮಿದಂ ನಾನ್ಯತ್ರ ನಾತ್ರ ಚ ॥ ೫೦ ॥**

**ಅರ್ಥ–** ನಃ = ನಮಗೆ, ಅಸತ್ಪ್ರತೀತೌ = ಅಸತ್ತಿಗೆ ಪ್ರತೀತಿ ಇದೆ ಎಂಬ ವಿಷಯದಲ್ಲಿ, ಇಯಂ= ಪ್ರಸಕ್ತವಾದ, ಪ್ರತೀತಿಃ ಏವ = 'ಇದಂ ರಜತಂ' ಎಂಬ ಜ್ಞಾನವೇ, ಮಾನಂ =

ಪ್ರಮಾಣವು, ಅತ್ರ = ಎದುರಿನಲ್ಲಿ, ಪ್ರತೀತಂ = ಜ್ಞಾತವಾದ, ಯತ್ = ಯಾವ, ರಜತಂ = ಬೆಳ್ಳಿಯು ಇದೆಯೋ, ಇದಂ = ಇದು, ಅನ್ಯತ್ರ = ಬೇರೆಯ ಸ್ಥಳದಲ್ಲಿ, ನ = ಇಲ್ಲ, ಅತ್ರ ಚ = ಎದುರಿನಲ್ಲಿಯೂ, ನ = ಇಲ್ಲ.

**ಅನುವಾದ–** ಎಲ್ಲಿಯೂ ಇಲ್ಲದಿರುವ ಬೆಳ್ಳಿಯ ಜ್ಞಾನವನ್ನು ಅಂಗೀಕರಿಸಿದರೆ, ಅಸತ್ತಿನ 'ಪ್ರತೀತಿ'ಯನ್ನು ಒಪ್ಪಿದಂತಾಯಿತು. ಅಸತ್ತಿನ ಜ್ಞಾನವು ಯಾವ ಪ್ರಮಾಣದಿಂದ ಸಿದ್ಧ ಎಂಬ ಪ್ರಶ್ನೆಗೆ 'ಇದಂ ರಜತಂ' ಎಂಬ ಜ್ಞಾನದಿಂದಲೇ ಎಂದು ಉತ್ತರ. ಅದು ಹೀಗೆ 'ಇದಂ ರಜತಂ' ಎಂದು ಜ್ಞಾನ ಬರುತ್ತಿದೆ. ಈ ಬೆಳ್ಳಿ ಎದುರಿನಲ್ಲಿ ಇಲ್ಲ. ಏಕೆಂದರೆ, ಪರೀಕ್ಷೆ ಮಾಡಿದ ಮೇಲೆ 'ಇಲ್ಲಿ ಬೆಳ್ಳಿ ಇಲ್ಲವೇ ಇಲ್ಲ' ಎಂದು ಜ್ಞಾನ ಬರುತ್ತಿದೆ. ಈ ಬೆಳ್ಳಿ ಬೇರೆಯ ಕಡೆಯೂ ಇಲ್ಲ. ಮೂರ್ತವಾದ ವಸ್ತು ಎದುರಿನಲ್ಲೇ ಕಾಣುತ್ತಿದೆ. ಇಂತಹ ವಸ್ತು ಬೇರೆ ಕಡೆ ಹೇಗೆ ಇರಲು ಸಾಧ್ಯ? ಹೀಗಾಗಿ ಇಲ್ಲಿ ಇಲ್ಲ, ಬೇರೆಯ ಕಡೆ ಇಲ್ಲ ಎಂದರೆ ಅದು 'ಅಸತ್' ಎಂದೇ ಆಯಿತು. ಆದರೂ, 'ಇದಂ ರಜತಂ' ಎಂದು ಜ್ಞಾನ ಬಂದಿದೆ ಎಂದರೆ, ಅಸತ್ತಿನ ಪ್ರತೀತಿ ಇದೆ ಎಂಬ ವಿಷಯದಲ್ಲಿ ಈ ಜ್ಞಾನವೇ ಪ್ರಮಾಣ ಎಂದಾಯಿತು.

**ಭಾವವಿಲಾಸಿನೀ**–ನನ್ವಸತಃ ಪ್ರತೀತೌ ಕಿಂ ಪ್ರಮಾಣಮಿತ್ಯತ ಆಹ ॥ **ಅಸತ್ಪ್ರತೀತಾವಿತಿ** ॥ ಇಯಮಿದಂ ರಜತಮಿತ್ಯಾದಿರೂಪಾ । ತದುಪಪಾದಯತಿ ॥ **ಅತ್ರೇತಿ** ॥ ಯದ್ಯಸ್ಮಾದತ್ರ ಪುರೋವರ್ತಿದೇಶೇ ಪ್ರತೀತಂಮೂರ್ತಂ ರಜತಸರ್ಪಾದಿವಿಭುತ್ವರಹಿತಮಿತ್ಯರ್ಥಃ । ಅನ್ಯತ್ರ ದೇಶಾಂತರೇನ । ಅತ್ರ ಚ ಪುರೋವರ್ತಿದೇಶೇ ಚ ನೇತಿ ಯೋಜನಾ । ನೇದಂ ರಜತಮಿತಿ ಬಾಧಕಾದತ್ರ ನ । ಅತ್ರ ಪ್ರತೀಯಮಾನಮೂರ್ತತ್ವರೂಪಬಾಧಕಾತ್ ಅನ್ಯತ್ರ ನ । ಘಟಾದಿಮೂರ್ತದ್ರವ್ಯೇಷು- ತಥಾ ದರ್ಶನಾದಿತಿ ಭಾವಃ ॥ ೫೦೦ ॥

**ವಿವರಣೆ–** ಭ್ರಮದ ಸ್ಥಳದಲ್ಲಿ ಕಾಣುವ ಬೆಳ್ಳಿಯು ಅಸತ್ ಎಂದು ಎರಡು ಅನುಮಾನಗಳಿಂದ ಸಿದ್ಧವಾಗುತ್ತದೆ. ಅದು ಹೀಗೆ - 1) ಪ್ರತೀಯಮಾನಂ ರಜತಂ ಪುರೋ ನ 'ನೇದಂ ರಜತಂ' ಇತಿ ಬಾಧಾತ್ ವ್ಯತಿರೇಕೇಣ ಘಟವತ್ 2) ಪ್ರತೀಯಮಾನಂ ರಜತಂ ಅನ್ಯತ್ರ ನ ಅತ್ರ ಪ್ರತೀಯಮಾನತ್ವೇ ಸತಿ ಮೂರ್ತತ್ವಾತ್ ಅನ್ವಯೇನ ಘಟವತ್.

1) ಘಟವನ್ನು ಕಾಣುತ್ತೇವೆ. ಅಲ್ಲಿ ಬಾಧವಿಲ್ಲದಿದ್ದ ಪ್ರಸಂಗದಲ್ಲಿ ಅದು ಎದುರಿನಲ್ಲಿದೆ. ಪ್ರಕೃತದಲ್ಲಿ 'ಇದು ಬೆಳ್ಳಿಯಲ್ಲ' ಎಂದು ಬಾಧವಿರುವುದರಿಂದ ಕಂಡ ಬೆಳ್ಳಿ ಎದುರಿನಲ್ಲಿಲ್ಲ.

2) ಎದುರಿನಲ್ಲಿ ಮಡಿಕೆಯನ್ನು ಕಾಣುತ್ತೇವೆ. ಅದು ಎದುರಿನಲ್ಲಿ ಇದೆ ಹೊರತಾಗಿ ಬೇರೆಯ ಸ್ಥಳದಲ್ಲಿ ಇಲ್ಲ. ವಿಭುವಾದ ಪರಮಾತ್ಮನೋ, ಆಕಾಶವೋ ಇಲ್ಲಿ ಇದ್ದರೂ

ಬೇರೆಯ ಸ್ಥಳದಲ್ಲೂ ಇದೆ. ಆದರೆ ವಿಭುವಲ್ಲದ ಮಡಿಕೆ ಮುಂತಾದದ್ದು ಹಾಗಲ್ಲ. ಅದರಂತೆ ಬೆಳ್ಳಿಯನ್ನು ನಾವು ಎದುರಿನಲ್ಲಿ ಕಾಣುತ್ತಿದ್ದೇವೆ. ಅದು ಬೇರೆಯ ಸ್ಥಳದಲ್ಲಿ ಹೇಗೆ ಇರಲು ಸಾಧ್ಯ? ಇಷ್ಟೇ ವ್ಯತ್ಯಾಸ - ಆ ಮಡಿಕೆಯು ಬೇರೆಯ ಕಡೆ ಇಲ್ಲದಿದ್ದರೂ ಇಲ್ಲಿ ಇದೆ. ಬೆಳ್ಳಿಯು ಬೇರೆಯ ಸ್ಥಳದಲ್ಲೂ ಇಲ್ಲ, ಇಲ್ಲಿಯೂ ಇಲ್ಲ.

ಆದ್ದರಿಂದ 'ಇದಂ ರಜತಂ' ಎಂದು ಪ್ರತೀತವಾದ ಬೆಳ್ಳಿ 'ಅಸತ್' ಆಗಿದೆ. ಮತ್ತೊಂದು ರೀತಿಯಿಂದ ಅಸತ್ತಿನ ಪ್ರತೀತಿಯನ್ನು ಉಪಪಾದಿಸುತ್ತಿದ್ದಾರೆ -

**ಕಿಂಚ ರೂಪ್ಯಸ್ಯ ಶುಕ್ತೇಶ್ಚ ತಾದಾತ್ಮ್ಯಮಸದೀಕ್ಷ್ಯತೇ ।**
**ನ ಚೇತ್ ಪ್ರವೃತ್ತಿರಭಿಲಾಪೋ ವಾ ತತ್ರ ಕಥಂ ನೃಣಾಮ್ ॥ ೫೦೧ ॥**

**ಅರ್ಥ–** ಕಿಂಚ = ಅಷ್ಟೇ ಅಲ್ಲದೇ, ರೂಪ್ಯಸ್ಯ = ಬೆಳ್ಳಿಗೆ, ಚ = ಮತ್ತು ಶುಕ್ತೇಃ = ಕಪ್ಪೆಚಿಪ್ಪಿಗೂ, ಅಸತ್ = ಇಲ್ಲದ, ತಾದಾತ್ಮ್ಯಂ = ಅಭೇದರೂಪವಾದ ಸಂಬಂಧವು, ಈಕ್ಷ್ಯತೇ = ಕಾಣಲ್ಪಡುತ್ತದೆ. ನ ಚೇತ್ = ಅಸತ್ತಿನ ಪ್ರತೀತಿ ಇಲ್ಲದಿದ್ದಲ್ಲಿ, ತತ್ರ = ಆ ಭ್ರಮದ ಸ್ಥಳದಲ್ಲಿ, ನೃಣಾಂ = ಜನರಿಗೆ, ಪ್ರವೃತ್ತಿಃ = ಪ್ರವೃತ್ತಿಯು, ವಾ = ಅಥವಾ, ಅಭಿಲಾಷಃ= ಶಬ್ದೋಚ್ಚಾರಣೆಯು, ಕಥಂ = ಹೇಗೆ?

**ಅನುವಾದ–** ಅದೂ ಅಲ್ಲದೇ ಇದಂ ರಜತಂ ಎಂಬ ಭ್ರಮಸ್ಥಳದಲ್ಲಿ ಶುಕ್ತಿ ಮತ್ತು ರಜತಗಳಿಗೆ ತಾದಾತ್ಮ್ಯವು ತೋರುತ್ತದೆ. ರಜತತಾದಾತ್ಮ್ಯವು ಶುಕ್ತಿಯಲ್ಲಿ ತೋರದಿದ್ದರೆ, ಶುಕ್ತಿಯಲ್ಲಿ ಪ್ರವೃತ್ತಿ ಮತ್ತು ಇದಂ ರಜತಂ ಎಂಬ ವ್ಯವಹಾರವು ಹೇಗೆ ಉಂಟಾಗುವುದಕ್ಕೆ ಸಾಧ್ಯ?

**ಭಾವವಿಲಾಸಿನೀ–**ಪ್ರಕಾರಾಂತರೇಣಾತ್ಯಸತ್ಪ್ರತೀತಿಮುಪಪಾದಯತಿ ಕಿಂಚೇತಿ ನಚೇನ್ನೇಕ್ಷ್ಯತೇ ಚೇತ್ಪ್ರವೃತ್ತಿಃ ಶುಕ್ತೌ । ಅಭಿಲಾಪಃ ಇದಂ ರಜತಮಿತ್ಯಾದಿರೂಪಃ ॥ ೫೦೧ ॥

**ವಿವರಣೆ–** ಬೇರೆ ರೀತಿಯಿಂದಲೂ ಅಸತ್ತಿಗೆ ಈ ಶ್ಲೋಕದಲ್ಲಿ ಪ್ರತೀತಿಯನ್ನು ಉಪಪಾದನೆ ಮಾಡುತ್ತಾರೆ. ಇದಂ ರಜತಂ ಎಂಬ ಜ್ಞಾನ ಬಂದವನು ಶುಕ್ತಿಯಲ್ಲಿ ಪ್ರವೃತ್ತಿಮಾಡುತ್ತಾನೆ. ರಜತಾರ್ಥಿಯಾದವನು ಶುಕ್ತಿಯಲ್ಲಿ ಪ್ರವೃತ್ತಿಮಾಡಬೇಕಾದರೆ ಅಲ್ಲಿ ರಜತ ತಾದಾತ್ಮ್ಯವು ತೋರಿರಲೇಬೇಕು. ಶುಕ್ತಿಯನ್ನು ತೋರಿಸಿ ಇದಂ ರಜತಂ ಎಂದು ಅಭೇದವ್ಯವಹಾರವನ್ನೂ ಮಾಡುತ್ತಾನೆ. ಆ ವ್ಯವಹಾರಕ್ಕೆ ಕಾರಣವಾಗಿ ಶುಕ್ತಿಯಲ್ಲಿ ರಜತಾಭೇದಜ್ಞಾನವನ್ನು ಒಪ್ಪಲೇಬೇಕು.

**ವ್ಯಾಶ್ರಯಸ್ಯಾಪಿ ರೂಪ್ಯಸ್ಯ ಶುಕ್ತ್ಯಭಿನ್ನತ್ವಧೀರ್ಭ್ರಮೇ ।**
**ನಚೇತ್ತರ್ಹಿ ಭವೇದ್ ರೂಪ್ಯಸ್ಮರಣಂ ಚ ಭ್ರಮಸ್ತವ ॥ ೫೦೨ ॥**

**ಅರ್ಥ–** (ಯದಿ = ಒಂದು ವೇಳೆ) ಭ್ರಮೇ = ಭ್ರಮದಲ್ಲಿ, ವ್ಯಾಶ್ರಯಸ್ಯಾಪಿ = ವ್ಯಧಿಕರಣವಾಗಿದ್ದರೂ (ಶುಕ್ತಿ ಇರುವ ಸ್ಥಳದಲ್ಲಿ ಇರದ, ಬೇರೆಯ ಸ್ಥಳದಲ್ಲಿರುವ), ರೂಪ್ಯಸ್ಯ = ಬೆಳ್ಳಿಯ, ಶುಕ್ತ್ಯಭಿನ್ನತ್ವಧೀಃ = ಕಪ್ಪೆಚಿಪ್ಪಿನ ಅಭೇದಜ್ಞಾನವು, ನ ಚೇತ್ = ಇಲ್ಲವಾದರೆ, ತರ್ಹಿ = ಹಾಗಿದ್ದಲ್ಲಿ, ತವ = ನಿನ್ನ ರೀತ್ಯಾ, ಭ್ರಮಃ = ಭ್ರಮವು, ರೂಪ್ಯಸ್ಮರಣಂ = ಬೆಳ್ಳಿಯ ಸ್ಮರಣೆಯು, ಭವೇತ್ = ಆದೀತು.

**ಅನುವಾದ–** ಭ್ರಮಸ್ಥಳದಲ್ಲಿ ಬೇರೆ ಅಧಿಕರಣದಲ್ಲಿರುವ ರೂಪ್ಯವು ಶುಕ್ತಿಅಭಿನ್ನವಾಗಿ ತೋರುತ್ತದೆ. ಶುಕ್ತ್ಯಭೇದವು ತೋರದಿದ್ದರೆ ಈ ರಜತಭ್ರಮವು ರಜತಸ್ಮರಣೆಯೇ ಆದೀತು.

**ಭಾವವಿಲಾಸಿನೀ–**ವ್ಯಾಶ್ರಯಸ್ಯ ವ್ಯಧಿಕರಣಸ್ಯ । ನಚೇಚ್ಛುಕ್ತ್ಯಭಿನ್ನತ್ವಧೀರ್ನ ಚೇತ್ । ಕೇವಲಂ ವ್ಯಧಿಕರಣಪ್ರಕಾರಕಧೀಶ್ಚೇದಿತ್ಯರ್ಥಃ ॥ ೫೦೨ ॥

**ವಿವರಣೆ–** ಬೇರೆ ಅಧಿಕರಣದಲ್ಲಿರುವ ರಜತವು ಶುಕ್ತಿದೇಶದಲ್ಲಿ ತೋರುತ್ತದೆ ಎಂಬುವುದು ತಾರ್ಕಿಕರ ಮತ. ಅವರು ಅಂಗಡಿಯಲ್ಲಿರುವ ರೂಪ್ಯವೇ ಈ ಸ್ಥಳದಲ್ಲಿ ತೋರುತ್ತದೆ ಎಂದು ಹೇಳುವವರು. ಆದರೂ ಆ ರಜತದಲ್ಲಿ ಶುಕ್ತಿಯ ಅಭೇದವು ತೋರುವುದೆಂದು ಹೇಳುತ್ತಾರೆ. ಶುಕ್ತಿಯ ಅಭೇದವು ತೋರದಿದ್ದರೆ ಇದಂ ರಜತಂ ಎಂಬ ಜ್ಞಾನವು ಕೇವಲ ರಜತಸ್ಮರಣೆಯ ರೂಪವಾಯಿತು. ಅದಕ್ಕೆ ಭ್ರಮತ್ವವು ಏಕೆ? ಇಲ್ಲದಿದ್ದ ಶುಕ್ತ್ಯಭೇದವು ತೋರಿದರೆ ಮಾತ್ರ ಅದು ಭ್ರಮವಾಗಬೇಕಷ್ಟೆ?

**ಪುರೋವರ್ತ್ಯುಲ್ಲೇಖಿನೀ ಚ ಯದಿ ವ್ಯಾಶ್ರಯಧೀರ್ಭ್ರಮಃ ।**
**ಇದಂ ಚ ರಜತಂ ಚೇತಿ ಶಾಬ್ದೀ ಧೀಃ ಸ್ಯಾತ್ತದಾ ಭ್ರಮಃ ॥ ೫೦೩ ॥**

**ಅರ್ಥ–** ಯದಿ = ಒಂದು ವೇಳೆ, ವ್ಯಾಶ್ರಯಧೀಃ = ವ್ಯಧಿಕರಣವಾದ ಬೆಳ್ಳಿಯ ಜ್ಞಾನವು, ಪುರೋವರ್ತ್ಯುಲ್ಲೇಖಿನೀ ಚ = ಎದುರಿನಲ್ಲಿರುವುದನ್ನೂ ಉಲ್ಲೇಖಿಸುತ್ತಿದೆ (ಆದ್ದರಿಂದ), ಭ್ರಮಃ = ಭ್ರಮೆ ಎಂದು ಹೇಳುವುದಾದರೆ, ತದಾ = ಆಗ, ಇದಂ = ಇದು, ಚ = ಮತ್ತು, ರಜತಂ ಚ = ಬೆಳ್ಳಿಯೂ (ಇದೆ), ಇತಿ = ಎಂದು, ಶಾಬ್ದೀ = ಶಬ್ದದಿಂದ ಹುಟ್ಟಿದ, ಧೀಃ = ಜ್ಞಾನವು, ಭ್ರಮಃ = ಭ್ರಮವು, ಸ್ಯಾತ್ = ಆದೀತು.

**ಅನುವಾದ–** ಪೂರೋವರ್ತಿಯನ್ನು ಉಲ್ಲೇಖಿಸುವ ವ್ಯಧಿಕರಣವಾದ ರಜತದ ಜ್ಞಾನವು ಭ್ರಮ ಎಂದು ಒಪ್ಪಿದರೆ, 'ಇದಂ ಚ ರಜತಂ ಚ' ಎಂಬ ಶಬ್ದದಿಂದ ಉಂಟಾಗುವ ಜ್ಞಾನವೂ ಭ್ರಮವಾಗಬೇಕಾದೀತು.

**ಭಾವವಿಲಾಸಿನೀ–**ಪುರೋವರ್ತ್ಯುಲ್ಲೇಖಿನೀ ಪುರೋವರ್ತಿಶುಕ್ತ್ಯಾದಿವಿಷಯಿಣೀ ವ್ಯಾಶ್ರಯಧೀರಿತಿ ಸಂಬಂಧಃ । ರಜತಸ್ಮೃತಿಸ್ತು ನ ತಥೇತಿ ಭಾವಃ । ದೂಷಣಮಾಹ – ಇದಂಚೇತಿ ॥ ಶಾಬ್ದೀ ಧೀರಿತ್ಯುಪಲಕ್ಷಣಮ್ । ರಜತಖಂಡಸ್ಯಾಪಿ ತತ್ರೈವ ಸತ್ತ್ವೇ ಚಾಕ್ಷುಷೀತ್ಯಪಿ ದ್ರಷ್ಟವ್ಯಮ್ ॥೫೦೩॥

**ವಿವರಣೆ–** ಇದಂ ರಜತಂ ಎಂಬ ಜ್ಞಾನದಲ್ಲಿ ರಜತತಾದಾತ್ಮ್ಯವು ಶುಕ್ತಿಯಲ್ಲಿ ತೋರದಿದ್ದರೆ, ಶುಕ್ತಿಯು ತೋರುತ್ತದೆ ಮತ್ತು ವ್ಯಧಿಕರಣವಾದ ರಜತವು ತೋರುತ್ತದೆ ಎಂದಾಯಿತು. ಅವುಗಳಿಗೆ ಅಭೇದವು ಗೋಚರಿಸುವುದಿಲ್ಲ ಎಂದು ಹೇಳಿದರೆ, 'ಇದಂ ಚ ರಜತಂ ಚ' ಎಂಬ ವಾಕ್ಯದಿಂದ ಬರುವ ಶಾಬ್ದಬೋಧದಲ್ಲಿ ವ್ಯಧಿಕರಣವಾದ ರಜತದ ಉಲ್ಲೇಖವೂ ಮತ್ತು ಅಲ್ಲೇ ಇರುವ ಶುಕ್ತಿಯ ಉಲ್ಲೇಖವೂ ಇರುವುದರಿಂದ ಅದೂ ಭ್ರಾಂತಿಯಾಗಲಿ ಎಂಬ ಆಪತ್ತಿ ಬರುತ್ತದೆ. ಅಲ್ಲದೆ ಶುಕ್ತಿದೇಶದಲ್ಲಿಯೇ ರಜತವೂ ವಾಸ್ತವವಾಗಿ ಇದ್ದರೆ 'ಇದಂ ಚ ರಜತಂ ಚ' ಎಂಬ ಚಾಕ್ಷುಷ ಜ್ಞಾನವೂ ಭ್ರಮವಾಗಲಿ ಎಂಬ ಆಪತ್ತಿಯೂ ಬರುತ್ತದೆ. ಅಲ್ಲದೆ ಶುಕ್ತಿದೇಶದಲ್ಲಿಯೇ ಇದ್ದರೆ, ಇದಂ ಚ ರಜತಂ ಚ ಎಂಬ ಚಾಕ್ಷುಷಜ್ಞಾನವು ಬರಲಿ ಎಂಬ ಆಪತ್ತಿಯನ್ನೂ ಇಟ್ಟುಕೊಳ್ಳಬೇಕು.

**ಅಸಂಸರ್ಗಾಗ್ರಹಂ ಚಾಪಿ ಯದಿ ಭ್ರಾಂತಾವಪೇಕ್ಷಸೇ ।**
**ತದಾ ಮೀಮಾಂಸಕಾಚಾರ್ಯಸ್ಯಾಂತೇವಾಸಿತ್ವಮಪ್ಯಭೂಃ ॥ ೫೦೪ ॥**

**ಅರ್ಥ–** ಯದಿ = ಒಂದು ವೇಳೆ, ಭ್ರಾಂತೌ = ಭ್ರಮದ ಸ್ಥಳದಲ್ಲಿ, ಅಸಂಸರ್ಗಾಗ್ರಹಂ ಚ ಅಪಿ = ಅಸಂಬಂಧದ ಅಜ್ಞಾನವನ್ನೂ, ಅಪೇಕ್ಷಸೇ = ಬಯಸುವಿ ಎಂದಾದರೆ, ತದಾ = ಆಗ, ತ್ವಂ ಅಪಿ = ನೀನೂ ಕೂಡ, ಮೀಮಾಂಸಕಾಚಾರ್ಯಸ್ಯ = ಮೀಮಾಂಸಕಾಚಾರ್ಯನಾದ ಪ್ರಭಾಕರನ, ಅಂತೇವಾಸೀ = ಶಿಷ್ಯನು, ಅಭೂಃ = ಆಗಿರುವೆ.

**ಅನುವಾದ– ಭ್ರಾಂತಿಯಲ್ಲಿ ಶುಕ್ತಿಯ ಜ್ಞಾನ, ರಜತದ ಸ್ಮರಣೆ ಮತ್ತು ಅವುಗಳ ಅಸಂಸರ್ಗದ ಅಗ್ರಹ, ಮೂರೂ ಬೇಕೆಂದು ಹೇಳಿದರೆ ನೀನು ಮೀಮಾಂಸಕಾಚಾರ್ಯನ ಶಿಷ್ಯನಾಗುತ್ತೀಯೆ.**

**ಭಾವವಿಲಾಸಿನೀ–ಪಕ್ಷಾಂತರಮಾಶಂಕ್ಯ ದೂಷಯತಿ – ಅಸಂಸರ್ಗೇತಿ ॥ ಅಸ್ಮಿನ್ ಪಕ್ಷೇ ಮೀಮಾಂಸಕಮತಪ್ರವೇಶಾಪತ್ತಿರಿತಿ ಭಾವಃ ॥ ೫೦೪ ॥**

**ವಿವರಣೆ–** ಮೀಮಾಂಸಕರು ಇದಂ ರಜತಂ ಎಂಬ ಸ್ಥಳದಲ್ಲಿ ಶುಕ್ತಿಯ ಪ್ರತ್ಯಕ್ಷ, ರಜತದ ಸ್ಮರಣೆ ಮತ್ತು ಶುಕ್ತಿ ರಜತಗಳ ಮತ್ತು ಅವುಗಳ ಜ್ಞಾನಗಳ ಅಸಂಸರ್ಗ ಅಗ್ರಹ ಇಷ್ಟು ಸಾಮಗ್ರಿ ಇದೆ ಎಂದು ಹೇಳುತ್ತಾರೆ. ನೈಯಾಯಿಕರೂ ಸಹ ಹಾಗೆಯೇ ಒಪ್ಪಿದರೆ, ಮೀಮಾಂಸಕಮತವನ್ನು ಒಪ್ಪಿದಂತಾಗುತ್ತದೆ.

**ಯದಾ ಕ್ಷೀರಸ್ಥನೀರಸ್ಯ ಕ್ಷೀರೇಣೈಕ್ಯಂ ಪ್ರತೀಯತೇ ।**
**ತದಾ ತಾದಾತ್ಮ್ಯಮಾತ್ರಸ್ಯಾಸತ್ತ್ವಂ ತೇ ದ್ವೇ ಚ ನಾಽಸತೀ ॥ ೫೦೫ ॥**

**ಅರ್ಥ–** ಯದಾ = ಯಾವಾಗ, ಕ್ಷೀರಸ್ಥನೀರಸ್ಯ = ಹಾಲಿನಲ್ಲಿರುವ ನೀರಿಗೆ, ಕ್ಷೀರೇಣ = ಹಾಲಿನಿಂದ, ಐಕ್ಯಂ = ಅಭೇದವು, ಪ್ರತೀಯತೇ = ತಿಳಿಯಲ್ಪಡುತ್ತದೆಯೋ, ತದಾ = ಆಗ,

ತಾದಾತ್ಮ್ಯಮಾತ್ರಸ್ಯ = ಅಭೇದಕ್ಕೆ ಮಾತ್ರ, ಅಸತ್ತ್ವಂ = ಅಸತ್ವವು ಇದೆ, ತೇ ದ್ವೇ ಚ = ಆ ಹಾಲು ಮತ್ತು ನೀರು ಎರಡೂ ಕೂಡ, ನ ಅಸತೀ = ಅಸತ್ತಲ್ಲ.

**ಅನುವಾದ–** ನೀರು ಮತ್ತು ಹಾಲುಗಳಿಗೆ ಮಿಶ್ರಣವುಂಟಾದಾಗ ನೀರಿನಲ್ಲಿ ಹಾಲಿನ ಐಕ್ಯವು ತೋರುತ್ತದೆ. ಅಲ್ಲಿ ಈ ತಾದತ್ಮ್ಯವು ಮಾತ್ರ ಅಸತ್. ಏಕೆಂದರೆ, ನೀರು ಮತ್ತು ಹಾಲುಗಳು ಅಲ್ಲಿಯೇ ಇರುವುದರಿಂದ ಅವೆರಡೂ ಸತ್ಯವಾಗಿವೆ.

**ಭಾವವಿಲಾಸಿನೀ–ಭ್ರಮವಿಶೇಷಣೀಭೂತರಜತಾದಿರಪ್ಯಸದೇವೇತಿ ಪ್ರಾಯಿಕೀ ವ್ಯಾಪ್ತಿಃ ಕ್ವಚಿದಪವಾದೋಽಪ್ಯಸ್ತೀತ್ಯಾಹ –ಯದೇತಿ ॥ ತೇ ದ್ವೇ ಕ್ಷೀರನೀರೇ ॥ ೫೦೫ ॥**

**ವಿವರಣೆ–** ರಜತಾದಿ ಭ್ರಮವು ಬಂದಾಗ ಭ್ರಮದಲ್ಲಿ ವಿಶೇಷಣವಾಗಿ ತೋರುವ ರಜತಾದಿಗಳು ಅಸತ್ ಎಂಬುದು ಪ್ರಾಯಿಕವಾದದ್ದು. ಕೆಲವೊಮ್ಮೆ ಭ್ರಮದಲ್ಲಿ ತೋರುವ ವಿಶೇಷಣವೂ ಸತ್ಯವಾಗಬಹುದು. ಉದಾಹರಣೆ ಹಾಲಿನಲ್ಲಿ ಮಿಶ್ರಿತವಾದ ನೀರಿನ ಐಕ್ಯವು ತೋರುವುದು. ಇಲ್ಲಿ ಕ್ಷೀರವಾಗಲೀ ಜಲವಾಗಲೀ ಅಸತ್ ಅಲ್ಲ. ಇಲ್ಲಿ ತೋರುವ ತಾದಾತ್ಮ್ಯವೇ ಅಸತ್ತಾಗಿಯೇ ಇದೆ. ಆದ್ದರಿಂದ ಅಸತ್ತಿಗೂ ಜ್ಞಾನವಿಷಯತ್ವವನ್ನು ಅಂಗೀಕಾರ ಮಾಡಬೇಕೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ.

**ಯತಃ ಕ್ಷೀರಂ ಚ ತತ್ರಾಸ್ತಿ ನೀರಂ ಚಾಸ್ತಿ ನಿಗೂಹಿತಮ್ ।**
**ಅತಸ್ತಾದಾತ್ಮ್ಯಮಾತ್ರಸ್ಯಾಸತ್ತ್ವಂ ತತ್ರ ತಯೋಸ್ತು ನ ॥ ೫೦೬ ॥**

**ಅರ್ಥ–** ಯತಃ = ಯಾವ ಕಾರಣದಿಂದ, ತತ್ರ = ಆ ಪಾತ್ರೆಯಲ್ಲಿ, ಕ್ಷೀರಂ = ಹಾಲು, ಅಸ್ತಿ = ಇದೆ, ಚ = ಮತ್ತು, ನಿಗೂಹಿತಂ = ಅಡಗಿದ, ನೀರಂಚ = ನೀರೂ ಕೂಡ, ಅಸ್ತಿ = ಇದೆ. ಅತಃ = ಆ ಕಾರಣದಿಂದ, ತತ್ರ = ಆ ಭ್ರಮೆಯಲ್ಲಿ (ತೋರಿದ), ತಾದಾತ್ಮ್ಯಮಾತ್ರಸ್ಯ = ಕೇವಲ ಅಭೇದರೂಪವಾದ ಸಂಬಂಧಕ್ಕೆ, ಅಸತ್ತ್ವಂ = ಮಿಥ್ಯಾತ್ವ ಇದೆ, ತಯೋಃ ತು = ಆ ಹಾಲು ಮತ್ತು ನೀರಿಗೆ ಆದರೋ ಅಸತ್ತ್ವಂ = ಮಿಥ್ಯಾತ್ವವು, ನ = ಇಲ್ಲ.

**ಅನುವಾದ–** ಏಕೆಂದರೆ, ಅಲ್ಲಿ ಕ್ಷೀರವೂ ಇದೆ ಮತ್ತು ನೀರವೂ ನಿಗೂಢವಾಗಿದೆ. ಆದ್ದರಿಂದ ತಾದಾತ್ಮ್ಯವು ಮಾತ್ರ ಅಸತ್ತಾಗಿದೆ. ನೀರ ಮತ್ತು ಕ್ಷೀರಗಳಿಗೆ ಅಸತ್ವವಿಲ್ಲ.

**ಭಾವವಿಲಾಸಿನೀ–ಅತಃ ಕ್ಷೀರನೀರಯೋಃ ಪ್ರತಿಯೋಗ್ಯನುಯೋಗಿನೋಸ್ಸತ್ತ್ವಾತ್ ತತ್ಕೈತಾದೃಶ-ಸ್ಥಲೇ ತಯೋಃ ಪ್ರತಿಯೋಗ್ಯನುಯೋಗಿನೋಃ ನ । ಅಸತ್ತ್ವಂ ನೇತ್ಯರ್ಥಃ ॥ ೫೦೬ ॥**

**ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಮೇಯವನ್ನೇ ಈ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾರೆ-**

**ಯದಿ ತಾದಾತ್ಮ್ಯವತ್ತಸ್ಯ ಪ್ರತಿಯೋಗೀ ಚ ತತ್ರ ನ ।**
**ತದಾ ತಸ್ಯಾಪಿ ಚಾಸತ್ತ್ವಮಿತಿ ತತ್ತ್ವವಿದೋ ವಿದುಃ ॥ ೫೦೭ ॥**

**ಅರ್ಥ–** ಯದಿ = ಒಂದು ವೇಳೆ, ತಾದಾತ್ಮ್ಯವತ್ = ಅಭೇದದಂತೆ, ತತ್ರ = ಎದುರಿನಲ್ಲಿ ಪ್ರತಿಯೋಗೀ ಚ = ತಾದಾತ್ಮ್ಯ ಪ್ರತಿಯೋಗಿಯೂ ಕೂಡ (ಬೆಳ್ಳಿ ಮೊದಲಾದುದು) ನ = ಇಲ್ಲವಾದರೆ, ತದಾ = ಆಗ, ತಸ್ಯಾಪಿ = ಆ ಪ್ರತಿಯೋಗಿಗೂ, ಅಸತ್ತ್ವಂ = ಮಿಥ್ಯಾತ್ವವು, ಇತಿ = ಎಂದು, ತತ್ತ್ವವಿದಃ = ತತ್ತ್ವಜ್ಞಾನಿಗಳು, ವಿದುಃ = ತಿಳಿದಿದ್ದಾರೆ.

**ಅನುವಾದ– ಭ್ರಮದಲ್ಲಿ ತೋರುವ ತಾದಾತ್ಮ್ಯದಂತೆ ತಾದಾತ್ಮ್ಯ ಪ್ರತಿಯೋಗಿಯೂ ಪುರೋವರ್ತಿದೇಶದಲ್ಲಿ ಇಲ್ಲದಿದ್ದರೆ, ಆಗ ಕೇವಲ ತಾದಾತ್ಮ್ಯಕ್ಕೆ ಅಲ್ಲ, ತಾದಾತ್ಮ್ಯದ ಪ್ರತಿಯೋಗಿಗೂ ಅಸತ್ತ್ವವಿದೆ ಎಂದು ತತ್ತ್ವವಾದಿಗಳ ಮತ.**

**ಭಾವವಿಲಾಸಿನೀ–**ತರ್ಹಿ ಕುತ್ರ ಪ್ರತಿಯೋಗ್ಯಸನ್ನಿತ್ಯತ ಆಹ – **ಯದೀತಿ** ॥ ತತ್ರ ಯತ್ರ ಪ್ರತೀತಿಸ್ತಸ್ಮಿನ್ ದೇಶೇ । ತಸ್ಯಾಪಿ ಪ್ರತಿಯೋಗಿನೋಽಪಿ ॥ ೫೦೭ ॥

**ವಿವರಣೆ–** ನೀರು ಹಾಲುಗಳ ಮಿಶ್ರಣದಲ್ಲಿ ಇದಂ ಕ್ಷೀರಂ ಎಂಬ ಭ್ರಮೆಯು ಬಂದಾಗ ಅಲ್ಲಿ ನೀರು ಮತ್ತು ಹಾಲುಗಳು ಎರಡೂ ಇರುವುದರಿಂದ ತಾದಾತ್ಮ್ಯವು ಮಾತ್ರ ಅಸತ್. ಆದರೆ ಇದಂ ರಜತಂ ಎಂಬ ರಜತಭ್ರಮಸ್ಥಳದಲ್ಲಿ ರಜತ ತಾದಾತ್ಮ್ಯವು ಶುಕ್ತಿಯಲ್ಲಿ ತೋರುತ್ತದೆ. ಪುರೋವರ್ತಿದೇಶದಲ್ಲಿ ರಜತವೂ ಇಲ್ಲ. ಆದ್ದರಿಂದ ಅಲ್ಲಿ ತಾದಾತ್ಮ್ಯವೂ ಅಸತ್ತಾಗಿದೆ ಮತ್ತು ತಾದಾತ್ಮ್ಯಪ್ರತಿಯೋಗಿಯಾದ ರಜತವೂ ಅಸತ್ತಾಗಿಯೇ ಇದೆ.

**ಅತಃ ಸತಾ ಸಂವಲಿತಮಸಚ್ಚೇಕ್ಷ್ಯಂ ನ ಸಂಶಯಃ ।**
**ಅಧಿಷ್ಠಾನಸ್ಯ ಚಾಸತ್ತ್ವಂ ಯೋ ವದೇನ್ನ ಸ ಯುಕ್ತಿಮಾನ್ ॥ ೫೦೮ ॥**

**ಅರ್ಥ–** ಅತಃ = ತಾದಾತ್ಮ್ಯ ಅಥವಾ ತಾದಾತ್ಮ್ಯ ಮತ್ತು ಪ್ರತಿಯೋಗಿಗಳಿಗೆ ಮಾತ್ರ ಅಸತ್ತ್ವವನ್ನು ಹೇಳಿದ್ದರಿಂದ, ಅಸತ್ = ಇಲ್ಲದ್ದು, ಸತಾ = ಇರುವ ವಸ್ತುವಿನಿಂದ, ಸಂವಲಿತಂ = ಕೂಡಿದ್ದಾಗಿ, ಈಕ್ಷ್ಯತೇ = ತಿಳಿಯಲ್ಪಡುತ್ತದೆ, ನ ಸಂಶಯಃ = ಇದರಲ್ಲಿ ಸಂದೇಹವಿಲ್ಲ. ಅಧಿಷ್ಠಾನಸ್ಯ ಚ = ಅಧಿಷ್ಠಾನಕ್ಕೂ, ಅಸತ್ತ್ವಂ = ಮಿಥ್ಯಾತ್ವವನ್ನು, ಯಃ = ಯಾವನು, ವದೇತ್ = ಹೇಳುವನೋ, ಸ = ಅವನು, ಯುಕ್ತಿಮಾನ್ = ಯುಕ್ತಿಯನ್ನು ಬಲ್ಲವನು, ನ=ಅಲ್ಲ.

**ಅನುವಾದ– ಆದ್ದರಿಂದ ಸತ್ ಪದಾರ್ಥದ ಜೊತೆಯಲ್ಲಿ ಸಂಬಂಧವನ್ನು ಹೊಂದಿದ ಅಸತ್ತಿಗೂ ಕೂಡ ಪ್ರತ್ಯಕ್ಷವಿಷಯತ್ವವಿದೆ ಎಂಬುದರಲ್ಲಿ ಸಂಶಯವಿಲ್ಲ. ಯಾವನು ಭ್ರಮದಲ್ಲಿ ತೋರುವ ಅಧಿಷ್ಠಾನಕ್ಕೂ ಅಸತ್ವವನ್ನು ಅಂಗೀಕಾರ ಮಾಡುತ್ತಾನೋ ಅವನು ಯುಕ್ತಿಶೂನ್ಯನಾದವನು.**

**ಭಾವವಿಲಾಸಿನೀ**—ಅತ ಉಕ್ತರೀತ್ಯಾ ತಾದಾತ್ಮ್ಯಪ್ರತಿಯೋಗಿನೋರೇವಾಸತ್ತ್ವಾದ್ ಅಧಿಷ್ಠಾನಸ್ಯ ಕ್ವಾಪ್ಯಸತ್ತ್ವಾಭಾವಾಚ್ಚ ಸತಾ ಸಂವಲಿತಂ ಮಿಶ್ರಿತಂ ಈಕ್ಷ್ಯಮೀಕ್ಷಿತುಂ ಯೋಗ್ಯಮ್ । ಅಧಿಷ್ಠಾನಾದೇಸ್ಸರ್ವಸ್ಯಾಪ್ಯಸತ್ತ್ವಂ ಯೋ ವಕ್ತಿ, ತಂ ದೂಷಯತಿ – ಅಧಿಷ್ಠಾನಸ್ಯೇತಿ ॥ ೫೦೮ ॥

**ವಿವರಣೆ**— ಹಿಂದೆ ಹೇಳಿದ ರೀತಿಯಲ್ಲಿ ತಾದಾತ್ಮ್ಯ ಮತ್ತು ಪ್ರತಿಯೋಗಿಗಳು ಮಾತ್ರವೇ ಅಸತ್ತಾಗಬಹುದು. ಭ್ರಾಂತಿಯ ಧರ್ಮಿಯು ಎಂದೂ ಅಸತ್ತಾಗಲಾರದು. ಸತ್‌ಪದಾರ್ಥದಿಂದ ಮಿಶ್ರಿತವಾದ ಅಸತ್ ಪದಾರ್ಥವೂ ಪ್ರತ್ಯಕ್ಷಕ್ಕೆ ವಿಷಯವಾಗುತ್ತದೆ ಎಂದು ಉಪಪಾದನೆ ಮಾಡಿದ್ದಾಯಿತು. ಯಾವನು ಭ್ರಾಂತಿಯಲ್ಲಿ ತೋರುವ ಅಧಿಷ್ಠಾನಕ್ಕೂ ಅಸತ್ವವನ್ನು ಅಂಗೀಕಾರ ಮಾಡುತ್ತಾನೆಯೋ ಅವನು ಬಾಧಕ್ಕೆ ಒಂದು ಅವಧಿಯನ್ನೇ ಅಂಗೀಕಾರ ಮಾಡದಿರುವುದರಿಂದ ಅನುಭವವಿರೋಧವನ್ನು ಹೊಂದಿದವನಾಗಿ ಯುಕ್ತಿಶೂನ್ಯನಾಗುತ್ತಾನೆ.

> ಇದಂತಾಧಾರಶುಕ್ತ್ಯಾದಿರ್ಯತಃ ಸರ್ವತ್ರ ಚಾರ್ಥಕೃತ್ ।
> ರೂಪ್ಯಾದಿರ್ನ ತಥಾ ತಸ್ಮಾತ್ತನ್ಮಾತ್ರಮಸದೀರ್ಯತೇ ॥
> ಯಥಾವಸ್ಥಿತಸರ್ವಾರ್ಥವಾದಿಭಿಸ್ತತ್ತ್ವವಾದಿಭಿಃ ॥ ೫೦೯ ॥

**ಅರ್ಥ**— ಯತಃ = ಯಾವ ಕಾರಣದಿಂದ, ಸರ್ವತ್ರ = ಎಲ್ಲ ಭ್ರಮಸ್ಥಳಗಳಲ್ಲಿಯೂ, ಇದಂತಾಧಾರಶುಕ್ತ್ಯಾದಿಃ = ಇದಂತ್ವಕ್ಕೆ ಆಧಾರವಾದ ಕಪ್ಪೆಚಿಪ್ಪು ಮೊದಲಾದದ್ದು, ಅರ್ಥಕೃತ್ = ಜ್ಞಾನ, ಪ್ರವೃತ್ತಿ ಮೊದಲಾದ ಕಾರ್ಯಗಳನ್ನು ಮಾಡಿಸುತ್ತದೆ, ರೂಪ್ಯಾದಿಃ = ಬೆಳ್ಳಿ ಮೊದಲಾದದ್ದು, ನ ತಥಾ = ಹಾಗಲ್ಲ, ತಸ್ಮಾತ್ = ಆ ಕಾರಣದಿಂದ, ತನ್ಮಾತ್ರಂ = (ಅರ್ಥಕ್ರಿಯಾಕಾರಿ ಅಲ್ಲದ) ಬೆಳ್ಳಿ ಮೊದಲಾದದ್ದು ಮಾತ್ರ, ಅಸತ್ = ಮಿಥ್ಯೆ (ಇತಿ = ಎಂದು), ಯಥಾವಸ್ಥಿತಸರ್ವಾರ್ಥವಾದಿಭಿಃ - ಯಥಾವಸ್ಥಿತ = ವಸ್ತುವು ಇರುವ ರೀತಿಯಲ್ಲಿಯೇ, ಸರ್ವ = ಎಲ್ಲ, ಅರ್ಥ = ವಸ್ತುವನ್ನು, ವಾದಿಭಿಃ = ಹೇಳುವ, ತತ್ತ್ವವಾದಿಭಿಃ = ತತ್ತ್ವವಾದಿಗಳಿಂದ, ಈರ್ಯತೇ = ಹೇಳಲ್ಪಡುತ್ತದೆ.

**ಅನುವಾದ**— ಇದಂ ರಜತಂ ಎಂಬ ಸ್ಥಳದಲ್ಲಿ ಇದಂತಾಶ್ರಯವಾದ ಶುಕ್ತಿಯು, ಶುಕ್ತಿಗೆ ಯೋಗ್ಯವಾದ ಅರ್ಥಕ್ರಿಯೆಯನ್ನು ಉಂಟುಮಾಡುತ್ತದೆ. ಪುರೋವರ್ತಿ ಅಭಿನ್ನವಾಗಿ ತೋರುವ ರಜತವು ರಜತಕ್ಕೆ ಯೋಗ್ಯವಾದ ಅರ್ಥಕ್ರಿಯೆಯನ್ನು ಉಂಟುಮಾಡುವುದಿಲ್ಲ. ಆದ್ದರಿಂದ ಶುಕ್ತಿಯು ಸತ್ ಮತ್ತು ರಜತವು ಅಸತ್ ಎಂದು ಇದ್ದುದೆಲ್ಲವನ್ನೂ ಇದ್ದಂತೆ ಹೇಳುವ ತತ್ತ್ವವಾದಿಗಳು ಹೇಳುತ್ತಾರೆ.

**ಭಾವವಿಲಾಸಿನೀ**—ಯತೋ ಯಸ್ಮಾತ್ । ಇದಂತಾಽಽಧಾರಶುಕ್ತ್ಯಾದಿರಿತ್ಯನೇನಾಧಿಷ್ಠಾನತ್ವಂ ಸ್ಫೋರಯತಿ । ಅರ್ಥಕೃದರ್ಥಕ್ರಿಯಾಕಾರೀ । ತಥಾ ಶುಕ್ತ್ಯಾದಿವದರ್ಥಕ್ರಿಯಾಕಾರೀ ತನ್ಮಾತ್ರಂ

ತಾದಾತ್ಮ್ಯಂ ತತ್ಪ್ರತಿಯೋಗಿಭೂತರಜತಾದಿಕಂ ಚ । ಮಾತ್ರಪದೇನಾಧಿಷ್ಠಾನಂ ವ್ಯಾವರ್ತಯತಿ । ಯಥಾವಸ್ಥಿತಸರ್ವಾರ್ಥವಾದಿಭಿರಿತ್ಯನೇನ ತತ್ತ್ವವಾದಿತ್ವಮುಪಪಾದಯತಿ ॥ ೫೦೯ ॥

**ವಿವರಣೆ–** ಶುಕ್ತಿಯು ಸತ್ ಮತ್ತು ರಜತವು ಮಾತ್ರ ಅಸತ್ ಎಂಬ ವಿಷಯವನ್ನು ಬೇರೆ ಯುಕ್ತಿಸಂಚಾರ ಮಾಡಿ ಸಮರ್ಥನೆ ಮಾಡುತ್ತಾರೆ. ಯಾವುದು ಅರ್ಥಕ್ರಿಯಾಕಾರಿಯೋ ಅದು ಸತ್ಯವೆಂದು ಒಪ್ಪಬೇಕು. ಶುಕ್ತಿಯು ಅರ್ಥಕ್ರಿಯಾಕಾರಿ, ರಜತವು ಅರ್ಥಕ್ರಿಯಾಕಾರಿಯಲ್ಲ. ಆದ್ದರಿಂದ ಶುಕ್ತಿಯು ಮಾತ್ರ ಸತ್ಯ, ರಜತವು ಸತ್ಯವಲ್ಲ ಎಂದು ಅಭಿಪ್ರಾಯ.

**ಯದ್ಗುಣೋ ನ ಪ್ರಮಾಹೇತುರ್ದೋಷಾಭಾವಶ್ಚ ನೇಷ್ಯತೇ ।**
**ಅನಾಪ್ತತಾರ್ಕಿಕೋಕ್ತತ್ವಾದಾಪ್ತೋಕ್ತತ್ವಂ ಗುಣೋ ನ ತತ್ ॥ ೫೧೦ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಗುಣಃ = ವಿಷಯಸತ್ತ್ವಾದಿಗುಣವಾಗಲೀ, ಚ = ಮತ್ತು, ದೋಷಾಭಾವಃ = ದೋಷಾಭಾವವಾಗಲೀ, ಪ್ರಮಾಹೇತುಃ = ಯಥಾರ್ಥಜ್ಞಾನಕ್ಕೆ ಕಾರಣ ಎಂದು, ನ ಇಷ್ಯತೇ = ಅಭಿಮತವಾಗುವುದಿಲ್ಲವೋ, ತತ್ = ಆ ಕಾರಣದಿಂದ, ಅನಾಪ್ತತಾರ್ಕಿಕೋಕ್ತತ್ವಾತ್ - ಅನಾಪ್ತ = ಆಪ್ತನಲ್ಲದ, ತಾರ್ಕಿಕ = ನೈಯಾಯಿಕನಿಂದ, ಉಕ್ತತ್ವಾತ್ = ಹೇಳಲ್ಪಟ್ಟಿರುವುದರಿಂದ, ಆಪ್ತೋಕ್ತತ್ವಂ = ಆಪ್ತೋಕ್ತತ್ವವು, ಗುಣಃ ನ = (ಪ್ರಾಮಾಣ್ಯದಲ್ಲಿ) ಗುಣವಲ್ಲ.

**ಅನುವಾದ–** ಆದ್ದರಿಂದ ಪ್ರಮೆಯನ್ನು ಕುರಿತು ಗುಣವಾಗಲೀ, ದೋಷಾಭಾವವಾಗಲೀ ಕಾರಣವಲ್ಲ. ತಾರ್ಕಿಕರು ಶಬ್ದಪ್ರಾಮಾಣ್ಯಕ್ಕೆ ಆಪ್ತೋಕ್ತತ್ವರೂಪವು ಕಾರಣ ಎಂದು ಹೇಳುತ್ತಾರೆ. ತಾರ್ಕಿಕರು ಅನಾಪ್ತರಾದ್ದರಿಂದ ಅವರ ವಾಕ್ಯದಲ್ಲಿ ಆಪ್ತೋಕ್ತತ್ವರೂಪ ಗುಣವು ಇಲ್ಲ. ಆದ್ದರಿಂದ ಅದು ಪ್ರಮಾಣವಾಗುವುದಿಲ್ಲ.

**ಭಾವವಿಲಾಸಿನೀ–**ಯದರ್ಥಂ ಪ್ರಾಮಾಣ್ಯಸ್ವತಸ್ತ್ವಮುಕ್ತಮ್, ತದಿದಾನೀಮಾಹ **ಯದಿತಿ** ॥ ಗುಣೋಽರ್ಥಸತ್ತ್ವಾದಿರ್ದೋಷಾಭಾವಶ್ಚ ಪ್ರಮಾಹೇತುರ್ನೇಷ್ಯತ ಇತಿ ಸಂಬಂಧಃ । ತತ್ತಸ್ಮಾತ್ ಕಾರಣಾದ್ ಅನಾಪ್ತಸ್ತಾರ್ಕಿಕಸ್ತದುಕ್ತತ್ವಾದಾಪ್ತೋಕ್ತತ್ವಂ ವೇದೇ ನ ಗುಣ ಇತಿ ಸಂಬಂಧಃ ॥೫೧೦॥

**ವಿವರಣೆ–** ಪ್ರಾಮಾಣ್ಯಸ್ವತಸ್ತ್ವವನ್ನು ಇದುವರೆಗೆ ಉಪಪಾದನೆ ಮಾಡಿದ ಫಲವನ್ನು ಈಗ ಹೇಳುತ್ತಾರೆ. ಅರ್ಥಸತ್ತ್ವಾದಿಗಳು ಗುಣ. ಅಂತಹ ಗುಣವು ಮತ್ತು ದೋಷಾಭಾವವು ಪ್ರಮಾಣಹೇತು ಎಂದು ನಾವು ಅಂಗೀಕರಿಸುವುದಿಲ್ಲ. ಇದಕ್ಕೆ ವ್ಯಭಿಚಾರವನ್ನು ತೋರಿಸಿರುವುದರಿಂದ ಇದು ತಾರ್ಕಿಕರ ಮಾತಿನಿಂದ ಮಾತ್ರ ಪ್ರಾಪ್ತವಾಗುತ್ತದೆ. ತಾರ್ಕಿಕರು ಅನಾಪ್ತರು. ಆದ್ದರಿಂದ ಅವರ ವಾಕ್ಯದಲ್ಲಿ ಅವರೇ ಹೇಳುವ ಆಪ್ತೋಕ್ತತ್ವರೂಪವಾದ ಗುಣವು ಇಲ್ಲ. ಆದ್ದರಿಂದ ಅಪ್ರಮಾಣವಾದ ಅವರ ವಾಕ್ಯದಿಂದ

ಪ್ರಮೆಯನ್ನು ಕುರಿತು ಗುಣವಾಗಲೀ, ದೋಷಾಭಾವವಾಗಲೀ ಕಾರಣವೆಂದು ಸಿದ್ಧವಾಗುವುದಿಲ್ಲ.

**ತಸ್ಮಾನ್ನಿತ್ಯೈವ ವೇದಾಖ್ಯವಿದ್ಯಾ ವಿದ್ಯಾವತಾಂ ಮತೇ ।**
**ನಿತ್ಯಾಯಾಂ ಚ ಕಥಂ ದ್ವೈತಮದ್ವೈತಂ ಕಿಲ ತೇ ಪ್ರಿಯಮ್ ॥ ೫೧೧ ॥**

**ಅರ್ಥ–** ತಸ್ಮಾತ್ = ಈಶ್ವರನಿಂದ ರಚಿತವಲ್ಲದ ಕಾರಣದಿಂದ, ವಿದ್ಯಾವತಾಂ = ವಿದ್ಯಾವಂತರ, ಮತೇ = ಅಭಿಪ್ರಾಯದಲ್ಲಿ ವೇದಾಖ್ಯವಿದ್ಯಾ = ವೇದವೆಂಬ ವಿದ್ಯೆಯು, ನಿತ್ಯಾ ಏವ = ಹುಟ್ಟಿಲ್ಲದ್ದೇ ಆಗಿದೆ, ನಿತ್ಯಾಯಾಂ = ನಿತ್ಯವಾದ ಈ ವೇದದಲ್ಲಿ ದ್ವೈತಂ = (ಕೆಲವು ವೇದ ತತ್ತ್ವಾವೇದಕ, ಕೆಲವು ಅತತ್ತ್ವಾವೇದಕ ಎಂಬ) ಇಬ್ಬಂದಿತನವು, ಕಥಂ = ಹೇಗೆ, ಚ = ಮತ್ತು, ತೇ = ನಿನಗೆ, ಅದ್ವೈತಂ ಪ್ರಿಯಂ ಕಿಲ = ಅದ್ವೈತವು ಪ್ರಿಯವಷ್ಟೆ?

**ಅನುವಾದ– ಆದ್ದರಿಂದ ವಿದ್ವಾಂಸರ ಅಭಿಪ್ರಾಯದಲ್ಲಿ ವೇದವಿದ್ಯೆಯು ನಿತ್ಯವೇ ಆಗಿದೆ. ನಿತ್ಯವಾದ ವಿದ್ಯೆಯಲ್ಲಿ ಏಕೆ ಭೇದಗಳನ್ನು ಕಲ್ಪಿಸುತ್ತೀಯೆ? ನಿನಗೆ ಎಲ್ಲಾ ಕಡೆಗಳಲ್ಲಿಯೂ ಅಭೇದವೇ ಇಷ್ಟವಷ್ಟೇ.**

**ಭಾವವಿಲಾಸಿನೀ–**ತತೋಽಪಿ ಕಿಂ ಪ್ರಕೃತೇ? ಇತ್ಯತ ಆಹ – **ತಸ್ಮಾದಿತಿ** ॥ ತಸ್ಮಾದಾಪ್ತೋಕ್ತತ್ವಸ್ಯ ಗುಣತ್ವಾಭಾವಾತ್ । ನಿತ್ಯಾಯಾಂ ವೇದವಿದ್ಯಾಯಾಂ ದ್ವೈತಂ ತತ್ತ್ವಾವೇದಕತ್ವಾತತ್ತ್ವಾವೇದಕತ್ವಾಖ್ಯದ್ವಿಪ್ರಕಾರಕತ್ವಂ ಕಥಮ್? ನಿತ್ಯಾಯಾಮಿತ್ಯನೇನ ಪೌರುಷೇಯವಿದ್ಯಾಯಾಂ ವಿಪ್ರಲಮ್ಭಾದಿಮೂಲತ್ವಸಂಭವಾತ್ ಸ್ಯಾತ್ತಾದೃಶೀ ಕಲ್ಪನಾ । ಅಪೌರುಷೇಯತ್ವೇನಾದುಷ್ಟಾಯಾಂ ಶ್ರುತೌ ಕಥಮುಕ್ತಾ ಕಲ್ಪನೇತಿ ಸೂಚಯತಿ । ತೇ ತವ ಸರ್ವತ್ರ ದ್ವೈತಂ ಕಿಲ ಸರ್ವತ್ರ ಭೇದಮಸಹಮಾನೋ ವೇದೇ ಕಿಮರ್ಥಂ ವಾಕ್ಯಭೇದಂ ಕರೋಷೀತಿ ಭಾವಃ ॥ ೫೧೧ ॥

**ವಿವರಣೆ–** ಪ್ರಾಮಾಣ್ಯವು ಗುಣಾದಿಜನ್ಯವಲ್ಲವೆಂಬ ಪ್ರಮೇಯದಿಂದ ಉಂಟಾದ ಪ್ರಯೋಜನವನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ. ತಸ್ಮಾದ್ ಎಂದರೆ ಆಪ್ತೋಕ್ತತ್ವವು ಗುಣವಲ್ಲದ ಕಾರಣದಿಂದ ಎಂದು ಅರ್ಥ. ವೇದವಿದ್ಯೆಯು ನಿತ್ಯ ಎಂದು ಹೇಳುವುದರಿಂದ ಪೌರುಷೇಯವಿದ್ಯೆಯಾದರೆ ವಿಪ್ರಲಂಬಾದಿ ಮೂಲತ್ವವು ಸಂಭಾವ್ಯವಾದ್ದರಿಂದ ಅದು ಅಪ್ರಮಾಣವಾಗಬಹುದು. ಆದರೆ ನಿತ್ಯವಾದ ವಿದ್ಯೆಯು ಪುರುಷದೋಷಶೂನ್ಯವಾಗಿರುವುದರಿಂದ ಅದರಲ್ಲಿ ಯಾವ ದೋಷವೂ ಇಲ್ಲ. ಆದ್ದರಿಂದ ಸಮಗ್ರವಾದ ವೇದವೂ ಪ್ರಮಾಣವಾಗಬೇಕು. ಹೀಗಿರುವಾಗ ವೇದದ ಒಂದು ಭಾಗವನ್ನು ತತ್ತ್ವವೇದಕವೆಂದೂ ವೇದದ ಇನ್ನೊಂದು ಭಾಗವನ್ನು ಅತತ್ತ್ವವೇದಕವೆಂದೂ ವಿಭಾಗವನ್ನು ಮಾಡುವುದು ಎಲ್ಲ ಕಡೆಯಲ್ಲೂ ಅಭೇದವನ್ನೇ ಬಯಸುವ ನಿನಗೆ ಅನುಚಿತವಾದುದು ಎಂದು ತಾತ್ಪರ್ಯ.

**ತತ್ಸ್ವತಸ್ತ್ವೇನ ಸರ್ವತ್ರ ಪ್ರಾಮಾಣ್ಯಂ ಗೃಹ್ಯತೇ ಶ್ರುತೌ ।**
**ಪುಂದೋಷಮೂಲದೋಷಸ್ಯಾಭಾವಾತ್ತಚ್ಚ ನ ಚಾಲ್ಯತೇ ॥ ೫೧೨ ॥**

**ಅರ್ಥ–** ತತ್ = ಪ್ರಾಮಾಣ್ಯಸ್ವತಸ್ತ್ವವನ್ನು ಸಮರ್ಥಿಸಿರುವುದರಿಂದ, ಸ್ವತಸ್ತ್ವೇನ = ಪ್ರಾಮಾಣ್ಯಕ್ಕೆ ಸ್ವತಸ್ತ್ವ ಇರುವುದರಿಂದ, ಸರ್ವತ್ರ = ಎಲ್ಲಾ, ಶ್ರುತೌ = ವೇದದಲ್ಲಿಯೂ, ಪ್ರಾಮಾಣ್ಯಂ = ಪ್ರಾಮಾಣ್ಯವು, ಗೃಹ್ಯತೇ = ತಿಳಿಯಲ್ಪಡುತ್ತದೆ, ತತ್ ಚ= ಆ ಪ್ರಾಮಾಣ್ಯವು, ಪುಂದೋಷಸ್ಯ = ಪುರುಷನ ದೋಷದ, ಅಭಾವಾತ್ = ಇಲ್ಲದಿರುವಿಕೆಯಿಂದ, ನ ಚಾಲ್ಯತೇ = ಕಂಪಿಸುವುದಿಲ್ಲ.

**ಅನುವಾದ–** ಪ್ರಾಮಾಣ್ಯವು ಸ್ವತಃ ಆಗಿರುವ ಕಾರಣದಿಂದ ವೇದದಲ್ಲಿ ಸಾರ್ವತ್ರಿಕವಾಗಿ ಪ್ರಾಮಾಣ್ಯವು ಗೃಹೀತವಾಗುತ್ತದೆ. ಹಾಗೆ ಗೃಹೀತವಾದ ಪ್ರಾಮಾಣ್ಯವು ವೇದವು ಪುರುಷದೋಷನಿಬಂಧನ ದೋಷಶೂನ್ಯವಾದ ಕಾರಣದಿಂದ ಅಲುಗಾಡದೆ ಸ್ಥಿರವಾಗಿ ಉಳಿಯುತ್ತದೆ.

**ಭಾವವಿಲಾಸಿನೀ–** ನನು ನಿತ್ಯತ್ವೇಽಪಿ ವೇದಸ್ಯ ಕುತೋ ನಾತತ್ತ್ವಾವೇದಕತ್ವಮಿತ್ಯತಸ್ತದುಪಪಾದಯತಿ – ತದಿತಿ ॥ ತತ್ಪ್ರಾಮಾಣ್ಯಸ್ವತಸ್ತ್ವಸಮರ್ಥನಾತ್ ತ್ವಯಾಽಪ್ಯಂಗೀಕಾರಾತ್ ಸ್ವತಸ್ತ್ವೇನ ಪ್ರಾಮಾಣ್ಯಸ್ಯ ಸ್ವತಸ್ತ್ವೇನ ಸರ್ವತ್ರ ಶ್ರುತೌ ಪ್ರಾಮಾಣ್ಯಂ ಗೃಹ್ಯತ ಇತಿ ಸಂಬಂಧಃ । ತಚ್ಚ ಗೃಹೀತಂ ಪ್ರಾಮಾಣ್ಯಂ ಪುಂದೋಷಮೂಲದೋಷಸ್ಯ ಪುರುಷದೋಷನಿಬಂಧನ- ವಾಕ್ಯದೋಷಸ್ಯಾಭಾವಾದ್ ಅಪೌರುಷೇಯತಯಾ ತ್ವಯಾ ಮಯಾ ಚಾಂಗೀಕೃತಶ್ರುತಾವಭಾವಾನ್ನ ಚಾಲ್ಯತೇ ನಾಪೋದ್ಯತೇ । ದೋಷೈಕಾಪೋದ್ಯತ್ವಾತ್ ಪ್ರಾಮಾಣ್ಯಸ್ಯೇತಿ ಭಾವಃ ॥ ೫೧೨ ॥

**ವಿವರಣೆ–** ವೇದವು ನಿತ್ಯವಾದರೆ ಏಕೆ ಅತತ್ತ್ವಾವೇದಕವಾಗಬಾರದು ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಪ್ರಾಮಾಣ್ಯ ಸ್ವತಸ್ತ್ವವನ್ನು ಸಮರ್ಥನೆಮಾಡಿದ್ದರಿಂದ ವೇದದಲ್ಲಿ ಎಲ್ಲ ಕಡೆಯಲ್ಲಿಯೂ ಪ್ರಾಮಾಣ್ಯವನ್ನೇ ಅಂಗೀಕಾರ ಮಾಡಬೇಕು. ಉತ್ಸರ್ಗದಿಂದ ಪ್ರಾಪ್ತವಾಗಿ ಬಂದ ಪ್ರಾಮಾಣ್ಯವು ದೋಷದಿಂದ ಅಪವಾದವನ್ನು ಪಡೆಯುತ್ತದೆ. ಶಬ್ದದಲ್ಲಿ ದೋಷಗಳಾದರೋ ಪುರುಷನ ದೋಷದಿಂದ ಉಂಟಾಗುತ್ತವೆ. ವೇದದಲ್ಲಿ ವೇದವಾಕ್ಯವನ್ನು ರಚಿಸುವ ಪುರುಷನೇ ಇಲ್ಲದಿರುವುದರಿಂದ ದೋಷವು ಪ್ರಾಪ್ತವಾಗುವುದಿಲ್ಲ. ಆದ್ದರಿಂದ ಸ್ವತಃ ಪ್ರಾಮಾಣ್ಯದಿಂದ ಪ್ರಾಪ್ತವಾದ ಪ್ರಾಮಾಣ್ಯವು ಸ್ಥಿರವಾಗಿ ಉಳಿಯುತ್ತದೆ.

**ಅತತ್ತ್ವಾವೇದಕತ್ವೋಕ್ತಿರತೋ ವೇದೇ ನ ಶೋಭತೇ ।**
**ಅತತ್ತ್ವಾವೇದಕಸ್ತಸ್ಯ ಗುರುರೇವೇತಿ ಮೇ ಮತಿಃ ॥ ೫೧೩ ॥**

**ಅರ್ಥ–** ಅತಃ = ಎಲ್ಲ ವೇದದಲ್ಲೂ ಪ್ರಾಮಾಣ್ಯ ಇರುವುದರಿಂದ, ವೇದೇ = ವೇದದಲ್ಲಿ, ಅತತ್ತ್ವಾವೇದಕತ್ವೋಕ್ತಿಃ = ಅತತ್ತ್ವಾವೇದಕ ಎಂಬ ಮಾತು, ನ ಶೋಭತೇ =

ಶೋಭಿಸುವುದಿಲ್ಲ, ತಸ್ಯ = ವೇದವು, ಅತತ್ತ್ವಾವೇದಕ ಎಂದು ಹೇಳುವವನ, ಗುರುಃ ಏವ = ಗುರುವೇ, ಅತತ್ತ್ವಾವೇದಕಃ = ಅಯಥಾರ್ಥವನ್ನು ತಿಳಿಸುವವನು, ಇತಿ = ಎಂದು, ಮೇ = ನನ್ನ, ಮತಿಃ = ಅಭಿಪ್ರಾಯ.

**ಅನುವಾದ–** ಆದ್ದರಿಂದ ವೇದವನ್ನು ಅತತ್ತ್ವಾವೇದಕ ಎಂದು ಹೇಳುವ ಮಾತು ಎಂದೂ ಶೋಭಿಸುವುದಿಲ್ಲ. ಹಾಗೆ ಹೇಳುವ ಅವನ ಗುರುವೇ ಅತತ್ತ್ವಾವೇದಕ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–**ಅತ ಉಕ್ತರೀತ್ಯಾ ಸಕಲವೇದವಾಕ್ಯೇಷು ಪ್ರಾಮಾಣ್ಯಸ್ಯಾವಶ್ಯಕತ್ವಾತ್ । ಅತತ್ತ್ವಾವೇದಕತ್ವೋಕ್ತಿರಪ್ರಾಮಾಣ್ಯಾಪರಪರ್ಯಾಯಾತತ್ತ್ವಾವೇದಕತ್ವಕಥನಮ್ । ತರ್ಹ್ಯತತ್ತ್ವಾವೇದಕಂ ಕಿಂ ಸ್ಯಾತ್? ಇತ್ಯತಸ್ಸೋಪಹಾಸಮುತ್ತರಮಾಹ – **ಅತತ್ತ್ವಾವೇದಕ ಇತಿ।।** ತಸ್ಯ ಮಾಯಿನೋ ಗುರುರೇವಾತತ್ತ್ವಾವೇದಕಃ, ಅತತ್ತ್ವಸ್ಯ ಬಾಧಿತಸ್ಯ ಪ್ರಮೇಯಸ್ಯಾವೇದಕೋ ಬೋಧಕ ಇತಿ ಮೇ ಮತಿರಿತಿ ಸಂಬಂಧಃ ।। ೫೧೩ ।।

**ವಿವರಣೆ–** ಆದ್ದರಿಂದ ವೇದಗಳನ್ನು ತತ್ತ್ವಾವೇದಕ ಮತ್ತು ಅತತ್ತ್ವಾವೇದಕ ಎಂದು ಎರಡು ವಿಭಾಗವನ್ನು ಮಾಡಲು ಸಾಧ್ಯವಿಲ್ಲ. ಏಕೆಂದರೆ, ವೇದವು ಎಂದೂ ಅತತ್ತ್ವಾವೇದಕವಾಗುವುದಿಲ್ಲ. ಹಾಗಾದರೆ, ಅತತ್ತ್ವಾವೇದಕತ್ವವು ಎಲ್ಲಿ ಬರುತ್ತದೆ ಎಂದು ಕೇಳಿದರೆ, ನಿನ್ನ ಗುರುವಿನಲ್ಲಿಯೇ ಅತತ್ತ್ವಾವೇದಕತ್ವವಿದೆ ಎಂದು ಈ ಶ್ಲೋಕದಲ್ಲಿ ಪರಿಹಾಸ ಮಾಡುತ್ತಾರೆ.

**ಅಕಾಮಃ ಕಾಮ್ಯವಿಧಿನಾ ಕುತೋ ವಾ ನ ಪ್ರವರ್ತತೇ ।**
**ಲಿಙ್‌ಲೋಟ್‌ತವ್ಯಪ್ರತ್ಯಯಾಂತಪದೋಪೇತವಿಧೇರ್ಬಲಾತ್ ।। ೫೧೪ ।।**

**ಯದೀಷ್ಟಸಾಧನಂ ತಸ್ಯ ತನ್ನೇತ್ಯೇವಾಪ್ರವರ್ತಕಮ್ ।**
**ತರ್ಹ್ಯಾವಶ್ಯಕಮಿಷ್ಟಸ್ಯ ಹೇತುತ್ವಂ ಬೋಧಯೇದ್ಧಿ ಯತ್ ।**
**ತದೇವ ವಾಕ್ಯಂ ಮಾನಂ ಸ್ಯಾಲ್ಲೋಟಾ ಯುಕ್ತಂ ಲಟಾಪಿ ವಾ ।। ೫೧೫ ।।**

**ಅರ್ಥ–** ಲಿಙ್‌ಲೋಟ್‌ತವ್ಯಪ್ರತ್ಯಯಾಂತಪದೋಪೇತವಿಧೇಃ – ಲಿಙ್, ಲೋಟ್, ತವ್ಯ, ಎಂಬ ಪ್ರತ್ಯಯಾಂತ = ಪ್ರತ್ಯಯವೇ ಕೊನೆಯಲ್ಲುಳ್ಳ, ಪದ = ಪದದಿಂದ, ಉಪೇತ = ಕೂಡಿದ, ವಿಧೇಃ = ವಿಧಿಯ, ಬಲಾತ್ = ಬಲದಿಂದ, ಕಾಮ್ಯವಿಧಿನಾ = ಪುತ್ರ, ಸ್ವರ್ಗ ಮೊದಲಾದ ಫಲಗಳನ್ನು ಉದ್ದೇಶಿಸಿ ಹೊರಟ ವಿಧಿಗಳಿಂದ, ಅಕಾಮಃ = ಪುತ್ರ, ಸ್ವರ್ಗ ಮೊದಲಾದ ಆಸೆ ಇಲ್ಲದವನು, ಕುತಃ = ಯಾವ ಕಾರಣದಿಂದ, ನ ಪ್ರವರ್ತತೇ = ಪ್ರವರ್ತಿಸುವುದಿಲ್ಲ.

ಯದಿ = ಒಂದು ವೇಳೆ, ತಸ್ಯ = ಕಾಮನೆ ಇಲ್ಲದ ಆ ಪುರುಷನಿಗೆ, ತತ್ = ಆ ಯಾಗಾದಿಯು, ಇಷ್ಟಸಾಧನಂ ನ = ಇಷ್ಟವಾದದ್ದಕ್ಕೆ ಸಾಧನವಲ್ಲ, ಇತ್ಯೇವ = ಎಂಬ

ಕಾರಣದಿಂದಲೇ, ಅಪ್ರವರ್ತಕಮ್ = ಪ್ರವೃತ್ತಿಯನ್ನುಂಟು ಮಾಡುವುದಿಲ್ಲ , ಎಂದರೆ ತರ್ಹಿ = ಹಾಗಿದ್ದರೆ, ಯತ್ = ಯಾವ ವಾಕ್ಯವು, ಆವಶ್ಯಕಂ = ಅಗತ್ಯವಾದ, ಇಷ್ಟಸ್ಯ = ಇಷ್ಟಕ್ಕೆ, ಹೇತುತ್ವಂ = ಕಾರಣವನ್ನು, ಬೋಧಯೇತ್ = ತಿಳಿಸುತ್ತದೆಯೋ, ತತ್ ಏವ ವಾಕ್ಯಂ = ಅದೇ ವಾಕ್ಯವು, ಲೋಟಾ = 'ಲೋಟ್' ಲಕಾರದಿಂದ, ಯುಕ್ತಂ = ಕೂಡಿದ್ದು, ವಾ = ಅಥವಾ, ಲಟಾ = 'ಲಟ್' ಲಕಾರದಿಂದ, ಯುಕ್ತಂ = ಕೂಡಿದ್ದು, ಆದರೂ ಮಾನಂ ಸ್ಯಾತ್ = ಪ್ರಮಾಣವಾದೀತು.

**ಅನುವಾದ–** ಕಾಮರಹಿತನಾದವನು ಕಾಮ್ಯವಿಧಿಯಲ್ಲಿ ಏಕೆ ಪ್ರವೃತ್ತನಾಗುವುದಿಲ್ಲ? ಆ ವಾಕ್ಯದಲ್ಲಿ ಲಿಙ್‌ಲೋಟ್‌ತವ್ಯಪ್ರತ್ಯಯಗಳಿರುವುದರಿಂದ ಅದರ ಬಲದಿಂದ ಪ್ರವತ್ತನಾಗಲೇಬೇಕಾದೀತು. ಅಕಾಮನಾದವನಿಗೆ ಜ್ಯೋತಿಷ್ಟೋಮವು ಇಷ್ಟಸಾಧನವಾಗಿಲ್ಲವಾದ ಕಾರಣ ಆ ವಾಕ್ಯವು ಪ್ರವರ್ತಕವಾಗಿಲ್ಲ ಎಂದು ಹೇಳಿದರೆ, ಯಾವುದು ಇಷ್ಟಸಾಧನತ್ವವನ್ನು ಹೇಳುತ್ತದೆಯೋ ಅದೇ ಪ್ರವರ್ತಕವೆಂದು ಒಪ್ಪಿದಂತಾಯಿತು. ಇಷ್ಟಸಾಧನತ್ವವನ್ನು ಹೇಳುವ ವಾಕ್ಯದಲ್ಲಿ ಲಿಙ್ ಪ್ರತ್ಯಯವಿರಲಿ ಅಥವಾ ಲಟ್ ಪ್ರತ್ಯಯವಿರಲಿ ಅದು ಅಪ್ರಯೋಜಕವಾದುದು.

**ಭಾವವಿಲಾಸಿನೀ–**'ದ್ವಾ ಸುಪರ್ಣಾ' ಇತ್ಯಾದಿಸಿದ್ಧಾರ್ಥಬೋಧಕಶ್ರುತಿಪ್ರಾಮಾಣ್ಯ-ಸ್ಥೈರ್ಯಾಯ ಕಾರ್ಯತಾವಾದಿನ ಏವ ಮುಖೇನ ಸಿದ್ಧಾರ್ಥಬೋಧಕತ್ವೇನೈವ ಮಾನತ್ವಂ ವಾಚಯಿತುಮಾಹ – **ಅಕಾಮ ಇತ್ಯಾದಿನಾ ॥ ೫೧೪-೫೧೫ ॥**

**ವಿವರಣೆ–** ಇಲ್ಲಿ ಪ್ರಾಭಾಕರರ ಕಾರ್ಯತಾವಾದವನ್ನು ಖಂಡಿಸುತ್ತಾರೆ.

ಜ್ಯೋತಿಷ್ಟೋಮೇನ ವೇದದಲ್ಲಿ ಸ್ವರ್ಗಕಾಮೋಯಜೇತ ಎಂಬ ವಾಕ್ಯವಿದೆ. ಸ್ವರ್ಗಕಾಮನಾದವನು ಜ್ಯೋತಿಷ್ಟೋಮ ಯಾಗವನ್ನು ಮಾಡತಕ್ಕದ್ದು ಎಂದು ಅದರ ಅರ್ಥ. ಈ ವಾಕ್ಯವು ಯಾಗವನ್ನು ವಿಧಾನ ಮಾಡುತ್ತದೆ. ಯಜೇತ ಎಂಬಲ್ಲಿರುವ ಲಿಙ್ ಪ್ರತ್ಯಯವು ವಿಧಾಯಕವಾದುದು. ಅದು ಕಾರ್ಯತ್ವವನ್ನು ಹೇಳುತ್ತದೆ ಎಂದು ಪ್ರಾಭಾಕರರ ಅಭಿಪ್ರಾಯ. ಹೀಗಿರುವಾಗ ಕಾಮನೆಯಿರುವವನಂತೆ ಸ್ವರ್ಗಕಾಮನೆ ಇಲ್ಲದವನು ಏಕೆ ಜ್ಯೋತಿಷ್ಟೋಮದಲ್ಲಿ ಪ್ರವೃತ್ತನಾಗುವುದಿಲ್ಲ? ವೇದವಾಕ್ಯವು ಅಕಾಮನನ್ನು ಕುರಿತೂ ಕಾರ್ಯತ್ವವನ್ನು ಬೋಧಿಸುತ್ತದಷ್ಟೇ?

ಕಾರ್ಯತ್ವವನ್ನು ಬೋಧನೆ ಮಾಡಿದರೂ ಯಾಗವು ಅಕಾಮನಿಗೆ ಇಷ್ಟಸಾಧನವಲ್ಲವಾದ ಕಾರಣ ಅವನು ಪ್ರವೃತ್ತನಾಗುವುದಿಲ್ಲ ಎಂದು ಪ್ರಾಭಾಕರರು ಹೇಳಬೇಕು. ಆಗ ಯಾವ ವಾಕ್ಯವು ಪ್ರವೃತ್ತಿಯನ್ನು ಉಂಟುಮಾಡುತ್ತದೆಯೋ ಅದು ಇಷ್ಟಸಾಧನತ್ವವನ್ನು ಹೇಳಬೇಕು ಎಂದು ಸಿದ್ಧವಾಗುತ್ತದೆ. ಕಾರ್ಯತ್ವವನ್ನು ಹೇಳಿದರೂ

ಪ್ರವೃತ್ತಿಯಾಗದಿರುವುದರಿಂದ ಕಾರ್ಯತ್ವಬೋಧನೆಯು ಪ್ರವೃತ್ತಿಯ ವಿಷಯದಲ್ಲಿ ಅಪ್ರಯೋಜಕವಾದುದು. ಇಷ್ಟಸಾಧನತ್ವವನ್ನು ಹೇಳುವ ವಾಕ್ಯವು ಲಿಙ್ ಪ್ರತ್ಯಯದಿಂದ ಕೂಡಿರಲಿ ಅಥವಾ ಲಟ್ ಪ್ರತ್ಯಯದಿಂದ ಕೂಡಿರಲಿ, ಅದರಿಂದ ಏನೂ ವ್ಯತ್ಯಾಸವಿಲ್ಲ. ಇಷ್ಟಸಾಧನತ್ವಜ್ಞಾನದಿಂದ ಪ್ರವೃತ್ತಿ ಉಂಟಾಗುತ್ತದೆ ಎಂದು ಒಪ್ಪಬೇಕು.

**ಯಾಗೇ ವಿಧಿಃ ಕುತೋ ವೇದೇ ಕ್ರಿಯಾಂತರವಿಧಿಂ ವಿನಾ ॥ ೫೧೬ ॥**

**ಅರ್ಥ–** ವೇದೇ = ವೇದದಲ್ಲಿ (ಸ್ವರ್ಗವನ್ನು ಉದ್ದೇಶಿಸಿ), ಕ್ರಿಯಾಂತರವಿಧಿಂ ವಿನಾ = (ಕಾರೀರಿ ಮೊದಲಾದ) ಬೇರೆಯ ವಿಧಿಯನ್ನು ಬಿಟ್ಟು, ಯಾಗೇ - (ಜ್ಯೋತಿಷ್ಟೋಮ ಮೊದಲಾದ) ಯಾಗದಲ್ಲಿ, ವಿಧಿಃ = ವಿಧಾನವು, ಕುತಃ = ಏಕೆ?

**ಅನುವಾದ– ವೇದದಲ್ಲಿ ಕ್ರಿಯಾಂತರವಿಧಿಯನ್ನು ಬಿಟ್ಟು ಯಾಗವನ್ನೇ ಏಕೆ ವಿಧಾನ ಮಾಡುತ್ತಾರೆ?**

**ವಿವರಣೆ–** ವೇದದಲ್ಲಿ 'ಕಾರೀರ್ಯಾ ವೃಷ್ಟಿಕಾಮೋ ಯಜೇತ' ಎಂಬ ವಾಕ್ಯವಿದೆ. ಮಳೆಯನ್ನು ಬಯಸುವವನು ಕಾರೀರೀಷ್ಟಿಯನ್ನು ಮಾಡಬೇಕು ಎಂದು ಅದರ ಅರ್ಥ. ಜ್ಯೋತಿಷ್ಟೋಮೇನ ಸ್ವರ್ಗಕಾಮೋಯಜೇತ ಎಂಬುದು ಇನ್ನೊಂದು ವಾಕ್ಯ. ಸ್ವರ್ಗಕಾಮನೆ ಉಳ್ಳವನು ಜ್ಯೋತಿಷ್ಟೋಮಯಾಗವನ್ನು ಮಾಡಬೇಕು ಎಂದು ಅದರ ಅರ್ಥ. ವೇದವು ಸ್ವರ್ಗಕಾಮನೆಯುಳ್ಳವನಿಗೆ ಏಕೆ ಕಾರೀರೀಷ್ಟಿಯನ್ನು ವಿಧಾನಮಾಡುವುದಿಲ್ಲ? ಕಾರೀರೀಷ್ಟೆಯನ್ನು ವಿಧಾನ ಮಾಡಿದರೆ, ಅದು ಅವನಿಗೆ ಇಷ್ಟಸಾಧನವನ್ನು ಬೋಧನೆ ಮಾಡಿದಂತೆ ಆಗುವುದಿಲ್ಲ. ಸ್ವರ್ಗವೇ ಅವನಿಗೆ ಇಷ್ಟವಾದುದು ಎಂದು ಹೇಳಬೇಕು. ಆದ್ದರಿಂದ ಪ್ರವೃತ್ತಿಯುಂಟಾಗಲು ವೇದವು ಅವಶ್ಯಕವಾಗಿ ಇಷ್ಟಸಾಧನತ್ವವನ್ನೇ ಬೋಧನೆ ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಯದ್ಯಸ್ತಿ ಸ್ವರ್ಗಹೇತುತ್ವಂ ಯಾಗ ಏವೇತಿ ಮನ್ಯಸೇ ।**
**ತರ್ಹಿ ಸಿದ್ಧವಿಧೇಃ ಪೃಷ್ಠಲಂಬೀ ತವ ವಿಧಿರ್ಹ್ಯಭೂತ್ ॥ ೫೧೭ ॥**

**ಅರ್ಥ–** ಯದಿ = ಒಂದು ವೇಳೆ, ಸ್ವರ್ಗಹೇತುತ್ವಂ = ಸ್ವರ್ಗಕ್ಕೆ ಕಾರಣತ್ವವು, ಯಾಗೇ ಏವ = ಯಾಗದಲ್ಲಿಯೇ ಇದೆ, ಇತಿ = ಎಂದು, ಮನ್ಯಸೇ = ತಿಳಿದಿರುವಿಯಾದರೆ, ತರ್ಹಿ = ಹಾಗಿದ್ದಲ್ಲಿ, ತವ = ನಿನ್ನ, ವಿಧಿಃ = ವಿಧಿಯು, ಸಿದ್ಧವಿಧೇಃ= ಸಿದ್ಧವಾದ ವಿಧಾನದ, ಪೃಷ್ಠಲಂಬೀ = ಬೆನ್ನನ್ನು ಆಧರಿಸಿದ್ದು, ಅಭೂತ್ = ಆಯಿತು, ಹಿ = ನಿಶ್ಚಯವು.

**ಅನುವಾದ– ಯಾಗದಲ್ಲಿ ಸ್ವರ್ಗಹೇತುತ್ವವಿದೆ. ಆದ್ದರಿಂದ ಸ್ವರ್ಗಕಾಮನೆಯುಳ್ಳವನಿಗೆ ಅದನ್ನು ವಿಧಾನ ಮಾಡುತ್ತದೆ ಎಂದು ಹೇಳಿದರೆ, ಯಾಗದಲ್ಲಿ ಅವನಿಗೆ ಇಷ್ಟವಾದ ಸ್ವರ್ಗಸಾಧನತ್ವವು ಮೊದಲೇ ಸಿದ್ಧವಾಗಿದೆಯೆಂದಾಯಿತು. ಆದರೆ ನಿನ್ನ ವಿಧಿಯು**

**ಮೊದಲೇ ಸಿದ್ಧವಾದ ಇಷ್ಟಸಾಧನತ್ವವನ್ನು ಉಪಜೀವಿಸಿಕೊಂಡು ಕಾರ್ಯತ್ವವನ್ನು ಹೇಳುತ್ತದೆ ಎಂದು ಹೇಳಬೇಕು.**

**ವಿವರಣೆ–** ಸ್ವರ್ಗಕಾಮನೆಯುಳ್ಳವನಿಗೆ ಜ್ಯೋತಿಷ್ಟೋಮ ಯಾಗವನ್ನೇ ವಿಧಾನಮಾಡುತ್ತದೆ. ಹೀಗೇಕೆ ಎಂಬ ಪ್ರಶ್ನೆಗೆ ಉತ್ತರವಾಗಿ ಜ್ಯೋತಿಷ್ಟೋಮದಲ್ಲಿ ಕಾಮನೆಯುಳ್ಳ ಪುರುಷನಿಗೆ ಆ ಯಾಗದಲ್ಲಿ ಇಷ್ಟಸಾಧನತ್ವವಿದೆ. ಆದ್ದರಿಂದ ಅದನ್ನು ವಿಧಾನ ಮಾಡುತ್ತದೆ ಎಂದರೆ ಕಾರ್ಯತ್ವವನ್ನು ಬೋಧನೆ ಮಾಡುತ್ತದೆ ಎಂದು ಹೇಳಬೇಕು. ಆದ್ದರಿಂದ ಕಾರ್ಯತ್ವವನ್ನು ಬೋಧನೆ ಮಾಡಲು ಮೊದಲೇ ಸಿದ್ಧವಾಗಬೇಕಾಗಿರುವುದು ಯಾಗದಲ್ಲಿರುವ ಇಷ್ಟಸಾಧನತ್ವ. ಅಂತಹ ಇಷ್ಟಸಾಧನತ್ವವನ್ನು ಒಪ್ಪಿದ ಮೇಲೆ, ಅದರಿಂದಲೇ ಪ್ರವೃತ್ತಿ ಉಂಟಾಗುವಾಗ ವಿಧಿಪ್ರತ್ಯಯವು ಕಾರ್ಯತ್ವವನ್ನು ಹೇಳಿದರೆ ಅದು ವ್ಯರ್ಥವಾಗುತ್ತದೆ.

**ಅತಸ್ತೇನೈವ ವಿಧಿನಾ ವಾಕ್ ಸರ್ವಾ ಮಾನತಾಂ ವ್ರಜೇತ್ ।**
**ಅಸ್ತ್ಯಾಯುರಿತಿ ವಾಕ್ಯಂ ಚ ನೋ ಚೇನ್ಮಾನಂ ಭವೇನ್ನ ತೇ ॥ ೫೧೮ ॥**

**ಅರ್ಥ–** ಅತಃ = ವಿಧಿಯು ಸಿದ್ಧವನ್ನು ಅವಲಂಬಿಸಿ ಹೊರಟಿರುವುದರಿಂದ, ತೇನ ವಿಧಿನಾ ಏವ = ಅದೇ ರೀತಿಯಿಂದಲೇ, ಸರ್ವಾ = ಎಲ್ಲಾ, ವಾಕ್ = ಮಾತುಗಳೂ, ಮಾನತಾಂ = ಪ್ರಾಮಾಣ್ಯವನ್ನು, ವ್ರಜೇತ್ = ಹೊಂದುತ್ತವೆ, ನೋ ಚೇತ್ = ಇಲ್ಲದಿದ್ದರೆ(ಸಿದ್ಧವಾದದ್ದನ್ನು ಹೇಳುವ ವಾಕ್ಯವು ಪ್ರಮಾಣ ಅಲ್ಲವಾದಲ್ಲಿ), ತೇ = ನಿನಗೆ, ಆಯುಃ = ಆಯುಷ್ಯವು, ಅಸ್ತಿ = ಇದೆ, ಇತಿ = ಎಂಬ, ವಾಕ್ಯಂಚ = ವಾಕ್ಯವೂ ಸಹ, ಮಾನಂ = ಪ್ರಮಾಣವು, ನ ಭವೇತ್ = ಆಗಲಾರದು.

**ಅನುವಾದ– ಆದ್ದರಿಂದ ಇಷ್ಟಸಾಧನವನ್ನು ಹೇಳುವುದರಿಂದಲೇ ಎಲ್ಲಾ ವೇದವಾಕ್ಯವೂ ಪ್ರಮಾಣವಾಗುತ್ತದೆ. ಇಲ್ಲದಿದ್ದರೆ ಆಯಸ್ಸು ಇದೆ ಎಂದು ಹೇಳುವ ವಾಕ್ಯವು ನಿನಗೆ ಹೇಗೆ ಪ್ರಮಾಣವಾದೀತು?**

**ಭಾವವಿಲಾಸಿನೀ–**ಕ್ರಿಯಾಂತರವಿಧಿಂ ಕಾರೀರ್ಯಾ ಸ್ವರ್ಗಕಾಮೋ ಯಜೇತೇತ್ಯಾದಿವಿಧಿಮ್ ॥ ೫೧೬-೫೧೮ ॥

**ವಿವರಣೆ–** ನಿನಗ ಆಯುಸ್ಸವು ಇದೆ ಎಂದು ರೋಗಗ್ರಸ್ತನಾದ ಒಬ್ಬ ಪುರುಷನಿಗೆ ಒಬ್ಬ ಮಹಾಪುರುಷನು ಹೇಳುತ್ತಾನೆ ಎಂದು ಇಟ್ಟುಕೊಳ್ಳೋಣ. ಆ ವಾಕ್ಯವು ಪ್ರಮಾಣವೇ ಅಥವಾ ಅಲ್ಲವೇ? ನಿನ್ನ ರೀತಿಯಲ್ಲಿ ಅದು ಪ್ರಮಾಣವಲ್ಲ. ಏಕೆಂದರೆ ಅದು ಪ್ರವೃತ್ತಿಗೆ ಉಪಯೋಗಿಯಾದ ಯಾವ ಕಾರ್ಯತ್ವವನ್ನೂ ಬೋಧನೆ ಮಾಡುವುದಿಲ್ಲ. ಆದರೆ ಲೋಕದ ಅನುಭವದಲ್ಲಿ ಆ ವಾಕ್ಯವು ಪ್ರಮಾಣ ಎಂದು

ಪ್ರವೃತ್ತಿಯಾಗದಿರುವುದರಿಂದ ಕಾರ್ಯತ್ವಬೋಧನೆಯು ಪ್ರವೃತ್ತಿಯ ವಿಷಯದಲ್ಲಿ ಅಪ್ರಯೋಜಕವಾದುದು. ಇಷ್ಟಸಾಧನತ್ವವನ್ನು ಹೇಳುವ ವಾಕ್ಯವು ಲಿಙ್ ಪ್ರತ್ಯಯದಿಂದ ಕೂಡಿರಲಿ ಅಥವಾ ಲಟ್ ಪ್ರತ್ಯಯದಿಂದ ಕೂಡಿರಲಿ, ಅದರಿಂದ ಏನೂ ವ್ಯತ್ಯಾಸವಿಲ್ಲ. ಇಷ್ಟಸಾಧನತ್ವಜ್ಞಾನದಿಂದ ಪ್ರವೃತ್ತಿ ಉಂಟಾಗುತ್ತದೆ ಎಂದು ಒಪ್ಪಬೇಕು.

**ಯಾಗೇ ವಿಧಿಃ ಕುತೋ ವೇದೇ ಕ್ರಿಯಾಂತರವಿಧಿಂ ವಿನಾ ॥ ೫೧೬ ॥**

**ಅರ್ಥ–** ವೇದೇ = ವೇದದಲ್ಲಿ (ಸ್ವರ್ಗವನ್ನು ಉದ್ದೇಶಿಸಿ), ಕ್ರಿಯಾಂತರವಿಧಿಂ ವಿನಾ = (ಕಾರೀರಿ ಮೊದಲಾದ) ಬೇರೆಯ ವಿಧಿಯನ್ನು ಬಿಟ್ಟು, ಯಾಗೇ – (ಜ್ಯೋತಿಷ್ಟೋಮ ಮೊದಲಾದ) ಯಾಗದಲ್ಲಿ, ವಿಧಿಃ = ವಿಧಾನವು, ಕುತಃ = ಏಕೆ?

**ಅನುವಾದ– ವೇದದಲ್ಲಿ ಕ್ರಿಯಾಂತರವಿಧಿಯನ್ನು ಬಿಟ್ಟು ಯಾಗವನ್ನೇ ಏಕೆ ವಿಧಾನ ಮಾಡುತ್ತಾರೆ?**

**ವಿವರಣೆ–** ವೇದದಲ್ಲಿ 'ಕಾರೀರ್ಯಾ ವೃಷ್ಟಿಕಾಮೋ ಯಜೇತ' ಎಂಬ ವಾಕ್ಯವಿದೆ. ಮಳೆಯನ್ನು ಬಯಸುವವನು ಕಾರೀರೀಷ್ಟಿಯನ್ನು ಮಾಡಬೇಕು ಎಂದು ಅದರ ಅರ್ಥ. ಜ್ಯೋತಿಷ್ಟೋಮೇನ ಸ್ವರ್ಗಕಾಮೋಯಜೇತ ಎಂಬುದು ಇನ್ನೊಂದು ವಾಕ್ಯ. ಸ್ವರ್ಗಕಾಮನೆ ಉಳ್ಳವನು ಜ್ಯೋತಿಷ್ಟೋಮಯಾಗವನ್ನು ಮಾಡಬೇಕು ಎಂದು ಅದರ ಅರ್ಥ. ವೇದವು ಸ್ವರ್ಗಕಾಮನೆಯುಳ್ಳವನಿಗೆ ಏಕೆ ಕಾರೀರೀಷ್ಟಿಯನ್ನು ವಿಧಾನಮಾಡುವುದಿಲ್ಲ? ಕಾರೀರೀಷ್ಟಿಯನ್ನು ವಿಧಾನ ಮಾಡಿದರೆ, ಅದು ಅವನಿಗೆ ಇಷ್ಟಸಾಧನವನ್ನು ಬೋಧನೆ ಮಾಡಿದಂತೆ ಆಗುವುದಿಲ್ಲ. ಸ್ವರ್ಗವೇ ಅವನಿಗೆ ಇಷ್ಟವಾದುದು ಎಂದು ಹೇಳಬೇಕು. ಆದ್ದರಿಂದ ಪ್ರವೃತ್ತಿಯುಂಟಾಗಲು ವೇದವು ಅವಶ್ಯಕವಾಗಿ ಇಷ್ಟಸಾಧನತ್ವವನ್ನೇ ಬೋಧನೆ ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಯದ್ಯಸ್ತಿ ಸ್ವರ್ಗಹೇತುತ್ವಂ ಯಾಗ ಏವೇತಿ ಮನ್ಯಸೇ ।**
**ತರ್ಹಿ ಸಿದ್ಧವಿಧೇಃ ಪೃಷ್ಠಲಂಬೀ ತವ ವಿಧಿರ್ಹ್ಯಭೂತ್ ॥ ೫೧೭ ॥**

**ಅರ್ಥ–** ಯದಿ = ಒಂದು ವೇಳೆ, ಸ್ವರ್ಗಹೇತುತ್ವಂ = ಸ್ವರ್ಗಕ್ಕೆ ಕಾರಣತ್ವವು, ಯಾಗೇ ಏವ = ಯಾಗದಲ್ಲಿಯೇ ಇದೆ, ಇತಿ = ಎಂದು, ಮನ್ಯಸೇ = ತಿಳಿದಿರುವಿಯಾದರೆ, ತರ್ಹಿ = ಹಾಗಿದ್ದಲ್ಲಿ, ತವ = ನಿನ್ನ, ವಿಧಿಃ = ವಿಧಿಯು, ಸಿದ್ಧವಿಧೇಃ= ಸಿದ್ಧವಾದ ವಿಧಾನದ, ಪೃಷ್ಠಲಂಬೀ = ಬೆನ್ನನ್ನು ಆಧರಿಸಿದ್ದು, ಅಭೂತ್ = ಆಯಿತು, ಹಿ = ನಿಶ್ಚಯವು.

**ಅನುವಾದ– ಯಾಗದಲ್ಲಿ ಸ್ವರ್ಗಹೇತುತ್ವವಿದೆ. ಆದ್ದರಿಂದ ಸ್ವರ್ಗಕಾಮನೆಯುಳ್ಳವನಿಗೆ ಅದನ್ನು ವಿಧಾನ ಮಾಡುತ್ತದೆ ಎಂದು ಹೇಳಿದರೆ, ಯಾಗದಲ್ಲಿ ಅವನಿಗೆ ಇಷ್ಟವಾದ ಸ್ವರ್ಗಸಾಧನತ್ವವು ಮೊದಲೇ ಸಿದ್ಧವಾಗಿದೆಯೆಂದಾಯಿತು. ಆದರೆ ನಿನ್ನ ವಿಧಿಯು**

ಮೊದಲೇ ಸಿದ್ಧವಾದ ಇಷ್ಟಸಾಧನತ್ವವನ್ನು ಉಪಜೀವಿಸಿಕೊಂಡು ಕಾರ್ಯತ್ವವನ್ನು ಹೇಳುತ್ತದೆ ಎಂದು ಹೇಳಬೇಕು.

**ವಿವರಣೆ–** ಸ್ವರ್ಗಕಾಮನೆಯುಳ್ಳವನಿಗೆ ಜ್ಯೋತಿಷ್ಟೋಮ ಯಾಗವನ್ನೇ ವಿಧಾನಮಾಡುತ್ತದೆ. ಹೀಗೇಕೆ ಎಂಬ ಪ್ರಶ್ನೆಗೆ ಉತ್ತರವಾಗಿ ಜ್ಯೋತಿಷ್ಟೋಮದಲ್ಲಿ ಕಾಮನೆಯುಳ್ಳ ಪುರುಷನಿಗೆ ಆ ಯಾಗದಲ್ಲಿ ಇಷ್ಟಸಾಧನತ್ವವಿದೆ. ಆದ್ದರಿಂದ ಅದನ್ನು ವಿಧಾನ ಮಾಡುತ್ತದೆ ಎಂದರೆ ಕಾರ್ಯತ್ವವನ್ನು ಬೋಧನೆ ಮಾಡುತ್ತದೆ ಎಂದು ಹೇಳಬೇಕು. ಆದ್ದರಿಂದ ಕಾರ್ಯತ್ವವನ್ನು ಬೋಧನೆ ಮಾಡಲು ಮೊದಲೇ ಸಿದ್ಧವಾಗಬೇಕಾಗಿರುವುದು ಯಾಗದಲ್ಲಿರುವ ಇಷ್ಟಸಾಧನತ್ವ. ಅಂತಹ ಇಷ್ಟಸಾಧನತ್ವವನ್ನು ಒಪ್ಪಿದ ಮೇಲೆ, ಅದರಿಂದಲೇ ಪ್ರವೃತ್ತಿ ಉಂಟಾಗುವಾಗ ವಿಧಿಪ್ರತ್ಯಯವು ಕಾರ್ಯತ್ವವನ್ನು ಹೇಳಿದರೆ ಅದು ವ್ಯರ್ಥವಾಗುತ್ತದೆ.

**ಅತಸ್ತೇನೈವ ವಿಧಿನಾ ವಾಕ್ ಸರ್ವಾ ಮಾನತಾಂ ವ್ರಜೇತ್ ।**
**ಅಸ್ತ್ಯಾಯುರಿತಿ ವಾಕ್ಯಂ ಚ ನೋ ಚೇನ್ಮಾನಂ ಭವೇನ್ನ ತೇ ॥ ೫೧೮ ॥**

**ಅರ್ಥ–** ಅತಃ = ವಿಧಿಯು ಸಿದ್ಧವನ್ನು ಅವಲಂಬಿಸಿ ಹೊರಟಿರುವುದರಿಂದ, ತೇನ ವಿಧಿನಾ ಏವ = ಅದೇ ರೀತಿಯಿಂದಲೇ, ಸರ್ವಾ = ಎಲ್ಲಾ, ವಾಕ್ = ಮಾತುಗಳೂ, ಮಾನತಾಂ = ಪ್ರಾಮಾಣ್ಯವನ್ನು, ವ್ರಜೇತ್ = ಹೊಂದುತ್ತವೆ, ನೋ ಚೇತ್ = ಇಲ್ಲದಿದ್ದರೆ(ಸಿದ್ಧವಾದದ್ದನ್ನು ಹೇಳುವ ವಾಕ್ಯವು ಪ್ರಮಾಣ ಅಲ್ಲವಾದಲ್ಲಿ), ತೇ = ನಿನಗೆ, ಆಯುಃ = ಆಯುಷ್ಯವು, ಅಸ್ತಿ = ಇದೆ, ಇತಿ = ಎಂಬ, ವಾಕ್ಯಂಚ = ವಾಕ್ಯವೂ ಸಹ, ಮಾನಂ = ಪ್ರಮಾಣವು, ನ ಭವೇತ್ = ಆಗಲಾರದು.

**ಅನುವಾದ–** ಆದ್ದರಿಂದ ಇಷ್ಟಸಾಧನವನ್ನು ಹೇಳುವುದರಿಂದಲೇ ಎಲ್ಲಾ ವೇದವಾಕ್ಯವೂ ಪ್ರಮಾಣವಾಗುತ್ತದೆ. ಇಲ್ಲದಿದ್ದರೆ ಆಯಸ್ಸು ಇದೆ ಎಂದು ಹೇಳುವ ವಾಕ್ಯವು ನಿನಗೆ ಹೇಗೆ ಪ್ರಮಾಣವಾದೀತು?

**ಭಾವವಿಲಾಸಿನೀ–** ಕ್ರಿಯಾಂತರವಿಧಿಂ ಕಾರೀರ್ಯಾ ಸ್ವರ್ಗಕಾಮೋ ಯಜೇತೇತ್ಯಾದಿವಿಧಿಮ್ ॥ ೫೧೬-೫೧೮ ॥

**ವಿವರಣೆ–** ನಿನಗ ಆಯುಸ್ಸವು ಇದೆ ಎಂದು ರೋಗಗ್ರಸ್ತನಾದ ಒಬ್ಬ ಪುರುಷನಿಗೆ ಒಬ್ಬ ಮಹಾಪುರುಷನು ಹೇಳುತ್ತಾನೆ ಎಂದು ಇಟ್ಟುಕೊಳ್ಳೋಣ. ಆ ವಾಕ್ಯವು ಪ್ರಮಾಣವೇ ಅಥವಾ ಅಲ್ಲವೇ? ನಿನ್ನ ರೀತಿಯಲ್ಲಿ ಅದು ಪ್ರಮಾಣವಲ್ಲ. ಏಕೆಂದರೆ ಅದು ಪ್ರವೃತ್ತಿಗೆ ಉಪಯೋಗಿಯಾದ ಯಾವ ಕಾರ್ಯತ್ವವನ್ನೂ ಬೋಧನೆ ಮಾಡುವುದಿಲ್ಲ. ಆದರೆ ಲೋಕದ ಅನುಭವದಲ್ಲಿ ಆ ವಾಕ್ಯವು ಪ್ರಮಾಣ ಎಂದು

ಎಲ್ಲರಿಗೂ ತಿಳಿದಿದೆ. ಏಕೆಂದರೆ, ಆಯುಸ್ಸು ಎಲ್ಲರಿಗೂ ಇಷ್ಟವಾದುದು. ಅಂತಹ ಇಷ್ಟವಾದ ಅಥವಾ ಇಷ್ಟಸಾಧನವಾದ ವಿಷಯವನ್ನು ಹೇಳುವ ವಾಕ್ಯವು ಪ್ರವೃತ್ತಿಯನ್ನು ಉಂಟುಮಾಡದಿದ್ದರೂ ಅದು ಪ್ರಮಾಣವೆಂದೇ ಲೋಕದಲ್ಲಿ ಎಲ್ಲರೂ ಅಂಗೀಕರಿಸಿದ್ದಾರೆ. ಆದ್ದರಿಂದ ಕೃತಿಸಾಧ್ಯವಾದ ವಿಷಯವನ್ನು ಹೇಳುವುದರಿಂದಲೇ ಪ್ರಾಮಾಣ್ಯವು ಉಂಟಾಗಬೇಕೆಂಬ ನಿಯಮವಿಲ್ಲ. ಸಿದ್ಧವಾದ ವಿಷಯವನ್ನು ಹೇಳಿದರೂ, ವೇದಕ್ಕೆ ಪ್ರಾಮಾಣ್ಯವು ಉಂಟಾವಾಗುತ್ತದೆ.

**ತಸ್ಮಾದಾಚಾರ್ಯತರಣಿಸರಣಿಃ ಶೋಭತೇತರಾಮ್ ।**
**ಯಃ ಸ್ವಾನ್ ವಿತಿಮಿರಾನ್ ಕುರ್ವನ್ ಸದಾ ಹೃದ್ವ್ಯೋಮ್ನಿ ಜೃಂಭತೇ**
**॥ ೫೧೯ ॥**

**ಅರ್ಥ–** ತಸ್ಮಾತ್ = ಚಾರ್ವಾಕ ಮೊದಲಾದವರು ಹೇಳಿದ್ದು ಅಪ್ರಾಮಾಣಿಕವಾದ್ದರಿಂದ, ಯಃ = ಯಾರು, ಸ್ವಾನ್ = ತಮ್ಮವರನ್ನು, ವಿತಿಮಿರಾನ್ = ಕತ್ತಲು ಇಲ್ಲದವರನ್ನಾಗಿ, ಅಜ್ಞಾನವಿಲ್ಲದವರನ್ನಾಗಿ, ಕುರ್ವನ್ = ಮಾಡುತ್ತಾ, ಹೃದ್ವ್ಯೋಮ್ನಿ = ಹೃದಯಾಕಾಶದಲ್ಲಿ, ಸದಾ = ಯಾವಾಗಲೂ, ಜೃಂಭತೇ = ಹೊಳೆಯುತ್ತಾರೋ (ಅಂತಹ), ಆಚಾರ್ಯತರಣಿಸರಣಿಃ – ಆಚಾರ್ಯ = ಮಧ್ವಾಚಾರ್ಯರೆಂಬ, ತರಣಿ = ಸೂರ್ಯನ, ಸರಣಿಃ = ಮಾರ್ಗವು, ಶೋಭತೇತರಾಮ್ = ಅತ್ಯಂತವಾಗಿ ಶೋಭಿಸುತ್ತದೆ.

**ಅನುವಾದ–** ಆದ್ದರಿಂದ ತನ್ನ ಭಕ್ತರಿಗೆ ಅಜ್ಞಾನಾಂಧಕಾರವನ್ನು ಕಳೆದು ಅವರ ಹೃದಯಾಕಾಶದಲ್ಲಿ ರಾರಾಜಿಸುವ ಮಧ್ವಾಚಾರ್ಯರೆಂಬ ಸೂರ್ಯನ ಪದ್ಧತಿಯು ಅತ್ಯಂತವಾಗಿ ಶೋಭಿಸುತ್ತದೆ.

**ಭಾವವಿಲಾಸಿನೀ–**ಅವೈದಿಕಾಚಾರ್ಯಸ್ಮರಣದೋಷಪರಿಹಾರಾಯ ಸ್ವಾಚಾರ್ಯಂ ಸೂರ್ಯತಯಾ ವರ್ಣಯನ್ನುಕ್ತಮರ್ಥಮುಪಸಂಹರತಿ – **ತಸ್ಮಾದಿತಿ** ॥ ಚಾರ್ವಾಕಾದ್ಯುದಿತ-ಮಾರ್ಗಸ್ಯ ಸರ್ವಸ್ಯಾಪ್ರಾಮಾಣಿಕತ್ವಾತ್ । ಆಚಾರ್ಯತರಣಿಸರಣಿಃ ಮಧ್ವಾಚಾರ್ಯಾಖ್ಯ-ತರಣೇಃ ಸೂರ್ಯಸ್ಯ ಮಾರ್ಗ ಇತ್ಯರ್ಥಃ । ತಸ್ಯ ಸೂರ್ಯತ್ವಮುಪಪಾದಯತಿ – **ಯ ಇತ್ಯಾ-ದಿನಾ** ॥ ಯ ಆಚಾರ್ಯಸೂರ್ಯಃ ಸ್ವಾನ್ ಸ್ವಭಕ್ತಜನಾನ್ ವಿತಿಮಿರಾನ್ ವಿಗತಾಜ್ಞಾನಾಖ್ಯಾಂಧಕಾರಾನ್ ಕುರ್ವನ್ ಹೃದ್ವ್ಯೋಮ್ನಿ ತದೀಯ- ಹೃದಯಾಖ್ಯಾಕಾಶೇ ಸದಾ ಜೃಂಭತೇ । ತಸ್ಯಾಚಾರ್ಯತರಣೇರಿತಿ ಪೂರ್ವೇಣಾರ್ಥತಃ ಸಂಬಂಧಃ ॥ ೫೧೯ ॥

**ವಿವರಣೆ–** ಕೃತಿಸಾಧ್ಯತ್ವರೂಪವಾದ ಕಾರ್ಯತ್ವವು ನಿಮ್ಮ ವಾಕ್ಯವಲ್ಲ ಎಂದು ಹೇಳಿ ಇಷ್ಟಸಾಧನತ್ವವೇ ನಿಮ್ಮ ವಾಕ್ಯ ಎಂದು ಸಮರ್ಥಿಸಿ ಅವೈದಿಕರಾದ ಚಾರ್ವಾಕಾದಿಗಳನ್ನು ಸ್ಮರಣೆ ಮಾಡಿದ ದೋಷದ ಪರಿಹಾರಕ್ಕಾಗಿ ಈ ಪ್ರಮೇಯವನ್ನು ಆಚಾರ್ಯರ ಮೇಲಿನ ಭಕ್ತ್ಯುದ್ರೇಕದಿಂದ ಆಚಾರ್ಯರನ್ನು ಸೂರ್ಯನಿಗೆ ಹೋಲಿಸಿ ಈ ಶ್ಲೋಕದಲ್ಲಿ ಉಪಸಂಹಾರ ಮಾಡುತ್ತಾರೆ.

**ಗೃಷ್ಟ್ಯೋರ್ಮಿಥೋ ವಿರೋಧೇ ಹಿ ಹತ್ವೈಕಾಮಪರಾಙ್ಮುಖೀಂ ।**
**ವಿರೋಧಶಾಂತಿಂ ಕಃ ಕುರ್ಯಾದ್ ವಿನಾ ಮ್ಲೇಚ್ಛಕುಮಾರಕಾನ್**
**॥ ೫೨೦ ॥**

**ಅರ್ಥ–** ಗೃಷ್ಟ್ಯೋಃ= ಎರಡು ಹಸುಗಳಿಗೆ, ಮಿಥಃ = ಪರಸ್ಪರವಾಗಿ, ವಿರೋಧೇ = ವಿರೋಧವುಂಟಾದಾಗ, ಅಪರಾಂಙ್‌ಮುಖೀಂ = ಹಿಂದೆ ತಿರುಗದ, ಏಕಾಂ = ಒಂದನ್ನು, ಹತ್ವಾ = ಕೊಂದು, ವಿರೋಧಶಾಂತಿಂ = ವಿರೋಧದ ಪರಿಹಾರವನ್ನು, ಮ್ಲೇಚ್ಛಕುಮಾರಕಾನ್ ವಿನಾ = ಮ್ಲೇಂಛ ಹುಡುಗರನ್ನು ಹೊರತುಪಡಿಸಿ, ಕಃ = ಯಾರು, ಕುರ್ಯಾತ್ = ಮಾಡಿಯಾನು?

**ಅನುವಾದ–** ಎರಡು ಹಸುಗಳ ನಡುವೆ ಜಗಳ ಉಂಟಾದರೆ ಹಿಮ್ಮೆಟ್ಟದಿರುವ ಒಂದನ್ನು ಕೊಲ್ಲುವ ಮೂಲಕ ಜಗಳ ಪರಿಹರಿಸುವ ಕೆಲಸವನ್ನು ಮ್ಲೇಚ್ಛಕುಮಾರರನ್ನು ಬಿಟ್ಟು ಮತ್ತೆ ಯಾರು ಮಾಡಿಯಾರು?

**ಭಾವವಿಲಾಸಿನೀ–** ಅಪೌರುಷೇಯತಯಾ ನಿರ್ದೋಷೇ ವೇದೇ ಏಕಭಾಗಸ್ಯಾತತ್ತ್ವಾವೇದಕತ್ವಕಥನಮಯುಕ್ತಮಿತ್ಯತ್ರ ದೃಷ್ಟಾಂತಮಾಹ – **ಗೃಷ್ಟ್ಯೋರಿತಿ** ॥ ಪ್ರಥಮಪ್ರಸೂತಯೋರ್ಗವೋಃ । ವಿನಾ ಮ್ಲೇಚ್ಛಕುಮಾರಕಾನಿತ್ಯನೇನ ದಾರ್ಷ್ಟಾಂತಿಕೇಽಪಿ ತಸ್ಯ ಬೌದ್ಧತ್ವಂ ಧ್ವನಯತಿ ॥ ೫೨೦ ॥

**ವಿವರಣೆ–** ಗೃಷ್ಟಿಯೆಂದರೆ ಮೊದಲನೆ ಸಲ ಕರುವನ್ನು ಪ್ರಸವಿಸಿದ ಹಸು. ಅಂತಹ ಎರಡು ಹಸುಗಳು ಹೋರಾಡುತ್ತಿದ್ದರೆ ಹಸುಗಳಲ್ಲಿ ಗೌರವವಿರುವವರೆಲ್ಲರೂ ಆ ಜಗಳವನ್ನು ಬಿಡಿಸಲು ಪ್ರಯತ್ನಪಡುತ್ತಾರೆ. ಒಂದು ಹಸುವನ್ನು ಕೊಂದರೆ, ಜಗಳವೇನೋ ಬಗೆಹರಿಯುತ್ತದೆ. ಆದರೆ ಅದು ಮ್ಲೇಚ್ಛಕುಮಾರರು ಮಾಡುವ ರೀತಿ. ವೇದದ ಒಂದು ಭಾಗವನ್ನು ಅತತ್ತ್ವಾವೇದಕವೆಂದು ಹೇಳಿದರೆ ಅದು ಒಂದು ಹಸುವನ್ನು ಕೊಂದಂತೆಯೇ ಸರಿ. ಈ ದೃಷ್ಟಾಂತವನ್ನು ಹೇಳಿ ಪ್ರಕೃತದಲ್ಲಿ ಹಾಗೆ ಮಾಡುವವರು ಬೌದ್ಧರೇ ಸರಿ ಎಂದು ಪರಿಹಾಸ ಮಾಡುತ್ತಾರೆ. ಆಸ್ತಿಕರಾದವರು ಅನುಸರಿಸುವ ರೀತಿಯನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

**ತೃಣಪಿಣ್ಯಾಕದಾನೇನ ಕೃತ್ವಾರ್ಥಾಂತರಲಾಲಸಾಮ್ ।**
**ತತಃ ಪ್ರಚ್ಯಾವಯೇದೇಕಾಂ ಕ್ರುದ್ಧಾಪ್ಯನ್ಯಾಧ್ವನಾ ವ್ರಜೇತ್ ॥ ೫೨೧ ॥**

**ಅರ್ಥ–** ಏಕಾಂ = ಒಂದು ಹಸುವನ್ನು, ತೃಣಾಪಿಣ್ಯಾಕದಾನೇನ - ತೃಣ = ಹುಲ್ಲು, ಪಿಣ್ಯಾಕ = ಹಿಂಡಿ ಇವುಗಳ, ದಾನೇನ = ದಾನದಿಂದ, ಅರ್ಥಾಂತರಲಾಲಸಾಂ - ಅರ್ಥಾಂತರ = ಆಗ ಬೇರೆಯ ವಸ್ತುವಿನಲ್ಲಿ, ಲಾಲಸಾಂ = ಆಸೆವುಳ್ಳದ್ದನ್ನಾಗಿ, ಕೃತ್ವಾ =

ಮಾಡಿ, ತತಃ = ಆ ಜಗಳದಿಂದ, ಪ್ರಾಚ್ಯಾವಚೇತ್ = ಬಿಡಿಸಬೇಕು, ಕ್ರುದ್ಧಾಽಪಿ = ಸಿಟ್ಟಾದರೂ (ಇನ್ನೊಂದು ಹಸುವು), ಅನ್ಯಾಧ್ವನಾ = ಬೇರೆಯ ಮಾರ್ಗದಿಂದ, ವ್ರಜೇತ್ = ಹೋಗುತ್ತದೆ.

**ಅನುವಾದ–** ಜಗಳವಾಡುತ್ತಿರುವ ಹಸುಗಳಲ್ಲಿ ಒಂದು ಹಸುವಿಗೆ ಹುಲ್ಲುಹಿಂಡಿಗಳನ್ನು ತೋರಿಸಿ, ಅದರ ಮೇಲೆ ಆಸೆ ಉಂಟಾಗುವಂತೆ ಮಾಡಿ, ಆ ಜಗಳದ ಸ್ಥಾನದಿಂದ ಅದನ್ನು ದೂರ ಸರಿಸಬೇಕು. ಆಗ ಇನ್ನೊಂದು ಗೋವು ಸಿಟ್ಟಾಗಿದ್ದರೂ ಸಹ ಅದು ಬೇರೆ ದಾರಿಯನ್ನು ಹಿಡಿದು ಹೊರಟುಹೋಗುತ್ತದೆ.

**ಭಾವವಿಲಾಸಿನೀ–**ಇಂತು ಸಾವಕಾಶಸ್ಯಾರ್ಥಾಂತರಕಥನೇನೋಭಯೋರಪಿ ವೇದಭಾಗಯೋಃ ಪ್ರಾಮಾಣ್ಯಮೇವ ರಕ್ಷಣೀಯಮಿತ್ಯತ್ರಾಪಿ ದೃಷ್ಟಾಂತಮಾಹ –**ತೃಣಪಿಣ್ಯಾಕೇತಿ** ॥ ಅರ್ಥಾಂತರಲಾಲಸಾಂ ಕೃತ್ವೇತಿ ಸಂಬಂಧಃ । ತತೋ ವಿರೋಧಾತ್ । ಅನ್ಯಾಕ್ರುದ್ಧಾಪಿ ಕೋಪಾತ್ತೃಣಾದಿಕಮಸಹಮಾನಾಪೀತ್ಯನೇನ ದಾರ್ಷ್ಟಾನ್ತಿಕೇಽಪಿ ನಿರವಕಾಶತ್ವಂ ಧ್ವನಯತಿ ॥ ೫೨೧ ॥

**ವಿವರಣೆ–** ಎರಡು ಇಂತಹ ಹಸುಗಳು ಹೋರಾಡುವಾಗ ಒಂದನ್ನು ಬೇರೆ ಕಡೆಗೆ ಎಳೆದು ಜಗಳವನ್ನು ಬಿಡಿಸಬೇಕು. ಜಗಳವಾಡುವ ಹಸು ಸುಮ್ಮನೆ ಬೇರೆ ಕಡೆಗೆ ಬರುವುದಿಲ್ಲ. ಅದಕ್ಕೆ ಏನಾದರೂ ಆಸೆಯನ್ನು ತೋರಿಸಿ ಬೇರೆ ಕಡೆಗೆ ಎಳೆಯಬೇಕು. ಆಗ ಅದು ಜಗಳದ ಸ್ಥಾನದಿಂದ ಹಿಂದೆ ಸರಿದರೆ, ಇನ್ನೊಂದು ಹಸುವು ಕೋಪಗೊಂಡಿದ್ದರೂ ಸಹ ಎದುರಾಳಿ ಇಲ್ಲದಿರುವುದರಿಂದ ಜಗಳವು ನಿಂತು ಹೋಗುತ್ತದೆ. ಹೀಗೆ ವೇದವಾಕ್ಯಗಳಲ್ಲಿ ಸಾವಕಾಶವಾದ ಒಂದಕ್ಕೆ ಅರ್ಥಾಂತರವನ್ನು ಮಾಡಿ ವಾಕ್ಯಗಳ ವಿರೋಧವನ್ನು ಪರಿಹರಿಸಬೇಕು. ಆಗ ನಿರವಕಾಶವಾದ ವಾಕ್ಯವು ತನ್ನ ಅರ್ಥವನ್ನೇ ಹೇಳುತ್ತದೆ.

**ಏವಂ ಶ್ರುತ್ಯೋರ್ವಿರೋಧೇಽಪಿ ಯಾ ವಾಗನ್ಯಾರ್ಥವರ್ತಿನೀ ।**
**ತಾಂ ತದರ್ಥಪರಾಂ ಕೃತ್ವಾ ಮೋಚಯೇತ್ ಕಲಹಂ ತಯೋಃ ॥ ೫೨೨ ॥**

**ಅರ್ಥ–** ಏವಂ = ಹೀಗೆ, ಶ್ರುತ್ಯೋಃ = ಎರಡು ವೇದವಾಕ್ಯಗಳಿಗೆ, ವಿರೋಧೇ ಅಪಿ = ವಿರೋಧವು ಉಂಟಾದಾಗಲೂ, ಯಾ = ಯಾವ, ವಾಕ್ = ವಾಕ್ಯವು, ಅನ್ಯಾರ್ಥವರ್ತಿನೀ – ಅನ್ಯ = ಬೇರೆಯ, ಅರ್ಥ = ವಿಷಯದಲ್ಲಿ, ವರ್ತಿನೀ = ಇದೆಯೋ, ತಾಂ = ಆ ಮಾತನ್ನು, ತದರ್ಥಪರಾಂ – ತತ್ = ಆ, ಅರ್ಥ = ವಿಷಯದಲ್ಲಿ, ಪರಾಂ = ತಾತ್ಪರ್ಯ ಉಳ್ಳದ್ದನ್ನಾಗಿ, ಕೃತ್ವಾ = ಮಾಡಿ, ತಯೋಃ = ಆ ಎರಡು ಶ್ರುತಿಗಳ, ಕಲಹಂ = ಜಗಳವನ್ನು, ಮೋಚಯೇತ್ = ಬಿಡಿಸಬೇಕು.

**ಅನುವಾದ–** ಹೀಗೆ ಶ್ರುತಿಗಳಿಗೆ ವಿರೋಧವುಂಟಾದಾಗ ಯಾವ ಶ್ರುತಿಯು ಇನ್ನೊಂದು ಅರ್ಥವನ್ನು ಹೇಳುವ ಅವಕಾಶವನ್ನು ಹೊಂದಿದೆಯೋ, ಅದನ್ನು ಇನ್ನೊಂದು

**ಅರ್ಥದ ಪ್ರತಿಪಾದಕವೆಂದು ಮಾಡಿ, ಆ ಶ್ರುತಿಗಳಿಗೆ ವಿರೋಧವನ್ನು ಪರಿಹಾರ ಮಾಡಬೇಕು.**

**ಭಾವವಿಲಾಸಿನೀ–ದಾರ್ಷ್ಟಾಂತಿಕಂ ಯೋಜಯತಿ – ಏವಮಿತಿ ॥ ತಯೋಸ್ಸಾವಕಾಶ-ನಿರವಕಾಶಶ್ರುತ್ಯೋಃ ಕಲಹಂ ವಿರೋಧಮ್ ॥ ೫೨೨ ॥**

**ವಿವರಣೆ–** ಶ್ರುತಿಗಳಲ್ಲಿ ಕೆಲವು ನಿರವಕಾಶ. ಎಂದರೆ ಪ್ರತೀತವಾದ ಒಂದು ಅರ್ಥವನ್ನು ಬಿಟ್ಟು ಬೇರೆ ಯಾವ ಅರ್ಥವನ್ನೂ ಮಾಡಲು ಸಾಧ್ಯವಿಲ್ಲ. ಇನ್ನು ಕೆಲವು ಶ್ರುತಿಗಳಿಗೆ ಅನೇಕ ಅರ್ಥವನ್ನು ಮಾಡಲು ಬರುತ್ತದೆ. ಇವನ್ನು ಸಾವಕಾಶವಾಕ್ಯಗಳು ಎಂದು ಹೇಳುತ್ತಾರೆ. ಎರಡು ಶ್ರುತಿವಾಕ್ಯಗಳಿಗೆ ವಿರೋಧ ಬಂದಾಗ ಎರಡೂ ನಿರವಕಾಶವಾಗಿರುವುದಿಲ್ಲ. ಒಂದು ನಿರವಕಾಶ ಇನ್ನೊಂದು ಸಾವಕಾಶವಾಗಿರುತ್ತದೆ. ಆಗ ಸಾವಕಾಶಶ್ರುತಿಗೆ ಯಾವ ಅರ್ಥವನ್ನು ಹೇಳಿದರೆ, ನಿರವಕಾಶ ಶ್ರುತಿಗೆ ವಿರೋಧವು ಬರುತ್ತದೆಯೋ ಆ ಅರ್ಥವನ್ನು ಬಿಟ್ಟು ಬೇರೆಯ ಅರ್ಥವನ್ನು ಹೇಳಿದರೆ, ಆಗ ವಿರೋಧವು ಬರುವುದಿಲ್ಲವಾದ ಕಾರಣ ಕಲಹವು ಶಾಂತವಾಗುತ್ತದೆ. ಇದು ಆಸ್ತಿಕರು ಮಾಡಬೇಕಾದ ರೀತಿ ಎಂದು ದಾರ್ಷ್ಟಾಂತಿಕದಲ್ಲಿ ಸಂಗತಿಯನ್ನು ತೋರಿಸಿ ಹೇಳುತ್ತಾರೆ.

**ಅತತ್ತ್ವಾವೇದಿಕಾ ತ್ವೇಕಾ ತತ್ತ್ವಸ್ಯಾವೇದಿಕಾಽಪರಾ ।**
**ಇತ್ಯಾದ್ಯುಕ್ತಿಸ್ತ್ವಮಾನತ್ವಪ್ರಾಪ್ತ್ಯಾಽಸುತ್ಯಾಜನಂ ಶ್ರುತೇಃ ॥ ೫೨೩ ॥**

**ಅರ್ಥ–** ಏಕಾ = ಒಂದು ಶ್ರುತಿಯು, ಅತತ್ತ್ವಾವೇದಿಕಾ = ಅಯಥಾರ್ಥವನ್ನು ತಿಳಿಸುತ್ತದೆ, ಅಪರಾ = ಮತ್ತೊಂದು ಶ್ರುತಿಯು, ತತ್ತ್ವಸ್ಯ = ಯಥಾರ್ಥದ, ಆವೇದಿಕಾ = ತಿಳಿಸುವುದು, ಇತ್ಯಾದ್ಯುಕ್ತಿಸ್ತು = ಇದೇ ಮೊದಲಾದ ಮಾತಾದರೋ, ಅಮಾನತ್ವಪ್ರಾಪ್ತ್ಯಾ = ಅಪ್ರಾಮಾಣ್ಯವು ಉಂಟಾಗುವುದರಿಂದ, ಶ್ರುತೇಃ - ವೇದದ, ಅಸುತ್ಯಾಜನಮ್ = ಪ್ರಾಣವನ್ನು ಬಿಡಿಸಿದಂತೆ.

**ಅನುವಾದ– ಅದನ್ನು ಬಿಟ್ಟು ಒಂದು ಶ್ರುತಿಯು ತತ್ತ್ವಾವೇದಕ ಇನ್ನೊಂದು ಶ್ರುತಿಯು ಅತತ್ತ್ವಾವೇದಕ ಎಂದು ಹೇಳಿದರೆ, ಯಾವ ಶ್ರುತಿಯನ್ನು ಅತತ್ತ್ವಾವೇದಕವೆಂದು ಹೇಳುತ್ತೇವೆಯೋ ಅದು ಅಪ್ರಮಾಣವೇ ಆಗುತ್ತದೆ. ಶ್ರುತಿಗೆ ಅಪ್ರಮಾಣ್ಯ ಬಂದರೆ, ಅದನ್ನು ಕೊಂದಂತೆಯೇ ಸರಿ.**

**ಭಾವವಿಲಾಸಿನೀ**–ನನು ತತ್ತ್ವಾವೇದಕತ್ವಾತತ್ತ್ವಾವೇದಕತ್ವಾಭ್ಯಾಂ ವಿರೋಧಶಾಂತಿಃ ಕಿಂ ನ ಸ್ಯಾತ್? ಇತ್ಯತ ಆಹ – **ಅತತ್ತ್ವೇತಿ** ॥ ಏಕಾ ನಿರವಕಾಶಶ್ರುತಿಃ । ಅಪರಾ ಸಾವಕಾಶಶ್ರುತಿಃ । ಆದಿಪದೇನಾನುವಾದಕತ್ವಾದಿಕಂ ಗ್ರಾಹ್ಯಮ್ । ಅಮಾನತ್ವಪ್ರಾಪ್ತ್ಯಾ ಅತದ್ವತಿ ತತ್ಪ್ರಕಾರಕ-ಜ್ಞಾನಜನಕತ್ವರೂಪಾ ಪ್ರಾಮಾಣ್ಯಪ್ರಾಪ್ತ್ಯಾ ಅಸುತ್ಯಾಜನಂ ಪ್ರಾಣಸಮಪ್ರಾಮಾಣ್ಯತ್ಯಾಜ-

ನಮ್ । ಶ್ರುತೇಃ ಅತತ್ತ್ವಾವೇದಕತ್ವೇನೋಕ್ತಶ್ರುತೇಃ । ಏತೇನ ಧ್ವನಿತಂ ಬೌದ್ಧತ್ವಂ ಸ್ಪಷ್ಟೀಕೃತಮಿತಿ ದ್ರಷ್ಟವ್ಯಮ್ ॥ ೫೨೩ ॥

**ವಿವರಣೆ–** ಈ ಶ್ರುತಿವಾಕ್ಯಗಳ ವಿರೋಧವನ್ನು ಪರಿಹಾರ ಮಾಡಲು ಸಾವಕಾಶತ್ವ ನಿರವಕಾಶತ್ವರೂಪವಾದ ನ್ಯಾಯವನ್ನು ಬಿಟ್ಟು ತತ್ತ್ವಾವೇದಕತ್ವ ಮತ್ತು ಅತತ್ತ್ವಾವೇದಕತ್ವ ಎಂಬ ಕಲ್ಪನೆಯನ್ನು ಮಾಡಬಾರದು. ಸಾವಕಾಶತ್ವ ನಿರವಕಾಶತ್ವ ನ್ಯಾಯವನ್ನು ಅನುಸರಿಸಿದರೆ, ಎರಡೂ ವಾಕ್ಯಗಳಿಗೂ ಪ್ರಾಮಾಣ್ಯವು ರಕ್ಷಿತವಾಗುತ್ತದೆ. ಆದರೆ ತತ್ತ್ವಾವೇದಕತ್ವ ಅತತ್ತ್ವಾವೇದಕತ್ವ ನ್ಯಾಯವನ್ನು ಅನುಸರಿಸಿದರೆ, ಯಾವ ಶ್ರುತಿಯು ಅತತ್ತ್ವಾವೇದಕವಾಗುತ್ತದೆಯೋ ಅದು ಅಪ್ರಮಾಣವೇ ಆಗುತ್ತದೆಯಾದ್ದರಿಂದ ಶ್ರುತಿಯನ್ನು ಕೊಂದಂತೆಯೇ ಆಗುತ್ತದೆ. ವೈದಿಕರಾದವರು ಇಂತಹ ಕೆಲಸವನ್ನು ಮಾಡಬಾರದು. ಹೀಗೆ ಅತತ್ತ್ವಾವೇದಕತ್ವವನ್ನು ಹೇಳುವವರ ಬೌದ್ಧತ್ವವನ್ನು ಸ್ಪಷ್ಟಪಡಿಸಿದ್ದಾರೆ.

**ಸಾದೃಶ್ಯೈಕ್ಯೇ ಸ್ಥಾನಮತ್ಯೋರೈಕ್ಯೇ ವ್ಯಾಪ್ತ್ಯೈಕ್ಯಪೂರ್ವಕೇ ।**
**ಸಾವಕಾಶೈಕ್ಯವಾಗ್‌ಭೇದವಾಕ್ ತು ಸ್ವಾರ್ಥಪರಾಯಣಾ ॥ ೫೨೪ ॥**

**ಅರ್ಥ–** ಐಕ್ಯವಾಕ್ = ಐಕ್ಯವನ್ನು ಬೋಧಿಸುವ ವಾಕ್ಯವು, ಸಾದೃಶ್ಯೈಕ್ಯೇ = ಸಮಾನವಾಗಿರುವುದರಿಂದ ಒಂದರಂತೆ ಎಂಬ ವಿಷಯದಲ್ಲಿ, ಸ್ಥಾನ ಮತ್ಯೋಃ = ಸ್ಥಾನ ಮತ್ತು ಬುದ್ಧಿಗಳ, ಐಕ್ಯೇ = ಸಮಾನತೆ ಎಂಬ ವಿಷಯದಲ್ಲಿ, ವ್ಯಾಪ್ತ್ಯಾ = ವ್ಯಾಪ್ತಿಯಿಂದ, ಐಕ್ಯಪೂರ್ವಕೇ = ಸಮಾನತೆ ಎಂದು ಮೊದಲಾದದ್ದರಲ್ಲಿ, ಸಾವಕಾಶಾ = ಅವಕಾಶವುಳ್ಳದ್ದಾಗಿದೆ, ತು = ಆದರೆ, ಭೇದವಾಕ್ = ಭೇದವನ್ನು ಬೋಧಿಸುವ ಮಾತು, ಸ್ವಾರ್ಥಪರಾಯಣಾ - ಸ್ವ = ತನ್ನ, ಅರ್ಥ = ಅರ್ಥದಲ್ಲೇ, ಪರಾಯಣಾ = ಆಸಕ್ತಿವುಳ್ಳದ್ದು.

**ಅನುವಾದ–** ಸಾವಕಾಶ ಮತ್ತು ನಿರವಕಾಶ ವಾಕ್ಯಗಳನ್ನು ಪರಿಶೀಲಿಸಿದರೆ, ಐಕ್ಯವಾಕ್ಯವು ಸಾದೃಶ್ಯೈಕ್ಯ, ಸ್ಥಾನೈಕ್ಯ, ಮತ್ಯೈಕ್ಯ, ವ್ಯಾಪ್ತ್ಯೈಕ್ಯ ಮೊದಲಾದ ಅರ್ಥಗಳನ್ನು ತೆಗೆದುಕೊಂದು ಸಾವಕಾಶವಾಗುತ್ತದೆ. ಭೇದವಾಕ್ಯವಾದರೋ, ಭೇದವನ್ನು ಬಿಟ್ಟು ಬೇರೆ ಅರ್ಥವನ್ನು ತೆಗೆದುಕೊಳ್ಳುವುದಿಲ್ಲವಾದ್ದರಿಂದ ಅದು ನಿರವಕಾಶವಾಗುತ್ತದೆ.

**ಭಾವವಿಲಾಸಿನೀ–** ಏವಮಪಿ ಪ್ರಕೃತೇ ಕಿಮಾಯಾತಮ್? ಇತ್ಯತ ಆಹ–ಸಾದೃಶ್ಯೇತ್ಯಾದಿನಾ ॥ ಸಾದೃಶ್ಯೈಕ್ಯೇ ಸಾದೃಶ್ಯರೂಪೈಕ್ಯೇ ಸ್ಥಾನಮತ್ಯೋರೈಕ್ಯೇ ಸ್ಥಾನೈಕ್ಯೇ ಮತ್ಯೈಕ್ಯೇ ಚೇತ್ಯರ್ಥಃ । ವ್ಯಾಪ್ತ್ಯೈಕ್ಯೇ ವ್ಯಾಪ್ತಿರೂಪೈಕ್ಯೇ । ಪೂರ್ವ ಇತ್ಯನೇನ ಸ್ವಾತಂತ್ರ್ಯೈಕ್ಯ-ವೈಶಿಷ್ಟ್ಯೈಕ್ಯಯೋರ್ಗ್ರಹಣಮ್ । ಉಕ್ತಾರ್ಥೇ ಐಕ್ಯವಾಕ್ ಸಾವಕಾಶೇತಿ ಸಂಬಂಧಃ । ಸ್ವಾರ್ಥ-ಪರಾಯಣಾ ಅನ್ಯಾರ್ಥೇಽವಕಾಶಶೂನ್ಯಾ ನಿರವಕಾಶೇತ್ಯರ್ಥಃ ॥ ೫೨೪ ॥

**ವಿವರಣೆ–** ಹೀಗೆ ಸಾವಕಾಶ ನಿರವಕಾಶತ್ವವನ್ನು ನಿರೂಪಿಸಿ, ದೌರ್ಬಲ್ಯ ಪ್ರಾಬಲ್ಯಗಳನ್ನು ಐಕ್ಯವಾಕ್ಯ ಮತ್ತು ಭೇದವಾಕ್ಯದಲ್ಲಿ ಅನ್ವಯಿಸಿ ತೋರಿಸುತ್ತಾರೆ. ವೇದಗಳಲ್ಲಿ ಐಕ್ಯವಾಕ್ಯವಿದೆ. ಅದಕ್ಕೆ ಚೈತನ್ಯೈಕ್ಯವನ್ನೇ ಒಪ್ಪಬೇಕೆಂದು ನಿರ್ಬಂಧವಿಲ್ಲ. ಸ್ಥಾನೈಕ್ಯದಿಂದಲೂ, ಮತ್ಯೈಕ್ಯದಿಂದಲೂ, ಸಾದೃಶ್ಯೈಕ್ಯದಿಂದಲೂ, ವ್ಯಾಪ್ತ್ಯೈಕ್ಯದಿಂದಲೂ, ಐಕ್ಯವಾಕ್ಯವು ಉಪಪನ್ನವಾಗುತ್ತದೆ. ದ್ವಾಸುಪರ್ಣಾ ಮೊದಲಾದ ಭೇದವಾಕ್ಯವು ಚೇತನಂ ಭೇದವನ್ನೇ ಹೇಳುತ್ತದೆ. ಆದ್ದರಿಂದ ಐಕ್ಯವಾಕ್ಯಕ್ಕೆ ಚೈತನ್ಯೈಕ್ಯವನ್ನು ಬಿಟ್ಟು ಬೇರೆ ಯಾವ ಅರ್ಥವನ್ನು ಹೇಳಿದರೂ ಭೇದವಾಕ್ಯದ ವಿರೋಧವು ಬರುವುದಿಲ್ಲ. ಹೀಗೆ ಅವುಗಳಿಗೆ ವಿರೋಧವನ್ನು ಪರಿಹರಿಸಬೇಕೇ ಹೊರತು, ಐಕ್ಯವಾಕ್ಯವನ್ನು ತತ್ವಾವೇದಕವೆಂದು ಹೇಳಿ, ಭೇದವಾಕ್ಯವನ್ನು ಅತತ್ವಾವೇದಕವೆಂದು ಹೇಳಿ ವಿರೋಧವನ್ನು ಪರಿಹಾರ ಮಾಡಬಾರದು.

**ಏಕೀಭೂತಾಸ್ತು ಕುರವ ಏಕೀಭೂತೌ ನೃಪಾವಿಮೌ ।**
**ಐಕ್ಯಾದ್ವಯಸ್ಯ ಋಭುಮಾನಿತ್ಯಾದ್ಯುಕ್ತಿರ್ವಿಚಾರ್ಯತಾಮ್ ॥ ೫೨೫ ॥**

**ಅರ್ಥ–** ಕುರುವಃ = ಕೌರವರು, ಏಕೀಭೂತಾ = ಒಂದಾದರು, ಇಮೌ = ಇವರಿಬ್ಬರು, ನೃಪೌ = ರಾಜರು, ಏಕೀಭೂತೌ = ಒಂದಾದರು, ಐಕ್ಯಾದ್ವಯಸ್ಯ ಋಭುಮಾನಿತ್ಯಾದ್ಯುಕ್ತಿಃ= ಐಕ್ಯಾದ್ವಯಸ್ಯ ಋಭುಮಾನ್ ಇವೇ ಮೊದಲಾದ ಮಾತು, ವಿಚಾರ್ಯತಾಮ್ = ಚಿಂತಿಸಲ್ಪಡಲಿ.

**ಅನುವಾದ–** ಕುರುಗಳು ಏಕೀಭೂತರಾದರು, ರಾಜರು ಏಕೀಭೂತರಾದರು. ಐಕ್ಯವಿದ್ದ ಕಾರಣ ಸ್ನೇಹಿತನೇ, ಸಂಪತ್ತುಳ್ಳವನೇ ಎಂದು ಸಂಬೋಧಿಸಿದೆ. ಮೊದಲಾದ ವಾಕ್ಯಗಳನ್ನು ವಿಚಾರ ಮಾಡು.

**ಭಾವವಿಲಾಸಿನೀ–**'ಏಕೀಭೂತಾಸ್ತು ಕುರವಃ' ಇತಿ ಸ್ಥಾನೈಕ್ಯೇ ಏಕಶಬ್ದಪ್ರಯೋಗಸ್ಯೋದಾಹರಣಮ್। ಇಮೌ ನೃಪಾವೇಕೀಭೂತಾವಿತಿ ಮತ್ಯೈಕ್ಯೇ ಏಕಶಬ್ದಪ್ರಯೋಗಸ್ಯೋದಾಹರಣಮ್ । ಐಕ್ಯಾದ್ವಯಸ್ಯಋಭುಮಾನಿತ್ಯನೇನ 'ಶಯ್ಯಾಸನಾಟನವಿಕತ್ಥನಭೋಜನಾದಿಷ್ವೈಕ್ಯಾದ್ವಯಸ್ಯ ಋಭುಮಾನಿತಿ ವಿಪ್ರಲಬ್ಧಃ । ಸಖ್ಯುಸ್ಸಖೇವ ಪಿತೃವತ್ತನುಜಸ್ಯ ಸರ್ವಂ ಸೇಹೇ ಮಹಾಮಹತಯಾ ಕುಮತೇರಘಂ ಮೇ॥' ಇತಿ ಭಾಗವತೋಕ್ತ್ಯಾ ವ್ಯಾಪ್ತ್ಯೈಕ್ಯೇ ಐಕ್ಯಪದಪ್ರಯೋಗಸ್ಯೋದಾಹರಣಮ್। ಋಭುಮಾನ್ ದೇವಶ್ರೇಷ್ಠಃ ಕೃಷ್ಣಃ ಶಯನಾದಿವ್ಯಾಪಾರೇಷ್ವೈಕ್ಯಾದವಿನಾಭಾವಾತ್ ಸಹೈವ ಸಂಚರಣಾದಿತ್ಯರ್ಥಃ । ವಯಸ್ಯಃ ಸಖೇತಿ ವಿಪ್ರಲಬ್ಧೋ ವಂಚಿತೋಽಪಿ ಮಹಾಮಹತಯಾ ಮಹಾಮಹಿಮತಯಾ ಕುಮತೇರ್ಮೇ ಸರ್ವಮಘಂ ಸಖ್ಯುಃ ಸಖೇವ ತನಯಸ್ಯ ಪಿತೃವತ್ಸೇಹ ಇತಿ ಶ್ಲೋಕಾರ್ಥಃ । ಅತ್ರ ಸಾದೃಶ್ಯೇ ಐಕ್ಯಪ್ರಯೋಗಸ್ಯ ಸಿಂಹೋ ದೇವದತ್ತ ಇತ್ಯಾದೌ ಏಕಸ್ಮಿನ್ ಗ್ರಾಮೇಽವಿಶಿಷ್ಟಸ್ಯಾಪಿ

ಯವನಸ್ಯ ಶಕ್ಯಾ ಸ್ವಾತನ್ತ್ರ್ಯೇ ಸತ್ಯಸ್ಮಿನ್ ಗ್ರಾಮೇऽಯಮೇಕ ಏವೇತಿ ಸ್ವಾತಂತ್ರ್ಯೈಕ್ಯೇ ಏಕಪದಪ್ರಯೋಗಸ್ಯ ಇತರಕಾರ್ಯೇಷ್ವಸ್ವತಂತ್ರಸ್ಯಾಪಿ ಕಸ್ಯಚಿತ್ತಪೋವಿದ್ಯಾದಿನೋತ್ತಮತ್ವೇ ಸತಿ ಅಸ್ಮಿನ್ ಗ್ರಾಮೇऽಯಮೇಕ ಏವೇತಿ ಏಕಪದಪ್ರಯೋಗಸ್ಯ ಚೋದಾಹರಣಾನಿ ಪ್ರಸಿದ್ಧತ್ವಾನ್ನೋಕ್ತಾನಿ । ಅತ್ರ ನಿಮಿತ್ತಪಂಚಕಂ 'ಸ್ವಾತನ್ತ್ರ್ಯೇ ಚ ವಿಶಿಷ್ಟತ್ವೇ ಸ್ಥಾನಮತ್ಯೈಕ್ಯಯೋ-ರಪಿ। ಸಾದೃಶ್ಯೇ ಚೈಕ್ಯವಾಕ್ ಸಮ್ಯಕ್ ಸಾವಕಾಶಾ ಯಥೇಷ್ಟತಃ॥' ಇತ್ಯನುವ್ಯಾಖ್ಯಾನೋಕ್ತರೀತ್ಯಾ ಸಂಗೃಹೀತಮ್ । ವ್ಯಾಪ್ತ್ಯೈಕ್ಯಂ ತು ಭಾಗವತೋಕ್ತಂ ಗ್ರಂಥಕೃತೈವ ಸಂಗೃಹೀತಮಿತಿ ದ್ರಷ್ಟವ್ಯಮ್ ॥ ೫೨೫ ॥

**ವಿವರಣೆ–** 'ಏಕೀಭೂತಾಃ ಕುರವಃ' ಎಂಬ ವಾಕ್ಯಕ್ಕೆ ಕುರುಗಳು ಯುದ್ಧಕಾಲದಲ್ಲಿ ಒಂದು ಸ್ಥಳದಲ್ಲಿ ಸೇರಿದರು ಎಂದು ಅರ್ಥ. ಹೊರತಾಗಿ ಪಾಂಡವರು ಮತ್ತು ಕೌರವರು ಅಭಿನ್ನರಾದರು ಎಂದು ಅರ್ಥವಲ್ಲ. ರಾಜರು ಒಂದಾದರು ಎಂಬ ಪ್ರಯೋಗವೂ ಇದೆ. ಇಲ್ಲಿ ಒಂದಾದರು ಎಂದು ಹೇಳಿದರೆ ಅವರಿಗೆ ಇದ್ದ ಮತಿಭೇದವನ್ನು ಪರಿಹರಿಸಿಕೊಂಡು ಒಂದೇ ರೀತಿಯ ಬುದ್ಧಿಯುಳ್ಳವರಾದರು ಎಂದು ಅರ್ಥ. ಹೊರತಾಗಿ ಕೌಶಾಂಬಿಯ ರಾಜನು ಪಾಟಲೀಪುತ್ರದ ರಾಜನೇ ಆದನು ಎಂದಾಗಲಿ, ಪಾಟಲೀಪುತ್ರದ ರಾಜನು ಕೌಶಾಂಬಿಯ ರಾಜನೇ ಆದನು ಎಂದಾಗಲಿ ಅರ್ಥವಲ್ಲ. 'ಐಕ್ಯಾದ್ವಯಸ್ಯ ಋಭಮಾನ್' ಎಂಬುದು ಅರ್ಜುನನ ವಾಕ್ಯ. ಇದು ಭಾಗವತದ ಪ್ರಥಮಸ್ಕಂದದಲ್ಲಿ ಬರುತ್ತದೆ. ಆ ಶ್ಲೋಕದ ಪೂರ್ಣಪಾಠ 'ಶಯ್ಯಾಸನಾಟನವಿಕತ್ಥನಭೋಜನಾದಿಷ್ವೈಕ್ಯಾದ್ವಯಸ್ಯ ಋಭುಮಾನಿತಿ ವಿಪ್ರಲಬ್ಧಃ । ಸಖ್ಯುಃ ಸಖೇವ ಪಿತೃವತ್ತನಯಸ್ಯ ಸರ್ವಂ ಸೇಹೇ ಮಹಾಮಹಿತಯಾ ಕುಮತೇರಘಂ ಮೇ'. ಅರ್ಜುನನು ತನಗೆ ಕೃಷ್ಣನ ಜೊತೆಯಲ್ಲಿ ಐಕ್ಯವಿದ್ದ ಕಾರಣ ಸ್ನೇಹಿತನೇ ಎಂದು ಮುಂತಾಗಿ ಸಂಬೋಧಿಸಿ, ದುಷ್ಟಬುದ್ಧಿಯಿಂದ ಮಾಡಿದ ಪಾಪವೆಲ್ಲವನ್ನು ಸಹಿಸಿಕೊಂಡನು ಎಂದು ಅರ್ಜುನನ ಅಭಿಪ್ರಾಯ. ಆ ಐಕ್ಯವನ್ನು ಅವನೇ ವಿವರಿಸುತ್ತಾನೆ. ಮಲಗಿಕೊಳ್ಳುವುದು, ಕುಳಿತುಕೊಳ್ಳುವುದು, ತಿರುಗುವುದು, ಮಾತನಾಡುವುದು, ಊಟಮಾಡುವುದು ಮೊದಲಾದ ವ್ಯವಹಾರಗಳಲ್ಲಿ ಒಟ್ಟಿಗೆ ಮಾಡಿದ ಕಾರಣದಿಂದ ನಾನು ಹೀಗೆ ಮಾತನಾಡಿದೆ ಎಂದು ಹೇಳುತ್ತಾನೆ. ಆದ್ದರಿಂದ ಕೃಷ್ಣನ ಶಯನಾದಿ ವ್ಯಾಪಾರ ಮತ್ತು ಅರ್ಜುನನ ಶಯನಾದಿ ವ್ಯಾಪಾರ ಇವುಗಳಿಗೆ ವ್ಯಾಪ್ತಿಯಿದೆ. ಅರ್ಜುನನ ಶಯನವಿದ್ದಾಗ ಕೃಷ್ಣನ ಶಯನವೂ ಇದೆ. ಅರ್ಜುನನ ಶಯನವಿಲ್ಲದಿದ್ದಾಗ ಕೃಷ್ಣನ ಶಯನವೂ ಇಲ್ಲ. ಹೀಗೆ ಎಲ್ಲಾ ವ್ಯಾಪಾರಗಳಲ್ಲಿಯೂ ಕೃಷ್ಣಾರ್ಜುನರಿಗೆ ವ್ಯಾಪ್ತಿ ಇರುವ ಕಾರಣ ಅರ್ಜುನನು ಅದನ್ನು ಐಕ್ಯವೆಂದು ವಿವರಿಸಿದ್ದಾನೆ. ಹೊರತಾಗಿ ತಾನು ಮತ್ತು ಕೃಷ್ಣನು ಅಭಿನ್ನರಾದವರು ಎಂದು ಹೇಳಿಲ್ಲ. ಇಂತಹ ವಾಕ್ಯಗಳನ್ನು ವಿಚಾರ ಮಾಡಬೇಕು. ಸ್ಥಾನೈಕ್ಯ, ಮತ್ಯೈಕ್ಯ ಮೊದಲಾದ ವಿಷಯಗಳೆಲ್ಲವನ್ನೂ ಆಚಾರ್ಯರೇ ತಮ್ಮ ಗ್ರಂಥಗಳಲ್ಲಿ ಹೇಳಿದ್ದಾರೆ. ಆದರೆ, ವ್ಯಾಪ್ತ್ಯೈಕ್ಯ ಎಂಬ ವಿಷಯವು ಮಾತ್ರ ಗ್ರಂಥಕಾರರಾದ ವಾದಿರಾಜರು ತಾವೇ ಹೊಸದಾಗಿ ಕೊಟ್ಟಿರುವ ಇನ್ನೊಂದು ಅರ್ಥ.

**ಲಿಂಗಾನುಶಾಸನಂ ಯಸ್ಮಾದೇಕೇ ಮುಖ್ಯಾನ್ಯಕೇವಲಾಃ ।**
**ಇತ್ಯಾಹ ಭೇದ ಏವೈಕ್ಯಂ ಮುಖ್ಯತಾ ವಾ ತತೋ ಭವೇತ್ ॥ ೫೨೬ ॥**

**ಅರ್ಥ–** ಯಸ್ಮಾತ್ = ಯಾವ ಕಾರಣದಿಂದ, ಲಿಂಗಾನುಶಾಸನಮ್ = ಲಿಂಗಾನುಶಾಸನರೂಪವಾದ ಕೋಶವು, ಏಕೇ = 'ಏಕ' ಎಂಬ ಪದವು ಮುಖ್ಯಾನ್ಯಕೇವಲಾಃ = ಮುಖ್ಯ, ಬೇರೆ ಮತ್ತು ಕೇವಲ ಎಂಬ ಅರ್ಥವುಳ್ಳದ್ದು ಇತಿ = ಎಂಬುದಾಗಿ, ಆಹ = ಹೇಳಿತೋ, ತತಃ = ಆ ಕಾರಣದಿಂದ, ಐಕ್ಯಂ = ಏಕತ್ವವು, ಭೇದಃ ಏವ = ಭೇದವೇ ಆಗಲಿ, ವಾ = ಅಥವಾ, ಮುಖ್ಯತಾ = ಮುಖ್ಯತ್ವವೇ ಆಗಲಿ, ಭವೇತ್ = ಆದೀತು.

**ಅನುವಾದ– ಲಿಂಗಾನುಶಾಸನರೂಪವಾದ ಕೋಶವು ಏಕಶಬ್ದಕ್ಕೆ ಮುಖ್ಯ , ಅನ್ಯ ಮತ್ತು ಕೇವಲ ಎಂಬ ಅರ್ಥವನ್ನು ಹೇಳುತ್ತದೆ. ಆದ್ದರಿಂದ ಐಕ್ಯವಾಕ್ಯಕ್ಕೆ ಭೇದವು ಮುಖ್ಯವಾದ ಅರ್ಥವೇ ಆಗುತ್ತದೆ.**

**ಭಾವವಿಲಾಸಿನೀ–**ಇದಾನೀಮ್ 'ಏಕಮೇವಾದ್ವಿತೀಯಮ್' ಇತ್ಯಾದೌ ವಿದ್ಯಮಾನಮೇಕಪದಂ ಲಿಂಗಾನುಶಾಸನಬಲಾನ್ಮುಖ್ಯಯಾ ವೃತ್ತ್ಯಾ ಸರ್ವೋತ್ತಮತ್ವಂ ಭೇದಂ ವಾ ವಕ್ತೀತಿ ತವೈವ ವಿರೋಧೀತಿ ಭಾವೇನಾಹ – **ಲಿಂಗಾನುಶಾಸನಮಿತ್ಯಾದಿನಾ ॥ ಅತಃ ಕಾರಣಾತ್ ॥ ೫೨೬ ॥**

**ವಿವರಣೆ–** ಇನ್ನು 'ಏಕಮೇವಾದ್ವಿತೀಯಮ್' ಇತ್ಯಾದಿ ಶ್ರುತಿಯಲ್ಲಿರುವ ಏಕಪದವು ಕೋಶದ ಬಲದಿಂದ ಸರ್ವೋತ್ತಮತ್ವವನ್ನೂ ಅಥವಾ ಸರ್ವಸ್ಮಾತ್ ಭೇದವನ್ನು ಹೇಳುವ ಕಾರಣದಿಂದ ಐಕ್ಯವಾಕ್ಯವು ನಿನಗೇ ವಿರೋಧಿಯಾಗುತ್ತದೆ ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ. ಏಕಶಬ್ದಕ್ಕೆ ಮುಖ್ಯ ಎಂದು ಅರ್ಥವಾದರೆ, ಹರಿಯು ಸರ್ವೋತ್ತಮನು ಎಂದು ಅರ್ಥವಾಗುತ್ತದೆ. ಏಕಶಬ್ದಕ್ಕೆ ಅನ್ಯ ಎಂದು ಅರ್ಥವಾದರೆ, ಹರಿಯು ಜಡಚೇತನಾತ್ಮಕ ಜಗತ್ತಿಗಿಂತ ಭಿನ್ನನಾದವನು ಎಂದು ಸಿದ್ಧವಾಗುತ್ತದೆ. ಎರಡೂ ಏಕಶಬ್ದದ ಮುಖ್ಯಾರ್ಥಗಳೇ. ಇಲ್ಲಿ ಲಕ್ಷಣಾ ಮಾಡುತ್ತಿಲ್ಲ. ಆದ್ದರಿಂದ ನಿನಗೆ ಅಭಿಮತವಾದ ಐಕ್ಯವಾಕ್ಯವೇ ನಿನಗೆ ವಿರೋಧವನ್ನುಂಟು ಮಾಡುತ್ತದೆ.

**ಯದಾ ತವೈಕ್ಯಶಬ್ದೋಽಯಂ ಭೇದಂ ವಕ್ತ್ಯಖಿಲೇಶಿತುಃ ।**
**ವಕ್ತಿ ಸರ್ವೋತ್ತಮತ್ವಂ ವಾ ಪ್ರತಿವಕ್ತಿ ಕಥಂ ಭವಾನ್ ॥ ೫೨೭ ॥**

**ಅರ್ಥ–** ಯದಾ = ಯಾವಾಗ, ತವ = ನಿನ್ನ, ಅಯಂ = ಈ, ಐಕ್ಯಶಬ್ದಃ = 'ಐಕ್ಯ' ಎಂಬ ಪದವು, ಅಖಿಲೇಶಿತುಃ = ಸರ್ವಸಮರ್ಥನಾದ ನಾರಾಯಣನಿಗೆ, ಭೇದಂ = ಭೇದವನ್ನು, ವಾ = ಅಥವಾ, ಸರ್ವೋತ್ತಮತ್ವಂ = ಸರ್ವೋತ್ತಮತ್ವವನ್ನು, ವಕ್ತಿ = ಹೇಳುತ್ತದೆಯೋ (ತದಾ = ಆಗ), ಭವಾನ್ = ನೀನು, ಕಥಂ = ಹೇಗೆ, ಭೇದವನ್ನು ಪ್ರತಿವಕ್ತಿ = (ತತ್ತ್ವವಾದಿಗಳಿಗೆ) ಎದುರು ಮಾಡನಾಡುತ್ತೀಯೆ? (ಭೇದವನ್ನು ನಿರಾಕರಿಸುತ್ತೀಯೇ?)

**ಅನುವಾದ–** ನಿನಗೆ ಅಭಿಮತವಾದ ಐಕ್ಯವನ್ನು ಹೇಳುವ ಏಕಶಬ್ದವು ಪರಮಾತ್ಮನಿಗೆ ಭೇದವನ್ನೇ ಹೇಳುತ್ತದೆ ಎಂದ ಮೇಲೆ ಅಥವಾ ಸರ್ವೋತ್ತಮತ್ವವನ್ನೇ ಹೇಳುತ್ತದೆ ಎಂದ ಮೇಲೆ, ನೀನು ಭೇದವನ್ನಾಗಲಿ, ಸರ್ವೋತ್ತಮತ್ವವನ್ನಾಗಲಿ ಹೇಗೆ ನಿರಾಕರಿಸುತ್ತೀಯೆ?

**ಭಾವವಿಲಾಸಿನೀ–ತತಃ ಕಿಮ್? ಇತ್ಯತ ಆಹ – ಯದೇತಿ ॥** ತದೇತಿ ಶೇಷಃ । ಭವಾನ್ ಕಥಂ ಪ್ರತಿವಕ್ತಿ? ತತ್ತ್ವವಾದಿನಾಂ ಪ್ರತಿಭಟತಯಾ ವಕ್ತಿ । ತ್ವದಾಯುಧಸ್ಯೈವ ಪರೈರಪಹೃತತ್ವಾದಿತಿ ಭಾವಃ । ಶ್ರುತಿಯೋಜನಾ ತು 'ಏಕಮೇವಾದ್ವಿತೀಯಮ್' ಇತ್ಯತ್ರ ಏಕಂ ಸರ್ವೋತ್ತಮಂ ಸಕಲಜೀವಜಡಾತ್ಮಕಾತ್ ಪ್ರಪಂಚಾದತ್ಯಂತಭಿನ್ನಮಿತಿ ವಾ 'ಪರೇಽವ್ಯಯೇ ಸರ್ವ ಏಕೀಭವಂತಿ' ಇತ್ಯತ್ರ ತು ಅವ್ಯಯೇ ಪರೇ ಪರಮಾತ್ಮನಿ ಆಧಾರೇ ಸ್ಥಿತಾ ಮುಕ್ತಾಃ ಮುಕ್ತತ್ವಾದೇವೈಕೀಭವಂತಿ ಸಂಸಾರಿಭ್ಯೋ ಮುಖ್ಯಾ ವಾ ತದ್ವಿಲಕ್ಷಣಾ ವಾ ಪರಸ್ಪರಂ ಪರಮಾತ್ಮನಃ ಸಕಾಶಾಚ್ಚ ಭಿನ್ನಾ ವಾ ಭವಂತೀತಿ ದ್ರಷ್ಟವ್ಯಾ ॥ ೫೨೭ ॥

**ವಿವರಣೆ–** ನಿನಗೆ ಅಭಿಮತವಾದ ನಿನ್ನ ಆಯುಧವನ್ನೇ ನಾವು ಅಪಹರಿಸಿದ್ದೇವೆ ಆದ್ದರಿಂದ ನೀನು ನಿರಾಯುಧನಾಗಿ ಹೇಗೆ ನಮ್ಮ ಜೊತೆಯಲ್ಲಿ ಯುದ್ಧಮಾಡುತ್ತೀಯೆ ಎಂಬ ಭಾವವನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ. ಏಕಮೇವಾದ್ವಿತೀಯಂ ಬ್ರಹ್ಮ ಎಂಬ ಈ ಶ್ರುತಿಯಲ್ಲಿ ಅದ್ವಿತೀಯನಾದ ಬ್ರಹ್ಮನು ಸರ್ವೋತ್ತಮನು ಅಥವಾ ಸಕಲ-ಜೀವಜಡಾತ್ಮಕವಾದ ಪ್ರಪಂಚಕ್ಕಿಂತಲೂ ಭಿನ್ನನಾದವನು ಎಂದು ಅರ್ಥವಾಗುತ್ತದೆ. 'ಪರೇಽವ್ಯವಯೇ ಸರ್ವಏಕೀಭವಂತಿ' ಎಂಬ ಶ್ರುತಿಯಲ್ಲಿ ಅವ್ಯಯೇ ನಾಶರಹಿತನಾದ ಪರೇ ಪರಮಾತ್ಮ ಎಂಬ ಆಧಾರದಲ್ಲಿ ಇರುವ ಮುಕ್ತರೆಲ್ಲರೂ ಮುಕ್ತಿಯಲ್ಲಿ ಏಕೀಭವಂತಿ ಎಂದರೆ, ಪರಸ್ಪರವಾಗಿ ಭಿನ್ನರಾಗಿರುತ್ತಾರೆ ಮತ್ತು ಪರಮಾತ್ಮನಿಂದಲೂ ಭಿನ್ನರಾಗಿರುತ್ತಾರೆ ಎಂದು ಅರ್ಥ. ಆದ್ದರಿಂದ ನಿನಗೆ ಅಭಿಮತವಾದ ಶ್ರುತಿಯ ಅರ್ಥವೇ ನಿನಗೆ ವಿರೋಧಿಯಾಗಿದೆ.

ಏವಂ ನಿರ್ಗುಣವಾಕ್ಯಂ ಚ ಸಾಮಾನ್ಯವಚನತ್ವತಃ ।
ದೋಷರೂಪಗುಣಾಭಾವಪರಂ ಕರ್ತುಂ ಹಿ ಶಕ್ಯತೇ ॥ ೫೨೮ ॥

ಏಷ ಸರ್ವೇಶ ಇತ್ಯಾದಿವಿಶೇಷವಚನಂ ತು ಯತ್ ।
ಅನ್ಯಾರ್ಥಶೂನ್ಯಂ ತತ್ ಸ್ವಾರ್ಥಂ ಪ್ರಾಣತ್ಯಾಗೇಽಪಿ ನ ತ್ಯಜೇತ್ ॥ ೫೨೯ ॥

**ಅರ್ಥ–** ಏವಂ = ವೇದವಾಕ್ಯವು ಒಮ್ಮೊಮ್ಮೆ ಸಾವಕಾಶವಾಗಿರುವುದರಿಂದ, ನಿರ್ಗುಣವಾಕ್ಯಂ ಚ = 'ನಿರ್ಗುಣ' ಎಂಬ ವಾಕ್ಯವೂ ಕೂಡ, ಸಾಮಾನ್ಯವಚನತ್ವತಃ = ಸಾಮಾನ್ಯವಾದ ವಚನವಾಗಿರುವುದರಿಂದ, ದೋಷರೂಪಗುಣಾಭಾವಪರಂ =

ದೋಷವೆಂಬ ಗುಣ ಇಲ್ಲ ಎಂಬ ಅಭಿಪ್ರಾಯವುಳ್ಳದ್ದನ್ನಾಗಿ, ಕರ್ತುಂ = ಮಾಡಲು, ಶಕ್ಯತೇ = ಸಾಧ್ಯವಾಗುತ್ತದೆ, ಹಿ = ನಿಶ್ಚಯವು.

ಯತ್ ತು = ಯಾವ, ಏಷ = ಇವನು, ಸರ್ವೇಶಃ = ಸರ್ವೋತ್ತಮನು, ಇತ್ಯಾದಿವಿಶೇಷವಚನಂ – ಇತ್ಯಾದಿ = ಇದೇ ಮೊದಲಾಗಿವುಳ್ಳ, ವಿಶೇಷ = ವಿಶೇಷವಾದ, ವಚನಂ = ಮಾತು ಇದೆಯೋ, ತತ್ = ಅದು, ಅನ್ಯಾರ್ಥಶೂನ್ಯಂ – ಅನ್ಯ = ತೋರಿದ ಅರ್ಥಕ್ಕಿಂತ ಬೇರೆಯ, ಅರ್ಥ = ಅರ್ಥದಿಂದ, ಶೂನ್ಯಂ = ರಹಿತವಾಗಿದೆ, ತತ್= ಆದ್ದರಿಂದ, ತತ್= ಅದು, ಪ್ರಾಣತ್ಯಾಗೇಽಪಿ = ಪ್ರಾಣ ಹೋದರೂ, ಸ್ವಾರ್ಥಂ = ತನ್ನ ಅರ್ಥವನ್ನು, ನ ತ್ಯಜೇತ್ = ಬಿಡಲಾರದು.

**ಅನುವಾದ–** ಇದೇ ರೀತಿಯಲ್ಲಿ ನಿರ್ಗುಣವಾಕ್ಯವು ಸಾಮಾನ್ಯವಚನವಾದುದರಿಂದ ಅದಕ್ಕೆ ದೋಷರೂಪವಾದ ಗುಣವಿಲ್ಲ ಎಂದು ಅರ್ಥವನ್ನು ಮಾಡಲು ಬರುತ್ತದೆ. 'ಏಷ ಸರ್ವೇಶ್ವರಃ' ಇತ್ಯಾದಿ ವಾಕ್ಯಗಳಿಗೆ ಬೇರೆ ಅರ್ಥವನ್ನು ಮಾಡಲು ಬರುವುದಿಲ್ಲ. ಈ ಶ್ರುತಿಯು ಪ್ರಾಣಹೋದರೂ ತನ್ನ ಅರ್ಥವನ್ನು ತ್ಯಜಿಸುವುದಿಲ್ಲ.

**ಭಾವವಿಲಾಸಿನೀ–**ಐಕ್ಯವಾಕ್ಯೋಕ್ತಂ ಸಾವಕಾಶತ್ವನ್ಯಾಯಂ 'ಕೇವಲೋ ನಿರ್ಗುಣಃ' ಇತಿ ನಿರ್ಗುಣವಾಕ್ಯೇಽಪ್ಯತಿದಿಶತಿ – ಏವಮಿತಿ ॥ ಯದ್ಯಪ್ಯುತ್ಸರ್ಗಾಪವಾದ- ನ್ಯಾಯೇನಾಪಿ ಪರಿಹಾರಃ। ತಥಾಪ್ಯುತ್ಸರ್ಗಸ್ಯ ಸಾವಕಾಶತ್ವನಿಯಮೇನಾಪವಾದಸ್ಯ ನಿರವಕಾಶತ್ವನಿಯಮೇನ ಚಾಯಮತಿದೇಶಃ। ಉಪಾಯಸ್ಯೋಪಯಾಂತರಾವಿರೋಧಿತ್ವಾದಿತಿ ಭಾವಃ । ದೋಷರೂಪ- ಗುಣಾಃ ರಾಗದ್ವೇಷದುಃಖಬಂಧಕಸತ್ತ್ವಾದಯಃ ಪ್ರಾಕೃತರೂಪಾದಯಸ್ಸರ್ವೇ ಲೌಕಿಕಗುಣಾ ವಾ ॥ ೫೨೮-೫೨೯ ॥

**ವಿವರಣೆ–** ಐಕ್ಯವಾಕ್ಯದಲ್ಲಿ ಹೇಳಿದ ಸಾವಕಾಶತ್ವನ್ಯಾಯವನ್ನು 'ಕೇವಲೋ ನಿರ್ಗುಣಃ' ಎಂಬ ನಿರ್ಗುಣವಾಕ್ಯದಲ್ಲಿಯೂ ಅತಿದೇಶ ಮಾಡಿ ತೋರಿಸುತ್ತಾರೆ. ಯದ್ಯಪಿ ಇಲ್ಲಿ ಉತ್ಸರ್ಗಾಪವಾದ ನ್ಯಾಯದಿಂದಲೂ ವಿರೋಧವನ್ನು ಪರಿಹಾರ ಮಾಡಬಹುದು. ಆದರೂ, ಉತ್ಸರ್ಗವು ನಿಯಮೇನ ಸಾವಕಾಶವೂ, ಅಪವಾದವು ನಿಯಮೇನ ನಿರವಕಾಶವೂ ಆಗಿರುವುದರಿಂದ ಇಲ್ಲಿ ಸಾವಕಾಶತ್ವ ನಿರವಕಾಶತ್ವ ನ್ಯಾಯವನ್ನೇ ಸ್ವೀಕರಿಸುತ್ತಾರೆ. ಸಾವಕಾಶತ್ವ ನಿರವಕಾಶತ್ವ ನ್ಯಾಯದಿಂದ ಸಿದ್ಧವಾದುದನ್ನು ಉತ್ಸರ್ಗಾಪವಾದ ರೂಪದಿಂದ ಇನ್ನೊಂದು ನ್ಯಾಯದಿಂದ ಸಿದ್ಧಮಾಡಿದರೂ ಏನೂ ತೊಂದರೆಯಿಲ್ಲ. ಇದು ಒಂದು ಮಾರ್ಗ. ಅದು ಇನ್ನೊಂದು ಮಾರ್ಗ. 'ಏಷ ಸರ್ವೇಶ್ವರಃ' ಮೊದಲಾದ ವಾಕ್ಯಗಳು ಸರ್ವೇಶ್ವರತ್ವ ಮೊದಲಾದ ಗುಣಗಳನ್ನು ವಿಶೇಷವಾಗಿ ಹೇಳುತ್ತವೆ. ಅದಕ್ಕೆ ಬೇರೆ ಅರ್ಥವನ್ನು ಮಾಡಲು ಬರುವುದೇ ಇಲ್ಲ. ನಿರ್ಗುಣ ಎಂಬ ಶಬ್ದವು ಗುಣವಿಲ್ಲ ಎಂದು ಇಷ್ಟೇ ಹೇಳುತ್ತದೆ. ಆದ್ದರಿಂದ ದೋಷರೂಪವಾದ ಗುಣವನ್ನು ನಿಷೇಧಮಾಡಿದರೆ, ವಿರೋಧವು ಪರಿಹಾರವಾಗುತ್ತದೆ.

ಪರಮಾತ್ಮನಲ್ಲಿ ಸರ್ವೇಶ್ವರತ್ವಾದಿ ಗುಣಗಳಿದ್ದರೂ, ಪ್ರಾಕೃತವಾದ ದೋಷರೂಪವಾದ ಗುಣಗಳಿಲ್ಲವಾದ ಕಾರಣ ನಿರ್ಗುಣತ್ವ ಶ್ರುತಿಯು ಉಪಪನ್ನವಾಗುತ್ತದೆ.

**ನ ಹಿಂಸ್ಯಾದಿತಿ ವಾಕ್ಯಂ ಹಿ ಕ್ರತೋರನ್ಯತ್ರ ಮಾನ್ಯತೇ ।**
**ತದ್ಬಹ್ವರ್ಥವಿಭಕ್ತ್ಯಂತಸರ್ವಶಬ್ದಾನ್ವಿತಾಂ ಶ್ರುತಿಮ್ ॥**
**ಶ್ರೌತಾದನ್ಯತ್ರ ನಯತಾ ತಚ್ಛೂನ್ಯಾ ಕಿಂ ನ ನೀಯತೇ ॥ ೫೩೦ ॥**

**ಅರ್ಥ–** 'ನ ಹಿಂಸ್ಯಾತ್' = 'ನ ಹಿಂಸ್ಯಾತ್ ಸರ್ವಾ ಭೂತಾನಿ' 'ಎಲ್ಲ ಪ್ರಾಣಿಗಳನ್ನೂ ಹಿಂಸಿಸಬಾರದು', ಇತಿ = ಎಂಬ, ವಾಕ್ಯಂ = ಮಾತು, ಕ್ರತೋಃ = ಯಾಗದ ದೆಸೆಯಿಂದ, ಅನ್ಯತ್ರ = ಬೇರೆಯ ಸ್ಥಳದಲ್ಲಿ, ಮಾನ್ಯತೇ = ಗೌರವಿಸಲ್ಪಡುತ್ತದೆ. ತದ್ಬಹ್ವರ್ಥವಿಭಕ್ತ್ಯಂತ-ಸರ್ವಶಬ್ದಾನ್ವಿತಾಂ – ತತ್ = ಆ, ಬಹು = ಬಹಳ ಎಂಬ, ಅರ್ಥ = ಅರ್ಥವುಳ್ಳ, ವಿಭಕ್ತಿ = 'ಜಸ್' ಎಂಬ ಬಹುವಚನ ವಿಭಕ್ತಿಯೇ, ಅಂತ = ಕೊನೆಯಲ್ಲುಳ್ಳ, ಸರ್ವ = 'ಸರ್ವ' ಎಂಬ, ಶಬ್ದ = ಪದದಿಂದ, ಅನ್ವಿತಾಂ = ಕೂಡಿದ, ಶ್ರುತಿಂ = ವೇದವನ್ನು, ಶ್ರೌತಾತ್ = ವೇದವಿಹಿತವಾದ ಯಾಗದ ದೆಸೆಯಿಂದ, ಅನ್ಯತ್ರ = ಬೇರೆಯ ಸ್ಥಳಕ್ಕೆ, ನಯತಾ = ಕೊಂಡೊಯ್ಯುವನಿಂದ, ತಚ್ಛೂನ್ಯಾ = ಅಂತಹ ಸರ್ವಶಬ್ದದಿಂದ ರಹಿತವಾದ ಮಾತು, ಕಿಂ = ಏತಕ್ಕಾಗಿ, ನ ನೀಯತೇ = ಕೊಂಡೊಯ್ಯಲ್ಪಡುವುದಿಲ್ಲ?

**ಅನುವಾದ–** 'ನ ಹಿಂಸ್ಯಾತ್ ಸರ್ವಾ ಭೂತಾನಿ' ಎಂಬ ವಾಕ್ಯವು ಯಾಗದ ಹಿಂಸೆಯನ್ನು ಬಿಟ್ಟು ಬೇರೆ ಕಡೆಯಲ್ಲಿ ಮಾನ್ಯತೆಯನ್ನು ಪಡೆಯುತ್ತದೆ. ಹಿಂಸೆಯನ್ನು ನಿಷೇಧಿಸುವ ಈ ವಾಕ್ಯವು ಬಹುತ್ವವನ್ನು ಹೇಳುವ ಬಹುವಚನ ವಿಭಕ್ತಿಯಿಂದಲೂ ಮತ್ತು ಸರ್ವ ಶಬ್ದದಿಂದಲೂ ಕೂಡಿದ್ದರೂ ಸಹ, ಅದಕ್ಕೆ ವೇದವಿಹಿತವಾದ ಹಿಂಸೆಯನ್ನು ಬಿಟ್ಟು ಬೇರೆ ಹಿಂಸೆಯನ್ನು ಮಾಡಬಾರದು ಎಂದು ಅರ್ಥವನ್ನು ಮಾಡುತ್ತೀಯೆ. ನಿರ್ಗುಣ ಶ್ರುತಿಯಲ್ಲಿ ಬಹುವಚನವಾಗಲೀ ಅಥವಾ ಸರ್ವ ಶಬ್ದವಾಗಲಿ ಇಲ್ಲ. ಅದಕ್ಕೆ ಬೇರೆ ಅರ್ಥವನ್ನು ಮಾಡಲು ಯಾವ ಅನುಪಪತ್ತಿ ಇದೆ.

**ಭಾವವಿಲಾಸಿನೀ–**ನ ಕೇವಲಮೇಷ ನ್ಯಾಯೋಽಸ್ಮಾಭಿರೇವಾಂಗೀಕ್ರಿಯತೇ ಕಿಂತು ತ್ವಯಾಽಪ್ಯಂಗೀಕೃತ ಇತ್ಯಾಹ – **ನ ಹಿಂಸ್ಯಾದಿತಿ** ॥ ತತ್ತಸ್ಮಾತ್ಸಾಮಾನ್ಯನಿಷೇಧಸ್ಯೈಕದೇಶೇ ಸಂಕುಚಿತತ್ವಾತ್ । ಬಹ್ವರ್ಥಾ ಭೂತಾನೀತಿ ಬಹುತ್ವಾರ್ಥಾ ವಿಭಕ್ತಿಸ್ತದಂತಾ ಸರ್ವಾ ಸರ್ವಾಣಿ ಇತಿ ಸರ್ವಶಬ್ದಾನ್ವಿತಾ ಚ ತಾಮಿತ್ಯರ್ಥಃ । ಶ್ರೌತಾತ್ಕ್ರತೋಃ । ತಚ್ಛೂನ್ಯಾ ನಿರ್ಗುಣ ಇತಿ ಶ್ರುತೌ ತದುಭಯಾಭಾವಾದಿತಿ ಭಾವಃ । ಪ್ರಾಕೃತಗುಣೋ ನೇತಿ ಸರ್ವೇಷಾಂ ದೋಷ-ರೂಪಗುಣಾನಾಂ ನಿಷೇದ್ಧುಂ ಶಕ್ಯತ್ವಾದ್ಬಹುವಚನೇಽಪಿ ನ ಭರ ಇತಿ ಹೃದಯಮ್ । ವಿಶೇಷವಿಧೇಃ ಸಕಾಶಾತ್ಸಾಮಾನ್ಯನಿಷೇಧಸ್ಯ ದೌರ್ಬಲ್ಯೇಽಪೀದಮೇವೋದಾಹರಣಮ್ ॥ ೫೩೦ ॥

**ವಿವರಣೆ–** ಈ ನ್ಯಾಯವನ್ನು ನಾವು ಮಾತ್ರ ಹೇಳುವುದಲ್ಲ, ಇದು ನಿನಗೂ ಸಮ್ಮತವಾದುದು ಎಂದು ಉಪಪಾದನೆ ಮಾಡುತ್ತಾರೆ. 'ನ ಹಿಂಸ್ಯಾತ್ ಸರ್ವಾ ಭೂತಾನಿ'

ಎಂಬ ವಾಕ್ಯವಿದೆ. ಯಾವ ಪ್ರಾಣಿಯನ್ನೂ ಹಿಂಸೆ ಮಾಡಬಾರದು ಎಂದು ಅದರ ಅರ್ಥ. 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬ ಇನ್ನೊಂದು ವಾಕ್ಯವಿದೆ. ಅಗ್ನೀಷೋಮ ಯಾಗಸಂಬಂಧಿಯಾದ ಪಶುವನ್ನು ಹಿಂಸೆ ಮಾಡಬೇಕೆಂದು ಅದರ ಅರ್ಥ. 'ನ ಹಿಂಸ್ಯಾತ್ ಸರ್ವಾ ಭೂತಾನಿ' ಎಂಬಲ್ಲಿ 'ಸರ್ವಾ' ಶಬ್ದಕ್ಕೆ ಸರ್ವಾಣಿ ಎಂದು ಅರ್ಥ. ಅಲ್ಲಿಯೂ ಮತ್ತು 'ಭೂತಾನಿ' ಎಂಬಲ್ಲಿ ಭೂತ ಶಬ್ದದ ಅನಂತರವೂ ಬಹುವಚನಪ್ರತ್ಯಯವಿದೆ ಮತ್ತು ಸರ್ವಶಬ್ದವು ಎಲ್ಲಾ ಪ್ರಾಣಿಗಳನ್ನೂ ಎಂದು ಹೇಳುತ್ತದೆ. ಹಾಗಿದ್ದರೂ ಅಗ್ನೀಷೋಮೀಯ ಪಶುಹಿಂಸೆಯನ್ನು ನೀನೂ ಅಂಗೀಕರಿಸುತ್ತೀಯೆ. 'ನ ಹಿಂಸ್ಯಾತ್' ಎಂಬ ವಾಕ್ಯವು ಅಗ್ನೀಷೋಮೀಯಾದಿ ಪಶುಗಳನ್ನು ಬಿಟ್ಟು ಬೇರೆ ಸ್ಥಳದಲ್ಲಿ ಪ್ರವೃತ್ತವಾಗುತ್ತದೆ ಎಂದು ನಿನ್ನ ಅಂಗೀಕಾರವೂ ಇದೆ. ಹೀಗಿರುವಾಗ 'ಏಷ ಸರ್ವೇಶ್ವರಃ' ಎಂಬ ವಾಕ್ಯವು ಹೇಳುವ ಸರ್ವೇಶ್ವರತ್ವಾದಿ ಗುಣಗಳನ್ನು ಯಾವ ರೀತಿಯಲ್ಲೂ ಒಪ್ಪದೇ ಇರಲು ಸಾಧ್ಯವಿಲ್ಲ. ಆದರೆ ನಿರ್ಗುಣವಾಕ್ಯದಲ್ಲಿ ನಿರ್ಗುಣ ಶಬ್ದದಿಂದ ಸರ್ವೇಶ್ವರತ್ವಾದಿ ಗುಣಗಳನ್ನು ಬಿಟ್ಟು ಪ್ರಾಕೃತವಾದ ಅಥವಾ ಅನಿತ್ಯವಾದ ಗುಣಗಳನ್ನು ನಿಷೇಧ ಮಾಡಲು ಏನೂ ತೊಂದರೆಯಿಲ್ಲ. ಆದ್ದರಿಂದ ನಿರ್ಗುಣವಾಕ್ಯವು ಬ್ರಹ್ಮನಲ್ಲಿರುವ ಗುಣಗಳನ್ನು ಒಪ್ಪುವುದಕ್ಕೆ ವಿರೋಧಿಯಾಗುವುದಿಲ್ಲ.

**ಅತಃ ಸಾಮಾನ್ಯತೋ ಯತ್ತು ನಿಷೇಧವಚನಂ ಶ್ರುತೌ ।**
**ವಿಶೇಷವಾಕ್ಯವಿಹಿತಂ ನಹಿ ತತ್ಪ್ರತಿಷೇಧತಿ ॥ ೫೩೧ ॥**

**ಅರ್ಥ–** ಅತಃ = ಸಾವಕಾಶವಾಗಿರುವುದರಿಂದ, ಶ್ರುತೌ = ವೇದದಲ್ಲಿ, ಯತ್ = ಯಾವುದು, ಸಾಮಾನ್ಯತಃ = ಸಾಮಾನ್ಯವಾಗಿ, ನಿಷೇಧವಚನಂ ತು = ನಿಷೇಧದ ವಾಕ್ಯವಿದೆಯೋ, ತತ್ = ಅದು, ವಿಶೇಷವಾಕ್ಯವಿಹಿತಂ = ವಿಶೇಷವಾಕ್ಯದಿಂದ ವಿಧಿಸಲ್ಪಟ್ಟದ್ದನ್ನು, ನ ಪ್ರತಿಷೇಧತಿ = ನಿಷೇಧಿಸುವುದಿಲ್ಲ.

**ಅನುವಾದ–** ಆದ್ದರಿಂದ ಶ್ರುತಿಯಲ್ಲಿ ನಿರ್ಗುಣ ಎಂಬ ಪದದಿಂದ ಹೇಳುವ ಸಾಮಾನ್ಯ ನಿಷೇಧವು ವಿಶೇಷವಾಕ್ಯವಿಹಿತವಾದ ಸರ್ವೇಶ್ವರತ್ವಾದಿ ಗುಣಗಳನ್ನು ಎಂದೂ ಪ್ರತಿಷೇಧ ಮಾಡುವುದಿಲ್ಲ.

**ಭಾವವಿಲಾಸಿನೀ–**ಅತ 'ಏಷ ಸರ್ವೇಶ್ವರಃ' ಇತ್ಯಾದಿವಿಶಿಷ್ಯ ಗುಣವಿಧಾಯಕವಾಕ್ಯಾನ್ನಿರ್ಗುಣ ಇತಿ ಸಾಮಾನ್ಯತೋ ಗುಣನಿಷೇಧಕನಿರ್ಗುಣವಾಕ್ಯಮೇವ ದುರ್ಬಲಮಿತಿ ಭಾವೇನೋಪ-ಸಂಹರತಿ – **ಅತ ಇತಿ** ॥ ೫೩೧ ॥

**ವಿವರಣೆ–** ಸಗುಣವಾಕ್ಯಕ್ಕಿಂತ ನಿರ್ಗುಣವಾಕ್ಯವು ದುರ್ಬಲವಾದ ಕಾರಣ ನಿರ್ಗುಣವಾಕ್ಯವು ಸಗುಣವಾಕ್ಯದ ವಿಷಯವನ್ನು ಅಪಹಾರ ಮಾಡುವುದಿಲ್ಲ ಎಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ.

**ಯೋಽಸೌ ನಿರ್ಗುಣ ಇತ್ಯುಕ್ತಃ ಶಾಸ್ತ್ರೇಷು ಜಗದೀಶ್ವರಃ ।**
**ಪ್ರಾಕೃತೈರ್ಹೇಯಸಂಯುಕ್ತೈರ್ಗುಣೈರ್ಹೀನತ್ವಮುಚ್ಯತೇ ॥**
**ಇತಿ ಪಾದ್ಮೇ ತ್ರಯಸ್ತ್ರಿಂಶಾಧ್ಯಾಯೇ ರುದ್ರಸ್ಯ ವಾಗಿಯಮ್ ॥ ೫೩೨ ॥**

**ಅರ್ಥ–** ಯಃ = ಯಾವ, ಅಸೌ = ಈ, ಈಶ್ವರಃ = ವಿಷ್ಣುವು, ಶಾಸ್ತ್ರೇಷು = ಶಾಸ್ತ್ರಗಳಲ್ಲಿ, ನಿರ್ಗುಣಃ = ನಿರ್ಗುಣನು, ಇತಿ ಉಕ್ತಃ = ಎಂದು ಹೇಳಲ್ಪಟ್ಟಿದ್ದಾನೋ, ಹೇಯಸಂಯುಕ್ತೈಃ - ಹೇಯ = ತ್ಯಾಜ್ಯತ್ವದಿಂದ, ಸಂಯುಕ್ತೈಃ = ಕೂಡಿದ, ಪ್ರಾಕೃತೈಃ = ಪ್ರಾಕೃತವಾದ, ಗುಣೈಃ = ಗುಣಗಳಿಂದ, ಹೀನತ್ವಂ = ರಹಿತತೆಯು, ಉಚ್ಯತೇ = ಹೇಳಲ್ಪಡುತ್ತದೆ, ಇತಿ = ಎಂದು, ಪಾದ್ಮೇ = ಪದ್ಮಪುರಾಣಕ್ಕೆ ಸಂಬಂಧಿಸಿದ, ತ್ರಯಸ್ತ್ರಿಂಶಾಧ್ಯಾಯೇ = ಮೂವತ್ತಮೂರನೆಯ ಅಧ್ಯಾಯದಲ್ಲಿ, ರುದ್ರಸ್ಯ = ರುದ್ರದೇವರ, ಇಯಂ ವಾಕ್ = ಈ ಮಾತು ಇದೆ.

**ಅನುವಾದ–** ಶಾಸ್ತ್ರಗಳಲ್ಲಿ ನಿರ್ಗುಣನೆಂದು ಹೇಳಲ್ಪಡುವ ಜಗದೀಶ್ವರನು ಪ್ರಾಕೃತವಾದ ಹೇಯ ಮಿಶ್ರಿತವಾದ ಗುಣಗಳು ಇಲ್ಲದ ಕಾರಣ ಹಾಗೆ ಹೇಳಲ್ಪಡುತ್ತಾನೆ ಎಂದು ಪಾದ್ಮಪುರಾಣದಲ್ಲಿ ಮೂವತ್ಮೂರನೆಯ ಅಧ್ಯಾಯದಲ್ಲಿ ರುದ್ರದೇವರ ವಾಕ್ಯವಿದೆ.

**ಭಾವವಿಲಾಸಿನೀ–**ಉಕ್ತಮರ್ಥಂ ಪುರಾಣವಚನೇನ ದ್ರಢಯತಿ – **ಯೋಽಸಾವಿತಿ** ॥ ಹೇಯ-ಸಂಯುಕ್ತೈರ್ಹೇಯತ್ವಸಂಯುಕ್ತೈರ್ಹೇಯೈರಿತ್ಯರ್ಥಃ ॥ ೫೩೨ ॥

**ವಿವರಣೆ–** ಹಿಂದೆ ಯುಕ್ತಿಯಿಂದ ಸಾಧಿಸಿದ ವಿಷಯವನ್ನು ಪುರಾಣ-ಸಮ್ಮತಿಯಿಂದಲೂ ಇಲ್ಲಿ ಸಮರ್ಥಿಸುತ್ತಾರೆ. ರುದ್ರದೇವರಂತಹ ಆಪ್ತತಮರು ನಿರ್ಗುಣನೆಂಬ ಶಬ್ದವನ್ನು ಹಿಡಿದು ಅದಕ್ಕೆ ಮಾಡುವ ವ್ಯಾಖ್ಯಾನವನ್ನು ಎಲ್ಲರೂ ಸ್ವೀಕರಿಸಬೇಕು. ಅವರು ಎಲ್ಲಾ ಗುಣಗಳನ್ನೂ ನಿಷೇಧಿಸುತ್ತಿಲ್ಲ. ಹೇಯವಾದ ಗುಣಗಳನ್ನು ಮಾತ್ರ ನಿಷೇಧಿಸುತ್ತಿದ್ದಾರೆ. ಆದ್ದರಿಂದ ನಿರ್ಗುಣಶ್ರುತಿಯ ವಿರೋಧವು ಸಗುಣಶ್ರುತಿಗೆ ಇರುವುದಿಲ್ಲ.

**ಶಬ್ದಸ್ಯ ಲಬ್ಧ್ವಾ ಯೋಗ್ಯಾರ್ಥಮಯೋಗ್ಯಾರ್ಥೋ ನ ಮೃಗ್ಯತೇ ।**
**ದುಗ್ಧಾರ್ಥೀ ಬುದ್ಧಿಮಾನ್ ದೋಗ್ಧಿ ಕಸ್ತಂ ಬಸ್ತಗಲಸ್ತನಮ್ ॥ ೫೩೩ ॥**

**ಅರ್ಥ–** ಶಬ್ದಸ್ಯ = ಒಂದು ಪದಕ್ಕೆ, ಯೋಗ್ಯರ್ಥಂ = ಯೋಗ್ಯವಾದ ಅರ್ಥವನ್ನು ಲಬ್ಧ್ವಾ = ಹೊಂದಿದ ಮೇಲೆ, ಅಯೋಗ್ಯಾರ್ಥಃ = ಅಯೋಗ್ಯವಾದ ಅರ್ಥವು, ನ ಮೃಗ್ಯತೇ = ಹುಡುಕಲ್ಪಡುವುದಿಲ್ಲ, ದುಗ್ಧಾರ್ಥೀ = ಹಾಲನ್ನು ಬಯಸುವ, ಕಃ = ಯಾವ, ಬುದ್ಧಿಮಾನ್ = ಬುದ್ಧಿವಂತನು, ತಂ = ಆ, ಬಸ್ತಗಲಸ್ತನಮ್ - ಬಸ್ತ = ಹೋತದ, ಗಲ = ಕುತ್ತಿಗೆಯ, ಸ್ತನಮ್ = ಸ್ತನವನ್ನು, ದೋಗ್ಧಿ = ಕರೆಯುವನು?

**ಅನುವಾದ–** ಶಬ್ದಕ್ಕೆ ಯೋಗ್ಯವಾದ ಅರ್ಥವನ್ನು ಪಡೆದ ಮೇಲೆ ಯಾರೂ ಅಯೋಗ್ಯವಾದ ಅರ್ಥವನ್ನು ಅನ್ವೇಷಣೆ ಮಾಡುವುದಿಲ್ಲ. ಕ್ಷೀರಾಪೇಕ್ಷಿಯಾದ ವಿವೇಕಿಯಾದವನು ಎಂದೂ ಹೋತನ ಮೊಲೆಗೆ ಕೈಹಾಕಿ ಕರೆಯುವುದಿಲ್ಲ.

**ಭಾವವಿಲಾಸಿನೀ–**ಪ್ರಾಮಾಣಿಕೇ ಪ್ರಮಾಣಾಂತರಾವಿರುದ್ಧೇ ಚಾರ್ಥೇ ಸಂಭವತಿ ಸತಿ ಅತಾದೃಶಾರ್ಥಗವೇಷಣಮನುಚಿತಮಿತ್ಯೇತತ್ ಸದೃಷ್ಟಾಂತಮಾಹ – **ಶಬ್ದಸ್ಯೇತಿ** ॥ ಬಸ್ತಃ ಛಾಗಃ। ಸರ್ವಥಾ ಕ್ಷೀರಭಾವಾದ್ಧಸ್ತೇತ್ಯುಕ್ತಮ್ ॥ ೫೩೩ ॥

**ವಿವರಣೆ–** ನಿರ್ಗುಣ ಶಬ್ದಕ್ಕೆ ಹೇಯಗುಣರಹಿತ ಎಂಬ ಯೋಗ್ಯಾರ್ಥವು ದೊರಕಿದ ಮೇಲೆ ಗುಣಸಾಮಾನ್ಯ ಎಂದು ಅರ್ಥವನ್ನು ಮಾಡುವ ಅಗತ್ಯವಿಲ್ಲ. ಮುಖ್ಯವಾಗಿ ಬೇಕಾದುದು ಸರ್ವೋತ್ಕರ್ಷ. ಹೇಯಗುಣವನ್ನು ನಿಷೇಧ ಮಾಡುವುದರಿಂದ ಸರ್ವೋತ್ಕರ್ಷವು ಸಿದ್ಧವಾದ ಮೇಲೆ ಸರ್ವೇಶ್ವತತ್ವಾದಿ ಗುಣಗಳನ್ನು ನಿಷೇಧ ಮಾಡಿ ದೇವರ ಸರ್ವೋತ್ಕರ್ಷವನ್ನು ಸಂಪಾದಿಸದೆ, ಮೂರ್ಖತನವನ್ನು ಮಾಡಬಾರದು.

**ಸಂಧ್ಯಾಯಾಂ ವಂದತೇ ಯೋಗೀ ಸಂಧ್ಯಾಂ ಭೋಗೀ ತು ಸುಂದರೀಮ್ ।**
**ಯುಗಪನ್ಮತಿಭೇದಸ್ತದ್ಭಿನ್ನಯೋರೇವ ನಾನ್ಯಥಾ ॥ ೫೩೪ ॥**

**ಅರ್ಥ–** ಸಂಧ್ಯಾಯಾಂ = ಸಂಧ್ಯಕಾಲದಲ್ಲಿ, ಯೋಗೀ = ಯೋಗಿಯು, ಸಂಧ್ಯಾಂ = ಸಂಧ್ಯೆಯ ದೇವತೆಯನ್ನು, ವಂದತೇ = ನಮಸ್ಕರಿಸುತ್ತಾನೆ, ಭೋಗೀ ತು = ಭೋಗಿಯಾದರೋ, ಸುಂದರೀಂ = ಸುಂದರಿಯನ್ನು, ವಂದತೇ = ನಮಸ್ಕರಿಸುತ್ತಾನೆ, ತತ್ = ಆ ಕಾರಣದಿಂದ, ಯುಗಪತ್ = ಏಕಕಾಲದಲ್ಲಿ, ಮತಿಭೇದಃ = ಬುದ್ಧಿಯ ವ್ಯತ್ಯಾಸವು, ಭಿನ್ನಯೋಃ ಏವ = ಭಿನ್ನರಾದ ವ್ಯಕ್ತಿಗಳಿಗೆ ಮಾತ್ರ, ಅನ್ಯಥಾ ನ = ಬೇರೆಯ ರೀತಿಯಲ್ಲಿ ಇಲ್ಲ.

**ಅನುವಾದ–** ಸಂಧ್ಯಾಕಾಲವು ಬಂದಾಗ ಯೋಗಿಯು ಸಂಧ್ಯಾವಂದನೆಯನ್ನು ಮಾಡುತ್ತಾನೆ. ಭೋಗಿಯು ಸುಂದರಿಯನ್ನು ಭೋಗಿಸುತ್ತಾನೆ. ಏಕಕಾಲದಲ್ಲಿ ಉಂಟಾದ ಮತಿಭೇದವು ಆ ಮತಿಗೆ ಆಶ್ರಯನಾದ ಚೇತನರಿಗೆ ಭೇದವಿಲ್ಲದಿದ್ದರೆ ಕೂಡುವುದಿಲ್ಲ. ಆದ್ದರಿಂದ ಮತಿಭೇದವನ್ನು ಚೇತನಭೇದದಿಂದಲೇ ಕೂಡಿಸಬೇಕು.

**ಭಾವವಿಲಾಸಿನೀ–**ಐಕ್ಯವಾಕ್ಯಸ್ಯ ಮತ್ಯೈಕ್ಯೇ ಸಾವಕಾಶತ್ವವದ್ಭೇದವಾಕ್ಯಸ್ಯಾಪಿ ಮತಿಭೇದೇ ಸಾವಕಾಶತ್ವಂ ಕಿಂ ನ ಸ್ಯಾತ್? ಇತಿ ಕೇನಚಿದುಕ್ತೇಽಪಿ ಭಿನ್ನಾವಿಮೌ ರಾಜಾನಾವಿತ್ಯತ್ರ ಭಿನ್ನಭಿನ್ನವಿಷಯಕಮತಿದ್ವಯಸ್ಯೈವ ಮತಿಭೇದದರ್ಶನೇನ ತಸ್ಯ ಚ ಪುರುಷಭೇದಾವಿನಾಭೂತತ್ವಾತ್ ನಾಸ್ಮಾಕಮನಿಷ್ಟಮಿತಿ ಸದೃಷ್ಟಾಂತಮಾಹ – **ಸಂಧ್ಯಾಯಾಮಿತಿ** ॥ ಸಂಧ್ಯಾಂ ವದಂತ ಇತಿ ಸಂಬಂಧಃ । 'ದ್ವಾ ಸುಪರ್ಣಾ' ಇತ್ಯತ್ರ ದ್ವಾವಿತಿ ವರ್ತಮಾನಕಾಲೀನದ್ವಿತ್ವೋಪಪಾದನಾಯ ಯುಗಪನ್ಮತಿಭೇದಸ್ಯಾವಶ್ಯಕತ್ವಾದಿತಿ ಭಾವಃ । ಇದಾನೀಂ

ಭಿನ್ನೋಽಯಮಿತ್ಯೇಕವಚನಾಂತಪ್ರಯೋಗೇ ಸ್ವರೂಪಭೇದಾನಪೇಕ್ಷಕ್ರಮಿಕಮತಿಭೇದಸ್ಯ ಕಥಂಚಿಚ್ಛಂಕಿತುಂ ಶಕ್ಯತ್ವೇಽಪಿ ದ್ವಾವೇತೌ ಭಿನ್ನಾವೇತಾವಿತ್ಯಾದಿದ್ವಿವಚನಾಂತಪ್ರಯೋಗೇ ಸ್ವರೂಪಭೇದಾನಪೇಕ್ಷಮತಿಭೇದಸ್ಯ ಶಂಕಿತುಮಪ್ಯಶಕ್ಯತ್ವಾದಿತ್ಯಪಿ ದ್ರಷ್ಟವ್ಯಮ್ ॥ ೫೩೪ ॥

**ವಿವರಣೆ–** ಮತ್ಯೈಕ್ಯದಿಂದ ಐಕ್ಯವಾಕ್ಯವನ್ನು ಸಾವಕಾಶ ಮಾಡಿದಂತೆ ಮತಿಭೇದದಿಂದ ಭೇದವಾಕ್ಯವನ್ನು ಏಕೆ ಸಾವಕಾಶ ಮಾಡಬಾರದು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಒಬ್ಬನಿಗೆ ಏಕಕಾಲದಲ್ಲಿಯೇ ಮತಿಭೇದವುಂಟಾಗುವುದಿಲ್ಲ. ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ವಿರುದ್ಧವಾದ ಮತಿಗಳು ಉಂಟಾಗಬಹುದು. ಮೇಲೆ ಶ್ಲೋಕದಲ್ಲಿ ಹೇಳಿದಂತೆ ಸಂಧ್ಯಾಕಾಲದಲ್ಲಿ ಒಬ್ಬನ ಭಗವದಾರಾಧನೆಯನ್ನು ಇನ್ನೊಬ್ಬನ ಕಾಮಿನಿಯ ಆರಾಧನೆಯನ್ನೂ ಅವರಿಬ್ಬರಿಗೆ ಭೇದವನ್ನು ಒಪ್ಪದೆ ಕೂಡಿಸಲು ಬರುವುದಿಲ್ಲ. ಆದ್ದರಿಂದ ಮತಿಭೇದದಿಂದ ಭೇದವಾಕ್ಯವನ್ನು ಸಾವಕಾಶ ಮಾಡಲು ಬರುವುದಿಲ್ಲ. ಕೇವಲ ಏಕಶಬ್ದಕ್ಕೆ ಬೇರೆ ಬೇರೆ ಅರ್ಥಮಾಡಬಹುದಾದರೂ 'ಇಮೌ ದ್ವೌ', 'ಇಮೌ ಭಿನ್ನೌ' ಎಂಬ ವಾಕ್ಯಗಳಲ್ಲಿ ಭೇದವನ್ನು ಅಂಗೀಕಾರ ಮಾಡದೆ ಅರ್ಥವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಭೇದವಾಕ್ಯವು ನಿರವಕಾಶವಾದ್ದರಿಂದ ಪ್ರಬಲವಾಗುತ್ತದೆ.

**ಸಖಾಯೌ ಸಯುಜೌ ಚೇತಿ ಮತಿಸ್ಥಾನಭಿದೇ ಸ್ಫುಟಮ್ ।**
**ಯತ್ಪ್ರತ್ಯಾಹ ತತೋಽಪ್ಯಾಹ ಭೇದವಾಗ್ ಭೇದಮೇವ ಹಿ ॥ ೫೩೫ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಸಖಾಯೌ = ಮಿತ್ರರು, ಚ = ಮತ್ತು, ಸಯುಜೌ = ಜೊತೆಯಾಗಿರುವವರು, ಇತಿ = ಎಂದು, ಮತಿಸ್ಥಾನಭಿದೇ = ಬುದ್ಧಿ ಮತ್ತು ಸ್ಥಾನಗಳ ಭೇದಗಳನ್ನು, ಸ್ಫುಟಂ = ಸ್ಪಷ್ಟವಾಗಿ, ಪ್ರತ್ಯಾಹ = ನಿರಾಕರಿಸಿತೋ, ತತಃ ಅಪಿ = ಆ ಕಾರಣದಿಂದಲೂ, ಭೇದವಾಕ್ = ಭೇದವನ್ನು ಹೇಳುವ ವಾಕ್ಯವು, ಭೇದಂ ಏವ = ಭೇದವನ್ನೇ, ಆಹ = ಹೇಳಿತು, ಹಿ = ನಿಶ್ಚಯವು.

**ಅನುವಾದ–** ವೇದವಾಕ್ಯದ 'ಸಖಾಯೌ ಸಯುಜೌ' ಎಂಬ ಶಬ್ದವನ್ನು ಪ್ರಯೋಗಮಾಡಿದೆ. ಸಾಯುಜ್ಯ ಇರಬೇಕಾದರೆ ಸ್ಥಾನಭೇದವಿರಲು ಸಾಧ್ಯವಿಲ್ಲ. ಸಖಿತ್ವವು ಇರಬೇಕಾದರೆ ಮತಿಭೇದವಿರಲು ಸಾಧ್ಯವಿಲ್ಲ. ಆದ್ದರಿಂದ ಜೀವೇಶ್ವರರಿಗೆ 'ಸಯುಜೌ ಸಖಾಯೌ' ಎಂದು ಹೇಳಿ ಸ್ಥಾನಭೇದವನ್ನೂ, ಮತಿಭೇದವನ್ನೂ ನಿರಾಕರಿಸುವುದರಿಂದ ಭೇದವಾಕ್ಯಕ್ಕೆ ಮುಖ್ಯವಾದ ಭೇದರೂಪವಾದ ಅರ್ಥವನ್ನೇ ಹೇಳಬೇಕಾಗುತ್ತದೆ.

**ಭಾವವಿಲಾಸಿನೀ–**ಕಿಂಚ 'ಸಯುಜೌ' ಇತಿ ಸ್ಥಾನಭೇದಸ್ಯ ಸಖಾಯಾವಿತಿ ಮತಿಭೇದಸ್ಯ ಚ ಸ್ಪಷ್ಟಂ ನಿರಾಕೃತತ್ವೇನ ನಾತ್ರ ಮತಿಭೇದಸ್ಥಾನಭೇದಯೋರವಕಾಶೋಽಪ್ಯಸ್ತೀತ್ಯಾಹ – **ಸಖಾಯಾವಿತಿ** ॥ ಪ್ರತ್ಯಾಹ ನಿರಾಕರೋತಿ । ತತೋಽಪ್ಯರ್ಥಾಂತರಾಸಂಭವಾದಪಿ ॥ ೫೩೫ ॥

**ವಿವರಣೆ–** 'ದ್ವಾಸುಪರ್ಣಾ ಸಯುಜಾ ಸಖಾಯಾ' ಎಂಬ ಶ್ರುತಿಯನ್ನು ವಿಮರ್ಶೆಮಾಡಿ ಭೇದವಾಕ್ಯವನ್ನು ಸಾವಕಾಶ ಮಾಡಲು ಸಾಧ್ಯವಿಲ್ಲ ಎಂದು ಸಮರ್ಥಿಸುತ್ತಾರೆ. ಈ ಶ್ರುತಿಯು ಜೀವೇಶ್ವರರನ್ನು ಸ್ನೇಹಿತರು ಮತ್ತು ಜೊತೆಯಲ್ಲಿರುವವರು ಎಂದು ಕರೆದಿದೆ.

ಸ್ನೇಹಿತರಾದವರಿಗೆ ಮತಿಭೇದವಿರುವುದಿಲ್ಲ, ಜೊತೆಯಲ್ಲಿರುವವರಿಗೆ ಸ್ಥಾನಭೇದವಿರುವುದಿಲ್ಲ. ಜೀವೇಶ್ವರರಿಗೆ ಮತಿಭೇದ ಮತ್ತು ಸ್ಥಾನಭೇದವಿಲ್ಲದಿರುವ ಕಾರಣ ಭೇದವಾಕ್ಯಗಳಿಗೆ ಮುಖ್ಯವಾದ ಭೇದವನ್ನು ಅರ್ಥವಾಗಿ ಅಂಗೀಕಾರ ಮಾಡದೆ, ಸ್ಥಾನಭೇದ ಮತ್ತು ಅರ್ಥಭೇದಗಳನ್ನು ಅಂಗೀಕಾರ ಮಾಡಿ ಭೇದವಾಕ್ಯವನ್ನು ಸಾವಕಾಶವನ್ನಾಗಿ ಮಾಡಿ ಜೀವೇಶ್ವರರಿಗೆ ಅಭೇದವನ್ನು ಹೇಳಲು ಎಂದೂ ಸಾಧ್ಯವಿಲ್ಲ.

**ಐಕ್ಯೋಕ್ತೇಃ ಸ್ವವಿರೋಧಿನ್ಯಾಃ ಸಖ್ಯಸ್ಥಾನೈಕ್ಯವಾದಿನೀ ।**
**ಯದ್ಗತೀ ಚಾಹ ತದ್ವಾಣೀ ಕೃಪಾಣೀಯಂ ವಿರೋಧಿನಾಮ್ ॥ ೫೩೬ ॥**

**ಅರ್ಥ–** ಸ್ವವಿರೋಧಿನ್ಯಾಃ - ಸ್ವ = ತನಗೆ (ಭೇದಕ್ಕೆ), ವಿರೋಧಿನ್ಯಾಃ = ವಿರೋಧಿಯಾದ, ಐಕ್ಯೋಕ್ತೇಃ = ಅಭೇದದ ವಾಕ್ಯಕ್ಕೆ, ಸಖ್ಯಸ್ಥಾನೈಕ್ಯವಾದಿನೀ - ಸಖ್ಯ = ಗೆಳೆತನ, ಸ್ಥಾನ = ಸ್ಥಾನ ಇವುಗಳ, ಐಕ್ಯ = ಐಕ್ಯವನ್ನು, ವಾದಿನೀ = ಹೇಳುವ, ತದ್ವಾಣೀ = 'ಸಯುಜಾ ಸಖಾಯಾ' ಎಂಬ ಆ ಮಾತು, ಯತ್ = ಯಾವ ಕಾರಣದಿಂದ, ಗತಿಂ ಚ = ಗತಿಯನ್ನೂ, ಆಹ = ಹೇಳಿತೋ (ತತ್ = ಆ ಕಾರಣದಿಂದ), ಇಯಂ = ಈ ವಾಕ್ಯವು, ವಿರೋಧಿನಾಮ್ = ವಿರೋಧಿಗಳಿಗೆ, ಕೃಪಾಣೀ = ಖಡ್ಗವಾಗಿದೆ.

**ಅನುವಾದ–** ಈ ಶ್ರುತಿಯು ಐಕ್ಯವಾಕ್ಯಕ್ಕೆ ಸ್ಥಾನೈಕ್ಯ ಮತ್ತು ಮತ್ಯೈಕ್ಯವನ್ನು ಹೇಳಬಹುದು ಎಂಬ ಅರ್ಥವನ್ನು ಕೊಡುವುದರಿಂದ ಈ ವಾಕ್ಯವು ಐಕ್ಯವಾದಿಗಳಾದ ನಮ್ಮ ವಿರೋಧಿಗಳಿಗೆ ಕತ್ತಿಯಂತೆ ಇದೆ.

**ಭಾವವಿಲಾಸಿನೀ–** ನ ಕೇವಲಮೈಕ್ಯವಾಕ್ಯಸ್ಯ ಮತ್ಯೈಕ್ಯಸ್ಥಾನೈಕ್ಯಯೋರವಕಾಶೋಽಸ್ಮಾಭಿರೇವಾವಾದಿ, ಕಿಂತು ಶ್ರುತ್ಯಾಪ್ಯಸೂಚೀತ್ಯಾಹ – **ಐಕ್ಯೋಕ್ತೇರಿತಿ** ॥ ಸಖ್ಯಸ್ಥಾನೈಕ್ಯವಾದಿನೀ ಜೀವಪರಯೋರಿತಿ ಶೇಷಃ ॥ ೫೩೬ ॥

**ವಿವರಣೆ–** 'ದ್ವಾಸುಪರ್ಣಾ' ಇತ್ಯಾದಿ ವಾಕ್ಯವು ಮತಿಭೇದವನ್ನೂ ಮತ್ತು ಸ್ಥಾನಭೇದವನ್ನೂ ಹೇಳುವುದಿಲ್ಲ ಎಂದು ಹೇಳುವ ಮೂಲಕ, 'ಪರೇಽವ್ಯಯೇ ಸರ್ವ ಏಕೀಭವಂತಿ' ಮುಂತಾದ ವಾಕ್ಯಗಳು ಸ್ಥಾನೈಕ್ಯದಿಂದಲೂ ಮತ್ತು ಮತ್ಯೈಕ್ಯದಿಂದಲೂ ಉಪಪನ್ನವಾಗುತ್ತವೆ ಎಂದು ಸೂಚಿಸುವುದರಿಂದ ಈ ವಾಕ್ಯವು ಐಕ್ಯವಾದಿಗಳಿಗೆ ಅತ್ಯಂತ ವಿರೋಧಿಯಾಗಿದೆ.

**ನಾರಾಯಣಃ ಪರಂ ಬ್ರಹ್ಮ ನಾನ್ಯದ್ ಬ್ರಹ್ಮ ತತಃ ಪರಮ್ ।**
**ಪ್ರಾಕ್ ಸೃಷ್ಟೇರಪ್ಸು ಯಃ ಶೇತೇ ವಟಪತ್ರಪುಟೇ ಪ್ರಭುಃ ॥ ೫೩೭ ॥**

**ಅರ್ಥ–** ಯಃ = ಯಾರು, ಸೃಷ್ಟೇಃ = ಸೃಷ್ಟಿಯ, ಪ್ರಾಕ್ = ಮೊದಲು, ಅಪ್ಸು = ನೀರಿನಲ್ಲಿ, ವಟಪತ್ರಪುಟೇ = ಆಲದೆಲೆಯ ಮೇಲೆ, ಶೇತೇ = ಮಲಗಿರುವನೋ, (ಸಃ = ಅಂತಹ) ಪ್ರಭುಃ = ಸಮರ್ಥನಾದ, ನಾರಾಯಣಃ = ನಾರಾಯಣನು, ಪರಂ ಬ್ರಹ್ಮ = ಸರ್ವೋತ್ತಮ ಬ್ರಹ್ಮನು, ತತಃ = ಅವನಿಗಿಂತ, ಪರಂ = ಮಿಗಿಲಾದ, ಅನ್ಯತ್ = ಬೇರೆಯ, ಬ್ರಹ್ಮ = ಬ್ರಹ್ಮನು, ನ = ಇಲ್ಲ.

**ಅನುವಾದ– ನಾರಾಯಣನೇ ಪರಬ್ರಹ್ಮ. ಅವನಿಗಿಂತ ಶ್ರೇಷ್ಠನಾದ ಇನ್ನೊಬ್ಬ ಬ್ರಹ್ಮನಿಲ್ಲ. ಪ್ರಭುವಾದ ಅವನು ಸೃಷ್ಟಿಗಿಂತಲೂ ಮೊದಲು ಪ್ರಳಯೋದಕದಲ್ಲಿ ವಟಪತ್ರದಲ್ಲಿ ಮಲಗಿರುತ್ತಾನೆ.**

**ಭಾವವಿಲಾಸಿನೀ–** ಪರಾಭಿಪ್ರೇತನಿರ್ಗುಣಬ್ರಹ್ಮ ನಿರಾಕರ್ತುಂ ನಾರಾಯಣಸ್ಯೈವ ಪರಬ್ರಹ್ಮತಾಂ ಯುಕ್ತ್ಯಾ ಪ್ರಸಾಧ್ಯ ತಸ್ಯೈವ ಸತ್ತ್ವಾದಿಗುಣವೈಧುರ್ಯೇಣ ನಿರ್ಗುಣತಾಂ ಚಾಹ – **ನಾರಾಯಣ ಇತ್ಯಾದಿಶ್ಲೋಕತ್ರಯೇಣ** ॥ ತತೋ ನಾರಾಯಣಾತ್ । ಸೃಷ್ಟೇಃ ಪ್ರಾಕ್ । ಬ್ರಹ್ಮ-ಪ್ರಲಯೇಽಪ್ಯವಿಲೀನಸ್ಯ ಅತ ಏವ ಕಾರ್ಯಬ್ರಹ್ಮಭೂತಚತುರ್ಮುಖಾದಪ್ಯುತ್ತಮಸ್ಯ ಸೃಷ್ಟೇಃ ಪೂರ್ವಂ ವಿದ್ಯಮಾನಸ್ಯ ಅತ ಏವಾಽಕಾರ್ಯಸ್ಯ ಚ ನಾರಾಯಣಸ್ಯೈವ ಪರಬ್ರಹ್ಮತಾ ಯುಕ್ತಾ । ಅನಾದ್ಯನಂತವಸ್ತುತ್ವಾತ್ । ನ ಪರಾಭಿಲಷಿತಸ್ಯೇತಿ ಯುಕ್ತಿಃ । ಪ್ರಯೋಗಸ್ತು ವಿಮತೋ ನಾರಾಯಣಃ ಪರಂ ಬ್ರಹ್ಮ ಭವಿತುಮರ್ಹತಿ ಸೃಷ್ಟಿಶೂನ್ಯತ್ವಾತ್ ನಾಶರಹಿತತ್ವಾಚ್ಚ ವ್ಯತಿರೇಕೇಣ ಘಟವದಿತಿ । ವಿಷ್ಣೋರನ್ಯತ್ರ ಸರ್ವತ್ರ ಪರಾಧೀನವಿಶೇಷಾವಾಪ್ತಿಲಕ್ಷಣಸೃಷ್ಟೇ-ರಪೂರ್ಣತಾಲಕ್ಷಣನಾಶಸ್ಯ ಚ ಸತ್ತ್ವೇನ ನ ಕ್ವಾಪಿ ವ್ಯಭಿಚಾರಃ ॥ ೫೩೭ ॥

**ವಿವರಣೆ–** ಪರರಿಗೆ ಅಭಿಪ್ರೇತವಾದ ನಿರ್ಗುಣಬ್ರಹ್ಮನನ್ನು ನಿರಾಕರಿಸಲು ನಾರಾಯಣನೇ ಪ್ರರಬ್ರಹ್ಮ, ಅವನು ಸಕಲಗುಣ ಪರಿಪೂರ್ಣ. ಅವನಲ್ಲಿ ಪ್ರಾಕೃತವಾದ ಸತ್ತ್ವಾದಿ ಗುಣಗಳು ಇಲ್ಲದಿರುವುದರಿಂದ ಅವನನ್ನು ನಿರ್ಗುಣ ಎಂದು ಕರೆಯುತ್ತಾರೆ ಎಂದು ಈ ಶ್ಲೋಕ ಮತ್ತು ಮುಂದಿನ ಎರಡು ಶ್ಲೋಕಗಳಲ್ಲಿ ಸಮರ್ಥನೆ ಮಾಡುತ್ತಾರೆ. ಚತುರ್ಮುಖಬ್ರಹ್ಮನ ಸೃಷ್ಟಿಗಿಂತಲೂ ಮೊದಲು ಇರುವುದರಿಂದ ಅವನು ಚತುರ್ಮುಖನಿಗಿಂತಲೂ ಉತ್ತಮನೆಂದೂ, ಸೃಷ್ಟನಾಗಲಿಲ್ಲ ಎಂದೂ ಸಿದ್ಧವಾಗುತ್ತದೆ. ಆದ್ದರಿಂದ ಅವನು ಅನಾದಿ ಎಂದು ಸಿದ್ಧವಾಗುತ್ತದೆ. ಪ್ರಳಯಕಾಲದಲ್ಲಿಯೂ ಮಲಗಿರುವುದರಿಂದ ಅವನಿಗೆ ನಾಶವಿಲ್ಲವೆಂದು ಸಿದ್ಧವಾಗುತ್ತದೆ. ಆದ್ದರಿಂದ ಅವನು ಅನಂತ. ಅನಾದ್ಯನಂತನಾದ ನಾರಾಯಣನೇ ಪರಬ್ರಹ್ಮ.ಅದನ್ನು ಸಾಧಿಸಲು ಹೀಗೆ ಅನುಮಾನವನ್ನು ಪ್ರಯೋಗ ಮಾಡಬಹುದು. ವಿಪ್ರತಿಪನ್ನನಾದ ನಾರಾಯಣನೇ

ಪರಬ್ರಹ್ಮನಾಗಿರುತ್ತಾನೆ. ಸೃಷ್ಟಿರಹಿತನಾದುದರಿಂದ ಮತ್ತು ನಾಶ ಸಹಿತನಾದುದರಿಂದ ವ್ಯತಿರೇಕ ದೃಷ್ಟಾಂತವಾದ ಘಟದಂತೆ ಎಂದು ಪ್ರಯೋಗವನ್ನು ಮಾಡಬಹುದು. ವಿಷ್ಣುವನ್ನು ಬಿಟ್ಟು ಉಳಿದ ಎಲ್ಲ ಕಡೆಗಳಲ್ಲಿಯೂ ಪರಾಧೀನವಿಶೇಷಾಪ್ತಿರೂಪವಾದ ಸೃಷ್ಟಿಯೂ ಅಪೂರ್ಣತ್ವರೂಪವಾದ ನಾಶವೂ ಇರುವುದರಿಂದ ಈ ಅನುಮಾನಕ್ಕೆ ಎಲ್ಲಿಯೂ ವ್ಯಭಿಚಾರ ಬರುವುದಿಲ್ಲ.

**ಬಂಧಕೀಭೂತಸತ್ತ್ವಾದಿದುರ್ಗುಣಾನಾಂ ವಿವರ್ಜನಾತ್ ।**
**ಸ ಏವ ನಿರ್ಗುಣಂ ಬ್ರಹ್ಮೇತ್ಯುಕ್ತಃ ಸದ್ಗುಣಬೃಂಹಿತಃ ॥ ೫೩೮ ॥**

**ಅರ್ಥ–** ಬಂಧಕೀಭೂತಸತ್ತ್ವಾದಿದುರ್ಗುಣಾನಾಂ - ಬಂಧಕೀಭೂತ = ಸಂಸಾರದಲ್ಲಿ ಸಿಲುಕಿಸುವ, ಸತ್ತ್ವಾದಿ = ಸತ್ತ್ವ ಮೊದಲಾದ, ದುರ್ಗುಣಾನಾಂ = ದುಷ್ಟ ಗುಣಗಳ, ವಿವರ್ಜನಾತ್ = ಅಭಾವದಿಂದ, ಸದ್ಗುಣಬೃಂಹಿತಃ = ಸದ್ಗುಣಗಳಿಂದ ತುಂಬಿದ, ಸಃ ಏವ = ಆ ನಾರಾಯಣನೇ, ನಿರ್ಗುಣಂ ಬ್ರಹ್ಮ = ನಿರ್ಗುಣ ಬ್ರಹ್ಮ, ಇತಿ = ಎಂದು, ಉಕ್ತಃ = ಹೇಳಲ್ಪಟ್ಟಿದ್ದಾನೆ.

**ಅನುವಾದ–** ಬಂಧಕವಾದ ಸತ್ತ್ವಾದಿಗುಣಗಳಿಂದ ರಹಿತನಾದುದರಿಂದ ಅವನು ನಿರ್ಗುಣನೆಂದೂ, ಸದ್ಗುಣ ಪರಿಪೂರ್ಣನಾದುದರಿಂದ ಅವನು ಬ್ರಹ್ಮನೆಂದೂ ಹೇಳಲ್ಪಡುತ್ತಾನೆ.

**ಭಾವವಿಲಾಸಿನೀ–**ಲಕ್ಷಣಯಾ ಬ್ರಹ್ಮಪದಪ್ರಯೋಗೇನ ಗಂಗಾಪದವಾಚ್ಯ ತೀರಸ್ಯಾಗಂಗತ್ತ್ವವತ್ ಪರಬ್ರಹ್ಮಾಭಿಮತತತ್ತ್ವ ನಿರ್ಗುಣಸ್ಯ ಬ್ರಹ್ಮತ್ವೈವ ನಸ್ಯಾತ್ । ಅಪರಬ್ರಹ್ಮತ್ವಂತು ಅಜ್ಞಜನಸಾಕ್ಷಿಕಮಿತಿ ಪರಿಶೇಷಾದ್ವಿಷ್ಣೋರೇವ ಪರಬ್ರಹ್ಮತ್ವಸಿದ್ಧಿಃ ॥ ಸದ್ಗುಣಬೃಂಹಿತ ಇತ್ಯನೇನ ಸರ್ವಥಾ ಗುಣಶೂನ್ಯಮೇವ ನಿರ್ಗುಣಂ ಬ್ರಹ್ಮ ಚೇತಿ ವದತಃ ಬೃಂಹತೋ ಹ್ಯಸ್ಮಿನ್ ಗುಣಾ ಇತ್ಯುಕ್ತಗುಣಪೂರ್ಣತ್ವಲಕ್ಷಣಬ್ರಹ್ಮತ್ವಾನುಪಪತ್ತ್ಯಾ ವ್ಯಾಹತಭಾಷಿತ್ವಂ ಸೂಚಿತಮ್ ॥೫೩೮॥

**ವಿವರಣೆ–** ಈ ಶ್ಲೋಕದಲ್ಲಿ 'ಅಥ ತಸ್ಮಾತ್ ಉಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ' ಎಂಬ ಶ್ರುತಿಯು ಇರುವುದರಿಂದ ಬ್ರಹ್ಮಶಬ್ದವೇ ಅವನಲ್ಲಿ ಸಕಲಸದ್ಗುಣಗಳನ್ನು ಹೇಳುತ್ತದೆ ಎಂದು ಸಮರ್ಥನೆ ಮಾಡಿ, ಆದ್ದರಿಂದ ಬ್ರಹ್ಮನು ನಿರ್ಗುಣ ಎಂದು ಹೇಳುವವನು ತನಗೆ ತಾನೇ ವಿರೋಧವನ್ನು ತಂದಿಕೊಳ್ಳುತ್ತಾನೆ.

**ತನ್ಮುಕುಂದಾಭಿಧಂ ಬ್ರಹ್ಮ ವೇದಾಖ್ಯಬ್ರಹ್ಮವರ್ಣಿತಮ್ ।**
**ಬ್ರಾಹ್ಮಣಾನಾಂ ಪರಂ ದೈವಂ ಬ್ರಹ್ಮಸೂತ್ರಪ್ರಕಾಶಿತಮ್ ॥ ೫೩೯ ॥**

**ಅರ್ಥ–** ತತ್ = ಆ, ಮುಕುಂದಾಭಿಧಂ = ಮುಕುಂದ ಎಂಬ ಹೆಸರುಳ್ಳ, ಬ್ರಹ್ಮ = ಬ್ರಹ್ಮನು, ವೇದಾಖ್ಯಬ್ರಹ್ಮವರ್ಣಿತಂ = ಬ್ರಹ್ಮ ಎಂದು ಕರೆಸಿಕೊಳ್ಳುವ ವೇದಗಳಿಂದ

ಪ್ರತಿಪಾದ್ಯನಾಗಿದ್ದಾನೆ, ಬ್ರಾಹ್ಮಣಾನಾಂ = ಬ್ರಾಹ್ಮಣರಿಗೆ, ಪರಂ = ಸರ್ವೋತ್ತಮನಾದ, ದೈವಂ = ದೇವತೆ, ಬ್ರಹ್ಮಸೂತ್ರಪ್ರಕಾಶಿತಂ = ಬ್ರಹ್ಮಸೂತ್ರಗಳಿಂದ ತೋರಿಸಲ್ಪಟ್ಟಿದ್ದಾನೆ.

**ಅನುವಾದ–** ಆದ್ದರಿಂದ ಮುಕುಂದನಾಮಕನಾದ ಬ್ರಹ್ಮನೇ ಬ್ರಹ್ಮ ಎಂದು ಕರೆಸಿಕೊಳ್ಳುವ ವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಅವನೇ ಬ್ರಾಹ್ಮಣರಿಗೆ ಪರದೈವ. ಅವನೇ ಬ್ರಹ್ಮಸೂತ್ರದಿಂದ ಪ್ರಕಾಶಿಸಲ್ಪಟ್ಟವನು.

**ಭಾವವಿಲಾಸಿನೀ–**ಮುಕುನ್ದಾಭಿಧಮಿತ್ಯನೇನ ಚ ವಿಷ್ಣೋರೇವ ಪರಬ್ರಹ್ಮತ್ವೇ ಮುಕ್ತಿದಾಯಕತ್ವರೂಪಯುಕ್ತ್ಯಂತರಂ ಚ ಸೂಚಿತಮ್ । ವೇದಾಖ್ಯಬ್ರಹ್ಮವರ್ಣಿತಮಿತ್ಯನೇನ 'ವೇದೈಶ್ಚ ಸರ್ವೈರಹಮೇವ ವೇದ್ಯಃ' ಇತ್ಯಾದೌ ಕೃಷ್ಣಸ್ಯೈವೋಕ್ತವೇದತಾತ್ಪರ್ಯಗೋಚರತ್ವೇ ತಸ್ಯೈವ ಪರಬ್ರಹ್ಮತ್ವೇ ಯುಕ್ತಿಃ ಸೂಚಿತಾ । ಬ್ರಾಹ್ಮಣಾನಾಂ ಪರಂ ದೈವಮಿತ್ಯನೇನಾಪಿ ಬ್ರಾಹ್ಮಣಾನಾಂ ಶುಕಸನಕಭೃಗ್ವಾದೀನಾಂ ಪರಂ ದೈವಮಿತ್ಯರ್ಥಸ್ಯೈವಾಭಿಪ್ರೇತತ್ವೇನ ವಿಷ್ಣೋರೇವ ಪರಬ್ರಹ್ಮತ್ವೇಽಧಿಗತಪರಮಾರ್ಥೈರಾರಾಧ್ಯತ್ವರೂಪಯುಕ್ತಿರಸೂಚಿ । ಬ್ರಹ್ಮಸೂತ್ರಪ್ರಕಾಶಿತಂ ಬ್ರಹ್ಮಮೀಮಾಂಸಾಸೂತ್ರಪ್ರಕಾಶಿತಮಿತ್ಯನೇನ ತು ವೇದಸಮಾನಾರ್ಥಕಸೂತ್ರಪ್ರತಿಪಾದ್ಯಸ್ಯ ನಾರಾಯಣಸ್ಯ ಪರಬ್ರಹ್ಮತ್ವೇ ಮೋಕ್ಷೋಪಯೋಗಿಜಿಜ್ಞಾಸಾವಿಷಯತ್ವರೂಪಯುಕ್ತಿರ್ಲಬ್ಧಾ । 'ಏಕೋ ದಾಧಾರ ಭುವನಾನಿ ವಿಶ್ವಾ' ಇತಿ ಶ್ರುತಿಪ್ರತಿಪಾದಿತವಿಷ್ಣೋರೇವ 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಇತ್ಯಾದಿಸೂತ್ರಪ್ರತಿಪಾದ್ಯತ್ವಸಂಭವೇನ ಚ ಬ್ರಹ್ಮಸೂತ್ರಪ್ರಕಾಶಿತೋ ವಿಷ್ಣುರೇವ ॥ ೫೩ ॥

**ವಿವರಣೆ–** ನಾರಾಯಣನಿಗೆ ಮುಕುಂದ ಎಂದು ಹೆಸರಿದೆ. ಮುಕುಂದ ಎಂದರೆ ಮೋಕ್ಷವನ್ನು ಕೊಡುವವನು. ಈ ಮೋಕ್ಷದಾತೃತ್ವವು ಬೇರೆ ಯಾರಿಗೂ ಇಲ್ಲ. ಸರ್ವಪುರುಷಾರ್ಥಶ್ರೇಷ್ಠವಾದ ಮೋಕ್ಷವನ್ನು ಕೊಡುವವನು ಸರ್ವೋತ್ತಮನೇ ಆಗಿರಬೇಕು. ಆದ್ದರಿಂದ ನಾರಾಯಣನೇ ಪರಬ್ರಹ್ಮನೆಂದು ಹೇಳುವುದಕ್ಕೆ ಮೋಕ್ಷದಾತೃತ್ವವೂ ಒಂದು ಯುಕ್ತಿಯಾಗುತ್ತದೆ. ವೇದಗಳಿಂದ ವರ್ಣಿತನಾಗಿದ್ದಾನೆ ಎಂದು ಹೇಳುವ ಮೂಲಕ 'ವೇದೈಶ್ಚಸರ್ವೈರಹಮೇವ ವೇದ್ಯಃ' ಎಂಬ ಗೀತಾವಾಕ್ಯವನ್ನು ಸೂಚಿಸುತ್ತಾರೆ. ಎಲ್ಲ ವೇದಗಳೂ ನನ್ನನ್ನೇ ಪ್ರತಿಪಾದಿಸುತ್ತವೆ ಎಂದು ಕೃಷ್ಣನು ಹೇಳಿದ್ದಾನೆ. ಕೃಷ್ಣನು ನಾರಾಯಣನ ಅವತಾರವಾದ್ದರಿಂದ ನಾರಾಯಣನಿಗಿಂತ ಅಭಿನ್ನನಾದವನು. ಕೃಷ್ಣನು ನಿರ್ಗುಣನಲ್ಲ. ಆದ್ದರಿಂದ ಅವನ ಮೂಲರೂಪನಾದ ನಾರಾಯಣನೂ ನಿರ್ಗುಣನಲ್ಲ. ಗುಣಪೂರ್ಣನಾದವನು. ಬ್ರಾಹ್ಮಣರಿಗೆ ಪರದೈವ ಎಂದರೆ, ಶುಕಸನಕಾದಿಗಳಿಂದ ಉಪಾಸ್ಯ ಎಂದು ಅರ್ಥ. ಜ್ಞಾನಿಶ್ರೇಷ್ಠರಿಂದ ಉಪಾಸ್ಯತ್ವವೂ ಸಹ ಪರಬ್ರಹ್ಮತ್ವಸಾಧಕವಾದ ಇನ್ನೊಂದು ಯುಕ್ತಿ. ಏಕೆಂದರೆ, ಪರಮಾರ್ಥವನ್ನು ತಿಳಿದಿರುವ ಜ್ಞಾನಿಗಳು ಯಾರನ್ನು ಉಪಾಸನೆ ಮಾಡುತ್ತಾರೆಯೋ ಅದು ಅಲ್ಪವಾದ ವಸ್ತುವಾಗಿರಲು ಸಾಧ್ಯವಿಲ್ಲ. 'ಬ್ರಹ್ಮಸೂತ್ರಪ್ರಕಾಶಿತಂ' ಎಂಬ ಶಬ್ದದಿಂದಲೂ, ಮೋಕ್ಷೋಪಯೋಗಿಯಾದ

ಜ್ಞಾನಜನಕವಾದ ಜಿಜ್ಞಾಸಾವಿಷಯತ್ವವನ್ನು ಬ್ರಹ್ಮಸೂತ್ರಗಳಲ್ಲಿ ನಾರಾಯಣನಲ್ಲಿಯೇ ಹೇಳಿರುವುದರಿಂದ ಅವನೇ ಪರಬ್ರಹ್ಮ ಎಂದು ಸಿದ್ಧವಾಗುತ್ತದೆ. ಬ್ರಹ್ಮಸೂತ್ರದ ದ್ಯುಭ್ವಾದಿ ಅಧಿಕರಣಗಳಲ್ಲಿ ವಿಷ್ಣುವು ಸರ್ವಾಧಾರನೆಂದೂ, ಆನಂದಮಯಾದಿ ಅಧಿಕರಣದಲ್ಲಿ ಅವನು ಪೂರ್ಣಾನಂದನೆಂದೂ ಅವನ ಗುಣಗಳನ್ನು ಹೇಳಿದ್ದಾರೆ.

ಇನ್ನು ನಾರಾಯಣೋಪನಿಷತ್ತಿನ ಮಂತ್ರಗಳನ್ನೇ ಉದಾಹರಿಸಿ ನಾರಾಯಣನೇ ಪರಬ್ರಹ್ಮನೆಂದು ಸಮರ್ಥಿಸುತ್ತಾರೆ-

**ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಮ್ಭುವಮ್ ।**
**ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಮ್ ॥ ೫೪೦ ॥**

**ಅರ್ಥ–** ಸಹಸ್ರಶೀರ್ಷಂ = ಅನಂತವಾದ ತಲೆಗಳುಳ್ಳ, ದೇವಂ = ಕ್ರೀಡಾದಿಗುಣಸಂಪನ್ನನಾದ, ವಿಶ್ವಾಕ್ಷಂ = ಎಲ್ಲೆಡೆ ಕಣ್ಣುಳ್ಳ, ವಿಶ್ವಶಂಭುವಂ – ವಿಶ್ವ = ಎಲ್ಲಾ, ಶಂ = ಸುಖಕ್ಕೂ, ಭುವಂ = ಆವಾಸಸ್ಥಾನನಾದ, ವಿಶ್ವಂ = ಎಲ್ಲೆಡೆ ತುಂಬಿದ, ನಾರಾಯಣಂ = ಗುಣಪೂರ್ಣನಾದ, ದೇವಂ = ಪ್ರಕಾಶಮಾನನಾದ, ಅಕ್ಷರಂ = ನಾಶರಹಿತನಾದ, ಪರಮಂ = ಸರ್ವೋತ್ತಮನಾದ, ಪದಂ = ಗಮ್ಯನಾದ.

**ಅನುವಾದ–** ನಾರಾಯಣನು 'ಸಹಸ್ರಶೀರ್ಷ' ಎಂದರೆ ಅನಂತಶಿರಸ್‌ಗಳುಳ್ಳವನು. 'ದೇವ' ಎಂದರೆ ಕೃಪಾದಿಗುಣವುಳ್ಳವನು. 'ವಿಶ್ವಾಕ್ಷ ' ಎಂದರೆ ಅನಂತಚಕ್ಷುಸ್ಸುಗಳುಳ್ಳವನು. 'ವಿಶ್ವಶಂಭುವಮ್' ಎಂದರೆ ಪೂರ್ಣಸುಖ-ರೂಪನಾದವನು ಮತ್ತು ಜೀವರಿಗೆ ಅವರಿಗೆ ಯೋಗ್ಯವಾದ ಪೂರ್ಣಸುಖವನ್ನು ಕೊಡುವವನು. 'ವಿಶ್ವ' ಎಂದರೆ ಪೂರ್ಣನಾದವನು ಎಂದು ಅರ್ಥ. (ಉತ್ತರಾರ್ಧದಲ್ಲಿರುವ) ದೇವಶಬ್ದಕ್ಕೆ ಉಪನಿಷತ್‌ಪ್ರತಿಪಾದ್ಯನು ಎಂದು ಅರ್ಥ. ಅವನು ಪರಮಾಕ್ಷರ. ಎಂದರೆ, ಮೂರು ಅಕ್ಷರಗಳಲ್ಲಿ ಶ್ರೇಷ್ಠನಾದವನು ಎಂದು ಅರ್ಥ. ಪರಮಂ ಪದಂ ಎಂದರೆ, ಪ್ರಾಪ್ಯರಾದವರಲ್ಲಿ ಶ್ರೇಷ್ಠನಾದವನು ಎಂದು ಅರ್ಥ.

**ವಿಶ್ವತಃ ಪರಮಾಂ ನಿತ್ಯಂ ವಿಶ್ವಂ ನಾರಾಯಣಂ ಹರಿಮ್ ।**
**ವಿಶ್ವಮೇವೇದಂ ಪುರುಷಸ್ತದ್ವಿಶ್ವಮುಪಜೀವತಿ ॥ ೫೪೧ ॥**

**ಅರ್ಥ–** ವಿಶ್ವತಃ = ಜಗತ್ತಿಗಿಂತ, ಪರಮಾಂ = ಉತ್ಕೃಷ್ಟನಾದ, ನಿತ್ಯಂ = ಯಾವಾಗಲೂ ವಿಶ್ವಂ = ಪೂರ್ಣನಾದ, ನಾರಾಯಣಂ = ದೋಷದೂರನಾದ, ಹರಿಂ = ಪಾಪವನ್ನು ಕಳೆಯುವ, ಇದಂ = ಈ, ವಿಶ್ವಂ ಏವ = ವಿಶ್ವನೆಂಬ ಹೆಸರುಳ್ಳ, ಪುರುಷಂ = ಪುರುಷನನ್ನು, ತತ್ = ಆ, ವಿಶ್ವಂ = ಜಗತ್ತು, ಉಪಜೀವತಿ = ಅವಲಂಬಿಸಿದೆ.

**ಅನುವಾದ–** ಪರಮಾ ಎಂಬ ಶಬ್ದಕ್ಕೆ ಶ್ರೇಷ್ಠ ಮತ್ತು ಭಿನ್ನ ಎಂದು ಅರ್ಥ. 'ಪರಮಶ್ಚಾಸೌ ಅಶ್ಚ' ಎಂಬ ವ್ಯುತ್ಪತ್ತಿಯಿಂದ ಇದು ಪರಮಾ ಎಂಬ 'ಆ ಕಾರಾಂತ' ಪುಲ್ಲಿಂಗ ಶಬ್ದ. ನಾರಾಯಣನು ವಿಶ್ವಕ್ಕಿಂತ ಶ್ರೇಷ್ಠನಾದವನು ಮತ್ತು ವಿಶ್ವಕ್ಕಿಂತ ಭಿನ್ನನಾದವನು ಎಂದು ಅರ್ಥ. ನಿತ್ಯಂ ವಿಶ್ವಂ ಎಂದರೆ ಯಾವಾಗಲೂ ಪೂರ್ಣನಾದವನು, ನದಿಯ ಪ್ರವಾಹದಂತೆ ಆಗೊಮ್ಮೆ ಈಗೊಮ್ಮೆ ಪೂರ್ಣನಾಗುವವನಲ್ಲ ಎಂದು ಅರ್ಥ. ಹರಿ ಎಂದರೆ ಬ್ರಹ್ಮಾದಿಗಳ ಸರ್ವಸಂಹಾರಕನಾದವನು ಎಂದು ಅರ್ಥ. ಜಡಚೇತನಾತ್ಮಕವಾದ ಈ ವಿಶ್ವವು ಪೂರ್ಣನಾದ ಅವನನ್ನು ಉಪಜೀವಿಸಿ ಕೊಂಡಿರುತ್ತದೆ ಎಂದು ಉತ್ತರಾರ್ಧದ ಅರ್ಥ.

ಪತಿಂ ವಿಶ್ವಸ್ಯಾತ್ಮೇಶ್ವರಂ ಶಾಶ್ವತಂ ಶಿವಮಚ್ಯುತಮ್ ।
ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಮ್ ॥ ೫೪೨ ॥

**ಅರ್ಥ–** ವಿಶ್ವಸ್ಯ = ಜಗತ್ತಿಗೆ, ಪತಿಂ = ಒಡೆಯನಾದ, ಆತ್ಮೇಶ್ವರಂ = ಸ್ವಯಂಪ್ರಭುವಾದ, ಶಾಶ್ವತಂ = ಚಿರಂತನನಾದ, ಶಿವಂ = ಮಂಗಳಮೂರ್ತಿಯಾದ, ಅಚ್ಯುತಂ = ಕೊರತೆಯಿಲ್ಲದ, ನಾರಾಯಣಂ = ವೇದಪ್ರತಿಪಾದ್ಯನಾದ, ಮಹಾಜ್ಞೇಯಂ = ತಿಳಿಯಲೇಬೇಕಾದ, ವಿಶ್ವಾತ್ಮಾನಂ = ಜಗತ್ತಿಗೆ ನಿಯಾಮಕನಾದ, ಪರಾಯಣಂ = ಪರಗತಿಯಾದ

**ಅನುವಾದ–** ನಾರಾಯಣನು 'ವಿಶ್ವಸ್ಯ' ಎಂದರೆ ಜಡಚೇತನಾತ್ಮಕ ಪ್ರಪಂಚದ ಪತಿ ಎಂದರೆ ರಕ್ಷಕನಾದವನು. 'ಆತ್ಮೇಶ್ವರ' ಎಂದರೆ ಸರ್ವಜೀವರಿಗೂ ಸ್ವಾಮಿ ಅಥವಾ ತನಗೆ ತಾನೇ ಈಶ್ವರ, ಇನ್ನೊಬ್ಬನಿಂದ ನಿಯಮ್ಯನಲ್ಲ ಎಂದು ಅರ್ಥ. 'ಶಾಶ್ವತಂ ಶಿವಂ' ಎಂದರೆ ಸರ್ವದಾ ಸುಖರೂಪಿ ಎಂದು ಅರ್ಥ. 'ಅಚ್ಯುತಂ' ಎಂದರೆ ಎಂದೂ ತನ್ನ ಗುಣಗಳ ಪ್ರಚ್ಯುತಿಯಿಲ್ಲದವನು ಎಂದು ಅರ್ಥ. 'ಮಹಾಜ್ಞೇಯಂ' ಎಂದರೆ ಜ್ಞೇಯವಾದ ವಸ್ತುಗಳಲ್ಲಿ ಅತ್ಯಂತ ಶ್ರೇಷ್ಠನಾದವನು ಎಂದು ಅರ್ಥ. 'ವಿಶ್ವಾತ್ಮಾನಂ' ಎಂದರೆ ಸರ್ವಾಂತರ್ಯಾಮಿ ಎಂದು ಅರ್ಥ. ಪರಾಯಣಮ್ ಎಂದರೆ ಶ್ರೇಷ್ಠರಾದ ಬ್ರಹ್ಮಾದಿಗಳಿಗೂ ಆಶ್ರಯನಾದವನು ಎಂದು ಅರ್ಥ.

ನಾರಾಯಣ ಪರೋ ಜ್ಯೋತಿರಾತ್ಮಾ ನಾರಾಯಣಃ ಪರಃ ।
ನಾರಾಯಣ ಪರಂ ಬ್ರಹ್ಮ ತತ್ತ್ವಂ ನಾರಾಯಣಃ ಪರಃ ॥ ೫೪೩ ॥

**ಅರ್ಥ–** ನಾರಾಯಣಃ= ನಾರಾಯಣನು, ಪರಃ= ಮುಖ್ಯವಾದ, ಜ್ಯೋತಿಃ= ಜ್ಯೋತಿಯು, ನಾರಾಯಣಃ= ನಾರಾಯಣನು, ಪರಃ ಆತ್ಮಾ= ಮುಖ್ಯಸ್ವಾಮಿಯು, ನಾರಾಯಣಃ= ನಾರಾಯಣನು, ಪರಂ ಬ್ರಹ್ಮ= ಪರಬ್ರಹ್ಮನು, ನಾರಾಯಣಃ= ನಾರಾಯಣನು, ಪರಃ ತತ್ತ್ವಂ= ಸರ್ವೋತ್ಕೃಷ್ಟವಾದ ತತ್ತ್ವವು.

**ಅನುವಾದ–** ನಾರಾಯಣನೇ ಮುಖ್ಯ ಜ್ಯೋತಿ. ಆದಾನಾದಿಕರ್ತರಲ್ಲಿ ನಾರಾಯಣನೇ ಶ್ರೇಷ್ಠನಾದವನು. ನಾರಾಯಣನೇ ಸರ್ವೋತ್ತಮನಾದ ಬ್ರಹ್ಮ. ನಾರಾಯಣನೇ ಸರ್ವೋತ್ಕೃಷ್ಟವಾದ ತತ್ತ್ವ.

ಯಚ್ಚ ಕಿಂಚಿಜ್ಜಗತ್ ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।
ಅಂತರ್ಬಹಿಶ್ಚ ತತ್ ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥ ೩೪೪ ॥

**ಅರ್ಥ–** ಯಚ್ಚ = ಯಾವ, ಕಿಂಚಿತ್ = ಸ್ವಲ್ಪ, ಜಗತ್ = ಪ್ರಪಂಚವೂ, ದೃಶ್ಯತೇ = ಕಾಣಲ್ಪಡುತ್ತದೆಯೋ, ವಾ = ಅಥವಾ, ಶ್ರೂಯತೇ ಅಪಿ = ಕೇಳಲ್ಪಡುತ್ತದೆಯೋ, ತತ್ = ಆ ಜಗತ್ತಿನ, ಅಂತಃ = ಒಳಗೆ, ಚ = ಮತ್ತು, ಬಹಿ = ಹೊರಗೆ, ಸರ್ವಂ = ಎಲ್ಲವನ್ನೂ, ವ್ಯಾಪ್ಯ = ತುಂಬಿ, ನಾರಾಯಣಃ = ನಾರಾಯಣನು, ಸ್ಥಿತಃ = ಇದ್ದಾನೆ.

**ಅನುವಾದ–** ಯಾವ ಈ ಅಲ್ಪವಾದ ಜಗತ್ತು ಅಥವಾ ಮಹತ್ತಾದ ಜಗತ್ತು, ದರ್ಶನಕ್ಕೆ ಅಥವಾ ಶ್ರವಣಕ್ಕೆ ವಿಷಯವಾಗಿದೆಯೋ, ನಾರಾಯಣನು ಅಂತಹ ಜಗತ್ತಿನ ವಸ್ತುಗಳನ್ನು ಒಳಗೂ ಮತ್ತು ಹೊರಗೂ ವ್ಯಾಪಿಸಿ ನೆಲೆಸಿದ್ದಾನೆ.

**ಭಾವವಿಲಾಸಿನೀ–**ಇದಾನೀಂ ನಾರಾಯಣೋಪನಿಷದಾ ನಾರಾಯಣಸ್ಯೈವ ಪರಬ್ರಹ್ಮತಾಂ ಸ್ಪಷ್ಟೀಕರ್ತುಂ ತಾಂ ಪಠಿತ್ವಾ ವ್ಯಾಚಷ್ಟೇ – **ಸಹಸ್ರಶೀರ್ಷಮಿತ್ಯಾದಿನಾ** ॥ ೩೪೦-೩೪೪ ॥

ಇತಿ ಸ್ಪಷ್ಟಾ ಹ್ಯುಪನಿಷತ್ಪರಂ ಬ್ರಹ್ಮಾಹ ತಂ ಪ್ರಭುಮ್ ॥ ೩೪೫ ॥

ವಿಶ್ವತಃ ಪರಮತ್ವಂ ಚ ವಿಶ್ವಶಂಭೂಮಿತಾಂ ತಥಾ ।
ವಿಶ್ವೋಪಜೀವ್ಯತಾಮಾತ್ಮೇಶ್ವರತಾಕ್ಷರತೇ ತಥಾ ॥ ೩೪೬ ॥

**ಅರ್ಥ–** ಇತಿ = ಈ ರೀತಿಯಾಗಿ, ಸ್ಪಷ್ಟಾ = ಸ್ಪಷ್ಟವಾದ, ಉಪನಿಷತ್ = ನಾರಾಯಣೋಪನಿಷತ್ತು, ತಂ ಪ್ರಭುಂ = ಆ ಸಮರ್ಥನಾದ ನಾರಾಯಣನನ್ನು, ಪರಂ ಬ್ರಹ್ಮ = ಪರಬ್ರಹ್ಮನನ್ನಾಗಿ, ಆಹ = ಹೇಳಿದೆ, ಹಿ = ನಿಶ್ಚಯವು.

ವಿಶ್ವತಃ = ಜಗತ್ತಿಗಿಂತ, ಪರಮತ್ವಂ = ಉತ್ತಮತ್ವವನ್ನು, ತಥಾ = ಹಾಗೆಯೇ, ವಿಶ್ವಶಂಭೂಮಿತಾಂ - ವಿಶ್ವ = ಎಲ್ಲ, ಶಂ = ಸುಖಕ್ಕೆ, ಭೂಮಿತಾಂ = ಆಶ್ರಯತ್ವವನ್ನು, ವಿಶ್ವೋಪಜೀವ್ಯತಾಂ - ವಿಶ್ವ = ಜಗತ್ತಿನಿಂದ, ಉಪಜೀವ್ಯತಾಂ = ಆಶ್ರಯಿಸಲ್ಪಟ್ಟಿರುವಿಕೆಯನ್ನು, ತಥಾ = ಹಾಗೆಯೇ, ಆತ್ಮೇಶ್ವರತಾಕ್ಷರತೇ - ಆತ್ಮೇಶ್ವರತಾ = ಸ್ವಯಂಪ್ರಭುತ್ವ, ಅಕ್ಷರತೇ = ನಾಶರಾಹಿತ್ಯ ಇವುಗಳನ್ನು. (ಹೇಳಿದೆ)

**ಅನುವಾದ–** ಹೀಗೆ ನಾರಾಯಣೋಪನಿಷತ್ತು ಪ್ರಭುವಾದ ಅವನನ್ನು ಪರಬ್ರಹ್ಮನೆಂದು ಸ್ಪಷ್ಟವಾಗಿ ಹೇಳಿದೆ. ಅವನಿಗೆ ವಿಶ್ವತಃ ಪರಮತ್ವವನ್ನೂ ಎಂದರೆ

ಸರ್ವೋತ್ತಮತ್ವವನ್ನೂ, ಸರ್ವಭಿನ್ನತ್ವವನ್ನೂ ಹೇಳಿದೆ. ವಿಶ್ವಂಭೂಮಿತ್ವವನ್ನು ಎಂದರೆ ಪೂರ್ಣಸುಖಾಶ್ರಯತ್ವವನ್ನೂ ಮತ್ತು ಜೀವರಿಗೆ ಸ್ವಯೋಗ್ಯ ಪೂರ್ಣಸುಖಪ್ರದತ್ವವನ್ನು ಹೇಳಿದೆ. ಹಾಗೆಯೇ, ಸರ್ವೋಪಜೀವ್ಯತ್ವವನ್ನೂ, ಸರ್ವಸ್ವಾಮಿತ್ವವನ್ನೂ, ನಾಶರಾಹಿತ್ಯವನ್ನೂ ಹೇಳಿದೆ. ಪರಬ್ರಹ್ಮನ ಅನೇಕ ಲಕ್ಷಣಗಳನ್ನು ನಾರಾಯಣನಲ್ಲಿಯೇ ಹೇಳಿರುವುದರಿಂದ ನಾರಾಯಣನೇ ಪರಬ್ರಹ್ಮ ಎಂದೂ ಸೂಚಿಸುತ್ತಿದೆ.

**ಭಾವವಿಲಾಸಿನೀ**–ಸ್ಪಷ್ಟಾ 'ನಾರಾಯಣಃ ಪರಂ ಬ್ರಹ್ಮ' ಇತಿ ಸುಪ್ರಸಿದ್ಧನಾರಾಯಣನಾಮ್ನೈವ ತಮುದ್ದಿಶ್ಯ ಪರಬ್ರಹ್ಮತ್ವವಿಧಾನಾತ್ । ಹೀತ್ಯನೇನಾನೇಕಪರಬ್ರಹ್ಮಲಕ್ಷಣಭರಿತತ್ವಾನ್ನಾರಾಯಣ ಏವ ಪರಂ ಬ್ರಹ್ಮೇತಿ ಸೂಚಯತಿ । ತದೇವ ವಿಶದಯತ್ಯುತ್ತರಗ್ರಂಥೇನ ॥ ೫೪೫ ॥

ಶಾಶ್ವತತ್ವಾಚ್ಯುತತ್ವೇ ಚ ಮಹಾಜ್ಞೇಯತ್ವಮೇವ ಚ ।
ಅಂತರ್ಬಹಿಶ್ಚ ವಿಶ್ವಸ್ಯ ವ್ಯಾಪ್ತತ್ವಂ ಚಾಪ್ಯನಂತತಾಮ್ ॥ ೫೪೭ ॥

**ಅರ್ಥ**– ಶಾಶ್ವತತ್ವಾಚ್ಯುತತ್ವೇ - ಶಾಶ್ವತತ್ವ = ಯಾವಾಗಲೂ ಇರುವಿಕೆ, ಅಚ್ಯುತತ್ವೇ = ಕೊರತೆ ಇಲ್ಲದಿರುವಿಕೆ ಇವುಗಳನ್ನು, ಚ = ಮತ್ತು, ಮಹಾಜ್ಞೇಯತ್ವಮೇವ = ತಿಳಿದುಕೊಳ್ಳಬೇಕಾಗುವಿಕೆಯನ್ನು, ಚ = ಮತ್ತು, ವಿಶ್ವಸ್ಯ = ಜಗತ್ತಿನ, ಅಂತಃ = ಒಳಗೆ, ಚ = ಮತ್ತು ಬಹಿಃ = ಹೊರಗೆ, ವ್ಯಾಪ್ತತ್ವಂ = ತುಂಬಿರುವಿಕೆಯನ್ನು ಚ = ಮತ್ತು, ಅನಂತತಾಮ್ = ಕೊನೆ ಇಲ್ಲದಿರುವಿಕೆಯನ್ನು. (ಹೇಳಿದೆ)

**ಅನುವಾದ**– ಶಾಶ್ವತತ್ವ, ಅಚ್ಯುತತ್ವ, ಮಹಾಜ್ಞೇಯತ್ವ ಎಲ್ಲ ವಸ್ತುಗಳ ಒಳಗೆ ಮತ್ತು ಹೊರಗೆ ವ್ಯಾಪ್ತತ್ವ, ಅನಂತತ್ವ, ಈ ಗುಣಗಳನ್ನು ಹೇಳಿದೆ.

ನಾರಾಯಣ ಉಪನಿಷತ್ತು ಸ್ಪಷ್ಟವಾಗಿ ನಾರಾಯಣ ಶಬ್ದವನ್ನು ಸಂಕೀರ್ತನೆ ಮಾಡಿ ಅವನಿಗೇ ಪರಬ್ರಹ್ಮತ್ವವನ್ನು ವಿಧಾನ ಮಾಡಿದೆ. ಪರಬ್ರಹ್ಮನೆಂದು ಕರೆದು ಪರಬ್ರಹ್ಮನ ಅನೇಕ ಲಕ್ಷಣಗಳಿಂದ ಕೂಡಿರುವುದರಿಂದ ನಾರಾಯಣನೇ ಪರಬ್ರಹ್ಮ ಎಂದೂ ಸಮರ್ಥನೆ ಮಾಡುತ್ತದೆ.

**ಭಾವವಿಲಾಸಿನೀ**–ವಿಶ್ವತಃ ಪರಮತ್ವಂ ಚೇತ್ಯನೇನ 'ವಿಶ್ವತಃ ಪರಮಾಮ್' ಇತಿ ಶ್ರುತ್ಯುಕ್ತ-ಪೂರ್ಣಾನಂದಭೂಮಿತಾಂ ವಿಶ್ವೋಪಜೀವ್ಯತಾಂ 'ತದ್ವಿಶ್ವಮುಪಜೀವತಿ' ಇತ್ಯುಕ್ತ-ವಿಶ್ವೋಪಜೀವ್ಯತಾಮ್ । ಏವಮುತ್ತರತ್ರಾಪಿ ದ್ರಷ್ಟವ್ಯಮ್ ॥ ೫೪೬-೫೪೭ ॥

ಬ್ರಹ್ಮಧರ್ಮಾನಿಮಾನ್ ಸರ್ವಾನ್ ಯಸ್ಮಿನ್ನಾರಾಯಣೇ ಶ್ರುತಿಃ ।
ಸಹಸ್ರಶೀರ್ಷ್ಣಿ ಪುರುಷೇ ತನ್ನಾಮ್ನೈವ ಪುನಃಪುನಃ ॥ ೫೪೮ ॥

ಆಮ್ನಾತೇ ಸಂಕಲಯ್ಯಾಹ ಮಹಾತಾತ್ಪರ್ಯಪೂರ್ವಕಮ್ ।
ಸ ಏವ ಹಿ ಪರಂ ಬ್ರಹ್ಮ ಬ್ರಹ್ಮಲಕ್ಷಣವೇದಿನಾಮ್ ॥ ೫೪ ॥

**ಅರ್ಥ–** ಶ್ರುತಿಃ = ವೇದವು, ಇಮಾನ್ = ಈ ಹಿಂದೆ ಹೇಳಿದ, ಸರ್ವಾನ್ = ಎಲ್ಲಾ, ಬ್ರಹ್ಮಧರ್ಮಾನ್ = ಬ್ರಹ್ಮನ ಧರ್ಮಗಳನ್ನು, ಸಂಕಲಯ್ಯ = ಜೊತೆಗೂಡಿಸಿ, ಯಸ್ಮಿನ್ = ಯಾವ, ಸಹಸ್ರಶೀರ್ಷ್ಣಿ = ಅನಂತ ತಲೆಗಳುಳ್ಳ, ಪುರುಷೇ = ಶರೀರದಲ್ಲಿ ನೆಲೆಸಿರುವ, ನಾರಾಯಣೇ = ನಾರಾಯಣನಲ್ಲಿ, ಪುನಃ ಪುನಃ = ಮತ್ತ ಮತ್ತೆ, ತನ್ನಾಮ್ನೈವ = ಅದೇ ಹೆಸರಿನಿಂದ, ಆಮ್ನಾತೇ = ಕರೆಯಲ್ಪಟ್ಟವನಲ್ಲಿ, ಆಹ = ಹೇಳಿತೋ, ಆದ್ದರಿಂದ ಸಃ ಏವ = ಆ ನಾರಾಯಣನೇ, ಬ್ರಹ್ಮಲಕ್ಷಣವೇದಿನಾಂ = ಬ್ರಹ್ಮನ ಲಕ್ಷಣವನ್ನು ಬಲ್ಲವರಿಗೆ, ಪರಂ ಬ್ರಹ್ಮ = ಪರಬ್ರಹ್ಮನು.

**ಅನುವಾದ–** ಪುರುಷಸೂಕ್ತದಲ್ಲಿ ಸಹಸ್ರಶೀರ್ಷನಾದ ಪುರುಷನಲ್ಲಿ ಯಾವ ಯಾವ ಧರ್ಮಗಳು ಹೇಳಲ್ಪಟ್ಟಿವೆಯೋ ಅಂತಹ ಸ್ಪಷ್ಟವಾದ ಎಲ್ಲ ಬ್ರಹ್ಮಧರ್ಮಗಳನ್ನು ಈ ಉಪನಿಷತ್ತು ಪುನಃ ಪುನಃ ನಾರಾಯಣ ನಾರಾಯಣ ಎಂಬ ಶಬ್ದವನ್ನು ಕೀರ್ತನೆ ಮಾಡಿ ಮಹಾತಾತ್ಪರ್ಯಪೂರ್ವಕವಾಗಿ ಒಂದೇ ಕಡೆಯಲ್ಲಿ ಸಂಗ್ರಹಿಸಿ ಹೇಳಿದೆ. ಆದ್ದರಿಂದ ಬ್ರಹ್ಮನ ಲಕ್ಷಣವನ್ನು ತಿಳಿದ ವಿವೇಕಿಗಳಿಗೆ ನಾರಾಯಣನೇ ಪರಬ್ರಹ್ಮ.

**ಭಾವವಿಲಾಸಿನೀ–**'ಏಷ ಸರ್ವೇಶ್ವರಃ' 'ಯತೋ ವಾಚೋ ನಿವರ್ತಂತೇ' 'ಯೇನ ಜಾತಾನಿ ಜೀವಂತಿ' 'ಆತ್ಮಾ ವಾ ಅರೇ ದ್ರಷ್ಟವ್ಯಃ' 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿಶ್ರುತಿಷು ಪ್ರಸಿದ್ಧಾನಿಮಾನ್ ಬ್ರಹ್ಮಧರ್ಮಾನ್ । ಪರಾಭಿಮತನಿರಾಕಾರಬ್ರಹ್ಮಣೋ ನ ಶ್ರೌತತ್ವಮಿತಿ ಭಾವೇನೋಕ್ತಂ ಸಹಸ್ರಶೀರ್ಷ್ಣಿ ಪುರುಷ ಇತಿ । ತನ್ನಾಮ್ನೈವ 'ನಾರಾಯಣಃ ಪರಂ ಬ್ರಹ್ಮ ತತ್ತ್ವಂ ನಾರಾಯಣಃ ಪರಃ । ನಾರಾಯಣ ಪರೋ ಜ್ಯೋತಿರಾತ್ಮಾ ನಾರಾಯಣಃ ಪರಃ ॥' 'ವ್ಯಾಪ್ಯ ನಾರಾಯಣಃ ಸ್ಥಿತಃ' ಇತ್ಯಾದೌ ನಾರಾಯಣನಾಮ್ನಾ । ಅಭ್ಯಾಸಸ್ಯ ಮಹಾತಾತ್ಪರ್ಯ-ಲಿಂಗತ್ವಾದಿತ್ಯಾಶಯೇನೋಕ್ತಮ್ ಮಹಾತಾತ್ಪರ್ಯೇತಿ ॥ ೫೩-೫೪ ॥

**ವಿವರಣೆ–** ಬೇರೆ ಬೇರೆ ಶ್ರುತಿಗಳಲ್ಲಿ ಹೇಳಿದ ಬ್ರಹ್ಮಧರ್ಮಗಳನ್ನು ಇಲ್ಲಿ ಸಂಗ್ರಹಮಾಡಿ ಹೇಳಿದ್ದಾರೆ. ಬೇರೆ ಬೇರೆ ಶ್ರುತಿಗಳಲ್ಲಿ ಹೇಳಿರುವ ಆ ಧರ್ಮಗಳು ಯಾರಲ್ಲಿ ಇವೆ ಎಂಬ ಜಿಜ್ಞಾಸೆಯನ್ನು ಸಮಾಧಾನ ಮಾಡುವುದಕ್ಕೆ ನಾರಾಯಣ ಶಬ್ದವನ್ನು ಹೇಳಿ, ಆ ಧರ್ಮಗಳನ್ನು ಇಲ್ಲಿ ಹೇಳಿದ್ದಾರೆ. 'ಏಷ ಸರ್ವೇಶ್ವರಃ' ಎಂಬ ಬೃಹದಾರಣ್ಯಕ ಶ್ರುತಿಯು ಅವನ ಆತ್ಮೇಶ್ವರತ್ವವನ್ನು ಹೇಳುತ್ತದೆ. 'ಯತೋ ವಾಚೋ ನಿವರ್ತಂತೇ' ಎಂಬ ತೈತ್ತಿರೀಯ ಶ್ರುತಿಯು ಅವನ ಸಾಕಲ್ಯೇನ ಅಜ್ಞೇಯತ್ವಕ್ಕೆ ಉಪಪಾದಕವಾಗಿದೆ. 'ಯೇನ ಜಾತಾನಿ ಜೀವಂತಿ' ಎಂಬ ತೈತ್ತಿರೀಯ ಶ್ರುತಿಯು ಅವನು ವಿಶ್ವೋಪಜೀವ್ಯ ಎಂದು ಹೇಳುತ್ತದೆ. 'ಆತ್ಮಾವಾರೇ ದ್ರಷ್ಟವ್ಯಃ' ಎಂಬ

ಬೃಹದಾರಣ್ಯಕ ಶ್ರುತಿಯು ಅವನ ಮಹಾಜ್ಞೇಯತ್ವವನ್ನು ಹೇಳುತ್ತದೆ. 'ಸತ್ಯಂ ಜ್ಞಾನ ಮನಂತಂ ಬ್ರಹ್ಮ' ಎಂಬ ತೈತ್ತಿರೀಯ ಶ್ರುತಿಯು ಅವನ ಅನಂತತ್ವವನ್ನು ಹೇಳುತ್ತದೆ. ಇವೆಲ್ಲಾ ಬ್ರಹ್ಮಧರ್ಮಗಳೆಂದು ಆಯಾ ಶ್ರುತಿಗಳಲ್ಲಿ ಉಕ್ತವಾಗಿದೆ. ಆ ಬ್ರಹ್ಮನು ಯಾರು ಎಂಬ ಪ್ರಶ್ನೆಗೆ ಉತ್ತರವಾಗಿ ಇಲ್ಲಿ ನಾರಾಯಣ ಶಬ್ದವನ್ನು ಮತ್ತೆ ಮತ್ತೆ ಹೇಳಿ ಅವನಲ್ಲಿ ಒಂದೇ ಸ್ಥಾನದಲ್ಲಿ ಆ ಎಲ್ಲಾ ಧರ್ಮಗಳನ್ನು ಸಂಗ್ರಹಿಸಿ ನಾರಾಯಣ ಉಪನಿಷತ್ತು ಹೇಳುತ್ತಿದೆ. ಆದ್ದರಿಂದ ಆ ಬ್ರಹ್ಮಧರ್ಮಗಳುಳ್ಳ ಮುಖ್ಯವಾದ ಪರಬ್ರಹ್ಮ ವಸ್ತುವು ನಾರಾಯಣನೇ ಎಂದು ಸಿದ್ಧವಾಗುತ್ತದೆ. ಇಲ್ಲಿ ನಾರಾಯಣ ಶಬ್ದದ ಪುನರಾವರ್ತನವಿದೆ. ಪುನರಾವರ್ತನವು ಮಹಾತಾತ್ಪರ್ಯಲಿಂಗವೆಂದು ಎಲ್ಲರೂ ಅಂಗೀಕರಿಸಿದ್ದಾರೆ. ಆದ್ದರಿಂದ ತಾತ್ಪರ್ಯಪೂರ್ವಕವಾಗಿ ನಾರಾಯಣನಲ್ಲಿ ಎಲ್ಲಾ ಬ್ರಹ್ಮಧರ್ಮಗಳನ್ನು ಹೇಳುವ ಈ ನಾರಾಯಣ ಉಪನಿಷತ್ತು ನಾರಾಯಣನೇ ಪರಬ್ರಹ್ಮನೆಂದು ಸಾಧಿಸಿಕೊಡುತ್ತದೆ.

ಪರಂ ಬ್ರಹ್ಮ ಪರಂ ಜ್ಯೋತಿಃ ಪರಂ ತತ್ತ್ವಂ ಪರಂ ಪದಮ್ ।
ಪರಮಾತ್ಮೇತಿ ಚ ಬ್ರಹ್ಮನಾಮ್ನಾ ನಾರಾಯಣಂ ಪ್ರಭುಮ್ ॥ ೫೫೦ ॥

ಸರ್ವಾಣ್ಯುಕ್ತ್ವೋತ್ತರಗ್ರಂಥೇ ಪರೀಕ್ಷಾ ಚ ಯತಃ ಕೃತಾ ।
ಶ್ರುತ್ಯಾ ಲಕ್ಷಣಶಾಸ್ತ್ರಸ್ಯ ಮರ್ಯಾದಾಮನುಸೃತ್ಯ ಹಿ ॥ ೫೫೧ ॥

**ಅರ್ಥ–** ಶ್ರುತ್ಯಾ = ನಾರಾಯಣೋಪನಿಷತ್ತಿನಿಂದ, ಪ್ರಭುಂ = ಸಮರ್ಥನಾದ, ನಾರಾಯಣಂ = ನಾರಾಯಣನನ್ನು, ಉದ್ದಿಶ್ಯ = ಕುರಿತಾಗಿ, ಪರಂ ಬ್ರಹ್ಮ = ಸರ್ವೋತ್ತಮ ಬ್ರಹ್ಮ, ಪರಂಜ್ಯೋತಿಃ = ಉತ್ಕೃಷ್ಟಬೆಳಕು, ಪರಂ ತತ್ವಂ = ಸರ್ವೋತ್ತಮ ತತ್ತ್ವ, ಪರಂ ಪದಂ = ಉತ್ಕೃಷ್ಟಗಮ್ಯ, ಚ = ಮತ್ತು, ಪರಮಾತ್ಮಾ = ಸರ್ವೋತ್ತಮ ಚೇತನ, ಇತಿ = ಎಂದು, ಬ್ರಹ್ಮನಾಮ್ನಾ = ಬ್ರಹ್ಮ ಎಂಬ ಹೆಸರಿನಿಂದ, ಪೌನಃಪುನ್ಯೇನ = ಮತ್ತೆ ಮತ್ತೆ, ಸರ್ವಾಣಿ = ಎಲ್ಲ ಬ್ರಹ್ಮಣಃ = ಬ್ರಹ್ಮನ, ಲಕ್ಷಣಾನಿ ಚ = ಲಕ್ಷಣಗಳನ್ನೂ, ಉಕ್ತ್ವಾ = ಹೇಳಿ, ಲಕ್ಷಣಶಾಸ್ತ್ರಸ್ಯ = ಲಕ್ಷಣ ಹೇಗಿರಬೇಕೆಂದು ಹೇಳುವ ಶಾಸ್ತ್ರದ, ಮರ್ಯಾದಾಂ = ಮರ್ಯಾದೆಯನ್ನು, ಅನುಸೃತ್ಯ = ಅನುಸರಿಸಿ, ಯತಃ= ಯಾವ ಕಾರಣದಿಂದ, ಉತ್ತರಗ್ರಂಥೇ = ('ಪದ್ಮಕೋಶ ಪ್ರತೀಕಾಶಂ' ಎಂಬ ಮುಂದಿನ ವಾಕ್ಯಗಳಲ್ಲಿ), ಪರೀಕ್ಷಾ = ಪರೀಕ್ಷೆಯು, ಕೃತಾ = ಮಾಡಲ್ಪಟ್ಟಿದೆಯೋ, ಆದ್ದರಿಂದ ಸ ಏವ ಹಿ ಪರಂ ಬ್ರಹ್ಮ = ಅವನೇ ಪರಬ್ರಹ್ಮನಷ್ಟೆ

**ಅನುವಾದ–** ಪರಂಬ್ರಹ್ಮ, ಪರಂಜ್ಯೋತಿ, ಪರತತ್ತ್ವ, ಪರಂಪದ, ಪರಮಾತ್ಮ, ಮುಂತಾದ ಬ್ರಹ್ಮವಾಚಕ ಶಬ್ದಗಳಿಂದ ಪ್ರಭುವಾದ ನಾರಾಯಣನನ್ನೇ ಮತ್ತೆ ಮತ್ತೆ ಉದ್ದೇಶಿಸಿ ಬ್ರಹ್ಮನ ಎಲ್ಲ ಧರ್ಮಗಳನ್ನು ಹೇಳಿ ಇದೇ ಉಪನಿಷತ್ತಿನ ಉತ್ತರಭಾಗದಲ್ಲಿ ಅದರ ಪರೀಕ್ಷೆಯನ್ನೂ ಮಾಡಿದ್ದಾಗಿದೆ. ಶ್ರುತಿಯು

**ಲಕ್ಷಣಶಾಸ್ತ್ರದ ಮರ್ಯಾದೆಯನ್ನು ಅನುಸರಿಸಿ ಮೊದಲು ಉದ್ದೇಶವನ್ನೂ ಅನಂತರ ಪರೀಕ್ಷೆಯನ್ನೂ ನಿರೂಪಣೆ ಮಾಡಿದೆ. ಆದ್ದರಿಂದ ನಾರಾಯಣನೇ ಪರಬ್ರಹ್ಮ.**

**ಭಾವವಿಲಾಸಿನೀ**—ನ ಕೇವಲಂ ಬ್ರಹ್ಮಲಕ್ಷಣಭರಿತತ್ವಾನ್ನಾರಾಯಣಃ ಪರಂ ಬ್ರಹ್ಮ ಕಿಂತು ಪರಂ ಬ್ರಹ್ಮ ಪರಂ ಜ್ಯೋತಿಃ ಪರಮಾತ್ಮೇತ್ಯಾದಿಪರಬ್ರಹ್ಮನಾಮಭಿರಪಿ ನಾರಾಯಣಸ್ಯೈವೋದ್ದೇಶಾದಿತ್ಯಾಹ – **ಪರಂ ಬ್ರಹ್ಮೇತ್ಯಾದಿನಾ ॥** ಉತ್ತರಗ್ರಂಥೇ 'ಪದ್ಮಕೋಶಪ್ರತೀಕಾಶಮ್' ಇತ್ಯಾದಿಗ್ರಂಥೇ ॥ ೫೫೦-೫೫೧ ॥

**ವಿವರಣೆ**— ಕೇವಲ ಬ್ರಹ್ಮಲಕ್ಷಣಗಳಿರುವುದರಿಂದಲೇ ನಾರಾಯಣನು ಪರಬ್ರಹ್ಮ ಎಂದು ಹೇಳುತ್ತಿರುವುದಲ್ಲ. ಬ್ರಹ್ಮಶಬ್ದಕ್ಕೆ, ಜ್ಯೋತಿಃಶಬ್ದಕ್ಕೆ ಮತ್ತು ಆತ್ಮಶಬ್ದಕ್ಕೆ ಪರಂ ಪರಂ ಎಂದು ವಿಶೇಷಣವನ್ನು ಸೇರಿಸಿ ಪರತ್ವವನ್ನು ಹೇಳುತ್ತಿರುವುದರಿಂದ ನಾರಾಯಣನೇ ಪರಬ್ರಹ್ಮನು ಎಂದು ಈ ಶ್ಲೋಕಗಳಲ್ಲಿ ಸಮರ್ಥನೆ ಮಾಡುತ್ತಾರೆ. ಪದ್ಮಕೋಶಪ್ರತೀಕಾಶಂ ಎಂದು ಪ್ರಾರಂಭವಾಗುವ ವಾಕ್ಯಸಮೂಹಗಳಲ್ಲಿ ಹೃದ್ಗುಹಾಸ್ಥತ್ವರೂಪವಾದ ಒಂದು ಬ್ರಹ್ಮಧರ್ಮವನ್ನು ಬೋಧನೆ ಮಾಡುತ್ತಾರೆ. ಇದು ಲಕ್ಷಣಶಾಸ್ತ್ರದ ರೀತಿ. ಮುಂಚೆ ಉದ್ದೇಶ, ಅನಂತರ ವಿಭಾಗ, ಅನಂತರ ಪರೀಕ್ಷೆಯ ನಿರೂಪಣೆ. ನಾರಾಯಣನು ಸಮಾಧಿಕರಹಿತನಾದ ಒಂದೇ ವಸ್ತುವಾಗಿರುವುದರಿಂದ ಇಲ್ಲಿ ವಿಭಾಗದ ಅವಶ್ಯಕತೆಯಿಲ್ಲ. ಉದ್ದೇಶ ಮತ್ತು ಪರೀಕ್ಷೆಗಳಷ್ಟೇ ಸಾಕು. ಆ ಕ್ರಮದಿಂದಲೇ ನಾರಾಯಣ ಉಪನಿಷತ್ತು ನಾರಾಯಣನು ಪರಬ್ರಹ್ಮನೆಂದು ಸಾಧಿಸುತ್ತದೆ.

**ಶೃಂಗಗ್ರಾಹಿತಯಾ ತಸ್ಯ ಹೃದ್ಗುಹಾಯಾಂ ಪ್ರದರ್ಶನಾತ್ ।**
**ಉಕ್ತಲಕ್ಷಣಪೂರ್ಣಸ್ಯ ಪರಮಾತ್ಮಾಭಿಧಸ್ಯ ಚ ॥ ೫೫೨ ॥**

**ಅರ್ಥ**— ಉಕ್ತಲಕ್ಷಣಪೂರ್ಣಸ್ಯ = ಹಿಂದೆ ಹೇಳಿರುವ ಲಕ್ಷಣಗಳಿಂದ ತುಂಬಿದ, ಪರಮಾತ್ಮಾಭಿಧಸ್ಯ = ಪರಮಾತ್ಮನೆಂಬ ಹೆಸರುಳ್ಳ, ತಸ್ಯ = ಆ ನಾರಾಯಣನನ್ನು, ಶೃಂಗಗ್ರಾಹಿಕತಯಾ = ಕೊಂಬು ಹಿಡಿಯುವಿಕೆಯಿಂದ (ಪ್ರತ್ಯಕ್ಷವಾಗಿ), ಹೃದ್ಗುಹಾಯಾಂ = ಹೃದಯಗುಹೆಯಲ್ಲಿ, ಪ್ರದರ್ಶನಾತ್ = ತೋರಿಸಿದ್ದರಿಂದ, ಸ ಏವ ಹಿ ಪರಂ ಬ್ರಹ್ಮ = ಅವನೇ ಪರಬ್ರಹ್ಮ.

**ಅನುವಾದ– ಹಿಂದೆ ಹೇಳಿದ ಅನೇಕ ಲಕ್ಷಣಗಳುಳ್ಳ ಪರಮಾತ್ಮನಾದ ಆ ಬ್ರಹ್ಮನನ್ನು ಶೃಂಗಗ್ರಾಹಿಕತೆಯಿಂದ ಹೃದಯಗುಹೆಯಲ್ಲಿ ಇರುವನೆಂದು ಶ್ರುತಿಯು ತೋರಿಸುತ್ತದೆ. (ಒಂದು ವಸ್ತುವಿಗೆ ಲಕ್ಷವನ್ನು ಹೇಳಿ ಆ ಲಕ್ಷಣವುಳ್ಳ ವಸ್ತುವನ್ನು ಪ್ರತ್ಯಕ್ಷವಾಗಿ ತೋರಿಸುವುದೇ ಶಂಗಗ್ರಾಹಿತಯಾ ಪ್ರದರ್ಶನ).**

**ಭಾವವಿಲಾಸಿನೀ**— ಪರಮಾತ್ಮಾಭಿಧಸ್ಯ ಶೃಂಗಗ್ರಾಹಿತಯಾ ಪ್ರದರ್ಶನಾದಿತಿ ಪೂರ್ವೇಣಾನ್ವಯಃ ॥ ೫೫೨ ॥

**ವಿವರಣೆ–** ಹಿಂದಿನ ವಾಕ್ಯಗಳಲ್ಲಿ ವಿಶ್ವತಃ ಪರಮಾಂ ಮೊದಲಾದ ಧರ್ಮಗಳಿಂದ ಕೂಡಿದ ಯಾವ ಪರಬ್ರಹ್ಮನನ್ನು ಹೇಳಿದೆಯೋ ಪದ್ಮಕೋಶಪ್ರತೀಕಾಶಂ ಮೊದಲಾದ ಅನಂತರದ ವಾಕ್ಯಗಳಲ್ಲಿ ಆ ಬ್ರಹ್ಮನೇ ಹೃದಯಗುಹೆಯಲ್ಲಿ ಇರುವನೆಂದು ಸಮರ್ಥನೆ ಮಾಡಿದೆ.

**ರಾಜಾ ರಾಜಸು ಮುಖ್ಯೋ ಹಿ ಮಹಾರಾಜ ಇತೀರ್ಯತೇ ।**
**ಆತ್ಮಾಽನ್ಯಾತ್ಮಸು ಮುಖ್ಯಶ್ಚ ಪರಮಾತ್ಮಾ ತಥಾ ಪ್ರಭುಃ ॥ ೫೫೩ ॥**

**ಅರ್ಥ–** ರಾಜಸು = ರಾಜರಲ್ಲಿ, ಮುಖ್ಯಃ = ಪ್ರಧಾನನಾದ, ರಾಜಾ = ರಾಜನು, ಮಹಾರಾಜಃ = ಮಹಾರಾಜನು, ಇತಿ = ಎಂದು, ಈರ್ಯತೇ ಹಿ = ಹೇಳಲ್ಪಡುತ್ತಾನಷ್ಟೆ, ತಥಾ = ಹಾಗೆಯೇ, ಅನ್ಯಾತ್ಮಸು = ಬೇರೆಯ ಚೇತನರಲ್ಲಿ, ಮುಖ್ಯಃ = ಪ್ರಧಾನನಾದ, ಆತ್ಮಾ = ಚೇತನನು, ಪ್ರಭುಃ = ಸಮರ್ಥನಾದ, ಪರಮಾತ್ಮಾ = ಪರಮಾತ್ಮನು. (ಇತಿ ಈರ್ಯತೇ = ಎಂದು ಕರೆಯಲ್ಪಡುತ್ತಾನೆ)

**ಅನುವಾದ–** ರಾಜರುಗಳಲ್ಲಿ ಮುಖ್ಯನಾದವನು ಮಹಾರಾಜನೆನಿಸುತ್ತಾನೆ. ಹಾಗೆಯೇ ಆತ್ಮರಲ್ಲಿ ಮುಖ್ಯನಾದವನು ಪರಮಾತ್ಮ ಎಂದು ಕರೆಸಿಕೊಳ್ಳುತ್ತಾನೆ.

**ಭಾವವಿಲಾಸಿನೀ–**ಪರಮಾತ್ಮಶಬ್ದಾರ್ಥಮಾಹ – **ರಾಜೇತಿ** ॥ ೫೫೩ ॥

**ವಿವರಣೆ–** ಹಿಂದಿನ ವಾಕ್ಯಗಳಲ್ಲಿ 'ಆತ್ಮಾ ನಾರಾಯಣಃ ಪರಃ' ಎಂದು ಇದೆ. ಹಿಂದಿನ ವಾಕ್ಯದಲ್ಲಿ 'ಪರಮಾತ್ಮಾ ವ್ಯವಸ್ಥಿತಃ' ಎಂದು ಇದೆ. ಆದ್ದರಿಂದ ಆ ನಾರಾಯಣನೇ ಹೃದ್ಗುಹೆಯಲ್ಲಿ ಇರುವ ಪರಮಾತ್ಮ. ಅವನು ಸಮಸ್ತರಿಗಿಂತ ಭಿನ್ನನಾದವನು ಎಂದು ಹಿಂದಿನ ವಾಕ್ಯಗಳು ಸ್ಪಷ್ಟವಾಗಿ ಪ್ರತಿಪಾದನೆ ಮಾಡುತ್ತವೆ.

**ಯಸ್ತು ಪ್ರಸ್ತಾವಿತಃ ಪೂರ್ವಮಾತ್ಮಾ ನಾರಾಯಣಃ ಪರಃ ।**
**ಪರಮಾತ್ಮೇತಿ ಚಾತ್ರೋಕ್ತಃ ಸ ಏವ ಸ್ಯಾನ್ನ ಸಂಶಯಃ ॥ ೫೫೪ ॥**

**ಅರ್ಥ–** ಯಃ ತು = ಮತ್ತು ಯಾರು, ಪೂರ್ವಂ = ಮೊದಲು ಲಕ್ಷಣವನ್ನು ಹೇಳುವಾಗ, ನಾರಾಯಣಃ = ನಾರಾಯಣನು ಪರಃ = ಸರ್ವೋತ್ತಮನಾದ, ಆತ್ಮಾ = ಚೇತನ (ಎಂದು), ಪ್ರಸ್ತಾವಿತಃ = ಪ್ರಸ್ತಾವಿಸಲ್ಪಟ್ಟಿದ್ದಾನೋ, ಅತ್ರ = ಈ ಪರೀಕ್ಷಾಗ್ರಂಥದಲ್ಲಿ, ಪರಮಾತ್ಮಾ ಇತಿ ಚ = ಪರಮಾತ್ಮನೆಂದೂ, ಸಃ ಏವ= ಪೂರ್ವಪ್ರಸ್ತುತನಾದ ನಾರಾಯಣನೇ, ಉಕ್ತಃ ಸ್ಯಾತ್= ಹೇಳಲ್ಪಟ್ಟವನಾಗಬೇಕು, ನ ಸಂಶಯಃ= ಇದರಲ್ಲಿ ಸಂಶಯವಿಲ್ಲ.

**ಅನುವಾದ–** 'ಆತ್ಮಾನಾರಾಯಣಃ ಪರಃ' ಎಂದು ಯಾರನ್ನು ಮೊದಲು ಪ್ರಸ್ತಾವನೆ ಮಾಡಿದೆಯೋ 'ಪರಮಾತ್ಮಾ ವ್ಯವಸ್ಥಿತಃ' ಎಂಬಲ್ಲಿಯೂ ಆ ನಾರಾಯಣನನ್ನೇ ಪರಾಮರ್ಶೆ ಮಾಡುತ್ತದೆ ಎಂಬ ವಿಷಯದಲ್ಲಿ ಸಂದೇಹವಿಲ್ಲ.

ಇಲ್ಲದಿದ್ದರೆ, ಶ್ರುತಿವಾಕ್ಯಗಳಿಗೆ ಏಕವಾಕ್ಯತ್ವವು ಬರುವುದಿಲ್ಲವಾದ ಕಾರಣ ಎರಡು ಸ್ಥಳಗಳಲ್ಲಿ ಹೇಳಿದ ವಸ್ತುವು ಒಂದೇ ಆಗಿರಬೇಕು.

**ಭಾವವಿಲಾಸಿನೀ–**ಲಕ್ಷಣಗ್ರಂಥೇ 'ಆತ್ಮಾ ನಾರಾಯಣಃ ಪರಃ' ಇತ್ಯುಕ್ತಪರಮಾತ್ಮಾಭಿಧ-ನಾರಾಯಣಸ್ಯೈವ ಪರೀಕ್ಷಾಗ್ರಂಥೇ 'ಪರಮಾತ್ಮಾ ವ್ಯವಸ್ಥಿತಃ' ಇತಿ ಪರಮಾತ್ಮಪದೇನ ಪರಾಮರ್ಶಾದೈಕಾರ್ಥ್ಯಮಿತಿ ಭಾವೇನಾಹ – **ಯಸ್ತು ಪ್ರಸ್ತಾವಿತ ಇತಿ** ॥ ೫೫೪ ॥

**ತತ್ ಸ ಬ್ರಹ್ಮೇತಿ ವಾಕ್‌ತತ್ತದಭಿಧಾಮಾಹ ನಾಽಭಿದಾಮ್ ।**
**ಮಹೇಶ್ವರಶಿವಶ್ರುತ್ಯೋಃ ಪೌನರುಕ್ತ್ಯಭಯಾದಪಿ ॥ ೫೫೫ ॥**

**ಅರ್ಥ–** ತತ್ = ನಾರಾಯಣನ ಮಹಿಮೆಯಿಂದಲೇ ಪ್ರಸಕ್ತವಾದ ಕಾರಣ, ಸ ಬ್ರಹ್ಮ = ಅವನೇ ಬ್ರಹ್ಮ, ಇತಿ = ಇತ್ಯಾದಿ, ವಾಕ್ = ವಾಕ್ಯವು, ತತ್ತದಭಿಧಾಂ = ಆಯಾಯಾ ಹೆಸರನ್ನು, ಆಹ = ಹೇಳಿತು, ಅಭಿದಾಂ = ಅಭೇದವನ್ನು, ನ = ಅಲ್ಲ, ಮಹೇಶ್ವರಶಿವಶ್ರುತ್ಯೋಃ – 'ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸಮಹೇಶ್ವರಃ' ಎಂಬ ಮಹೇಶ್ವರ ಶ್ರುತಿ ಮತ್ತು 'ಸಬ್ರಹ್ಮಾ ಸಶಿವಃ' ಎಂಬ ಶಿವಶ್ರುತಿ ಇವುಗಳ, ಪೌನರುಕ್ತ್ಯಭಯಾತ್ ಅಪಿ = ಪುನರುಕ್ತಿ ಎಂಬ ದೋಷದಿಂದ ಭಯದಿಂದಲೂ, ತತ್ತದಭಿಧಾಂ = ಆಯಾಯಾ ಹೆಸರುಗಳನ್ನು (ನಾರಾಯಣನಿಗೆ) ಆಹ = ಹೇಳಿತು.

**ಅನುವಾದ–** ಆ ಕಾರಣದಿಂದ 'ಸ ಬ್ರಹ್ಮಾ ಸ ಶಿವಃ' ಎಂಬ ವಾಕ್ಯವು ನಾರಾಯಣನಿಗೆ ಬ್ರಹ್ಮಾದಿ ಶಬ್ದವಾಚ್ಯತ್ವವನ್ನು ಹೇಳುತ್ತದೆಯೋ ಹೊರತು ಬ್ರಹ್ಮಾದಿಗಳ ಅಭೇದವನ್ನು ಹೇಳುವುದಿಲ್ಲ. ಅಭೇದವನ್ನು ಹೇಳಿದರೆ, ಹಿಂದಿನ ಮಂತ್ರದ ಕೊನೆಯಲ್ಲಿ ಸಮಹೇಶ್ವರಃ ಎಂದು ಇರುವುದರಿಂದ ಪುನಃ ಸ ಶಿವಃ ಎಂದು ಹೇಳಿ ಶಿವನ ಐಕ್ಯವನ್ನು ಹೇಳಿದರೆ, ಪುನರುಕ್ತಿದೋಷವು ಬರುತ್ತದೆ.

**ಭಾವವಿಲಾಸಿನೀ–**ಉಕ್ತರೀತ್ಯಾ ಪೂರ್ವಪ್ರಕರಣೇ ನಾರಾಯಣಮಹಿಮ್ನ ಏವ ಪ್ರಸ್ತುತತ್ವಾತ್ 'ಸ ಬ್ರಹ್ಮೇತ್ಯತ್ರ ತತ್ತದ್ದೇವೈಕ್ಯಮರ್ಥೋ ನೇತ್ಯಾಹ – **ತದಿತಿ** ॥ ತತ್ತಸ್ಮಾತ್ಪರಮಾತ್ಮನಃ ವಿಶ್ವತಃಪರಮತ್ವಾದಿನಾ ಸಕಲಜೀವಜಡಾತ್ಮಕಾತ್ ಪ್ರಪಂಚಾದತ್ಯಂತ- ವಿಲಕ್ಷಣಸ್ಯೈವ ನಾರಾಯಣಸ್ಯ ಪ್ರಸ್ತುತತ್ವಾತ್ । ಅನ್ಯಥೋಪಕ್ರಮವಿರೋಧಾತ್ । 'ಸ ಬ್ರಹ್ಮ' ಇತಿ ವಾಕ್ 'ಸ ಬ್ರಹ್ಮ ಸ ಶಿವಃ ಸ ಹರಿಃ' ಇತ್ಯಾದಿವಾಕ್ । ಐಕ್ಯಪಕ್ಷೇ 'ಸ ಮಹೇಶ್ವರಃ' ಇತ್ಯೇತಾವತಾ ಶಿವೈಕ್ಯಸಿದ್ಧೇಃ ಪುನಃ 'ಸ ಶಿವಃ' ಇತಿ ವ್ಯರ್ಥಂ ಸ್ಯಾದಿತ್ಯಾಶಯೇನಾಹ – **ಮಹೇಶ್ವರೇತಿ॥** 'ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ । ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸ ಮಹೇಶ್ವರಃ ॥' ಇತಿ ಮಹೇಶ್ವಶ್ರುತಿಃ । ಅತ್ರ ಸ್ವರಶಬ್ದೇನ ಪೂರ್ವೋಕ್ತಪ್ರಣವಸ್ಯೈವ ತಸ್ಯೇತಿ ಪ್ರಸ್ತುತತ್ವಾತ್ ಜಡಪ್ರಕೃತೌ ಲೀನಸ್ಯ ಶಬಲಸ್ಯೇತಿ ಮಂದಾಶಂಕಾ ಗರ್ಭಸ್ರಾವೇಣೈವ ಗತಾ । ಕಿಂತು ಪ್ರಕೃತ್ಯಾ ಅಮಲಸತ್ವಸ್ವಭಾವೇನ ಲೀನಸ್ಯಾನುಚ್ಚಾರಣೇನ ಲೀನಸ್ಯ ತಸ್ಯ ಪ್ರಣವಸ್ಯ ಯಃ ಪರಃ

ಸ್ವಾಮೀತ್ಯೇವಾರ್ಥಃ । ಅತೋಽಪಿ ಮಹೇಶ್ವರೋ ವಿಷ್ಣುರೇವ । ಚಕ್ರಶಂಖಗದಾಪದ್ಮಧರ ಇತಿ ವಿಷ್ಣುಂ ಭಾಸ್ವತ್ಕಿರೀಟಮಿತಿ ಚಾವಯೋರ್ವರ್ತತೇ ತಸ್ಯೈವ ಪ್ರಣವಧ್ಯೇಯತ್ವಾತ್ । 'ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್' ಇತಿ ಗೀತಾವಾಕ್ಯಾಚ್ಚ । ನಾಮ-ಸಮನ್ವಯಪಕ್ಷೇ ತು ನ ಕಾಚಿದನುಪಪತ್ತಿರಿತಿ ಭಾವಃ । ಉಪಕ್ರಮೋಪ-ಸಂಹಾರಯೋರೈಕಾರ್ಥ್ಯಾವಶ್ಯಮ್ಭಾವಾನ್ಮಹತಾಮೀಶ್ವರೋ ಮಹೇಶ್ವರ ಇತಿ ಸಾವಕಾಶ-ಮಹೇಶ್ವರಪದಸ್ಯ ನಿರವಕಾಶನಾರಾಯಣಪದಾನುಸಾರ ಏವ ಯೋಜನೀಯತ್ವಾತ್ ॥೫೫೫॥

**ವಿವರಣೆ**– 'ಯೋ ವೇದಾದೌಃ ಸ್ವರಃಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ ತಸ್ಯ ಪ್ರಕೃತಿಲೀನಸ್ಯ ಯ ಪರಃ ಸ ಮಹೇಶ್ವರಃ' ಎಂಬುದು ಮೊದಲನೆಯ ವಾಕ್ಯ. 'ಸ ಬ್ರಹ್ಮಾ ಸಶಿವಃ ಸಹರಿಃ' ಎಂಬುದು ಆದರ ಅನಂತರದ ವಾಕ್ಯ. ಶಿವನ ಐಕ್ಯವನ್ನು ಹೇಳುವುದಾದರೆ ಸ ಮಹೇಶ್ವರಃ ಎಂದು ಹೇಳಿದಾಗಲೇ ಶಿವನ ಐಕ್ಯವು ಗೊತ್ತಾಗುತ್ತದೆ. ಪುನಃ ಸ ಶಿವಃ ಎಂದು ಹೇಳಿ ಐಕ್ಯವನ್ನು ಹೇಳಿದರೆ ಪೌನರುಕ್ತ್ಯವು ಉಂಟಾಗುತ್ತದೆ. ಇಲ್ಲಿ ವೇದಾದೌ ಸ್ವರಃಪ್ರೋಕ್ತಃ ಎಂದು ಪ್ರಣವವೇ ಪ್ರಸ್ತುತವಾಗಿದೆ. ವೇದಾಧ್ಯಯನ ಮಾಡುವವರ ಆಲಸ್ಯದಿಂದ ಒಮ್ಮೊಮ್ಮೆ ಉಚ್ಚಾರ ಮಾಡಲ್ಪಡದಿರುವ ಪ್ರಣವದ ಸ್ವಾಮಿಯಾದ ನಾರಾಯಣನೇ ಯ ಪರಃ ಎಂಬಲ್ಲಿ ಹೇಳಲ್ಪಟ್ಟಿದ್ದಾನೆ. ಪ್ರಣವಪ್ರತಿಪಾದ್ಯನಾದವನು ಪ್ರಣವದ ಅಭಿಮಾನಿಯಾದ ಲಕ್ಷ್ಮಿಗಿಂತ ಶ್ರೇಷ್ಠನಾದವನು. ಪ್ರಣವಪ್ರತಿಪಾದ್ಯತ್ವವು ನಾರಾಯಣನಿಗೇ ಇದೆ. ಇದು ಪ್ರಸಿದ್ಧವಾದ ವಿಷಯ. ಏಕೆಂದರೆ, ಪ್ರಣವ ಮಂತ್ರದ ಜಪದಲ್ಲಿ ಧ್ಯೇಯಮೂರ್ತಿಯನ್ನು 'ಚಕ್ರಶಂಖಗದಾಪದ್ಮಧರಃ' ಎಂಬುದಾಗಿ ವಿಷ್ಣು ಎಂದು ನಾವು ಹೇಳುತ್ತೇವೆ. ಅದ್ವೈತಿಗಳೂ 'ವಿಷ್ಣುಂ ಭಾಸ್ವತ್ ಕಿರೀಟಂ' ಎಂಬ ಧ್ಯಾನಶ್ಲೋಕವನ್ನು ಹೇಳಿ ಸ್ಪಷ್ಟವಾಗಿ ವಿಷ್ಣುವೇ ಪ್ರಣವಪ್ರತಿಪಾದ್ಯನೆಂದು ಅಂಗೀಕರಿಸುತ್ತಾರೆ. 'ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನಸ್ಮರನ್' ಎಂಬ ಗೀತಾವಾಕ್ಯದಿಂದಲೂ ಪ್ರಣವವು ಕೃಷ್ಣವಾಚಕವಾದ್ದರಿಂದ ವಿಷ್ಣುವಾಚಕ ಎಂದು ತಿಳಿಯುತ್ತದೆ. ಆದ್ದರಿಂದ ಇಲ್ಲಿ ಮಹೇಶ್ವರ ಶಬ್ದದಿಂದ ನಾರಾಯಣನನ್ನು ಹೇಳುತ್ತದೆಯೇ ಹೊರತು, ಅದ್ವೈತಿಗಳ ರೀತಿಯಲ್ಲಿ ಜಡಪ್ರಕೃತಿಯಲ್ಲಿ ಲೀನವಾದ ಶಬಲಬ್ರಹ್ಮನನ್ನು ಹೇಳುವುದಿಲ್ಲ. ಮಹೇಶ್ವರ ಎಂಬ ಶಬ್ದಕ್ಕೆ 'ಮಹತಾಂ ಈಶ್ವರಃ' ಎಂಬ ಅರ್ಥವೇ ಉಪಕ್ರಮೋಪಸಂಹಾರಾದಿ ತಾತ್ಪರ್ಯ-ಲಿಂಗಗಳಿಂದ ಉಕ್ತವಾದುದು. ಆದ್ದರಿಂದ ಶಿವಾದಿ ಮಹಾತ್ಮರಿಗೂ ಅವನು ಈಶ್ವರನಾದ ಕಾರಣ ನಾರಾಯಣನು ಮಹೇಶ್ವರನೆನಿಸಿಕೊಳ್ಳುತ್ತಾನೆ. ಹೀಗೆ ಈ ಶ್ರುತಿಯು ಹೇಳುತ್ತದೆಯೇ ಹೊರತು ಶಿವೈಕ್ಯವನ್ನು ಎಂದೂ ಹೇಳುವುದಿಲ್ಲ.

**ಪ್ರಾಗುಕ್ತಾರ್ಥೋಪಸಂಹರ್ತ್ರೀ ಮಹೇಶ್ವರಮಹೀಶ್ವರೇ ।**
**ಶಯಾನಮಾಹ ತಸ್ಯೈಕ್ಯೇ ಕಸ್ಯಾಸೌ ಸ್ಯಾನ್ಮಹೇಶ್ವರಃ ॥ ೫೫೬ ॥**

**ಅರ್ಥ–** ಪ್ರಾಗುಕ್ತಾರ್ಥೋಪಸಂಹರ್ತ್ರೀ - ಪ್ರಾಕ್ = ಹಿಂದೆ, ಉಕ್ತ = ಹೇಳಲ್ಪಟ್ಟ, ಅರ್ಥ = ಅರ್ಥದ, ಉಪಸಂಹರ್ತ್ರೀ = ಉಪಸಂಹಾರ ಮಾಡುವ ಶ್ರುತಿಯು, ಅಹೀಶ್ವರೇ - ಅಹಿ = ಸರ್ಪಗಳಿಗೆ, ಈಶ್ವರೇ = ಅಧಿಪತಿಯಾದ ಶೇಷನ ಮೇಲೆ, ಶಯಾನಂ = ಮಲಗಿರುವ ಪರಮಾತ್ಮನನ್ನು, ಮಹೇಶ್ವರಂ = ಮಹೇಶ್ವರನೆಂದು ಆಹ = ಹೇಳಿತು,. ತಸ್ಯ = ಅವನಿಗೆ, ಐಕ್ಯೇ = ಐಕ್ಯವಿದ್ದಲ್ಲಿ, ಅಸೌ = ಇವನು, ಕಸ್ಯ = ಯಾರಿಗೆ, ಮಹೇಶ್ವರಃ = ಮಹೇಶ್ವರನು, ಸ್ಯಾತ್ = ಆದಾನು?

**ಅನುವಾದ–** ಉಪಸಂಹಾರದಲ್ಲಿ ಈ ಉಪನಿಷತ್ತು ಮಹೇಶ್ವರನನ್ನು ಹೇಳುತ್ತದೆ. ಆ ಮಹೇಶ್ವರನು ಅಹೀಶ್ವರನ ಮೇಲೆ ಮಲಗಿದ ನಾರಾಯಣನೇ ಆಗಬೇಕು. ಶಿವನಿಗೂ ನಾರಾಯಣನಿಗೂ ಐಕ್ಯವಿದ್ದರೆ, ಈ ಉಪನಿಷತ್ ಪ್ರತಿಪಾದ್ಯನಾದವನು ಯಾರಿಗೆ ಮಹೇಶ್ವರನಾಗುತ್ತಾನೆ?

**ಭಾವವಿಲಾಸಿನೀ–**ಶೇಷಶಯನಸ್ಯ ತಸ್ಯೈವ ಸಕಲದೇವಾಧೀಶ್ವರಶೇಷೇಶ್ವರತಯಾ ಮಹೇಶ್ವರತ್ವ-ಸಂಭವಾತ್ 'ರುದ್ರೋ ಬ್ರಹ್ಮಾಣಮಾಶ್ರಿತಃ' ಇತ್ಯುಕ್ತರುದ್ರಸ್ಯ ತದಸಂಭವಾದನ್ಯಥಾ ನಾರಾ-ಯಣೋಪನಿಷತ್ತ್ವವ್ಯಾಘಾತಾಚ್ಚೇತ್ಯಾಶಯೇನಾಹ–**ಅಹೀಶ್ವರ ಇತಿ** ॥ ಉಪಲಕ್ಷಣಂ ಚೈತತ್ । 'ಸ ಹರಿಃ' ಇತಿ ಮಹೇಶ್ವರಶ್ರುತೇರುಪರ್ಯಪಿ ಹರೇಃ ಪ್ರಸ್ತಾವಾದಿತ್ಯಪಿ ದ್ರಷ್ಟವ್ಯಮ್ । ಪುನರೈಕ್ಯೇ ದೂಷಣಾಂತರಂ ಚಾಹ – **ತಸ್ಯೈಕ್ಯ ಇತಿ** ॥ ಇದಮಪ್ಯುಪಲಕ್ಷಣಮ್ । ಪರಮತ್ವಸ್ಯ ಸ್ವರಾಡಿತ್ಯುಕ್ತಸ್ವಾತಂತ್ರ್ಯಸ್ಯ ಚಾಯೋಗಾದಿತ್ಯಪಿ ಗ್ರಾಹ್ಯಮ್ ॥ ೫೫೬ ॥

**ವಿವರಣೆ–** ಶೇಷಶಾಯಿ ಎಂದು ಹೇಳಿದ್ದರಿಂದ ಸಕಲ ದೇವಾಧೀಶ್ವರನಾದ ಶೇಷನ ಮೇಲೆ ಮಲಗಿರುವವನು, ಅವನಿಗಿಂತ ಉತ್ತಮನಾದವನು ಎಂದು ತಿಳಿಯುತ್ತದೆ. 'ರುದ್ರೋಬ್ರಹ್ಮಾಣಮಾಶ್ರಿತಃ' ಎಂದು ಸ್ಮೃತಿ ಇರುವುದರಿಂದ ಇನ್ನೊಬ್ಬರನ್ನು ಆಶ್ರಯಿಸಿರುವ ರುದ್ರನು ಎಂದೂ ಮಹೇಶ್ವರನಾಗುವುದಿಲ್ಲ. ಆದ್ದರಿಂದ ನಾರಾಯಣನೇ ಮಹೇಶ್ವರ. ಮಹೇಶ್ವರಶಬ್ದವು ಬಂದ ಮೇಲೆಯೂ ವೇದದಲ್ಲಿ ಸ ಹರಿಃ ಎಂಬ ಹರಿ ಶಬ್ದವಿದೆ. ಆದ್ದರಿಂದ ಮಹೇಶ್ವರನಾದವನು ಹರಿಯೇ ಎಂದು ತಿಳಿಯುತ್ತದೆ. ಶಿವನ ಐಕ್ಯವನ್ನು ಹೇಳಿದರೆ, ಹಿಂದೆ ಹೇಳಿದ ವಸ್ತುವಾದ ನಾರಾಯಣನಿಗೆ ಹೇಗೆ ಪರಮಾತ್ಮ ಎಂದು ಹೇಳಿದ ಆತ್ಮರಲ್ಲಿ ಪರಮತ್ವವೂ ಹಾಗೆಯೇ ಸ್ವರಾಟ್ ಎಂದು ಹೇಳಿದ ಸ್ವಾತಂತ್ರ್ಯವೂ ಉಪಪನ್ನವಾಗುತ್ತದೆ. ಆದ್ದರಿಂದ ಇಲ್ಲಿ ಎಂದೂ ದೇವತೈಕ್ಯವು ಪ್ರತಿಪಾದ್ಯವಲ್ಲ.

**ವಿಶ್ವಮೇವೇದಂ ಪುರುಷಸ್ತದ್ವಿಶ್ವಮುಪಜೀವತಿ ।**
**ಇತ್ಯೈಕ್ಯೋಕ್ತೇಃ ಪರಂ ಚಾನ್ಯಾಂಗತಿಮಾಹ ತತೋಽಪಿ ನ ॥ ೫೫೭ ॥**

**ಅರ್ಥ–** ಇದಂ = ಈ ಕಾಣುವ, ವಿಶ್ವಂ = ಜಗತ್ತು, ಪುರುಷ ಏವ = ಪುರುಷನಾಮಕ ಬ್ರಹ್ಮನೇ, ಏಕೆಂದರೆ ವಿಶ್ವಂ = ಪ್ರಪಂಚವು, ತತ್ = ಅವನನ್ನು, ಉಪಜೀವತಿ =

ಅವಲಂಬಿಸಿದೆ, ಇತಿ = ಎಂದು, ಐಕ್ಯೋಕ್ತೇಃ = ಐಕ್ಯ ವಾಕ್ಯಕ್ಕೆ, ಪರಂ = ನಂತರ, ಅನ್ಯಾಂಗತಿಂ ಚ = ಅರ್ಥಾಂತರವನ್ನೂ, ಆಹ = ಹೇಳಿದೆ. ತತೋऽಪಿ = ಆ ಕಾರಣದಿಂದಲೂ, ನ = ಐಕ್ಯವಿಲ್ಲ.

**ಅನುವಾದ–** ವಿಶ್ವಮೇವೇದಂ ಪುರುಷಸ್ತದ್ವಿಶ್ವಂ ಉಪಜೀವತಿ ಎಂಬುದು ಇಲ್ಲಿ ಒಂದೇ ವಾಕ್ಯದ ಮೊದಲನೆಯ ಮತ್ತು ಎರಡನೆಯ ಪಾದಗಳು. ಇಲ್ಲಿ ಐಕ್ಯ ವಚನಕ್ಕೆ ಶ್ರುತಿಯು ತಾನೇ ಗತಿಯನ್ನು ಹೇಳುತ್ತದೆ. ಆದ್ದರಿಂದಲೂ ಐಕ್ಯವು ಶ್ರುತ್ಯರ್ಥವಲ್ಲ.

**ಭಾವವಿಲಾಸಿನೀ–** ಐಕ್ಯಾಯೋಗೇ ಯುಕ್ತ್ಯಂತರಂ ಚಾಹ – ವಿಶ್ವಮೇವೇದಮಿತಿ ॥ ೫೫೭ ॥

**ವಿವರಣೆ–** ವಿಶ್ವಮೇವೇದಂ ಪುರುಷಃ ಎಂದು ಮೊದಲನೆಯ ಪಾದ. ಈ ವಿಶ್ವವೆಲ್ಲವೂ ಪುರುಷನೇ ಎಂದು ಅದಕ್ಕೆ ಆಪಾತತಃ ತೋರುವ ಅರ್ಥ. ತದ್ವಿಶ್ವಮುಪಜೀವತಿ ಎಂಬುದು ಎರಡನೆಯ ಪಾದ. ವಿಶ್ವವು ಅವನನ್ನು ಉಪಜೀವಿಸುತ್ತದೆ ಎಂದು ಇದರ ಅರ್ಥ. ಮೊದಲನೆಯ ಪಾದದಲ್ಲಿ ತೋರುವ ಅಭೇದವು ಯುಕ್ತಿಯುಕ್ತವಾಗುವುದಿಲ್ಲ. ಏಕೆಂದರೆ ವಿಶ್ವದಲ್ಲಿ ಜಡವೂ ಸೇರಿದೆ. ಜಡಕ್ಕೂ ಮತ್ತು ಚೇತನಕ್ಕೂ ಎಂದೂ ಅಭೇದವಿಲ್ಲ ಎಂಬ ಕಾರಣದಿಂದ ಶ್ರುತಿಯು ತಾನೇ ಅಭೇದವಾಕ್ಯಕ್ಕೆ ಎರಡನೆಯ ಪಾದದಲ್ಲಿ ಗತಿಯನ್ನು ಹೇಳುತ್ತದೆ ತದ್ವಿಶ್ವಮುಪಜೀವತಿ ಎಂದು. ವಿಶ್ವವು ಅವನನ್ನು ಉಪಜೀವಿಸುವ ಕಾರಣ ವಿಶ್ವಮೇವೇದಂ ಪುರುಷಃ ಎಂಬ ಅಭೇದ ವ್ಯಪದೇಶವಿದೆ. ರಾಜಾ ರಾಷ್ಟ್ರಂ ಎಂಬ ಪ್ರಯೋಗವಿದೆ. ರಾಜನಿಗೂ ರಾಷ್ಟ್ರಕ್ಕೂ ಅಭೇದವಿಲ್ಲ. ರಾಷ್ಟ್ರವು ರಾಜನನ್ನು ಉಪಜೀವಿಸಿಕೊಂಡಿರುತ್ತದೆ. ಆ ಕಾರಣದಿಂದ ರಾಜಾ ರಾಷ್ಟ್ರಂ ಎಂದು ಹೇಗೆ ಅಭೇದವ್ಯಪದೇಶ ಉಂಟಾಗುತ್ತದೆಯೋ ಹಾಗೆಯೇ, ನಾರಾಯಣನನ್ನು ಉಪಜೀವಿಸಿಕೊಂಡಿರುವ ಕಾರಣ ವಿಶ್ವಮೇವೇದಂ ಪುರುಷಃ ಎಂಬ ವ್ಯಪದೇಶವಿದೆ ಎಂದು ತಾನೇ ವ್ಯಾಖ್ಯಾನ ಮಾಡುವ ಶ್ರುತಿಯು ಎಂದೂ ಅಭೇದವನ್ನು ಮನ್ನಿಸುವುದಿಲ್ಲ.

**ಯದ್ ವಿಶ್ವಂ ಪುರುಷಾಖ್ಯಂ ತಮುಪಜೀವತಿ ತತ್‌ಸದಾ ।**
**ವಿಶ್ವಂ ಪುರುಷ ಇತ್ಯುಕ್ತಂ ಯತ್ತದೋರ್ನಿತ್ಯಯೋಗತಃ ॥ ೫೫೮ ॥**

**ಅರ್ಥ–** ಯತ್ = ಯಾವ ಕಾರಣದಿಂದ, ವಿಶ್ವಂ = ಜಗತ್ತು, ಪುರುಷಾಖ್ಯಂ = ಪುರುಷನೆಂಬ, ತಂ = ಆ ನಾರಾಯಣನನ್ನು, ಸದಾ = ಯಾವಾಗಲೂ, ಉಪಜೀವತಿ = ಅವಲಂಬಿಸಿದೆಯೋ, ತತ್ = ಆ ಕಾರಣದಿಂದ, ಯತ್ತದೋಃ = 'ಯತ್' ಮತ್ತು 'ತತ್' ಶಬ್ದಗಳಿಗೆ, ನಿತ್ಯಯೋಗತಃ = ಯಾವಾಗಲೂ ಸಂಬಂಧ ಇರುವುದರಿಂದ, ವಿಶ್ವಂ = ವಿಶ್ವವು, ಪುರುಷಃ = ಪುರುಷನು, ಇತಿ = ಎಂದು, ಉಕ್ತಂ = ಹೇಳಲ್ಪಟ್ಟಿದೆ.

**ಅನುವಾದ–** ಯಾವ ಕಾರಣದಿಂದ ವಿಶ್ವವು ಪುರುಷನಾಮಕನಾದ ಆ ನಾರಾಯಣನನ್ನು ಯಾವಾಗಲೂ ಆಶ್ರಯಿಸಿಕೊಂಡಿದೆಯೋ ಆ ಕಾರಣದಿಂದ

'ವಿಶ್ವಂ ಪುರುಷಃ' ಎಂದು ಹೇಳಲಾಗಿದೆ. ಯತ್ ಶಬ್ದ ಮತ್ತು ತತ್ ಶಬ್ದಗಳಿಗೆ ನಿತ್ಯವೂ ಪರಸ್ಪರಾಪೇಕ್ಷೆಯಿದೆಯಷ್ಟೇ.

**ಭಾವವಿಲಾಸಿನೀ–**ಶ್ರುತೇರರ್ಥಮಾಹ – **ಯದ್ವಿಶ್ವಮಿತಿ** ॥ ಯದ್ಯಸ್ಮಾತ್ ವಿಶ್ವಕರ್ತೃ । ಉಪಜೀವತೀತ್ಯಸ್ಯ ಸಕರ್ಮಕತ್ವಾತ್ ಪ್ರಾಕ್ಪ್ರಸ್ತುತಪುರುಷಪದಸ್ಯ ದ್ವಿತೀಯಾಂತತಯಾಽನುವೃತ್ತಿರಿತಿ ಭಾವೇನೋಕ್ತಮ್ – **ಪುರುಷಾಖ್ಯಂ ತಮಿತಿ** ॥ ತತ್ತಸ್ಮಾತ್ಪುರುಷೋಪಜೀವಕತ್ವಾದ್ ವಿಶ್ವಮ್ ಇದಮಿತ್ಯಪಿ ಗ್ರಾಹ್ಯಮ್ । ಪುರುಷ ಇತ್ಯುಕ್ತಂ 'ಪುರುಷ ಏವ' ಇತ್ಯುಕ್ತಮ್ । 'ರಾಜಾ ರಾಷ್ಟ್ರಮ್' ಇತಿವದುಪಜೀವ್ಯೋಪಜೀವಕಭಾವಾದೇವ 'ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್' ಇತ್ಯಾದಿಶ್ರುತಿಷು ತತ್ರತತ್ರ ಪುರುಷೈಕ್ಯವ್ಯಪದೇಶೋ ನ ಸ್ವರೂಪೈಕ್ಯಾತ್ । ಜಡಾಜಡಯೋಸ್ತದಯೋಗಾದಿತಿ ಶ್ರುತೇರ್ಭಾವಃ । ತಚ್ಛಬ್ದಶ್ರವಣಾದ್ಯಚ್ಛಬ್ದೋಽಧ್ಯಾಹಾರ್ಯ ಇತ್ಯಾಹ – **ಯತ್ತದೋರಿತಿ** ॥ ೫೫೮ ॥

**ವಿವರಣೆ–** ತದ್ವಿಶ್ವಮುಪಜೀವತಿ ಎಂಬಲ್ಲಿ ತತ್ ಶಬ್ದವಿರುವುದರಿಂದ ತತ್ ಶಬ್ದವು ಯಾವಾಗಲೂ ಯತ್ ಶಬ್ದದ ಆಕಾಂಕ್ಷೆಯನ್ನು ಹೊಂದಿರುವುದರಿಂದ ಯತ್ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆಗ ಯತ್ ಎಂದರೆ ಯಾವ ಕಾರಣದಿಂದ, ವಿಶ್ವಂ ಜಗತ್ತು ಉಪಜೀವತಿ, ಹಿಂದೆ ಹೇಳಿದ ಪುರುಷನನ್ನು ಉಪಜೀವಿಸುತ್ತದೆಯೋ , ತತ್ ಎಂದರೆ ಆ ಕಾರಣದಿಂದ, ಎಂದರೆ ಪುರುಷೋಪಜೀವಕವಾದುದರಿಂದ, ಪುರುಷ ಏವ, ಪುರುಷನೇ ಎಂದು ಹೇಳಲ್ಪಡುತ್ತದೆ. ರಾಜಾ ರಾಷ್ಟ್ರಂ ಎಂಬ ಪ್ರಯೋಗದಲ್ಲಿ ಉಪಜೀವ್ಯ ಉಪಜೀವಕಭಾವವನ್ನು ಅವಲಂಬಿಸಿ ಹೇಗೆ ಅಭೇದವ್ಯಪದೇಶವಿದೆಯೋ ಹಾಗೆಯೇ ಇಲ್ಲಿಯೂ ಮತ್ತು 'ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್' ಮುಂತಾದ ಕಡೆಗಳಲ್ಲಿಯೂ ಅಭೇದ ವ್ಯಪದೇಶವಿದೆ. ಹೊರತಾಗಿ ಸ್ವರೂಪಾಭೇದ ಕಾರಣದಿಂದ ಅಲ್ಲ. ಜಡ ಮತ್ತು ಚೇತನಗಳಿಗೆ ಎಂದೂ ಸ್ವರೂಪಾಭೇದವಿಲ್ಲ.

**ಶ್ರುತ್ಯರ್ಥಮಿತ್ಥಮೇವಾಹುಃ ಪುಂಕ್ಲೈಬ್ಯಾದ್ ಯೇ ತು ಬಿಭ್ಯತಿ ।**
**ಕಶ್ಛಿನ್ದ್ಯಾಚ್ಛ್ರುತಿಸುಂದರ್ಯಾಃ ಸೌಂದರ್ಯಂ ಚರಣದ್ವಯೇ ॥ ೫೫೯ ॥**

**ಅರ್ಥ–** ಯೇ ತು = ಯಾರಾದರೂ, ಪುಂಕ್ಲೈಬ್ಯಾತ್ = 'ಪುರುಷ' ಎಂಬ ಪುಲ್ಲಿಂಗದ ಪದಕ್ಕೆ 'ತತ್' ಎಂದು ನಪುಂಸಕಲಿಂಗ ಪದದಿಂದ ಪರಾಮರ್ಶೆಯಿಂದ, ಬಿಭ್ಯತಿ = ಹೆದರುತ್ತಾರೋ, (ತೇ = ಅವರು), ಶ್ರುತ್ಯರ್ಥಂ = ವೇದಾರ್ಥವನ್ನು ಇತ್ಥಮೇವ = ಈ ರೀತಿಯಿಂದಲೇ, ಆಹುಃ = ಹೇಳುತ್ತಾರೆ, ಕಃ = ಯಾರು, ಶ್ರುತಿಸುಂದರ್ಯಾಃ = ವೇದಸುಂದರಿಯ, ಚರಣದ್ವಯೇ = ಎರಡು ಪಾದಗಳಲ್ಲಿರುವ, ಸೌಂದರ್ಯಂ = ಏಕಾರ್ಥರೂಪವಾದ ಸೌಂದರ್ಯವನ್ನು, ಛಿಂದ್ಯಾತ್ = ಕತ್ತರಿಸಿಯಾನು?

ಅವಲಂಬಿಸಿದೆ, ಇತಿ = ಎಂದು, ಐಕ್ಯೋಕ್ತೇಃ = ಐಕ್ಯ ವಾಕ್ಯಕ್ಕೆ, ಪರಂ = ನಂತರ, ಅನ್ಯಾಂಗತಿಂ ಚ = ಅರ್ಥಾಂತರವನ್ನೂ, ಆಹ = ಹೇಳಿದೆ. ತತೋऽಪಿ = ಆ ಕಾರಣದಿಂದಲೂ, ನ = ಐಕ್ಯವಿಲ್ಲ.

**ಅನುವಾದ–** ವಿಶ್ವಮೇವೇದಂ ಪುರುಷಸ್ತದ್ವಿಶ್ವಂ ಉಪಜೀವತಿ ಎಂಬುದು ಇಲ್ಲಿ ಒಂದೇ ವಾಕ್ಯದ ಮೊದಲನೆಯ ಮತ್ತು ಎರಡನೆಯ ಪಾದಗಳು. ಇಲ್ಲಿ ಐಕ್ಯ ವಚನಕ್ಕೆ ಶ್ರುತಿಯು ತಾನೇ ಗತಿಯನ್ನು ಹೇಳುತ್ತದೆ. ಆದ್ದರಿಂದಲೂ ಐಕ್ಯವು ಶ್ರುತ್ಯರ್ಥವಲ್ಲ.

**ಭಾವವಿಲಾಸಿನೀ–** ಐಕ್ಯಾಯೋಗೇ ಯುಕ್ತ್ಯಂತರಂ ಚಾಹ – ವಿಶ್ವಮೇವೇದಮಿತಿ ॥ ೫೫೭ ॥

**ವಿವರಣೆ–** ವಿಶ್ವಮೇವೇದಂ ಪುರುಷಃ ಎಂದು ಮೊದಲನೆಯ ಪಾದ. ಈ ವಿಶ್ವವೆಲ್ಲವೂ ಪುರುಷನೇ ಎಂದು ಅದಕ್ಕೆ ಆಪಾತತಃ ತೋರುವ ಅರ್ಥ. ತದ್ವಿಶ್ವಮುಪಜೀವತಿ ಎಂಬುದು ಎರಡನೆಯ ಪಾದ. ವಿಶ್ವವು ಅವನನ್ನು ಉಪಜೀವಿಸುತ್ತದೆ ಎಂದು ಇದರ ಅರ್ಥ. ಮೊದಲನೆಯ ಪಾದದಲ್ಲಿ ತೋರುವ ಅಭೇದವು ಯುಕ್ತಿಯುಕ್ತವಾಗುವುದಿಲ್ಲ. ಏಕೆಂದರೆ ವಿಶ್ವದಲ್ಲಿ ಜಡವೂ ಸೇರಿದೆ. ಜಡಕ್ಕೂ ಮತ್ತು ಚೇತನಕ್ಕೂ ಎಂದೂ ಅಭೇದವಿಲ್ಲ ಎಂಬ ಕಾರಣದಿಂದ ಶ್ರುತಿಯು ತಾನೇ ಅಭೇದವಾಕ್ಯಕ್ಕೆ ಎರಡನೆಯ ಪಾದದಲ್ಲಿ ಗತಿಯನ್ನು ಹೇಳುತ್ತದೆ ತದ್ವಿಶ್ವಮುಪಜೀವತಿ ಎಂದು. ವಿಶ್ವವು ಅವನನ್ನು ಉಪಜೀವಿಸುವ ಕಾರಣ ವಿಶ್ವಮೇವೇದಂ ಪುರುಷಃ ಎಂಬ ಅಭೇದ ವ್ಯಪದೇಶವಿದೆ. ರಾಜಾ ರಾಷ್ಟ್ರಂ ಎಂಬ ಪ್ರಯೋಗವಿದೆ. ರಾಜನಿಗೂ ರಾಷ್ಟ್ರಕ್ಕೂ ಅಭೇದವಿಲ್ಲ. ರಾಷ್ಟ್ರವು ರಾಜನನ್ನು ಉಪಜೀವಿಸಿಕೊಂಡಿರುತ್ತದೆ. ಆ ಕಾರಣದಿಂದ ರಾಜಾ ರಾಷ್ಟ್ರಂ ಎಂದು ಹೇಗೆ ಅಭೇದವ್ಯಪದೇಶ ಉಂಟಾಗುತ್ತದೆಯೋ ಹಾಗೆಯೇ, ನಾರಾಯಣನನ್ನು ಉಪಜೀವಿಸಿಕೊಂಡಿರುವ ಕಾರಣ ವಿಶ್ವಮೇವೇದಂ ಪುರುಷಃ ಎಂಬ ವ್ಯಪದೇಶವಿದೆ ಎಂದು ತಾನೇ ವ್ಯಾಖ್ಯಾನ ಮಾಡುವ ಶ್ರುತಿಯು ಎಂದೂ ಅಭೇದವನ್ನು ಮನ್ನಿಸುವುದಿಲ್ಲ.

**ಯದ್ ವಿಶ್ವಂ ಪುರುಷಾಖ್ಯಂ ತಮುಪಜೀವತಿ ತತ್‌ಸದಾ ।**
**ವಿಶ್ವಂ ಪುರುಷ ಇತ್ಯುಕ್ತಂ ಯತ್ತದೋರ್ನಿತ್ಯಯೋಗತಃ ॥ ೫೫೮ ॥**

**ಅರ್ಥ–** ಯತ್ = ಯಾವ ಕಾರಣದಿಂದ, ವಿಶ್ವಂ = ಜಗತ್ತು, ಪುರುಷಾಖ್ಯಂ = ಪುರುಷನೆಂಬ, ತಂ = ಆ ನಾರಾಯಣನನ್ನು, ಸದಾ = ಯಾವಾಗಲೂ, ಉಪಜೀವತಿ = ಅವಲಂಬಿಸಿದೆಯೋ, ತತ್ = ಆ ಕಾರಣದಿಂದ, ಯತ್ತದೋಃ = 'ಯತ್' ಮತ್ತು 'ತತ್' ಶಬ್ದಗಳಿಗೆ, ನಿತ್ಯಯೋಗತಃ = ಯಾವಾಗಲೂ ಸಂಬಂಧ ಇರುವುದರಿಂದ, ವಿಶ್ವಂ = ವಿಶ್ವವು, ಪುರುಷಃ = ಪುರುಷನು, ಇತಿ = ಎಂದು, ಉಕ್ತಂ = ಹೇಳಲ್ಪಟ್ಟಿದೆ.

**ಅನುವಾದ– ಯಾವ ಕಾರಣದಿಂದ ವಿಶ್ವವು ಪುರುಷನಾಮಕನಾದ ಆ ನಾರಾಯಣನನ್ನು ಯಾವಾಗಲೂ ಆಶ್ರಯಿಸಿಕೊಂಡಿದೆಯೋ ಆ ಕಾರಣದಿಂದ**

'ವಿಶ್ವಂ ಪುರುಷಃ' ಎಂದು ಹೇಳಲಾಗಿದೆ. ಯತ್ ಶಬ್ದ ಮತ್ತು ತತ್ ಶಬ್ದಗಳಿಗೆ ನಿತ್ಯವೂ ಪರಸ್ಪರಾಪೇಕ್ಷೆಯಿದೆಯಷ್ಟೇ.

**ಭಾವವಿಲಾಸಿನೀ–**ಶ್ರುತೇರರ್ಥಮಾಹ – **ಯದ್ವಿಶ್ವಮಿತಿ** ॥ ಯದ್ಯಸ್ಮಾತ್ ವಿಶ್ವಕರ್ತೃ । ಉಪಜೀವತೀತ್ಯಸ್ಯ ಸಕರ್ಮಕತ್ವಾತ್ ಪ್ರಾಕ್ಪ್ರಸ್ತುತಪುರುಷಪದಸ್ಯ ದ್ವಿತೀಯಾಂತತಯಾಽನುವೃತ್ತಿರಿತಿ ಭಾವೇನೋಕ್ತಮ್ – **ಪುರುಷಾಖ್ಯಂ ತಮಿತಿ** ॥ ತತ್ತಸ್ಮಾತ್ಪುರುಷೋಪಜೀವಕತ್ವಾದ್ ವಿಶ್ವಮ್ ಇದಮಿತ್ಯಪಿ ಗ್ರಾಹ್ಯಮ್ । ಪುರುಷ ಇತ್ಯುಕ್ತಂ 'ಪುರುಷ ಏವ' ಇತ್ಯುಕ್ತಮ್ । 'ರಾಜಾ ರಾಷ್ಟ್ರಮ್' ಇತಿವದುಪಜೀವ್ಯೋಪಜೀವಕಭಾವಾದೇವ 'ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್' ಇತ್ಯಾದಿಶ್ರುತಿಷು ತತ್ರತತ್ರ ಪುರುಷೈಕ್ಯವ್ಯಪದೇಶೋ ನ ಸ್ವರೂಪೈಕ್ಯಾತ್ । ಜಡಾಜಡಯೋಸ್ತದಯೋಗಾದಿತಿ ಶ್ರುತೇರ್ಭಾವಃ । ತಚ್ಛಬ್ದಶ್ರವಣಾದ್ಯಚ್ಛಬ್ದೋಽಧ್ಯಾಹಾರ್ಯ ಇತ್ಯಾಹ – **ಯತ್ತದೋರಿತಿ** ॥ ೫೫೮ ॥

**ವಿವರಣೆ–** ತದ್ವಿಶ್ವಮುಪಜೀವತಿ ಎಂಬಲ್ಲಿ ತತ್ ಶಬ್ದವಿರುವುದರಿಂದ ತತ್ ಶಬ್ದವು ಯಾವಾಗಲೂ ಯತ್ ಶಬ್ದದ ಆಕಾಂಕ್ಷೆಯನ್ನು ಹೊಂದಿರುವುದರಿಂದ ಯತ್ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆಗ ಯತ್ ಎಂದರೆ ಯಾವ ಕಾರಣದಿಂದ, ವಿಶ್ವಂ ಜಗತ್ತು ಉಪಜೀವತಿ, ಹಿಂದೆ ಹೇಳಿದ ಪುರುಷನನ್ನು ಉಪಜೀವಿಸುತ್ತದೆಯೋ , ತತ್ ಎಂದರೆ ಆ ಕಾರಣದಿಂದ, ಎಂದರೆ ಪುರುಷೋಪಜೀವಕವಾದುದರಿಂದ, ಪುರುಷ ಏವ, ಪುರುಷನೇ ಎಂದು ಹೇಳಲ್ಪಡುತ್ತದೆ. ರಾಜಾ ರಾಷ್ಟ್ರಂ ಎಂಬ ಪ್ರಯೋಗದಲ್ಲಿ ಉಪಜೀವ್ಯ ಉಪಜೀವಕಭಾವವನ್ನು ಅವಲಂಬಿಸಿ ಹೇಗೆ ಅಭೇದವ್ಯಪದೇಶವಿದೆಯೋ ಹಾಗೆಯೇ ಇಲ್ಲಿಯೂ ಮತ್ತು 'ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್' ಮುಂತಾದ ಕಡೆಗಳಲ್ಲಿಯೂ ಅಭೇದ ವ್ಯಪದೇಶವಿದೆ. ಹೊರತಾಗಿ ಸ್ವರೂಪಾಭೇದ ಕಾರಣದಿಂದ ಅಲ್ಲ. ಜಡ ಮತ್ತು ಚೇತನಗಳಿಗೆ ಎಂದೂ ಸ್ವರೂಪಾಭೇದವಿಲ್ಲ.

**ಶ್ರುತ್ಯರ್ಥಮಿತ್ಥಮೇವಾಹುಃ ಪುಂಕ್ಲೈಬ್ಯಾದ್ ಯೇ ತು ಬಿಭ್ಯತಿ ।**
**ಕಶ್ಛಿನ್ದ್ಯಾಚ್ಛ್ರುತಿಸುಂದರ್ಯಾಃ ಸೌಂದರ್ಯಂ ಚರಣದ್ವಯೇ ॥ ೫೫೯ ॥**

**ಅರ್ಥ–** ಯೇ ತು = ಯಾರಾದರೂ, ಪುಂಕ್ಲೈಬ್ಯಾತ್ = 'ಪುರುಷ' ಎಂಬ ಪುಲ್ಲಿಂಗದ ಪದಕ್ಕೆ 'ತತ್' ಎಂದು ನಪುಂಸಕಲಿಂಗ ಪದದಿಂದ ಪರಾಮರ್ಶೆಯಿಂದ, ಬಿಭ್ಯತಿ = ಹೆದರುತ್ತಾರೋ, (ತೇ = ಅವರು), ಶ್ರುತ್ಯರ್ಥಂ = ವೇದಾರ್ಥವನ್ನು ಇತ್ಥಮೇವ = ಈ ರೀತಿಯಿಂದಲೇ, ಆಹುಃ = ಹೇಳುತ್ತಾರೆ, ಕಃ = ಯಾರು, ಶ್ರುತಿಸುಂದರ್ಯಾಃ = ವೇದಸುಂದರಿಯ, ಚರಣದ್ವಯೇ = ಎರಡು ಪಾದಗಳಲ್ಲಿರುವ, ಸೌಂದರ್ಯಂ = ಏಕಾರ್ಥರೂಪವಾದ ಸೌಂದರ್ಯವನ್ನು, ಛಿಂದ್ಯಾತ್ = ಕತ್ತರಿಸಿಯಾನು?

**ಅನುವಾದ–** ಪುರುಷ ಶಬ್ದದ ಪುಲ್ಲಿಂಗಕ್ಕೂ ತತ್‌ಶಬ್ದದ ನಪುಂಸಕಲಿಂಗಕ್ಕೂ ಹೆದರುವವರು ಶ್ರುತ್ಯರ್ಥವನ್ನು ಹೀಗೆಯೇ ಹೇಳುತ್ತಾರೆ. ಶ್ರುತಿಸುಂದರಿಯ ಎರಡು ಚರಣಗಳಲ್ಲಿರುವ ಸೌಂದರ್ಯವನ್ನು ಯಾವನು ಕತ್ತರಿಸುತ್ತಾನೆ?

**ಭಾವವಿಲಾಸಿನೀ–**ಯೇ ತು ವಿಶ್ವಮೇವೇದಂ ಪುರುಷ ಇತ್ಯತ್ರ ಪುರುಷೈಕ್ಯಮೇವೋಕ್ತ್ವಾ ತತ್ ತಂ ಪುರುಷಂ ವಿಶ್ವಮುಪಜೀವತೀತ್ಯರ್ಥಮಾಹುಃ ತೇಷಾಂ ದೋಷದ್ವಯಂ ವದನ್ನಸ್ಮದುಕ್ತ ಏವ ಶ್ರುತ್ಯರ್ಥ ಇತ್ಯಾಹ – **ಶ್ರುತ್ಯರ್ಥಮಿತಿ** ॥ ಪುಂಕ್ಲೈಬ್ಯಾತ್ ಪೂರ್ವೋಕ್ತಪುರುಷಸ್ಯ ತದಿತಿ ನಪುಂಸಕಪದೇನ ಪರಾಮರ್ಶಾತ್ । ಚರಣದ್ವಯೇ ವಿಶ್ವಮೇವೇದಂ ಪುರುಷಃ ತದ್ವಿಶ್ವಮುಪಜೀವತೀತಿ ಪಾದದ್ವಯೇ ಸೌಂದರ್ಯಮೈಕಾರ್ಥ್ಯರೂಪವಾಕ್ಯಾಲಂಕಾರಂ ಭಿನ್ದ್ಯಾದ್ ಐಕ್ಯಂ ಭೇದರೂಪವಿರುದ್ಧಾರ್ಥಕಥನೇನ ದೂಷಯೇತ್ । ಏವಂ ವದತಾ ಪೂರ್ವ-ಪಾದೇ ಐಕ್ಯಸ್ಯೈವೋಕ್ತತ್ವಾತ್ವಾದುತ್ತರಪಾದೇ ಚೋಪಜೀವ್ಯೋಪಜೀವಕಭಾವೇನ ಭೇದ-ಸ್ಯೈವೋಕ್ತತ್ವಾತ್ತಸ್ಯ ಚ 'ಸಂಭವತ್ಯೇಕವಾಕ್ಯತ್ವೇ ವಾಕ್ಯಭೇದೋ ಹಿ ದೂಷಣಮ್' ಇತಿ ದೂಷಣತ್ವೋಕ್ತೇಃ ಪರಸ್ಪರವ್ಯಾಹತಾರ್ಥಕಥನೇ ತ್ವಮಾನತ್ವಪ್ರಾಪ್ತ್ಯಾ ಶ್ರುತೇರೇವ ನಾಶಿತತ್ವಾಚ್ಚ ಮಹಾದೂಷಣತ್ವಾದಿತಿ ಭಾವಃ । ಅತ ಏವ ಭಿಂದ್ಯಾದಿತ್ಯುಕ್ತಮ್ ॥ ೫೪ ॥

**ವಿವರಣೆ–** 'ವಿಶ್ವಮೇವೇದಂ ಪುರುಷಃ ತದ್ ವಿಶ್ವಮುಪಜೀವತಿ ಎಂಬ ಎರಡು ಪಾದಗಳಿಗೆ ನಾವು ಹಿಂದಿನ ಶ್ಲೋಕದಲ್ಲಿ ಹೇಳಿದ ಅರ್ಥವನ್ನೇ ಹೇಳಬೇಕು. ಅದನ್ನು ಬಿಟ್ಟು 'ಈ ವಿಶ್ವವೆಲ್ಲವೂ ಪುರುಷನೇ, ಆ ಪುರುಷನನ್ನು ವಿಶ್ವವು ಉಪಜೀವಿಸುತ್ತದೆ'' ಎಂದು ಅರ್ಥಮಾಡಿದರೆ ಎರಡು ದೋಷಗಳು ಬರುತ್ತವೆ. ಮೊದಲನೆಯ ದೋಷವೆಂದರೆ ವಿಶ್ವಮೇವೇದಂ ಪುರುಷಃ ಎಂಬ ಮೊದಲನೆಯ ಪಾದದಲ್ಲಿ ಪುರುಷನು ಪುಲ್ಲಿಂಗಶಬ್ದದಿಂದ ಪ್ರಸ್ತುತನಾಗಿದ್ದಾನೆ. ಅವನನ್ನು ತತ್ ಎಂಬ ನಪುಂಸಕಲಿಂಗಶಬ್ದದಿಂದ ಪರಾಮರ್ಶೆ ಮಾಡಿ ಆ ಪುರುಷನನ್ನು ಎಂದು ಅರ್ಥಮಾಡಿದರೆ ಪುಲ್ಲಿಂಗ ಶಬ್ದದಿಂದ ಪ್ರಸ್ತುತವಾದುದನ್ನು ನಪುಂಸಕಲಿಂಗಶಬ್ದದಿಂದ ಪರಾಮರ್ಶೆಮಾಡುವುದು ಒಂದು ದೋಷ. ಎರಡನೆಯ ದೋಷವೆಂದರೆ ಮೊದಲನೆಯ ಪಾದದಲ್ಲಿ 'ಈ ವಿಶ್ವವೆಲ್ಲವೂ ಪುರುಷನೇ' ಎಂದು ಹೇಳಿ ಎರಡನೆಯ ಪಾದದಲ್ಲಿ 'ಆ ಪುರುಷನನ್ನು ವಿಶ್ವವು ಉಪಜೀವಿಸುತ್ತದೆ' ಎಂದು ಹೇಳಿದರೆ ವ್ಯಾಹತಿದೋಷವು ಬರುತ್ತದೆ. ಏಕೆಂದರೆ ಉಪಜೀವ್ಯಉಪಜೀವಕಭಾವವಿರುವಲ್ಲಿ ಭೇದವೇ ದೃಷ್ಟವಾಗಿರುವುದರಿಂದ ಎರಡನೆಯ ಚರಣದಿಂದ ವಿಶ್ವಕ್ಕೂ ಪುರುಷನಿಗೂ ಭೇದವೇ ತಿಳಿಯುತ್ತದೆ. ಆದರೆ ಮೊದಲನೆಯ ಚರಣವು ಅಭೇದವನ್ನು ಹೇಳುತ್ತಿದೆ. ಆದ್ದರಿಂದ ವ್ಯಾಹತಿಯು ಬರುತ್ತದೆ. ಈ ಎರಡು ಚರಣಗಳಿಗೆ ಪರಸ್ಪರ ವಿರುದ್ಧವಾದ ಅರ್ಥವನ್ನು ಹೇಳಿದರೆ ಶ್ರುತಿಸುಂದರಿಯ ಎರಡು ಚರಣಗಳನ್ನು ಕತ್ತರಿಸಿದಂತೆಯೇ ಆಗುತ್ತದೆ. ಆದ್ದರಿಂದ ಹಾಗೆ ಮಾಡದೆ ನಾವು ಹೇಳಿದಂತೆ ಯತ್-ತತ್ ಪದಗಳಿಗೆ ಕಾರಣತ್ವರೂಪವಾದ ಅರ್ಥವನ್ನು ಹೇಳಿ ಉಪಜೀವ್ಯೋಪಜೀವಕಭಾವವಿರುವುದರಿಂದಲೇ 'ಇದಂ ವಿಶ್ವಂ ಪುರುಷ ಏವ' ಎಂಬ

ವ್ಯಪದೇಶವನ್ನು ರಾಷ್ಟ್ರ ರಾಷ್ಟ್ರಂ ಎಂಬ ವ್ಯಪದೇಶದಂತೆ ಕೂಡಿಸಬೇಕು ಎಂದು ಅಭಿಪ್ರಾಯ.

**ಅತಃ ಶ್ರುತ್ಯರ್ಥಮೀಮಾಂಸಾನಿಪುಣಾನಾಂ ವಿವೇಕಿನಾಮ್ ।**
**ಮತೇ ನಾರಾಯಣೋ ದೇವಃ ಪರಂ ಬ್ರಹ್ಮ ನ ಚಾಪರಃ ।**
**ಇತಿ ನಿರ್ಣೀಯತೇ ನೋ ಚೇಚ್ಛ್ರುತಿರೇಷಾ ಪ್ರಕುಪ್ಯತಿ ॥ ೫೬೦ ॥**

**ಅರ್ಥ–** ಅತಃ = ಹೀಗೆ ಐಕ್ಯಪಕ್ಷದಲ್ಲಿ ದೋಷಗಳಿರುವುದರಿಂದ, ಶ್ರುತ್ಯರ್ಥ-ಮೀಮಾಂಸಾ- ನಿಪುಣಾನಾಂ - ಶ್ರುತಿ = ವೇದದ, ಅರ್ಥ = ಅರ್ಥದ, ಮೀಮಾಂಸಾ = ವಿಚಾರದಲ್ಲಿ, ನಿಪುಣಾನಾಂ = ಕುಶಲರಾದ, ವಿವೇಕಿನಾಂ = ಪ್ರಜ್ಞಾವಂತರ, ಮತೇ = ಅಭಿಪ್ರಾಯದಲ್ಲಿ, ದೇವಃ = ಕ್ರೀಡಾದಿ ಗುಣಸಂಪನ್ನನಾದ, ನಾರಾಯಣಃ = ನಾರಾಯಣನು, ಪರಂ ಬ್ರಹ್ಮ = ಪರಬ್ರಹ್ಮ, ಅಪರಃ ಚ = ಮತ್ತೊಬ್ಬನು, ನ = ಅಲ್ಲ, ಇತಿ = ಎಂದು, ನಿರ್ಣೀಯತೇ = ನಿರ್ಣಯಿಸಲ್ಪಡುತ್ತದೆ, ನೋ ಚೇತ್ = ಇಲ್ಲವಾದರೆ, ಏಷಾ = ಈ, ಶ್ರುತಿಃ = ವೇದವಾಕ್ಯವು, ಪ್ರಕುಪ್ಯತಿ = ಕೋಪಗೊಳ್ಳುತ್ತದೆ.

**ಅನುವಾದ–** ಆದ್ದರಿಂದ ಶ್ರುತ್ಯರ್ಥವಿಚಾರದಲ್ಲಿ ನಿಪುಣರಾದ ವಿವೇಕಿಗಳ ಅಭಿಪ್ರಾಯದಲ್ಲಿ ನಾರಾಯಣದೇವನೇ ಪರಬ್ರಹ್ಮನಾದವನು, ಇನ್ನೊಬ್ಬನಲ್ಲ ಎಂದು ನಿರ್ಣಯಿಸಲ್ಪಡುತ್ತದೆ. ಇಲ್ಲದಿದ್ದರೆ, ಈ ಶ್ರುತಿಯು ಕೋಪಗೊಳ್ಳುತ್ತದೆ.

**ಭಾವವಿಲಾಸಿನೀ–**ಶ್ರುತಿವ್ಯಾಖ್ಯಾಮುಪಸಂಹರತಿ – **ಅತ ಇತಿ ॥** ಶ್ರುತ್ಯರ್ಥ- ಮೀಮಾಂಸಾ-ನಿಪುಣಾನಾಮಿತ್ಯನೇನೇದಮಭಿಪ್ರೈತಿ । 'ಮಹಾಜ್ಞೇಯಮ್' ಇತಿ ಪ್ರಾಕ್ ನಾರಾಯಣಸ್ಯ ಸಕಲಶಾಖಾಸ್ವತಿಶಯೇನ ಜ್ಞೇಯತ್ವಮುಕ್ತಮ್ । ತಚ್ಚ ತತ್ರ ತತ್ರ ವೇದವಾಕ್ಯೇಷು ಬ್ರಹ್ಮೇಂದ್ರಹರ್ಯಕ್ಷಮಹೇಶ್ವರಾದಿಶಬ್ದೈರ್ಬ್ರಹ್ಮಾದೀನಾಂ ಕಥನಾದ್ ವಿರುದ್ಧ್ಯತ ಇತ್ಯಾಶಂಕಾನಿವಾರಕತ್ವೇನ ತತ್ರತನ್ನಾಮ್ನಾ 'ಸ ಮಹೇಶ್ವರಃ' ಇತ್ಯಾದಿನಾ ನಾರಾಯಣ ಏವ ಸಮನ್ವಯಕಥನಂ ಪ್ರಕೃತೋಪಯೋಗಿ । ಹರಿಶಬ್ದೋಽಪಿ ಹರಿಸೂಕ್ತಸ್ಥೋ ಹರ್ಯಶ್ವ-ತ್ವಾದಿಲಿಂಗಬಲಾದಿಂದ್ರಗಾಮೀತಿ ಶಂಕಾ । ಅತಸ್ತಸ್ಯಾಪಿ ಸಮನ್ವಯಕಥನಂ 'ಯೋ ದೇವಾನಾಂ ನಾಮಧಾ' 'ಮಾಂ ವಿಧತ್ತೇಽಭಿಧತ್ತೇ ಮಾಮ್' 'ತತ್ತು ಸಮನ್ವಯಾದ್' ಇತಿ ಶ್ರುತಿಸ್ಮೃತಿ-ಸೂತ್ರಾನುಸಾರಿ ಚ । ತತ್ತದ್ದೈವತೈಕ್ಯಂ 'ನಾರಾಯಣಂ ಮಹಾಜ್ಞೇಯಮ್' ಇತ್ಯತ್ರೋಕ್ತಾ-ತಿಶಯೇನ ಜ್ಞೇಯತ್ವರೂಪಮಹಾಜ್ಞೇಯತ್ವಸ್ಯ 'ಪತಿಂ ವಿಶ್ವಸ್ಯ' ಇತ್ಯುಕ್ತವಿಶ್ವಪತಿತ್ವಸ್ಯ 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಇತ್ಯುಕ್ತಸರ್ವವ್ಯಾಪಿತ್ವಸ್ಯ ಆತ್ಮನಾಮೀಶ್ವರ ಆತ್ಮೇಶ್ವರ ಇತ್ಯುಕ್ತಜೀವೇಶ್ವರತ್ವಸ್ಯ ಪರಮಾತ್ಮಪದಾರ್ಥಸ್ಯ ಚ ವಿರುದ್ಧಮ್ । 'ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ' ಇತ್ಯಾದಿಶ್ರುತ್ಯಾ ಶಂಭೋಃ ಪಿತಾಮಹೋ ಬ್ರಹ್ಮಪಿತಾ ಶಕ್ರಾದ್ಯಧಿಪೇಶ್ವರ ಇತಿ ಸ್ಮೃತ್ಯಾ 'ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾದ್' ಇತಿ ಸೂತ್ರೇಣ

ಚ ವಿರುದ್ಧಮ್ । ಅಥವಾ ಶ್ರುತ್ಯರ್ಥಮೀಮಾಂಸಾನಿಪುಣಾನಾಮಿತ್ಯನೇನ ಸೂತ್ರಭಾಷ್ಯಟೀಕಾಕಾರಾಣಾಂ ಸಂಗ್ರಹಃ । ತೇ ಹಿ ಅಂತಸ್ತಾಧಿಕರಣೇ ಬ್ರಹ್ಮೇಂದ್ರಾಗ್ನ್ಯಾದ್ಯಧಿದೈವತಾಖಿಲನಾಮ್ನಾಂ ಸಮನ್ವಯಮೇವೋಚುಃ। ನ ತು ತತ್ತದ್ದೇವತೈಕ್ಯಮ್ । ಪ್ರತ್ಯುತ ತತ್ರೈವ 'ಭೇದವ್ಯಪದೇಶಾಚ್ಚಾನ್ಯಃ' ಇತಿ ಸೂತ್ರೇಣ 'ಇಂದ್ರಸ್ಯಾತ್ಮಾ' 'ವಾಯೋರಾತ್ಮಾನಮ್' 'ಅಂತರಾದಿತ್ಯೇ' 'ಅಂತಶ್ಚಂದ್ರಮಸಿ' 'ಸಹೈವ ಸಂತಂ ನ ವಿಜಾನಂತಿ ದೇವಾಃ' ಇತ್ಯಾದಿಭೇದವ್ಯಪದೇಶಾದ್ ಬ್ರಹ್ಮಾದಿದೇವಾನಾಮನ್ಯತಾಮೇವ ವರ್ಣಯಾಮಾಸುಃ । ಅತ ತ ಏವ ಮೀಮಾಂಸನಿಪುಣಾಃ । ಏತದೇವಾಭಿಪ್ರೇತ್ಯೋಕ್ತಮ್ । ಪ್ರಾಕ್ ತತ್ತದಭಿಧಾಮಾಹ – **ನಾಭಿದಾಮಿತಿ** । ಏಷಾ ಶ್ರುತಿಃ ಸಹಸ್ರಶೀರ್ಷಮಿತ್ಯಾದಿಶ್ರುತಿಃ । ವ್ಯಾಹತಭಾಷಿಣೇ ತುಭ್ಯಮಿತಿ ಶೇಷಃ । ಅಥವಾ ಏಷಾ ವಕ್ಷ್ಯಮಾಣಾ ಶ್ರುತಿಃ ॥ ೫೬೦ ॥

**ವಿವರಣೆ–** ಈ ಶ್ರುತಿಯ ವ್ಯಾಖ್ಯಾನವನ್ನು ಇಲ್ಲಿ ಉಪಸಂಹಾರ ಮಾಡುತ್ತಿದ್ದಾರೆ. ಶ್ರುತ್ಯರ್ಥವಿಚಾರನಿಪುಣರು ಎಂಬ ಶಬ್ದದಿಂದ ಅನೇಕ ಯುಕ್ತಿಗಳನ್ನು ಸೂಚಿಸುತ್ತಿದ್ದಾರೆ. ಮೊದಲು ಮಹಾಜ್ಞೇಯಂ ಎಂಬ ಶಬ್ದದಿಂದ ನಾರಾಯಣನಿಗೆ ಎಲ್ಲಾ ಶಾಖೆಗಳಲ್ಲಿಯೂ ಅತಿಶಯವಾದ ಜ್ಞೇಯತ್ವವನ್ನು ಹೇಳಿದ್ದಾರೆ. ಬೇರೆ ಬೇರೆ ಶಾಖೆಗಳಲ್ಲಿ ಬ್ರಹ್ಮೇಂದ್ರಾದಿಗಳನ್ನೆಲ್ಲಾ ಹೇಳುವುದರಿಂದ ನಾರಾಯಣನೊಬ್ಬನಿಗೆ ಮಹಾಜ್ಞೇಯತ್ವವು ಹೇಗೆ ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ಸ ಮಹೇಶ್ವರಃ, ಸ ಬ್ರಹ್ಮಾ ಇತ್ಯಾದಿ ವಾಕ್ಯಗಳಿಂದ ಆ ಶಬ್ದಗಳೆಲ್ಲವೂ ನಾರಾಯಣನನ್ನು ಹೇಳುತ್ತವೆ ಎಂದು ಹೇಳಿದ್ದಾರೆ. ಹರಿ ಶಬ್ದವು ನಾರಾಯಣನಲ್ಲೇ ಪ್ರಸಿದ್ಧವಾದರೂ ಹರ್ಯಶ್ವತ್ವಾದಿಲಿಂಗಗಳಿಂದ ಇಂದ್ರ ಏಕಾಗಬಾರದು ಎಂಬ ಶಂಕೆಗೆ ಉತ್ತರವಾಗಿ ಹರಿಶಬ್ದವನ್ನು ನಾರಾಯಣನಲ್ಲಿಯೇ ಹೇಳಿದ್ದಾರೆ. 'ಯೋ ದೇವಾನಾಂ ನಾಮಧಾ ಏಕ ಏವ' 'ಮಾಂ ವಿಧತ್ತೇ ಅಭಿಧತ್ತೇ ಮಾಂ' 'ತತ್ತು ಸಮನ್ವಯಾತ್' ಮೊದಲಾದ ಶ್ರುತಿ, ಸ್ಮೃತಿ ಮತ್ತು ಬ್ರಹ್ಮಸೂತ್ರಗಳಿಂದ ಈ ಅರ್ಥವು ಸಿದ್ಧವಾಗುತ್ತದೆ. ಐಕ್ಯವನ್ನು ಹೇಳಿದರೆ ಮಾತ್ರ ಮಹಾಜ್ಞೇಯಂ ಎಂದು ಹೇಳಿದ ಮಹಾಜ್ಞೇಯತ್ವವೂ, ಪತಿಂ ವಿಶ್ವಸ್ಯ ಎಂದು ಹೇಳಿದ ವಿಶ್ವಪತಿತ್ವವೂ, 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಥಿತಃ' ಎಂದು ಹೇಳಿದ ಸರ್ವವ್ಯಾಪಿತ್ವವೂ, ಆತ್ಮೇಶ್ವರಃ ಎಂದು ಹೇಳಿದ ಸರ್ವಜೀವಸ್ವಾಮಿತ್ವವೂ, ಪರಮಾತ್ಮ ಎಂದು ಹೇಳಿದ ಆತ್ಮರಲ್ಲಿ ಶ್ರೇಷ್ಠತ್ವವೂ ವಿರುದ್ಧವಾಗುತ್ತದೆ. 'ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ' ಎಂದು ಕಾಠಕೋಪನಿಷತ್ತಿನಲ್ಲಿ ಸರ್ವದೇವೋಪಾಸ್ಯತ್ವವನ್ನು ಹೇಳಿರುವುದರಿಂದ ನಾರಾಯಣನು ಸರ್ವದೇವತೆಗಳಿಂದ ಭಿನ್ನ ಎಂದು ತಿಳಿಯುತ್ತದೆ. ಶಂಭೋಃ ಪಿತಾಮಹೋ ಬ್ರಹ್ಮಪಿತಾ ಶಕ್ರಾದ್ಯಧೀಶ್ವರಃ ಎನ್ನುವ ಶ್ರುತಿಯಿಂದ ಬ್ರಹ್ಮನಿಗೆ ತಂದೆ, ರುದ್ರನಿಗೆ ಪಿತಾಮಹ, ಇಂದ್ರಾದಿಗಳಿಗೆ ಅಧೀಶ್ವರ ಎಂದು ಹೇಳಿ, ಉಳಿದ ದೇವತೆಗಳ ಭೇದವನ್ನೇ ಹೇಳಿದ್ದಾರೆ. 'ಅಂತರ್ಯಾಮಿ ಅಧಿದೈವಾದಿಷು ತದ್ಧರ್ಮವ್ಯಪದೇಶಾತ್' ಎಂಬ ಸೂತ್ರದಲ್ಲಿ ನಾರಾಯಣನನ್ನು ಎಲ್ಲ ದೇವತೆಗಳಿಗೆ

ಅಂತರ್ಯಾಮಿ ಎಂದು ಹೇಳಿದ್ದಾರೆ. ಆದ್ದರಿಂದಲೂ ದೇವತಾಭೇದವೇ ಸಿದ್ಧವಾಗುತ್ತದೆ. ಅಲ್ಲದೇ, ಅಂತಃಸ್ಥತ್ವಾಧಿಕರಣದಲ್ಲಿ ಇಂದ್ರಾದಿದೇವತೆಗಳ ಅಭೇದವನ್ನು ಆಶಂಕಿಸಿ, ಇಂದ್ರಾದಿ ಶಬ್ದವಾಚ್ಯತ್ವವನ್ನೇ ಸಮರ್ಥನೆ ಮಾಡಿದ್ದಾರೆ. ಇಂದ್ರಾದಿಗಳ ಅಭೇದವನ್ನೇ ಏಕೆ ಇಟ್ಟುಕೊಳ್ಳಬಾರದು ಎಂಬ ಶಂಕೆಯನ್ನು ಪರಿಹರಿಸಲು ಭೇದವ್ಯಪದೇಶಾಚ್ಚ ಎಂಬ ಮುಂದಿನ ಸೂತ್ರದಲ್ಲಿ ಯುಕ್ತಿಯನ್ನು ಹೇಳಿದ್ದಾರೆ. ವಾಯೋರಾತ್ಮಾನಂ (ವಾಯುವಿನ ಸ್ವಾಮಿ), ಅಂತರಾದಿತ್ಯೇ (ಸೂರ್ಯನ ಒಳಗಿರುವವನು), ಅಂತಃಚಂದ್ರಮಸಿ (ಚಂದ್ರನ ಒಳಗೆ ಇರುವವನು), ಸಹೈವ ಸಂತಂ (ದೇವತೆಗಳ ಜೊತೆಯಲ್ಲಿಯೇ ಇರುವವನು), ನ ವಿಜಾನಂತಿ ದೇವಾಃ (ದೇವತೆಗಳು ಅವನನ್ನು ತಿಳಿಯುವುದಿಲ್ಲ) ಇತ್ಯಾದಿ ವಾಕ್ಯಗಳಲ್ಲಿ ಭೇದವನ್ನೇ ಹೇಳಿರುವುದರಿಂದ ಅಭೇದವು ಶಂಕಾಸ್ಪದವೂ ಅಲ್ಲ. ಹಾಗೆ ಅಭೇದವನ್ನು ಹೇಳಿದರೆ ಶ್ರುತಿಗೆ ವ್ಯಾಹತಭಾಷಿತ್ವವು ಬರುವುದರಿಂದ ಸಹಸ್ರಶೀರ್ಷಂ ದೇವಂ ಇತ್ಯಾದಿ ಶ್ರುತಿಯು ಕೋಪಗೊಳ್ಳುತ್ತದೆ.

**ದೇವಾನಾಮವಮೋಽಗ್ನಿರ್ವೈ ವಿಷ್ಣುಸ್ತು ಪರಮಃ ಪ್ರಭುಃ ।**
**ತದಂತರೇಣ ಬ್ರಹ್ಮಾದ್ಯಾಃ ಸರ್ವಾ ಅನ್ಯಾಸ್ತು ದೇವತಾಃ ॥ ೫೬೧ ॥**

**ಅರ್ಥ–** ದೇವಾನಾಂ = ದೇವತೆಗಳಲ್ಲಿ, ಅವಮಃ = ಕೊನೆಯವನು, ಅಗ್ನಿಃ = ಅಗ್ನಿಯು, ವೈ = ನಿಶ್ಚಯವು, ಪ್ರಭುಃ = ಸಮರ್ಥನಾದ, ವಿಷ್ಣುಃ ತು= ವಿಷ್ಣುವಾದರೋ, ಪರಮಃ = ಸರ್ವೋತ್ತಮನು, ತದಂತರೇಣ = ಇವರಿಬ್ಬರ ಮಧ್ಯದಲ್ಲಿ, ಅನ್ಯಾಃ = ಬೇರೆಯ, ಸರ್ವಾಃ = ಎಲ್ಲಾ, ಬ್ರಹ್ಮಾದ್ಯಾಃ= ಬ್ರಹ್ಮನೇ ಮೊದಲಾದ, ದೇವತಾಃ = ದೇವತೆಗಳು (ಇದ್ದಾರೆ).

**ಅನುವಾದ–** ದೇವತೆಗಳಲ್ಲಿ ಅಗ್ನಿಯು ಅವಮನಾದವನು. ಪ್ರಭುವಾದ ವಿಷ್ಣುವು ಪರಮನಾದವನು. ಇವರಿಬ್ಬರ ಮಧ್ಯೆ ಬ್ರಹ್ಮಾದಿಸಕಲದೇವತೆಗಳೂ ಬರುತ್ತಾರೆ.

**ವಿವರಣೆ–** ಐಕ್ಯವನ್ನು ಒಪ್ಪಿದರೆ ನಾರಾಯಣೋಪನಿಷತ್ತಿನ ವಿರೋಧವು ಮಾತ್ರವಲ್ಲ ಈ ವೇದವಾಕ್ಯದ ವಿರೋಧವೂ ಬರುತ್ತದೆ ಎಂದು ಹಿಂದೆ ಸೂಚಿಸಿದುದನ್ನು ಇಲ್ಲಿ ಸ್ಪಷ್ಟಪಡಿಸುತ್ತಾರೆ. 'ಅಗ್ನಿರ್ವೈ ದೇವಾನಾಂ ಅವಮೋ ವಿಷ್ಣು ಪರಮಃ ತದಂತರೇಣ ಸರ್ವಾ ಅನ್ಯಾ ದೇವತಾಃ' ಎಂಬುದು ಋಗ್ವೇದ ಬ್ರಾಹ್ಮಣದ ವಾಕ್ಯ. ಇದಕ್ಕೆ ದೇವತೆಗಳಲ್ಲಿ ಅಗ್ನಿಯು ನೀಚನಾದವನು, ವಿಷ್ಣುವು ಉತ್ತಮನಾದವನು, ಅವರಿಬ್ಬರ ಮಧ್ಯೆ ಉಳಿದ ಎಲ್ಲಾ ದೇವತೆಗಳೂ ಇರುತ್ತಾರೆ ಎಂದು ಅರ್ಥ. ಅಲ್ಲಿ 'ತದಂತರೇಣ ಅನ್ಯಾ ದೇವತಾಃ' - ಅವರಿಬ್ಬರ ಮಧ್ಯದಲ್ಲಿ ಬೇರೆ ದೇವತೆಗಳು ಎಂದು ಹೇಳಿದ್ದರೆ ಸಾಕಾಗುತ್ತಿತ್ತು. ಆದರೆ ಬ್ರಹ್ಮಶಿವಾದಿ ಮತಾವಲಂಬಿಗಳು ಬ್ರಹ್ಮ ಶಿವ ಮೊದಲಾದವರನ್ನು ಬಿಟ್ಟು ಉಳಿದ ದೇವತೆಗಳನ್ನೇ ಅನ್ಯಪದದಿಂದ ಇಟ್ಟುಕೊಳ್ಳಬೇಕು ಎಂದು ಶಂಕೆ ಮಾಡಿದರೆ ಬ್ರಹ್ಮಶಿವಾದಿಗಳನ್ನೂ ಇಟ್ಟುಕೊಳ್ಳಬೇಕು ಎಂದು ತಿಳಿಸುವುದಕ್ಕಾಗಿ

ಬ್ರಾಹ್ಮಣದಲ್ಲಿ ಸರ್ವ ಪದವಿದೆ. ಇಲ್ಲಿ ಅನ್ಯಾ ಎಂದು ಹೇಳಿ ವಿಷ್ಣುವಿಗೂ ಇತರ ದೇವತೆಗಳಿಗೂ ಭೇದವನ್ನೇ ಹೇಳಿದ್ದಾರೆ. ಅಲ್ಲದೆ ಅವಮತ್ವ ಮತ್ತು ಪರಮತ್ವರೂಪವಾದ ಭೇದಕಧರ್ಮಗಳನ್ನು ಹೇಳಿ ದೇವತೆಗಳಿಗೂ ಮತ್ತು ವಿಷ್ಣುವಿಗೂ ಭೇದವನ್ನೇ ಸಮರ್ಥಿಸಲಾಗಿದೆ.

**ಋಗ್ವೇದಬ್ರಾಹ್ಮಣಂ ಹ್ಯಾದಾವೇವಂ ತರತಮತ್ವತಃ ।**
**ದೇವಾನ್ ಸರ್ವಾನ್ ವಿವಿಚ್ಯೋಕ್ತ್ವಾ ವಿಷ್ಣೋಃ ಪರಮತಾಂ ಜಗೌ ॥ ೫೬೨ ॥**

**ಅರ್ಥ–** ಋಗ್ವೇದಬ್ರಾಹ್ಮಣಂ = ಋಗ್ವೇದದ ಬ್ರಾಹ್ಮಣಭಾಗವು, ಆದೌ = ಆರಂಭದಲ್ಲಿ, ಏವಂ = ಈ ರೀತಿಯಾಗಿ, ತರತಮತ್ವತಃ = ತಾರತಮ್ಯಕ್ಕನುಗುಣವಾಗಿ, ಸರ್ವಾನ್ = ಎಲ್ಲಾ, ದೇವಾನ್ = ದೇವತೆಗಳನ್ನೂ, ವಿವಿಚ್ಯ = ಪೃಥಕ್ಕರಿಸಿ, ಉಕ್ತ್ವಾ = ಹೇಳಿ, ವಿಷ್ಣೋಃ = ವಿಷ್ಣುವಿಗೆ, ಪರಮತಾಂ = ಸರ್ವೋತ್ತಮತ್ವವನ್ನು, ಜಗೌ = ಹಾಡಿತು.

**ಅನುವಾದ–** ಋಗ್ವೇದಬ್ರಾಹ್ಮಣದ ಈ ವಾಕ್ಯವು ಮೊದಲು ದೇವತೆಗಳ ತರತಮಭಾವವನ್ನು ಈ ರೀತಿಯಲ್ಲಿ ಹೇಳಿ ಅನಂತರ ಎಲ್ಲಾ ದೇವತೆಗಳನ್ನು ಬಿಟ್ಟು, ವಿಷ್ಣುವು ಸರ್ವೋತ್ತಮನೆಂದು ಗಾನಮಾಡಿದೆ.

**ತಸ್ಮಾತ್ತು ಪರಮಂ ವಸ್ತು ನ ಕಿಂಚಿದಪಿ ಶಂಸತಿ ।**
**ಏತೇ ಪ್ರಧಾನಾ ದೇವೇಷು ತೇಷ್ವಪ್ಯೇಷ ಕ್ರಮಃ ಕಿಲ ॥ ೫೬೩ ॥**

**ಅರ್ಥ–** ತಸ್ಮಾತ್ ತು= ಅವನಿಗಿಂತಲೂ, ಪರಮಂ = ಉತ್ತಮವಾದ, ಕಿಂಚಿತ್ = ಯಾವ, ವಸ್ತು ಅಪಿ = ವಸ್ತುವನ್ನೂ ಕೂಡ, ಶ್ರುತಿಃ= ಶ್ರುತಿಯು, ನ ಶಂಸತಿ = ಹೊಗಳುವುದಿಲ್ಲ, ದೇವೇಷು = ದೇವತೆಗಳಲ್ಲಿ, ಏತೇ = ಈ ಬ್ರಹ್ಮವಿಷ್ಣುಮಹೇಶ್ವರರು, ಪ್ರಧಾನಾಃ = ಮುಖ್ಯರು, ತೇಷು ಅಪಿ= ಅವರಲ್ಲಿಯೂ, ಏಷಃ = ಇದು, ಕ್ರಮಃ ಕಿಲ = ಕ್ರಮವಷ್ಟೇ.

**ಅನುವಾದ–** ವಿಷ್ಣುವಿಗಿಂತ ಪರಮವಾದ ಎಂದರೆ ಶ್ರೇಷ್ಠವಾದ ಯಾವ ವಸ್ತುವನ್ನೂ ಶ್ರುತಿಯು ಹೇಳುವುದಿಲ್ಲ. ಈ ದೇವತೆಗಳೇ ಉಳಿದ ಜೀವರಿಗಿಂತ ಪ್ರಧಾನರಾದವರು. ಅವರಲ್ಲೂ ತರತಮಕ್ರಮವಿದೆ ಎಂಬುದು ಸ್ಪಷ್ಟವಷ್ಟೇ.

**ಭಾವವಿಲಾಸಿನೀ–**ತಾಮರ್ಥತಃ ಪಠತಿ – ದೇವಾನಾಮಿತಿ ॥ ಋಗ್ವೇದಬ್ರಾಹ್ಮಣಂ 'ಅಗ್ನಿರ್ವೈದೇವಾನಾಮವಮೋ ವಿಷ್ಣುಃ ಪರಮಸ್ತದಂತರೇಣ ಸರ್ವಾ ಅನ್ಯಾ ದೇವತಾಃ' ಇತಿ ಋಗ್ವೇದಬ್ರಾಹ್ಮಣಮ್ । ಹೀತ್ಯನೇನ ಶ್ರುತೇಃ ಪ್ರಸಿದ್ಧತಾಮಾಚಷ್ಟೇ । ಅತ್ರ ದೇವತಾ ಇತ್ಯೇತಾವತೈವ ಪೂರ್ತೌ ಪುನಸ್ಸರ್ವಪದಂ ಬ್ರಾಹ್ಮಶೈವಾದಿಮತರೀತ್ಯಾ ಕೇಷಾಂಚಿದಸಂಗ್ರಹ-ಶಂಕಾನಿರಾಸಾಯೇತಿ ಭಾವೇನ ಬ್ರಹ್ಮಾದ್ಯಾ ಇತ್ಯುಕ್ತಮ್ । ವಿವಿಚ್ಯ ಅನ್ಯಾ ಇತಿ ಭಿನ್ನತಾಂ ಪ್ರದರ್ಶ್ಯ

ಭಿನ್ನತಾಮಿತ್ಯುಪಲಕ್ಷಣಮ್। ಆದ್ಯಂತಯೋರಿವ ಮಧ್ಯೇಮಧ್ಯೇऽಪಿ ಪರಮತಾಮವಮತಾಂ ಚೇತ್ಯಪಿ ಗ್ರಾಹ್ಯಮ್ ॥ ೫೬೧-೫೬೩ ॥

**ವಿವರಣೆ–** ಉಳಿದ ಜೀವರಿಗಿಂತ ಉತ್ತಮರಾದ ದೇವತೆಗಳನ್ನು ವಿಷ್ಣುವಿಗಿಂತ ಅವಮರು ಎಂದು ಹೇಳಿ, ವಿಷ್ಣುವನ್ನು ಪರಮ ಎಂದು ಹೇಳಿ, ಅವನಿಗಿಂತ ಉತ್ತಮನಾದ ವಸ್ತುವನ್ನು ಹೇಳದಿದ್ದ ಕಾರಣ ವಿಷ್ಣುವು ಸರ್ವೋತ್ತಮನೆಂದು ಸಿದ್ಧವಾಗುತ್ತದೆ. ಅಲ್ಲದೆ, ವಿಷ್ಣುವಿಗೂ ಮತ್ತು ಉಳಿದ ದೇವತೆಗಳಿಗೂ ಭೇದವಿದೆ ಎಂದೂ ಸಿದ್ಧವಾಗುತ್ತದೆ.

**ಅತೋ ವಿಷ್ಣುಃ ಪರಂ ಬ್ರಹ್ಮ ಸರ್ವಶ್ರುತಿಮತಾದಭೂತ್ ।**
**ವಿಷ್ಣೋರನ್ಯತ್ ಪರಂ ಬ್ರಹ್ಮ ನ ಶ್ರೌತಮಿತಿ ಚಾಪ್ಯಭೂತ್ ॥**
**ವೇದವ್ಯಾಖ್ಯಾನರೂಪಂ ಯದ್ ಬ್ರುವಂತಿ ಬ್ರಾಹ್ಮಣಂ ಬುಧಾಃ ॥ ೫೬೪ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಬ್ರಾಹ್ಮಣಂ = ಬ್ರಾಹ್ಮಣಭಾಗವನ್ನು, ವೇದವ್ಯಾಖ್ಯಾನುರೂಪಂ = ವೇದದ ವ್ಯಾಖ್ಯಾನರೂಪವನ್ನಾಗಿ, ಬುಧಾಃ = ಜ್ಞಾನಿಗಳು, ಬ್ರುವಂತಿ = ಹೇಳುತ್ತಾರೆಯೋ, ಅತಃ = ಆ ಕಾರಣದಿಂದ, ಸರ್ವಶ್ರುತಿಮತಾತ್ = ಎಲ್ಲ ವೇದಗಳ ಅಭಿಪ್ರಾಯದಂತೆ, ವಿಷ್ಣುಃ = ವಿಷ್ಣುವು, ಪರಂ ಬ್ರಹ್ಮ = ಪರಬ್ರಹ್ಮನು, ಅಭೂತ್ = ಆದನು, ಚ = ಮತ್ತು ವಿಷ್ಣೋಃ = ವಿಷ್ಣುವಿಗಿಂತ, ಅನ್ಯತ್ = ಬೇರೆ, ಪರಂ ಬ್ರಹ್ಮ = ಪರಬ್ರಹ್ಮನು, ಶ್ರೌತಂ = ವೇದದಿಂದ ಸಿದ್ಧನಾದವನು, ನ = ಇಲ್ಲ, ಇತಿ ಅಪಿ = ಎಂದೂ ಕೂಡ ಅಭೂತ್ = ಆಯಿತು.

**ಅನುವಾದ–** ಆದ್ದರಿಂದ ಎಲ್ಲಾ ಶ್ರುತಿಗಳ ಅಭಿಪ್ರಾಯದಂತೆ ವಿಷ್ಣುವೇ ಪರಬ್ರಹ್ಮನೆನಿಸುತ್ತಾನೆ. ವಿಷ್ಣುವಿಗಿಂತ ಭಿನ್ನವಾದ ಒಂದು ಪರಬ್ರಹ್ಮವಸ್ತುವು ಶ್ರುತಿಯಲ್ಲಿ ಎಲ್ಲಿಯೂ ಹೇಳಲ್ಪಟ್ಟಿಲ್ಲ. ಏಕೆಂದರೆ, ಜ್ಞಾನಿಗಳಾದವರು ಬ್ರಾಹ್ಮಣಗಳನ್ನು ವೇದವ್ಯಾಖ್ಯಾನರೂಪವೆಂದು ಹೇಳುತ್ತಾರೆ.

**ಭಾವವಿಲಾಸಿನೀ–**ಅತಃ ವೇದವ್ಯಾಖ್ಯಾನರೂಪಬ್ರಾಹ್ಮಣೇ ಪ್ರತಿಪಾದಿತತ್ವಾತ್ ॥ ೫೬೪ ॥

**ವಿವರಣೆ–** ಬ್ರಾಹ್ಮಣಗಳು ವೇದವ್ಯಾಖ್ಯಾನರೂಪವಾದವು. ಇದು ಎಲ್ಲ ಜ್ಞಾನಿಗಳ ಅಭಿಪ್ರಾಯ. ಆದ್ದರಿಂದ ದೇವತೆಗಳನ್ನು ಹೇಳುವ ಎಲ್ಲಾ ವೇದವಾಕ್ಯಗಳ ಒಟ್ಟು ಅಭಿಪ್ರಾಯವನ್ನು ಈ ಬ್ರಾಹ್ಮಣವಾಕ್ಯವು ಹೇಳುತ್ತದೆ. ಆದರಲ್ಲಿ ವಿಷ್ಣುವು ಪರಮನೆಂದು ಹೇಳಿರುವುದರಿಂದ ವಿಷ್ಣುವೇ ಸರ್ವೋತ್ತಮ ಮತ್ತು ಉಳಿದ ದೇವತೆಗಳಿಗಿಂತ ಭಿನ್ನನಾದವನು ಎಂದು ಸಿದ್ಧವಾಗುತ್ತದೆ.

**ಉಕ್ತಾರ್ಥಸ್ಯ ಸಮಸ್ತಸ್ಯ ಪ್ರಮಾಣೇನ ಪ್ರಸಿದ್ಧತಾಮ್ ।**
**ವೈಶಬ್ದೇನಾಹ ತದ್‌ವಕ್ತಿ ಸರ್ವಮಾನೈಶ್ಚ ಸಿದ್ಧತಾಮ್ ॥ ೫೬೫ ॥**

**ಅರ್ಥ–** ಸಮಸ್ತಸ್ಯ = ಎಲ್ಲ, ಉಕ್ತಾರ್ಥಸ್ಯ = ಹೇಳಲ್ಪಟ್ಟ ಅರ್ಥದ, ಪ್ರಮಾಣೇನ = ಪ್ರಮಾಣದಿಂದ, ಪ್ರಸಿದ್ಧತಾಂ = ಪ್ರಸಿದ್ಧಿಯನ್ನು, ವೈಶಬ್ದೇನ = 'ವೈ' ಎಂಬ ಶಬ್ದದಿಂದ, ಆಹ = ಹೇಳಿತು, ತತ್ = ಆ ವೈಶಬ್ದವು, ಸರ್ವಮಾನೈಃ ಚ= ಎಲ್ಲಪ್ರಮಾಣಗಳಿಂದಲೂ, ಸಿದ್ಧತಾಂ = ಸಿದ್ಧತ್ವವನ್ನು, ವಕ್ತಿ = ಹೇಳುತ್ತದೆ.

**ಅನುವಾದ–** ಈ ಅರ್ಥವು ಪ್ರಮಾಣಸಿದ್ಧವಾಗಿದೆಯೆಂದು ಸೂಚಿಸುವುದಕ್ಕೆ ಬ್ರಾಹ್ಮಣವಾಕ್ಯವು 'ವೈ' ಎಂಬ ನಿಪಾತವನ್ನು ಉಪಯೋಗಿಸಿದೆ. ಆದ್ದರಿಂದ ಈ ಪ್ರಮೇಯವು ಸರ್ವಪ್ರಮಾಣಗಳಿಂದ ಸಿದ್ಧವಾದುದೆಂತಲೂ, ಆದ್ದರಿಂದಲೇ ಪ್ರಸಿದ್ಧವಾದುದೆಂತಲೂ ಅಭಿಪ್ರಾಯ.

**ವಿವರಣೆ–** 'ಅಗ್ನಿರ್ವೈ ದೇವಾನಾಂ' ಇತ್ಯಾದಿ ವಾಕ್ಯದಲ್ಲಿ ಮೊದಲು 'ವೈ' ಎಂಬ ನಿಪಾತವಿದೆ. ಈ ನಿಪಾತವು ಈ ವಾಕ್ಯದಲ್ಲಿ ಹೇಳುವ ಎಲ್ಲಾ ಅರ್ಥಗಳಿಗೂ ನಿಶ್ಚಿತತ್ವವನ್ನೂ ಮತ್ತು ಪ್ರಮಾಣಸಿದ್ಧಿಯನ್ನೂ ಸೂಚಿಸುತ್ತದೆ. ಇಲ್ಲಿ ಅಗ್ನಿಯ ಅವಮತ್ವವನ್ನೂ, ವಿಷ್ಣುವಿನ ಪರಮತ್ವವನ್ನೂ, ಉಳಿದ ದೇವತೆಗಳಿಗೆ ಮಧ್ಯದಲ್ಲಿ ತಾರತಮ್ಯದ ಸ್ಥಿತಿಯನ್ನೂ ಹೇಳಿರುವುದರಿಂದ ಇವೆಲ್ಲವೂ ಸತ್ಯವಾದವು ಎಂದು ಅಭಿಪ್ರಾಯ.

**ಶ್ರುತ್ಯಾ ಸ್ಮೃತ್ಯಾನುಮಾನೇನ ಪ್ರತ್ಯಕ್ಷೇಣ ಚ ಯೋಗಿನಾಮ್ ।**
**ವಿಷ್ಣೋಸ್ಸರ್ವೋತ್ತಮತ್ವಂ ಹಿ ಸಿದ್ಧಮಿತ್ಯಾಹ ಸಾ ಶ್ರುತಿಃ ॥ ೫೬೬ ॥**

**ಅರ್ಥ–**ಸಾ = ಆ, ಶ್ರುತಿಃ = ಬ್ರಾಹ್ಮಣಭಾಗದ ವೇದವು, ಶ್ರುತ್ಯಾ = ವೇದದಿಂದ, ಸ್ಮೃತ್ಯಾ = ಸ್ಮೃತಿಯಿಂದ, ಅನುಮಾನೇನ = ಅನುಮಾನದಿಂದ, ಚ = ಮತ್ತು, ಯೋಗಿನಾಮ್ = ಯೋಗಿಗಳ, ಪ್ರತ್ಯಕ್ಷೇಣ = ಪ್ರತ್ಯಕ್ಷದಿಂದ, ವಿಷ್ಣೋಃ = ವಿಷ್ಣುವಿನ, ಸರ್ವೋತ್ತಮತ್ವಂ = ಸರ್ವೋತ್ತಮತ್ವವು, ಹಿ = ನಿಶ್ಚಯವಾಗಿಯೂ, ಸಿದ್ಧಂ = ಸಿದ್ಧವು, ಇತಿ ಆಹ = ಎಂದು ಹೇಳಿತು.

**ಅನುವಾದ–** ಶ್ರುತಿಯಿಂದಲೂ, ಸ್ಮೃತಿಯಿಂದಲೂ, ಅನುಮಾನದಿಂದಲೂ, ಯೋಗಿಗಳ ಪ್ರತ್ಯಕ್ಷದಿಂದಲೂ, ವಿಷ್ಣುವಿನ ಸರ್ವೋತ್ತಮತ್ವವು ಸಿದ್ಧವಾಗಿದೆ ಎಂಬುದನ್ನು ಆ ಬ್ರಾಹ್ಮಣವಾಕ್ಯವು 'ವೈ' ಎಂಬ ನಿಪಾತದಿಂದ ಹೇಳುತ್ತದೆ.

**ಭಾವವಿಲಾಸಿನೀ–**ಯದ್ಯಸ್ಮಾತ್ ತತ್ತಸ್ಮಾತ್ಸರ್ವಪ್ರಮಾಣಪ್ರಸಿದ್ಧಿದ್ಯೋತಕವೈಶಬ್ದಬಲಾತ್ ॥ ೫೬೫-೫೬೬ ॥

**ವಿವರಣೆ–** 'ಏಷ ಸರ್ವೇಶ್ವರಃ' ಮೊದಲಾದ ಶ್ರುತಿಗಳೂ ಮತ್ತು 'ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ' ಮೊದಲಾದ ಸ್ಮೃತಿಗಳೂ, 'ವಿಷ್ಣುಃ ಸರ್ವೋತ್ತಮಃ' 'ಸರ್ವನಿಯಾಮಕತ್ವಾತ್' ಎಂಬ ಅನುಮಾನವೂ ವಿಷ್ಣುವಿನ ಸರ್ವೋತ್ತಮತ್ವವನ್ನು

ಸಾಧಿಸುತ್ತವೆ. ಹಾಗೆಯೇ, 'ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್, ಗರೀಯಸೇ ಬ್ರಹ್ಮಣೋಪ್ಯಾದಿ ಕರ್ತ್ರೇ' ಮೊದಲಾದ ಜ್ಞಾನಿವಾಕ್ಯಗಳ ಮೂಲವಾದ ಪ್ರತ್ಯಕ್ಷವೂ ಸಹ ವಿಷ್ಣುವಿನ ಸರ್ವೋತ್ತಮತ್ವವನ್ನೂ ಸಾಧಿಸುತ್ತದೆ ಎಂದು ಶ್ರುತಿಯಲ್ಲಿರುವ 'ವೈ' ಎಂಬ ಶಬ್ದದಿಂದ ತಿಳಿಯುತ್ತದೆ.

**ಅತಸ್ತ್ರಿದೇವತೈಕ್ಯಂ ಸ್ಯಾನ್ನ ಪುರಾಣಶತೈರಪಿ ।**
**ವಿರೋಧೇ ತ್ವನಪೇಕ್ಷಂ ಸ್ಯಾದಿತಿ ಯತ್ ಸೂತ್ರಶಾಸನಮ್ ॥ ೫೬೭ ॥**

**ಅರ್ಥ–** ಅತಃ = ಈ ಬ್ರಾಹ್ಮಣದ ಬಲದಿಂದ, ಪುರಾಣಶತೈರಪಿ = ನೂರು ಪುರಾಣಗಳಿಂದಲೂ, ತ್ರಿದೇವತೈಕ್ಯಂ = ಮೂರು ದೇವತೆಗಳ ಅಭೇದವು, ನ ಸ್ಯಾತ್ = ಆಗಲಾರದು, ಯತ್ = ಯಾವ ಕಾರಣದಿಂದ, ವಿರೋಧೇ ತು = ಸ್ಮೃತಿ ಹಾಗೂ ಶ್ರುತಿಗಳ ವಿರೋಧ ಉಂಟಾದಾಗಲಾದರೂ, ಅನಪೇಕ್ಷಂ ಸ್ಯಾತ್ = ಸ್ಮೃತಿ ಪ್ರಾಮಾಣ್ಯವು ಅನಪೇಕ್ಷಿತವಾಗುತ್ತದೆ, ಇತಿ = ಎಂದು, ಸೂತ್ರಶಾಸನಂ = ಮೀಮಾಂಸಾಸೂತ್ರದ ಶಾಸನವಿದೆ.

**ಅನುವಾದ–** ಆದ್ದರಿಂದ ನೂರು ಪುರಾಣವಾಕ್ಯಗಳಿಂದಲೂ ತ್ರಿದೇವತೈಕ್ಯವು ಎಂದೂ ಸಿದ್ಧವಾಗುವುದಿಲ್ಲ. 'ವಿರೋಧೇ ತ್ವನಪೇಕ್ಷಂ ಸ್ಯಾತ್' ಎಂಬ ಶಾಸನವಿದೆಯಷ್ಟೇ.

**ಭಾವವಿಲಾಸಿನೀ–**ಅತಃ ವೇದ ಏವ ವಿಷ್ಣೋಸ್ಸರ್ವೋತ್ತಮತ್ವಪ್ರತಿಪಾದನಾತ್ । ವಿರೋಧೇ ತ್ವಿತ್ಯನೇನ ವಿರೋಧೇ ತ್ವನಪೇಕ್ಷಂ ಸ್ಯಾದಸತಿ ಹ್ಯನುಮಾನಮಿತಿ ಸೂತ್ರಂ ಸಂಗೃಹ್ಣಾತಿ । ಅನಪೇಕ್ಷಮಪ್ರಮಾಣಮ್ ಅನುಮಾನಂ ಮೂಲಶ್ರುತ್ಯನುಮಾಪಕಮ್ ॥ ೫೬೭ ॥

**ವಿವರಣೆ–** ಮೇಲೆ ಹೇಳಿದ ಶ್ರುತಿಗಳು ಸ್ಪಷ್ಟವಾಗಿ ಬ್ರಹ್ಮ ಮತ್ತು ಶಿವನ ಭೇದವನ್ನು ವಿಷ್ಣುವಿಗೆ ಹೇಳುವುದರಿಂದ ಬ್ರಹ್ಮ ವಿಷ್ಣು ಮಹೇಶ್ವರರು ಅಭಿನ್ನರಾದವರು ಎಂಬ ಮತ ಎಂದಿಗೂ ಸರಿಯಲ್ಲ. 'ವಿರೋಧೇ ತ್ವನಪೇಕ್ಷಂ ಸ್ಯಾತ್ ಅಸತಿಹ್ಯನುಮಾನಂ' ಎಂಬುದು ಪೂರ್ವಮೀಮಾಂಸಾ ಸೂತ್ರ. ಶ್ರುತಿಸ್ಮೃತಿಗಳಲ್ಲಿ ವಿರೋಧ ಬಂದಾಗ ಶ್ರುತಿಯ ವಿರೋಧವಿಲ್ಲದಿದ್ದರೆ ಮಾತ್ರ ಸ್ಮೃತಿಯು ಪ್ರಮಾಣವಾಗುತ್ತದೆ. ಶ್ರುತಿಯ ವಿರೋಧವಿದ್ದರೆ, ಸ್ಮೃತಿಯು ಎಂದೂ ಪ್ರಮಾಣವಾಗುವುದಿಲ್ಲ ಎಂದು ಆ ಸೂತ್ರದ ಅರ್ಥ. ಹೀಗಿರುವಾಗ ಶ್ರುತಿಗಳು ಸ್ಪಷ್ಟವಾಗಿ ತ್ರಿದೇವತಾಭೇದವನ್ನು ಹೇಳುವಾಗ ನೂರು ಪುರಾಣಗಳು ನೂರಾರು ವಾಕ್ಯಗಳಿಂದ ತ್ರಿದೇವತೈಕ್ಯವನ್ನು ಹೇಳಿದರೂ ಅದು ಪ್ರಮಾಣವಾಗುವುದಿಲ್ಲ.

**ಯತ್ತಾಃ ಲಕ್ಷ್ಮ್ಯಾದಿಭೃಗ್ವಂತಾ ದೇವಾ ದೇವ್ಯಶ್ಚ ಮಧ್ಯಗಾಃ ।**
**ತತ್ ತಾಃ ಸ್ತ್ರೀಪುಂಸಯೋಃ ಶಕ್ತದೇವತೋಕ್ತ್ಯಾ ಶ್ರುತಿರ್ಜಗೌ ॥ ೫೬೮ ॥**

**ಅರ್ಥ–** ಯತ್ = ಯಾವ ಕಾರಣದಿಂದ, ತಾಃ = ಆ, ಲಕ್ಷ್ಮ್ಯಾದಿಭೃಗ್ವಂತಾಃ = ಲಕ್ಷ್ಮಿಯೇ ಆದಿಯಾಗಿಯುಳ್ಳ ಭೃಗುವೇ ಕೊನೆಯಾಗಿವುಳ್ಳ, ದೇವಾಃ = ದೇವತೆಗಳೂ, ಚ = ಮತ್ತು, ದೇವ್ಯಃ = ಸ್ತ್ರೀ ದೇವತೆಗಳೂ, ಮಧ್ಯಗಾಃ = ಮಧ್ಯದಲ್ಲಿ ಇರುವರೋ, ತತ್ = ಆ ಕಾರಣದಿಂದ, ಸ್ತ್ರೀಪುಂಸಯೋಃ = ಸ್ತ್ರೀಪುರುಷ ದೇವತೆಗಳಲ್ಲಿ, ಶಕ್ತದೇವತೋಕ್ತ್ಯಾ = ಶಕ್ತಿಯನ್ನು ಹೊಂದಿರುವ ದೇವತಾಶಬ್ದವನ್ನು ಪ್ರಯೋಗಿಸಿ, ತಾಃ = ಅವರೆಲ್ಲರನ್ನೂ, ಶ್ರುತಿಃ = ಶ್ರುತಿಯು, ಜಗೌ = ಹಾಡಿತು.

**ಅನುವಾದ–** ಭೃಗುವಿನಿಂದ ಆರಂಭಿಸಿ ಲಕ್ಷ್ಮಿಯವರೆಗೆ ಇರುವ ದೇವತೆಗಳು ಮತ್ತು ದೇವಿಯರು ಅಗ್ನಿ - ವಿಷ್ಣುಗಳ ಮಧ್ಯದಲ್ಲಿಯೇ ಇದ್ದಾರೆ. ಆದ್ದರಿಂದ ಸ್ತ್ರೀದೇವತೆಯನ್ನು ಮತ್ತು ಪುಂ ದೇವತೆಯನ್ನು ಹೇಳಲು ಸಮರ್ಥವಾದ ದೇವತಾ-ಶಬ್ದವನ್ನೇ ಶ್ರುತಿಯು ಮಧ್ಯದಲ್ಲಿ ಹೇಳಿ ಎಲ್ಲಾ ದೇವತೆಗಳನ್ನೂ ಮಧ್ಯದಲ್ಲಿ ಇರುವವರೆಂದು ಸಂಗ್ರಹಿಸಿದೆ.

**ಭಾವವಿಲಾಸಿನೀ–**ತತ್ತಸ್ಮಾದ್ದೇವಾನಾಂ ದೇವಸ್ತ್ರೀಣಾಂ ಚ ಮಧ್ಯಗತತ್ವಾತ್ ॥ ೫೬೮ ॥

**ವಿವರಣೆ–** ಬ್ರಾಹ್ಮಣದಲ್ಲಿ 'ತದಂತರೇಣ ಸರ್ವಾ ಅನ್ಯಾ ದೇವತಾಃ' ಎಂದು ಇದೆ. 'ಸರ್ವೇ ಅನ್ಯೇ ದೇವಾಃ' ಎಂದಿದ್ದರೆ, ಪುರುಷದೇವತೆಗಳನ್ನು ಮಾತ್ರ ಇಲ್ಲಿ ಹೇಳಿದೆ, ಸ್ತ್ರೀದೇವತೆಗಳನ್ನು ಹೇಳಿಲ್ಲ, ಆದ್ದರಿಂದ ಲಕ್ಷ್ಮ್ಯಾದಿ ದೇವತೆಗಳು ಅಗ್ನಿ ಮತ್ತು ವಿಷ್ಣುಗಳ ಮಧ್ಯದಲ್ಲಿ ಬರುವುದಿಲ್ಲ ಎಂಬ ಶಂಕೆ ಬಂದರೆ, ಅದನ್ನು ನಿವಾರಿಸುವುದಕ್ಕಾಗಿ ವೇದವಾಕ್ಯವು ದೇವತಾಃ ಎಂಬ ಶಬ್ದವನ್ನು ಪ್ರಯೋಗಿಸಿದೆ. ಈ ದೇವತಾಶಬ್ದವು ಸ್ತ್ರೀ ದೇವತೆಯನ್ನೂ ಮತ್ತು ಪುರುಷದೇವತೆಯನ್ನೂ ಹೇಳುತ್ತದೆ. ಆದ್ದರಿಂದ ಲಕ್ಷ್ಮ್ಯಾದಿ ದೇವಿಯರು, ಭೃಗ್ವಾದಿ ದೇವತೆಗಳು, ಎಲ್ಲರೂ ಅಗ್ನಿ ಮತ್ತು ವಿಷ್ಣುವಿನ ಮಧ್ಯದಲ್ಲಿ ಇರುವರೆಂದು ತಿಳಿದು ಬರುತ್ತದೆ.

ನಾನ್ವಶ್ನುವಂತಿ ತೇ ವಿಷ್ಣೋ ಮಹಿತ್ವಮಿತರೇ ತ್ವಿತಿ ।
ಯತಃ ಶ್ರುತಿರತೋಽಪ್ಯೈಕ್ಯಂ ತೇನ ನಾನ್ಯಸ್ಯ ಕಸ್ಯಚಿತ್ ॥ ೫೬೯ ॥

**ಅರ್ಥ–** ಯತ್ = ಯಾವ ಕಾರಣದಿಂದ, ವಿಷ್ಣೋ = ಎಲೈ ವಿಷ್ಣುವೇ, ತೇ = ನಿನ್ನ, ಮಹಿತ್ವಂ = ಉತ್ಕೃಷ್ಟತೆಯನ್ನು, ಇತರೇ = ಬೇರೆಯವರು, ನ ಅನ್ವಶ್ನುವಂತಿ = ಪಡೆಯುವುದಿಲ್ಲ ಇತಿ = ಎಂದು, ಶ್ರುತಿಃ = ವೇದವಿದೆಯೋ, ಅತಃ ಅಪಿ = ಈ ಕಾರಣದಿಂದಲೂ, ಕಸ್ಯಚಿತ್ = ಯಾವ, ಅನ್ಯಸ್ಯ = ಬೇರೆಯವನಿಗೂ, ತೇನ = ಆ ಬ್ರಹ್ಮನಿಂದ, ಐಕ್ಯಂ = ಅಭೇದವು, ನ = ಇಲ್ಲ.

**ಅನುವಾದ–** ಇನ್ನೊಂದು ಶ್ರುತಿಯು ''ವಿಷ್ಣುವೇ ನಿನ್ನ ಮಹಿಮೆಯನ್ನು ಯಾವ ದೇವತೆಯೂ ಹೊಂದುವುದಿಲ್ಲ'' ಎಂದು ಹೇಳಿದ ಕಾರಣದಿಂದ ಇತರ ಯಾವ . ಜೀವನಿಗೂ ಮತ್ತು ವಿಷ್ಣುವಿಗೂ ಎಂದೂ ಅಭೇದವು ಉಪಪನ್ನವಾಗುವುದಿಲ್ಲ.

**ಭಾವವಿಲಾಸಿನೀ–**'ನಾನ್ವಶ್ನುವಂತಿ' ಇತ್ಯಾದಿನಾ 'ಪರೋ ಮಾತ್ರಯಾ' ಇತಿ ಶ್ರುತಿಮುಪಾದತ್ತೇ । ಅತಸ್ತನ್ಮಹಿಮ್ನೋऽನ್ಯೈರಪ್ರಾಪ್ಯತ್ವಕಥನಾತ್ । ತೇನ ವಿಷ್ಣುನಾ ॥ ೫೮೯ ॥

**ವಿವರಣೆ–** 'ಪರೋಮಾತ್ರಯಾ ತನ್ವಾವೃಧಾನ ನ ತೇ ಮಹಿತ್ವ ಮನ್ವಶ್ನುವಂತಿ' ಎಂಬುದು ಸಮಗ್ರವಾದ ವಾಕ್ಯ. ವಿಷ್ಣುವನ್ನು ಉದ್ದೇಶಿಸಿ ವೇದದ್ರಷ್ಟಾರರಾದ ಋಷಿಗಳು ಈ ಮಾತನ್ನು ಹೇಳುತ್ತಾರೆ.

ಹಿಂದೆ ಹುಟ್ಟಿದವನು, ಈಗ ಹುಟ್ಟಿರುವವನು, ಮುಂದೆ ಹುಟ್ಟುವವನು ಯಾರೂ ನಿನ್ನ ಮಹಿಮೆಯನ್ನು ಹೊಂದಲಾರರು ಎಂದು ಅದರ ಅರ್ಥ. ಬ್ರಹ್ಮಾದಿ ಎಲ್ಲಾ ದೇವತೆಗಳಿಗೂ ಜನ್ಮವಿದೆ, ಲಕ್ಷ್ಮೀದೇವಿಗೂ ಪರಾಧೀನವಿಶೇಷಾವಾಪ್ತಿರೂಪವಾದ ಜನ್ಮವಿದೆ, ಆದ್ದರಿಂದ ಅವರು ಯಾರೂ ವಿಷ್ಣುವಿನ ಮಹಿಮೆಯನ್ನು ಪಡೆಯಲಾರರು ಎಂದು ಹೇಳಿದುದರಿಂದ ವಿಷ್ಣುವಿನಲ್ಲಿ ಸರ್ವಥಾ ಭೇದವೇ ಸಿದ್ಧವಾಗುತ್ತದೆ.

**ಜಾತೋ ವಾ ಜಾಯಮಾನೋ ವಾ ವಿಷ್ಣೋ ಕಶ್ಚಿತ್ಪುಮಾಂಸ್ತವ ।**
**ಮಹಿಮ್ನೋऽಂತಂ ಪರಂ ನಾಪೇತ್ಯಾಹ ಕಾಚಿಚ್ಛ್ರುತಿಃ ಪ್ರಭುಮ್ ॥ ೫೭೦ ॥**

**ಅರ್ಥ–** ಕಾ ಚಿತ್ = ಯಾವುದೋ ಒಂದು, ಶ್ರುತಿಃ = ವೇದವು, ಜಾತೋ ವಾ= ಹುಟ್ಟಿರುವನಾಗಲೀ, ಜಾಯಮಾನೋ ವಾ = ಹುಟ್ಟುವವನಾಗಲೀ, ಕಶ್ಚಿತ್= ಯಾವ, ಪುಮಾನ್ = ಪುರುಷನೂ ಕೂಡ, ವಿಷ್ಣೋ = ಹೇ ವಿಷ್ಣುವೇ, ತವ= ನಿನ್ನ, ಮಹಿಮ್ನಃ = ಮಹಿಮೆಯ, ಅಂತಂ = ಕೊನೆಯನ್ನು, ಪರಂ = ಎತ್ತರವನ್ನು, ನಾಪ = ಹೊಂದಲಿಲ್ಲ, ಇತಿ = ಎಂದು, ಪ್ರಭುಂ = ಸಮರ್ಥನಾದ ನಾರಾಯಣನನ್ನು ಕುರಿತು, ಆಹ = ಹೇಳಿತು.

**ಅನುವಾದ–** ಹಿಂದೆ ಹುಟ್ಟಿದವನು, ಮುಂದೆ ಹುಟ್ಟುವವನು ಯಾವನೂ ಸಹ, ಎಲೈ ವಿಷ್ಣುವೇ, ನಿನ್ನ ಮಹಿಮೆಯನ್ನು ಹೊಂದಲಾರ ಎಂದು ಇನ್ನೊಂದು ಶ್ರುತಿಯ ಆ ಪ್ರಭುವನ್ನು ಕೊಂಡಾಡಿದೆ.

**ಭಾವವಿಲಾಸಿನೀ–**ಏವಂ ನಾರಾಯಣಸ್ಯೈವ ಬ್ರಹ್ಮಾದ್ಯುತ್ತಮತ್ವರೂಪಪರಬ್ರಹ್ಮತಾಂ ಪ್ರಸಾಧ್ಯ ತಸ್ಯ ಪರೋದೀರಿತಸರ್ವಧರ್ಮರಾಹಿತ್ಯರೂಪನಿರ್ಗುಣತ್ವಂ ಚ ಧರ್ಮಾಣಾಮನಿತ್ಯತ್ವಾದ್ವಾ ನಿವೃತ್ತಿರಂಗೀಕ್ರಿಯತೇ ಉತ ಮಿಥ್ಯಾತ್ವಾದಿತಿ ವಿಕಲ್ಪ್ಯ ನ ದ್ವೇಧಾಪೀತಿ ನಿರಾಕರ್ತುಮುಪಕ್ರಮತೇ । 'ಜಾತೋ ವಾ' ಇತ್ಯಾದಿನಾ । ಅನೇನ 'ನ ತೇ ವಿಷ್ಣೋ' ಇತಿ ಶ್ರುತಿಮರ್ಥತ ಉಪಾದತ್ತೇ ॥ ೫೭೦ ॥

**ವಿವರಣೆ–** 'ನತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ' ಎಂಬುದು ಇನ್ನೊಂದು ಶ್ರುತಿ. ಅಲ್ಲಿ ಹಿಂದೆ ಹುಟ್ಟಿದವನಾಗಲಿ, ಮುಂದೆ ಹುಟ್ಟುವವನಾಗಲಿ, ಈಗ ಹುಟ್ಟಿರುವವನಾಗಲೀ, ನಿನ್ನ ಮಹಿಮೆಯನ್ನು ಹೊಂದಲಾರ ಎಂದು ಹೇಳಿದ ಮೇಲೆ, ವಿಷ್ಣುವಿನ ಮಹಿಮೆಯು ನಿತ್ಯವಾದುದು ಎಂದು ಅರ್ಥವಾಗುತ್ತದೆ. ನಿತ್ಯವಾದ ವಿಷ್ಣುಮಹಿಮೆಯನ್ನು ಅಂಗೀಕರಿಸದೆ, ನಿರ್ಗುಣತ್ವವನ್ನು ಹೇಳುವವರು ನಿತ್ಯವಾದ ವಿಷ್ಣುಮಹಿಮಾರೂಪವಾದ ಧರ್ಮಗಳು ನಿವೃತ್ತಿಯನ್ನು ಹೊಂದುವ ಕಾರಣದಿಂದ ವಿಷ್ಣುವು ನಿರ್ಗುಣನೋ ಅಥವಾ ಆ ಧರ್ಮಗಳು ಮಿಥ್ಯಾಭೂತವಾದುದರಿಂದ ವಿಷ್ಣುವು ನಿರ್ಗುಣನೋ ಎಂಬ ಪ್ರಶ್ನೆಗೆ ಉತ್ತರವನ್ನು ಹೇಳಬೇಕು. ಎರಡು ಪಕ್ಷಗಳಲ್ಲಿಯೂ ಉತ್ತರವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಅವನ ಧರ್ಮಗಳು ನಿತ್ಯವಾದವುಗಳು. ಉಳಿದ ಯಾವ ದೇವತೆಗಳೂ ಹೊಂದಲಾರದವು ಎಂದು ಹೇಳಿದ ಮೇಲೆ ವಿಷ್ಣುವಿಗೂ ದೇವತೆಗಳಿಗೂ ಭೇದವು ಸಿದ್ಧವಾಗುತ್ತದೆ.

ತಸ್ಮಾನ್ನಿತ್ಯೋಽಸ್ಯ ಮಹಿಮಾ ನ ಕದಾಪಿ ನಿವರ್ತತೇ ।
ಸತ್ಯಃ ಸೋ ಅಸ್ಯ ಮಹಿಮೇತ್ಯುಕ್ತೇಶ್ಚ ನ ನಿವರ್ತತೇ ॥ ೫೭೧ ॥

**ಅರ್ಥ–** ತಸ್ಮಾತ್ = ಅಂತ್ಯ, ಎತ್ತರವನ್ನು ಕಾಣಲಿಲ್ಲ ಎಂದು ಹೇಳಿರುವುದರಿಂದ, ಅಸ್ಯ = ಈ ನಾರಾಯಣನ, ಮಹಿಮಾ = ಮಹಿಮೆಯು, ನಿತ್ಯಃ = ನಿತ್ಯವು, ಕದಾ ಅಪಿ = ಎಂದೂ ಕೂಡ, ನ ನಿವರ್ತತೇ = ನಾಶಹೊಂದುವುದಿಲ್ಲ, ಚ = ಮತ್ತು, ''ಅಸ್ಯ = ಈ ನಾರಾಯಣನ, ಸಃ = ಆ, ಮಹಿಮಾ = ಮಹಿಮೆಯು, ಸತ್ಯಃ = ಸತ್ಯವು'', ಇತಿ ಉಕ್ತೇಃ = ಎಂದು ವೇದವಾಕ್ಯದಿಂದ, ನ ನಿವರ್ತತೇ = ಇಲ್ಲವಾಗುವುದಿಲ್ಲ (ಬಾಧಿತವಾಗುವುದಿಲ್ಲ) ಎಂದು ತಿಳಿಯುತ್ತದೆ.

**ಅನುವಾದ–** ಆದ್ದರಿಂದ ನಿತ್ಯವಾದ ವಿಷ್ಣುವಿನ ಮಹಿಮೆಯು ಎಂದೂ ನಿವೃತ್ತಿಯನ್ನು ಹೊಂದುವುದಿಲ್ಲ. ಇನ್ನೊಂದು ಶ್ರುತಿಯು 'ಸತ್ಯಃ ಸೋ ಅಸ್ಯ ಮಹಿಮಾ' ಎಂದು ಹೇಳುವುದರಿಂದಲೂ ಅದು ನಿವೃತ್ತಿಯನ್ನು ಹೊಂದುವುದಿಲ್ಲ.

**ಭಾವವಿಲಾಸಿನೀ–** ತಸ್ಮಾದಂತಮುವಸಾನಂ ನಾಪೇತಿ ಕಾಲಪರಿಚ್ಛೇದರೂಪಾಂತ-ಶೂನ್ಯತ್ವಕಥನಾತ್ । 'ಸತ್ಯಸ್ಸೋ ಅಸ್ಯ ಮಹಿಮಾ' ಇತಿ ಶ್ರುತ್ಯಾ ಉಕ್ತೇಃ ಸತ್ಯತ್ವೋಕ್ತೇಃ । ನ ಚ ವಾಚ್ಯಂ 'ಸ ಪರಮಾತ್ಮಾ ಸತ್ಯಃ' ಇತಿ ಬ್ರಹ್ಮಣ ಏವ ಸತ್ಯತ್ವಮುಚ್ಯತೇ ನ ಮಹಿಮ್ನ ಇತಿ । ತಥಾ ಸತಿ 'ಅಸ್ಯ ಮಹಿಮಾ' ಇತಿ ವಾಕ್ಯಶೇಷೇ ಆಕಾಂಕ್ಷಾಪೂರಕಪದಾಭಾವಾದಪರಿ-ಪೂರ್ಣತ್ವಪ್ರಸಂಗೇನ ಅಸ್ಯ ಪರಮಾತ್ಮನಃ ಸಃ ಶ್ರುತಿಪ್ರಸಿದ್ಧೋ ಮಹಿಮಾ ಸತ್ಯ ಇತ್ಯೇಕವಾಕ್ಯತಯೈವ ಯೋಜನೀಯತ್ವಾತ್ ॥ ೫೭೧ ॥

**ವಿವರಣೆ–** ವಿಷ್ಣುವಿನ ಧರ್ಮಗಳು ಅನಿತ್ಯವಾದುದರಿಂದ ನಿವೃತ್ತಿಯನ್ನು ಹೊಂದುತ್ತವೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ 'ನ ತೇ ವಿಷ್ಣೋ ಜಾಯಮಾನೋ ನ ಜಾತೋ' ಎಂಬ ಶ್ರುತಿಯು ಆ ಧರ್ಮಗಳಿಗೆ ನಿತ್ಯತ್ವನ್ನು ಹೇಳುತ್ತದೆ. ವಿಷ್ಣುವಿನ ಧರ್ಮಗಳು ಮಿಥ್ಯಾಭೂತವಾದುದರಿಂದ ಅವುಗಳಿಗೆ ನಿವೃತ್ತಿ ಉಂಟಾಗುತ್ತದೆ ಎಂದು ಹೇಳಲೂ ಬರುವುದಿಲ್ಲ. ಏಕೆಂದರೆ 'ಸತ್ಯಃ ಸೋ ಅಸ್ಯ ಮಹಿಮಾ' ಎಂಬ ಶ್ರುತಿಯು ಆ ಮಹಿಮೆಗಳಿಗೆ ಸತ್ಯತ್ವವನ್ನು ಹೇಳುತ್ತದೆ. ಆದ್ದರಿಂದ ಯಾವ ರೀತಿಯಲ್ಲಿಯೂ ವಿಷ್ಣುವಿಗೆ ಗುಣರೂಪವಾದ ಆ ಧರ್ಮಗಳ ಚ್ಯುತಿಯಿಲ್ಲದಿರುವುದರಿಂದ ವಿಷ್ಣುವಿಗೆ ನಿರ್ಗುಣತ್ವವನ್ನು ಹೇಳಬಾರದು.

**ಅತಸ್ತ್ವನ್ನಿರ್ಗುಣತ್ವಂ ತು ನಾಸ್ಯ ಸ್ಯಾದ್ಧಿ ಕದಾಚನ ।**
**ತಸ್ಮಾತ್ ತ್ರಿಗುಣಶೂನ್ಯತ್ವಾನ್ನಿರ್ಗುಣೋಽಪ್ಯಯಮೇವ ಹಿ ॥ ೫೭೨ ॥**

**ಅರ್ಥ–** ಅತಃ = ಗುಣವೇ ಇಲ್ಲ ಎಂಬುವುದು ಕೂಡುವುದಿಲ್ಲವಾದ್ದರಿಂದ, ತ್ವನ್ನಿರ್ಗುಣತ್ವಂ ತು = ನೀನು ಹೇಳುವ ನಿರ್ಗುಣತ್ವವಾದರೂ, ಅಸ್ಯ = ಈ ನಾರಾಯಣನಿಗೆ, ಕದಾಚನ = ಎಂದಿಗೂ, ನ ಸ್ಯಾತ್ = ಆಗಲಾರದು, ಹಿ = ನಿಶ್ಚಯವು, ತಸ್ಮಾತ್ = ಧರ್ಮಶೂನ್ಯತ್ವವೆಂಬ ನಿರ್ಗುಣತ್ವವಿಲ್ಲವಾದ್ದರಿಂದ, ತ್ರಿಗುಣಶೂನ್ಯತ್ವಾತ್ = ಸತ್ವ, ರಜಸ್ಸು, ತಮಸ್ಸು ಎಂಬ ಗುಣಗಳಿಲ್ಲವಾದ್ದರಿಂದ, ನಿರ್ಗುಣಃ ಅಪಿ = ನಿರ್ಗುಣನೂ ಆಗಿದ್ದಾನೆ, ಏವಂ ಏವ = ಹೀಗೆಯೇ, ಹಿ = ನಿಶ್ಚಯವು.

**ಅನುವಾದ–** ಆದ್ದರಿಂದ ನೀನು ಹೇಳುವ ನಿರ್ಗುಣತ್ವವು ವಿಷ್ಣುವಿಗೆ ಎಂದೂ ಬರುವುದಿಲ್ಲ. ಶ್ರುತಿಯಲ್ಲಿ ನಿರ್ಗುಣ ಎಂಬ ಶಬ್ದದ ಪ್ರಯೋಗವಿದೆ. ಅದು ಸತ್ವರಜಸ್ತಮೋರೂಪವಾದ ಗುಣಗಳು ಇಲ್ಲ ಎಂಬ ಇಷ್ಟೇ ಅರ್ಥವನ್ನು ಹೇಳುತ್ತದೆ.

**ಭಾವವಿಲಾಸಿನೀ–ಅತಃ ದ್ವೇಧಾಪಿ ನಿರ್ಗುಣತ್ವಾಯೋಗಾತ್ । ತಸ್ಮಾತ್ಸರ್ವಧರ್ಮಶೂನ್ಯತ್ವರೂಪನಿರ್ಗುಣತ್ವಾಯೋಗಾತ್ ॥ ೫೭೨ ॥**

**ವಿವರಣೆ–** ನಿರ್ಗುಣ ಶಬ್ದದಿಂದ ಗುಣಸಾಮಾನ್ಯವನ್ನು ನಿಷೇಧ ಮಾಡಲು ಸಾಧ್ಯವಿಲ್ಲ. ಏಕೆಂದರೆ, ಉತ್ಕರ್ಷಪ್ರಾಪಕವಾದ ವಿಷ್ಣುಗುಣಗಳು ನಿತ್ಯವೂ ಮತ್ತು ಸತ್ಯವೂ ಆಗಿವೆಯೆಂದು ಶ್ರುತಿಸಿದ್ಧವಾಗಿವೆ. ಆದ್ದರಿಂದ ಹೇಯವಾದ ಪ್ರಾಕೃತಗುಣಗಳಿಂದ ಶೂನ್ಯನಾದವನು ಎಂದು ಇಷ್ಟೇ ಅರ್ಥವನ್ನು ಮಾಡಬೇಕು. ಇದು ನಾವು ಮಾಡುವ ಅರ್ಥ. ಇದು ಶ್ರುತಿಸಮ್ಮತವಾದುದು.

**ಬ್ರಹ್ಮಾಯಂ ಗುಣಶೂನ್ಯತ್ವಾತ್ ನಿರ್ಗುಣೋಪ್ಯಯಮೇವ ಹಿ ।**
**ಬ್ರಹ್ಮಾಯಂ ಗುಣಪೂರ್ಣತ್ವಾತ್ ಪರಮಶ್ಚೋತ್ತಮತ್ವತಃ ।**
**ತನ್ನಿರ್ಗುಣಂ ಚ ಪರಮಂ ಬ್ರಹ್ಮ ನಾರಾಯಣಃ ಸದಾ ॥ ೫೭೩ ॥**

**ಅರ್ಥ–** ಅಯಂಬ್ರಹ್ಮ= ಈ ಪರಬ್ರಹ್ಮನು, ಗುಣಶೂನ್ಯತ್ವಾತ್= ಪ್ರಾಕೃತಗುಣ–ಶೂನ್ಯನಾದುದರಿಂದ, ಅಯಮೇವ= ಇವನೇ, ನಿರ್ಗುಣೋಽಪಿ ಹಿ= ನಿರ್ಗುಣನೂ ಆಗಿದ್ದಾನಷ್ಟೆ!, ಅಯಂ = ಈ ನಾರಾಯಣನು, ಗುಣಪೂರ್ಣತ್ವಾತ್ = ಗುಣಪೂರ್ಣ–ನಾದ್ದರಿಂದ, ಬ್ರಹ್ಮ = ಬ್ರಹ್ಮಶಬ್ದವಾಚ್ಯನು, ಚ = ಮತ್ತು, ಉತ್ತಮತ್ವತಃ = ಉತ್ತಮನಾದ್ದರಿಂದ, ಪರಮಃ = ಪರಮಶಬ್ದವಾಚ್ಯನು, ತತ್ = ಈ ಹಿಂದೆ ಹೇಳಿದ ಮೂರು ಕಾರಣದಿಂದ, ನಾರಾಯಣಃ = ನಾರಾಯಣನು, ಸದಾ = ಯಾವಾಗಲೂ, ನಿರ್ಗುಣಂ = ಸತ್ವಾದಿಗುಣ ರಹಿತನಾದ್ದರಿಂದ ನಿರ್ಗುಣನು, ಪರಮಂ ಬ್ರಹ್ಮ ಚ = ಮತ್ತು ಪರಬ್ರಹ್ಮನು ಆಗಿದ್ದಾನೆ.

**ಅನುವಾದ– ಪ್ರಾಕೃತಗುಣಶೂನ್ಯನಾದುದರಿಂದ ನಿರ್ಗುಣನೂ ಈ ಪರಬ್ರಹ್ಮನೇ ಆಗಿದ್ದಾನೆ. ಈ ನಾರಾಯಣನು ಗುಣಪೂರ್ಣನಾದುದರಿಂದ ಬ್ರಹ್ಮ ಉತ್ತಮನಾದುದರಿಂದ ಅವನು ಪರಮನೂ ಆಗಿದ್ದಾನೆ. ಆದ್ದರಿಂದ ನಿರ್ಗುಣ ಮತ್ತು ಪರಬ್ರಹ್ಮ ಎಂದು ಶ್ರುತಿಯಲ್ಲಿ ಹೇಳಲ್ಪಡುವುದು ನಾರಾಯಣರೂಪವಾದ ವಸ್ತುವೇ.**

**ಭಾವವಿಲಾಸಿನೀ–ತತ್ತಸ್ಮಾನ್ನಿಮಿತ್ತತ್ರಯಾತ್ ॥ ೫೭೩ ॥**

**ವಿವರಣೆ–** 'ಅಥಕಸ್ಮಾತ್ ಉಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ' ಎಂಬ ಶ್ರುತಿಯಿಂದ ಬ್ರಹ್ಮಶಬ್ದದ ಅರ್ಥ ಗುಣಪೂರ್ಣತ್ವ ಎಂದು ಸಿದ್ಧವಾಗಿದೆ. ಬ್ರಾಹ್ಮಣವಾಕ್ಯದಲ್ಲಿ ಹೇಳಿದ ಪರಮತ್ವ ಉತ್ತಮತ್ವಪ್ರಯುಕ್ತವಾಗಿದೆ. ಆದ್ದರಿಂದ ಗುಣಪೂರ್ಣನಾದ, ಹೇಯಗುಣರಹಿತನಾದ, ಸರ್ವೋತ್ತಮನಾದ ನಾರಾಯಣನೇ ಪರಬ್ರಹ್ಮನಾದವನು. ಅವನೇ ನಿರ್ಗುಣನೂ ಸಹ.

**ನಚ ತದ್ಗುಣಮಿಥ್ಯಾತ್ವಾನ್ನಿರ್ಗುಣಾವಸರಸ್ತವ ।**
**ನಿತ್ಯಸ್ಯ ಬ್ರಹ್ಮವನ್ಮಿಥ್ಯಾತ್ವಸ್ಯೈವಾನುಪಪತ್ತಿತಃ ॥ ೫೭೪ ॥**

**ಅರ್ಥ–** ಬ್ರಹ್ಮವತ್ = ಬ್ರಹ್ಮನಂತೆ, ನಿತ್ಯಸ್ಯ = ನಿತ್ಯವಾದ ಗುಣಕ್ಕೆ, ಮಿಥ್ಯಾತ್ವಸ್ಯ = ಸುಳ್ಳಾಗುವಿಕೆಯ, ಅನುಪಪತ್ತಿತಃ ಏವ = ಕೂಡುವುದಿಲ್ಲವಾದ್ದರಿಂದಲೇ, ತತ್ = ಅವನ, ಗುಣ = ಗುಣಗಳ, ಮಿಥ್ಯಾತ್ವಾತ್ = ಸುಳ್ಳಾಗಿರುವಿಕೆಯಿಂದ, ತವ = ನಿನಗೆ, ನಿರ್ಗುಣಾವಸರ = ನಿರ್ಗುಣಸಿದ್ಧಿಪ್ರಸಂಗವು ನ ಚ = ಇಲ್ಲವಷ್ಟೆ.

**ಅನುವಾದ– ಬ್ರಹ್ಮನ ಗುಣಗಳು ಮಿಥ್ಯಾಭೂತವಾದುದರಿಂದ ಬ್ರಹ್ಮನು ನಿರ್ಗುಣನಾಗುತ್ತಾನೆ ಎಂದು ನಿನಗೆ ಹೇಳಲು ಅವಕಾಶವಿಲ್ಲ. ಏಕೆಂದರೆ ಶ್ರುತಿಯು ಬ್ರಹ್ಮನ ಗುಣಗಳನ್ನು ಬ್ರಹ್ಮನಂತೆಯೇ ನಿತ್ಯವೆಂದು ಹೇಳಿದೆ. ಆದ್ದರಿಂದ ಅವು ಮಿಥ್ಯಾಭೂತವಾಗಲಾರವು.**

**ಭಾವವಿಲಾಸಿನೀ**—ಇದಾನೀಂ ಧರ್ಮಾಣಾಂ ನಿತ್ಯತ್ವೇನಾಪಿ ಮಿಥ್ಯಾತ್ವಾಭಾವ ಇತ್ಯಾಹ – ನಚೇತಿ ॥ ೫೭೪ ॥

**ವಿವರಣೆ**— ಬ್ರಹ್ಮನೂ ನಿತ್ಯ. ಬ್ರಹ್ಮನ ಗುಣಗಳೂ ನಿತ್ಯವಾದವು. ಯಾವುದು ನಿತ್ಯವೋ ಅದು ಮಿಥ್ಯಾಭೂತವಾದುದಲ್ಲ ಎಂಬ ವ್ಯಾಪ್ತಿಯು ಬ್ರಹ್ಮನಲ್ಲಿ ಕಂಡಿದೆ. ಬ್ರಹ್ಮನ ಗುಣಗಳು ನಿತ್ಯವಾಗಿರುವುದರಿಂದ ಅಲ್ಲಿಯೂ ಮಿಥ್ಯಾತ್ವವಿರುವುದಿಲ್ಲ. ಆದ್ದರಿಂದ ಬ್ರಹ್ಮನ ಗುಣಗಳು ಮಿಥ್ಯಾಭೂತವಾದ್ದರಿಂದ ಬ್ರಹ್ಮನು ನಿರ್ಗುಣ ಎಂದು ಹೇಳಲು ಬರುವುದಿಲ್ಲ.

**ಸತ್ಯಃ ಸೋ ಅಸ್ಯ ಮಹಿಮೇತ್ಯಾಹ ತತ್ಸತ್ಯತಾಂ ಚ ವಾಕ್ ।**
**ಅತಸ್ತ್ವನ್ನಿರ್ಗುಣೋಕ್ತಿಶ್ಚ ತ್ರಿಗುಣಾನಾಂ ವಿಮೋಚಿಕಾ ॥ ೫೭೫ ॥**

**ಅರ್ಥ**—ವಾಕ್ = ವೇದದ ಮಾತು, 'ಅಸ್ಯ = ಈ ನಾರಾಯಣನ, ಸಃ = ಆ, ಮಹಿಮಾ = ಮಹಿಮೆಯು, ಸತ್ಯಃ = ಸತ್ಯವು', ಇತಿ = ಎಂದು, ತತ್ಸತ್ಯತಾಂ - ತತ್ = ಅವನ ಮಹಿಮೆಯ, ಸತ್ಯತಾಂ = ಸತ್ಯತ್ವವನ್ನು, ಆಹ = ಹೇಳಿತು, ಅತಃ ಚ = ಆದ್ದರಿಂದಲೂ, ತ್ವನ್ನಿರ್ಗುಣತ್ವೋಕ್ತಿಃ = ನಿನ್ನ ನಿರ್ಗುಣತ್ವದ ಮಾತು, ತ್ರಿಗುಣಾನಾಂ = ಸತ್ತ್ವಾದಿ ಮೂರು ಗುಣಗಳ, ವಿಮೋಚಿಕಾ = ರಾಹಿತ್ಯವನ್ನು ಸಂಪಾದಿಸುವುದು.

**ಅನುವಾದ– ಅಷ್ಟೇ ಅಲ್ಲದೆ, 'ಸತ್ಯಃ ಸೋ ಅಸ್ಯ ಮಹಿಮಾ' ಎಂಬ ಶ್ರುತಿಯು ಬ್ರಹ್ಮನ ಗುಣಗಳ ಸತ್ಯತ್ವವನ್ನು ಹೇಳುತ್ತದೆ. ಆದ್ದರಿಂದ ನೀನು ಹೇಳುವ ನಿರ್ಗುಣತ್ವವಚನವು ಬ್ರಹ್ಮನಲ್ಲಿ ಪ್ರಕೃತಿಯ ತ್ರಿಗುಣಗಳನ್ನು ಮಾತ್ರ ಇಲ್ಲದಂತೆ ಮಾಡುತ್ತದೆ.**

**ಭಾವವಿಲಾಸಿನೀ**—ಪೂರ್ವೋಕ್ತಹೇತುಂ ಚ ಸ್ಮಾರಯತಿ – **ಸತ್ಯ ಇತಿ** ॥ ತತಶ್ಚ ನಿತ್ಯತ್ವಾತ್ಸತ್ಯತ್ವಾಚ್ಚ ಬ್ರಹ್ಮವನ್ನ ಮಿಥ್ಯೇತಿ ಮಿಥ್ಯಾತ್ವಾಭಾವೇಽಪಿ ಹೇತುದ್ವಯಂ ಘಟತ ಇತಿ ಭಾವಃ ॥ ೫೭೫ ॥

**ವಿವರಣೆ**— ಹಿಂದಿನ ಶ್ಲೋಕದಲ್ಲಿ ನಿತ್ಯತ್ವವಿರುವುದರಿಂದ ಬ್ರಹ್ಮನ ಗುಣಗಳಿಗೆ ಮಿಥ್ಯಾತ್ವವಿಲ್ಲ ಎಂದು ಅನುಮಾನ ಮುದ್ರೆಯಿಂದ ಸಮರ್ಥನೆ ಮಾಡಿದೆವು. ಈಗ ಬ್ರಹ್ಮನ ಧರ್ಮಗಳಿಗೆ ಸಾಕ್ಷಾತ್ತಾಗಿ ಸತ್ಯತ್ವವನ್ನೇ ಹೇಳುವ ಶ್ರುತಿ ಇರುವುದರಿಂದಲೂ ಗುಣಗಳಿಗೆ ಮಿಥ್ಯಾತ್ವವನ್ನು ಒಪ್ಪಲು ಬರುವುದಿಲ್ಲ ಎಂದು ಹೇಳುತ್ತಾರೆ. ಹಾಗಾದರೆ, 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಗೆ ಏನು ಅರ್ಥವನ್ನು ಮಾಡಬೇಕು ಎಂದರೆ ದೋಷಾದಾಯಕವಾದ ಪ್ರಕೃತಿಯ ಗುಣಗಳಾದ ಸತ್ವರಜಸ್ತಮಸ್ಸುಗಳು ಬ್ರಹ್ಮನಲ್ಲಿ ಇಲ್ಲ ಎಂದು ಅರ್ಥಮಾಡಬೇಕೆಂದು ಉತ್ತರ.

**ನಿತ್ಯಃ ಸತ್ಯಶ್ಚ ಮಹಿಮಾ ಕಥಂ ತದ್ ಗ್ರಾಸತಾಮಿಯಾತ್ ॥ ೫೭೬ ॥**

**ಅರ್ಥ–** ನಿತ್ಯಃ = ನಿತ್ಯವಾದ, ಚ = ಮತ್ತು, ಸತ್ಯಃ = ಸತ್ಯವಾದ, ಮಹಿಮಾ, ತದ್‌ಗ್ರಾಸತಾಂ = ನಿರ್ಗುಣ ಶಬ್ದಕ್ಕೆ ತುತ್ತಾಗುವಿಕೆಯನ್ನು, ಕಥಂ = ಹೇಗೆ, ಇಯಾತ್ = ಹೊಂದೀತು?

**ಅನುವಾದ– ನಿತ್ಯವೂ ಮತ್ತು ಸತ್ಯವೂ ಆದ ಮಹಿಮೆಯು ಹೇಗೆ ನಿರ್ಗುಣ ಶಬ್ದಕ್ಕೆ ಗ್ರಾಸವಾಗುತ್ತದೆ.**

**ಭಾವವಿಲಾಸಿನೀ–ತದ್ ಗ್ರಾಸತಾಂ ನಿರ್ಗುಣೋಕ್ತಿಗ್ರಾಸತಾಮ್ ॥ ೫೭೬ ॥**

**ವಿವರಣೆ–** ನಿತ್ಯವೂ, ಸತ್ಯವೂ ಆಗ ಮಹಿಮೆಯು ಭಗವಂತನಲ್ಲಿ ಇಲ್ಲವೆಂದು ಸಾಧಿಸಲು ನಿರ್ಗುಣ ಶಬ್ದವು ಹೇಗೆ ಸಮರ್ಥವಾದೀತು?

**ನಞಾ ಪರಶುನಾ ಛಿನ್ನೇ ಪದೇ ತ್ವಾಂ ನಾನುಯಾತಿ ಸಾ ।**
**ಗುಣಸತ್ಯತ್ವನಿತ್ಯತ್ವಕಾರೂತ್ತೇಜಿತಮೂರ್ತಿನಾ ॥ ೫೭೭ ॥**

**ಅರ್ಥ–** ಗುಣಸತ್ಯತ್ವನಿತ್ಯತ್ವಕಾರೂತ್ತೇಜಿತಮೂರ್ತಿನಾ = ಗುಣಸತ್ಯತ್ವ ಗುಣನಿತ್ಯತ್ವ ಎಂಬ ಇಬ್ಬರು ಕಮ್ಮಾರರಿಂದ ಉತ್ತೇಜಿತವಾದ ಸ್ವರೂಪವುಳ್ಳ, ನಞಾ = 'ನಞ್' ಎಂಬ, ಪರುಶುನಾ = ಕೊಡಲಿಯಿಂದ, ಪದೇ = ನಿರ್ಗುಣಪದವು (ಕಾಲುಗಳು), ಛಿನ್ನೇ = ತುಂಡರಿಸಲ್ಪಡುತ್ತಿರಲು, ಸಾ = ಶ್ರುತಿಯು, ತ್ವಾಂ = ನಿನ್ನನ್ನು, ನ ಅನುಯಾತಿ = ಅನುಸರಿಸುವುದಿಲ್ಲ.

**ಅನುವಾದ– 'ಸಾಕ್ಷೀ ಚೇತಾ ಕೇವಲೋऽನಿರ್ಗುಣಶ್ಚ' ಎಂಬ ಶ್ರುತಿಯಲ್ಲಿ 'ಅನಿರ್ಗುಣಃ' ಎಂದು ಪದಚ್ಛೇದ ಮಾಡಬೇಕು. 'ಗುಣಸತ್ಯತ್ವ', 'ಗುಣನಿತ್ಯತ್ವ' ಎಂಬ ಇಬ್ಬರು ಕಮ್ಮಾರರು 'ನಞ್' ಎಂಬ ಕೊಡಲಿಯನ್ನು ಹರಿತವನ್ನಾಗಿ ಮಾಡಿಕೊಂಡು, 'ನಿರ್ಗುಣಃ' ಎಂಬ ಪದವನ್ನು (ಪಾದವನ್ನು) ತುಂಡರಿಸಿದ್ದಾರೆ. ಆಗ 'ಅನಿರ್ಗುಣಃ' ಎಂದಾಗುತ್ತದೆ. ಇಂತಹ ಅನಿರ್ಗುಣ ಶ್ರುತಿಯು ನಿನ್ನನ್ನು ಅನುಸರಿಸಲು (ನಿನ್ನ ಹಿಂದೆ ನಡೆದುಬರಲು) ಸಾಧ್ಯವಿಲ್ಲ.**

**ಭಾವವಿಲಾಸಿನೀ–** ಪೂರ್ವಂ 'ಕೇವಲೋ ನಿರ್ಗುಣಶ್ಚ' ಇತ್ಯತ್ರ ನಿರ್ಗುಣ ಇತಿ ಪದಚ್ಛೇದಮಂಗೀಕೃತ್ಯ ದೂಷಣಮಭಿಹಿತಮ್ । ಅಧುನೋಪನಿಷದಾಮನಿಯತಪದತ್ವೇನ ಅನಿರ್ಗುಣ ಇತ್ಯೇವ ಪದಚ್ಛೇದಸ್ಯ ಸುಕರತ್ವಾತ್ ತ್ವದಭಿಮತನಿರ್ಗುಣತ್ವಸಾಧಕಮೇವ ನಾಸ್ತೀತಿ ಸಾಹಿತ್ಯಮುದ್ರಯಾऽಹ – **ನಞೇತಿ ॥** ನಞಾ ಅಕಾರೇಣ । ಅಭಾವಸಂಪಾದಕತ್ವಾತ್ಪರಶುನೇತ್ಯುಕ್ತಮ್। ಪದೇ ನಿರ್ಗುಣಪದೇ ಛಿನ್ನೇ ಅನಿರ್ಗುಣ ಇತಿ ನಿರ್ಗುಣತ್ವವಿರುದ್ಧಾಕಾರಮಾಪನ್ನೇ ಸಾ 'ಕೇವಲೋ ನಿರ್ಗುಣಃ' ಇತಿ ವಾಕ್ ತ್ವಾಂ ಮಾಯಾವಾದಿನಂ ನಾನುಯಾತಿ ತ್ವದಭಿಲಷಿತನಿರ್ಗುಣತ್ವಮರ್ಥಂ ನ ವದತಿ । ಛಿನ್ನಪದಸ್ಯಾನುಯಾತ್ರಾಭಾವೋ

ಧ್ವನಿತಃ । ಅಸ್ಮದಭಿಲಷಿತಾನಿರ್ಗುಣಪದಸ್ಯ ವೇದವಾಕ್ಯರೂಪಮಂತ್ರಶಕ್ತ್ಯಾ ಸಂಪಾದಿತತ್ವಾದ್ ಅಸ್ಮದನುಯಾನಂ ತು ಯುಕ್ತಮಿತಿ ಧ್ವನಿತಮ್ । ಪ್ರಾಕ್‌ಸಾಧಿತೇ ಗುಣಸತ್ಯತ್ವನಿತ್ಯತ್ವೇ ಏವ ಕಾರೂ ತಾಭ್ಯಾಮುತ್ತೇಜಿತಮೂರ್ತಿನಾ ನಞೇತಿ ಸಂಬಂಧಃ । ಪೂತ್ಕಾರಾಽಯಸ್ತಾಡನಕರ್ತ್ರೋರ್ರುಭಯೋರಾವಶ್ಯಕತ್ವಾದ್ದ್ವಿವಚನಮ್ । ಉತ್ತೇಜನಂ ನಾಮ ಸತ್ಯನಿತ್ಯಗುಣನಿಷೇಧಾಸಂಭವೇನ ಅಕಾರಪರಶೋರಾವಶ್ಯಕತ್ವಾಖ್ಯಧಾರಾಸಂಪಾದನಮ್ । ಸತ್ಯನಿತ್ಯಗುಣಾನಾಂ ನಿರ್ಗುಣ ಇತಿ ನಿಷೇಧಾಯೋಗಾದ್ ಅನಿರ್ಗುಣ ಇತಿ ಪದಚ್ಛೇದಃ ಕರ್ತವ್ಯ ಇತಿ ಭಾವಃ ॥ ೫೭೭ ॥

**ವಿವರಣೆ–**

'ಏಕೋ ದೇವಃ ಸರ್ವಭೂತೇಷು ಗೂಢಃ,
ಸರ್ವವ್ಯಾಪೀ, ಸರ್ವಭೂತಾಂತರಾತ್ಮಾ ।
ಕರ್ಮಾಧ್ಯಕ್ಷಃ, ಸರ್ವಭೂತಾಧಿವಾಸಃ,
ಸಾಕ್ಷೀಚೇತಾ, ಕೇವಲೋ ನಿರ್ಗುಣಶ್ಚ ॥'

ಎಂಬ ಶ್ರುತಿಯನ್ನು ಅದ್ವೈತಿಗಳು ಬ್ರಹ್ಮನ ನಿರ್ಗುಣತ್ವ ಪ್ರತಿಪಾದನೆಗಾಗಿ ಪ್ರಮಾಣವನ್ನಾಗಿ ಉಲ್ಲೇಖಿಸುತ್ತಾರೆ. ಅದಕ್ಕೆ ಉತ್ತರವಾಗಿ ನಿರ್ಗುಣಪದಕ್ಕೆ ಪ್ರಾಕೃತವಾದ ಸತ್ವರಜಸ್ತಮೋಗುಣಗಳಿಂದ ರಹಿತ ಎಂಬ ಅರ್ಥವನ್ನೇ ವಿವಕ್ಷಿಸಬೇಕು ಎಂದು ಅನೇಕ ಯುಕ್ತಿಗಳಿಂದ ತತ್ತ್ವವಾದಿಗಳು ಸಮರ್ಥನೆ ಮಾಡಿದರು. ಪ್ರಕೃತ 'ಕೇವಲೋ ನಿರ್ಗುಣಶ್ಚ 'ಎಂಬಲ್ಲಿ 'ಅನಿರ್ಗುಣಃ' ಎಂದೇ ಪದಚ್ಛೇದ ಹೊರತು 'ನಿರ್ಗುಣಃ' ಎಂದು ಪದಚ್ಛೇದವಲ್ಲ. ಏಕೆಂದರೆ, ಶ್ರುತಿವಾಕ್ಯಗಳಿಗೆ ಹೀಗೆಯೇ ಪದಚ್ಛೇದ ಮಾಡಬೇಕೆನ್ನಲು ಕಾರಣವಿರುವುದಿಲ್ಲ. 'ಅನಿರ್ಗುಣಃ' ಎಂದು ಪದಚ್ಛೇದ ಮಾಡಿದಾಗ ನಿನಗೆ ಇಷ್ಟವಾದ ನಿರ್ಗುಣತ್ವವನ್ನು ಸಾಧಿಸುವ ಪದವೇ ಶ್ರುತಿಯಲ್ಲಿಲ್ಲವೆಂದೂ ಸಿದ್ಧವಾಗುತ್ತದೆ. ಈ ಅಭಿಪ್ರಾಯದಿಂದ ಹೃದಯಂಗಮವಾಗಿ ಕಾವ್ಯಶೈಲಿಯಲ್ಲಿ ಗ್ರಂಥಕಾರರು ಅದ್ವೈತಿಯನ್ನು ನಿರಾಕರಿಸಲು ಹೊರಟಿದ್ದಾರೆ.

ಗುಣಸತ್ಯತ್ವ ಹಾಗೂ ಗುಣನಿತ್ಯತ್ವಗಳು ಬ್ರಹ್ಮನು ನಿರ್ಗುಣನಾದಲ್ಲಿ ಕೂಡುವುದಿಲ್ಲ. ಆದ್ದರಿಂದ ಈ ಗುಣಸತ್ಯತ್ವ ಹಾಗೂ ಗುಣನಿತ್ಯತ್ವಗಳೇ 'ಅನಿರ್ಗುಣಃ' ಎಂಬ ಪದಚ್ಛೇದವನ್ನು ಮಾಡಲು ಉತ್ತೇಜಕಗಳಾಗಿವೆ. 'ಅನಿರ್ಗುಣಃ' ಎಂಬಲ್ಲಿರುವ ಅಕಾರವು 'ನಞ್' ಎನಿಸಿಕೊಳ್ಳುತ್ತದೆ. ಇದನ್ನು ಕೊಡಲಿಗೆ ಹೋಲಿಸಿದ್ದಾರೆ. ಏಕೆಂದರೆ, ಕೊಡಲಿಯು ಪದಾರ್ಥಗಳ ಅಭಾವವನ್ನು ತಂದುಕೊಡುವಂತೆ ಅಕಾರವೂ ಕೂಡ ಅಭಾವವನ್ನು ತಂದುಕೊಡುತ್ತಿದೆ. ಇಂತಹ 'ನಞ್' ಎಂಬ ಕೊಡಲಿಯಿಂದ ನಿರ್ಗುಣ ಪದವನ್ನು ರೂಪಾಂತರಿಸಿದ ಮೇಲೆ 'ಅನಿರ್ಗುಣಃ' ಎಂದಾಗುತ್ತದೆ ಹೊರತು, 'ನಿರ್ಗುಣಃ' ಎಂದಾಗುವುದಿಲ್ಲ. ನಿರ್ಗುಣತ್ವಕ್ಕೆ ವಿರುದ್ಧವಾದ ಸ್ವರೂಪವನ್ನು ತಾಳಿ 'ಕೇವಲೋ

ನಿರ್ಗುಣಃ' ಎಂಬ ಶ್ರುತಿಯು ಮಾಯಾವಾದಿಯಾದ ನಿನ್ನನ್ನು ಅನುಸರಿಸುವುದಿಲ್ಲ. ಅರ್ಥಾತ್ ನಿನಗೆ ಅಭಿಲಷಿತವಾದ ನಿರ್ಗುಣತ್ವ ಎಂಬ ಅರ್ಥವನ್ನು ಹೇಳುವುದಿಲ್ಲ. (ನಿರ್ಗುಣಶ್ರುತಿ ಎಂಬ ಕನ್ಯೆಯು ನಿನ್ನನ್ನು ಅನುಸರಿಸದೆ, ನಿನಗೆ ವಿರುದ್ಧವಾದ ಅನಿರ್ಗುಣ ಎಂಬ ವಿಪರೀತ ಭಾವವನ್ನು ತಾಳಿ ನಿನ್ನನ್ನು ತಿರಸ್ಕರಿಸುತ್ತಾಳೆ ಎಂಬುದು ಧ್ವನಿ.) ವೇದವಾಕ್ಯವೆಂಬ ಮಂತ್ರದ ಶಕ್ತಿಯಿಂದ ನಮಗೆ ಬೇಕಾದ ಅನಿರ್ಗುಣ ಎಂಬ ಪದಚ್ಛೇದ ಸಾಧ್ಯವಾಗಿರುವುದರಿಂದ ನಿರ್ಗುಣ ಶ್ರುತಿಯು ನಮ್ಮನ್ನು ಅನುಸರಿಸುತ್ತದೆ ಎಂದು ಧ್ವನಿತಾರ್ಥ.

ಹಿಂದೆ ಸಮರ್ಥಿಸಿದ ಗುಣಸತ್ಯತ್ವ ಹಾಗೂ ಗುಣನಿತ್ಯತ್ವಗಳು ಕಮ್ಮಾರರಾಗಿದ್ದಾರೆ. ಈ ಇಬ್ಬರು ಕಮ್ಮಾರರಿಂದ ಉತ್ತೇಜಿತವಾಗಿದೆ 'ನಞ್' ಎಂಬ ಕೊಡಲಿ. ಅಂದರೆ, ಕೊಡಲಿಯನ್ನು ನಿರ್ಮಿಸಲು ಇಬ್ಬರು ಕಮ್ಮಾರರು ಬೇಕು. ಒಬ್ಬನು ಫೂತ್ಕಾರ ಮಾಡಬೇಕು, ಮತ್ತೊಬ್ಬನು ತಾಡನ ಮಾಡಬೇಕು. ಆಗ ಕೊಡಲಿಯು ನಿರ್ಮಾಣವಾಗುತ್ತದೆ ಮತ್ತು ಹರಿತವಾಗುತ್ತದೆ. ಹೀಗೆ ಇಬ್ಬರು ಕಮ್ಮಾರರು ಕೊಡಲಿಯ ನಿರ್ಮಾಣಕ್ಕೆ ಅವಶ್ಯವಾಗಿ ಅಪೇಕ್ಷಿತರಾಗಿರುತ್ತಾರೆ. ಪ್ರಕೃತ ನಞ್ ಎಂಬ ಕೊಡಲಿಗೆ ನಿರ್ಮಾಪಕರು ಗುಣಸತ್ಯತ್ವ ಹಾಗೂ ಗುಣನಿತ್ಯತ್ವ ಎಂಬ ಇಬ್ಬರು ಕಮ್ಮಾರರು. ಉತ್ತೇಜನ ಮಾಡುವಿಕೆ ಎಂದರೆ, ಕೊಡಲಿಯನ್ನು ನಿರ್ಮಿಸುವುದು ಅಥವಾ ಹರಿತ ಮಾಡುವುದು. ಅದರಂತೆ ಇಲ್ಲಿಯೂ ಕೂಡ ಗುಣಸತ್ಯತ್ವ ಮತ್ತು ನಿತ್ಯತ್ವ ಎಂಬ ಶಬ್ದಗಳು ನಿರ್ಗುಣ ಶಬ್ದಕ್ಕೆ 'ಅಕಾರ' ವನ್ನು ಜೋಡಿಸುವ ಮೂಲಕ ಆ ಶಬ್ದದ ರೂಪಾಂತರಕ್ಕೆ ಕಾರಣಗಳಾಗಿವೆ. ಸತ್ಯವಾದ ಹಾಗೂ ನಿತ್ಯವಾದ ಗುಣಗಳನ್ನು ನಿರ್ಗುಣ ಪದದಿಂದ ನಿಷೇಧಿಸಲು ಸಾಧ್ಯವಿಲ್ಲದ ಕಾರಣ ಅನಿರ್ಗುಣಃ ಎಂಬ ಪದಚ್ಛೇದವು ಅತ್ಯಾವಶ್ಯಕ ಎಂದಭಿಪ್ರಾಯ.

**ಸಾರ** - 'ಸಾಕ್ಷೀಚೇತಾ ಕೇವಲೋ ನಿರ್ಗುಣಶ್ಚ' ಎಂಬಲ್ಲಿ 'ಅನಿರ್ಗುಣಃ' ಎಂದು ಪದಚ್ಛೇದ ಮಾಡಬೇಕು. ಗುಣಸತ್ಯತ್ವ ಹಾಗೂ ಗುಣನಿತ್ಯತ್ವ ಎಂಬ ಇಬ್ಬರು ಕಮ್ಮಾರರು ಸೇರಿ ನಞ ಎಂಬ ಕೊಡಲಿಯನ್ನು ನಿರ್ಮಿಸಿ ಹರಿತಮಾಡಿ ಶ್ರುತಿಯ ಕಾಲು ತುಂಡಾಗಲು ಸಹಕಾರಿಗಳಾಗಿದ್ದಾರೆ. ಆಗ ಶ್ರುತಿಯು ಅದ್ವೈತಿಯನ್ನು ಅನುಸರಿಸದೇ, ನಮ್ಮನ್ನೇ ಅನುಸರಿಸುತ್ತದೆ.

**ಏವಂ ಚಾನಿರ್ಗುಣತ್ವಾರ್ಥಾ ಯತ್ ತೇ ನಿರ್ಗುಣತಾಂ ಕ್ಷಿಪೇತ್ ।**
**ಅತಸ್ತದ್ಗುಣಮಿಥ್ಯಾತ್ವಸಾಧಕಂ ಚ ನ ಕಿಂಚನ ॥ ೫೭೮ ॥**

**ಅರ್ಥ–** ಏವಂಚ = ಆದ್ದರಿಂದ, ಅನಿರ್ಗುಣತ್ವಾರ್ಥಾ = ಗುಣಗಳ ಅಭಾವವನ್ನು ಪ್ರತಿಪಾದನೆ ಮಾಡುವಂತಹ, ಯತ್ = ಯಾವ, ತೇ = ನೀನು ಉದಾಹರಿಸಿದ ಶ್ರುತಿಯು,

ನಿರ್ಗುಣತಾಂ = ನಿರ್ಗುಣತ್ವವನ್ನು, ಕ್ಷಿಪೇತ್ = ನಿರಾಕರಿಸುತ್ತದೆಯೋ, ಅತಃ = ಆದ್ದರಿಂದ, ಸದ್ಗುಣಮಿಥ್ಯಾತ್ವಸಾಧಕಂ = ಬ್ರಹ್ಮನಲ್ಲಿರುವ ಗುಣಗಳಿಗೆ ಮಿಥ್ಯಾತ್ವವನ್ನು ಸಾಧಿಸುವಂತಹ, ಕಿಂಚನ= ಯಾವ ವಾಕ್ಯವೂ ಕೂಡ, ನ= ಇರುವುದಿಲ್ಲ.

**ಅನುವಾದ–** ಯಾವ ಕಾರಣದಿಂದ 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯಲ್ಲಿರುವ ನಿರ್ಗುಣಪದವನ್ನು 'ಅನಿರ್ಗುಣಃ' ಎಂದು ಪದಚ್ಛೇದ ಮಾಡಿದರೋ, ಆ ಕಾರಣದಿಂದ ಬ್ರಹ್ಮನಲ್ಲಿ ನಿರ್ಗುಣತ್ವವನ್ನು ಸಮರ್ಥನೆ ಮಾಡುವಂತಹ ವಾಕ್ಯವೇ ಇಲ್ಲವೆಂದು ಸಿದ್ಧವಾಯಿತು. ಗುಣಗಳನ್ನು ನಿರಾಕರಿಸುವಂತಹ ಬೇರಾವ ವಾಕ್ಯಗಳೂ ಕೂಡ ಇರುವುದಿಲ್ಲ. ಆದ್ದರಿಂದ ಪರಮಾತ್ಮನಲ್ಲಿರುವ ಗುಣಗಳಿಗೆ ಮಿಥ್ಯಾತ್ವವನ್ನು ಅದ್ವೈತಿಯಾದ ನಿನ್ನಿಂದ ಸಮರ್ಥಿಸಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ಫಲಿತಮಾಹ – ಏವಂಚೇತಿ ॥ ಅನಿರ್ಗುಣತ್ವಾರ್ಥಾ ವಾಗಿತಿ ಶೇಷಃ । ಕ್ಷಿಪೇನ್ನಿರಾಕುರ್ಯಾತ್ । ಅಘಟಂ ಭೂತಲಮಿತ್ಯತ್ರ ಘಟಸ್ಯೇವ ಅನಿರ್ಗುಣಪದೇನ ನಿರ್ಗುಣತ್ವಸ್ಯೈವ ನಿಷೇಧಾದಿತಿ ಭಾವಃ । ಅತಃ ನಿರ್ಗುಣತ್ವೋಕ್ತ್ಯಭಾವಾತ್ । ನಿರ್ಗುಣೋಕ್ತಿ-ಬಲಾದೇವ ಹಿ ಶ್ರೌತಾನಾಂ ಗುಣಾನಾಂ ಮಿಥ್ಯಾತ್ವಂ ಪರ ಆಶಾಸ್ತೇ ತಸ್ಯೈವ ಮೂಲೇ ಕುಠಾರನ್ಯಾಯೇನ ಛಿನ್ನತ್ವಾನ್ನ ಪರಸ್ಯಾತ್ರ ಪ್ರತ್ಯಾಶಾ । ನ ಕೇವಲಮೇತಾವನ್ಮಾತ್ರಮ್ ಕಿಂತು ಅನಿರ್ಗುಣ ಇತ್ಯುಕ್ತೇ ತ್ವದಭಿಮತನಿರ್ಗುಣತ್ವಸ್ಯೈವ ಸಾಕ್ಷಾತ್ಪ್ರತಿಷೇಧಾನ್ನಿರ್ಗುಣತ್ವೇಽಪ್ಯಾಶಾ ನ ಕಾರ್ಯೇತಿ ಭಾವಃ ॥ ೫೭೮ ॥

**ವಿವರಣೆ–** ಹಿಂದಿನ ಶ್ಲೋಕದಿಂದ ಏನು ಹೇಳಿದಂತಾಯಿತು ಎಂಬುದನ್ನು ಸ್ವತಃ ತಾವೇ ಸಾರರೂಪದಲ್ಲಿ ಸಂಗ್ರಹಿಸುತ್ತಿದ್ದಾರೆ -

'ಅಘಟಂ ಭೂತಲಂ' ಎಂದು ಹೇಳಿದಾಗ ಭೂತಲದಲ್ಲಿ ಘಟವನ್ನು ನಿಷೇಧ ಮಾಡಿದಂತಾಗುತ್ತದೆ. ಅದರಂತೆ, 'ಸಾಕ್ಷೀ ಚೇತಾ ಕೇವಲೋ ಅನಿರ್ಗುಣಶ್ಚ' ಎಂಬಲ್ಲಿರುವ ಅನಿರ್ಗುಣ ಪದದಿಂದ ನಿರ್ಗುಣತ್ವವನ್ನು ನಿಷೇಧ ಮಾಡಿದಂತಾಗುತ್ತದೆ ಎಂಬುದು ಒಟ್ಟು ಅಭಿಪ್ರಾಯ.

ಅದ್ವೈತಿಯು ಕೇವಲೋ ನಿರ್ಗುಣಶ್ಚ ಎಂದು ಪದವಿಭಾಗವನ್ನು ಆಶ್ರಯಿಸಿ ಬ್ರಹ್ಮನಲ್ಲಿರುವ ಗುಣಗಳಿಗೆಲ್ಲಾ ಮಿಥ್ಯಾತ್ವವನ್ನು ಸಾಧಿಸುತ್ತಾನೆ. ಆದರೆ, ಈ ಶ್ರುತಿಯಲ್ಲಿ ನಿರ್ಗುಣಪದವೇ ಇಲ್ಲವೆಂದು 'ಮೂಲೇಕುಠಾರನ್ಯಾಯವನ್ನು' ಹಿಂದೆ ಹೇಳಿದ್ದರಿಂದ ಅದ್ವೈತಿಯ ಅಪೇಕ್ಷೆಯನ್ನು ಖಂಡಿಸಿದಂತಾಯಿತು.

ಅದ್ವೈತಿಗೆ ಅಪೇಕ್ಷಿತವಾದ ಗುಣಮಿಥ್ಯಾತ್ವಕ್ಕೆ ಈ ಶ್ರುತಿಯು ಸಾಧಕವಾಗುವುದಿಲ್ಲ ಎಂಬುದಷ್ಟೇ ಅಲ್ಲ, ನಿಷೇಧ ಮಾಡುತ್ತಿರುವುದರಿಂದ, ಬ್ರಹ್ಮನ ನಿರ್ಗುಣತ್ವ

ವಿಷಯದಲ್ಲಿಯೂ ಕೂಡ ಆಸೆಯನ್ನು ಅದ್ವೈತಿಯಾದವನು ಹೊಂದಬಾರದು ಎಂಬುದು ಶ್ಲೋಕದ ಅಭಿಪ್ರಾಯ.

**ತದುಕ್ತಗುಣಸತ್ಯತ್ವನಿತ್ಯತ್ವೇ ನೌಪಚಾರಿಕೇ ॥ ೫೭೯ ॥**

**ಅರ್ಥ–** ತದುಕ್ತಗುಣಸತ್ಯತ್ವನಿತ್ಯತ್ವೇ = ಶ್ರುತಿಯಲ್ಲಿ ಹೇಳಲ್ಪಟ್ಟ ಗುಣಸತ್ಯತ್ವ ಹಾಗೂ ಗುಣನಿತ್ಯತ್ವಗಳು, ನ ಔಪಚಾರಿಕೇ = ಔಪಚಾರಿಕಗಳಲ್ಲ.

**ಅನುವಾದ–** ಆದ್ದರಿಂದ ವೇದದಲ್ಲಿ ಪ್ರತಿಪಾದಿತವಾದ ಗುಣಸತ್ಯತ್ವ ಹಾಗೂ ಗುಣನಿತ್ಯತ್ವಗಳು ಅಪ್ರಧಾನಗಳಲ್ಲ. ಎಂದರೆ, ವ್ಯಾವಹಾರಿಕ ಸತ್ಯವೆಂದಾಗಲೀ, ದೀರ್ಘಕಾಲದಲ್ಲಿರುವವುಗಳು ಎಂದಾಗಲೀ ಕೂಡುವುದಿಲ್ಲ.

**ಭಾವವಿಲಾಸಿನೀ– ತಚ್ಛ್ರುತಗುಣಸತ್ಯತ್ವನಿತ್ಯತ್ವಯೋಃ ವ್ಯಾವಹಾರಿಕಸತ್ಯತ್ವ- ಬಹುಕಾಲಾವಸ್ಥಾಯಿತ್ವರೂಪ ಸಂಕೋಚಕಾರಣನಿರ್ಗುಣೋಕ್ತ್ಯಭಾವಾತ್ ॥ ೫೭೯ ॥**

**ವಿವರಣೆ–** ಶ್ರುತಿಯಲ್ಲಿ ಗುಣಸತ್ಯತ್ವ ಹಾಗೂ ಗುಣನಿತ್ಯತ್ವಗಳನ್ನು ಹೇಳಲಾಗಿದೆ. ಆದರೆ, ಬ್ರಹ್ಮನಲ್ಲಿರುವ ಗುಣಗಳು ಸತ್ಯವಾಗಿವೆ ಎಂದರೆ, ವ್ಯಾವಹಾರಿಕವಾಗಿ ಸತ್ಯವಾಗಿವೆ ಎಂದಷ್ಟೇ ಅಭಿಪ್ರಾಯ. ನಿತ್ಯವಾದ ಗುಣಗಳಿವೆ ಎಂದರೆ, ಬಹುಕಾಲದ ತನಕ ಇರುವ ಗುಣಗಳು ಎಂದಷ್ಟೇ ಅಭಿಪ್ರಾಯ. ಹೀಗೆ ಸತ್ಯ ಹಾಗೂ ನಿತ್ಯ ಶಬ್ದಗಳಿಗೆ ಅರ್ಥಸಂಕೋಚ ಮಾಡಬೇಕೆಂದು ಅದ್ವೈತಿಗಳು ಹೇಳುತ್ತಾರೆ.

ಅದನ್ನು ಇಲ್ಲಿ ನಿರಾಕರಿಸುತ್ತಿದ್ದಾರೆ. ಶ್ರುತಿಯಲ್ಲಿರುವ ಗುಣಸತ್ಯತ್ವ ಹಾಗೂ ಗುಣನಿತ್ಯತ್ವಗಳು ಸರ್ವಥಾ ಔಪಚಾರಿಕಗಳಾಗುವುದಿಲ್ಲ. ಒಂದು ವೇಳೆ ನಿರ್ಗುಣತ್ವ ಪ್ರತಿಪಾದಕವಾದ ಅಥವಾ ಗುಣಗಳ ಅನಿತ್ಯತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗಳಿದ್ದಲ್ಲಿ ಇವುಗಳಿಗೆ ಗೌಣಾರ್ಥವನ್ನು ಮಾಡಬಹುದಾಗಿದ್ದಿತ್ತು. ಅಂತಹ ಯಾವುದೇ ಶ್ರುತಿಗಳಿಲ್ಲದ ಕಾರಣ ಗುಣಸತ್ಯತ್ವ ಹಾಗೂ ಗುಣನಿತ್ಯತ್ವಗಳನ್ನು ಹೇಳುವ ಶ್ರುತಿಗಳು ಮುಖ್ಯಾರ್ಥವನ್ನೇ ಪ್ರತಿಪಾದಿಸುತ್ತವೆಂಬುದು ಸಿದ್ಧವಾಗುತ್ತದೆ.

**ನೇಹ ನಾನೇತ್ಯಾದಿವಾಕ್ಯಮಪಿ ತಸ್ಮಾನ್ನ ತಾನ್ ಕ್ಷಿಪೇತ್ ।**
**ನಿತ್ಯಂ ಸತ್ಯಂ ಪರಂ ಬ್ರಹ್ಮ ಕಿಂ ಶೂನ್ಯತ್ವಶ್ರುತಿಃ ಕ್ಷಿಪೇತ್ ॥ ೫೮೦ ॥**

**ಅರ್ಥ–** ತಸ್ಮಾತ್ = ಗುಣಸತ್ಯತ್ವ ಹಾಗೂ ಗುಣನಿತ್ಯತ್ವಗಳು ಶ್ರುತಿಸಿದ್ಧವಾದ್ದರಿಂದಲೇ, ನೇಹ ನಾನೇತ್ಯಾದಿವಾಕ್ಯಂ ಅಪಿ = 'ನೇಹ ನಾನಾಸ್ತಿ ಕಿಂಚನ' ಇವೇ ಮೊದಲಾದ ವಾಕ್ಯಗಳೂ ಸಹ, ತಾನ್ = ಗುಣಗಳನ್ನು, ನ ಕ್ಷಿಪೇತ್ = ಬಾಧಿಸಲಾರವು, ನಿತ್ಯಂ = ನಿತ್ಯವೂ, ಸತ್ಯಂ = ಸತ್ಯವೂ ಆದ, ಪರಂಬ್ರಹ್ಮ = ಪರಬ್ರಹ್ಮನನ್ನು, ಶೂನ್ಯತ್ವಶ್ರುತಿಃ = ಶೂನ್ಯತ್ವವನ್ನು ಹೇಳುವ ಶ್ರುತಿಯು, ಕ್ಷಿಪೇತ್ ಕಿಂ = ಬಾಧಿಸುತ್ತದೇನು?

**ಅನುವಾದ–** ಶೂನ್ಯವನ್ನು ಪ್ರತಿಪಾದನೆ ಮಾಡುವ ಶ್ರುತಿವಾಕ್ಯವು ಸತ್ಯಸ್ವರೂಪನೂ, ನಿತ್ಯಸ್ವರೂಪನೂ ಆದ ಪರಬ್ರಹ್ಮನನ್ನು ಆಕ್ಷೇಪ ಮಾಡುತ್ತದೇನು? ಪರಮಾತ್ಮನು ಅನಿತ್ಯನಾಗಿದ್ದಾನೆಂದು ಹೇಳುತ್ತದೇನು? ಸರ್ವಥಾ ಇಲ್ಲ. ಅದರಂತೆ, ಪರಮಾತ್ಮನ ಗುಣಗಳು ಸತ್ಯವಾಗಿಯೂ, ನಿತ್ಯವಾಗಿಯೂ ಇರುವುದರಿಂದ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿವಾಕ್ಯವೂ ಕೂಡ ಈ ಗುಣಗಳನ್ನು ಸರ್ವಥಾ ನಿರಾಕರಿಸುವುದಿಲ್ಲ.

**ಭಾವವಿಲಾಸಿನೀ–** ಇದಾನೀಂ 'ನೇಹ ನಾನಾ' ಇತಿ ವಾಕ್ಯಬಲಾದಪಿ ಶ್ರೌತಭಗವದ್ಗುಣಾನಾಂ ಮಿಥ್ಯಾತ್ವಂ ನಾಶಾಸ್ಯಮಿತ್ಯಾಹ – **ನೇಹೇತಿ** ॥ ತಸ್ಮಾತ್ಸತ್ಯತ್ವನಿತ್ಯತ್ವಯೋಃ ಶ್ರೌತತ್ವಾತ್ । ತತ್ರ ದೃಷ್ಟಾಂತಮಾಹ – **ನಿತ್ಯಮಿತಿ** ॥ ಕಿಮಾಕ್ಷೇಪೇ ॥ ೫೮೦ ॥

**ವಿವರಣೆ–** ಇಲ್ಲಿಯ ತನಕ 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯನ್ನು ಎರಡು ಬಗೆಯಲ್ಲಿ ಪದಚ್ಛೇದ ಮಾಡುವ ಮೂಲಕ ವ್ಯಾಖ್ಯಾನ ಮಾಡಿದ್ದಾಯಿತು. ಪ್ರಕೃತ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತ್ಯರ್ಥವನ್ನು ವಿಚಾರ ಮಾಡಲು ಪ್ರಾರಂಭಿಸಿದ್ದಾರೆ.

ಪರಮಾತ್ಮನಲ್ಲಿರುವ ಗುಣಗಳು ಸತ್ಯವಾಗಿವೆ ಹಾಗೂ ನಿತ್ಯವಾಗಿವೆ ಎಂಬುದು ಶ್ರುತಿಸಿದ್ಧವಾದ ವಿಚಾರ. ಇದನ್ನು ಅದ್ವೈತಿಗಳು 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯ ಆಧಾರದಿಂದ ನಿರಾಕರಿಸಲು ಪ್ರಯತ್ನಿಸುತ್ತಿದ್ದಾರೆ. ಬ್ರಹ್ಮನಲ್ಲಿ ಯಾವುದೇ ಧರ್ಮಗಳು ಹಾಗೂ ಗುಣಗಳು ಇರುವುದಿಲ್ಲವೆಂದು ಈ ಶ್ರುತಿಯ ಮೇಲ್ನೋಟದ ಅರ್ಥವನ್ನು ವಿವಕ್ಷಿಸಿ ಪರಮಾತ್ಮನಲ್ಲಿ ಗುಣಗಳನ್ನು ಪ್ರತಿಪಾದಿಸುವ ಶ್ರುತಿಗೆ ಮಿಥ್ಯಾಭೂತವಾದ ಗುಣಪ್ರತಿಪಾದನೆಯಲ್ಲಿಯೇ ತಾತ್ಪರ್ಯವೆಂದು ಅನಿವಾರ್ಯವಾಗಿ ವ್ಯಾಖ್ಯಾನಿಸಬೇಕೆಂಬುದು ಅದ್ವೈತಿಗಳ ಅಭಿಪ್ರಾಯ. ಅದ್ವೈತಿಗಳು ಹೇಳುವ ವ್ಯಾಖ್ಯಾನವು ಅಸಾಧುವಾಗಿದೆ.

'ಸತ್ಯಂ ಜ್ಞಾನಮನಂತಂ ಬ್ರಹ್ಮ', 'ನಿತ್ಯೋ ನಿತ್ಯಾನಾಂ', 'ಚೇತನಶ್ಚೇತನಾನಾಂ' ಇವೇ ಮೊದಲಾದ ಶ್ರುತಿಗಳು ಪರಮಾತ್ಮನನ್ನು ಸತ್ಯಸ್ವರೂಪನೆಂದು ಹಾಗೂ ನಿತ್ಯಸ್ವರೂಪನೆಂದು ಪ್ರತಿಪಾದಿಸುತ್ತಿವೆ. ಇದರಂತೆ, ಇನ್ನೂ ಸಾವಿರಾರು ವಾಕ್ಯಗಳು ಪರಮಾತ್ಮನ ಸತ್ಯತ್ವ ನಿತ್ಯತ್ವ ವಿಷಯಗಳಲ್ಲಿ ಆಧಾರವಾಗಿವೆ. ಹೀಗೆ ಬಹುಪ್ರಮಾಣಗಳಿಂದ ನಿಶ್ಚಯಿಸಲ್ಪಟ್ಟ ಪರಮಾತ್ಮನ ಸತ್ಯತ್ವ ಹಾಗೂ ನಿತ್ಯತ್ವಗಳನ್ನು 'ಶೂನ್ಯಂ ಬ್ರಹ್ಮ' ಎಂಬ ಶಕ್ತಿಹೀನವಾದ ಒಂದೇ ಶ್ರುತಿಯು ಬಾಧಿಸಲು ಸಮರ್ಥವಾಗುತ್ತದೇನು? ಯಾವ ಪ್ರಮಾಣಗಳ ಆಧಾರವೂ ಇಲ್ಲದ 'ಶೂನ್ಯಂ ಬ್ರಹ್ಮ' ಎಂಬ ಶ್ರುತಿಯು ಬಹುಪ್ರಮಾಣ ಬೆಂಬಲವುಳ್ಳ ಸತ್ಯತ್ವಾದಿಪ್ರತಿಪಾದಕವಾದ ಶ್ರುತಿಗಳನ್ನು ಬಾಧಿಸಲು ಅಸಮರ್ಥವಾಗುತ್ತದೆ. ಈ ವಿಷಯವನ್ನು ಅದ್ವೈತಿಗಳೇ ಹೇಳಿದ್ದಾರೆ. ಬೌದ್ಧಮತವನ್ನು ನಿರಾಕರಣೆ ಮಾಡಲು

ಹೊರಡುವ ಅದ್ವೈತಿಗಳು ಬ್ರಹ್ಮನು ಶೂನ್ಯಸ್ವರೂಪನಲ್ಲ, ಹೊರತು ಸತ್ಯ-ಸ್ವರೂಪನಾಗಿದ್ದಾನೆಂದು ತಮ್ಮ ಗ್ರಂಥಗಳಲ್ಲಿ ಹೇಳಿಕೊಂಡಿದ್ದಾರೆ. ಅದರಂತೆ ಪ್ರಕೃತದಲ್ಲಿಯೂ ಪರಮಾತ್ಮನಲ್ಲಿರುವ ಗುಣಗಳಿಗೆ ಸತ್ಯತ್ವವನ್ನು ಹಾಗೂ ನಿತ್ಯತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗಳು ಬಹಳ ಇರುತ್ತವೆ. ಆದರೆ, ನಿರ್ಗುಣತ್ವವನ್ನಾಗಲೀ, ಅನಿತ್ಯಗುಣಸ್ವರೂಪವನ್ನಾಗಲೀ ಪ್ರತಿಪಾದನೆ ಮಾಡುವ ಶ್ರುತಿಗಳು ಯಾವುದೂ ಇರುವುದಿಲ್ಲ. ಆಪಾತತಃ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯಿದ್ದರೂ ಸಹ, ಈ ಅರ್ಥವನ್ನು ಪ್ರತಿಪಾದಿಸಿದ ವಿಷಯದಲ್ಲಿ ಶಕ್ತಿಹೀನವಾಗಿದೆ.

'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು ಬ್ರಹ್ಮನಲ್ಲಿರುವ ಗುಣಗಳನ್ನು ನಿಷೇಧ ಮಾಡಲು ಹೊರಟರೆ ಅಪ್ರಮಾಣವಾಗುತ್ತದೆ. ಆದರೆ, ನಾವು ಹೇಳುವಂತೆ ಅರ್ಥವನ್ನು ಹೇಳಿದರೆ, ಪ್ರಮಾಣವಾಗುತ್ತದೆ. ಪ್ರಕೃತ ಅದ್ವೈತಿಗಳು ಮಾಡುವ ವ್ಯಾಖ್ಯಾನವನ್ನು ವಿವಕ್ಷಿಸಿ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಿದ್ದಾರೆಂದು ತಿಳಿಯಬೇಕು.

**ಕಿಂಚ ಬ್ರಹ್ಮಣಿ ತದ್ವಾಕ್ಯಂ ನಾನಾಭೂತಂ ನಿಷೇಧತಿ ॥ ೫೮೧ ॥**

**ಅರ್ಥ–** ಕಿಂಚ = ಮತ್ತು, ತದ್ವಾಕ್ಯಂ = 'ನೇಹ ನಾನಾಸ್ತಿ' ಎಂಬ ವಾಕ್ಯವು, ಬ್ರಹ್ಮಣಿ = ಬ್ರಹ್ಮನಲ್ಲಿ, ನಾನಾಭೂತಂ = ಭೇದವನ್ನು, ನಿಷೇಧತಿ = ನಿಷೇಧ ಮಾಡುತ್ತಿದೆ.

**ಅನುವಾದ– 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು ಪರಮಾತ್ಮನಲ್ಲಿ ಯಾವುದೇ ಗುಣಗಳಿಲ್ಲವೆಂದು ಪ್ರತಿಪಾದನೆ ಮಾಡುತ್ತಿಲ್ಲ. ಹೊರತಾಗಿ, ಪರಮಾತ್ಮನಲ್ಲಿರುವ ಗುಣಗಳಿಗೆ ಭೇದವನ್ನಷ್ಟೇ ನಿರಾಕರಣೆ ಮಾಡುತ್ತಿದೆ.**

**ಭಾವವಿಲಾಸಿನೀ–**ಪ್ರಕಾರಾಂತರೇಣಾಪಿ 'ನೇಹ ನಾನಾ' ಇತಿ ವಾಕ್ಯಂ ನ ಗುಣನಿಷೇಧಕಮಿತ್ಯಾಹ **– ಕಿಂಚೇತಿ** ॥ ೫೮೧ ॥

**ವಿವರಣೆ–** ಮತ್ತೊಂದು ಕ್ರಮದಲ್ಲಿ 'ನೇಹ ನಾನಾಸ್ತಿ ಕಿಂಚನ' ಎಂಬ ವಾಕ್ಯಕ್ಕೆ ಗುಣನಿಷೇಧಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ಪ್ರತಿಪಾದನೆ ಮಾಡುತ್ತಿದ್ದಾರೆ.

'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು ಪರಮಾತ್ಮನಲ್ಲಿರುವ ಗುಣಗಳಿಗೆ ಭೇದವನ್ನು ನಿಷೇಧ ಮಾಡುತ್ತಿರುವ ಕಾರಣದಿಂದ ಅದ್ವೈತಿಗಳು ಹೇಳುವಂತೆ ಗುಣನಿಷೇಧದಲ್ಲಿ ತಾತ್ಪರ್ಯವಿಲ್ಲವೆಂಬುದು ದೃಢವಾಗುತ್ತದೆ.

**ಅಭಿನ್ನಸುಗುಣಸ್ತೋಮಮನ್ವಜಾನಾದ್ಧಿ ಸಾ ಸ್ಫುಟಮ್ ।**
**ನ ಚೇದ್ ಬ್ರಹ್ಮಣಿ ಜೀವೈಕ್ಯಮಪಿ ಶಕ್ಯಮಪೋಹಿತುಮ್ ॥ ೫೮೨ ॥**

**ಅರ್ಥ–** ಸಾ = ನೇಹ ನಾನಾಸ್ತಿ ಎಂಬ ಶ್ರುತಿಯು, ಅಭಿನ್ನಸುಗುಣಸ್ತೋಮಮ್ = ಅಭಿನ್ನವಾದ ಕಲ್ಯಾಣಗುಣಗಳ ಸಮುದಾಯವನ್ನು ಸ್ಫುಟಮ್ = ಸ್ಪಷ್ಟವಾಗಿ, ಅನ್ವಜಾನಾತ್ ಹಿ= ಅನುಮೋದಿಸುತ್ತಿದೆಯಷ್ಟೇ, ನ ಚೇದ್ = ಇದನ್ನು ಒಪ್ಪದಿದ್ದರೆ, ಬ್ರಹ್ಮಣಿ = ಬ್ರಹ್ಮನಲ್ಲಿ, ಜೀವೈಕ್ಯಂ ಅಪಿ = ಅದ್ವೈತಿಗಳು ಹೇಳುವ ಜೀವೈಕ್ಯವನ್ನು ಕೂಡ, ಅಪೋಹಿತುಮ್ = ನಿರಾಕರಿಸಲು, ಶಕ್ಯಮ್ = ಸಾಧ್ಯವಾಗುತ್ತದೆ.

**ಅನುವಾದ–** 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು ಪರಮಾತ್ಮನಿಗೂ ಅವನ ಗುಣಗಳಿಗೂ ಭೇದವನ್ನಷ್ಟೇ ನಿಷೇಧ ಮಾಡುತ್ತಿದೆ. ಆದ್ದರಿಂದ ಪರಮಾತ್ಮನ ಸ್ವರೂಪಭೂತವಾಗಿರುವ, ಅನಂತವಾಗಿರುವ, ದೋಷಸಂಪರ್ಕವಿಲ್ಲದ, ಕಲ್ಯಾಣಗುಣಗಳ ರಾಶಿಯನ್ನು ಪರಮಾತ್ಮನಲ್ಲಿ ಅನುಮೋದಿಸುತ್ತಿದೆ. ಹೀಗೆ ಒಪ್ಪದಿದ್ದರೆ, 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು ಎಲ್ಲ ಧರ್ಮಗಳನ್ನೂ ನಿಷೇಧ ಮಾಡುತ್ತದೆ ಎಂದು ಹೇಳಬೇಕು. ಆವಾಗ ಅದ್ವೈತಿಗಳಿಗೆ ಅಭಿಮತವಾದ ಐಕ್ಯವನ್ನೂ ಕೂಡ ಬ್ರಹ್ಮನಲ್ಲಿ ನಿರಾಕರಿಸಿದಂತಾಗುತ್ತದೆ. ಇದರಿಂದ ಜೀವಬ್ರಹ್ಮರ ಐಕ್ಯನಿರಾಕರಣೆಗೂ ಈ ಶ್ರುತಿವಾಕ್ಯವೇ ಪ್ರಮಾಣವಾಗುತ್ತದೆ.

**ಭಾವವಿಲಾಸಿನೀ–** ವಿಪಕ್ಷೇ ಬಾಧಕಂ ಚಾಹ – **ನಚೇದಿತಿ ॥** ಅಪೋಹಿತುಂ ನಿರಾಕರ್ತುಂ ಶಕ್ಯಮಿತಿ ಯೋಜನಾ । ಐಕ್ಯಸ್ಯಾಪಿ ಬ್ರಹ್ಮಧರ್ಮತ್ವಾವಿಶೇಷೇಣ ಬ್ರಹ್ಮಣಿ ಕಿಂಚನ ನಾಸ್ತೀತಿ ವಾಕ್ಯಸ್ಯ ಪಕ್ಷಪಾತಾಯೋಗಾತ್ ॥ ೫೮೨ ॥

**ವಿವರಣೆ–** ಅದ್ವೈತಿಗಳು ಹೇಳುವಂತೆ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು ಬ್ರಹ್ಮನಲ್ಲಿರುವ ಸಕಲ ಧರ್ಮಗಳನ್ನೂ ನಿಷೇಧ ಮಾಡುತ್ತದೆ. ಆವಾಗ ಜೀವಬ್ರಹ್ಮರ ಐಕ್ಯವೂ ಕೂಡ ಬ್ರಹ್ಮನ ಧರ್ಮವೇ ಆಗಿರುವ ಕಾರಣ ಐಕ್ಯವನ್ನೂ ಕೂಡ ನಿರಾಕರಣೆ ಮಾಡುತ್ತದೆಂದು ಹೇಳಿದಂತಾಯಿತು. ಆವಾಗ ಅದ್ವೈತ ಸಿದ್ಧಾಂತದ ಮೂಲಕ್ಕೇ ಈ ಶ್ರುತಿಯು ಕುಠಾರವಾಗುತ್ತದೆ. ಆದ್ದರಿಂದ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು ಬ್ರಹ್ಮನಲ್ಲಿರುವ ಗುಣಗಳಿಗೆ ಭೇದವನ್ನಷ್ಟೇ ನಿರಾಕರಣೆ ಮಾಡುತ್ತಾ ಸಕಲಕಲ್ಯಾಣಗುಣಗಳೆಲ್ಲವೂ ಬ್ರಹ್ಮಸ್ವರೂಪಭೂತವಾಗಿವೆ ಎಂದು ಸಾಧಿಸಲು ಹೊರಟಿದೆ ಎಂದೇ ವ್ಯಾಖ್ಯಾನಿಸಬೇಕು.

**ಅಭಿನ್ನಧರ್ಮಧರ್ಮಿತ್ವಮಪಿ ಶಕ್ಯಂ ತವೈಕ್ಯವತ್ ।**
**ಏಕಶೇಷೋಽಪಿ ತದ್ವನ್ನ ಲೋಕಮರ್ಯಾದಯಾಪಿ ನ ॥ ೫೮೩ ॥**

**ಅರ್ಥ–** ಅಭಿನ್ನಧರ್ಮಧರ್ಮಿತ್ವಮ್ = ಅಭಿನ್ನವಾದ ಧರ್ಮಗಳಿಗೆ ಧರ್ಮಿಭಾವವು, ತವ = ನಿನ್ನ, ಐಕ್ಯವತ್ = ಬ್ರಹ್ಮನ ಐಕ್ಯದಂತೆ, ಶಕ್ಯಂ = ಸಂಭವಿಸುತ್ತದೆ, ಏಕಶೇಷಃ = ಧರ್ಮಧರ್ಮಿಗಳಲ್ಲಿ ಒಂದು ಮಾತ್ರ ಇರಲಿ ಎಂಬ ಪ್ರಸಂಗವು ವಾದವು, ತದ್ವತ್ =

ಐಕ್ಯದಂತೆ, ನ = ಇಲ್ಲ, ಲೋಕಮರ್ಯಾದಯಾಪಿ = ಲೋಕದ ದೃಷ್ಟಿಯಿಂದಲೂ, ನ = ವಿಶೇಷಪ್ರಸಂಗವಿಲ್ಲ.

**ಅನುವಾದ–** ಪರಬ್ರಹ್ಮನಲ್ಲಿರುವ ಸಕಲಗುಣಗಳು ಅವನ ಸ್ವರೂಪವಾದರೆ, ಧರ್ಮ-ಧರ್ಮಿಭಾವವು ಹೇಗೆ ಕೂಡುತ್ತದೆ? ಎಂದು ಪ್ರಶ್ನಿಸಬಾರದು. ಅದ್ವೈತಮತದಲ್ಲಿ ಪರಬ್ರಹ್ಮನಿಗೂ ಐಕ್ಯಕ್ಕೂ ಧರ್ಮ-ಧರ್ಮಿಭಾವ ಕೂಡುವಂತೆ ಪರಬ್ರಹ್ಮನ ಗುಣಗಳಿಗೂ ಪರಬ್ರಹ್ಮನಿಗೂ ಧರ್ಮ-ಧರ್ಮಿಭಾವವನ್ನು ಹೇಳಬಹುದು. ಮತ್ತು ಧರ್ಮ-ಧರ್ಮಿಗಳಲ್ಲಿ ಧರ್ಮಿಭೂತನಾದ ಬ್ರಹ್ಮನು ಮಾತ್ರ ಉಳಿಯಲಿ. ಧರ್ಮಗಳು ಇರುವುದು ಬೇಡವೆಂದು ಹೇಳುವುದೂ ಸಹ ತಪ್ಪು. ಪರಬ್ರಹ್ಮಸ್ವರೂಪವಾದ ಐಕ್ಯವು ಪರಬ್ರಹ್ಮನಿಂದ ಅಭಿನ್ನವಾದರೂ ಹೇಗೆ ಏಕಶೇಷವಿಲ್ಲವೋ, ಘಟಘಟತ್ವಗಳಿಗೆ ಐಕ್ಯವಿದ್ದರೂ ಹೇಗೆ ಏಕಶೇಷಪ್ರಸಂಗವಿಲ್ಲವೋ ಅದರಂತೆ ಅನಂತಗುಣಗಳು ಬ್ರಹ್ಮಸ್ವರೂಪವಾಗಿದ್ದರೂ ಅವನಲ್ಲಿ ಇದೆಯೆಂದು ಒಪ್ಪಲು ಯಾವ ತೊಂದರೆಯೂ ಇಲ್ಲ. ಅಂದರೆ ಧರ್ಮಧರ್ಮಿಗಳಿಗೆ ಅಭೇದವಿದ್ದರೂ ಏಕಶೇಷ ಪ್ರಸಂಗವಿಲ್ಲ.

**ಭಾವವಿಲಾಸಿನೀ–** ಅಭಿನ್ನಗುಣಾನಾಂ ಧರ್ಮಧರ್ಮಿಭಾವೋ ಬ್ರಹ್ಮಾಭಿನ್ನೈಕ್ಯಸ್ಯ ಬ್ರಹ್ಮಣ ಐಕ್ಯಮಿತಿ ತ್ವಯೈವ ಸದಾ ವ್ಯವಹ್ರಿಯಮಾಣಧರ್ಮಧರ್ಮಿಭಾವವದ್ಘಟತ ಇತ್ಯಾಹ – **ಅಭಿನ್ನೇತಿ** ॥ ಏಕಶೇಷಃ ಧರ್ಮಾಃ ನ ಸನ್ತಿ ಬ್ರಹ್ಮೈವಾಸ್ತೀತ್ಯೇಕಸ್ಯೈವಾವಶೇಷಃ । ತದ್ವದೈಕ್ಯವತ್ । ಅಭೇದೇಽಪಿ ಯಥಾ ತವೈಕ್ಯಮಪ್ಯಸ್ತಿ ಬ್ರಹ್ಮಾಪ್ಯಸ್ತಿ ತಥಾಸ್ಮಾಕಮಪೀತಿ ಭಾವಃ । ಲೋಕಮರ್ಯಾದಯಾ ಘಟಸ್ಯ ಘಟತ್ವಾದಿತದ್ಧರ್ಮಾಣಾಂ ಚಾಭೇದೇಽಪಿ ಏಕಶೇಷಾಭಾವರೂಪಯಾ । ಧರ್ಮಧರ್ಮಿಣೋರಭೇದಸ್ಯ ಭೇದಾಭೇದವಾದಿನಾ ತ್ವಯಾಪ್ಯಂಗೀಕಾರಾತ್ ॥ ೫೮೩ ॥

**ವಿವರಣೆ–** **ಅದ್ವೈತಿಗಳು** - ಬ್ರಹ್ಮನಿಗೂ ಅವನ ಗುಣಗಳಿಗೂ ಐಕ್ಯವನ್ನು ಒಪ್ಪುತ್ತಿದ್ದೀರಿ. ಹಾಗಾದಲ್ಲಿ ಬ್ರಹ್ಮ ಬೇರೆ ಅಲ್ಲ. ಅವನ ಗುಣಗಳು ಬೇರೆಯಲ್ಲ ಎಂದಂತಾಯಿತು. ಹೀಗೆ ಹೇಳಿದಾಗ ಬ್ರಹ್ಮನಲ್ಲಿ ಗುಣಗಳಿವೆ ಎಂಬ ಆಧಾರಾಧೇಯಭಾವ ವ್ಯವಹಾರವನ್ನು ಹೇಗೆ ಹೇಳುತ್ತೀರಿ? ಎಲ್ಲಿ ಆಧಾರಾಧೇಯಭಾವವಿರುತ್ತದೋ, ಅಲ್ಲಿ ಭೇದವಿದ್ದೇ ಇರುತ್ತದೆ. ಉದಾಹರಣೆ. ಭೂತಲದಲ್ಲಿ ಘಟವಿದೆ ಎಂದು ಹೇಳಿದಾಗ ಭೂತಲಕ್ಕೂ, ಘಟಕ್ಕೂ ಭೇದವಿರುವುದು ಸರ್ವಾಂಗೀಕೃತವಾದ ವಿಚಾರ. ಅದರಂತೆ ಬ್ರಹ್ಮನಲ್ಲಿ ಧರ್ಮಗಳಿವೆಯೆಂದು ವ್ಯವಹಾರ ಮಾಡುವುದಾದರೆ, ಬ್ರಹ್ಮನಿಗೂ ಅವನ ಧರ್ಮಗಳಿಗೂ ಭೇದವಿದೆಯೆಂದು ಸಿದ್ಧವಾಯಿತಲ್ಲವೇ? ಹೀಗಿರುವಾಗ ಅಭೇದವನ್ನು ಹೇಗೆ ಹೇಳುತ್ತೀರಿ?

**ತತ್ವವಾದಿಗಳು** - ಅದ್ವೈತಿಗಳಾದ ನೀವೂ ಸಹ ಐಕ್ಯವನ್ನು ಬ್ರಹ್ಮಸ್ವರೂಪವೆನ್ನುತ್ತೀರಿ? ಮತ್ತು ಬ್ರಹ್ಮನಲ್ಲಿ ಐಕ್ಯವೆಂಬ ಧರ್ಮವಿದೆ ಎಂದು ವ್ಯವಹಾರವನ್ನೂ ಕೂಡ ಮಾಡುತ್ತೀರಿ.

ಐಕ್ಯವು ಬ್ರಹ್ಮಸ್ವರೂಪವಾದ ಮೇಲೆ, ಬ್ರಹ್ಮನಲ್ಲಿ ಐಕ್ಯವಿದೆಯೆಂದು ಹೇಗೆ ವ್ಯವಹರಿಸುತ್ತೀರೋ, ಅದರಂತೆ ನಾವೂ ಸಹ ಗುಣಗಳೆಲ್ಲವೂ ಬ್ರಹ್ಮನ ಸ್ವರೂಪಗಳೇ ಆಗಿದ್ದರೂ, ಬ್ರಹ್ಮನಲ್ಲಿ ಗುಣಗಳಿವೆ ಎಂಬ ವ್ಯವಹಾರವನ್ನು ಮಾಡುತ್ತೇವೆ.

**ಅದ್ವೈತಿಗಳು** - ಧರ್ಮ ಹಾಗೂ ಧರ್ಮಿಗಳಿಗೆ ಐಕ್ಯವನ್ನು ಒಪ್ಪಿದರೆ ಧರ್ಮಗಳು ಇರುವುದಿಲ್ಲ. ಧರ್ಮಿ ಮಾತ್ರ ಇರುತ್ತದೆ ಎಂದು ಹೇಳಿದಂತಾಗುತ್ತದೆ. ಆದ್ದರಿಂದ ಬ್ರಹ್ಮನಲ್ಲಿ ಗುಣಗಳು ಹೇಗೆ ಸಿದ್ಧವಾಗುತ್ತವೆ.

**ತತ್ವವಾದಿಗಳು** - ಐಕ್ಯವು ಬ್ರಹ್ಮನ ಸ್ವರೂಪವೆಂದು ನೀವು ಹೇಳುತ್ತೀರಿ. ಆದರೂ ಸಹ ಬ್ರಹ್ಮ ಮಾತ್ರ ಇರುತ್ತಾನೆ. ಐಕ್ಯವಿರುವುದಿಲ್ಲವೆಂದೇನು ನೀವು ಹೇಳುವುದಿಲ್ಲ. ಅದರಂತೆ ನಾವೂ ಸಹ ಗುಣಗಳೆಲ್ಲವೂ ಬ್ರಹ್ಮಸ್ವರೂಪವಾಗಿದ್ದರೂ ಧರ್ಮಿಗಿಂತ ಅತಿರಿಕ್ತವಾಗಿ ಇರುತ್ತವೆಂದು ಹೇಳುತ್ತೇವೆ.

ಲೋಕದಲ್ಲಿ ಘಟ ಹಾಗೂ ಘಟತ್ವಾದಿಧರ್ಮಗಳಿಗೆ ಅಭೇದವಿದ್ದರೂ ಧರ್ಮಧರ್ಮಿಗಳಲ್ಲಿ ಧರ್ಮಿ ಮಾತ್ರ ಉಳಿಯುತ್ತದೆಂದು ಅದ್ವೈತಿಗಳಾದ ನೀವೂ ಕೂಡ ಒಪ್ಪಿರುವುದಿಲ್ಲ. ಏಕೆಂದರೆ ಧರ್ಮಧರ್ಮಿಗಳಿಗೆ ಭೇದಾಭೇದವನ್ನು ಒಪ್ಪುವ ನೀವು ಅಭೇದವನ್ನೂ ಕೂಡ ಅಂಗೀಕರಿಸಿದ್ದೀರಿ. ಆದರೂ ಘಟದಲ್ಲಿ ಘಟತ್ವವಿದೆಯೆಂದು ಹೇಗೆ ಹೇಳುತ್ತೀರೋ, ಅದರಂತೆ ನಾವೂ ಸಹ ವಿಶೇಷದ ಬಲದಿಂದ ಬ್ರಹ್ಮ ಹಾಗೂ ಬ್ರಹ್ಮನ ಗುಣಗಳಿಗೆ ಅಭೇದವಿದ್ದರೂ ಧರ್ಮಧರ್ಮಿಭಾವವು ಯುಕ್ತವಾಗುತ್ತದೆ. ಧರ್ಮಿಮಾತ್ರ ಉಳಿಯುವಂತಹ ಸ್ಥಿತಿಯೂ ಸಹ ಇರುವುದಿಲ್ಲವೆಂದು ಹೇಳುತ್ತೇವೆ.

**ಪರ್ಯಾಯಶಬ್ದಾವಾಚ್ಯತ್ವಾದಜ್ಞಾತತ್ವಾದ್ ವಿವಾದತಃ ।**
**ಐಕ್ಯಂ ನ ಬ್ರಹ್ಮಮಾತ್ರಂ ತೇ ಗುಣ್ಯಭಿನ್ನಗುಣಸ್ತಥಾ ॥ ೫೮೪ ॥**

**ಅರ್ಥ–** ಪರ್ಯಾಯಶಬ್ದಾವಾಚ್ಯತ್ವಾತ್ = ಬ್ರಹ್ಮ ಹಾಗೂ ಐಕ್ಯಪ್ರತಿಪಾದಕ ಶಬ್ದಗಳು ಪರ್ಯಾಯಶಬ್ದಗಳಲ್ಲದ ಕಾರಣ, ಅಜ್ಞಾತತ್ವಾತ್= ಬ್ರಹ್ಮನು ಜ್ಞಾತನಾದರೂ ಐಕ್ಯವು ಜ್ಞಾತವಾಗದ ಕಾರಣ, ವಿವಾದತಃ = ಬ್ರಹ್ಮನ ಬಗ್ಗೆ ವಿವಾದವಿಲ್ಲದಿದ್ದರೂ ಐಕ್ಯದ ಬಗ್ಗೆ ವಿವಾದವಿರುವ ಕಾರಣ, ತೇ = ನಿನ್ನ, ಐಕ್ಯಂ = ಐಕ್ಯವು, ನ ಬ್ರಹ್ಮಮಾತ್ರಂ = ಕೇವಲ ಬ್ರಹ್ಮಸ್ವರೂಪವಾಗುವುದಿಲ್ಲ, ತತಃ = ಅದರಂತೆ, ಗುಣ್ಯಭಿನ್ನಗುಣಃ = ಗುಣಿಯಿಂದ ಅಭಿನ್ನನಾದ ಗುಣವೂ ಸಹ.

**ಅನುವಾದ–** ಐಕ್ಯ ಹಾಗೂ ಬ್ರಹ್ಮನಿಗೆ ಅಭೇದವಿದೆಯೆಂದು ಅದ್ವೈತಿಗಳು ಹೇಳುತ್ತಾರೆ.

ಇದು ತಪ್ಪು. 'ಘಟಃ ಕಲಶಃ' ಎಂಬುದು ಪರ್ಯಾಯಶಬ್ದಗಳಾದಂತೆ, 'ಐಕ್ಯಂ

ಬ್ರಹ್ಮ' ಎಂಬುದು ಪರ್ಯಾಯ ಶಬ್ದಗಳಲ್ಲ. ಮತ್ತು ಪರಬ್ರಹ್ಮನು ಜ್ಞಾತನಾದರೂ ಐಕ್ಯವು ಜ್ಞಾತವಾಗುವುದಿಲ್ಲ. ಪರಬ್ರಹ್ಮನ ವಿಷಯದಲ್ಲಿ ವಿವಾದವಿಲ್ಲದಿದ್ದರೂ, ಐಕ್ಯದ ವಿಷಯದಲ್ಲಿ ವಿವಾದವಿರುತ್ತದೆ. ಹೀಗೆ ಐಕ್ಯ ಹಾಗೂ ಬ್ರಹ್ಮರಲ್ಲಿ ಪರಸ್ಪರ ವಿರುದ್ಧ ಧರ್ಮವಿರುವ ಕಾರಣ ಏನಾದರೂ ವಿಶೇಷವನ್ನು ಒಪ್ಪಲೇಬೇಕು. ಅದರಂತೆ ಗುಣಿಯಿಂದ ಅಭಿನ್ನವಾದ ಗುಣವನ್ನು ನಾವೂ ಕೂಡ ಒಪ್ಪುತ್ತೇವೆ.

**ಭಾವವಿಲಾಸಿನೀ–** ಐಕ್ಯಸ್ಯ ಬ್ರಹ್ಮಮಾತ್ರತ್ವೈವ ನ ತದ್ಧರ್ಮತೇತಿ ವದತೋ ಬಾಧಕಾಂತರಂ ಚಾಹ **– ಪರ್ಯಾಯೇತಿ ॥** 'ಘಟಃ ಕರೀರಃ ಕಲಶಃ' ಇತಿವದ್ ಬ್ರಹ್ಮಣಸ್ತದೈಕ್ಯಸ್ಯ ಚ ಪರ್ಯಾಯಶಬ್ದ ವಾಚ್ಯತ್ವಾತ್ । ಪ್ರತ್ಯುತ ಐಕ್ಯಂ ಬ್ರಹ್ಮ ಚೇತ್ಯಪರ್ಯಾಯಶಬ್ದಾವಾಚ್ಯತ್ವಾತ್ । ನಹ್ಯೈಕ್ಯಾಭೇದ-ಶಬ್ದವದೈಕ್ಯಬ್ರಹ್ಮಶಬ್ದಾವಪಿ ಪರ್ಯಾಯೌ । ತನ್ಮಾತ್ರತ್ವೇ ತು ತದ್ವದೇವ ತದಪಿ ಸ್ಯಾದಿತಿ ಭಾವಃ । ಅಜ್ಞಾತತ್ವಾದ್ ಬ್ರಹ್ಮಣೋ ಜ್ಞಾತತ್ವೇಽಪ್ಯೈಕ್ಯಸ್ಯ ಅಜ್ಞಾತತ್ವಾಂಗೀಕಾರಾತ್ । ವಿವಾದತಃ ಬ್ರಹ್ಮಣ್ಯವಿವಾದೇಽಪಿ ಐಕ್ಯೇ ವಾದಿವಿವಾದಾತ್ ॥ ೫೮೪ ॥

**ವಿವರಣೆ–** ಅದ್ವೈತಿಗಳು - ಐಕ್ಯವನ್ನು ನಾವು ಬ್ರಹ್ಮಸ್ವರೂಪವೆಂದೇ ಹೇಳುತ್ತೇವೆ. ಐಕ್ಯ ಹಾಗೂ ಬ್ರಹ್ಮರಲ್ಲಿ ಏನೂ ವ್ಯತ್ಯಾಸವಿರುವುದಿಲ್ಲ. ಬ್ರಹ್ಮನ ಸ್ವರೂಪದಂತೆ ಐಕ್ಯವೂ ಆಗಿರುವುದರಿಂದ, ಇವುಗಳಿಗೆ ಧರ್ಮಧರ್ಮಿಭಾವವನ್ನಾಗಲೀ, ಭೇದವನ್ನಾಗಲೀ ಹೇಳುವ ಅವಶ್ಯಕತೆಯಿರುವುದಿಲ್ಲ.

ತತ್ವವಾದಿಗಳು - ಇದು ತಪ್ಪು. ಐಕ್ಯ ಹಾಗೂ ಬ್ರಹ್ಮನಿಗೆ ಏನೂ ವ್ಯತ್ಯಾಸವಿಲ್ಲದಿದ್ದರೆ ಪರ್ಯಾಯ ಶಬ್ದಗಳಿಂದ ಪ್ರತಿಪಾದ್ಯಗಳಾಗಬೇಕಾದೀತು. 'ಘಟಃ' 'ಕಲಶಃ' 'ಕರೀರಃ' ಇತ್ಯಾದಿ ಅನೇಕ ಪರ್ಯಾಯಶಬ್ದಗಳಿಂದ ಒಂದೇ ಮಡಿಕೆಯು ಹೇಗೆ ಪ್ರತಿಪಾದ್ಯವಾಗುತ್ತದೋ, ಅದರಂತೆ 'ಐಕ್ಯಂ ಬ್ರಹ್ಮ' ಎಂಬುದು ಸಹ ಪರ್ಯಾಯ ಶಬ್ದಗಳೆಂದಾಗಿ ಒಂದೇ ವಸ್ತುವು ಪ್ರತಿಪಾದ್ಯವಾಗಬೇಕು. ಆದರೆ ಐಕ್ಯಶಬ್ದವೇ ಬೇರೆ, ಬ್ರಹ್ಮಶಬ್ದವೇ ಬೇರೆ. ಮತ್ತು ಬ್ರಹ್ಮನು ಶಾಸ್ತ್ರಗಳಿಂದ ತಿಳಿಯಲ್ಪಟ್ಟರೂ ಐಕ್ಯವು ತಿಳಿಯುವುದಿಲ್ಲ. ಅಷ್ಟೇ ಅಲ್ಲದೇ ನಾವಿಬ್ಬರು ಬ್ರಹ್ಮನನ್ನು ಒಪ್ಪಿದ್ದೇವೆ. ಈ ವಿಷಯದಲ್ಲಿ ವಿವಾದವಿರುವುದಿಲ್ಲ. ಆದರೆ ಐಕ್ಯವಿಷಯದಲ್ಲಿ ವಿವಾದವಿದೆ. ಈ ಎಲ್ಲಾ ಕಾರಣಗಳಿಂದ ಐಕ್ಯವನ್ನು ಬ್ರಹ್ಮಸ್ವರೂಪವೆಂದು ಹೇಳಲಾಗದು. ಐಕ್ಯ ಹಾಗೂ ಬ್ರಹ್ಮರಲ್ಲಿ ವ್ಯತ್ಯಾಸವನ್ನು ಒಪ್ಪಿಕೊಳ್ಳಲೇ ಬೇಕು.

ಅದ್ವೈತಿಗಳು ಐಕ್ಯ ಹಾಗೂ ಬ್ರಹ್ಮರಲ್ಲಿ ವ್ಯತ್ಯಾಸವಿದ್ದರೂ ಅಭೇದವನ್ನು ಒಪ್ಪುತ್ತಾರೆ, ಅದರಂತೆ ನಾವೂ ಸಹ ಗುಣಗುಣಿಗಳಲ್ಲಿ ಸ್ವಲ್ಪ ವ್ಯತ್ಯಾಸವಿದ್ದರೂ ಅಭೇದವನ್ನು ಒಪ್ಪುತ್ತೇವೆ. ವಿಶೇಷದ ಬಲದಿಂದ ವಿರೋಧವನ್ನು ಪರಿಹರಿಸಬಹುದು. ಎಲ್ಲ ಬಗೆಯ ವಿರೋಧಗಳನ್ನು ವಿಶೇಷವೇ ಪರಿಹರಿಸುತ್ತದೆ.

**ತಚ್ಚ ಬ್ರಹ್ಮಣಿ ಸಾಮರ್ಥ್ಯವಿಶೇಷಾದ್ಘಟತೇ ಮಮ ।**
**ತವ ತ್ವೈಕ್ಯವಾದೇಽಸ್ಮಿನ್ನಿರ್ವಿಶೇಷಮತಂ ಗತಮ್ ॥ ೫೮೫ ॥**

**ಅರ್ಥ–** ತತ್ ಚ= ಅಭಿನ್ನವಾದ ಧರ್ಮಕ್ಕೆ ಧರ್ಮಿಯಾಗಿರುವಿಕೆಯು, ಸಾಮರ್ಥ್ಯವಿಶೇಷಾತ್ = ವಿಶೇಷ ಎಂಬ ಬಲದಿಂದ (ವಸ್ತು ಸಾಮರ್ಥ್ಯದಿಂದ), ಬ್ರಹ್ಮಣಿ = ಬ್ರಹ್ಮನಲ್ಲಿ, ಮಮ = ನನಗೆ, ಘಟತೇ = ಯುಕ್ತವಾಗುತ್ತದೆ. ತವ = ನಿನ್ನ, ಅಸ್ಮಿನ್ ಐಕ್ಯವಾದೇ ತು = ಐಕ್ಯವಾದದಲ್ಲಾದರೂ, ನಿರ್ವಿಶೇಷಮತಂ = ಬ್ರಹ್ಮನು ನಿರ್ವಿಶೇಷನೆಂಬ ಮತವು, ಗತಮ್ = ಹಾಳಾಯಿತು.

**ಅನುವಾದ–** ನಾವು ವಿಶೇಷವನ್ನು ಅಂಗೀಕರಿಸುವುದರಿಂದ ಈ ಧರ್ಮಧರ್ಮಿಭಾವವು ಸುಲಭವಾಗಿ ಉಪಪನ್ನವಾಗುತ್ತದೆ. ಆದರೆ ಐಕ್ಯವಾದಿಗಳಾದ ನಿಮ್ಮಲ್ಲಿ ವಿಶೇಷವನ್ನು ಒಪ್ಪದ ಕಾರಣ, ಈ ಧರ್ಮಧರ್ಮಿಭಾವವು ಯುಕ್ತವಾಗುವುದಿಲ್ಲ. ಒಂದು ವೇಳೆ ವಿಶೇಷವನ್ನು ಒಪ್ಪಿದರೆ, ಬ್ರಹ್ಮನು ನಿರ್ವಿಶೇಷನೆಂಬ ಮತವೇ ಹಾಳಾಗುತ್ತದೆ.

**ಭಾವವಿಲಾಸಿನೀ–** ನನ್ವಭೇದೇ ಧರ್ಮಧರ್ಮಿಭಾವಃ ಕಥಂ ಘಟತೇ? ಇತ್ಯತಃ ಸ್ವಮತೇ ಸಾಧಕಮಾಹ – **ತಚ್ಚೇತಿ** ॥ ತದ್ ಅಭಿನ್ನಧರ್ಮಧರ್ಮಿತ್ವಮ್ । ಮಮೇತಿ ವದತಾ ನಿರ್ವಿಶೇಷವಾದಿನಸ್ತವ ಗತಿರ್ನೇತಿ ಸೂಚಿತಮ್ । ಅಗತ್ಯಾ ಮಯಾಪೀದಮಂಗೀಕ್ರಿಯತ ಇತಿ ವದಂತಂ ಪ್ರತ್ಯಾಹ – **ತವ ತ್ವಿತಿ** ॥ ಉಕ್ತವಿರುದ್ಧಸ್ವಭಾವತ್ವಘಟನಾಯ ಐಕ್ಯಬ್ರಹ್ಮಣೋರಭೇದೋ ವಾ ತ್ಯಾಜ್ಯಃ ಅಭಿನ್ನಯೋರ್ವಿರುದ್ಧಸ್ವಭಾವಘಟಕವಿಶೇಷಸ್ಯಾಂಗೀಕಾರ್ಯತ್ವಾತ್ ನಿರ್ವಿಶೇಷಮತಂ ವಾ ತ್ಯಾಜ್ಯಮಿತ್ಯುಭಯತಃ ಪಾಶಾರಜ್ಜುರಿತಿ ಭಾವಃ ॥ ೫೮೫ ॥

**ವಿವರಣೆ–** ಬ್ರಹ್ಮನಿಗೂ ಅವನ ಗುಣಗಳಿಗೂ ಅಭೇದವನ್ನು ಒಪ್ಪಿದರೆ, ಧರ್ಮಧರ್ಮಿಭಾವವನ್ನು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ಸ್ವಮತದಲ್ಲಿ ಸಾಧಕವನ್ನು ಹೇಳುತ್ತಿದ್ದಾರೆ-

'ಮಮ' ಎಂಬ ಪದದಿಂದ ನಿರ್ವಿಶೇಷವಾದಿಯಾದ ನಿನಗೆ ಬೇರೆ ಗತಿಯಿಲ್ಲ ಎಂದು ಸೂಚಿಸಿದ್ದಾರೆ. ಧರ್ಮಧರ್ಮಿಭಾವವನ್ನು ಕೂಡಿಸುವುದಕ್ಕಾಗಿ ವಿಶೇಷವನ್ನು ಒಪ್ಪುವುದು ಅನಿವಾರ್ಯ. ಹಾಗೆಂದು ನೀನೂ ಸಹ ವಿಶೇಷವನ್ನು ಒಪ್ಪಿದರೆ ಬ್ರಹ್ಮನು ನಿರ್ವಿಶೇಷನೆಂಬ ನಿನ್ನ ಮತವು ಹಾಳಾಗುತ್ತದೆ. ಒಂದುವೇಳೆ ನಿರ್ವಿಶೇಷವೆಂದು ಒಪ್ಪದಿದ್ದರೆ ಐಕ್ಯ ಹಾಗೂ ಬ್ರಹ್ಮರು ವಿರುದ್ಧಸ್ವಭಾವವುಳ್ಳವರಾದ್ದರಿಂದ ಅಭೇದವನ್ನು ಬಿಡಬೇಕಾಗುತ್ತದೆ. ಅಥವಾ ಬ್ರಹ್ಮನನ್ನು ಸವಿಶೇಷನೆಂದಾದರೂ ಒಪ್ಪಬೇಕು. ಅಂತೂ ಅದ್ವೈತಿಗೆ ಉಭಯತಃ ಪಾಶಾರಜ್ಜುವಿನಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ.

**ನ ವಿದ್ಯತೇ ವಿಶೇಷಸ್ತು ಯಸ್ಮಾದಿತ್ಯಖಿಲೇಶತಾಮ್ ।**
**ನಿರ್ವಿಶೇಷಶ್ರುತಿಸ್ತಸ್ಮಾತ್ ಪ್ರಾಹಾಸ್ಮಾಕಂ ತವಾಪಿ ಚ ॥ ೫೮೬ ॥**

**ಅರ್ಥ–** ತಸ್ಮಾತ್= ಧರ್ಮಧರ್ಮಿಭಾವದ ನಿರ್ವಾಹಕ್ಕಾಗಿ ವಿಶೇಷವು ಆವಶ್ಯಕವಾದ್ದರಿಂದ, ಯಸ್ಮಾತ್= ಯಾವ ವಸ್ತುವಿಗಿಂತ, ವಿಶೇಷಃ ತು= ಅಧಿಕವಾದ ವಸ್ತುವಾದರೂ, ನ ವಿದ್ಯತೇ= ಇರುವುದಿಲ್ಲ, ಇತಿ= ಎಂದು, ತಸ್ಯ= ಪರಮಾತ್ಮನಿಗೆ, ಅಖಿಲೇಶತಾಂ= ಸರ್ವೋತ್ತಮತ್ತ್ವವನ್ನು, ನಿರ್ವಿಶೇಷ ಶ್ರುತಿಃ= ನಿರ್ವಿಶೇಷೋಽಕ್ಷರ ಇತ್ಯಾದಿ ಶ್ರುತಿಯು, ಅಸ್ಮಾಕಂ= ನಮ್ಮನ್ನು ಕುರಿತು, ಅಪಿ ಚ= ಮತ್ತೂ ಕೂಡ, ತವ= ನಿನ್ನನ್ನು ಕುರಿತು, ಪ್ರಾಹ= ಹೇಳುತ್ತದೆ.

**ಅನುವಾದ– 'ನಿರ್ವಿಶೇಷೋಽಕ್ಷರಃ ಶುದ್ಧಃ' ಎಂಬ ಶ್ರುತಿಯಲ್ಲಿ 'ನಿರ್ವಿಶೇಷಃ' ಎಂಬ ಪದಕ್ಕೆ 'ನ ವಿದ್ಯತೇ ವಿಶೇಷಃ ಯಸ್ಮಾದಿತಿ ನಿರ್ವಿಶೇಷಃ' ಎಂದು ಬಹುವ್ರೀಹಿ ಸಮಾಸವನ್ನು ಮಾಡಬೇಕು. ಹೀಗೆ ಮಾಡಿದಾಗ ಬ್ರಹ್ಮನಿಗಿಂತ ಉತ್ತಮವಾದ ಮತ್ತೊಂದು ವಸ್ತು ಇರುವುದಿಲ್ಲ ಎಂಬರ್ಥವು ದೊರೆಯುತ್ತದೆ. ಈ ಅರ್ಥವು ನಿನಗೂ ಹಾಗೂ ನನಗೂ ಸಮ್ಮತವೇ ಆಗಿವೆ.**

**ಭಾವವಿಲಾಸಿನೀ– ತರ್ಹಿ ಸವಿಶೇಷಬ್ರಹ್ಮವಾದಿನಾಂ ಮತೇ 'ನಿರ್ವಿಶೇಷೋಽಕ್ಷರಃ ಶುದ್ಧಃ' ಇತಿ ಶ್ರುತೇಃ ಕಾ ಗತಿರಿತ್ಯತ ಆಹ – ನೇತಿ ॥ ವಿಶೇಷಃ ಆಧಿಕ್ಯಂ ಅಧಿಕಂ ವಸ್ತು ವಾ । ತಸ್ಮಾದ್ ಅಭಿನ್ನಶ್ರೌತಧರ್ಮಾಣಾಂ ಧರ್ಮಧರ್ಮಿಭಾವಘಟಕೋಕ್ತಸಾಮರ್ಥ್ಯರೂಪವಿಶೇಷಸ್ಯ ಆವಶ್ಯಕತ್ವಾತ್ ॥ ೫೮೬ ॥**

**ವಿವರಣೆ–** ಬ್ರಹ್ಮನಲ್ಲಿ ವಿಶೇಷವನ್ನು ಒಪ್ಪಿ, ಸವಿಶೇಷ ಬ್ರಹ್ಮನೆಂದು ಹೇಳುವ ತತ್ತ್ವವಾದಿಗಳ ಮತದಲ್ಲಿ 'ನಿರ್ವಿಶೇಷೋಽಕ್ಷರಃ ಶುದ್ಧಃ' ಎಂಬ ಶ್ರುತಿಗೆ ಹೇಗೆ ವ್ಯಾಖ್ಯಾನ ಮಾಡಬೇಕು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಹಿಂದಿನ ಶ್ಲೋಕದಲ್ಲಿ ಬ್ರಹ್ಮನಲ್ಲಿರುವ ಧರ್ಮಗಳಿಗೂ, ಧರ್ಮಿಯಾದ ಬ್ರಹ್ಮನಿಗೂ ಐಕ್ಯವನ್ನು ಒಪ್ಪಬೇಕು. ಹಾಗೇ ಐಕ್ಯವನ್ನು ಒಪ್ಪಿದಾಗ, ಧರ್ಮಧರ್ಮಿಭಾವವು ಹೇಗೆ ಕೂಡುತ್ತದೆ? ಎಂಬ ಪ್ರಶ್ನೆಗೆ ವಿಶೇಷವನ್ನು ಒಪ್ಪುವ ಮೂಲಕ ಸಮಾಧಾನವನ್ನು ನೀಡಲಾಯಿತು. ಪ್ರಕೃತ ಅದ್ವೈತಿಗಳು ಬ್ರಹ್ಮನಲ್ಲಿ ವಿಶೇಷವನ್ನು ಒಪ್ಪುವುದಾದರೆ 'ನಿರ್ವಿಶೇಷೋಽಕ್ಷರಃ ಶುದ್ಧಃ' ಎಂಬ ಶ್ರುತಿಯು ಬ್ರಹ್ಮನಲ್ಲಿ ಯಾವುದೇ ವಿಶೇಷವಿಲ್ಲವೆಂದು ಹೇಳುತ್ತಿದೆ. ಆದ್ದರಿಂದ ಈ ಶ್ರುತಿವಿರೋಧವು ತತ್ತ್ವವಾದಿಗಳಿಗೆ ಬರುತ್ತದಲ್ಲವೇ? ಎಂದು ಪ್ರಶ್ನಿಸುತ್ತಿದ್ದಾರೆ. ಈ ಪ್ರಶ್ನೆಗೆ ಉತ್ತರಿಸುವ ದೃಷ್ಟಿಯಿಂದ 'ನಿರ್ವಿಶೇಷೋಽಕ್ಷರಃ ಶುದ್ಧಃ' ಎಂಬ ಶ್ರುತಿಗೆ ವ್ಯಾಖ್ಯಾನ ಮಾಡಲು ಹೊರಟಿದ್ದಾರೆ. ಇಲ್ಲಿರುವ ನಿರ್ವಿಶೇಷಶಬ್ದಕ್ಕೆ ವಿಶೇಷರಹಿತನೆಂದು ಅರ್ಥವಲ್ಲ. ಹೊರತಾಗಿ 'ನ ವಿದ್ಯತೇ ವಿಶೇಷಃ ಯಸ್ಮಾತ್ಸಃ' ಎಂದು ಬಹುವ್ರೀಹಿಸಮಾಸವನ್ನು ಮಾಡಿದಾಗ ಯಾವ ಪರಮಾತ್ಮನ ದೆಸೆಯಿಂದ ಮತ್ತೊಂದು ಉತ್ತಮ ವಸ್ತುವು ಇಲ್ಲವೋ, ಅಂತಹವನೇ ಪರಮಾತ್ಮನು ಎಂಬರ್ಥವು ದೊರೆಯುತ್ತದೆ. ಆದ್ದರಿಂದ 'ಅಭೇದೇಪಿ ಭೇದಕಾರ್ಯಕಾರಿತ್ವ' ಎಂಬ ಲಕ್ಷಣವುಳ್ಳ ವಿಶೇಷ ಪದಾರ್ಥವು

ಈ ಶ್ರುತಿಯಲ್ಲಿ ವಿವಕ್ಷಿತವಾಗಿಲ್ಲ. ಹೊರತಾಗಿ, ಉತ್ತಮವಾದ ವಸ್ತು ಎಂಬರ್ಥದಲ್ಲಿ ವಿಶೇಷಶಬ್ದವು ಪ್ರಯುಕ್ತವಾಗಿದೆ. ಹೀಗೆ ಶ್ರುತಿಯನ್ನು ವ್ಯಾಖ್ಯಾನ ಮಾಡುವುದು ನಿಮ್ಮ ಅದ್ವೈತಸಿದ್ಧಾಂತಕ್ಕೂ ಕೂಡ ಸಮ್ಮತವೇ ಆಗಿದೆ. ಏಕೆಂದರೆ ಪರಬ್ರಹ್ಮನಿಗಿಂತ ಉತ್ತಮವಾದ ಮತ್ತೊಂದು ವಸ್ತು ಇಲ್ಲವೆಂದು ನೀವೂ ಸಹ ಒಪ್ಪುತ್ತೀರಿ. ಹಾಗಾಗಿ 'ನಿರ್ವಿಶೇಷೋऽಕ್ಷರಃ ಶುದ್ಧಃ 'ಎಂಬ ಶ್ರುತಿಗೆ ವಿಶೇಷವಿಲ್ಲವೆಂಬ ಅರ್ಥವನ್ನು ಹೇಳಬಾರದು. ಬ್ರಹ್ಮನಲ್ಲಿ ಧರ್ಮಧರ್ಮಿಭಾವವನ್ನು ವಿಶೇಷ ಎಂಬ ಪದಾರ್ಥವು ನಿಭಾಯಿಸುತ್ತದೆ ಎಂದು ನಾವು ಹೇಳಿದ್ದು ಅತ್ಯಂತ ಸಮಂಜಸವೇ ಆಯಿತು. ಇದಕ್ಕೆ ಯಾವುದೇ ಶ್ರುತಿಯ ವಿರೋಧ ಬರುವುದಿಲ್ಲ.

ಸಾರ - 'ನಿರ್ವಿಶೇಷೋऽಕ್ಷರಃ ಶುದ್ಧಃ' ಎಂಬ ಶ್ರುತಿಯು ಪರಮಾತ್ಮನಲ್ಲಿ ಯಾವುದೇ ವಿಶೇಷವಿರುವುದಿಲ್ಲವೆಂದು ವ್ಯಾಖ್ಯಾನ ಮಾಡುತ್ತಿಲ್ಲ. ಹೊರತಾಗಿ, 'ನ ವಿದ್ಯತೇ ವಿಶೇಷಃ ಯಸ್ಮಾತ್' ಎಂಬ ವಿಗ್ರಹದಂತೆ ಪರಮಾತ್ಮನಂತಹ ಉತ್ತಮವಾದ ಮತ್ತೊಂದು ವಸ್ತುವಿಲ್ಲವೆಂದಷ್ಟೇ ಹೇಳುತ್ತಿದೆ.

ವ್ಯವಹಾರಾದನುಗತಾತ್ ಸರ್ವತ್ರಾನುಗತಾ ಸದಾ ।
ಜಾತಿಶ್ಚೈಕಾಖಿಲಾರ್ಥೇಷು ಸತ್ತಾದ್ಯಾವರ್ತತೇ ಕಿಲ ॥ ೫೮೭ ॥

ಇತಿ ಬ್ರವೀತಿ ಕೋऽಪ್ಯಜ್ಞಃ ಸ ಪ್ರಷ್ಟವ್ಯೋ ವಿವೇಕಿಭಿಃ ।
ವ್ಯವಹಾರಾನುಗಮನಂ ನಾಮ ತಸ್ಯೈಕತಾ ಕಿಮು ॥ ೫೮೮ ॥

**ಅರ್ಥ–** ಅನುಗತಾತ್ = ಅನುಗತವಾದ, ವ್ಯವಹಾರಾತ್ = ವ್ಯವಹಾರದಿಂದ, ಸದಾ = ಯಾವಾಗಲೂ, ಸರ್ವತ್ರ = ಘಟಪಟಾದಿ ವಸ್ತುಗಳಲ್ಲಿ, ಅನುಗತಾ = ಅನುಗತವಾದ, ಸತ್ತಾದ್ಯಾ ಜಾತಿಃ = ಸತ್ತಾ ಮೊದಲಾದ ಜಾತಿಯು, ಅಖಿಲಾರ್ಥೇಷು = ಸಮಸ್ತ ಘಟಪಟಾದಿಗಳಲ್ಲಿ, ವರ್ತತೇ ಕಿಲ = ಇರುತ್ತವಷ್ಟೇ.

ಇತಿ = ಈ ರೀತಿಯಾಗಿ, ಕಃ ಅಪಿ ಅಜ್ಞಃ= ಯಾವನೋ ಒಬ್ಬ ಅಜ್ಞನಾದ ತಾರ್ಕಿಕನು, ಬ್ರವೀತಿ = ಹೇಳುತ್ತಾನೆ. ಸಃ = ಅಂತಹ ತಾರ್ಕಿಕನು, ವಿವೇಕಿಭಿಃ = ಜ್ಞಾನಿಜನರಿಂದ, ಪ್ರಷ್ಟವ್ಯಃ = ಪ್ರಶ್ನಿಸಲ್ಪಡಬೇಕು, ವ್ಯವಹಾರಾನುಗಮನಂ ನಾಮ = ಅನುಗತವಾದ ವ್ಯವಹಾರವೆಂದರೆ, ತಸ್ಯ = ಆ ವ್ಯವಹಾರಕ್ಕೆ, ಏಕತಾ ಕಿಮು = ಏಕತ್ವವು ಇದೆಯೇ? ಎಂದು.

**ಅನುವಾದ–** ಇದು ಮಡಕೆ, ಇದು ಬಟ್ಟೆ ಮೊದಲಾದ ಅನುಗತವಾದ ವ್ಯವಹಾರವನ್ನು ಘಟ-ಪಟಾದಿವಸ್ತುಗಳಲ್ಲಿ ಸಕಲರೂ ಮಾಡುತ್ತಾರೆ. ಈ ಅನುಗತವ್ಯವಹಾರದ ಆಧಾರದಿಂದ ಎಲ್ಲಾ ವಿಧವಾದ ಮಡಕೆಗಳಲ್ಲಿ, ಎಲ್ಲಾ ವಿಧವಾದ ಪಟಗಳಲ್ಲಿ, ಘಟತ್ವ, ಪಟತ್ವ ಮೊದಲಾದ ಜಾತಿಗಳನ್ನು ಅವಶ್ಯವಾಗಿ ಒಪ್ಪಲೇ ಬೇಕು.

**ಹೀಗೆಯೇ ಅನುಗತವ್ಯವಹಾರವಿರುವ ಪ್ರತಿಯೊಂದು ಪದಾರ್ಥಗಳಲ್ಲಿಯೂ ಸತ್ತಾ ಮೊದಲಾದ ಜಾತಿಗಳು ಇರುತ್ತವೆಂದು ತಾರ್ಕಿಕರು ಹೇಳುತ್ತಾರೆ.**

**ಅಜ್ಞಾನಿಯಾದ ತಾರ್ಕಿಕನನ್ನು ಕುರಿತು ವಿವೇಕಿಗಳಾದ ಜ್ಞಾನಿಜನರು ಹೀಗೆ ಪ್ರಶ್ನಿಸಬೇಕು - 'ಅನುಗತವ್ಯವಹಾರವೆಂದರೆ ಏನು? ಆ ವ್ಯವಹಾರವು ಒಂದೇ ಆಗಿರುತ್ತದೆಂದೋ?**

**ಭಾವವಿಲಾಸಿನೀ**– ಅಧುನಾ ಅನುಗತಾಷ್ಯೈಕ್ಯಂ ಸ್ಯಾದಿತ್ಯಾಶಂಕ್ಯ ತಾಂ ನಿರಾಕರ್ತುಮುಪಕ್ರಮತೇ – **ವ್ಯವಹಾರಾದಿತಿ** ॥ ಕೋಽಪಿ ಅನುಗತವ್ಯವಹಾರಸ್ಯ ಅನುಗತಧರ್ಮಪ್ರಯೋಜ್ಯತ್ವಾದಿತಿ ವದಂಸ್ತಾರ್ಕಿಕಃ ॥ ೫೮೭-೫೮೯ ॥

**ವಿವರಣೆ**– ಇಲ್ಲಿಯ ತನಕ ವಿಶೇಷದ ಬಲದಿಂದ ಪರಮಾತ್ಮನಲ್ಲಿರುವ ಧರ್ಮಗಳಿಗೂ, ಪರಮಾತ್ಮನಿಗೂ, ಧರ್ಮಧರ್ಮಿಭಾವವನ್ನು ಮತ್ತು ಅವುಗಳಿಗೆ ಐಕ್ಯವ್ಯವಹಾರವನ್ನು ಉಪಪಾದನೆ ಮಾಡಿದ್ದಾಯಿತು. ಪ್ರಕೃತ ತಾರ್ಕಿಕರು ವಿಶೇಷವನ್ನೊಪ್ಪದೇ ಧರ್ಮಧರ್ಮಿಗಳಿಗೆ ಐಕ್ಯವನ್ನು ಒಪ್ಪುತ್ತಾರೆ. ಇವರ ಮತವನ್ನು ಖಂಡನೆ ಮಾಡುವುದಕ್ಕಾಗಿ ಮೊದಲು ಅವರು ಸಮರ್ಥನೆ ಮಾಡುವ ಜಾತಿಯನ್ನು ಅನುವಾದ ಮಾಡಿ ನಿರಾಕರಿಸಲು ಪ್ರವೃತ್ತರಾಗಿದ್ದಾರೆ. ಪ್ರಕೃತ ಈ ಶ್ಲೋಕದಲ್ಲಿ ತಾರ್ಕಿಕರು ಯಾವ ಕಾರಣಕ್ಕಾಗಿ ಜಾತಿಯನ್ನು ಒಪ್ಪುತ್ತಾರೆ ? ಎಂಬುದನ್ನು ಅವರ ಮಾತುಗಳಿಂದಲೇ ಅನುವಾದ ಮಾಡುತ್ತಿದ್ದಾರೆ -

ಪ್ರತಿಯೊಂದು ಘಟಗಳಲ್ಲಿಯೂ 'ಅಯಂ ಘಟಃ' ಎಂಬ ಅನುಗತವಾದ ವ್ಯವಹಾರವಿದೆ. ಇದರಂತೆ ಅನೇಕ ಪಟಗಳಲ್ಲಿಯೂ 'ಅಯಂ ಪಟಃ' ಎಂಬ ಅನುಗತವಾದ ವ್ಯವಹಾರವಿದೆ. ಈ ವ್ಯವಹಾರವು ಉಪಪನ್ನವಾಗಬೇಕೆಂದರೆ ಸಕಲಘಟಗಳಲ್ಲಿಯೂ ಘಟತ್ವ ಎಂಬ ಒಂದೇ ಜಾತಿಯನ್ನು ಒಪ್ಪಬೇಕಾಗುತ್ತದೆ. ಇದರಂತೆ ಸಕಲ ಪಟಗಳಲ್ಲಿಯೂ ಪಟತ್ವ ಎಂಬ ಒಂದು ಜಾತಿಯನ್ನು ಒಪ್ಪುವುದು ಅನಿವಾರ್ಯ. ಒಂದು ವೇಳೆ ಲಕ್ಷಾಂತರ ಘಟಗಳಲ್ಲಿ ಘಟತ್ವ ಎಂಬ ಒಂದೇ ಜಾತಿಯನ್ನು ಒಪ್ಪದಿದ್ದರೆ ಆ ಎಲ್ಲಾ ಘಟಗಳಲ್ಲಿ 'ಅಯಂ ಘಟಃ' ಎಂಬ ಒಂದೇ ಬಗೆಯ ವ್ಯವಹಾರವನ್ನು ಕೂಡಿಸಲು ಸಾಧ್ಯವೇ ಆಗುವುದಿಲ್ಲ. ಹೀಗೆ ಅನುಗತ ವ್ಯವಹಾರಕ್ಕೋಸ್ಕರ ಜಾತಿಯನ್ನು ಒಪ್ಪುವುದು ಅತ್ಯಾವಶ್ಯಕವೆಂಬುದು ತಾರ್ಕಿಕರ ನಿಲುವು.

ತಾರ್ಕಿಕನು ಅಂಗೀಕರಿಸುವ 'ಜಾತಿ' ಎಂಬ ಪದಾರ್ಥವನ್ನು ನಿರಾಕರಿಸಲು ಪ್ರಾರಂಭಿಸಿದ್ದಾರೆ. ಅನೇಕ ಘಟಗಳಲ್ಲಿ ಘಟತ್ವವೆಂಬ ಒಂದೇ ಜಾತಿಯನ್ನು ಒಪ್ಪಿದರೆ ಬರುವಂತಹ ಬಾಧಕಗಳನ್ನು ಮುಂದೆ ಸಮರ್ಥಿಸಬೇಕಾಗಿದೆ. ವಿವೇಕಿಗಳಾದ ವಿದ್ವಾಂಸರು ತಾರ್ಕಿಕನನ್ನು ಕುರಿತು ಹೀಗೆ ಪ್ರಶ್ನಿಸಬೇಕು - ನೀನು ಒಪ್ಪುವ

ಅನುಗತವ್ಯವಹಾರ ಎಂದರೆ ಏನರ್ಥ? ಸಕಲ ಘಟಗಳಲ್ಲಿ ಒಂದೇ ವ್ಯವಹಾರವಿದೆಯೆಂದೋ, ಅಥವಾ ಒಂದು ಧರ್ಮದಿಂದ ಆ ಎಲ್ಲಾ ವ್ಯವಹಾರಗಳು ನಿಯಮಿತವಾಗಿವೆ ಎಂದರ್ಥವೋ? ಇತ್ಯಾದಿಯಾಗಿ ಪ್ರಶ್ನಿಸುತ್ತಿದ್ದಾರೆ.

**ಉತ ತಸ್ಯೈಕಧರ್ಮೇಣಾವಚ್ಛಿನ್ನತ್ವಮುದೀರ್ಯತೇ ।**
**ಏಕಾಕಾರತ್ವಮಥವಾ ವಕ್ತವ್ಯಂ ನಾಪರಂ ಹಿ ತತ್ ॥ ೫೪ ॥**

**ಅರ್ಥ–** ಉತ = ಅಥವಾ, ತಸ್ಯ = ಅನುಗತ ವ್ಯವಹಾರಕ್ಕೆ, ಏಕಧರ್ಮೇಣಾವಚ್ಛಿನ್ನತ್ವಂ= ಒಂದೇ ಘಟತ್ವ ಮೊದಲಾದ ಧರ್ಮಗಳಿಂದ ಕೂಡಿರುವಿಕೆಯು, ಉದೀರ್ಯತೇ = ಹೇಳಲ್ಪಡುತ್ತದೋ, ಅಥವಾ = ಅಥವಾ, ಏಕಪ್ರಕಾರತ್ವಂ = ಒಂದೇ ವಿಧವಾದ ಶಬ್ದ ಪ್ರಯೋಗದಿಂದ ಕೂಡಿರುತ್ತದೆಂದು, ವಕ್ತವ್ಯಂ = ಹೇಳಲ್ಪಡಬೇಕು, ತತ್ = ಅನುಗತ ವ್ಯವಹಾರವೆಂಬುದು, ಅಪರಂ = ಇಷ್ಟು ವಿಕಲ್ಪಗಳನ್ನು ಬಿಟ್ಟು, ನಹಿ = ಬೇರೆ ರೀತಿಯಲ್ಲಿ ಇರುವುದಿಲ್ಲವಷ್ಟೇ?

**ಅನುವಾದ– ಅಥವಾ ಆ ವ್ಯವಹಾರಗಳು ಘಟತ್ವ ಮೊದಲಾದ ಒಂದೇ ಧರ್ಮದಿಂದ ಕೂಡಿರುತ್ತವೆಂದೋ, ಅಥವಾ ಒಂದೇ ಬಗೆಯ ಶಬ್ದಪ್ರಯೋಗದಿಂದ ಕೂಡಿರುತ್ತವೆಂದೋ? ಈ ಮೂರು ಕ್ರಮವನ್ನು ಬಿಟ್ಟು, ಮತ್ತೊಂದು ರೀತಿಯಲ್ಲಿ ಅನುಗತ ವ್ಯವಹಾರವನ್ನು ಉಪಪಾದಿಸಲು ಸಾಧ್ಯವಿಲ್ಲ.**

**ನಾದ್ಯಃ ಪ್ರಯೋಜಕಾಸಿದ್ಧೇರ್ವಾದಿನೋರುಭಯೋರಪಿ ।**
**ಪ್ರತಿವಾದಿಮತಾಸಿದ್ಧೇರ್ದ್ವಿತೀಯೋಽಪಿ ನ ಶೋಭತೇ ॥ ೫೦ ॥**

**ಅರ್ಥ–** ವಾದಿನೋಃ = ವಾದ ಮಾಡುತ್ತಿರುವ, ಉಭಯೋಃ ಅಪಿ= ದ್ವೈತಾದ್ವೈತ ವಾದಿಗಳಿಗೂ ಕೂಡ, ಪ್ರಯೋಜಕಾಸಿದ್ಧೇಃ = 'ಅಯಂ ಘಟಃ' 'ಅಯಂ ಘಟಃ' ಎಂಬುದಾಗಿ ಅನೇಕರಿಂದ ಅನೇಕ ಬಗೆಯಲ್ಲಿ ಮಾಡಲ್ಪಟ್ಟ ವ್ಯವಹಾರವು ಸಿದ್ಧವಾಗದ ಕಾರಣ, ಆದ್ಯಃ = ಮೊದಲನೇ ಪಕ್ಷವು, ನ = ಶೋಭಿಸುವುದಿಲ್ಲ, ಪ್ರತಿವಾದಿಮತಾಸಿದ್ಧೇಃ = ಪ್ರತಿವಾದಿಗಳ ಪಕ್ಷದಲ್ಲಿ ಅಸಿದ್ಧವಾಗಿರುವ ಕಾರಣ, ದ್ವಿತೀಯೋಽಪಿ = ಎರಡನೆಯ ಪಕ್ಷವೂ ಕೂಡ, ನ ಶೋಭತೇ = ಶೋಭಿಸುವುದಿಲ್ಲ.

**ಅನುವಾದ– ಈ ಮೂರುಬಗೆಯ ಅನುಗತವ್ಯವಹಾರಗಳಲ್ಲಿ ಒಂದೇ ವ್ಯವಹಾರವೆಂಬ ಮೊದಲನೆಯ ಪಕ್ಷವು ಯುಕ್ತವಲ್ಲ. ಅನುಗತವ್ಯವಹಾರವೆಂದರೆ, ವ್ಯವಹಾರವು ಒಂದೇ ಆಗಿರುವುದೆಂದು ವಾದಿಗಳಾದ ನೀವು ಪ್ರತಿವಾದಿಗಳಾದ ನಾವು, ಇಬ್ಬರೂ ಸಹ ಒಪ್ಪಿರುವುದಿಲ್ಲ. ಒಂದು ಧರ್ಮದಿಂದ ಕೂಡಿರುವಿಕೆಯೆಂಬ ಎರಡನೆಯ ಪಕ್ಷವನ್ನು ಸಿದ್ಧಾಂತಿಗಳಾದ ನಾವು ಒಪ್ಪದಿರುವ ಕಾರಣ ಅದೂ ಸಹ ಶೋಭಿಸುವುದಿಲ್ಲ.**

**ಹೀಗೆಯೇ ಅನುಗತವ್ಯವಹಾರವಿರುವ ಪ್ರತಿಯೊಂದು ಪದಾರ್ಥಗಳಲ್ಲಿಯೂ ಸತ್ತಾ ಮೊದಲಾದ ಜಾತಿಗಳು ಇರುತ್ತವೆಂದು ತಾರ್ಕಿಕರು ಹೇಳುತ್ತಾರೆ.**

**ಅಜ್ಞಾನಿಯಾದ ತಾರ್ಕಿಕನನ್ನು ಕುರಿತು ವಿವೇಕಿಗಳಾದ ಜ್ಞಾನಿಜನರು ಹೀಗೆ ಪ್ರಶ್ನಿಸಬೇಕು - 'ಅನುಗತವ್ಯವಹಾರವೆಂದರೆ ಏನು? ಆ ವ್ಯವಹಾರವು ಒಂದೇ ಆಗಿರುತ್ತದೆಂದೋ?**

**ಭಾವವಿಲಾಸಿನೀ**– ಅಧುನಾ ಅನುಗತಾಪ್ಯೈಕ್ಯಂ ಸ್ಯಾದಿತ್ಯಾಶಂಕ್ಯ ತಾಂ ನಿರಾಕರ್ತುಮುಪಕ್ರಮತೇ – ವ್ಯವಹಾರಾದಿತಿ ॥ ಕೋऽಪಿ ಅನುಗತವ್ಯವಹಾರಸ್ಯ ಅನುಗತಧರ್ಮಪ್ರಯೋಜ್ಯತ್ವಾದಿತಿ ವದಂಸ್ತಾರ್ಕಿಕಃ ॥ ೫೮೭-೫೮೯ ॥

**ವಿವರಣೆ**– ಇಲ್ಲಿಯ ತನಕ ವಿಶೇಷದ ಬಲದಿಂದ ಪರಮಾತ್ಮನಲ್ಲಿರುವ ಧರ್ಮಗಳಿಗೂ, ಪರಮಾತ್ಮನಿಗೂ, ಧರ್ಮಧರ್ಮಿಭಾವವನ್ನು ಮತ್ತು ಅವುಗಳಿಗೆ ಐಕ್ಯವ್ಯವಹಾರವನ್ನು ಉಪಪಾದನೆ ಮಾಡಿದ್ದಾಯಿತು. ಪ್ರಕೃತ ತಾರ್ಕಿಕರು ವಿಶೇಷವನ್ನೊಪ್ಪದೇ ಧರ್ಮಧರ್ಮಿಗಳಿಗೆ ಐಕ್ಯವನ್ನು ಒಪ್ಪುತ್ತಾರೆ. ಇವರ ಮತವನ್ನು ಖಂಡನೆ ಮಾಡುವುದಕ್ಕಾಗಿ ಮೊದಲು ಅವರು ಸಮರ್ಥನೆ ಮಾಡುವ ಜಾತಿಯನ್ನು ಅನುವಾದ ಮಾಡಿ ನಿರಾಕರಿಸಲು ಪ್ರವೃತ್ತರಾಗಿದ್ದಾರೆ. ಪ್ರಕೃತ ಈ ಶ್ಲೋಕದಲ್ಲಿ ತಾರ್ಕಿಕರು ಯಾವ ಕಾರಣಕ್ಕಾಗಿ ಜಾತಿಯನ್ನು ಒಪ್ಪುತ್ತಾರೆ ? ಎಂಬುದನ್ನು ಅವರ ಮಾತುಗಳಿಂದಲೇ ಅನುವಾದ ಮಾಡುತ್ತಿದ್ದಾರೆ -

ಪ್ರತಿಯೊಂದು ಘಟಗಳಲ್ಲಿಯೂ 'ಅಯಂ ಘಟಃ' ಎಂಬ ಅನುಗತವಾದ ವ್ಯವಹಾರವಿದೆ. ಇದರಂತೆ ಅನೇಕ ಪಟಗಳಲ್ಲಿಯೂ 'ಅಯಂ ಪಟಃ' ಎಂಬ ಅನುಗತವಾದ ವ್ಯವಹಾರವಿದೆ. ಈ ವ್ಯವಹಾರವು ಉಪಪನ್ನವಾಗಬೇಕೆಂದರೆ ಸಕಲಘಟಗಳಲ್ಲಿಯೂ ಘಟತ್ವ ಎಂಬ ಒಂದೇ ಜಾತಿಯನ್ನು ಒಪ್ಪಬೇಕಾಗುತ್ತದೆ. ಇದರಂತೆ ಸಕಲ ಪಟಗಳಲ್ಲಿಯೂ ಪಟತ್ವ ಎಂಬ ಒಂದು ಜಾತಿಯನ್ನು ಒಪ್ಪುವುದು ಅನಿವಾರ್ಯ. ಒಂದು ವೇಳೆ ಲಕ್ಷಾಂತರ ಘಟಗಳಲ್ಲಿ ಘಟತ್ವ ಎಂಬ ಒಂದೇ ಜಾತಿಯನ್ನು ಒಪ್ಪದಿದ್ದರೆ ಆ ಎಲ್ಲಾ ಘಟಗಳಲ್ಲಿ 'ಅಯಂ ಘಟಃ' ಎಂಬ ಒಂದೇ ಬಗೆಯ ವ್ಯವಹಾರವನ್ನು ಕೂಡಿಸಲು ಸಾಧ್ಯವೇ ಆಗುವುದಿಲ್ಲ. ಹೀಗೆ ಅನುಗತ ವ್ಯವಹಾರಕ್ಕೋಸ್ಕರ ಜಾತಿಯನ್ನು ಒಪ್ಪುವುದು ಅತ್ಯಾವಶ್ಯಕವೆಂಬುದು ತಾರ್ಕಿಕರ ನಿಲುವು.

ತಾರ್ಕಿಕನು ಅಂಗೀಕರಿಸುವ 'ಜಾತಿ' ಎಂಬ ಪದಾರ್ಥವನ್ನು ನಿರಾಕರಿಸಲು ಪ್ರಾರಂಭಿಸಿದ್ದಾರೆ. ಅನೇಕ ಘಟಗಳಲ್ಲಿ ಘಟತ್ವವೆಂಬ ಒಂದೇ ಜಾತಿಯನ್ನು ಒಪ್ಪಿದರೆ ಬರುವಂತಹ ಬಾಧಕಗಳನ್ನು ಮುಂದೆ ಸಮರ್ಥಿಸಬೇಕಾಗಿದೆ. ವಿವೇಕಿಗಳಾದ ವಿದ್ವಾಂಸರು ತಾರ್ಕಿಕನನ್ನು ಕುರಿತು ಹೀಗೆ ಪ್ರಶ್ನಿಸಬೇಕು - ನೀನು ಒಪ್ಪುವ

ಅನುಗತವ್ಯವಹಾರ ಎಂದರೆ ಏನರ್ಥ? ಸಕಲ ಘಟಗಳಲ್ಲಿ ಒಂದೇ ವ್ಯವಹಾರವಿದೆಯೆಂದೋ, ಅಥವಾ ಒಂದು ಧರ್ಮದಿಂದ ಆ ಎಲ್ಲಾ ವ್ಯವಹಾರಗಳು ನಿಯಮಿತವಾಗಿವೆ ಎಂದರ್ಥವೋ? ಇತ್ಯಾದಿಯಾಗಿ ಪ್ರಶ್ನಿಸುತ್ತಿದ್ದಾರೆ.

**ಉತ ತಸ್ಯೈಕಧರ್ಮೇಣಾವಚ್ಛಿನ್ನತ್ವಮುದೀರ್ಯತೇ ।**
**ಏಕಾಕಾರತ್ವಮಥವಾ ವಕ್ತವ್ಯಂ ನಾಪರಂ ಹಿ ತತ್ ॥ ೫೪೯ ॥**

**ಅರ್ಥ–** ಉತ = ಅಥವಾ, ತಸ್ಯ = ಅನುಗತ ವ್ಯವಹಾರಕ್ಕೆ, ಏಕಧರ್ಮೇಣಾವಚ್ಛಿನ್ನತ್ವಂ= ಒಂದೇ ಘಟತ್ವ ಮೊದಲಾದ ಧರ್ಮಗಳಿಂದ ಕೂಡಿರುವಿಕೆಯು, ಉದೀರ್ಯತೇ = ಹೇಳಲ್ಪಡುತ್ತದೋ, ಅಥವಾ = ಅಥವಾ, ಏಕಪ್ರಕಾರತ್ವಂ = ಒಂದೇ ವಿಧವಾದ ಶಬ್ದ ಪ್ರಯೋಗದಿಂದ ಕೂಡಿರುತ್ತದೆಂದು, ವಕ್ತವ್ಯಂ = ಹೇಳಲ್ಪಡಬೇಕು, ತತ್ = ಅನುಗತ ವ್ಯವಹಾರವೆಂಬುದು, ಅಪರಂ = ಇಷ್ಟು ವಿಕಲ್ಪಗಳನ್ನು ಬಿಟ್ಟು, ನಹಿ = ಬೇರೆ ರೀತಿಯಲ್ಲಿ ಇರುವುದಿಲ್ಲವಷ್ಟೇ?

**ಅನುವಾದ–** ಅಥವಾ ಆ ವ್ಯವಹಾರಗಳು ಘಟತ್ವ ಮೊದಲಾದ ಒಂದೇ ಧರ್ಮದಿಂದ ಕೂಡಿರುತ್ತವೆಂದೋ, ಅಥವಾ ಒಂದೇ ಬಗೆಯ ಶಬ್ದಪ್ರಯೋಗದಿಂದ ಕೂಡಿರುತ್ತವೆಂದೋ? ಈ ಮೂರು ಕ್ರಮವನ್ನು ಬಿಟ್ಟು, ಮತ್ತೊಂದು ರೀತಿಯಲ್ಲಿ ಅನುಗತ ವ್ಯವಹಾರವನ್ನು ಉಪಪಾದಿಸಲು ಸಾಧ್ಯವಿಲ್ಲ.

**ನಾದ್ಯಃ ಪ್ರಯೋಜಕಾಸಿದ್ಧೇರ್ವಾದಿನೋರುಭಯೋರಪಿ ।**
**ಪ್ರತಿವಾದಿಮತಾಸಿದ್ಧೇರ್ದ್ವಿತೀಯೋಽಪಿ ನ ಶೋಭತೇ ॥ ೫೫೦ ॥**

**ಅರ್ಥ–** ವಾದಿನೋಃ = ವಾದ ಮಾಡುತ್ತಿರುವ, ಉಭಯೋಃ ಅಪಿ= ದ್ವೈತಾದ್ವೈತ ವಾದಿಗಳಿಗೂ ಕೂಡ, ಪ್ರಯೋಜಕಾಸಿದ್ಧೇಃ = 'ಅಯಂ ಘಟಃ' 'ಅಯಂ ಘಟಃ' ಎಂಬುದಾಗಿ ಅನೇಕರಿಂದ ಅನೇಕ ಬಗೆಯಲ್ಲಿ ಮಾಡಲ್ಪಟ್ಟ ವ್ಯವಹಾರವು ಸಿದ್ಧವಾಗದ ಕಾರಣ, ಆದ್ಯಃ = ಮೊದಲನೇ ಪಕ್ಷವು, ನ = ಶೋಭಿಸುವುದಿಲ್ಲ, ಪ್ರತಿವಾದಿಮತಾಸಿದ್ಧೇಃ = ಪ್ರತಿವಾದಿಗಳ ಪಕ್ಷದಲ್ಲಿ ಅಸಿದ್ಧವಾಗಿರುವ ಕಾರಣ, ದ್ವಿತೀಯೋಽಪಿ = ಎರಡನೆಯ ಪಕ್ಷವೂ ಕೂಡ, ನ ಶೋಭತೇ = ಶೋಭಿಸುವುದಿಲ್ಲ.

**ಅನುವಾದ–** ಈ ಮೂರುಬಗೆಯ ಅನುಗತವ್ಯವಹಾರಗಳಲ್ಲಿ ಒಂದೇ ವ್ಯವಹಾರವೆಂಬ ಮೊದಲನೆಯ ಪಕ್ಷವು ಯುಕ್ತವಲ್ಲ. ಅನುಗತವ್ಯವಹಾರವೆಂದರೆ, ವ್ಯವಹಾರವು ಒಂದೇ ಆಗಿರುವುದೆಂದು ವಾದಿಗಳಾದ ನೀವು ಪ್ರತಿವಾದಿಗಳಾದ ನಾವು, ಇಬ್ಬರೂ ಸಹ ಒಪ್ಪಿರುವುದಿಲ್ಲ. ಒಂದು ಧರ್ಮದಿಂದ ಕೂಡಿರುವಿಕೆಯೆಂಬ ಎರಡನೆಯ ಪಕ್ಷವನ್ನು ಸಿದ್ಧಾಂತಿಗಳಾದ ನಾವು ಒಪ್ಪದಿರುವ ಕಾರಣ ಅದೂ ಸಹ ಶೋಭಿಸುವುದಿಲ್ಲ.

**ಭಾವವಿಲಾಸಿನೀ–** ಪ್ರಯೋಜಕಾಸಿದ್ಧೇಃ ಘಟೋಽಯಂ ಘಟೋಽಯಮಿತಿ ಬಹುಭಿರ್ಬಹುಧಾ ಕ್ರಿಯಮಾಣಾನಾಂ ವ್ಯವಹಾರಾಣಾಮೈಕ್ಯಾಸಿದ್ಧೇಃ । ಪ್ರತಿವಾದಿಮತಾಸಿದ್ಧೇಃ ಪ್ರತಿವಾದಿಮತೇ ಅಸಿದ್ಧೇಃ । ಅದ್ಯಾಪಿ ವ್ಯವಹಾರಾವಚ್ಛೇದಕೀಭೂತಘಟತ್ವಾದಿಜಾತೇಃ ತತ್ತ್ವವಾದಿನಾಂ ಮತೇ ಏಕತ್ವಾಸಿದ್ಧ್ಯಾ ಪ್ರಯೋಜಕಸ್ಯಾನ್ಯತರಾಸಿದ್ಧೇಃ। ನಚ ಶಬ್ದನಿತ್ಯತ್ವವಾದಿನಾಂ ತೇಷಾಮೇಕಘಟಶಬ್ದಘಟಿತತ್ವಾದನುಗತವ್ಯವಹಾರಸ್ಯೈಕಧರ್ಮಾವಚ್ಛಿನ್ನತ್ವಮಿತಿ ವಾಚ್ಯಮ್ । ತೇನೈವಾನ್ಯಥಾಸಿದ್ಧೇಃ । ಘಟಕರೀರಕಲಶಾದಿಪರ್ಯಾಯಶಬ್ದೈಸ್ತತ್ರತತ್ರ ವ್ಯವಹಾರಸಂಭವೇನ ಶಬ್ದೈಕ್ಯಸ್ಯಾಪ್ಯಯೋಗಾಚ್ಚ ॥ ೫೯೦ ॥

**ವಿವರಣೆ–** 'ಅಯಂ ಘಟಃ' ಎಂಬುದಾಗಿ ಅನೇಕ ಜನರು, ಬೇರೆ ಬೇರೆ ಶಬ್ದಗಳಿಂದಲೇ ವ್ಯವಹರಿಸುತ್ತಾರೆ. ವಿಭಿನ್ನವಾದ ಜನರಿಂದ ಮಾಡಲ್ಪಟ್ಟ, ಭಿನ್ನಭಿನ್ನವಾದ ಈ ವ್ಯವಹಾರಗಳಿಗೆಲ್ಲಾ ಐಕ್ಯವನ್ನು ಸಮರ್ಥಿಸಲು ಸಾಧ್ಯವೇ ಇಲ್ಲ. ಪ್ರತಿವಾದಿಗಳಾದ ನಾವಾಗಲೀ, ವಾದಿಗಳಾದ ನೀವಾಗಲೀ, ಈ ಎಲ್ಲಾ ವ್ಯವಹಾರಗಳಿಗೆ ಐಕ್ಯವನ್ನು ಒಪ್ಪಿರುವುದಿಲ್ಲ. ಆದ್ದರಿಂದ ಈ ಮೂರು ಬಗೆಯ ಅನುಗತ ವ್ಯವಹಾರಗಳ ಪ್ರಶ್ನೆಗಳಲ್ಲಿ ಒಂದೇ ವ್ಯವಹಾರವನ್ನು ಅನುಗತ ವ್ಯವಹಾರವೆಂದು ಹೇಳುವ ಮೊದಲನೆಯ ಪಕ್ಷವು ಅಯುಕ್ತವೆಂದು ಸಿದ್ಧವಾಯಿತು.

ಇದರಂತೆ ಒಂದು ಧರ್ಮದಿಂದ ಕೂಡಿರುವ ವ್ಯವಹಾರವನ್ನೇ ಅನುಗತ ವ್ಯವಹಾರವೆಂಬ ಎರಡನೆಯ ಪಕ್ಷವನ್ನು ಹೇಳಬೇಕು. ಇದೂ ಸಹ ಅಯುಕ್ತವಾಗಿದೆ. ಏಕೆಂದರೆ ಸಕಲ ವ್ಯವಹಾರಗಳಿಗೆ ಅವಚ್ಛೇದಕವಾದ ಘಟತ್ವ-ಪಟತ್ವ ಮೊದಲಾದ ಜಾತಿಗಳನ್ನು ಪ್ರತಿವಾದಿಗಳೆನಿಸಿದ ತತ್ತ್ವವಾದಿಗಳಾದ ನಾವು ಒಪ್ಪಿರುವುದಿಲ್ಲ. ಆದ್ದರಿಂದ ಅನ್ಯತರಾಸಿದ್ಧಿದೋಷವು ಬರುತ್ತದೆ. ಶಬ್ದವನ್ನು ನಿತ್ಯವೆಂದು ಹೇಳುವ ತತ್ತ್ವವಾದಿಗಳ ಮತದಲ್ಲಿ ಸಕಲ ಘಟಗಳಲ್ಲಿ ಘಟಃ ಎಂಬ ಒಂದೇ ಶಬ್ದವನ್ನು ಪ್ರಯೋಗ ಮಾಡುವುದರಿಂದ, ಅನುಗತವ್ಯವಹಾರವು ಏಕಧರ್ಮಾವಚ್ಛಿನ್ನವೆಂದು ಹೇಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಒಂದೇ ಘಟಪದಾರ್ಥವನ್ನು ಘಟಃ ಎಂಬ ಶಬ್ದದಿಂದ ವ್ಯವಹರಿಸುವಂತೆ ಕರೀರ ಎಂಬ ಶಬ್ದದಿಂದಲೂ, ಕಲಶ ಇತ್ಯಾದಿ ಪರ್ಯಾಯ ಶಬ್ದಗಳಿಂದಲೂ ವ್ಯವಹಾರವನ್ನು ಮಾಡುವುದು ಕಂಡಿದೆ. ಈ ಎಲ್ಲಾ ಶಬ್ದಗಳಿಗೆ ಐಕ್ಯವನ್ನು ಒಪ್ಪಲು ಸಾಧ್ಯವೇ ಇಲ್ಲ.

**ಅಪ್ರಯೋಜಕತಾದೋಷಸ್ತೃತೀಯಂ ಪಕ್ಷಮಾಕ್ಷಿಪೇತ್ ।**
**ನಾನಾಸಮಾನವ್ಯವಹಾರೇಣ ಧರ್ಮೋಽಪಿ ತಾದೃಶಃ ॥ ೫೯೧ ॥**

**ಅರ್ಥ–** ತೃತೀಯಂ ಪಕ್ಷಮ್ = ಒಂದೇ ಆಕಾರದ ಶಬ್ದದಿಂದ ಕೂಡಿರುವುದೇ ಅನುಗತವ್ಯವಹಾರವೆಂಬ ಮೂರನೆಯ ಪಕ್ಷವನ್ನು ಅಪ್ರಯೋಜಕತಾದೋಷಃ =

ಅಪ್ರಯೋಜಕತ್ವ ಎಂಬ ದೋಷವು, ಆಕ್ಷಿಪೇತ್ = ನಿರಾಕರಿಸುತ್ತದೆ. ನಾನಾಸಮಾನವ್ಯವಹಾರೇಣ = ಅನೇಕವಿಧವಾದ ಏಕಪ್ರಕಾರದ ಶಬ್ದ ಪ್ರಯೋಗದ ವ್ಯವಹಾರದಿಂದ, ಧರ್ಮಃ ಅಪಿ = ಧರ್ಮವೂ ಸಹ, ತಾದೃಶಃ = ಏಕಪ್ರಕಾರವೇ, ಸಿದ್ಧ್ಯೇತ್ = ಸಿದ್ಧಿಸಬಹುದು.

**ಅನುವಾದ–** ಎಲ್ಲ ವ್ಯವಹಾರಗಳೂ ಒಂದೇ ಶಬ್ದದಿಂದ ಕೂಡಿರುತ್ತದೆ. ಇದೇ ಅನುಗತವ್ಯವಹಾರದ ಅಭಿಪ್ರಾಯ. ಇದು ಮೂರನೆಯ ಪಕ್ಷ. ಈ ಪಕ್ಷವನ್ನು ಅಪ್ರಯೋಜಕತ್ವ ದೋಷವು ನಿರಾಕರಿಸುತ್ತದೆ. ಅಂದರೆ, 'ಅಯಂ ಘಟಃ' ಇತ್ಯಾದಿಯಾಗಿ ಒಂದೇ ಬಗೆಯ ಅನೇಕ ವ್ಯವಹಾರಗಳು ಕಂಡಿವೆ. ಈ ವ್ಯವಹಾರವನ್ನನುಸರಿಸಿ ಎಲ್ಲ ಘಟಗಳಲ್ಲಿಯೂ ಒಂದೇ ಘಟತ್ವವನ್ನೇಕೆ ಒಪ್ಪಬೇಕು ? ಬೇರೆಬೇರೆ ಘಟತ್ವಗಳನ್ನು ಒಪ್ಪಿದರೆ ತೊಂದರೆಯೇನು ? ಘಟತ್ವವು ಒಂದೇ ಆಗದೆ ಬೇರೆಬೇರೆ ಆಗಿದ್ದರೂ ಅನುಗತದ ವ್ಯವಹಾರವನ್ನು ಕೂಡಿಸಬಹುದು ಈ ವ್ಯವಹಾರಗಳು ಒಂದೇ ಬಗೆಯ ಧರ್ಮಗಳಿಂದ ಉಪಪನ್ನವಾಗುತ್ತವೆ. ಒಂದೇ ಧರ್ಮವನ್ನೂ ಒಪ್ಪಬೇಕೆಂಬ ನಿರ್ಬಂಧವಿಲ್ಲ ಎಂದಭಿಪ್ರಾಯ.

**ಭಾವವಿಲಾಸಿನೀ–** 'ಅಪ್ರಯೋಜಕತಾದೋಷಃ' ಅಪ್ರಯೋಜಕತ್ವಾಸಿದ್ಧಿರೂಪದೋಷಃ। ಅಪ್ರಯೋಜಕತ್ವಮುಪಪಾದಯತಿ ನಾನೇತಿ॥ ನಾನಾಸಮಾನವ್ಯವಹಾರೇಣ ಭಿನ್ನಭಿನ್ನೈಕಪ್ರಕಾರ ವ್ಯವಹಾರೇಣ ತಾದೃಶಃ ಪ್ರತ್ಯೇಕಂ ಧರ್ಮಿಷು ಭಿನ್ನಭಿನ್ನಃ ಏಕಪ್ರಕಾರಶ್ಚ ॥ ೫೯೧ ॥

**ವಿವರಣೆ–** ಅಪ್ರಯೋಜಕತಾದೋಷಃ ಎಂದರೆ ಅಪ್ರಯೋಜಕತ್ವಾಸಿದ್ಧಿಯೆಂಬ ದೋಷ ಎಂದರ್ಥ. ಅದನ್ನೇ ನಾನಾಸಮಾನ ಇತ್ಯಾದಿ ಶ್ಲೋಕಾರ್ಧದಿಂದ ವಿವರಿಸುತ್ತಿದ್ದಾರೆ. ಒಂದೇ ಪ್ರಕಾರದ ಅನೇಕ ವ್ಯವಹಾರಗಳಿಂದ ಪ್ರತಿಯೊಂದು ಧರ್ಮವನ್ನೂ ಕೂಡ ಭಿನ್ನಭಿನ್ನವಾಗಿಯೇ ಒಪ್ಪಬಹುದು ಎಂದು 'ನಾನಾಸಮಾನ-ವ್ಯವಹಾರೇಣ ಧರ್ಮೋಽಪಿ ತಾದೃಶಃ ಎಂಬುದರ ಅಭಿಪ್ರಾಯವಾಗಿದೆ.

ಒಟ್ಟು ಅಭಿಪ್ರಾಯ - ತಾರ್ಕಿಕರು ಅನುಗತವಾದ ವ್ಯವಹಾರದಿಂದ ಜಾತಿಯನ್ನು ಒಪ್ಪಬೇಕೆಂದು ಹೇಳಿದರು. ಹೀಗೆ ಹೇಳಿದಾಗ ಅನುಗತವ್ಯವಹಾರ ಶಬ್ದಕ್ಕೆ ಒಂದೇ ವ್ಯವಹಾರವೆಂಬ ಅರ್ಥವನ್ನು ವಿವಕ್ಷಿಸಿದರೆ ಹೇತ್ವಸಿದ್ಧಿ ದೋಷವನ್ನು ಹೇಳಲಾಯಿತು. ಎಂದರೆ, ಏಕವ್ಯವಹಾರಾನ್ಯಥಾನುಪಪತ್ತಿಯಿಂದ ಜಾತ್ಯೈಕ್ಯವನ್ನು ಒಪ್ಪಬೇಕು ಎಂದಂತಾಯಿತು. ಸಕಲ ಘಟಗಳಲ್ಲಿ ಒಂದೇ ವ್ಯವಹಾರವಿದೆ ಎಂಬುದನ್ನು ವಾದಿ-ಪ್ರತಿವಾಗಳಿಬ್ಬರೂ ಕೂಡ ಒಪ್ಪದ ಕಾರಣ ಹೇತುವೇ ಅಸಿದ್ಧವಾಗುತ್ತದೆ. ಇನ್ನು, ಆ ಎಲ್ಲ ವ್ಯವಹಾರಗಳೂ ಘಟತ್ವ ಮೊದಲಾದ ಒಂದೇ ಧರ್ಮದಿಂದ ವಿಶಿಷ್ಟವಾಗಿರುತ್ತವೆಂದು ಹೇಳಬೇಕು ಅಂದರೆ, ವ್ಯವಹಾರದಲ್ಲಿ ಏಕಧರ್ಮಾವಚ್ಛಿನ್ನತ್ವವನ್ನು ಹೇಳಬೇಕು ಅಥವಾ ವ್ಯವಹಾರ ವಿಷಯದಲ್ಲಿ ಏಕಧರ್ಮಾವಚ್ಛಿನ್ನತ್ವವನ್ನು ಹೇಳಬೇಕು.

ಆದರೆ ಸಿದ್ಧಾಂತಿಗಳಾದ ನಾವು ಏಕಧರ್ಮವನ್ನು ಎಲ್ಲಿಯೂ ಒಪ್ಪದ ಕಾರಣ ಏಕಧರ್ಮಾವಚ್ಛಿನ್ನತ್ವವನ್ನು ವ್ಯವಹಾರದಲ್ಲಾಗಲೀ, ವ್ಯವಹಾರದ ವಿಷಯದಲ್ಲಾಗಲೀ ಒಪ್ಪಲಾಗದು. ಹೇತುಭೂತವಾದದ್ದು ಉಭಯಸಮ್ಮತವಾಗಬೇಕಾದ್ದರಿಂದ ತತ್ತ್ವವಾದಿಗಳಿಗೆ ಇಂತಹ ಹೇತು ಅಸಿದ್ಧವಾಗಿರುವ ಕಾರಣ ಅನ್ಯತರಾಸಿದ್ಧಿದೋಷವನ್ನು ಹೇಳಲಾಯಿತು. ಇನ್ನು ಎಲ್ಲ ವ್ಯವಹಾರಗಳು ಒಂದೇ ಶಬ್ದದಿಂದ ಕೂಡಿರುತ್ತವೆಂಬ ಮೂರನೆಯ ಪಕ್ಷದಲ್ಲಿ ಅಪ್ರಯೋಜಕತ್ವದೋಷವನ್ನು ಪ್ರಕೃತ ಶ್ಲೋಕದಲ್ಲಿ ಹೇಳುತ್ತಿದ್ದಾರೆ. ಅಂದರೆ ಏಕವಿಧವ್ಯವಹಾರದಿಂದ ಜಾತ್ಯೈಕ್ಯವನ್ನು ಒಪ್ಪಬೇಕೆಂದರೆ ಅಪ್ರಯೋಜಕತಾ ದೋಷ ಬರುತ್ತದೆ. ಪ್ರತಿಯೊಂದು ಧರ್ಮಗಳಲ್ಲಿಯೂ ಭಿನ್ನಭಿನ್ನವಾದ ಒಂದೇ ಬಗೆಯ ವ್ಯವಹಾರವಿದೆ. ಹಾಗಾಗಿ ಜಾತ್ಯೈಕ್ಯವನ್ನು ಒಪ್ಪುವ ಅವಶ್ಯಕತೆಯಿಲ್ಲ. ಪ್ರತಿಯೊಂದು ಪದಾರ್ಥದಲ್ಲಿಯೂ ಭಿನ್ನಭಿನ್ನವಾದ ಘಟತ್ವ ಮೊದಲಾದ ಸದೃಶವಾದ ಧರ್ಮಗಳನ್ನು ಒಪ್ಪಿಯೂ ಕೂಡ ಇದನ್ನು ಕೂಡಿಸಬಹುದು. ಆದ್ದರಿಂದ ಅನುಗತವ್ಯವಹಾರದ ಮೂರು ಬಗೆಯ ಪರಿಷ್ಕಾರಗಳೂ ಕೂಡ ಅಸಮಂಜಸವಾಗಿವೆ.

**ಸಿದ್ಧೇತ್ವರಂ ತಸ್ಯ ಸರ್ವತ್ರೈಕತಾ ಕಿಂಕೃತಾ ವದ ।**
**ಯಕ್ಷಾನುರೂಪೋ ಹಿ ಬಲಿಃ ಪ್ರಾಚಾಂ ವಾಚಮನುಸ್ಮರ ॥ ೫೯೨ ॥**

**ಅರ್ಥ–** ಪರಮ್ = ಆದರೆ, ಸರ್ವತ್ರ = ಘಟಪಟಾದಿ ಸರ್ವವಸ್ತುಗಳಲ್ಲಿಯೂ, ತಸ್ಯ = ವ್ಯವಹಾರದ, ಏಕತಾ = ಏಕತ್ವವು, ಕಿಂಕೃತಾ = ಯಾವ ಕಾರಣದಿಂದ ಎಂದು, ವದ = ಹೇಳು, ಹಿ = ಏಕೆಂದರೆ, ಬಲಿಃ = ಬಲಿಯು, ಯಕ್ಷಾನುರೂಪಃ = ಯಕ್ಷ-ರಾಕ್ಷಸ-ಭೂತಾದಿಗಳ ಯೋಗ್ಯತೆಗೆ ಅನುಗುಣವಾಗಿರುತ್ತದೆ ಎಂಬ, ಪ್ರಾಚಾಂ ವಾಚಮ್ = ಪೂರ್ವಿಕರ ಮಾತನ್ನು, ಅನುಸ್ಮರ = ಸ್ಮರಿಸಿಕೋ.

**ಅನುವಾದ–** ವ್ಯವಹಾರವು ಬೇರೆ ಬೇರೆ ಆಗಿರುವಾಗ, ಧರ್ಮ ಮಾತ್ರ ಒಂದೇ ಆಗಲು ಹೇಗೆ ಸಾಧ್ಯ? ಯಕ್ಷ-ರಾಕ್ಷಸ-ಭೂತ ಮೊದಲಾದವುಗಳಿಗೆ ಅನುಗುಣವಾದ ಬಲಿಯನ್ನೇ ನೀಡಬೇಕು ಎಂಬ ಪ್ರಾಚೀನರ ಮಾತನ್ನು ಸ್ಮರಿಸಿಕೋ, ಅದರಂತೆ ಇಲ್ಲಿಯೂ ವ್ಯವಹಾರವು ಭಿನ್ನಭಿನ್ನವಾದಾಗ ಈ ವ್ಯವಹಾರಕ್ಕೆ ಆಧಾರದಂತಿರುವ ಧರ್ಮಗಳೂ ಕೂಡ ಭಿನ್ನಭಿನ್ನವೇ ಆಗಿರಬೇಕು.

**ಭಾವವಿಲಾಸಿನೀ–** ಕಿಂಕೃತಾ ಪ್ರಯೋಜಕೇಷು ಕಸ್ಯಾಪ್ಯೈಕ್ಯಾಭಾವಾತ್ ॥ ೫೯೨ ॥

**ವಿವರಣೆ–** ತಾರ್ಕಿಕನು ವ್ಯವಹಾರವನ್ನು ಒಂದೇ ಎಂದು ಒಪ್ಪುವುದಿಲ್ಲ. ಪ್ರತಿಯೊಂದು ಘಟಗಳಲ್ಲಿರುವ ವ್ಯವಹಾರವೂ ಕೂಡ ಭಿನ್ನ-ಭಿನ್ನವೆಂದೇ ಒಪ್ಪುತ್ತಾನೆ. ವ್ಯವಹಾರವು ಭಿನ್ನ-ಭಿನ್ನವಾದರೂ ಅವುಗಳಿಗೆ ಕಾರಣವಾದ ಧರ್ಮವನ್ನು ಮಾತ್ರ ಒಂದೇ ಎಂದು ಒಪ್ಪುತ್ತಾನೆ. ಇಂತಹ ತಾರ್ಕಿಕನನ್ನು ದಾರ್ಷ್ಟಾಂತಪುರಸ್ಸರವಾಗಿ ನಿರಾಕರಿಸುತ್ತಿದ್ದಾರೆ

ಯಕ್ಷ-ರಾಕ್ಷಸ ಮೊದಲಾದವುಗಳಲ್ಲಿ ಸಣ್ಣಸಣ್ಣದ್ದಕ್ಕೆ ಸಣ್ಣಸಣ್ಣ ಬಲಿಯನ್ನು, ದೊಡ್ಡದೊಡ್ಡ ಯಕ್ಷಾದಿಗಳಿಗೆ ದೊಡ್ಡದೊಡ್ಡ ಬಲಿಯನ್ನು ನೀಡಲಾಗುತ್ತದೆ. ಅದರಂತೆ ಆಯಾ ಗಣದೇವತೆಗಳಿಗೂ ಪ್ರತ್ಯೇಕ ಪ್ರತ್ಯೇಕವಾದ ಬಲಿಯನ್ನು ನೀಡಲಾಗುತ್ತದೆ. ಅವರವರಿಗೆ ತೃಪ್ತಿಯಾಗುವಷ್ಟು ಆಹಾರವನ್ನು ನೀಡಲೇಬೇಕು. ಹಾಗೇ ಬಲಿಯನ್ನು ನೀಡದಿದ್ದರೆ ತೃಪ್ತಿಯಾಗದ ಆ ಯಕ್ಷಾದಿಗಳಿಂದ ನಮಗೆ ಅನರ್ಥವೇ ಸಂಭವಿಸುತ್ತವೆ. ಅದರಂತೆ ಪ್ರಕೃತ ಪ್ರತಿಯೊಂದು ಘಟಾದಿಗಳಲ್ಲಿರುವ ವ್ಯವಹಾರವು ಅನೇಕವಾಗಿವೆ. ಈ ಅನೇಕವಾಗಿರುವ ವ್ಯವಹಾರವೆಂಬ ಯಕ್ಷ-ರಾಕ್ಷಸ ಮೊದಲಾದವುಗಳಿಗೆ ಒಂದೇ ಜಾತಿಯೆಂಬ ಆಹಾರವನ್ನು ನೀಡಿದರೆ ತೃಪ್ತಿ ಹೇಗಾದೀತು? ಅಂದರೆ ವ್ಯವಹಾರಗಳು ಅನೇಕವಿರುವ ಕಾರಣ ಅದಕ್ಕನುಗುಣವಾಗಿ ಜಾತಿಯನ್ನೂ ಕೂಡ ಅನೇಕವೆಂದೇ ಹೇಳಬೇಕು. ಹೀಗೊಪ್ಪದಿದ್ದರೆ ಅನುಗತವ್ಯವಹಾರವೂ ಕೂಡ ಉಪಪನ್ನವಾಗುವುದಿಲ್ಲ. ನಿಮ್ಮ ಹಿಂದಿನವರೇ 'ಯಕ್ಷಾನುರೂಪೋ ಬಲಿಃ' ಎಂಬ ನ್ಯಾಯವನ್ನು ಒಪ್ಪಿದ್ದಾರೆ.

**ಅಖಂಡಜಾತೇರೇಕೈಕೋ ಯದ್ಯಂಶೋ ವ್ಯಕ್ತಿಷೂಚ್ಯತೇ ।**
**ಘಟಾಸ್ತರ್ಹಿ ಘಟಾಂಶಾಃ ಸ್ಯುರ್ಘಟಸ್ತು ಸ್ಯಾನ್ನ ಕಶ್ಚನ ॥ ೫೯೩ ॥**

**ಅರ್ಥ–** ಯದಿ = ಒಂದು ವೇಳೆ, ಅಖಂಡಜಾತೇಃ = ಅಖಂಡವಾದ ಜಾತಿಯ, ಏಕೈಕಾಂಶಃ = ಒಂದೊಂದು ಅಂಶವು, ವ್ಯಕ್ತಿಷು = ಘಟ ಮೊದಲಾದ ವ್ಯಕ್ತಿಗಳಲ್ಲಿ, ಉಚ್ಯತೇ = ಹೇಳುವುದಾದರೆ, ತರ್ಹಿ = ಆವಾಗ, ಘಟಾಃ = ಘಟಗಳು, ಘಟಾಂಶಾಃ = ಘಟಾಂಶಗಳು, ಸ್ಯುಃ = ಆಗುತ್ತವೆ. ಕಶ್ಚನ = ಯಾವುದೂ ಸಹ, ಘಟಃ ನ ಸ್ಯಾತ್ = ಘಟವಾಗುವುದೇ ಇಲ್ಲ.

**ಅನುವಾದ– ಜಾತಿಯನ್ನು ಅಖಂಡವೆಂದು ಹೇಳಿ ಇಂತಹ ಅಖಂಡವಾದ ಜಾತಿಯು ಸಕಲವ್ಯಕ್ತಿಗಳಲ್ಲಿ ಅಂಶತಃ ಇರುತ್ತದೆಂದು ಹೇಳಬೇಕು. ಹೀಗೆ ಹೇಳಿದಾಗ, ಆ ಘಟಾದಿ ವ್ಯಕ್ತಿಗಳು ಘಟಾಂಶಗಳೇ ಆಗುತ್ತವೆ ಹೊರತು, ಪೂರ್ಣವಾದ ಘಟವೆಂದಾಗುವುದಿಲ್ಲ. ಅಂದರೆ ಯಾವುದೇ ಘಟವೂ ಕೂಡ ಘಟವೆಂದನಿಸದೇ ಹೋಗಬೇಕಾದೀತು.**

**ಭಾವವಿಲಾಸಿನೀ– ಅಖಂಡಜಾತ್ಯಂಗೀಕಾರೇ ದೂಷಣಾಂತರಮಾಹ – ಅಖಂಡೇತಿ ॥೫೯೩॥**

**ವಿವರಣೆ–** ಜಾತಿಯು ಅಖಂಡವೆಂದು ಒಪ್ಪಿದರೆ ಬರುವಂತಹ ದೋಷವನ್ನು ವಿವರಿಸುತ್ತಿದ್ದಾರೆ-

ಸಾವಿರಾರು ಘಟಗಳಲ್ಲಿರುವ ಘಟತ್ವಜಾತಿಯು ಒಂದೇ ಆಗಿರುತ್ತದೆಂದು ತಾರ್ಕಿಕರ ಅಭಿಪ್ರಾಯ. ಈ ಎಲ್ಲಾ ಘಟಗಳಲ್ಲಿ ಇರುವಂತಹ ಘಟತ್ವಜಾತಿಯು ಪ್ರತಿಯೊಂದು ಘಟಗಳಲ್ಲಿ ಅಂಶತಃ ಇರುತ್ತದೋ, ಅಥವಾ ಸಂಪೂರ್ಣವಾಗಿ ಇರುತ್ತದೋ ? ಎಂಬ ವಿಕಲ್ಪಕ್ಕೆ ಉತ್ತರಿಸಬೇಕು. ಅಂಶತಃ ವ್ಯಕ್ತವಾಗುತ್ತದೆಂದು ಹೇಳಿದರೆ, ಜಾತಿಯ ಅಂಶವಷ್ಟೇ

ಘಟದಲ್ಲಿ ಬಂದಂತಾಯಿತು. ಆವಾಗ ಪ್ರತಿಯೊಂದು ಪದಾರ್ಥಗಳಲ್ಲಿ ಜಾತಿಯ ಅಂಶಗಳು ಭಿನ್ನ-ಭಿನ್ನವಾಗಿರುತ್ತವೆಂದು ಹೇಳಿದಂತೆಯೇ ಆಯಿತು. ಆವಾಗ ಪ್ರತಿಯೊಂದು ಘಟವೂ ಘಟದ ಅಂಶವೇ ಆಗಬೇಕಾಗುತ್ತದೆ ಹೊರತು, ಸಂಪೂರ್ಣ ಘಟವೆಂದಾಗುವುದಿಲ್ಲ.

**ಸಂಪೂರ್ಣಪಟತಾಶೂನ್ಯಪಟಾಂಶೇಷ್ವಂಶಧೀರಿವ ।**
**ಸಂಪೂರ್ಣಜಾತ್ಯನಾಧಾರೇ ಸ್ಯಾದಂಶತ್ವಪ್ರಮಾಪರಮ್ ॥ ೫೮ ॥**

**ಅರ್ಥ–** ಸಂಪೂರ್ಣಪಟತಾಶೂನ್ಯಪಟಾಂಶೇಷು = ಸಂಪೂರ್ಣಪಟತ್ವವೆಂಬ ಧರ್ಮವಿಲ್ಲದ ಪಟದ ಭಾಗಗಳಲ್ಲಿ, ಅಂಶಧೀಃ ಇವ = ಅಂಶ ಎಂಬ ಜ್ಞಾನವೇ ಬರುವಂತೆ, ಸಂಪೂರ್ಣಜಾತ್ಯನಾಧಾರೇ = ಸಂಪೂರ್ಣವಾದ ಜಾತಿಯಿಲ್ಲದ ಘಟಾದಿಗಳಲ್ಲಿಯೂ, ಪರಂ= ನಿಶ್ಚಿತವಾಗಿಯೂ, ಅಂಶತ್ವಪ್ರಮಾ = ಘಟದ ಅಂಶ ಎಂಬ ಜ್ಞಾನವೇ, ಸ್ಯಾತ್ = ಬರಬೇಕಾದೀತು.

**ಅನುವಾದ–** ಪೂರ್ಣವಾದ ಬಟ್ಟೆಯನ್ನು ತುಂಡರಿಸಿದಾಗ, ಎಲ್ಲರೂ ಕೂಡ ಅದನ್ನು ಬಟ್ಟೆಯ ತುಂಡು ಎಂದು ವ್ಯವಹರಿಸುತ್ತಾರೆ. ಅದರಂತೆ ಜಾತಿ ಎಂಬ ವಿಶಿಷ್ಟ ಪದಾರ್ಥದ ಅಂಶವು ಘಟದಲ್ಲಿದೆ ಎಂದು ಹೇಳಿದರೆ, ಘಟವನ್ನು ನೋಡಿದಾಗ ಇದು ಘಟದ ಅಂಶ ಎಂಬ ಜ್ಞಾನವೇ ಬರಬೇಕಾದೀತು.

**ಭಾವವಿಲಾಸಿನೀ–** ದೃಷ್ಟಾಂತಮಾಹ – **ಸಂಪೂರ್ಣೇತಿ** ॥ ಸಂಪೂರ್ಣಪಟತಾ- ಶೂನ್ಯ-ಪಟಾಂಶೇಷು ಏಕೈಕತಂತುಷ್ವಿತ್ಯರ್ಥಃ । ಉಕ್ತಮರ್ಥಂ ದಾರ್ಷ್ಟಾಂತಿಕೇ ದರ್ಶಯತಿ – **ಸಂಪೂರ್ಣೇತಿ** ॥ ೫೮ ॥

**ವಿವರಣೆ–** ಹಿಂದೆ ಹೇಳಿದ ವಿಚಾರದ ಬಗ್ಗೆ ದೃಷ್ಟಾಂತ ನೀಡುತ್ತಿದ್ದಾರೆ -

ಪೂರ್ಣವಾದ ಬಟ್ಟೆಯನ್ನು ತುಂಡರಿಸಿದರೆ, ಬಟ್ಟೆಯ ತುಂಡು ಎಂದು ವ್ಯವಹರಿಸುವುದು ಲೋಕದಲ್ಲಿ ಕಂಡಿದೆ. ಅದರಂತೆ ಪೂರ್ಣವಾದ ಅಖಂಡವಾದ ಜಾತಿಯು ಯಾವುದೇ ಒಂದು ಘಟದಲ್ಲಿ ಅಂಶತಃ ಇದೆಯೆಂದು ಹೇಳಿದರೆ ಆ ಘಟವು ಘಟದ ಅಂಶ ಆಗುತ್ತದೆ ಹೊರತು, ಪೂರ್ಣವಾದ ಘಟತ್ವಜಾತಿಯುಳ್ಳ ಘಟವೆಂದೆನಿಸುವುದಿಲ್ಲ. ಹೀಗೆ ತಾವು ಹೇಳಿದ ದೃಷ್ಟಾಂತವನ್ನು ದಾರ್ಷ್ಟಾಂತಿಕದಲ್ಲಿ ಸಮನ್ವಯ ಮಾಡಲು 'ಸಂಪೂರ್ಣಜಾತ್ಯನಾಧಾರೇ' ಎಂದು ಹೇಳಿರುತ್ತಾರೆ.

**ಆಕಾಶಾಂಶೇಷು ಚಾಕಾಶಶಬ್ದೋಕ್ತಿರುಪಚಾರತಃ ।**
**ಅವಕಾಶಪ್ರದತ್ವಾಖ್ಯಯೋಗಸಂಭವತೋಽಪಿ ವಾ ॥ ೫೯ ॥**

**ಅರ್ಥ–** ಆಕಾಶಾಂಶೇಷು ಚ = ಆಕಾಶದ ಅಂಶಗಳಲ್ಲಾದರೂ, ಆಕಾಶಶಬ್ದೋಕ್ತಿಃ= ಆಕಾಶವೆಂಬ ಶಬ್ದವ್ಯವಹಾರವು, ಉಪಚಾರತಃ = ಗೌಣರೂಪದಿಂದ, ಅಪಿ ವಾ = ಅಥವಾ, ಅವಕಾಶಪ್ರದತ್ವಾಖ್ಯಯೋಗಸಂಭವತಃ = ಅವಕಾಶವನ್ನು ನೀಡುವಿಕೆ ಎಂಬ ಯೌಗಿಕಾರ್ಥದ ವಿವಕ್ಷೆಯಿಂದಲೇ ಯುಕ್ತವಾಗುತ್ತದೆ.

**ಅನುವಾದ–** ಹಾಗಾದರೆ ಆಕಾಶಾಂಶದಲ್ಲಿ ಸಂಪೂರ್ಣವಾಗಿ ಆಕಾಶತ್ವವಿಲ್ಲದಿದ್ದರೂ ಆಕಾಶ ಶಬ್ದ ಪ್ರಯೋಗವು ಹೇಗೆ ಯುಕ್ತವಾಗುತ್ತದೆಂದರೆ ಇದು ಔಪಚಾರಿಕವಾದ (ಅಪ್ರಧಾನವಾದ) ಪ್ರಯೋಗವೆಂದು ತಿಳಿಯಬೇಕು. ಅಥವಾ ಈ ಆಕಾಶಾಂಶವೂ ಕೂಡ ಅವಕಾಶವನ್ನು ನೀಡುತ್ತಿರುವ ಕಾರಣ, ಆಕಾಶಶಬ್ದದಿಂದ ಯೋಗ-ರೂಪದಿಂದಲೂ ಪ್ರತಿಪಾದ್ಯವಾಗಿರುತ್ತದೆ.

**ಭಾವವಿಲಾಸಿನೀ–** ಕಥಂ ತರ್ಹಿ ಆಕಾಶಾಂಶೇಷ್ವಪಿ ಆಕಾಶವ್ಯವಹಾರ ಇತ್ಯತೋ ದ್ವೇಧಾ ಪರಿಹಾರಮಾಹ – **ಆಕಾಶೇತಿ** ॥ ೫೫ ॥

**ವಿವರಣೆ–** ಘಟತ್ವವೆಂಬ ಜಾತಿಯ ಅಂಶಕ್ಕೆ ಆಧಾರವಾದ ಘಟದಲ್ಲಿ 'ಅಯಂ ಘಟಃ' ಎಂಬ ವ್ಯವಹಾರವನ್ನು ಏಕೆ ಮಾಡಬಾರದು? ಅಖಂಡವಾದ ಆಕಾಶವು ಅಂಶತಃ ಘಟಾದಿಗಳಲ್ಲಿರುತ್ತದೆ. ಅಂತಹ ಆಕಾಶವನ್ನೂ ಕೂಡ ಆಕಾಶಶಬ್ದದಿಂದಲೇ ವ್ಯವಹರಿಸುವುದು ಲೋಕದಲ್ಲಿ ಕಂಡಿದೆ. ಅದರಂತೆ ಹೇಳಬಹುದಲ್ಲವೇ?

ಹೀಗೆ ಪ್ರಶ್ನಿಸಬಾರದು. ಏಕೆಂದರೆ ಆಕಾಶದ ಅಂಶವೆನಿಸಿರುವ ಘಟಾದ್ಯಾಕಾಶಗಳಲ್ಲಿ, ಆಕಾಶವೆಂಬ ವ್ಯವಹಾರವು ಕೇವಲ ಗೌಣವಾದದ್ದು, ಅಥವಾ ಅವಕಾಶಪ್ರದಾತೃತ್ವವೆಂಬ ಪ್ರವೃತ್ತಿನಿಮಿತ್ತವಿರುವ ಕಾರಣದಿಂದಲೂ ಅದನ್ನು ಆಕಾಶವೆನ್ನಬಹುದು. ಆದರೆ ಘಟಶಬ್ದ ಪ್ರಯೋಗಕ್ಕೆ ಪ್ರವೃತ್ತಿನಿಮಿತ್ತವೆನಿಸಿದ ಸಂಪೂರ್ಣಘಟತ್ವ ಎಂಬ ಜಾತಿಯಿಲ್ಲದ ಕಾರಣ ಘಟವನ್ನು ಘಟಃ ಎಂಬ ಶಬ್ದದಿಂದ ವ್ಯವಹರಿಸಲು ಸಾಧ್ಯವಿಲ್ಲ.

**ಅನೇಕವ್ಯಂಜಕವ್ಯಂಗ್ಯಾ ಯಥೈಕಾ ಜಾತಿರುಚ್ಯತೇ ।**
**ತಥಾऽನೇಕಘಟತ್ವೇಭ್ಯೋ ವಾಗೇಕೈವ ಪ್ರವರ್ತತಾಮ್ ॥ ೫೬ ॥**

**ಅರ್ಥ–** ಯಥಾ = ಯಾವರೀತಿಯಾಗಿ, ಏಕಾ ಜಾತಿಃ = ಒಂದೇ ಜಾತಿಯು, ಅನೇಕವ್ಯಂಜಕವ್ಯಂಗ್ಯಾ = ಬಹುವಿಧವಾದ ವ್ಯಂಜಕಗಳೆನಿಸಿದ ಆಕೃತಿಗಳಿಂದ ಅಭಿವ್ಯಕ್ತವಾಗುತ್ತದೆಂದು, ಉಚ್ಯತೇ = ಹೇಳಲ್ಪಡುತ್ತದೆಯೋ, ತಥಾ = ಅದರಂತೆ, ಅನೇಕಘಟತ್ವೇಭ್ಯಃ = ಅನೇಕ ಘಟತ್ವಗಳಿಂದ, ಏಕೈವ ವಾಕ್ = ಅಯಂ ಘಟಃ ಎಂಬ ಒಂದೇ ವ್ಯವಹಾರವು, ಪ್ರವರ್ತತಾಮ್ = ಪ್ರವೃತ್ತವಾಗಲಿ.

**ಅನುವಾದ–** ಅನುಗತ ವ್ಯವಹಾರವನ್ನು ಒಪ್ಪಿದರೂ ಕೂಡ ಅನೇಕ ಆಕೃತಿಗಳಿಂದ ತಿಳಿಯಲ್ಪಟ್ಟ ಘಟತ್ವವೆಂಬ ಒಂದು ಜಾತಿಯನ್ನು ಹೇಗೆ ಒಪ್ಪುತ್ತೀಯೋ, ಅದೇ

**ರೀತಿಯಾಗಿ ಭಿನ್ನ-ಭಿನ್ನವಾದ ಘಟತ್ವಗಳು ಪ್ರತಿಯೊಂದು ಘಟಗಳಲ್ಲಿವೆ. ಅಂತಹ ಘಟತ್ವಗಳಿಂದ ಒಂದೇ ವಿಧವಾದ ವಾಕ್ಯವು ಪ್ರಯೋಗಿಸಲ್ಪಡಲಿ, ಏನು ಬಾಧಕ?**

**ಭಾವವಿಲಾಸಿನೀ–** ಪೂರ್ವಮನುಗತವ್ಯವಹಾರ ಏವ ನಾಸ್ತೀತ್ಯುಕ್ತಮ್ । ಅಧುನಾ ಅಸ್ತು ವಾ ಅಸೌ ವ್ಯವಹಾರಃ ತಥಾಪಿ ನಾನುಗತಜಾತಿಸಿದ್ಧಿರಿತಿ ಸದೃಷ್ಟಾಂತಮಾಹ – **ಅನೇಕೇತಿ** ॥ ೫೯೬ ॥

**ವಿವರಣೆ–** ಹಿಂದೆ ಅನುಗತವ್ಯವಹಾರವೇ ಅಸಿದ್ಧವೆಂದು ಹೇಳಿದರು. ಈಗ ಅನುಗತವ್ಯವಹಾರವನ್ನು ಒಪ್ಪಿದರೂ ಅನುಗತವಾದ ಧರ್ಮವು ಸಿದ್ಧಿಸುವುದಿಲ್ಲವೆಂದು ಹೇಳುತ್ತಿದ್ದಾರೆ.

**ಶಬ್ದೈಕ್ಯಂ ಚ ನ ತೇ ಪಕ್ಷೇ ತತಸ್ತತ್ರಾಪಿ ಚೈಕತಾಮ್ ।**
**ಸ್ವನಿಯಂತುರ್ನಿಯಮ್ಯೋಽಸೌ ನ ಸಹೇತೇತಿ ಮೇ ಮತಿಃ ॥ ೫೯೭ ॥**

**ಅರ್ಥ–** ತೇ = ಶಬ್ದ ಅನಿತ್ಯತ್ವವಾದಿಯಾದ ನಿನ್ನ ಪಕ್ಷೇ= ಪಕ್ಷದಲ್ಲಿ, ಶಬ್ದೈಕ್ಯಂ ಚ= ಶಬ್ದಗಳ ಐಕ್ಯವಂತೂ, ನ= ಇಲ್ಲ, ತತಃ= ಒಂದೇ ವಿಧದ ವ್ಯವಹಾರದಲ್ಲಿ ಉಪಯೋಗಿಸಲ್ಪಡುವ ಶಬ್ದಗಳು ಅನೇಕವಾದ್ದರಿಂದ, ತತ್ರ ಅಪಿ= ಜಾತಿಯೇ ನಿಮಿತ್ತವಾಗಿವುಳ್ಳ ಅಸಂಗತ ವ್ಯವಹಾರದ ಸಂದರ್ಭದಲ್ಲಿಯೂ, ನಿಯಮ್ಯಃ= ಜಾತಿಯನ್ನು ಆಧರಿಸಿ ನಡೆಯ ಬೇಕಾಗಿರುವ, ಅಸೌ= ಈ ವ್ಯವಹಾರವು ಸ್ವನಿಯಂತುಃ= ತನಗೆ ನಿಯಾಮಕವಾಗಿರುವ ಜಾತಿಯ, ಏಕತಾಂ ಚ= ಏಕತ್ವವನ್ನು, ನ ಸಹೇತ= ಸಹಿಸುವುದಿಲ್ಲ ಇತಿ= ಎಂಬುದಾಗಿ ಮೇ= ನನ್ನ ಮತಿಃ= ಅಭಿಪ್ರಾಯವು.

**ಅನುವಾದ– ನಿನ್ನ ಮತದಲ್ಲಿ ಶಬ್ದಗಳು ಅನಿತ್ಯಗಳಾದ್ದರಿಂದ ಅವುಗಳಿಗಂತೂ ಐಕ್ಯ ಎಲ್ಲ ಹಾಗಾಗಿ ಒಂದೇ ವಸ್ತುವಿನ ವ್ಯವಹಾರದಲ್ಲಿ ನಾವು ಬಳಸಿಕೊಳ್ಳುವ ಶಬ್ದಗಳು ಅನೇಕವಾಗಿವೆ. ಆದ್ದರಿಂದ ಜಾತಿಯನ್ನು ನಿಮಿತ್ತೀಕರಿಸಿಕೊಂಡು ನಾವು ಅನುಗತ ವ್ಯವಹಾರವನ್ನು ನಡೆಸುತ್ತೇವೆಂದುಕೊಂಡರೂ ಆ ವ್ಯವಹಾರಕ್ಕೆ ನಿಯಾಮಕ-ವಾಗಿರುವ ಜಾತಿಯು ಒಂದೇ ಆಗುವುದಿಲ್ಲ ಎಂದು ನನ್ನ ಅಭಿಪ್ರಾಯ.**

**ಭಾವವಿಲಾಸಿನೀ–** ಪ್ರಕಾರಾಂತರೇಣ ವ್ಯವಹಾರಸ್ಯೈಕತ್ವೇಽಪಿ ಜಾತೇರೇಕತ್ವಂ ನಾಪೇಕ್ಷಿತಮಿತ್ಯಾಹ – **ಶಬ್ದೈಕ್ಯಂ ಚೇತಿ** ॥ ತೇ ಶಬ್ದಾನಿತ್ಯತ್ವವಾದಿನಸ್ತವ ಪಕ್ಷೇ ಶಬ್ದೈಕ್ಯಂ ನಾಸ್ತಿ ಪ್ರತಿವ್ಯವಹಾರಂ ಘಟಾದಿಪದಾನಾಂ ತದಾ ತದಾ ಉತ್ಪತ್ತ್ಯಂಗೀಕಾರಾತ್ । ತತಃ ಏಕವ್ಯವ-ಹಾರಸ್ಯಾನೇಕಶಬ್ದಪ್ರಯೋಜ್ಯತ್ವಾತ್ । ತತ್ರಾಪಿ ಜಾತಿನಿಮಿತ್ತಕಾನುಗತವ್ಯವಹಾರೇಽಪಿ । ನಿಯಮ್ಯೋ ವ್ಯವಹಾರಃ ನಿಯಂತುರ್ಜಾತೇಃ ಏಕತಾಮಿತಿ ಸಂಬಂಧಃ । ತೇ ಪಕ್ಷ ಇತ್ಯನೇನ ಶಬ್ದನಿತ್ಯತ್ವವಾದಿನೋ ಮಮ ಮತೇ ಉಕ್ತವ್ಯವಹಾರಸ್ಯ ಶಬ್ದರೂಪೈಕಧರ್ಮಪ್ರಯೋಜ್ಯತ್ವ-ಸಂಭವೇನ ತ್ವದುಕ್ತನ್ಯಾಯಸ್ಯಾನ್ಯಥಾಸಿದ್ಧಿರಿತಿ ಸೂಚಿತಮ್ ॥ ೫೯೭ ॥

**ವಿವರಣೆ–** ತಾರ್ಕಿಕರು ಸಕಲ ಘಟಗಳಲ್ಲಿರುವ ಘಟತ್ವ ಎಂಬ ಜಾತಿಯು ಒಂದೇ ಆಗಿದೆ ಎಂದು ಒಪ್ಪುತ್ತಾರೆ. ಕಾರಣವೇನೆಂದರೆ, ಪ್ರತಿಯೊಂದು ಘಟದಲ್ಲಿಯೂ 'ಅಯಂ ಘಟಃ' ಎಂಬ ಒಂದೇ ಬಗೆಯ ವ್ಯವಹಾರವಿದೆ. ಈ ವ್ಯವಹಾರವು ಅನುಗತ ಜಾತಿಯನ್ನು ಒಪ್ಪದೇ ಉಪಪನ್ನವಾಗುವುದಿಲ್ಲವೆಂಬುದು ಅವರ ಸಮರ್ಥನೆ. ಮೂಲಕಾರರು ಅದಕ್ಕೆ ಪ್ರತಿಬಂದಿಯನ್ನು ಹೇಳುತ್ತಾ ಆಕ್ಷೇಪ ಮಾಡುತ್ತಿದ್ದಾರೆ. ಒಂದೇ ಘಟದಲ್ಲಿ 'ಅಯಂ ಘಟಃ' ಎಂಬ ವಾಕ್ಯವನ್ನು ಪ್ರತಿಯೊಬ್ಬರೂ ಪ್ರಯೋಗಿಸುತ್ತಾರೆ. ಈ ಶಬ್ದವು ಅನಿತ್ಯವೆಂದು ತಾರ್ಕಿಕರ ಅಭಿಪ್ರಾಯ. ಹಾಗಾಗಿ, ಪ್ರತಿಯೊಬ್ಬರೂ ಪ್ರಯೋಗಿಸುವ 'ಅಯಂ ಘಟಃ' ಎಂಬ ಪ್ರಯೋಗವು ಬೇರೆ ಬೇರೆ ಎಂದಂತಾಯಿತು.

ಎಲ್ಲ ಘಟಗಳ ಬಗ್ಗೆಯೂ 'ಇದು ಘಟ' ಎಂದು ಅಸಂಗತ ವ್ಯವಹಾರ ಇರುವುದರಿಂದ ಆ ವ್ಯವಹಾರಗಳಿಗೆ ನಿಯಾಮಕವಾಗಿರುವ ಜಾತಿಯೂ ಒಂದೇ ಆಗಿರಬೇಕೆಂಬುದು ತಾರ್ಕಿಕರ ಅಭಿಪ್ರಾಯ. ಅದರ ನಿರಾಕರಣ ಹೀಗಿದೆ : ತಾರ್ಕಿಕರು ಶಬ್ದಗಳನ್ನು ಅನಿತ್ಯಗಳೆಂದು ಒಪ್ಪಿರುವುದರಿಂದ ಪ್ರತಿಯೊಬ್ಬನೂ ಹೊಸ ಹೊಸದಾದ ಭಿನ್ನ ಭಿನ್ನ ಶಬ್ದಗಳನ್ನೇ ಉಚ್ಚರಿಸುತ್ತಾನೆ. ಈ ಅನೇಕ ಶಬ್ದಗಳು 'ಇದು ಘಟ' ಎಂಬ ಏಕವ್ಯವಹಾರಕ್ಕೆ ಕಾರಣಗಳಾಗಿರುವಂತೆ ಅನೇಕ ಘಟತ್ವಗಳು 'ಇದು ಘಟ' ಎಂಬ ಏಕ ವ್ಯವಹಾರಕ್ಕೂ ಕಾರಣವಾಗಬಹುದು. ಆದ್ದರಿಂದ ಅಸಂಗತ ವ್ಯವಹಾರವನ್ನು ನಿಮಿತ್ತವಾಗಿಟ್ಟುಕೊಂಡು ನಿತ್ಯವಾದ ಅನೇಕಾನುಗತವಾದ ಜಾತಿಯನ್ನು ಒಪ್ಪಲಾಗದು ಎಂದು ಅಭಿಪ್ರಾಯ.

**ಕಾರಣತ್ವಾನ್ಯನೇಕಾನಿ ತತ್ರ ತತ್ರ ತವಾಪಿ ಚ ।**
**ತದವಚ್ಛೇದಕಸ್ಯಾಪಿ ಕಥಂ ನ ಸ್ಯಾದನೇಕತಾ ॥**
**ಯೋ ಗುರೂಣಾಂ ಗುರುಸ್ತಸ್ಯ ಗುರುತೈವ ಹಿ ಶೋಭತೇ ॥ ೫೮ ॥**

**ಅರ್ಥ–** ತತ್ರ ತತ್ರ = ಘಟ–ಪಟ ಮೊದಲಾದವುಗಳಿಗೆ, ಅನೇಕಾನಿ = ಬೇರೆ ಬೇರೆ, ಕಾರಣತ್ವಾನಿ = ದಂಡ ಮೊದಲಾದ ಅನೇಕ ಕಾರಣಗಳಿರುತ್ತವೆಂಬುದು, ತವ ಅಪಿ ಚ = ನಿನಗೂ ಕೂಡ ಸಮ್ಮತವಾಗಿದೆ. ತದವಚ್ಛೇದಕಸ್ಯ = ಕಾರಣತಾವಚ್ಛೇದಕಗಳಿಗೂ, ಅನೇಕತಾ = ಅನೇಕತ್ವವು, ಕಥಂ ನ ಸ್ಯಾತ್ = ಏಕಿರಬಾರದು. ಯಃ = ಯಾರು, ಗುರೂಣಾಂ = ಗುರುಗಳಿಗೆ, ಗುರುಃ = ಗುರುಗಳಾಗಿದ್ದಾನೋ, ತಸ್ಯ = ಅವನಿಗೆ, ಗುರುತಾ ಏವ= (ಪರಮ) ಗುರುವಾಗಿರುವಿಕೆಯೇ (ಪರಮ ಗುರುವಿನ ಸ್ಥಾನವೇ) ಶೋಭತೇ ಹಿ = ಶೋಭಿಸುತ್ತದಷ್ಟೇ.

**ಅನುವಾದ– ಕಾರಣತಾವಚ್ಛೇದಕತ್ವಾನ್ಯಥಾನುಪಪತ್ತಿಯಿಂದಲೂ ಜಾತಿಗೆ ಏಕತ್ವವು ಸಿದ್ಧವಾಗುವುದಿಲ್ಲ. ಏಕೆಂದರೆ, ಈ ಘಟಕ್ಕೆ ಈ ದಂಡವು ಕಾರಣ, ಈ ಪಟಕ್ಕೆ ಈ ತಂತುವು ಕಾರಣ ಎಂಬುದಾಗಿ ಘಟಪಟಾದಿಗಳಿಗೆ ಕಾರಣಗಳು ಭಿನ್ನಭಿನ್ನವೆಂದು**

**ತಾರ್ಕಿಕರಾದ ನೀವೂ ಕೂಡ ಒಪ್ಪಿದ್ದೀರಿ. ಅದರಂತೆ ಕಾರಣತ್ವದಲ್ಲಿ ಅವಚ್ಛೇದಕವಾದ ಧರ್ಮಗಳಿಗೂ ಅನೇಕತ್ವವನ್ನು ಏಕೆ ಒಪ್ಪಬಾರದು? ಗುರುಗಳಿಗೆ ಗುರುವಾದವನು ಪರಮಗುರುವೇ ಆಗಿರುತ್ತಾನೆಂಬುದು ಶೋಭಿಸುತ್ತದೆ.**

**ಭಾವವಿಲಾಸಿನೀ–** ಕಾರಣತಾವಚ್ಛೇದಕತ್ವೇನಾಪಿ ನ ಜಾತೇರೇಕತ್ವಸಿದ್ಧಿರಿತ್ಯಾಹ – **ಕಾರಣತ್ವಾನೀತಿ ॥** ಲಾಘವಾದವಚ್ಛೇದಕಸ್ಯೈಕತ್ವಮಿತಿ ಪಕ್ಷಂ ಅನ್ಯಾಪದೇಶೇನ ದೂಷಯತಿ – **ಯೋ ಗುರೂಣಾಮಿತಿ ॥** ಗುರೋರ್ಗುರುರ್ಹಿ ಪರಮಗುರುರೇವ ದೃಷ್ಟಃ, ನ ತು ಲಘುಃ । ತಥಾ ಅನೇಕಕಾರಣತಾವಚ್ಛೇದಕಸ್ಯ ಅನೇಕತ್ವೈವೋಚಿತೇತಿ ಭಾವಃ ॥ ೫೮ ॥

**ವಿವರಣೆ–** ಹಿಂದೆ, ಅನುಗತವ್ಯವಹಾರಾನ್ಯಥಾನುಪಪತ್ತಿಯಿಂದ ಜಾತಿಗೆ ಏಕತ್ವವನ್ನು ಸಮರ್ಥನೆ ಮಾಡಲು ಬರುವುದಿಲ್ಲವೆಂದು ನಿರಾಕರಿಸಿದ್ದಾಯಿತು. ಪ್ರಕೃತ, ಕಾರಣತಾವಚ್ಛೇದಕತಾನ್ಯಥಾನುಪಪತ್ತಿಯಿಂದ, ಜಾತಿಗೆ ಏಕತ್ವವನ್ನು ಸಮರ್ಥಿಸಬೇಕೆಂಬ ತಾರ್ಕಿಕರ ಮತ್ತೊಂದು ತರ್ಕವನ್ನು ಈ ಶ್ಲೋಕದಿಂದ ನಿರಾಕರಣೆ ಮಾಡುತ್ತಿದ್ದಾರೆ.

**ತಾರ್ಕಿಕರು:-** ಜಗತ್ತಿನಲ್ಲಿ ಘಟ, ಪಟ, ಮನೆ ಮೊದಲಾದ ಅನೇಕ ಬಗೆಯ ಕಾರ್ಯಗಳಿರುತ್ತವೆ. ಇಂತಹ ಘಟಪಟಾದಿ ಕಾರ್ಯಗಳಿಗೆ ಯಾವುದು ಕಾರಣ? ಎಂಬ ಜಿಜ್ಞಾಸೆಯು ಉಂಟಾದಾಗ, ಇಂತಹ ಕಾರ್ಯಕ್ಕೆ ಇದೇ ಕಾರಣ. ಹೊರತು, ಬೇರೆಯದ್ದಲ್ಲ ಎಂಬುದಾಗಿ ಅಸಾಧಾರಣವಾಗಿ ಜಿಜ್ಞಾಸುವಿಗೆ ತಿಳಿಸಬೇಕಾಗುತ್ತದೆ. ಇದನ್ನು ಸುಲಭವಾಗಿ ತಿಳಿಸಬೇಕಾದರೆ, ಕಾರಣ ಹಾಗೂ ಕಾರ್ಯಗಳಲ್ಲಿ ಜಾತಿಯನ್ನು ಒಪ್ಪಬೇಕು. ಎಂದರೆ, ಇಂತಹ ಜಾತಿಯುಳ್ಳ ಪದಾರ್ಥಗಳಿಗೆ, ಇಂತಹ ಜಾತಿಯುಳ್ಳ ಪದಾರ್ಥಗಳು ಕಾರಣವಾಗಿರುತ್ತವೆ ಎಂದು ತಿಳಿಸಬೇಕು. 'ಘಟತ್ವಾದಿ-ಕಾರ್ಯತಾವಚ್ಛೇದಕಾವಚ್ಛಿನ್ನಘಟಾದಿಕಂ ಪ್ರತಿ ದಂಡತ್ವಾದಿಕಾರಣತಾವಚ್ಛೇದಕಾ-ವಚ್ಛಿನ್ನದಂಡಾದಿಕಂ ಕಾರಣಮ್' ಎಂದು ಹೇಳಬೇಕು. ಆವಾಗ, ಸಕಲ ಘಟಗಳಲ್ಲಿಯೂ ಘಟತ್ವವೆಂಬ ಜಾತಿಯಿರುವುದರಿಂದ ಸಕಲ ಕಾರ್ಯಗಳನ್ನು ಸಂಗ್ರಹಿಸಿದಂತಾಗುತ್ತದೆ. ಅಂತಹ ಸಕಲ ಘಟಗಳಿಗೆ ಕಾರಣಭೂತವಾದ ಸಕಲ ವಿಧವಾದ ದಂಡಗಳಲ್ಲಿ ದಂಡತ್ವವೆಂಬ ಜಾತಿಯಿರುವುದರಿಂದ ದಂಡತ್ವರೂಪದಿಂದ ಸಕಲ ದಂಡಗಳನ್ನು ಸಂಗ್ರಹಿಸಿದಂತಾಗುತ್ತದೆ. ಘಟತ್ವವುಳ್ಳ ಪದಾರ್ಥಕ್ಕೆ ದಂಡತ್ವವುಳ್ಳ ಪದಾರ್ಥವು ಕಾರಣವಾಗಿರುತ್ತದೆಂದು ಜಿಜ್ಞಾಸುವು ಸುಲಭವಾಗಿ ಕಾರ್ಯ-ಕಾರಣಭಾವವನ್ನು ತಿಳಿಯುತ್ತಾನೆ. ಒಂದು ವೇಳೆ ಅನುಗತಜಾತಿಯನ್ನು ಒಪ್ಪದಿದ್ದರೆ, ಹೀಗೆ ಅಸಾಧಾರಣವಾಗಿ ಕಾರ್ಯ-ಕಾರಣಭಾವವನ್ನು ತಿಳಿಯುವುದು ಹೇಗೆ ಸಾಧ್ಯವಾಗುತ್ತದೆ? ಘಟಕ್ಕೆ ದಂಡವೇ ಏಕೆ ಕಾರಣವಾಗಬೇಕು? ಎಂಬ ಪ್ರಶ್ನೆಗೆ ಉತ್ತರಿಸಲು ಸಾಧ್ಯವಾಗುವುದಿಲ್ಲ. ಈ ವ್ಯವಹಾರಸೌಕರ್ಯದ ಉದ್ದೇಶದಿಂದ ದಂಡತ್ವ ಮೊದಲಾದ ಜಾತಿಗಳಿಗೆ ಐಕ್ಯವನ್ನು ಒಪ್ಪುವುದು ಅನಿವಾರ್ಯ.

**ತತ್ವವಾದಿಗಳು:-** ಕಾರ್ಯಕಾರಣಭಾವವನ್ನು ಸುಲಭವಾಗಿ ತಿಳಿಯಬೇಕೆಂಬ ಚಪಲದಿಂದ ಅಪ್ರಾಮಾಣಿಕವಾದ ಅನುಗತಜಾತಿಯನ್ನು ಒಪ್ಪುವುದು ತಪ್ಪು. ಸ್ವತಃ ತಾರ್ಕಿಕನಾದ ನೀನೇ ಪ್ರತಿಯೊಂದು ಘಟಕ್ಕೂ ಕಾರಣವಾಗಿರುವ ದಂಡವು ಬೇರೆ ಬೇರೆ ಎಂದು ಒಪ್ಪಿರುತ್ತಿ. ಈಗ ಹುಟ್ಟಿದ ರಕ್ತಘಟಕ್ಕೆ ಕಾರಣವಾದ ದಂಡವೇ ಬೇರೆ. ಹಿಂದೆ ಹುಟ್ಟಿದ ಪೀತಘಟಕ್ಕೆ ಕಾರಣವಾದ ದಂಡವೇ ಬೇರೆ ಎಂದು ತಾರ್ಕಿಕರಾದ ನೀವೇ ಒಪ್ಪಿರುತ್ತೀರಿ. ಹೀಗೆ, ಪ್ರತಿಯೊಂದು ಕಾರ್ಯಗಳಿಗೆ ಬೇರೆ ಬೇರೆ ಕಾರಣಗಳೇ ಇರುತ್ತವೆ ಎಂಬುದು ಸಕಲರಿಗೆ ಅನುಭೂತವಾದ ವಿಷಯ. ಕಾರಣಗಳು ಭಿನ್ನ ಭಿನ್ನವೆಂದು ಒಪ್ಪಿದ ಮೇಲೆ ಆ ಕಾರಣಗಳಲ್ಲಿರುವ ಧರ್ಮಗಳನ್ನೂ ಕೂಡ ಬೇರೆ ಬೇರೆ ಎಂದೇ ಒಪ್ಪಬಹುದಲ್ಲವೇ? ಕಾರಣಗಳನ್ನು ಅನೇಕಗಳೆಂದು ಒಪ್ಪಿ, ಅವುಗಳಲ್ಲಿರುವ ಧರ್ಮವನ್ನು ಒಂದೇ ಎಂದು ಒಪ್ಪುವ ಅನಿವಾರ್ಯತೆಯಾದರೂ ಏನಿರುತ್ತದೆ? ಆದ್ದರಿಂದ, ಕಾರಣತಾವಚ್ಛೇದಕತ್ವಾನ್ಯಥಾನುಪಪತ್ತಿಯಿಂದ ಜಾತಿಗೆ ಐಕ್ಯವನ್ನು ಸಮರ್ಥಿಸಲು ಸಾಧ್ಯವಿಲ್ಲ.

ಪ್ರಪಂಚದಲ್ಲಿ ಯಾವ ಯಾವ ಘಟ ಎಂಬ ಪದಾರ್ಥವಿದೆಯೋ, ಆ ಎಲ್ಲ ಘಟಗಳಿಗೆ ದಂಡವೇ ಕಾರಣ. ಇದನ್ನು ಸ್ಪಷ್ಟವಾಗಿ ತಿಳಿಯಬೇಕೆಂದರೆ, ಸಕಲ ಘಟಗಳಲ್ಲಿ ಘಟತ್ವ ಎಂಬ ಜಾತಿಯನ್ನು ಒಪ್ಪಬೇಕು. ಸಕಲ ದಂಡಗಳಲ್ಲಿ ದಂಡತ್ವ ಎಂಬ ಜಾತಿ ಒಪ್ಪಬೇಕು. ಮತ್ತು ಜಾತಿಗೆ ಐಕ್ಯವನ್ನೂ ಒಪ್ಪಬೇಕೆಂಬುದು ತಾರ್ಕಿಕರ ಅಭಿಪ್ರಾಯ.

ಪ್ರತಿಯೊಂದು ಘಟಗಳಿಗೆ ಒಂದೇ ದಂಡವು ಕಾರಣವಾಗಿರಬೇಕಿಲ್ಲ, ಬೇರೆ ಬೇರೆ ದಂಡಗಳು ಕಾರಣವಾಗಿರಬಹುದೆಂದು ತಾರ್ಕಿಕರೇ ಒಪ್ಪಿರುತ್ತಾರೆ. ಹೀಗೆ ಕಾರಣಗಳು ಬೇರೆ ಬೇರೆ ಎಂದು ಒಪ್ಪಿದ ಮೇಲೆ, ಆ ಕಾರಣಗಳಲ್ಲಿರುವ ಅವಚ್ಛೇದಕಧರ್ಮಕ್ಕೆ ಐಕ್ಯವನ್ನು ಏಕೆ ಒಪ್ಪಬೇಕು? ಕಾರ್ಯ ಹಾಗು ಕಾರಣಗಳಲ್ಲಿ ಇರುವ ಧರ್ಮಗಳಿಗೆ ಐಕ್ಯವನ್ನು ಒಪ್ಪದಿದ್ದರೂ ಕಾರ್ಯಕಾರಣಭಾವವ್ಯವಹಾರವನ್ನು ಕೂಡಿಸಬಹುದು ಎಂಬುದು ತತ್ವವಾದಿಗಳ ಅಭಿಪ್ರಾಯ.

ಲಾಘವಕ್ಕೋಸ್ಕರ, ಕಾರಣತಾವಚ್ಛೇದಕಗಳಿಗೆ ಐಕ್ಯವನ್ನು ಒಪ್ಪುತ್ತೇವೆಂಬ ಪಕ್ಷವನ್ನು ಮತ್ತೊಂದು ಪ್ರತಿಬಂಧಿಯನ್ನು ನೀಡುವ ಮೂಲಕ ದೂಷಣೆ ಮಾಡುತ್ತಿದ್ದಾರೆ – 'ಯೋ ಗುರುಣಾಂ' ಎಂಬುದರಿಂದ. ಗುರುಗಳಿಗೆಲ್ಲ ಗುರುಗಳಾಗಿರುವವನು ಪರಮ ಗುರುವೇ ಆಗಿರುತ್ತಾನೆಂಬುದು ಲೋಕದಲ್ಲಿ ಕಂಡಿದೆ. ಹೊರತು, ಲಘುವಾದ ಗುರುವಾಗಿರುವುದಿಲ್ಲ. ಉಪಾಧ್ಯಾಯರಿಗೆ ಯಾರು ವಿದ್ಯಾಭ್ಯಾಸವನ್ನು ಮಾಡಿಸಿರುತ್ತಾನೋ, ಅವನು ಮುಖ್ಯ ಉಪಾಧ್ಯಾಯನೇ ಆಗಿರುತ್ತಾನೆ. ಅದೇ ನ್ಯಾಯದಂತೆ, ಕಾರ್ಯಗಳಿಗೆ ಕಾರಣವಾದವುಗಳು ಅನೇಕವಾದಾಗ, ಅವುಗಳಿಗೆ ನಿಯಾಮಕವಾದ ಕಾರಣತಾವಚ್ಛೇದಕಗಳೂ ಅನೇಕವೇ ಆಗಬೇಕು, ಹೊರತು ಒಂದೇ ಆಗಿರಲು ಸಾಧ್ಯವಿಲ್ಲ. ಎಂದರೆ, ಕಾರಣಕ್ಕಿಂತ ನೀಚಸ್ಥಾನವನ್ನು ಹೊಂದಲು ಸಾಧ್ಯವಿಲ್ಲ.

**ವ್ಯಂಜಕಾನುಗತೋಕ್ತಿಶ್ಚ ಜಾತಿಷ್ವನುಗತೈಕವಾಕ್ ।**
**ನ ಕಿಲೈಕೇನ ನಿಯತಾ ಮಧ್ಯೇ ಯಂತ್ರೇಕತಾ ಕುತಃ ॥ ೫೯ ॥**

**ಅರ್ಥ–** ವ್ಯಂಜಕಾನುಗತೋಕ್ತಿಃ ಚ ವ್ಯಂಜಕ = ಜಾತಿವ್ಯಂಜಕವಾದ ಅನೇಕ ಪೃಥುಬುಧ್ನೋದೋರಾಕಾರಗಳಲ್ಲಿ, ಅನುಗತೋಕ್ತಿಶ್ಚ = ಇದು ಪೃಥುಬುಧ್ನೋದರಾಕಾರವುಳ್ಳದ್ದು ಎಂಬ ಅನುಗತವಾದ ವ್ಯವಹಾರವು, ಚ = ಮತ್ತು, ಜಾತಿಷು = ಘಟತ್ವ, ಪಟತ್ವ ಮೊದಲಾದ ಜಾತಿಗಳಲ್ಲಿ, ಅನುಗತೈಕವಾಕ್ = ಇದು ಜಾತಿ, ಇದು ಜಾತಿ ಇತ್ಯಾದಿರೂಪವಾದ ಅನುಗತ ವ್ಯವಹಾರವು, ಏಕೇನ = ಒಂದೇ ಧರ್ಮದಿಂದ, ನ ನಿಯತಾ ಕಿಲ = ನಿಯಮಿಸಲ್ಪಟ್ಟಿಲ್ಲವಷ್ಟೇ! ಹೀಗಿರುವಾಗ, ಮಧ್ಯೇ = 'ಘಟೋಽಯಂ' ಎಂಬ ಅನುಗತ ವ್ಯವಹಾರದಲ್ಲಿ ಮಾತ್ರ, ಯಂತ್ರೇಕತಾ = ನಿಯಾಮಕವಾದ ಜಾತಿಗೆ ಐಕ್ಯವು, ಕುತಃ = ಏಕೆ ಒಪ್ಪಲ್ಪಡಬೇಕು.

**ಅನುವಾದ–** ಅನೇಕ ಘಟಗಳಲ್ಲಿ 'ಪೃಥುಬುಧ್ನೋದರಾಕಾರಃ' ಎಂಬ ಅನುಗತವಾದ ವ್ಯವಹಾರವು ಇರುತ್ತದೆ. ಈ ಆಕಾರವಿಶೇಷಗಳಲ್ಲಿ ತಾರ್ಕಿಕರು ಐಕ್ಯವನ್ನು ಒಪ್ಪಿರುವುದಿಲ್ಲ. ಅದರಂತೆ, ಘಟತ್ವ-ಪಟತ್ವ ಮೊದಲಾದ ಅನೇಕ ಜಾತಿಗಳಲ್ಲಿ 'ಇಯಂ ಜಾತಿಃ' ಎಂಬ ಅನುಗತವ್ಯವಹಾರವಿದೆ. ಇಲ್ಲಿ ತಾರ್ಕಿಕರು ನಿಯಾಮಕವಾದ ಜಾತ್ಯೈಕ್ಯವನ್ನು ಒಪ್ಪಿರುವುದಿಲ್ಲ. ಎಂದರೆ ಒಂದು ನಿಯಾಮಕದಿಂದ ನಿಯಮ್ಯವಲ್ಲ. ಹೀಗಿರುವಾಗ, ಮಧ್ಯದಲ್ಲಿ 'ಅಯಂ ಘಟಃ' ಎಂಬ ವ್ಯವಹಾರಕ್ಕೆ ನಿಯಾಮಕವಾದ ಜಾತಿಗೆ ಐಕ್ಯವನ್ನು ಒಪ್ಪುವುದು ತಪ್ಪಾಗುತ್ತದೆ.

**ಭಾವವಿಲಾಸಿನೀ–** ವ್ಯಂಜಕಸ್ಯ ಜಾತಿವ್ಯಂಜಕಸ್ಯ । ಪೃಥುಬುಧ್ನೋದರಾಕಾರತ್ವಾದೇರನುಗತೋಕ್ತಿಃ ಪೃಥುಬುಧ್ನೋದರಾಕಾರೋಽಯಂ ಪೃಥುಬುಧ್ನೋದರಾಕಾರೋಽಯಮಿತ್ಯಾದಿರೂಪಾ । ಜಾತಿಷು ಘಟತ್ವಪಟತ್ವಾದಿಷು ಅನುಗತೈಕವಾಗ್ ಇಯಂ ಜಾತಿರಿಯಂ ಜಾತಿರಿತ್ಯಾದಿರೂಪಾ । ಏಕೇನ ಧರ್ಮೇಣ । ವ್ಯವಹಾರದ್ವಯೇ ತ್ವಯಾಪಿ ಜಾತಿಪ್ರಯೋಜ್ಯತ್ವಾನಂಗೀಕಾರಾತ್ । ಮಧ್ಯೇ ಘಟೋಽಯಮಿತ್ಯಾದ್ಯನುಗತವ್ಯವಹಾರೇ । ಯಂತ್ರೇಕತಾ ನಿಯಾಮಕಜಾತ್ಯೇಕತಾ ॥ ೫೯ ॥

**ವಿವರಣೆ–** ತಾರ್ಕಿಕರು : 'ಅಯಂ ಘಟಃ' ಇತ್ಯಾದಿ ಅನುಗತವಾದ ವ್ಯವಹಾರವನ್ನು ಉಪಪಾದನೆ ಮಾಡಬೇಕೆಂದರೆ, ಒಂದೇ ಜಾತಿಯನ್ನು ಒಪ್ಪಬೇಕು.

ತತ್ವವಾದಿಗಳು : ಇದು ಸರಿಯಲ್ಲ. ಎಲ್ಲೆಲ್ಲಿ ಅನುಗತ ವ್ಯವಹಾರವಿರುತ್ತದೋ, ಅಲ್ಲೆಲ್ಲಾ ನಿಯಾಮಕವಾದ ವ್ಯವಹಾರಕ್ಕೆ ಐಕ್ಯವನ್ನು ಒಪ್ಪಿದ್ದರೆ ಜಾತ್ಯೈಕ್ಯವನ್ನು ಒಪ್ಪುವುದು ನ್ಯಾಯಬದ್ಧವಾಗುತ್ತಿತ್ತು. ತಾರ್ಕಿಕರಾದ ನೀವೇ ಎಲ್ಲೆಡೆಯೂ ಈ ನಿಯಮವನ್ನು ಒಪ್ಪಿಲ್ಲ. ಉದಾಹರಣೆಗೆ, ಜಿಜ್ಞಾಸುವೊಬ್ಬನು 'ಘಟ ಎಂದರೆ ಯಾವುದು?' ಎಂದು ಪ್ರಶ್ನಿಸುತ್ತಾನೆ.

ಆವಾಗ, ಯಾವ ಪದಾರ್ಥವು ದುಂಡಾದ ಹೊಟ್ಟೆಯನ್ನು ಹೊಂದಿರುತ್ತದೋ, ಅಂತಹ ಮಣ್ಣಿನ ಪಾತ್ರೆಯು ಘಟವೆಂದು ಉತ್ತರಿಸುತ್ತೇವೆ. 'ಅಯಂ ಪೃಥುಬುಧ್ನೋದರಾಕಾರಃ' ಎಂದು ಪರಿಚಯಿಸುತ್ತೇವೆ. ಆವಾಗ, ಜಿಜ್ಞಾಸುವಿಗೆ, ಇಂತಹ ಪದಾರ್ಥವೇ ಘಟವೆಂಬ ಅರಿವು ಸ್ಪಷ್ಟವಾಗುತ್ತದೆ. ಅನಂತರ ಆ ಜಿಜ್ಞಾಸುವು, ಪ್ರತಿಯೊಂದು ಘಟದಲ್ಲಿಯೂ 'ಅಯಂ ಘಟಃ' ಎಂದು ವ್ಯವಹಾರ ಮಾಡುತ್ತಾನೆ. ಅವನ ಈ ವ್ಯವಹಾರಕ್ಕೆ ಕಾರಣವಾದದ್ದು ಪೃಥುಬುಧ್ನೋದರ ಎಂಬ ಆಕಾರವಿಶೇಷ. ಈ ಆಕಾರವಿಶೇಷವನ್ನು ತಾರ್ಕಿಕರು ಬೇರೆ ಬೇರೆ ಎಂದು ಒಪ್ಪಿದ್ದಾರೆ. ಆದ್ದರಿಂದ, ಅನುಗತ ವ್ಯವಹಾರಕ್ಕೆ ನಿಯಾಮಕವಾದದ್ದರಲ್ಲಿ ಐಕ್ಯವನ್ನು ಒಪ್ಪಬೇಕೆಂಬ ನಿಯಮಕ್ಕೆ ಈ ಸ್ಥಳದಲ್ಲಿ ವ್ಯಭಿಚಾರ ಬಂದಿತು.

ಅದರಂತೆ ಮತ್ತೊಂದು ಉದಾಹರಣೆ. ಘಟತ್ವ-ಪಟತ್ವ ಮೊದಲಾದ ಅನೇಕ ಬಗೆಯ ಧರ್ಮಗಳಲ್ಲಿ, ಜಾತಿ, ಎಂಬ ವ್ಯವಹಾರವನ್ನು ತಾರ್ಕಿಕರು ಮಾಡುತ್ತಾರೆ. ಅನೇಕ ಧರ್ಮಗಳಲ್ಲಿರುವ 'ಇಯಂ ಜಾತಿಃ' ಎಂಬ ಅನುಗತ ವ್ಯವಹಾರಕ್ಕೆ ನಿಯಾಮಕವಾದ ಮತ್ತೊಂದು ಧರ್ಮವಿರುತ್ತದೆಂದು ತಾರ್ಕಿಕರು ಒಪ್ಪಿರುವುದಿಲ್ಲ. ಜಾತಿಯಲ್ಲಿ ಜಾತಿಯನ್ನು ತಾರ್ಕಿಕರು ಒಪ್ಪದ ಕಾರಣ, ಅನುಗತ ಜಾತಿವ್ಯವಹಾರಕ್ಕೆ ನಿಯಾಮಕವಾದ ಮತ್ತೊಂದು ಅನುಗತ ಧರ್ಮವನ್ನು ಈ ಸ್ಥಳದಲ್ಲಿ ಒಪ್ಪಿಲ್ಲದ ಕಾರಣ, ಇಲ್ಲಿಯೂ ವ್ಯಭಿಚಾರ ಬರುತ್ತದೆ.

**ಪ್ರಳಯೇ ಸರ್ವದೇಶೇ ಚ ಜಾತಿರ್ನಿತ್ಯಾಽಸ್ತಿ ಚೇತ್ತದಾ ।**
**ವ್ಯಕ್ತ್ಯಾ ನಾಯುತಸಿದ್ಧಾ ಸಾ ಯಾಽವಶ್ಯಂ ನಾಪರಾಶ್ರಯಾ ॥ ೬೦೦ ॥**

**ಅರ್ಥ–** ನಿತ್ಯಾ= ನಿತ್ಯವಾದ, ಜಾತಿಃ = ಘಟತ್ವ ಮೊದಲಾದ ಜಾತಿಯು, ಪ್ರಳಯೇ = ಪ್ರಲಯಕಾಲದಲ್ಲಿ, ಸರ್ವದೇಶೇ ಚ = ಸಕಲ ದೇಶಗಳಲ್ಲಿಯೂ, ಅಸ್ತಿ ಚೇತ್ = ಇರುವುದಾದರೆ, ತದಾ = ಆವಾಗ, ಯಾ = ಯಾವ ಜಾತಿಯು, ಅವಶ್ಯಂ = ಅವಶ್ಯವಾಗಿ, ನಾಪರಾಶ್ರಯಾ = ಘಟಾದಿ ವ್ಯಕ್ತಿಯನ್ನು ಬಿಟ್ಟು ಇರುವುದಿಲ್ಲವೋ, ಸಾ = ಆ ಜಾತಿಯು, ವ್ಯಕ್ತ್ಯಾ= ಘಟಾದಿ ವ್ಯಕ್ತಿಗಳಿಂದ, ಅಯುತಸಿದ್ಧಾ= ಅಯುತಸಿದ್ಧವೆಂದು, ನ= ಒಪ್ಪಲಾಗದು.

**ಅನುವಾದ–** ತಾರ್ಕಿಕರಿಗೆ ಅಭಿಮತವಾದ ಸಮವಾಯಸಂಬಂಧವು ಯುಕ್ತವಾಗದ ಕಾರಣದಿಂದಲೂ ಘಟತ್ವಾದಿ ಜಾತಿಯೆಂದು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ, ಪ್ರಳಯಕಾಲದಲ್ಲಿ ಯಾವುದೇ ಘಟಪಟಾದಿ ಪದಾರ್ಥಗಳಿರುವುದಿಲ್ಲ. ಆದರೆ, ನಿತ್ಯವೆಂದು ಒಪ್ಪಿರುವ ಕಾರಣ, ಘಟತ್ವಾದಿ ಜಾತಿಗಳಿರುತ್ತವೆಂದು ಹೇಳಬೇಕು. ಆವಾಗ, ಘಟಾದಿ ವ್ಯಕ್ತಿಗಳನ್ನು ಬಿಟ್ಟು ಘಟತ್ವಾದಿ ಜಾತಿಗಳಿರುತ್ತವೆಂದು ಹೇಳಿದಂತಾಯಿತು. ಹೀಗೆ ಹೇಳಿದರೆ, ಅಸಂಬಂಧ ಎಂಬ ಜಾತಿಬಾಧಕ ಬರುತ್ತದೆ.

**ಭಾವವಿಲಾಸಿನೀ–** ಇದಾನೀಂ ಪರಾಭಿಮತಸಮವಾಯಸಂಬಂಧಾಯೋಗಾಚ್ಚ ನ ಘಟತ್ವಾದಿಜಾತಿರಂಗೀಕಾರ್ಯೇತ್ಯಾಹ – **ಪ್ರಲಯ ಇತಿ** ॥ ಸಾ ಜಾತಿಃ । ಘಟತ್ವಾದಿಜಾತೇರ್ಘಟಾದಿವ್ಯಕ್ತ್ಯಾಯುತಸಿದ್ಧ್ಯಭಾವಾನ್ನ ತಯೋಸ್ಸಮವಾಯಃ । ಅಯುತಸಿದ್ಧಯೋಸ್ಸಂಬಂಧಃ ಸಮವಾಯ ಇತಿ ಹಿ ತೇ ಮತಮ್ । ಏವಂ ಚಾಸಂಬಂಧಾಖ್ಯಜಾತಿಬಾಧಕಾನ್ನ ಸಾ ಜಾತಿರಂಗೀಕಾರ್ಯೇತಿ ಭಾವಃ ॥ ೬೦೦ ॥

**ವಿವರಣೆ–** ಹಿಂದೆ, ಅನುಗತ ವ್ಯವಹಾರಕ್ಕೋಸ್ಕರ ನಿಯಾಮಕವಾದ ಜಾತಿಗೆ ಐಕ್ಯವನ್ನು ಒಪ್ಪುವ ಆವಶ್ಯಕತೆ ಇಲ್ಲವೆಂದು ಸಮರ್ಥಿಸಿದರು. ಪ್ರಕೃತ ತಾರ್ಕಿಕರಿಗೆ ಅಭಿಪ್ರೇತವಾದ ಸಮವಾಯ ಸಂಬಂಧ ಎಂಬುದೇ ಕೂಡದ ಕಾರಣ, ಘಟತ್ವಾದಿ ಜಾತಿಗಳನ್ನು ಅಂಗೀಕರಿಸಬೇಕಿಲ್ಲವೆಂದು ಸಮರ್ಥನೆ ಮಾಡುತ್ತಿದ್ದಾರೆ –

'ಅಯುತಸಿದ್ಧಯೋರೇವ ಸಮವಾಯಃ' ಒಟ್ಟಿಗೆ ಇರುವ ಜಾತಿವ್ಯಕ್ತಿಗಳಿಗೆ ಸಮವಾಯ ಸಂಬಂಧವನ್ನು ಒಪ್ಪಬೇಕು ಎಂಬುದು ತಾರ್ಕಿಕರ ಸಿದ್ಧಾಂತ. ಯಾವ ಜಾತಿ ಮತ್ತು ವ್ಯಕ್ತಿಗಳು ಒಂದನ್ನು ಒಂದು ಬಿಟ್ಟು ಇರುವುದಿಲ್ಲವೋ ಅಂತಹ ಜಾತಿ-ವ್ಯಕ್ತಿಗಳಿಗೆ ಮಾತ್ರ ಸಮವಾಯ ಸಂಬಂಧವನ್ನು ಒಪ್ಪಬೇಕು. ಒಂದು ವೇಳೆ, ವ್ಯಕ್ತಿಯನ್ನು ಬಿಟ್ಟು ಜಾತಿ ಇರುವುದಾದಲ್ಲಿ 'ಅಸಂಬಂಧ' ಎಂಬ ಜಾತಿಬಾಧಕ ಬರುವ ಕಾರಣ, ಸಮವಾಯ ಸಂಬಂಧವನ್ನು ಒಪ್ಪಲು ಸಾಧ್ಯವಾಗುವುದಿಲ್ಲ.

**ವ್ಯಕ್ತೇರಭೇದಸ್ತುಲ್ಯತ್ವಂ ಸಂಕರೋಽಥಾನವಸ್ಥಿತಿಃ ।**
**ರೂಪಹಾನಿರಸಂಬಂಧೋ ಜಾತಿಬಾಧಕಸಂಗ್ರಹಃ ॥**

1) ವ್ಯಕ್ತಿಗಳಲ್ಲಿ ಐಕ್ಯ, 2) ಸಮಾನತೆ, 3) ಸಾಂಕರ್ಯ, 4) ಅನವಸ್ಥಾ, 5) ಸ್ವರೂಪಹಾನಿ, 6) ಜಾತಿವ್ಯಕ್ತಿಗಳಿಗೆ ಸಂಬಂಧ ಇಲ್ಲದಿರುವಿಕೆ, ಇವು ಆರು ಜಾತಿಬಾಧಕಗಳು.

ಹೀಗೆ, ತಾರ್ಕಿಕರು ಹೇಳಿದ್ದಾರೆ. ಪ್ರಕೃತ, ಪ್ರಳಯಕಾಲದಲ್ಲಿ ವ್ಯಕ್ತಿ ಇಲ್ಲದಿದ್ದರೂ ಘಟತ್ವಾದಿ ಜಾತಿಗಳಿರುತ್ತವೆಂದು ಒಪ್ಪಿದರೆ ಜಾತಿವ್ಯಕ್ತಿಗಳಿಗೆ ಸಂಬಂಧವೇ ಇಲ್ಲವೆಂದಂತಾಗುತ್ತದೆ. ಆದ್ದರಿಂದ ಎಲ್ಲ ದೇಶಕಾಲಗಳಲ್ಲಿಯೂ ಇರುವ ತಾರ್ಕಿಕರಿಗೆ ಅಭಿಪ್ರೇತವಾದ ಜಾತಿಯನ್ನು ಎಲ್ಲಿಯೂ ಹೇಳಲು ಬರುವುದಿಲ್ಲ.

ಒಂದು ವೇಳೆ, ಜಾತಿವ್ಯಕ್ತಿಗಳಿಗೆ ಸಮವಾಯ ಸಂಬಂಧವನ್ನು ಒಪ್ಪಲು ಬರುತ್ತಿದ್ದರೆ, ಆಗ ಘಟತ್ವಾದಿ ಜಾತಿಗಳಿಗೆ ನಿತ್ಯತ್ವವೂ ಕೂಡ ಸಿದ್ಧವಾಗುತ್ತಿತ್ತು. ಆದರೆ, ಅಯುತಸಿದ್ಧತ್ವವನ್ನೇ ಸಮರ್ಥಿಸಲು ಸಾಧ್ಯವಾಗದ ಕಾರಣ, ಸಮವಾಯ ಸಂಬಂಧವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ, ಜಾತಿಯೆಂಬ ಅನುಗತವಾಗಿರುವ ನಿತ್ಯವಾದ ಪದಾರ್ಥವನ್ನು ಸಮರ್ಥಿಸಲೂ ಸಹ ಸಾಧ್ಯವಾಗುವುದಿಲ್ಲ.

**ಅಭಾವೇಷು ನ ಕಿಂಚಿತ್ತೇ ವಿಶೇಷೇಷು ನ ಕಿಂಚನ ।**
**ಏಕಂ ನಿಯಾಮಕಂ ತಸ್ಮಾತ್ ತತೋಽನ್ಯತ್ರಾಪಿ ತದ್ ವೃಥಾ ॥ ೬೦೧ ॥**

**ಅರ್ಥ—** ಅಭಾವೇಷು = ಅನೇಕ ಅಭಾವ ಪದಾರ್ಥಗಳಲ್ಲಿ, ಕಿಂಚಿತ್ = ಯಾವುದೂ, ನಿಯಾಮಕಂ = ನಿಯಾಮಕವು, ನ = ಇರುವುದಿಲ್ಲ. ವಿಶೇಷೇಷು = ಅನೇಕ ವಿಶೇಷಗಳಲ್ಲಿ, ಕಿಂಚನ = ಯಾವುದೇ ಒಂದು, ಏಕಂ ನಿಯಾಮಕಂ = ಒಂದು ನಿಯಾಮಕವು, ನ = ಇರುವುದಿಲ್ಲ. ತಸ್ಮಾತ್ = ಆದ್ದರಿಂದ, ತತಃ = ಅಭಾವ ಹಾಗೂ ವಿಶೇಷ ಪದಾರ್ಥಗಳಿಗಿಂತ, ಅನ್ಯತ್ರಾಪಿ = ಬೇರೆ ಕಡೆಯಲ್ಲಿಯೂ ಕೂಡ, ತತ್ = ಒಂದೇ ನಿಯಾಮಕವಿದೆ ಎಂದು ಹೇಳುವುದು, ವೃಥಾ = ವ್ಯರ್ಥವು.

**ಅನುವಾದ—** ತಾರ್ಕಿಕರು ಅನೇಕ ಅಭಾವ ಪದಾರ್ಥಗಳನ್ನು ಹಾಗೂ ವಿಶೇಷಗಳನ್ನು ಒಪ್ಪುತ್ತಾರೆ. ಆದರೆ, ಅಭಾವದಲ್ಲಾಗಲಿ, ವಿಶೇಷದಲ್ಲಾಗಲಿ ಯಾವುದೇ ಜಾತಿಯನ್ನು ಒಪ್ಪಿಲ್ಲ. ಆದರೂ ಸಹ, 'ಇದು ಅಭಾವ, ಇದು ವಿಶೇಷ' ಎಂಬ ಅನುಗತ ವ್ಯವಹಾರವು ಯುಕ್ತವಾಗುತ್ತದೆನ್ನುತ್ತಾರೆ. ಅದರಂತೆ, ಘಟಪಟಾದಿ-ವ್ಯವಹಾರಗಳಲ್ಲಿಯೂ ಅನುಗತವ್ಯವಹಾರವು ಯುಕ್ತವಾಗುವಾಗ ಅನುಗತ ವ್ಯವಹಾರಕ್ಕಾಗಿ ನಿಯಾಮಕವಾದ ಜಾತ್ಯೈಕ್ಯವನ್ನು ಏಕೆ ಅಂಗೀಕರಿಸಬೇಕು?

**ಭಾವವಿಲಾಸಿನೀ—** ಸ್ಥಲಾಂತರೇಷ್ವಪಿ ವ್ಯಭಿಚಾರಮಾಹ – **ಅಭಾವೇಷ್ವಿತಿ** ॥ ೬೦೧ ॥

**ವಿವರಣೆ—** ಅನುಗತ ವ್ಯವಹಾರಕ್ಕೋಸ್ಕರ ಜಾತ್ಯೈಕ್ಯವನ್ನು ಒಪ್ಪಬೇಕೆಂಬ ನಿಯಮಕ್ಕೆ ಮತ್ತೊಂದು ಸ್ಥಳದಲ್ಲಿ ವ್ಯಭಿಚಾರವನ್ನು ತೋರಿಸುತ್ತಿದ್ದಾರೆ. ಘಟಪಟಾದಿ ಪದಾರ್ಥಗಳು ಪ್ರಪಂಚದಲ್ಲಿ ಹೇಗೆ ಅನಂತವಾಗಿವೆಯೋ, ಆ ಎಲ್ಲ ಪದಾರ್ಥಗಳ ಅಭಾವವೂ ಕೂಡ ಅನಂತವಾಗಿವೆ ಎಂದು ತಾರ್ಕಿಕರು ಒಪ್ಪುತ್ತಾರೆ. ಹಾಗೆಯೇ, ವಿಶೇಷ ಎಂಬ ಪದಾರ್ಥವೂ ಕೂಡ ಅನಂತವಾಗಿದೆ ಎಂದು ತಾರ್ಕಿಕರು ಒಪ್ಪುತ್ತಾರೆ. 'ನಿತ್ಯದ್ರವ್ಯವೃತ್ತಯೋ ವಿಶೇಷಾಸ್ತ್ವನಂತಾ ಏವ'. ಪೃಥಿವಿ, ಅಪ್, ತೇಜಸ್ಸು, ವಾಯು ಈ ನಾಲ್ಕು ಭೂತಪದಾರ್ಥಗಳ ಪರಮಾಣುಗಳಲ್ಲಿ ವಿಶೇಷ ಎಂಬ ಪದಾರ್ಥವು ಇರುತ್ತದೆ. ಮತ್ತು, ಆಕಾಶ, ಕಾಲ, ದಿಕ್, ಆತ್ಮ ಮನಸ್ಸು ಎಂಬ ನಿತ್ಯದ್ರವ್ಯಪದಾರ್ಥಗಳಲ್ಲಿಯೂ ವಿಶೇಷಗಳಿರುತ್ತವೆ. ಇಂತಹ ವಿಶೇಷಗಳು ಸ್ವತೋ ವ್ಯಾವೃತ್ತಗಳಾಗಿವೆ. ದ್ವ್ಯಣುಕಾದಿಗಳಿಗೆ ವ್ಯಾವರ್ತಕಗಳಾಗಿ ಪರಮಾಣ್ವಾದಿಗಳಿರುವಂತೆ. ಪರಮಾಣ್ವಾದಿಗಳಿಗೆ ವ್ಯಾವರ್ತಕವಾಗಿ ವಿಶೇಷ ಎಂಬ ಪದಾರ್ಥವಿರುತ್ತದೆ. ಇಂತಹ ವಿಶೇಷ ಎಂಬ ಪದಾರ್ಥಗಳಿಗೆ ವ್ಯಾವರ್ತಕವಾಗಿ ಮತ್ತೊಂದು ವ್ಯಾವರ್ತಕವನ್ನು ಒಪ್ಪುವ ಆವಶ್ಯಕತೆಯಿಲ್ಲ. ಸ್ವತಃ ವ್ಯಾವೃತ್ತಗಳಾಗಿರುತ್ತವೆ. ಆದ್ದರಿಂದ, 'ಸ್ವಭಿನ್ನಲಿಂಗಕಸ್ವವಿಶೇಷ್ಯಕ-ಸ್ವಸಜಾತೀಯ ಇತರಭೇದಾನುಮಿತ್ಯ ವಿಷಯಕತ್ವಮ್' ಎಂಬ 'ಸ್ವತೋ ವ್ಯಾವೃತ್ತತ್ವ'ದ

ಲಕ್ಷಣವು ವಿಶೇಷದಲ್ಲಿರುತ್ತದೆ. ಈ ಪರಮಾಣು ಮತ್ತೊಂದು ಪರಮಾಣುವಿನಿಂದ ಭಿನ್ನವಾಗಿದೆ. ಏಕೆಂದರೆ, ಈ ಪರಮಾಣುವಿನಲ್ಲಿರುವ ವಿಶೇಷವೇ ಇದಕ್ಕೆ ಕಾರಣ. ಆದರೆ, ಈ ವಿಶೇಷವು ಮತ್ತೊಂದು ವಿಶೇಷದಿಂದ ಭಿನ್ನವಾಗಿದೆ ಎನ್ನಲು ತಾನೇ ಕಾರಣವಾಗಿರುತ್ತದೆ, ಮತ್ತೊಂದು ಪದಾರ್ಥವನ್ನು ವ್ಯಾವರ್ತಕವನ್ನಾಗಿ ಒಪ್ಪಬೇಕಾಗಿಲ್ಲ. ಇಂತಹ ವಿಶೇಷ ಪದಾರ್ಥದಲ್ಲಿ ತಾರ್ಕಿಕನು ಜಾತಿಯನ್ನು ಒಪ್ಪಿಲ್ಲ. ಒಂದು ವೇಳೆ ವಿಶೇಷದಲ್ಲಿ ಜಾತಿಯನ್ನು ಒಪ್ಪಿದರೆ, ಸ್ವತೋವ್ಯಾವೃತ್ತತ್ವ ಎಂಬ ಲಕ್ಷಣಕ್ಕೆ ಭಂಗ ಬರುತ್ತದೆ. ಆದ್ದರಿಂದ, ವಿಶೇಷಕ್ಕೆ ಜಾತಿಯಿಲ್ಲ.

ಸ್ವತೋ ವ್ಯಾವೃತ್ತತ್ವವೇ ವಿಶೇಷದ ಲಕ್ಷಣ. ಒಂದು ವೇಳೆ, ವಿಶೇಷವು ಜಾತಿಯುಳ್ಳದ್ದೆಂದರೆ, ಆವಾಗ, ಜಾತಿಯೇ ಇತರವ್ಯಾವರ್ತಕವಾಗುವ ಕಾರಣ, ಸ್ವತೋ ವ್ಯಾವೃತ್ತತ್ವವೆಂಬ ಲಕ್ಷಣವೇ ಹಾಳಾಗುತ್ತದೆ. ಆದ್ದರಿಂದ, ವಿಶೇಷವು ಜಾತಿಯುಳ್ಳದ್ದೆಂದು ಒಪ್ಪಬಾರದು. 'ರೂಪಹಾನಿ' ವಿಶೇಷದ ಲಕ್ಷಣವೇ ನಾಶವಾಗುವುದರಿಂದ ವಿಶೇಷವು ಜಾತಿಯುಳ್ಳದ್ದೆಂದು ಒಪ್ಪಬಾರದು' ಹೀಗೆ ತಾರ್ಕಿಕರ ಸಿದ್ಧಾಂತ.

ಇದರಂತೆ ಅಭಾವದಲ್ಲಿಯೂ ಕೂಡ ಜಾತಿಯನ್ನು ತಾರ್ಕಿಕರು ಒಪ್ಪಿಲ್ಲ. ಕೇವಲ ದ್ರವ್ಯ, ಗುಣ, ಕರ್ಮ ಈ ಮೂರರಲ್ಲಿ ಮಾತ್ರ ಜಾತಿಯನ್ನು ತಾರ್ಕಿಕರು ಒಪ್ಪಿದ್ದಾರೆ. ಹೊರತು, ಉಳಿದ ಸಾಮಾನ್ಯ, ವಿಶೇಷ, ಸಮವಾಯ, ಅಭಾವ ಎಂಬ ನಾಲ್ಕು ಪದಾರ್ಥಗಳಲ್ಲಿ ಜಾತಿಯನ್ನು ತಾರ್ಕಿಕರು ಒಪ್ಪಿಲ್ಲ. ವಿಶೇಷ ಮತ್ತು ಅಭಾವ ಪದಾರ್ಥಗಳಲ್ಲಿ ಜಾತಿಯನ್ನು ಒಪ್ಪದಿದ್ದರೂ ಅನೇಕ ವಿಶೇಷ ಪದಾರ್ಥಗಳಲ್ಲಿ 'ಇದು ವಿಶೇಷ' ಎಂಬ ಅನುಗತ ವ್ಯವಹಾರವು ಪ್ರಸಿದ್ಧವಾಗಿದೆ. ಅದೇ ರೀತಿ ಅಭಾವ ಪದಾರ್ಥಗಳಲ್ಲಿಯೂ 'ಇದು ಅಭಾವ' ಎಂಬ ಅನುಗತ ವ್ಯವಹಾರವೂ ಕೂಡ ಪ್ರಸಿದ್ಧವಾಗಿದೆ. ಜಾತಿ ಎಂಬ ನಿಯಾಮಕ ಪದಾರ್ಥವನ್ನು ಒಪ್ಪದಿದ್ದರೂ ಈ ಅನುಗತವ್ಯವಹಾರವನ್ನು ತಾರ್ಕಿಕರು ಅಂಗೀಕರಿಸಿದ್ದಾರೆ. ಆದ್ದರಿಂದ, ಕೆಲವೆಡೆ ಜಾತಿಯನ್ನು ಒಪ್ಪದಿದ್ದರೂ ಅನುಗತ ವ್ಯವಹಾರವು ಕೂಡುವುದಾದರೆ, ಘಟಪಟಾದಿಗಳ ಅನುಗತ ವ್ಯವಹಾರವನ್ನೂ ಕೂಡ ಜಾತ್ಯೈಕ್ಯವನ್ನು ಒಪ್ಪದೆ ಕೂಡಿಸಬಹುದಲ್ಲವೇ? ಬೇರೆ ಕಡೆ, ಜಾತಿಯನ್ನು ಒಪ್ಪದೆ ಅನುಗತ ವ್ಯವಹಾರವನ್ನು ಕೂಡಿಸಿ, ಘಟಪಟಾದಿ ವ್ಯವಹಾರಗಳಲ್ಲಿ ಮಾತ್ರ ಜಾತ್ಯೈಕ್ಯವನ್ನು ಒಪ್ಪುವುದು ವ್ಯರ್ಥ.

**ಬಹುಕೃದ್ ಬಹುತಾವ್ಯಾಪ್ತಸ್ತಚ್ಛೂನ್ಯೋ ಯಾಚತೇ ಹಿ ತಾಮ್ ।**
**ಏಕಃ ಕುಠಾರೋ ಯತ್ಕಾರ್ಯಲಕ್ಷೇ ವ್ಯಾಪಾರಲಕ್ಷವಾನ್ ॥ ೬೦೨ ॥**

**ಅರ್ಥ–** ಬಹುಕೃತ್ = ಘಟ, ಪಟ ಮೊದಲಾದ ಅನೇಕ ಕಾರ್ಯಗಳಿಗೆ ನಿರ್ಮಾಪಕರಾದ ಕುಲಾಲ, ಕುವಿಂದ ಮೊದಲಾದವರು, ಬಹುಧಾ ವ್ಯಾಪ್ತಃ =

ಬಹುತ್ವದಿಂದ ವ್ಯಾಪ್ತರಾಗಿದ್ದಾರೆ. ಯತ್= ಯಾವ ಕಾರಣದಿಂದ, ಕಾರ್ಯಲಕ್ಷೇ= ಅನೇಕ ಕಾರ್ಯಗಳಿಗಾಗಿ, ಕುಠಾರಃ= ಕೊಡಲಿಯು, ವ್ಯಾಪಾರ ಲಕ್ಷವಾನ್= ಅನೇಕ ವ್ಯಾಪಾರಗಳ ಅಪೇಕ್ಷೆಯುಳ್ಳದ್ದಾಗಿದೆಯೋ, ತತ್= ಆ ಕಾರಣದಿಂದ, ತಚ್ಛೂನ್ಯಃ= ಬಹುತ್ವ ಇಲ್ಲದ ಕಾರಣವು, ತಾಂ= ವ್ಯಾಪಾರದಲ್ಲಿ ಬಹುತ್ವವನ್ನು ಯಾಚತೇ ಹಿ= ಅಪೇಕ್ಷಿಸುತ್ತದಷ್ಟೇ?

**ಅನುವಾದ–** ಬೇರೆ ಬೇರೆ ಕಾರ್ಯಗಳಿಗೆ ಕಾರಣಗಳೂ ಕೂಡ ಬೇರೆ ಬೇರೆಯಾಗಿರುತ್ತವೆಂಬುದನ್ನು ದೃಷ್ಟಾಂತಪೂರ್ವಕ ಸಮರ್ಥಿಸುತ್ತಿದ್ದಾರೆ. ಘಟ, ಪಟ, ಗೃಹ ಮೊದಲಾದ ವಿಭಿನ್ನವಾದ ಕಾರ್ಯಗಳಿದ್ದಾಗ, ಅದಕ್ಕೆ ನಿರ್ಮಾಪಕರಾದ ಕುಲಾಲ, ಕುವಿಂದ ಮೊದಲಾದವರೂ ಕೂಡ ಅನೇಕರೇ ಇರಬೇಕು. ಒಬ್ಬನೇ ವ್ಯಕ್ತಿಯು ಎಲ್ಲಾ ಕಾರ್ಯಗಳನ್ನು ನಿರ್ಮಿಸಲು ಸಾಧ್ಯವಿಲ್ಲ. ಆದ್ದರಿಂದ, ಎಲ್ಲಿ ಕಾರ್ಯಬಹುತ್ವವಿರುತ್ತದೋ, ಅಲ್ಲಿ ಕಾರಣಬಹುತ್ವ ವಿರಲೇಬೇಕು. ಒಂದು ವೇಳೆ, ಅನೇಕ ಕಾರ್ಯಗಳಿದ್ದು, ಕಾರಣ ಒಂದೇ ಇರುವುದಾದಲ್ಲಿ, ಆವಾಗ ಕಾರಣದಲ್ಲಿ ವ್ಯಾಪಾರಬಹುತ್ವವಿರಬೇಕು. ಒಂದೇ ಕೊಡಲಿಯು ಲಕ್ಷ ಮರಗಳನ್ನು ತುಂಡರಿಸುತ್ತದೆಂದು ಹೇಳಿದಾಗ, ಒಂದೇ ಕೊಡಲಿಯಲ್ಲಿ ಲಕ್ಷ ವ್ಯಾಪಾರಗಳು ಇರಬೇಕು.

**ಭಾವವಿಲಾಸಿನೀ–** ಅನೇಕೇಷಾಮನೇಕವ್ಯವಹಾರೋಪಯೋಗಿಜಾತೇರನೇಕತ್ವೈವ ನ್ಯಾಯ್ಯಾ, ನತ್ವೇಕತೇತ್ಯೇತತ್ ಸದೃಷ್ಟಾಂತಮಾಹ – **ಬಹುಕೃದಿತಿ** ॥ ಬಹುಕೃದ್ಘಟಪಟಾದಿಬಹುಕಾರ್ಯಕೃತ್ ಕುಲಾಲಕುವಿಂದಾದಿಃ । ತಾಂ ಬಹುತಾಮ್ । ವ್ಯಾಪಾರಲಕ್ಷವಾನ್ ದಾರುಸಂಯೋಗಾಖ್ಯ-ವ್ಯಾಪಾರಲಕ್ಷವಾನ್ ॥ ೬೦೨ ॥

**ವಿವರಣೆ–** 'ಅಯಂ ಘಟಃ' ಇತ್ಯಾದಿ ಅನೇಕ ವ್ಯವಹಾರಗಳಿಗೆ ಕಾರಣವಾದ ಘಟತ್ವವೂ ಕೂಡ ಅನೇಕವೇ ಆಗಿರಬೇಕು. ಹೊರತು, ಒಂದು ಘಟತ್ವದಿಂದ ಅನೇಕ ವ್ಯವಹಾರಗಳು ಕೂಡಲು ಸಾಧ್ಯವಿಲ್ಲ. ಇದನ್ನು ಈ ಶ್ಲೋಕದಲ್ಲಿ ಸಮರ್ಥನೆ ಮಾಡುತ್ತಿದ್ದಾರೆ –

'ಅಯಂ ಘಟಃ' ಎಂಬ ವ್ಯವಹಾರವು ಅನೇಕವಾಗಿರುತ್ತದೆ. ಸಕಲ ಘಟಗಳಲ್ಲಿ 'ಅಯಂ ಘಟಃ' ಎಂಬ ಒಂದೇ ಬಗೆಯ ವ್ಯವಹಾರವು ಉಪಪನ್ನವಾಗಬೇಕಾದರೆ, ಸಕಲ ಘಟಗಳಲ್ಲಿಯೂ ಘಟತ್ವವೆಂಬ ಒಂದೇ ಜಾತಿಯನ್ನು ಒಪ್ಪಬೇಕೆಂಬುದು ತಾರ್ಕಿಕರ ನಿಲುವು. ಎಂದರೆ, 'ಅಯಂ ಘಟಃ' ಇತ್ಯಾದಿ ಸಾವಿರಾರು ವ್ಯವಹಾರವೆಂಬ ಕಾರ್ಯಗಳಿಗೆ, ಘಟತ್ವವೆಂಬ ಕಾರಣವು ಒಂದೇ ಆಗಿರುತ್ತದೆ. ಎಲ್ಲಿ ಘಟತ್ವವಿರುತ್ತದೋ, ಅಲ್ಲೆಲ್ಲಾ 'ಅಯಂ ಘಟಃ' ಎಂದು ವ್ಯವಹರಿಸಬಹುದು. ಹೀಗೆ, ತಾರ್ಕಿಕರು ಸುಲಭವಾಗಿ ವ್ಯವಹಾರವನ್ನು ನಿರ್ವಹಿಸಲು ಅನೇಕ ಕಾರ್ಯಗಳಿಗೆ ಒಂದೇ ಕಾರಣವನ್ನು ಒಪ್ಪಿರುತ್ತಾರೆ.

ಇದು ತಪ್ಪು. ಲೋಕದಲ್ಲೆಲ್ಲೆಡೆ ಕಾರ್ಯಗಳು ಭಿನ್ನಭಿನ್ನವಾಗಿದ್ದಾಗ ಕಾರಣಗಳೂ ಕೂಡ ಭಿನ್ನಭಿನ್ನವಾಗಿರುತ್ತವೆಂಬುದು ಕಂಡಿದೆ. ಲೋಕದ ಅನುಭವಕ್ಕೆ ವಿರುದ್ಧವಾಗಿ ತಾರ್ಕಿಕರು ಅನೇಕ ಕಾರ್ಯಗಳಿಗೆ ಒಂದೇ ಕಾರಣವನ್ನು ಹೇಳುತ್ತಿದ್ದಾರೆ. ಇದು ಸರಿಯಲ್ಲ. ಎಲ್ಲಿ ಕಾರ್ಯಬಹುತ್ವವಿರುತ್ತದೋ, ಅಲ್ಲಿ ಕಾರಣಬಹುತ್ವ ಇದ್ದೇ ಇರುತ್ತದೆಂಬುದು ನಿಯಮಸಿದ್ಧವಾಗಿರುತ್ತದೆ. ಉದಾಹರಣೆಗೆ - ಗಡಿಗೆ, ಬಟ್ಟೆ ಮೊದಲಾದ ಅನೇಕ ಕಾರ್ಯಗಳ ಉತ್ಪತ್ತಿಗೆ ಕುಂಬಾರ, ನೇಯ್ಗಾರ ಮೊದಲಾದ ಅನೇಕ ಕಾರಣಗಳ ಅವಶ್ಯಕತೆಯಿರುತ್ತದೆ.

ಒಂದು ವೇಳೆ, ಕಾರ್ಯದಲ್ಲಿ ಬಹುತ್ವವಿದ್ದರೂ, ಕಾರಣವು ಒಂದೇ ಆಗಿದ್ದರೆ, ಅಂತಹ ಸ್ಥಳದಲ್ಲಿ ಆ ಒಂದೇ ಕಾರಣದಲ್ಲಿ ವ್ಯಾಪಾರವೆಂಬ ಕ್ರಿಯೆಯು ಬಹುವಾಗಿರುತ್ತದೆ. ಉದಾಹರಣೆಗೆ, ಒಂದೇ ಕೊಡಲಿಯು ಸಾವಿರಾರು ಮರಗಳನ್ನು ಕತ್ತರಿಸುತ್ತದೆ. ಇಲ್ಲಿ ಕೊಡಲಿ ಒಂದೇ ಆಗಿದ್ದರೂ, ಕೊಡಲಿಯಲ್ಲಿರುವ ಉದ್ಯಮನ-ನಿಪತನ ಎಂಬ ಕ್ರಿಯೆಯು ಸಾವಿರಾರು ಸಂಖ್ಯೆಯಲ್ಲಿಯೇ ಇರುತ್ತವೆ. ಆದ್ದರಿಂದ, ಕಾರ್ಯಬಹುತ್ವವಿದ್ದಲ್ಲಿ ಕಾರಣಬಹುತ್ವವಿರಲೇಬೇಕು. ಒಂದು ವೇಳೆ, ಕಾರಣಬಹುತ್ವವಿಲ್ಲದಿದ್ದ ಪಕ್ಷದಲ್ಲಿ ಒಂದೇ ಕಾರಣದಲ್ಲಿ ವ್ಯಾಪಾರಬಹುತ್ವವನ್ನು ಒಪ್ಪಬೇಕು.

ಪ್ರಕೃತ, ತಾರ್ಕಿಕರು 'ಅಯಂ ಘಟಃ' ಎಂಬ ಸಾವಿರಾರು ವ್ಯವಹಾರಗಳೆಂಬ ಕಾರ್ಯಕ್ಕೆ 'ಘಟತ್ವ' ಎಂಬ ಒಂದೇ ಕಾರಣವನ್ನು ಒಪ್ಪುತ್ತಿದ್ದಾರೆ. ಮತ್ತು ಇಂತಹ ಘಟತ್ವ ಎಂಬ ಕಾರಣದಲ್ಲಿ ವ್ಯಾಪಾರಬಹುತ್ವವನ್ನೂ ಕೂಡ ಒಪ್ಪುತ್ತಿಲ್ಲ. ಆದ್ದರಿಂದ, ತಾರ್ಕಿಕರ ಜಾತ್ಯೈಕತ್ವಸಿದ್ಧಾಂತವು ಅತ್ಯಂತ ಅಸಮಂಜಸವಾಗಿದೆ.

**ತಸ್ಮಾದನೇಕಕಾರ್ಯೇಷು ಕಸ್ಮಾದೇಕೋ ವಿಮೃಗ್ಯತೇ ।**
**ತತ್ತದ್ವ್ಯಕ್ತ್ಯನ್ವಯೀ ಸೋಽಪಿ ತತ್ತತ್ಕರ್ತಾ ಯತೋಽಂತತಃ ॥ ೬೦೩ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಅಂತತಃ= ಕೊನೆಗೂ ಕೂಡ, ಸನ್= ಆಯಾ ಘಟಾದಿಗಳ ಸಂಬಂಧವುಳ್ಳದ್ದಾಗಿಯೇ, ಸಃ ಅಪಿ= ಆ ಜಾತಿಯೂ ಕೂಡ, ತತ್ತತ್ಕರ್ತಾ= ಆಯಾ ವ್ಯವಹಾರಗಳಿಗೆ ಕಾರಣವಾಗುತ್ತದೋ, ತಸ್ಮಾತ್= ಆ ಕಾರಣದಿಂದ, ಅನೇಕ ಕಾರ್ಯೇಷು= ಭಿನ್ನ ಭಿನ್ನ ಕಾರ್ಯಗಳಿಗಾಗಿ, ಏಕಃ= ಒಂದೇ ಕಾರಣವು, ಕಸ್ಮಾತ್= ಯಾವ ಕಾರಣದಿಂದ, ವಿಮೃಗ್ಯತೇ= ಹುಡುಕಲ್ಪಡುತ್ತದೆ?

**ಅನುವಾದ– ಮೇಲೆ ಹೇಳಿದ ಕಾರಣದಿಂದ, ಅನೇಕ ಕಾರ್ಯಗಳಿಗೆ ಅನೇಕ ಕಾರಣಗಳಿರಲೇಬೇಕು. ಹೀಗಿರುವಾಗ, ಒಂದೇ ಕಾರಣವನ್ನು ಏಕೆ ಹುಡುಕುತ್ತಿದ್ದಿ? ಆದ್ದರಿಂದ, ಜಾತಿ ಎಂಬ ಪದಾರ್ಥವೂ ಕೂಡ ಪ್ರತಿಯೊಂದು ಘಟಾದಿಗಳ**

ಜೊತೆಗೆ ಭಿನ್ನಭಿನ್ನವಾಗಿಯೇ ಸಂಬಂಧವನ್ನು ಹೊಂದಿ, ತಾನೂ ಕೂಡ ಭಿನ್ನಭಿನ್ನವಾಗಿಯೇ ಇದ್ದು ಅನೇಕ ವ್ಯವಹಾರಗಳಿಗೆ ಕಾರಣವಾಗುತ್ತದೆಂದು ಕಟ್ಟ ಕಡೆಗಾದರೂ ನೀನು ಒಪ್ಪಲೇಬೇಕು.

**ಭಾವವಿಲಾಸಿನೀ–** ತತ್ತದ್ವ್ಯಕ್ತ್ಯನ್ವಯೀ ತತ್ತದ್ವ್ಯಕ್ತ್ಯಾಧಾರತಾಖ್ಯಭಿನ್ನಭಿನ್ನಸ್ವರೂಪಸಂಬಂಧ-ರೂಪಾನ್ವಯವಾನ್ । ಸೋಽಪಿ ಜಾತಿಪದಾರ್ಥೋಽಪಿ ॥ ೬೦೩ ॥

**ವಿವರಣೆ–** ಪ್ರತಿಯೊಂದು ಘಟದಲ್ಲಿರುವ ಘಟತ್ವಜಾತಿಯು ಬೇರೆ ಬೇರೆ ಎಂದು ಒಪ್ಪಲೇಬೇಕಾಗುತ್ತದೆ. ಅದು ಹೀಗೆ –

ಕಾರ್ಯತಾವಚ್ಛೇದಕಾವಚ್ಛಿನ್ನವನ್ನು ಕುರಿತು ಕಾರಣತಾವಚ್ಛೇದಕಾವಚ್ಛಿನ್ನವು ಕಾರಣವೆಂದು ತಾರ್ಕಿಕರು ಹೇಳುತ್ತಾರೆ. ಇದು ಕೇವಲ ವ್ಯವಹಾರ ಮಾತ್ರ. ಪ್ರಕೃತ, 'ಅಯಂ ಘಟಃ' ಇತ್ಯಾದಿ ಹಲವು ವ್ಯವಹಾರಗಳಿಗೆ 'ಘಟತ್ವ' ಎಂಬುದು ಒಂದೇ ಕಾರಣವೆಂದು ಹೇಳಲು ಬರುವುದಿಲ್ಲವೆಂದು ಈ ಹಿಂದೆ ಉಪಪಾದನೆ ಮಾಡಿದ್ದೇವೆ. ಹೀಗಿರುವಾಗ, ವ್ಯವಹಾರಕ್ಕೆ ಕಾರಣವಾದ ಜಾತಿಯೂ ಕೂಡ ಅನೇಕವೆಂದು ನೀನು ಒಪ್ಪಲೇಬೇಕು. ಸುಮ್ಮನೆ, ಒಂದೇ ಕಾರಣವೆಂಬುದನ್ನು ನೀನು ಆಗ್ರಹಿಸಿ ಕಾರಣದಲ್ಲಿ ಏಕತ್ವವನ್ನು ಏಕೆ ಹುಡುಕುತ್ತಿ? ಪ್ರತಿಯೊಂದು ಘಟದ ಜೊತೆಯೂ ಘಟತ್ವವು ಸ್ವರೂಪ ಸಂಬಂಧವನ್ನು ಹೊಂದಿ ಆಯಾ ವ್ಯವಹಾರಗಳಿಗೆ ಕಾರಣವಾಗುತ್ತದೆ ಎಂದು ಹೀಗೆಯೇ ಒಪ್ಪಲು ಬರುವಾಗ, ಘಟಕ್ಕೂ ಘಟತ್ವಕ್ಕೂ ಸಮವಾಯ ಸಂಬಂಧವನ್ನು ಒಪ್ಪಿ, ಅಂತಹ ಘಟತ್ವವು ನಿತ್ಯವಾಗಿದೆ ಎಂದು, ಮತ್ತು ಸಾವಿರಾರು ಘಟಗಳಲ್ಲಿ ಘಟತ್ವವು ಏಕವಾಗಿದೆ ಎಂದೆಲ್ಲಾ ಅನುಭವಕ್ಕೆ ವಿರುದ್ಧವಾಗಿ ಏಕೆ ಒಪ್ಪಬೇಕು? ಎಷ್ಟೇ ಆದರೂ, ಕೊನೆಯಲ್ಲಿ ಜಾತಿಯನ್ನು ಅನೇಕವೆಂದು ಒಪ್ಪಬೇಕಾಗುವ ಪರಿಸ್ಥಿತಿ ತಾರ್ಕಿಕನಿಗೆ ಬಂದೇ ಬರುತ್ತದೆ.

**ಅತೋ ಧರ್ಮಸ್ಯ ಧರ್ಮ್ಯೈಕ್ಯೇ ಧರ್ಮಿಣಾಂ ಚೈಕತಾ ಭವೇತ್ ।**
**ಇತ್ಯಾದಿದೋಷೈರ್ದೂಷ್ಯಂ ನ ಪೋಷ್ಯಮೇವಾಖಿಲೈರ್ಬುಧೈಃ ॥ ೬೦೪ ॥**

**ಅರ್ಥ–** ಅತಃ = ಜಾತ್ಯೈಕ್ಯವನ್ನು ಖಂಡನೆ ಮಾಡಿದ್ದರಿಂದ, ಧರ್ಮಸ್ಯ = ಧರ್ಮಕ್ಕೆ, ಧರ್ಮ್ಯೈಕ್ಯೇ = ಧರ್ಮಿಯಿಂದ ಐಕ್ಯವನ್ನು ಒಪ್ಪಿದರೆ, ಧರ್ಮಿಣಾಂ ಚ = ಎಲ್ಲಾ ಧರ್ಮಿಗಳಿಗೂ, ಏಕತಾ = ಐಕ್ಯವು, ಭವೇತ್ = ಬರಬೇಕಾದೀತು. ಇತ್ಯಾದಿದೋಷೈಃ = ಇವೇ ಮೊದಲಾದ ದೋಷಗಳಿಂದ ನಮ್ಮ ಸಿದ್ಧಾಂತವು, ದೂಷ್ಯಂ ನ = ದೂಷಿಸಲು ಯೋಗ್ಯವಲ್ಲ. ಹೊರತಾಗಿ, ಅಖಿಲೈಃ = ಎಲ್ಲಾ ಬುಧೈಃ = ಪಂಡಿತರಿಂದ, ಪೋಷ್ಯಂ ಏವ = ಪುಷ್ಟೀಕರಿಸಲು ಯೋಗ್ಯವೇ ಆಗಿರುತ್ತದೆ.

**ಅನುವಾದ–** ಹೀಗೆ, ಜಾತ್ಯೈಕ್ಯವನ್ನು ಖಂಡನೆ ಮಾಡಿದ್ದರಿಂದ, ತಾರ್ಕಿಕರು ನಮ್ಮನ್ನು ಆಕ್ಷೇಪಿಸುವಂತಿಲ್ಲ. ನಾವು ಧರ್ಮ ಹಾಗೂ ಧರ್ಮಿಗಳಿಗೆ ಐಕ್ಯವನ್ನು ಒಪ್ಪುತ್ತೇವೆ.

**ಅದಕ್ಕೆ ತಾರ್ಕಿಕರು 'ಒಂದು ವೇಳೆ ಧರ್ಮಧರ್ಮಿಗಳಿಗೆ ಐಕ್ಯವನ್ನು ಒಪ್ಪುವುದಾದರೆ, ಪರಸ್ಪರ ಧರ್ಮಿಗಳಿಗೂ ಐಕ್ಯ ಬರಬೇಕಾದೀತು' ಎಂಬ ದೋಷವನ್ನು ಹೇಳಿದ್ದರು. ಈ ದೋಷವು ತಾರ್ಕಿಕರ ಜಾತ್ಯೈಕ್ಯವು ಸಿದ್ಧವಾಗಿದ್ದಲ್ಲಿ ಹೇಳಲು ಯೋಗ್ಯವಾಗುತ್ತಿತ್ತು. ಆದರೆ, ಇದುವರೆಗೂ ನಾವು ಖಂಡನೆ ಮಾಡಿದಂತೆ, ಜಾತ್ಯೈಕ್ಯವೇ ಅಪ್ರಾಮಾಣಿಕವಾದ್ದರಿಂದ ನಮ್ಮ ಸಿದ್ಧಾಂತವು ನಿರ್ದುಷ್ಟವಾಗಿದೆ. ಧರ್ಮಧರ್ಮಿಗಳಿಗೆ ಐಕ್ಯವನ್ನು ಹೇಳುವ ನಮ್ಮ ಸಿದ್ಧಾಂತವನ್ನು ಎಲ್ಲ ವಿದ್ವಾಂಸರು ಸನ್ಮಾನಿಸಬೇಕು.**

**ಭಾವವಿಲಾಸಿನೀ– ಜಾತೇರೇಕತ್ವಖಂಡನಸ್ಯ ಪ್ರಕೃತೋಪಯೋಗಂ ದರ್ಶಯತಿ – ಅತ ಇತಿ ॥ ಅತೋ ಜಾತ್ಯೈಕ್ಯಖಂಡನಾದ್ ಧರ್ಮ್ಯೈಕ್ಯಂ ದೂಷ್ಯಂ ನೇತಿ ಸಂಬಂಧಃ ॥ ೬೦೪ ॥**

**ವಿವರಣೆ–** ಇಲ್ಲಿಯ ತನಕ ಘಟತ್ವ ಮೊದಲಾದ ಜಾತಿಗಳಿಗೆ ಐಕ್ಯವನ್ನೊಪ್ಪಬೇಕೆಂಬ ತಾರ್ಕಿಕರ ಸಿದ್ಧಾಂತವನ್ನು ಖಂಡನೆ ಮಾಡಿದರು. ಇದರಿಂದ, ಪ್ರಕೃತಕ್ಕೆ ಏನು ಉಪಯೋಗವಾಯಿತು? ಎಂಬುದನ್ನು ಈ ಶ್ಲೋಕದಲ್ಲಿ ಸಮರ್ಥಿಸುತ್ತಿದ್ದಾರೆ –

ತತ್ವವಾದಿಗಳಾದ ನಾವು ಘಟತ್ವ ಮೊದಲಾದ ಧರ್ಮಗಳಿಗೂ, ಘಟ ಮೊದಲಾದ ಧರ್ಮಿಗಳಿಗೂ ಐಕ್ಯವನ್ನು ಒಪ್ಪುತ್ತೇವೆ. ಇಂತಹ ನಮ್ಮನ್ನು ಕುರಿತು ತಾರ್ಕಿಕರು ಹೀಗೆ ಆಕ್ಷೇಪಿಸುತ್ತಾರೆ –

ಘಟತ್ವ ಮೊದಲಾದ ಧರ್ಮಗಳಿಗೂ, ಘಟ ಮೊದಲಾದ ಧರ್ಮಿಗಳಿಗೂ ಐಕ್ಯವನ್ನೊಪ್ಪುವುದಾದರೆ ಸಕಲ ಘಟಗಳಿಗೂ ಐಕ್ಯ ಬರಬೇಕಾದೀತು. ಏಕೆಂದರೆ, ಸಕಲ ಘಟಗಳಲ್ಲಿರುವ ಘಟತ್ವಜಾತಿಯು ಒಂದೇ ಆಗಿರುತ್ತದೆ. ಅಂತಹ ಘಟತ್ವಜಾತಿಗೂ ಘಟ ಮೊದಲಾದ ವ್ಯಕ್ತಿಗಳಿಗೂ ಐಕ್ಯವನ್ನೊಪ್ಪಿದರೆ, ಘಟಗಳೂ ಕೂಡ ಅಭಿನ್ನವೇ ಆಗುತ್ತವೆ. 'ಯಃ ಯದಭಿನ್ನಾಭಿನ್ನಃ ಸಃ ತದಭಿನ್ನಃ' ಎಂಬ ನ್ಯಾಯದಂತೆ, ಸಕಲ ಘಟಗಳಲ್ಲಿರುವ ಘಟತ್ವಜಾತಿಯು ಒಂದೇ ಆಗಿರುವುದರಿಂದ, ಈ ಘಟದಿಂದ ಅಭಿನ್ನವಾದ ಘಟತ್ವಜಾತಿಯಿಂದ ಮತ್ತೊಂದು ಘಟವು ಅಭಿನ್ನವಾಗಿರುತ್ತದೆ. ಆದ್ದರಿಂದ, ಆ ಘಟಕ್ಕೂ ಈ ಘಟಕ್ಕೂ ಐಕ್ಯ ಬರಬೇಕಾಗುತ್ತದೆ. ಹೀಗೆ ಹೇಳಿದಾಗ, ಎಲ್ಲಾ ವ್ಯವಹಾರವು ಅಸ್ತವ್ಯಸ್ತವಾಗುತ್ತದೆ ಇತ್ಯಾದಿ ಹಲವು ದೋಷಗಳನ್ನು ತಾರ್ಕಿಕರು ಹೇಳಿದ್ದರು. ಆದ್ದರಿಂದ, ಧರ್ಮಧರ್ಮಿಗಳಿಗೆ ಐಕ್ಯವನ್ನು ಹೇಳಬಾರದೆಂದು' ಅವರ ಅಭಿಪ್ರಾಯ.

ಈ ದೋಷವನ್ನು ತಾರ್ಕಿಕರು ಜಾತ್ಯೈಕ್ಯವನ್ನು ಸಾಧಿಸಲು ಸಮರ್ಥರಾಗಿದ್ದರೆ ಹೇಳಬಹುದಿತ್ತು. ಆದರೆ, ಅನೇಕ ದೋಷಗಳನ್ನು ಇಲ್ಲಿಯ ತನಕ ನಾವು ಹೇಳಿದ್ದರಿಂದ, ಜಾತ್ಯೈಕ್ಯವನ್ನು ಸಾಧಿಸಲು ತಾರ್ಕಿಕರಿಗೆ ಸಾಧ್ಯವಾಗುವುದಿಲ್ಲ. ಆದ್ದರಿಂದ, ಘಟಕ್ಕಿಂತ ಘಟತ್ವಜಾತಿಯು ಭಿನ್ನವಾಗಿದೆ ಎಂದು ಸಮರ್ಥಿಸಲು ಸಾಧ್ಯವಿಲ್ಲ. ಹೊರತಾಗಿ, ಘಟತ್ವ

ಎಂಬ ಜಾತಿಗೂ, ಘಟಕ್ಕೂ ಅಭೇದವನ್ನೇ ಹೇಳಬೇಕು. ಹೀಗೆ ಅಭೇದವನ್ನು ಹೇಳಿದಾಗ, ಸಕಲ ಘಟಗಳಲ್ಲಿರುವ ಘಟತ್ವಜಾತಿಯು ಒಂದೇ ಆಗದ ಕಾರಣ, 'ಯಃ ಯದಭಿನ್ನಾಭಿನ್ನಃ ಸಃ ತದಭಿನ್ನಃ' ಎಂಬ ನ್ಯಾಯವನ್ನು ಇಟ್ಟುಕೊಂಡು ಸಕಲ ಘಟಗಳಿಗೂ ಐಕ್ಯ ಬರಲಿ ಎಂಬ ಆಕ್ಷೇಪವನ್ನು ಮಾಡಲು ಬರುವುದಿಲ್ಲ.

ಹಾಗಾದರೆ, ಧರ್ಮಧರ್ಮಿವ್ಯವಹಾರವು ಹೇಗೆ ಕೂಡುತ್ತದೆಂದರೆ, ವಿಶೇಷದ ಬಲದಿಂದ ಎಂಬುದನ್ನು ಬೇರೆ ಕಡೆ ನಾವು ಸಮರ್ಥಿಸಿದ್ದೇವೆ. ಆದ್ದರಿಂದ, ಧರ್ಮ ಹಾಗೂ ಧರ್ಮಿಗಳಿಗೆ ಐಕ್ಯವನ್ನು ಸಮರ್ಥಿಸುವ ನಮ್ಮ ಸಿದ್ಧಾಂತವನ್ನು ಬುದ್ಧಿವಂತರಾದ ವಿದ್ವಾಂಸರೆಲ್ಲರೂ ಸನ್ಮಾನಿಸಬೇಕು. ಹೊರತು, ತಾರ್ಕಿಕರನ್ನು ಅನುಸರಿಸಿ ದೂಷಿಸಬಾರದು.

**ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ ।**
**ಇತಿ ಶ್ರುತೇರ್ಘಟೋ ನೀಲ ಇತಿ ವ್ಯವಹೃತೇರಪಿ ॥ ೬೦೫ ॥**

**ಅರ್ಥ–** ಏವಂ = ಹೀಗೆ, ಧರ್ಮಾನ್ = ಪರಮಾತ್ಮನಲ್ಲಿರುವ ಸರ್ವಜ್ಞತ್ವ, ಸ್ವಾತಂತ್ರ್ಯ ಮೊದಲಾದ ಗುಣಗಳನ್ನು, ಪೃಥಕ್ = ಭಿನ್ನವೆಂದು, ಪಶ್ಯನ್ = ತಿಳಿಯುವ ವ್ಯಕ್ತಿಯು, ತಾನ್ ಏವ = ಭಿನ್ನತ್ವೇನ ನೋಡಿದ ಧರ್ಮಗಳನ್ನೇ, (ಧರ್ಮಗಳನ್ನು ಭಿನ್ನವೆಂದು ತಿಳಿದ ಕೂಡಲೇ), ಅನುವಿಧಾವತಿ = ಅಧಃಪತನವನ್ನು ಹೊಂದುತ್ತಾನೆ. ಇತಿ = ಹೀಗೆ, ಶ್ರುತೇಃ = ಶ್ರುತಿಪ್ರಮಾಣವಿರುವುದರಿಂದ, ಅಪಿ = ಮತ್ತು, ನೀಲಃ ಘಟಃ = ಗಡಿಗೆಯು ಕಪ್ಪು, ಇತಿ = ಎಂಬ, ವ್ಯವಹೃತೇಃ = ವ್ಯವಹಾರವಿರುವುದರಿಂದಲೇ, ಧರ್ಮಧರ್ಮಿಗಳಿಗೆ ಐಕ್ಯವೇ ಸಿದ್ಧವಾಗುತ್ತದೆ.

**ಅನುವಾದ–** ಧರ್ಮ ಹಾಗೂ ಧರ್ಮಿಗಳಿಗೆ ಐಕ್ಯವಿದೆಯೆನ್ನಲು 'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ' ಎಂಬ ಶ್ರುತಿಯೇ ಆಧಾರವಾಗಿದೆ. ಈ ಶ್ರುತಿಯು ಪರಮಾತ್ಮನಲ್ಲಿರುವ ಗುಣಗಳಿಗೂ ಪರಮಾತ್ಮನಿಗೂ ಭೇದವನ್ನು ತಿಳಿದವನು ಪರಮಾತ್ಮನನ್ನು ಸೇರದೆ, ಅಂಧಂತಮಸ್ಸನ್ನೇ ಸೇರುತ್ತಾನೆಂದು ಸಮರ್ಥಿಸುತ್ತಿದೆ. ಇದರಿಂದ, ಪರಮಾತ್ಮನಲ್ಲಿರುವ ಗುಣಗಳಿಗೂ ಪರಮಾತ್ಮನಿಗೂ ಐಕ್ಯವನ್ನು ಒಪ್ಪಬೇಕೆಂಬುದು ಸ್ಪಷ್ಟವಾಗುತ್ತದೆ. ಮತ್ತು, ಘಟವು ಕಪ್ಪಾಗಿದೆ, ಬಟ್ಟೆಯು ಬಿಳಿಯಾಗಿದೆ ಇತ್ಯಾದಿ ವ್ಯವಹಾರಗಳಿಂದಲೂ ಧರ್ಮಧರ್ಮಿಗಳಿಗೆ ಐಕ್ಯವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ– ಪೋಷ್ಯತ್ವೇ ಹೇತುದ್ವಯಮಾಹ – ಏವಂ ಧರ್ಮಾನಿತಿ ॥ ೬೦೫ ॥**

**ವಿವರಣೆ–** ಕಠೋಪನಿಷತ್ತಿನಲ್ಲಿ ಹೀಗೆ ಹೇಳಲಾಗಿದೆ. 'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ'. ಈ ಶ್ರುತಿಯನ್ನು ಪ್ರಕೃತ ಉದಾಹರಿಸಿದ್ದಾರೆ.

ಸಂಪೂರ್ಣ ಶ್ರುತಿವಾಕ್ಯ ಹೀಗಿದೆ. 'ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ । ಮೃತ್ಯೋಃಸ್ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ॥' ಇಹ = ಭಗವಂತನ ಮೂಲ ರೂಪದಲ್ಲಿ ಅಥವಾ ಅವತಾರ ರೂಪದಲ್ಲಿ, ಕಿಂಚನ = ಯಾವುದೇ ಗುಣಗಳು ಅಥವಾ ಕ್ರಿಯೆಗಳು, ನಾನಾ = ಭಿನ್ನವಾಗಿ, ನಾಸ್ತಿ = ಇರುವುದಿಲ್ಲ. ಇದಂ = ಈ ರೂಪಕ್ರಿಯಾದಿಗಳಿಗೆ ಭೇದವಿಲ್ಲ ಅಥವಾ ಭೇದಾಭೇದವಿಲ್ಲ ಎಂದು, ಮನಸೈವ = ಮನಸ್ಸಿನಿಂದಲೇ, ಆಪ್ತವ್ಯಮ್ = ತಿಳಿಯಬೇಕು. ಯಃ = ಯಾರು, ಇಹ = ಈ ಗುಣಕ್ರಿಯಾದಿಗಳಲ್ಲಿ, ನಾನೇವ = ಭೇದವನ್ನು, ಪಶ್ಯತಿ = ತಿಳಿಯುತ್ತಾನೋ, ಸಃ = ಅವನು, ಮೃತ್ಯೋಃ = ಮರಣದಿಂದ, ಮೃತ್ಯುಂ = ತಮಸ್ಸನ್ನು, ಗಚ್ಛತಿ = ಹೊಂದುತ್ತಾನೆ. ಹೀಗೆ ಕಠೋಪನಿಷತ್ತಿನ ಪ್ರಕರಣವಿರುತ್ತದೆ. ಇದರಿಂದ ಭಗವಂತನಿಗೂ ಅವನ ಅವತಾರ ರೂಪಗಳಿಗೂ, ಮತ್ತು ಭಗವಂತನಿಗೂ ಅವನಲ್ಲಿರುವ ಸರ್ವಜ್ಞತ್ವಾದಿ ಗುಣಗಳಿಗೂ ಮತ್ತು ಅವನ ಕ್ರಿಯೆಗಳಿಗೂ ಭೇದವನ್ನು ಅಥವಾ ಭೇದಾಭೇದವನ್ನು ಸರ್ವಥಾ ತಿಳಿಯಬಾರದು. ಒಂದು ವೇಳೆ ಭಗವಂತನ ರೂಪ, ಗುಣ, ಕ್ರಿಯೆಗಳಿಗೆ ಯಾರು ಭೇದವನ್ನು ತಿಳಿಯುತ್ತಾನೋ, ಅವನೂ ಕೂಡ ಭಗವಂತನಿಂದ ಭಿನ್ನನಾಗಿ ತಮಸ್ಸನ್ನು ಹೊಂದುತ್ತಾನೆ. ಭೇದವನ್ನು ಚಿಂತನೆ ಮಾಡಿದವನಿಗೂ ಭೇದವೇ ಗತಿಯಾಗುತ್ತದೆ. ಎಂದೂ ಸಹ ಪರಮಾತ್ಮನನ್ನು ಹೊಂದದೆ, ಅವನಿಂದ ಅತ್ಯಂತ ದೂರ ಉಳಿದು, ತಮಸ್ಸಿನಲ್ಲೇ ದುಃಖ ಪಡುವ ಸ್ಥಿತಿ ಬರುತ್ತದೆ.

ಹೀಗೆ, ಕಠೋಪನಿಷತ್ತು ಸ್ಪಷ್ಟವಾಗಿ ಪರಮಾತ್ಮನಿಗೂ ಅವನ ಗುಣಗಳಿಗೂ ಭೇದವನ್ನು ನಿಷೇಧ ಮಾಡುತ್ತಿರುವುದರಿಂದ ತಾರ್ಕಿಕರು ಸಮರ್ಥಿಸುವ ಧರ್ಮಧರ್ಮಿಗಳಿಗೆ ಭೇದವು ಪ್ರಮಾಣವಿರುದ್ಧವಾಗಿದೆ. ಮತ್ತು, 'ನೀಲಃ ಘಟಃ, ಶ್ವೇತಃ ಪಟಃ' 'ಘಟವು ಕಪ್ಪಾಗಿದೆ, ಬಟ್ಟೆಯು ಬಿಳಿಯಾಗಿದೆ' ಇತ್ಯಾದಿ ವ್ಯವಹಾರದಿಂದ ರೂಪಕ್ಕೂ ಧರ್ಮಿಯಾದ ಘಟಕ್ಕೂ ಅಭೇದವೇ ಸಿದ್ಧವಾಗುತ್ತದೆ. ಆದ್ದರಿಂದ, ಧರ್ಮಧರ್ಮಿಗಳ ಐಕ್ಯವಿಷಯದಲ್ಲಿ ಶ್ರುತಿಪ್ರಮಾಣವಿರುವಂತೆ ವ್ಯವಹಾರಕ್ಕೆ ಆಧಾರವಾದ ಅನುಭವಪ್ರಮಾಣವೂ ಇರುತ್ತದೆ.

ಆದರೆ, ಮೂರ್ಖರಾದ ತಾರ್ಕಿಕರು ಭಗವಂತನಲ್ಲಿ ಎಂಟೇ ಗುಣಗಳಿರುತ್ತವೆ. ಅವುಗಳು ಭಗವಂತನಿಂದ ಭಿನ್ನವಾಗಿರುತ್ತವೆ ಎಂದು ಹೇಳುತ್ತಾರೆ. ಇಂತಹ ವಿಚಾರಹೀನರಾದ ತಾರ್ಕಿಕರಿಗೆ ಶ್ರುತಿಪ್ರಮಾಣವಿರೋಧ ಹಾಗು ಅನುಭವ-ವಿರೋಧಗಳು ಬರುತ್ತವೆ.

**ನೇಕ್ಷೇತೋದ್ಯಂತಮಿತಿವದ್ ದೃಙ್ಮಾತ್ರಸ್ಯ ನಿಷೇಧನೇ ।**
**ನಾರ್ಥಾಸತ್ತ್ವಮಿತಿ ಪ್ರಾಹ ವಿಪಶ್ಚಿತ್ ಕಿಲ ಕಶ್ಚನ ॥ ೬೦೬ ॥**

**ಅರ್ಥ–** ಉದ್ಯಂತಂ = ಉದಯಿಸುತ್ತಿರುವ ಸೂರ್ಯನನ್ನು, ನ ಈಕ್ಷೇತ = ನೋಡಬಾರದು. ಇತಿವತ್ = ಈ ಶ್ರುತಿಯಂತೆ, ದೃಙ್ಮಾತ್ರಸ್ಯ = ಚಾಕ್ಷುಷ ಜ್ಞಾನವನ್ನಷ್ಟೇ, ನಿಷೇಧನೇ = ನಿಷೇಧ ಮಾಡಿದಾಗ, ಅರ್ಥಾಸತ್ತ್ವಂ ನ = ನಿಷೇಧ ಮಾಡಲ್ಪಡುವ ವಸ್ತುವೇ ಇಲ್ಲವಾಗುವುದಿಲ್ಲ. ಇತಿ = ಹೀಗೆ, ಕಶ್ಚನ = ಒಬ್ಬ, ವಿಪಶ್ಚಿತ್ = ಪಂಡಿತನು, ಪ್ರಾಹ ಕಿಲ= ಹೇಳುತ್ತಾನೆ.

**ಅನುವಾದ–** 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಎಂಬ ಶ್ರುತಿಯು ಪರಮಾತ್ಮನಲ್ಲಿರುವ ಧರ್ಮ ಗಳಿಗೂ ಪರಮಾತ್ಮನಿಗೂ ಭೇದವನ್ನು ನಿಷೇಧ ಮಾಡುತ್ತಿಲ್ಲ. ಹೊರತಾಗಿ ಇರುವ ಭೇದವನ್ನು ತಿಳಿಯಬಾರದೆಂದಷ್ಟೇ ಹೇಳುತ್ತಿದೆ. ಹೇಗೆಂದರೆ 'ನೇಕ್ಷೇತೋದ್ಯಂತಮಾದಿತ್ಯಮ್' ಎಂಬ ಶ್ರುತಿಯು ಸೂರ್ಯೋ-ದಯವನ್ನು ನೋಡಬಾರದೆಂದು ಹೇಳುತ್ತಿದೆ. ಇದರಿಂದ ಸೂರ್ಯೋದಯವೇ ಇಲ್ಲವೆಂದರ್ಥವಲ್ಲ, ಇರುವಂತಹ ಸೂರ್ಯೋದಯವನ್ನು ನೋಡಬಾರದೆಂದು ಅಭಿಪ್ರಾಯ. ಹೀಗೆ ಪಂಡಿತಂಮನ್ಯಮಾನನಾದ ತಾರ್ಕಿಕನು ತನ್ನನ್ನು ಸಮರ್ಥಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ.

**ಭಾವವಿಲಾಸಿನೀ–** ಸೂರ್ಯೋದಯಾದಿದರ್ಶನನಿಂದಾಯಾಮಪಿ ಸೂರ್ಯೋದಯಾದೇ-ರಿವ ಧರ್ಮಪೃಥಕ್ತ್ವದರ್ಶನನಿಂದಾಯಾಮಪಿ ಧರ್ಮಪೃಥಕ್ತ್ವಸ್ಯ ನಾಭಾವ ಇತಿ ತಾರ್ಕಿಕಶಂಕಾಮನೂದ್ಯ ದೂಷಯತಿ – **ನೇಕ್ಷೇತೇತಿ** ॥ ೬೦೬ ॥

**ವಿವರಣೆ–** 'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ' ಎಂಬ ಉಪನಿಷತ್ತಿನ ವಾಕ್ಯವು ಪರಮಾತ್ಮನಲ್ಲಿ ಗುಣಕ್ರಿಯಾದಿಗಳಿಗೆ ಭೇದವನ್ನು ನಿಷೇಧ ಮಾಡುತ್ತಿಲ್ಲ, ಹೊರತು, ಇರುವಂತಹ ಭೇದವನ್ನು ತಿಳಿಯಬಾರದೆಂದಷ್ಟೆ ಹೇಳುತ್ತಿದೆ ಎಂಬುದಾಗಿ ತಾರ್ಕಿಕನು ಉಪನಿಷತ್ತನ್ನು ವ್ಯಾಖ್ಯಾನ ಮಾಡಲು ಪ್ರಯತ್ನಿಸುತ್ತಿದ್ದಾನೆ. ಹೀಗೆ ವ್ಯಾಖ್ಯಾನ ಮಾಡಿದಾಗ ಪರಮಾತ್ಮನಿಗೂ ಅವನ ಧರ್ಮಗಳಿಗೂ ಭೇದವೇ ಇರುತ್ತದೆ. ಭೇದವಿಲ್ಲವೆನ್ನಲು ಈ ಶ್ರುತಿಯು ಆಧಾರವಾಗುವುದಿಲ್ಲ, ಆದರೆ, ಇರುವಂತಹ ಭೇದವನ್ನು ತಿಳಿಯಬಾರದೆಂದು ಈ ಶ್ರುತಿಯು ಸಮರ್ಥಿಸುತ್ತಿದೆ. ಇದಕ್ಕೆ ತಾರ್ಕಿಕನೇ ಉದಾಹರಣೆ ಕೊಡುತ್ತಾನೆ – 'ನೇಕ್ಷೇತೋದ್ಯಂತಮಾದಿತ್ಯಂ ನಚ ನಗ್ನಾಂ ಪರಸ್ತ್ರಿಯಮ್ ।'

ಉದಯಿಸುವಂತಹ ಸೂರ್ಯನನ್ನು ನೋಡಬಾರದು. ಬಟ್ಟೆಯಿಲ್ಲದ ಪರಸ್ತ್ರೀಯನ್ನು ನೋಡಬಾರದು ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಈ ಶ್ರುತಿಯು ಸೂರ್ಯೋದಯದ ದರ್ಶನವನ್ನು ಅಥವಾ ನಗ್ನಳಾದ ಪರಸ್ತ್ರೀಯ ನೋಡುವಿಕೆಯನ್ನು ನಿಷೇಧ ಮಾಡುತ್ತಿದೆ ಹೊರತು, ಸೂರ್ಯೋದಯವೇ ಆಗುವುದಿಲ್ಲವೆಂದಾಗಲೀ ನಗ್ನಳಾದ ಪರಸ್ತ್ರೀಯೇ ಇಲ್ಲವೆಂದಾಗಲೀ ನಿಷೇಧ ಮಾಡುತ್ತಿಲ್ಲ. ಆದರಂತೆ ಪ್ರಕೃತ,

'ಏವಂ ಧರ್ಮಾನ್ ಪೃಥಕ್ ಪಶ್ಯನ್' ಇತ್ಯಾದಿ ಶ್ರುತಿಯೂ ಸಹ ಭೇದವೇ ಇಲ್ಲವೆಂದು ನಿಷೇಧ ಮಾಡುತ್ತಿಲ್ಲ. ಇರುವಂತಹ ಭೇದವನ್ನು ತಿಳಿಯಬಾರದೆಂದು ನಿಷೇಧ ಮಾಡುತ್ತಿದೆ. ಹೀಗೆ ತಾರ್ಕಿಕರು ಶ್ರುತಿಗೆ ವ್ಯಾಖ್ಯಾನ ಮಾಡುತ್ತಾರೆ.

**ತಸ್ಯಾಪಿ ಸೂತೇ ಯುಕ್ತಿಸ್ತ್ರೀ ಸದುತ್ತರಕುಮಾರಕಮ್ ।**
**ಯಃ ಪರೇಷಾಂ ಕಂಠಮಣಿಂ ಜಿಘೃಕ್ಷತಿ ರಣಾಂಕಣೇ ॥ ೬೦೭ ॥**

**ಅರ್ಥ–** ತಸ್ಯ= ಇಂತಹ ಪಂಡಿತಂಮನ್ಯಮಾನನಾದ ತಾರ್ಕಿಕನ, ಯುಕ್ತಿಸ್ತ್ರೀ ಅಪಿ= ಯುಕ್ತಿಯೆಂಬ ಸ್ತ್ರೀಯೂ ಕೂಡ, ಯಃ = ಯಾವಾತನು, ರಣಾಂಕಣೇ = ರಣರಂಗದಲ್ಲಿ, ಪರೇಷಾಂ = ಶತ್ರುಗಳ, ಕಂಠಮಣಿಂ = ಕೊರಳಿನಲ್ಲಿರುವ ಆಭರಣವನ್ನು, ಜಿಘೃಕ್ಷತಿ = ಅಪಹರಿಸಲು ಇಚ್ಛಿಸುತ್ತಾನೋ, ತಂ= ಅಂತಹ, ಸದುತ್ತರಕುಮಾರಕಂ = ಸಮರ್ಥವಾದ ಉತ್ತರ ಎಂಬ ಮಗನನ್ನು, ಸೂತೇ = ಪ್ರಸವಿಸುತ್ತಾಳೆ.

**ಅನುವಾದ– ಹೀಗೆ ಶ್ರುತಿಯನ್ನು ವ್ಯಾಖ್ಯಾನ ಮಾಡುವ ತಾರ್ಕಿಕನಿಗೆ ಸರಿಯಾದ ಉತ್ತರವನ್ನು ಯುಕ್ತಿಯೇ ನೀಡುತ್ತದೆ. ಯಾವ ರೀತಿಯಾಗಿ ಗೋಗ್ರಹಣ ಕಾಲದಲ್ಲಿ ಉತ್ತರಕುಮಾರನು ಶತ್ರುಗಳಾದ ಕೌರವರ ಕಂಠದಲ್ಲಿರುವ ರತ್ನಗಳನ್ನು ಅಪಹರಿಸಿದನೋ, ಅದರಂತೆ ತಾರ್ಕಿಕನ ಯುಕ್ತಿ ಎಂಬ ಸ್ತ್ರೀಯಿಂದ ಹುಟ್ಟಿದ ಸಮರ್ಥನಾದ ಉತ್ತರ ಎಂಬ ಕುಮಾರನು ತಾರ್ಕಿಕನೆಂಬ ಶತ್ರುವಿನ ಕಂಠದಲ್ಲಿರುವ ವಾಗ್ವಿಲಾಸವೆಂಬ ಮಣಿಯನ್ನು ಅಪಹರಿಸುತ್ತಾನೆ.**

**ಭಾವವಿಲಾಸಿನೀ–** ಸದುತ್ತರಕುಮಾರಕಂ ಸಮೀಚೀನೋತ್ತರಾಖ್ಯಕುಮಾರಕಮ್ । ಸಮರ್ಥೋತ್ತರಕುಮಾರಮಿತಿ ಧ್ವನಿಃ । ಪರೇಷಾಂ ಪ್ರತಿವಾದಿನಾಮ್ । ಕೌರವಾಣಾಮಿತಿ ಧ್ವನಿಃ । ಕಂಠಮಣಿಂ ಕಂಠಾಲಂಕಾರಭೂತವಾಗ್ವಿಲಾಸಮ್। ಕಂಠಮಾಲಾಮಿತಿ ಧ್ವನಿಃ । ರಣಾಂಕಣೇ ವಾದಯುದ್ಧೇ । ಉತ್ತರಗೋಗ್ರಹಣಯುದ್ಧ ಇತಿ ಧ್ವನಿಃ ॥ ೬೦೭ ॥

**ವಿವರಣೆ–** 'ಏವಂ ಧರ್ಮಾನ್' ಇತ್ಯಾದಿ ಶ್ರುತಿಗೆ ಭೇದನಿಷೇಧದಲ್ಲಿ ತಾತ್ಪರ್ಯವಿಲ್ಲ. ಭೇದದರ್ಶನನಿಷೇಧದಲ್ಲಷ್ಟೇ ತಾತ್ಪರ್ಯವೆಂದು ವ್ಯಾಖ್ಯಾನ ಮಾಡುವ ತಾರ್ಕಿಕನಿಗೆ ಯುಕ್ತಿಯೇ ಸರಿಯಾಗಿ ಉತ್ತರ ನೀಡುತ್ತದೆಂಬುದನ್ನು ಬಹಳ ಚಮತ್ಕಾರಪೂರ್ಣವಾಗಿ ವರ್ಣಿಸುತ್ತಿದ್ದಾರೆ –

ಉತ್ತರಗೋಗ್ರಹಣ ಕಾಲದಲ್ಲಿ ಬೃಹನ್ನಳೆ ವೇಷದಲ್ಲಿರುವ ಅರ್ಜುನನ ಜೊತೆಗೆ ಉತ್ತರ ಕುಮಾರನು ಸಾರಥಿಯಾಗಿ ಹೋಗಿದ್ದನು. ಅರ್ಜುನನು ಎಲ್ಲರನ್ನು ಮೋಹನಾಸ್ತ್ರದಿಂದ ಬಂಧನ ಮಾಡಿದ ಮೇಲೆ, ತನ್ನ ತಂಗಿಯಾದ ಉತ್ತರೆಗಾಗಿ ದ್ರೋಣಾಚಾರ್ಯ ಹಾಗೂ ಭೀಷ್ಮಾಚಾರ್ಯರನ್ನು ಬಿಟ್ಟು ಉಳಿದ ಎಲ್ಲ ದುಷ್ಟರಾದ

ಕೌರವರ ಕಂಠದಲ್ಲಿರುವ ರತ್ನ ಮಣಿಗಳನ್ನು ತೆಗೆದುಕೊಂಡು ಉತ್ತರ ಕುಮಾರನು ಬರುತ್ತಾನೆ.

ಈ ದೃಷ್ಟಾಂತದಂತೆ ಯುಕ್ತಿಯೆಂಬ ವನಿತೆಯಿಂದ ಉತ್ತರ ಎಂಬ ಮಗನು ಹುಟ್ಟಿದ್ದಾನೆ (ಅಂದರೆ ಯುಕ್ತಿಯೇ ಉತ್ತರವನ್ನು ನೀಡುತ್ತದೆ ಎಂದರ್ಥ). ಬೃಹನ್ನಳೆಯ ಜೊತೆಗಿದ್ದ ಉತ್ತರ ಕುಮಾರನು ಹೇಡಿಯಾಗಿದ್ದನು. ಆದರೆ ಪ್ರಕೃತ ಯುಕ್ತಿಸ್ತ್ರೀಯಿಂದ ಹುಟ್ಟಿರುವ ಉತ್ತರ ಎಂಬ ಈ ಸುಪುತ್ರನು ಅತ್ಯಂತ ಬಲಿಷ್ಠನಾಗಿದ್ದಾನೆ. ಪ್ರತಿವಾದಿಗಳನ್ನು ಸದೆಬಡೆದು ಕಂಠದಲ್ಲಿರುವ ವಾಗ್ವಿಲಾಸವೆಂಬ ಅಲಂಕಾರವನ್ನು ಕದಿಯುತ್ತಾನೆ ಎಂದರ್ಥ.

**ಸೂರ್ಯೋದಯೋಽಪಿ ದಿವಿಜೈಃ ದಿತಿಜೈಃ ಸ್ವೇನ ಚೇಕ್ಷ್ಯತೇ ।**
**ದೋಷಾದಭೀರುಭಿರ್ದೋಷಮಜಾನದ್ಭಿರ್ನರೈರಪಿ ॥ ೬೦೮ ॥**

**ಅರ್ಥ–** ಸೂರ್ಯೋದಯಃ ಅಪಿ = ಶ್ರುತಿನಿಷಿದ್ಧವಾದ ಸೂರ್ಯೋದಯವೂ ಕೂಡ, ದಿವಿಜೈಃ = ದೇವತೆಗಳಿಂದ, ದಿತಿಜೈಃ = ದೈತ್ಯರಿಂದ, ಸ್ವೇನ ಚ = ಸ್ವತಃ ಸೂರ್ಯನಿಂದಲೂ, ಈಕ್ಷ್ಯತೇ = ನೋಡಲ್ಪಡುತ್ತದೆ. ದೋಷಾತ್ = ಶ್ರುತಿನಿಷೇಧವೆಂಬ ದೋಷದಿಂದ, ಅಭೀರುಭಿಃ = ಅಂಜಿಕೆ ಪಡದ ನಾಸ್ತಿಕರಿಂದ, ಅಪಿ = ಮತ್ತು, ದೋಷಂ = ದೋಷವನ್ನು ಅಜಾನದ್ಭಿಃ = ತಿಳಿಯದ ಅಜ್ಞಾನಿಗಳಾದ, ನರೈಃ ಚ= ಮನುಷ್ಯರಿಂದಲೂ, ಈಕ್ಷ್ಯತೇ = ನೋಡಲ್ಪಡುತ್ತದೆ.

**ಅನುವಾದ–** ಸೂರ್ಯೋದಯವು ದೇವತೆಗಳಿಂದ, ದೈತ್ಯರಿಂದ ಸ್ವತಃ ಸೂರ್ಯನಿಂದ ನೋಡಲ್ಪಡುತ್ತದೆ ಮತ್ತು ಯಾರು ನಿಷೇಧಕ್ಕೆ ಹೆದರದ ನಾಸ್ತಿಕರಿದ್ದಾರೋ ಅವರಿಂದ ಮತ್ತು ನಿಷೇಧವನ್ನು ತಿಳಿಯದ ಅಜ್ಞಾನಿಜನರಿಂದಲೂ ನೋಡಲ್ಪಡುತ್ತದೆ.

**ಭಾವವಿಲಾಸಿನೀ–** ಯಸ್ಯ ದರ್ಶನಂ ಶ್ರುತ್ಯಾ ನಿಂದ್ಯತೇ, ತಸ್ಯಾಸತ್ತ್ವಮಿತ್ಯುತ್ಸರ್ಗಃ । ಸ ಚಾರ್ಥಸ್ಯ ಪ್ರಮಿತತ್ವೇ ಸತಿ ಅನನ್ಯಗತ್ಯಾ ಅಪೋದ್ಯತೇ, ನಾಪರಥಾ । ಸವಿತೃಸುಷಿರಂ ನೇಕ್ಷ್ಯೇತೇತ್ಯಾದಾವಪವಾದಾದರ್ಶನಾದಿತ್ಯಾಹ– **ಸೂರ್ಯೋದಯೋಽಪೀತಿ ॥** ಪ್ರಕೃತೇ ಚ 'ನೇಕ್ಷೇತೋದ್ಯಂತಮ್' ಇತ್ಯಾದಾವಪವಾದಕಸದ್ಭಾವಾತ್ ಕಥಮಸೌ ನಾಪೋದ್ಯ ಇತ್ಯಾಹ – **ಸೂರ್ಯೋದಯೋಽಪೀತ್ಯಾರಭ್ಯ ಚಕ್ಷುಷಾ ಚೇಕ್ಷ್ಯತೇ ಕಿಲೇತ್ಯಂತೇನ ॥ ೬೦೮ ॥**

**ವಿವರಣೆ–** ಯುಕ್ತಿಸ್ತ್ರೀಯಿಂದ ಹುಟ್ಟಿದ ಉತ್ತರ ಎಂಬ ಮಗನು ಮಾಡುವ ಕಾರ್ಯವನ್ನು ವಿವರಿಸುತ್ತಿದ್ದಾರೆ. ಯಾವುದರ ದರ್ಶನವನ್ನು ಶ್ರುತಿಯು ನಿಂದನೆ ಮಾಡುತ್ತಿದೆಯೋ, ಅಂತಹ ವಸ್ತುವು ಅಸತ್ಯವಾಗಿರುತ್ತದೆಂಬುದು ಸಾಮಾನ್ಯ ನಿಯಮ. ಪ್ರಕೃತ ಸೂರ್ಯೋದಯವನ್ನು ನೋಡಬಾರದೆಂದು ವೇದವಾಕ್ಯವು ನಿಷೇಧ

ಮಾಡುತ್ತಿದೆ. ಆದರೆ ಸೂರ್ಯೋದಯವನ್ನು ದೇವತೆಗಳು, ದೈತ್ಯರೂ, ಸ್ವತಃ ಸೂರ್ಯನೂ ಕೂಡ ನೋಡುತ್ತಾರೆ. ಅಷ್ಟೇ ಅಲ್ಲದೆ ಸೂರ್ಯೋದಯವನ್ನು ನೋಡುವುದರಿಂದ ಪಾಪ ಬರುತ್ತದೆಂಬ ಹೆದರಿಕೆಯಿಲ್ಲದ ನಾಸ್ತಿಕನೂ ಕೂಡ ನೋಡುತ್ತಾನೆ. ನಿಷೇಧ ವಾಕ್ಯವನ್ನು ತಿಳಿಯದ ಅಜ್ಞಾನಿಜನರೂ ಕೂಡ ನೋಡುತ್ತಾರೆ. ಈ ಸೂರ್ಯೋದಯವು ಹೀಗೆ ಇರುತ್ತದೆನ್ನಲು ಹಲವು ಪ್ರಮಾಣಗಳು ಆಧಾರವಾಗಿವೆ. ಆದ್ದರಿಂದ, ಇರುವಂತಹ ಸೂರ್ಯೋದಯವನ್ನು ನೋಡಬಾರದೆಂದಷ್ಟೇ ಶ್ರುತಿಯ ಅಭಿಪ್ರಾಯ. ದರ್ಶನವನ್ನಷ್ಟೇ ಶ್ರುತಿಯು ನಿಷೇಧ ಮಾಡುತ್ತಿದೆ ಎಂದು ಹೇಳಬೇಕು. ಆದರೆ ಪರಮಾತ್ಮನಲ್ಲಿರುವ ಧರ್ಮಗಳು ಬೇರೆಯಾಗಿರುತ್ತವೆನ್ನಲು ಯಾವುದೇ ಪ್ರಮಾಣಗಳಿರುವುದಿಲ್ಲ.

**ನ(ಗ್ನಾ)ಗ್ನಸ್ತ್ರೀ ಚ ಸ್ವನಯನೈಃ ಸ್ವಸಖೀನಯನೈರಪಿ ।**
**ರಂತೃಣಾಂ ರಾಗಕಲುಷಚಕ್ಷುಷಾ ಚೇಕ್ಷ್ಯತೇ ಕಿಲ ॥ ೬೦೯ ॥**

**ಅರ್ಥ–** ಚ = ಮತ್ತು, ನಗ್ನಸ್ತ್ರೀ = ಬೆತ್ತಲೆ ಹೆಂಗಸು, ಸ್ವನಯನೈಃ = ತನ್ನ ಕಣ್ಣುಗಳಿಂದ, ಅಪಿ = ಮತ್ತು, ಸ್ವಸಖೀನಯನೈಃ = ತನ್ನ ಸಖಿಯರ ಕಣ್ಣುಗಳಿಂದ, ರಂತೃಣಾಂ = ಆಕೆಯನ್ನು ಕಾಮಿಸುವ ಜನಗಳ, ರಾಗಕಲುಷಚಕ್ಷುಷಾ = ಕಾಮದಿಂದ ಕಲುಷಿತವಾದ ಕಣ್ಣುಗಳಿಂದಲೂ, ಈಕ್ಷ್ಯತೇ ಕಿಲ = ನೋಡಲ್ಪಡುತ್ತಾಳಷ್ಟೇ.

**ಅನುವಾದ– ಇದರಂತೆ ಬೆತ್ತಲೆಯಾದ ಸ್ತ್ರೀಯೂ ಸಹ ತನ್ನ ಬೆತ್ತಲೆ ದೇಹವನ್ನು ನೋಡಿಕೊಳ್ಳುತ್ತಾಳೆ. ಸಖಿ ಜನರಿಗೂ ಕಾಣಿಸಿಕೊಳ್ಳುತ್ತಾಳೆ. ಅಲ್ಲದೆ, ಇವಳನ್ನು ಕಾಮಿಸುವ ಕಾಮುಕ ಜನರ ರಾಗಕಲುಷಿತವಾದ ಕಣ್ಣುಗಳಿಗೆ ಕೂಡ ಕಾಣಿಸಿಕೊಳ್ಳುತ್ತಾಳೆ.**

**ವಿವರಣೆ–** ಸೂರ್ಯೋದಯವೇ ಇರುವುದಿಲ್ಲವೆಂದು ವ್ಯಾಖ್ಯಾನ ಮಾಡಲಾಗದೆಂದು ಹಿಂದಿನ ಶ್ಲೋಕದಲ್ಲಿ ಸಮರ್ಥನೆ ಮಾಡಿದರು. ಪ್ರಕೃತ ಬೆತ್ತಲೆ ಸ್ತ್ರೀಯೇ ಇರುವುದಿಲ್ಲವೆಂದು 'ನಚ ನಗ್ನಾಂ ಪರಸ್ತ್ರಿಯಂ' ಎಂಬ ವಾಕ್ಯಕ್ಕೆ ವ್ಯಾಖ್ಯಾನ ಮಾಡಲಾಗುವುದಿಲ್ಲ ಎಂದು ಹೇಳುತ್ತಿದ್ದಾರೆ. 'ನಚ ನಗ್ನಾಂ ಪರಸ್ತ್ರಿಯಂ' ಎಂಬ ವಾಕ್ಯಕ್ಕೆ ದರ್ಶನ ನಿಷೇಧದಲ್ಲಷ್ಟೇ ತಾತ್ಪರ್ಯ ಹೊರತು ನಗ್ನ ಸ್ತ್ರೀಯೇ ಇರುವುದಿಲ್ಲವೆಂಬುದರಲ್ಲಿ ತಾತ್ಪರ್ಯವಿಲ್ಲ. ಏಕೆಂದರೆ, ನಗ್ನಸ್ತ್ರೀ ಇದ್ದಾಳೆನ್ನಲು ಪ್ರಮಾಣವಿದೆ. ನಗ್ನಸ್ತ್ರೀಯಾದವಳು ತನ್ನನ್ನು ನೋಡಿಕೊಳ್ಳುತ್ತಾಳೆ. ಅಥವಾ ತನ್ನ ಸಖೀ ಜನರಿಂದ ನೋಡಿಸಿಕೊಳ್ಳುತ್ತಾಳೆ. ಪ್ರೇಮಿಗಳು ನಗ್ನಸ್ತ್ರೀಯನ್ನು ಕಾಮಪೂರ್ಣ ದೃಷ್ಟಿಯಿಂದ ನೋಡಿಯೇ ನೋಡುತ್ತಾರೆ. ಇವರೆಲ್ಲರ ಅನುಭವದಿಂದ ನಗ್ನಸ್ತ್ರೀ ಇದ್ದಾಳೆಂದು ಪ್ರಮಾಣಸಿದ್ಧವಾಗಿದೆ. ಆದ್ದರಿಂದ 'ನಚ ನಗ್ನಾಂ ಪರಸ್ತ್ರಿಯಮ್' ಎಂಬ ವಾಕ್ಯಕ್ಕೆ ನಗ್ನಸ್ತ್ರೀದರ್ಶನವನ್ನಷ್ಟೇ ನಿಷೇಧ ಮಾಡಲಾಗಿದೆ ಎಂದು ಹೇಳಬೇಕು. ಆದರೆ ಪ್ರಕೃತ ಪರಮಾತ್ಮನಲ್ಲಿರುವ ಗುಣಗಳು ಭಿನ್ನವಾಗಿವೆ ಎನ್ನಲು ಯಾವುದೇ ಆಧಾರಗಳಿರುವುದಿಲ್ಲ. ಆದ್ದರಿಂದ ಭೇದದರ್ಶನವನ್ನು

ನಿಂದಿಸಿದರೆ ಭೇದವೂ ಇಲ್ಲವೆಂದೇ ಸಿದ್ಧವಾಗುತ್ತದೆ.

**ಶ್ರುತಿಶ್ಚ ಚಕ್ಷುಷೈವೈಷಾಂ ವೀಕ್ಷಣಂ ನಾನುಮನ್ಯತೇ ।**
**ಈಕ್ಷಾ ಹಿ ಚಾಕ್ಷುಷಜ್ಞಾನಮನುಮಾನಾಗಮಾದಿಭಿಃ ॥**
**ಅನ್ವಮಂಸ್ತ ಚ ತಜ್‌ಜ್ಞಾನಮತಸ್ತದ್ಬಾಧನಂ ಕುತಃ ॥ ೬೧೦ ॥**

**ಅರ್ಥ–** ಶ್ರುತಿಃ ಚ = ಶ್ರುತಿಯಾದರೂ, ಏಷಾಂ = ಸೂರ್ಯೋದಯ ಮೊದಲಾದವುಗಳ, ಚಕ್ಷುಷಾ ಏವ= ಕಣ್ಣಿನಿಂದಷ್ಟೇ, ವೀಕ್ಷಣಂ = ನೋಡುವಿಕೆಯನ್ನು ನ ಅನುಮನ್ಯತೇ = ಸಮ್ಮತಿಸುವುದಿಲ್ಲ. ಈಕ್ಷಾ= ಈಕ್ಷಾ ಎಂಬುದು (ಎಂದರೆ) ಚಾಕ್ಷುಷಜ್ಞಾನಂ ಹಿ= ಚಕ್ಷುರಿಂದ್ರಿಯ ಜ್ಞಾನವಷ್ಟೆ? ಅನುಮಾನಾಗಮಾದಿಭಿಃ = ಅನುಮಾನ, ಆಗಮ ಮೊದಲಾದ ಬೇರೆ ಪ್ರಮಾಣಗಳಿಂದ, ತಜ್‌ಜ್ಞಾನಂ = ಸೂರ್ಯೋದಯ ಮೊದಲಾದವುಗಳ ಜ್ಞಾನವನ್ನು ಶ್ರುತಿಃ= ವೇದವು, ಅನ್ವಮಂಸ್ತ ಚ = ಅನುಮೋದಿಸುತ್ತದಷ್ಟೇ. ಅತಃ = ಆದ್ದರಿಂದ, ತದ್ಬಾಧನಂ = ಸೂರ್ಯೋದಯಾದಿಗಳೇ ಇಲ್ಲವೆಂದು ಹೇಳಲು, ಕುತಃ = ಹೇಗೆ ಸಾಧ್ಯ?

**ಅನುವಾದ– 'ನೇಕ್ಷೇತೋದ್ಯಂತಮಾದಿತ್ಯಂ ನಚ ನಗ್ನಾಂ ಪರಸ್ತ್ರಿಯಮ್' ಎಂಬ ಶ್ರುತಿಯು ಚಕ್ಷುರಿಂದ್ರಿಯಜ್ಞಾನವನ್ನಷ್ಟೇ ನಿಷೇಧ ಮಾಡುತ್ತಿದೆ. ಹೊರತು, ಜ್ಞಾನಸಾಮಾನ್ಯವನ್ನು ನಿಷೇಧ ಮಾಡುತ್ತಿಲ್ಲ. ಜ್ಞಾನಸಾಮಾನ್ಯವನ್ನು ನಿಷೇಧ ಮಾಡಿದ್ದಲ್ಲಿ, ಸೂರ್ಯೋದಯಾದಿಗಳೇ ಇಲ್ಲವೆಂದು ಅರ್ಥೈಸಬಹುದಿತ್ತು. ಚಕ್ಷುರಿಂದ್ರಿಯಜ್ಞಾನವನ್ನಷ್ಟೇ ನಿಷೇಧ ಮಾಡಿದ್ದರಿಂದ ಅನುಮಾನ, ಆಗಮ ಮೊದಲಾದವುಗಳಿಂದ ಅವುಗಳ ಜ್ಞಾನವನ್ನು ಪಡೆಯಬಹುದೆಂದು ಶ್ರುತಿಯು ಅನುಮೋದಿಸುತ್ತಿದೆ. ಹೀಗಿರುವಾಗ ಸೂರ್ಯೋದಯಾದಿಗಳೇ ಇಲ್ಲವೆಂದು ಹೇಳಲು ಹೇಗೆ ಸಾಧ್ಯ?**

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ 'ನೇಕ್ಷೇತ' ಇತ್ಯಾದಿಶ್ರೌತದರ್ಶನನಿಷೇಧಸ್ಯಾರ್ಥಾ-ಬಾಧಕತಾಮುಪಪಾದಯತಿ – **ಶ್ರುತಿಶ್ಚೇತಿ** ॥ ತಜ್‌ಜ್ಞಾನಂ ಸೂರ್ಯೋದಯಾದಿಜ್ಞಾನಮ್ ॥ ೬೧೦ ॥

**ವಿವರಣೆ–** ಮತ್ತೊಂದು ಪ್ರಕಾರದಿಂದ 'ನೇಕ್ಷೇತೋದ್ಯಂತಮಾದಿತ್ಯಂ' ಇತ್ಯಾದಿ ಶ್ರುತಿಗೆ ವ್ಯಾಖ್ಯಾನ ಮಾಡುತ್ತಿದ್ದಾರೆ -

'ನೇಕ್ಷೇತೋದ್ಯಂತಮಾದಿತ್ಯಂ' ಎಂಬ ಶ್ರುತಿಯಲ್ಲಿರುವ 'ಈಕ್ಷಾ' ಎಂಬ ಧಾತುವು ಚಕ್ಷುರಿಂದ್ರಿಯಜನ್ಯಜ್ಞಾನವನ್ನು ಹೇಳುತ್ತಿದೆ. ಸೂರ್ಯೋದಯ, ನಗ್ನಸ್ತ್ರೀ ಮೊದಲಾದವುಗಳನ್ನು ಚಕ್ಷುರಿಂದ್ರಿಯದಿಂದ ನೋಡಬಾರದು ಎಂದಷ್ಟೇ ಅಭಿಪ್ರಾಯ.

ಹೊರತು, ಸೂರ್ಯೋದಯಾದಿಗಳ ತಿಳುವಳಿಕೆಯನ್ನೇ ಹೊಂದಬಾರದೆಂದು ಅಭಿಪ್ರಾಯವಲ್ಲ. ಒಂದು ವೇಳೆ ಸೂರ್ಯೋದಯಾದಿಗಳ ತಿಳುವಳಿಕೆಯನ್ನು (ಜ್ಞಾನಸಾಮಾನ್ಯವನ್ನು) ನಿಷೇಧ ಮಾಡಿದ್ದರೆ, ಅರ್ಥದ ಅಸತ್ತ್ವವನ್ನು ಹೇಳಬಹುದಾಗಿತ್ತು. ಜ್ಞಾನವಿಶೇಷನಿಷೇಧದಿಂದ ಅರ್ಥದ ಅಸತ್ತ್ವವನ್ನು ಸಮರ್ಥಿಸಲು ಸಾಧ್ಯವಿಲ್ಲ. ಯಾವಾಗ ಚಕ್ಷುರಿಂದ್ರಿಯಜನ್ಯಜ್ಞಾನವನ್ನಷ್ಟೇ ನಿಷೇಧ ಮಾಡುತ್ತಿದೆಯೋ, ಅನುಮಾನ, ಆಗಮ ಮೊದಲಾದವುಗಳಿಂದ ಜ್ಞಾನವನ್ನು ಪಡೆಯಬಹುದೆಂದು ಹೇಳಿದಂತಾಗುತ್ತದೆ. ಆದ್ದರಿಂದ, ಶ್ರುತಿಯು ಚಕ್ಷುರಿಂದ್ರಿಯಜನ್ಯಜ್ಞಾನವನ್ನು ನಿಷೇಧ ಮಾಡಿ, ಅನುಮಾನ-ಆಗಮಾದಿಗಳಿಂದ ಬರುವ ಜ್ಞಾನವನ್ನು ಅನುಮೋದಿಸುತ್ತಿದೆ. ಆದ್ದರಿಂದ 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಎಂಬ ಶ್ರುತಿಯು ಪರಮಾತ್ಮನಲ್ಲಿರುವ ಧರ್ಮಗಳಿಗೆ ಭೇದಸಾಧಕವಾಗಿದೆ ಎನ್ನಲು 'ನೇಕ್ಷೇತೋದ್ಯಂತಮ್' ಇತ್ಯಾದಿ ಪ್ರಮಾಣವು ಉದಾಹರಣೆಯಾಗುವುದಿಲ್ಲ.

**ದರ್ಶನಾಯೋಗ್ಯಧರ್ಮೇಷು ಪೃಥಕ್ತ್ವಸ್ಯ ಚ ದರ್ಶನಮ್ ।**
**ಜ್ಞಾನರೂಪಂ ಪ್ರಸಕ್ತಂ ಸ್ಯಾತ್ ಪಶ್ಯಾರ್ಥಂ ತದ್ ವದಂತಿ ಹಿ ॥ ೬೧೧ ॥**

**ಅರ್ಥ–** ದರ್ಶನಾಯೋಗ್ಯಧರ್ಮೇಷು = ಅತೀಂದ್ರಿಯವಾದ ಭಗವದ್ಧರ್ಮಗಳಲ್ಲಿ, ಪೃಥಕ್ತ್ವಸ್ಯ = ಭೇದದ, ದರ್ಶನಂ = ದರ್ಶನವು, ಜ್ಞಾನರೂಪಂ = ಜ್ಞಾನರೂಪವೇ, ಪ್ರಸಕ್ತಂ ಸ್ಯಾತ್ = ಪ್ರಸಕ್ತವಾಗಿರುತ್ತದೆ. ಪಶ್ಯಾರ್ಥಂ = 'ಪಶ್ಯ' ಎಂಬ ಧಾತುವಿನ ಅರ್ಥವು, ತತ್ = ಅದೇ ಆಗಿರುತ್ತದೆಂದು, ವದಂತಿ ಹಿ = ವೈಯಾಕರಣರು ಹೇಳುತ್ತಾರಷ್ಟೆ.

**ಅನುವಾದ–** 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಎಂಬ ಶ್ರುತಿಯಲ್ಲಿರುವ 'ಪಶ್ಯ' ಎಂಬ ಧಾತುವು ಜ್ಞಾನಸಾಮಾನ್ಯ ಎಂಬ ಅರ್ಥದಲ್ಲಿ ಇರುತ್ತದೆಂದು ವೈಯ್ಯಾಕರಣರು ಹೇಳಿರುತ್ತಾರೆ. ಅತೀಂದ್ರಿಯಗಳಾದ ಭಗವದ್ಧರ್ಮಗಳಲ್ಲಿ ಅಥವಾ ಧರ್ಮದ ಭೇದದ ವಿಷಯದಲ್ಲಿ ಪ್ರಸಕ್ತವಾದ ದರ್ಶನವೆಂದರೆ ಜ್ಞಾನರೂಪವಾದದ್ದೇ ಹೊರತು ಪ್ರತ್ಯಕ್ಷರೂಪವಾದದ್ದಲ್ಲ. ಜ್ಞಾನಸಾಮಾನ್ಯವನ್ನೇ ಶ್ರುತಿಯು ನಿಷೇಧ ಮಾಡುತ್ತಿರುವುದರಿಂದ ಧರ್ಮಗಳಿಗೂ ಭಗವಂತನಿಗೂ ಭೇದವಿಲ್ಲವೆಂದೇ ಶ್ರುತಿಗೆ ವ್ಯಾಖ್ಯಾನ ಮಾಡಬೇಕು.

**ಭಾವವಿಲಾಸಿನೀ–** ಉಕ್ತಪ್ರಕಾರದ್ವಯಮಪಿ 'ಏವಂ ಧರ್ಮಾನ್' ಇತಿ ಶ್ರುತೌ ನ ಘಟತ ಇತ್ಯಾಹ – **ದರ್ಶನಾಯೋಗ್ಯೇತಿ ॥** ದರ್ಶನಾಯೋಗ್ಯಧರ್ಮೇಷು ಅತೀಂದ್ರಿಯಭಗವದ್ಧರ್ಮೇಷು (ಯತ್ ಪೃಥಕ್ತ್ವಂ ಪರೇಣಾಶಂಕ್ಯತೇ, ತಸ್ಯ ಪೃಥಕ್ತ್ವಸ್ಯ ದರ್ಶನಂ ಜ್ಞಾನರೂಪಮೇವ ಪ್ರಸಕ್ತಂ ಸ್ಯಾತ್, ನತು ಚಾಕ್ಷುಷಮ್ । ಅತೀಂದ್ರಿಯಭಗವದ್ಧರ್ಮನಿಷ್ಠಪೃಥಕ್ತ್ವಸ್ಯಾಪ್ಯತೀಂದ್ರಿಯತ್ವೇನ ಚಾಕ್ಷುಷಜ್ಞಾನಪ್ರಸಕ್ತೇರೇವಾಭಾವೇನ ತನ್ನಿಷೇಧಸ್ಯಾಪ್ಯನವಸರದುಸ್ಥತ್ವಾತ್ ಪ್ರಸಕ್ತ-

ಜ್ಞಾನಮಾತ್ರಸ್ಯಾಯಂ ನಿಷೇಧ ಇತಿ ಭಾವಃ) (ಪ್ರಕ್ಷಿಪ್ತೋಽಯಂ ಗ್ರಂಥಃ) । ಅನೇನ ಸೂರ್ಯೋದಯಾದಾವಿವೋತ್ಸರ್ಗನ್ಯಾಯಾಪವಾದಕಂ ಕೈಶ್ಚಿತ್ ಪ್ರತ್ಯಕ್ಷೇಣ ದೃಶ್ಯಮಾನತ್ವಂ ಪ್ರಕೃತ ನಾಸ್ತೀತಿ ಸೂಚಿತಮ್ । ಏವಂ ಚ ಯಸ್ಯಾರ್ಥಸ್ಯ ಸತ್ತಾಯಾಂ ಪ್ರಬಲಂ ಪ್ರತ್ಯಕ್ಷಮಾಗಮೋ ವಾ ಸ್ಪಷ್ಟಮಸ್ತಿ, ತತ್ರ ತದ್ದರ್ಶನನಿಂದಾಯಾಂ ನಿಷೇಧಾದೇವ ಪಾಪಹೇತುತಾ । ಯಸ್ಯ ಚಾರ್ಥಸ್ಯ ಸತ್ತಾಯಾಂ ಪ್ರಬಲಂ ಪ್ರತ್ಯಕ್ಷಮಾಗಮೋ ವಾ ನಾಸ್ತಿ, ತಸ್ಯ ದರ್ಶನನಿಂದಾಯಾಂ ಮಿಥ್ಯಾ-ದೃಷ್ಟಿತ್ವಾದೇವ ಪಾಪಹೇತುತೇತಿ ವಿವೇಕಃ । ಧರ್ಮಭೇದೋಽಸ್ತೀತಿ ಸಾಕ್ಷಾದ್ ಭೇದಪ್ರತಿ-ಪಾದಕಶ್ರುತ್ಯಭಾವಾತ್ ನಿತ್ಯೇಶ್ವರಧರ್ಮೇಷು ಏಕಸತ್ತ್ವೇಽಪ್ಯಪರನಾಶಾಖ್ಯ- ಸಂಕೀರ್ಣಧರ್ಮ ಧರ್ಮ್ಯಾದಿಭೇದಕಭೇದಾಸಾಧಾರಣಲಿಂಗಾಭಾವಾಚ್ಚ । ಹೇತ್ವಂತರಂ ಚಾಹ – **ಪಶ್ಯೇತಿ** ॥ ಪಶ್ಯಾರ್ಥಂ ಪಶ್ಯತಿಧಾತೋರರ್ಥಂ ತಜ್ ಜ್ಞಾನಮಾತ್ರಮ್ । ಹೀತ್ಯನೇನ 'ಪಶ್ಯಾರ್ಥೈ-ಶ್ಚಾನಾಲೋಚನೇ' ಇತಿ ಸೂತ್ರಂ ಸೂಚಯತಿ ॥ ೬೧೧ ॥

**ವಿವರಣೆ–** 'ನೇಕ್ಷೇತೋದ್ಯಂತಮಾದಿತ್ಯಮ್' ಇತ್ಯಾದಿ ಶ್ರುತಿಯನ್ನು ಎರಡು ಬಗೆಯಲ್ಲಿ ಅರ್ಥೈಸಲಾಯಿತು. ಹಾಗೆಯೇ, 'ಏವಂ ಧರ್ಮಾನ್' ಇತ್ಯಾದಿ ಶ್ರುತಿಗೆ ವ್ಯಾಖ್ಯಾನ ಮಾಡಲಾಗದೆಂದು 'ದರ್ಶನಾಯೋಗ್ಯಧರ್ಮೇಷು 'ಇತ್ಯಾದಿ ಶ್ಲೋಕದಿಂದ ಹೇಳುತ್ತಿದ್ದಾರೆ.

ಚಕ್ಷುರಾದಿ ಇಂದ್ರಿಯಗಳಿಗೆ ಗೋಚರವಲ್ಲದ ಅತೀಂದ್ರಿಯವಾದ ಭಗವದ್‌ಧರ್ಮಗಳಲ್ಲಿ ಯಾವ ಭೇದದ ದರ್ಶನವು ಪ್ರಸಕ್ತವಾಗಿದೆಯೋ ಅದು ಜ್ಞಾನಸಾಮಾನ್ಯರೂಪವೇ ಆಗಿದೆ. ಹೊರತು, ಚಕ್ಷುರಿಂದ್ರಿಯಜನ್ಯಜ್ಞಾನರೂಪವಾಗಿಲ್ಲ. ಭಗವಂತನು ಅತೀಂದ್ರಿಯನಾದ್ದರಿಂದ ಅವನ ಧರ್ಮದಲ್ಲಿರುವ ಭೇದವೂ ಕೂಡ ಅತೀಂದ್ರಿಯವೇ ಆಗಿದೆ. ಹೀಗಿರುವಾಗ, ಚಾಕ್ಷುಷಜ್ಞಾನಕ್ಕೆ ಪ್ರಸಕ್ತಿಯೇ ಇರುವುದಿಲ್ಲ. ಅಪ್ರಸಕ್ತವಾದುದನ್ನು ನಿಷೇಧ ಮಾಡುವುದು ತಪ್ಪಾಗುತ್ತದೆ. ಆದ್ದರಿಂದ, ಪ್ರಸಕ್ತವಾದ ಜ್ಞಾನಸಾಮಾನ್ಯವನ್ನು ಶ್ರುತಿ ನಿಷೇಧ ಮಾಡುತ್ತಿದೆಯೆಂದು ಅಭಿಪ್ರಾಯ. ಹೀಗೆ ಹೇಳಿದ್ದರಿಂದ 'ನೇಕ್ಷೇತೋದ್ಯಂತಮಾದಿತ್ಯಮ್' ಎಂಬಂತೆ ಇಲ್ಲಿ ಉತ್ಸರ್ಗ ನ್ಯಾಯಕ್ಕೆ ಅಪವಾದಕವಾಗಿ ಪ್ರತ್ಯಕ್ಷದಿಂದ ನೋಡುವಿಕೆಯು ಪ್ರಕೃತವಾಗಿರುವುದಿಲ್ಲವೆಂದು ಸೂಚನೆ ಮಾಡಿದಂತಾಯಿತು.

ಆದ್ದರಿಂದ ಒಟ್ಟು ಇಷ್ಟು ಹೇಳಿದಂತಾಗುತ್ತದೆ. ಯಾವ ವಸ್ತುವಿನ ಇರುವಿಕೆಯ ವಿಷಯದಲ್ಲಿ ಪ್ರಬಲವಾದ ಪ್ರತ್ಯಕ್ಷ ಹಾಗೂ ಆಗಮ ಪ್ರಮಾಣಗಳಿರುತ್ತವೋ, ಅಲ್ಲಿ ಆ ವಸ್ತುವಿನ ದರ್ಶನವನ್ನು ನಿಷೇಧ ಮಾಡಿದಾಗ ನೋಡುವಿಕೆಯೇ ಪಾಪಹೇತುವಾಗಿದೆ ಎಂದು ತಿಳಿಯಬೇಕು. ಇನ್ನು, ಯಾವ ವಸ್ತುವಿನ ಇರುವಿಕೆಯ ವಿಷಯದಲ್ಲಿ ಪ್ರಬಲವಾದ ಪ್ರತ್ಯಕ್ಷ ಹಾಗೂ ಆಗಮ ಪ್ರಮಾಣಗಳು ಇರುವುದಿಲ್ಲವೋ, ಆ ವಸ್ತುವಿನ ಜ್ಞಾನವನ್ನು ನಿಷೇಧ ಮಾಡಿದರೆ, ಆ ವಸ್ತುವೇ ಇಲ್ಲ ಎಂದು ತಿಳಿಯಬೇಕು.

ಪರಮಾತ್ಮನಿಗೂ ಅವನ ಧರ್ಮಗಳಿಗೂ ಭೇದಸಾಧಕವಾದ ನೇರವಾದ ಶ್ರುತಿ ಇರುವುದಿಲ್ಲ. ಮತ್ತು ಈಶ್ವರ ಹಾಗೂ ಅವನ ಧರ್ಮಗಳಲ್ಲಿ ಒಂದಕ್ಕೆ ಮಾತ್ರ ನಾಶವಾಗಿ, ಮತ್ತೊಂದು ನಾಶವಾಗುವುದಿಲ್ಲವೆಂಬ ಭೇದಸಾಧಕವಾದ ಲಿಂಗವೂ ಕೂಡ ಇರುವುದಿಲ್ಲ. ಒಂದು ವೇಳೆ ಶ್ರುತಿ ಅಥವಾ ಲಿಂಗಗಳು ಭೇದವಿಷಯದಲ್ಲಿ ಇದ್ದಲ್ಲಿ 'ಪೃಥಕ್ ಪಶ್ಯನ್' ಎಂಬಲ್ಲಿರುವ 'ಪಶ್ಯ' ಧಾತುವಿಗೆ ಜ್ಞಾನವಿಶೇಷವನ್ನಷ್ಟೇ ಹೇಳಬಹುದಿತ್ತು. ಆದರೆ, ಅಂತಹ ಪ್ರಮಾಣಗಳು ಇಲ್ಲದ ಕಾರಣ ಜ್ಞಾನಸಾಮಾನ್ಯವನ್ನೇ ಹೇಳಬೇಕು. ಜ್ಞಾನಸಾಮಾನ್ಯವನ್ನು ನಿಷೇಧಿಸಿದರೆ ಅರ್ಥವು ಇಲ್ಲವೆಂದು ಸಿದ್ಧವಾಗುತ್ತದೆ.

ಪಶ್ಯಧಾತುವಿಗೆ ಜ್ಞಾನಸಾಮಾನ್ಯವನ್ನಷ್ಟೇ ಹೇಳಬೇಕೆಂದು 'ಪಶ್ಯಾರ್ಥಂ ತದ್ ವದಂತಿ' ಎಂಬುದರಿಂದ ಹೇಳುತ್ತಿದ್ದಾರೆ. ಪಶ್ಯಧಾತುವಿಗೆ ಜ್ಞಾನಸಾಮಾನ್ಯವೆಂದಷ್ಟೇ ಅರ್ಥ. ಏಕೆಂದರೆ 'ಪಶ್ಯಾರ್ಥೈಶ್ಚಾನಾಲೋಚನೇ' ಎಂಬ ಪಾಣಿನಿಯ ಸೂತ್ರವು 'ಅನಾಲೋಚನೇ' ಎಂಬ ಪದದಿಂದ 'ಅಚಾಕ್ಷುಷ ಜ್ಞಾನ' ಎಂಬ ಅರ್ಥದಲ್ಲಿ 'ಪಶ್ಯ' ಎಂಬ ಧಾತು ಇರುತ್ತದೆಂದು ಹೇಳುತ್ತಿದೆ. ಹೀಗೆ ವೈಯಾಕರಣರು ಜ್ಞಾನಸಾಮಾನ್ಯವೆಂಬ ಅರ್ಥವನ್ನೇ ಪಶ್ಯಧಾತುವಿಗೆ ಹೇಳಿದ್ದರಿಂದ, ಇಲ್ಲಿಯೂ ಕೂಡ ಶ್ರುತಿಗೆ ಹಾಗೆಯೇ ಅರ್ಥೈಸಬೇಕು. ಹೊರತು, ಜ್ಞಾನವಿಶೇಷವೆಂಬ ಅರ್ಥವನ್ನು ಹೇಳಿ ವ್ಯಾಖ್ಯಾನ ಮಾಡಬಾರದು. ಒಂದು ವೇಳೆ ಜ್ಞಾನವಿಶೇಷವನ್ನು ಹೇಳಿದ್ದಲ್ಲಿ, ಅರ್ಥಅಸತ್ತ್ವವನ್ನು ಸಾಧಿಸಲು ಬರುತ್ತಿರಲಿಲ್ಲ. ಜ್ಞಾನಸಾಮಾನ್ಯದ ನಿಷೇಧವನ್ನು ಮಾಡಿದ್ದರಿಂದ ಅರ್ಥಅಸತ್ತ್ವವು ಸಿದ್ಧವಾಗುತ್ತದೆ. ಪರಮಾತ್ಮನಿಗಿಂತ ಭಿನ್ನವಾದ ಧರ್ಮಗಳೇ ಇರುವುದಿಲ್ಲವೆಂದು ಸಿದ್ಧವಾಗುತ್ತದೆ.

**ತಸ್ಮಾತ್ ತಸ್ಯ ನಿಷೇಧೇ ಸ್ಯಾದಪ್ರಾಮಾಣಿಕತೈವ ಹಿ ।**
**ಅರ್ಥಾಭಾವಾವಿನಾಭೂತಾ ನಿಂದಾ ಸರ್ವತ್ರ ಚೇದೃಶೀ ॥ ೬೧೨ ॥**

**ಅರ್ಥ–** ತಸ್ಮಾತ್ = ಆದ್ದರಿಂದ, ತಸ್ಯ = ಜ್ಞಾನಮಾತ್ರದ, ನಿಷೇಧೇ = ನಿಷೇಧವನ್ನು ಮಾಡಿದರೆ, ಅಪ್ರಾಮಾಣಿಕತಾ = ಪದಾರ್ಥ ಇಲ್ಲದಿರುವಿಕೆಯೇ, ಸ್ಯಾದೇವ ಹಿ = ಸಿದ್ಧವಾಗುತ್ತದಷ್ಟೆ. ಈದೃಶೀ = 'ನ ಜಾನೀಯಾತ್' ಎಂಬ ಅಥವಾ 'ಪ್ರತ್ಯೇಕವೆಂದು ತಿಳಿದರೆ ಅಧೋಗತಿಯಾಗುತ್ತದೆ' ಎಂಬ, ನಿಂದಾ = ನಿಂದೆಯು, ಸರ್ವತ್ರ = ಎಲ್ಲೆಡೆಯೂ, ಅರ್ಥಾಭಾವಾವಿನಾಭೂತಾ = ಪದಾರ್ಥದ ಇಲ್ಲದಿರುವಿಕೆಯಿಂದ ವ್ಯಾಪ್ತವಾಗಿರುತ್ತದೆ.

**ಅನುವಾದ–** ಹೀಗೆ ಜ್ಞಾನಸಾಮಾನ್ಯವನ್ನು ನಿಷೇಧಿಸಿದಾಗ ಪದಾರ್ಥದ ಇಲ್ಲದಿರುವಿಕೆಯು ಸಿದ್ಧವಾಗುತ್ತದೆಂದು ತಿಳಿಯಬೇಕು.

**'ನ ಜಾನೀಯಾತ್' ಅಥವಾ 'ಪೃಥಕ್ ಪಶ್ಯನ್ ತಾನೇವಾನುವಿಧಾವತಿ' ಇತ್ಯಾದಿ ರೂಪವಾದ ನಿಂದೆಯು ಅರ್ಥದ ಅಭಾವದೊಂದಿಗೆ ವ್ಯಾಪ್ತಿಯನ್ನು ಪಡೆದಿದೆ.**

**ಭಾವವಿಲಾಸಿನೀ–** ತಸ್ಯ ಜ್ಞಾನಮಾತ್ರಸ್ಯ । ಈದೃಶೀ ನ ಜಾನೀಯಾದೇವೇತ್ಯಾದಿರೂಪಾ ವಾ ಪೃಥಕ್ ಜಾನನ್ನಧೋ ಯಾತೀತ್ಯಾದಿರೂಪಾ ವಾ ॥ ೬೧೨ ॥

**ವಿವರಣೆ–** ಒಂದು ವಿಷಯ ತಿಳುವಳಿಕೆಯನ್ನೇ ಮಾಡಿಕೊಳ್ಳಬಾರದೆಂದು ನಿಷೇಧ ಮಾಡಿದರೆ ಆ ವಸ್ತುವಿನ ಅಸ್ತಿತ್ವವನ್ನು ಸಮರ್ಥಿಸುವ ಪ್ರಮಾಣ ಯಾವುದೂ ಇಲ್ಲವೆಂದು ಅರ್ಥ. ಅಲ್ಲದೆ ಆ ವಿಷಯದ ಜ್ಞಾನವನ್ನು ಮಾಡಿಕೊಳ್ಳುವುದನ್ನು ಅದರಿಂದಾಗುವ ಅನರ್ಥವನ್ನು ತೋರಿಸುವ ಮೂಲಕ ನಿಂದಿಸಿದರೆ ಅಲ್ಲಿ ಆ ವಿಷಯವೂ ವಾಸ್ತವಿಕವಲ್ಲವೆಂದೇ ಅರ್ಥವಾಗುತ್ತದೆ.

**ಕೇಶಸ್ಯ ಪೂರ್ಣಬ್ರಹ್ಮತ್ವಾದೀಶೋಽಪಿ ಸ್ವಗತಾಂ ಭಿದಾಮ್ ।**
**ನಾನ್ವಮನ್ಯೇತ ತೇನೇಯಂ ಕೇನ ಮಾನ್ಯಾ ಮನೀಷಿಣಾ ॥ ೬೧೩ ॥**

**ಅರ್ಥ–** ಕೇಶಸ್ಯ = ಪದ್ಮನಾಭ ರೂಪದ ಕೃಷ್ಣಕೇಶದ ಅವತಾರನಾದ ಶ್ರೀಕೃಷ್ಣನಿಗೆ, ಪೂರ್ಣ- ಬ್ರಹ್ಮತ್ವಾತ್= ಪೂರ್ಣವಾದ ಬ್ರಹ್ಮತ್ವವಿರುವುದರಿಂದ, ಈಶಃ ಅಪಿ = ಸರ್ವಶಕ್ತನಾದ ಬ್ರಹ್ಮನೂ ಕೂಡ, ಸ್ವಗತಾಂ = ತನಗೂ ತನ್ನ ಅವತಾರಗಳಿಗೂ ಇರುವ, ಭಿದಾಂ = ಭೇದವನ್ನು, ನ ಅನ್ವಮನ್ಯೇತ = ತಿಳಿದಿರುವುದಿಲ್ಲ, ತೇನ = ಈ ಕಾರಣದಿಂದ, ಕೇನ = ಯಾವ, ಮನೀಷಿಣಾ = ವಿದ್ವಾಂಸನಿಂದ, ಇಯಂ = ಈ ಭೇದವು, ಮಾನ್ಯಾ = ಗೌರವಿಸಲ್ಪಡುತ್ತದೆ?

**ಅನುವಾದ–** ಸ್ವತಃ ಪದ್ಮನಾಭನ ಕೃಷ್ಣಕೇಶವೇ ಶ್ರೀಕೃಷ್ಣ ಪರಮಾತ್ಮ. ಇವನು ತನ್ನ ಅವತಾರಗಳಲ್ಲಿ ಮತ್ತು ತನ್ನ ಗುಣಗಳಲ್ಲಿ ಪೂರ್ಣತ್ವವನ್ನು ತಿಳಿದಿದ್ದಾನೆ. ಮತ್ತು ತನ್ನಲ್ಲಿರುವ ಧರ್ಮಗಳಿಗೂ ತನಗೂ ಭೇದವನ್ನು ತಿಳಿದಿರುವುದಿಲ್ಲ. ಪರಮಾತ್ಮನೇ ಹೀಗೆ ತನ್ನಲ್ಲಿರುವ ಧರ್ಮಗಳಿಗೆ ಐಕ್ಯವನ್ನು ತಿಳಿದಿರುವಾಗ, ಉಳಿದ ಯಾವ ವಿದ್ವಾಂಸರು ಭೇದವನ್ನು ಗೌರವಿಸುತ್ತಾರೆ?

**ಭಾವವಿಲಾಸಿನೀ–** ಅತೀಂದ್ರಿಯಾಣಾಮಪಿ ಧರ್ಮಾಣಾಂ ಪೃಥಕ್ತ್ವಂ ಸರ್ವಾಪರೋಕ್ಷೀ ಈಶ್ವರಸ್ಸಾಕ್ಷಾತ್ಕುರುತ ಇತ್ಯಾಶಂಕಾಂ ಪರಿಹರತಿ – **ಕೇಶಸ್ಯೇತಿ** ॥ ಕೇಶಸ್ಯ ಮೂಲರೂಪಭಗ- ವತ್ಕೇಶಾತ್ಮಕಕೃಷ್ಣಸ್ಯ ಸ್ವಗತಾಂ ಸ್ವಾವತಾರಸ್ವಗುಣಾದಿಗತಾಂ । ಇಯಂ ಸ್ವಧರ್ಮಭಿದಾ ॥೬೧೩॥

**ವಿವರಣೆ–** ಭಗವಂತನಲ್ಲಿರುವ ಧರ್ಮಗಳು ಅತೀಂದ್ರಿಯವಾಗಿದ್ದರೂ ಏಕೆಂದರೆ, ಎಲ್ಲವನ್ನೂ ಅಪರೋಕ್ಷದಿಂದ ನೋಡುವ ಈಶ್ವರನು ತನ್ನಲ್ಲಿರುವ ಗುಣಗಳನ್ನು ಭಿನ್ನವಾಗಿ ನೋಡಬಹುದಲ್ಲವೆ? ಎಂಬ ಆಶಂಕೆಯನ್ನು ಪರಿಹರಿಸುತ್ತಿದ್ದಾರೆ-

ಭಗವಂತನು ಮೂಲರೂಪವೆನಿಸಿದ ಪದ್ಮನಾಭರೂಪದಿಂದ ಕೃಷ್ಣಕೇಶವನ್ನು ಭೂಲೋಕದಲ್ಲಿ ಹಾಕಿದನು. ಆವಾಗ, ಶ್ರೀಕೃಷ್ಣ ಪರಮಾತ್ಮನು ಅವತಾರ ಮಾಡಿದನು.

ಕೃಷ್ಣಕೇಶವೇ ಶ್ರೀಕೃಷ್ಣನಾಗಿ ಭಗವಂತನ ಸಂಪೂರ್ಣ ಗುಣಗಳನ್ನು ಹೊಂದಿದೆ. ಅಂದರೆ, ಭಗವಂತನು ಎಷ್ಟು ಪರಿಪೂರ್ಣನಾಗಿದ್ದಾನೋ, ಅಷ್ಟೇ ಶ್ರೀಕೃಷ್ಣನೂ ಕೂಡ ಪರಿಪೂರ್ಣನಾಗಿದ್ದಾನೆ. ತಾನೇ ಅರ್ಜುನನ ಮುಂದೆ ವಿಶ್ವರೂಪವನ್ನು ತೋರಿಸುವ ಮೂಲಕ ಪೂರ್ಣತ್ವವನ್ನು ಸಾಧಿಸಿದ್ದಾನೆ. ಆದ್ದರಿಂದ ಭಗವಂತನಿಗೂ ಅವನ ಅವಯವಗಳಿಗೂ ಹಾಗೂ ಅವನ ಧರ್ಮಗಳಿಗೂ ಅವನ ಅವತಾರಗಳಿಗೂ ಭೇದವಿರುವುದಿಲ್ಲವೆಂದು ಈ ಉದಾಹರಣೆಯಿಂದ ಸ್ಪಷ್ಟವಾಗುತ್ತದೆ. ಹೀಗೆ ಸ್ವತಃ ಪರಮಾತ್ಮನೇ ತನ್ನಲ್ಲಿರುವ ಧರ್ಮಗಳಿಂದ ಮತ್ತು ಅವತಾರಗಳಿಂದ ತನಗೆ ಐಕ್ಯವನ್ನು ತಿಳಿದಿರುವಾಗ, ಮೂರನೆಯವನಾದ ನೀನು ಅವನಲ್ಲಿರುವ ಧರ್ಮಗಳಿಗೆ ಭೇದವನ್ನು ತಿಳಿಯಲು ಹೇಗೆ ಸಮರ್ಥನಾಗುತ್ತಿ?

**ಯಸ್ಯ ಕಾಲವಿಶೇಷೇ ದೃಙ್ನಿಷೇಧ್ಯಾ ಸ ನ ಬಾಧ್ಯತೇ ।**
**ಯಸ್ಯ ದೃಕ್ ತು ಸದಾ ನೇತಿ ಸಾಮಾನ್ಯೇನೈವ ವಾರ್ಯತೇ ॥**
**ತತ್ರಾರ್ಥಸ್ಯಾಪಿ ಬಾಧಃ ಸ್ಯಾದಪ್ರಾಮಾಣಿಕತಾ ಹಿ ಸಾ ॥ ೬೧೪ ॥**

**ಅರ್ಥ–** ಯಸ್ಯ = ಯಾವ ಸೂರ್ಯ, ಸ್ತ್ರೀ ಮೊದಲಾದವರ, ದೃಕ್= ಕಣ್ಣಿನಿಂದ ನೋಡುವಿಕೆಯು ಕಾಲವಿಶೇಷೇ = ಉದಯ ಮೊದಲಾದ ಕಾಲವಿಶೇಷದಲ್ಲಿ ಮತ್ತು ನಗ್ನ ಮೊದಲಾದ ಅವಸ್ಥಾವಿಶೇಷದಲ್ಲಿ ನಿಷೇಧ್ಯಾ = ನಿಷಿದ್ಧವಾಗಿದೆಯೋ, ಸಃ = ಆ ವಸ್ತುವು, ನ ಬಾಧ್ಯತೇ = ಬಾಧಿಸಲ್ಪಡುವುದಿಲ್ಲ. ಯಸ್ಯ = ಯಾವ ವಸ್ತುವಿನ, ದೃಕ್ = ನೋಡುವಿಕೆಯು, ಸದಾ = ಯಾವಾಗಲೂ, ನ ಇತಿ= ಇಲ್ಲವೆಂದು, ಸಾಮಾನ್ಯೇನ ಏವ = ಸಾಮಾನ್ಯವಾಗಿಯೇ, ವಾರ್ಯತೇ = ನಿಷೇಧಿಸಲ್ಪಡುವುದೋ, ತತ್ರ = ಅಲ್ಲಿ, ಅರ್ಥಸ್ಯ ಅಪಿ = ವಸ್ತುವಿಗೂ ಕೂಡ, ಬಾಧಃ = ಬಾಧವು, ಸ್ಯಾತ್ = ಸಿದ್ಧವಾಗುತ್ತದೆ. ಸಾ= ಸಾಮಾನ್ಯದೃಙ್ನಿಷೇಧ ವಿಷಯತ್ವವು, ಅಪ್ರಾಮಾಣಿಕತಾ ಹಿ= ಅಪ್ರಮಾಣಿಕತ್ವವೇ ಆಗಿದೆ.

**ಅನುವಾದ– ಯಾವುದಾದರೊಂದು ಪದಾರ್ಥದ ಜ್ಞಾನವನ್ನು ಕಾಲವಿಶೇಷದಲ್ಲಿ ಅಥವಾ ಅವಸ್ಥಾವಿಶೇಷದಲ್ಲಿ ನಿಷೇಧ ಮಾಡಿದರೆ, ಅಂತಹ ಪದಾರ್ಥವು ಬಾಧಿತವಾಗುವುದಿಲ್ಲ. ಆದರೆ ಯಾವ ಪದಾರ್ಥವನ್ನು ಅಥವಾ ಪದಾರ್ಥದ ಜ್ಞಾನವನ್ನು ಯಾವಾಗಲೂ ಇರುವುದಿಲ್ಲವೆಂದು ಸಾಮಾನ್ಯವಾಗಿ ನಿಷೇಧ ಮಾಡುತ್ತೇವೋ, ಆವಾಗ ಮಾತ್ರ ಪದಾರ್ಥವು ಇಲ್ಲವೆಂದು ಸಿದ್ಧವಾಗುತ್ತದೆ. ವಸ್ತುವಿನ ಜ್ಞಾನ ಸಾಮಾನ್ಯ ನಿಷೇಧ ವಿಷಯತ್ವವೆಂದರೆ ಆ ವಸ್ತುವಿನ ಬಗ್ಗೆ ಪ್ರಮಾಣವಿಲ್ಲದಿರುವಿಕೆಯೇ.**

**ಭಾವವಿಲಾಸಿನೀ– ಪ್ರಕಾರಾಂತರೇಣ ದೃಷ್ಟಾಂತವೈಷಮ್ಯಮುಪಪಾದಯತಿ – ಯಸ್ಯೇತಿ ॥ ಯಸ್ಯ ಸೂರ್ಯಾದೇಃ ಉದಯಕಾಲಾದಿಕಾಲವಿಶೇಷೇ । ಉಪಲಕ್ಷಣಮೇತತ್ । ಅವಸ್ಥಾವಿಶೇಷ ಇತ್ಯಪಿ ದ್ರಷ್ಟವ್ಯಮ್ । ಸಾ ಸಾಮಾನ್ಯದೃಙ್ನಿಷೇಧವಿಷಯತಾ ॥ ೬೧೪ ॥**

**ವಿವರಣೆ–** ಸೂರ್ಯೋದಯಾದಿಗಳ ದೃಷ್ಟಾಂತವು ವಿಷಮವಾಗಿದೆಯೆಂದು ಮತ್ತೊಂದು ರೀತಿಯಲ್ಲಿ ಉಪಪಾದನೆ ಮಾಡುತ್ತಿದ್ದಾರೆ -

ಸೂರ್ಯಾದಿಗಳನ್ನು ಕಾಲವಿಶೇಷದಲ್ಲಿ, ಮೊದಲಾದವರನ್ನು ಅವಸ್ಥಾವಿಶೇಷದಲ್ಲಿ ನೋಡಬಾರದೆಂದು ಶ್ರುತಿಯು ನಿಷೇಧ ಮಾಡುತ್ತಿದೆ. ಹೀಗೆ ನಿಷೇಧ ಮಾಡುವುದರಿಂದ ಸೂರ್ಯೋದಯವೇ ಇಲ್ಲವೆಂದು ಸಿದ್ಧವಾಗುವುದಿಲ್ಲ, ಅಥವಾ ನಗ್ನ ಸ್ತ್ರೀಯೇ ಇಲ್ಲವೆಂದು ಸಿದ್ಧವಾಗುವುದಿಲ್ಲ. ಆದರೆ, ಯಾವುದೇ ಒಂದು ಪದಾರ್ಥವನ್ನು ಯಾವಾಗಲೂ ಇರುವುದಿಲ್ಲವೆಂದು ನಿಷೇಧ ಮಾಡಿದಾಗ ಆ ವಸ್ತುವೇ ಇಲ್ಲವೆಂದು ಸಿದ್ಧವಾಗುತ್ತದೆ. ಹೊರತು, ಕಾಲವಿಶೇಷದಲ್ಲಿ ಚಕ್ಷುರಾದಿಇಂದ್ರಿಯಗಳಿಗೆ ಗೋಚರವಾಗುವುದಿಲ್ಲವೆಂದು ಸಿದ್ಧವಾಗುವುದಿಲ್ಲ. ಪ್ರಕೃತ, 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಎಂಬ ಶ್ರುತಿಯು ಯಾವುದೇ ಕಾಲದಲ್ಲಿಯೂ ಭಗವಂತನಲ್ಲಿ ಭಿನ್ನವಾದ ಧರ್ಮಗಳಿರುವುದಿಲ್ಲವೆಂದು ನಿಷೇಧ ಮಾಡುತ್ತಿರುವುದರಿಂದ ಧರ್ಮಭೇದವೆಂಬ ವಸ್ತುವೇ ಸಿದ್ಧವಾಗುವುದಿಲ್ಲವೆಂದು ತಿಳಿಯಬೇಕು.

**ಇದಾನೀಂ ನ ಘಟೋ ದೃಷ್ಟ ಇತ್ಯುಕ್ತೇನ ಘಟೋ ಮೃಷಾ ।**
**ನರಶೃಂಗಂ ನೈವ ದೃಷ್ಟಮಿತ್ಯುಕ್ತೇ ತು ತದೇವ ನ ॥ ೬೧೫ ॥**

**ಅರ್ಥ–** ಇದಾನೀಂ = ವರ್ತಮಾನ ಕಾಲದಲ್ಲಿ, ಘಟಃ = ಮಡಿಕೆಯು, ನ ದೃಷ್ಟಃ = ನೋಡಲ್ಪಡಲಿಲ್ಲ. ಇತಿ ಉಕ್ತೇ = ಹೀಗೆ ಹೇಳಿದಾಗ, ಘಟಃ = ಮಡಿಕೆಯು, ನ ಮೃಷಾ = ಇಲ್ಲವೆಂದು ಸಿದ್ಧವಾಗುವುದಿಲ್ಲ. ಆದರೆ, ನರಶೃಂಗಂ = ಮನುಷ್ಯನ ಕೊಂಬು, ನ ಏವ ದೃಷ್ಟಮ್ = ಎಂದೂ ಕಾಣಲ್ಪಡಲಿಲ್ಲ. ಇತಿ ಉಕ್ತೇ = ಹೀಗೆ ಹೇಳಿದಾಗ, ತತ್ ಏವ ನ = ಆ ವಸ್ತುವೇ ಇಲ್ಲವೆಂದು ತಿಳಿಯಲ್ಪಡುತ್ತದೆ.

**ಅನುವಾದ– ಈಗ ಮಡಿಕೆಯು ಇಲ್ಲಿ ಇಲ್ಲವೆಂದು ತಿಳಿದರೆ, ಮಡಿಕೆಯು ಅಸತ್ ಎಂದು ಸಿದ್ಧವಾಗುವುದಿಲ್ಲ. ಆದರೆ ಮನುಷ್ಯರ ಕೋಡು ಎಂದೂ ನೋಡಲ್ಪಟ್ಟಿಲ್ಲವೆಂದು ಹೇಳಿದಾಗ, ಆ ಕಾಲದಲ್ಲಿ ಮಾತ್ರ ಇರುವುದಿಲ್ಲವೆಂದರ್ಥವಲ್ಲ. ಹೊರತು, ಎಂದೆಂದೂ ಕೂಡ ಮನುಷ್ಯರಿಗೆ ಕೋಡು ಇರಲು ಸಾಧ್ಯವೇ ಇಲ್ಲವೆಂದು ಸಿದ್ಧವಾಗುತ್ತದೆ.**

**ಭಾವವಿಲಾಸಿನೀ– ಉಭಯತ್ರಾಪಿ ದೃಷ್ಟಾಂತಮಾಹ – ಇದಾನೀಮಿತಿ ॥ ತದೇವ ನೃಶೃಂಗಮೇವ ॥ ೬೧೫ ॥**

**ವಿವರಣೆ–** ಹಿಂದೆ ಹೇಳಿದ ವಿಶೇಷ ವ್ಯಾಪ್ತಿ ಹಾಗೂ ಸಾಮಾನ್ಯ ವ್ಯಾಪ್ತಿಗಳಿಗೆ ದೃಷ್ಟಾಂತವನ್ನು ನೀಡುತ್ತಿದ್ದಾರೆ-

ಈಗ ಘಟವು ಇಲ್ಲಿ ಇಲ್ಲವೆಂದು ಹೇಳಿದಾಗ ಘಟವು ಎಲ್ಲೂ ಇಲ್ಲವೆಂದು ಸಿದ್ಧವಾಗುವುದಿಲ್ಲ. ಆದರೆ ಮನುಷ್ಯನ ಕೊಂಬು ಇಲ್ಲವೆಂದು ಹೇಳಿದಾಗ ಎಲ್ಲಿಯೂ ಕೂಡ ಇಲ್ಲವೆಂದೇ ಅರ್ಥ. ಇದರಿಂದ ನರವಿಷಾಣವು ಅಪ್ರಾಮಾಣಿಕವೆಂದು ಸಿದ್ಧವಾಗುತ್ತದೆ.

**ಅತಸ್ತ್ವದುಕ್ತದೃಷ್ಟಾಂತೋ ವಿಷಮೋಽಭೂದ್ ವಿಚಾರಣೇ ॥ ೬೧೬ ॥**

**ಅರ್ಥ–** ಅತಃ = ಆದ್ದರಿಂದ, ವಿಚಾರಣೇ = ವಿಮರ್ಶೆ ಮಾಡಿದಾಗ, ತ್ವದುಕ್ತದೃಷ್ಟಾಂತಃ = ನೀನು ಹೇಳಿದ ದೃಷ್ಟಾಂತವು, ವಿಷಮಃ ಅಭೂತ್ = ವಿಷಮವಾಯಿತು.

**ಅನುವಾದ–** ಆದ್ದರಿಂದ, ನೀನು ಹೇಳಿದ ಸೂರ್ಯೋದಯವನ್ನು ನೋಡಬಾರದೆಂಬ ದೃಷ್ಟಾಂತವು ವಿಚಾರ ಮಾಡಿದರೆ ಸರಿಯಲ್ಲವೆಂದು ಸಿದ್ಧವಾಯಿತು.

**ಭಾವವಿಲಾಸಿನೀ–** ಉಪಸಂಹರತಿ – ಅತ ಇತಿ ॥ ಅತಃ 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಇತಿ ಧರ್ಮಪೃಥಕ್ತ್ವದರ್ಶನಷೇಧಸ್ಯ ಕಾಲವಿಶೇಷಾದ್ಯನಾಲಂಬಿತ್ವಾತ್ ॥ ೬೧೬ ॥

**ವಿವರಣೆ–** 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಎಂಬ ಶ್ರುತಿಯನ್ನು ವ್ಯಾಖ್ಯಾನ ಮಾಡಲು 'ನೇಕ್ಷೇತೋದ್ಯಂತಮಾದಿತ್ಯಮ್' ಎಂಬ ಯಾವ ವಾಕ್ಯವನ್ನು ಉದಾಹರಣೆಯನ್ನಾಗಿ ನೀಡುತ್ತಿದ್ದೀರೋ, ಇದು ವಿಷಮವಾಗಿದೆ. ಆದ್ದರಿಂದ ವಿಷಮವಾದ ದೃಷ್ಟಾಂತದಿಂದ ಶ್ರುತಿಯನ್ನು ವ್ಯಾಖ್ಯಾನ ಮಾಡಲಾಗುವುದಿಲ್ಲವೆಂದು ಹೇಳಿ 'ಏವಂ ಧರ್ಮಾನ್' ಶ್ರುತಿಯ ವ್ಯಾಖ್ಯಾನವನ್ನು ಉಪಸಂಹಾರ ಮಾಡುತ್ತಿದ್ದಾರೆ.

**ದ್ರಷ್ಟವ್ಯೋ ನೈವ ದೋಷೋಽಸ್ಮಿನ್ನಿತ್ಯುಕ್ತೇ ತದದೋಷತಾ ।**
**ಯಥಾ ಸಿದ್ಧ್ಯೇತ್ತಥಾ ಧರ್ಮಪಾರ್ಥಕ್ಯೇಕ್ಷಣಶಿಕ್ಷಣೇ ।**
**ಧರ್ಮಾಣಾಮಪೃಥಕ್ತ್ವಂ ಚ ಸಿದ್ಧ್ಯೇದೇವ ಮಮ ಪ್ರಭೌ ॥ ೬೧೭ ॥**

**ಅರ್ಥ–** ಅಸ್ಮಿನ್ = ಈ ಪರಮಾತ್ಮನಲ್ಲಿ, ದೋಷಃ = ದೋಷವು, ನ ಏವ ದ್ರಷ್ಟವ್ಯಃ = ಎಂದೂ ತಿಳಿಯಬಾರದು, ಇತಿ ಉಕ್ತೇ = ಹೀಗೆ ಹೇಳಿದರೆ, ತದದೋಷತಾ = ಭಗವಂತನಲ್ಲಿ ದೋಷವಿಲ್ಲವೆಂದು, ಯಥಾ = ಹೇಗೆ, ಸಿದ್ಧ್ಯೇತ್ = ಸಿದ್ಧವಾಗುತ್ತದೋ, ತಥಾ = ಅದರಂತೆ, ಧರ್ಮಪಾರ್ಥಕ್ಯೇಕ್ಷಣಶಿಕ್ಷಣೇ = ಧರ್ಮಗಳನ್ನು ಪರಮಾತ್ಮನಿಗಿಂತ ಭಿನ್ನವಾಗಿ ತಿಳಿಯಬಾರದು ಎಂಬ ಶಿಕ್ಷಣದಲ್ಲಿಯೂ, ಏವಂ = ಹೀಗೆ, ಮಮ = ನನ್ನ ಪ್ರಭೌ = ಸ್ವಾಮಿಯಾದ ಪರಮಾತ್ಮನಲ್ಲಿ, ಅಪೃಥಕ್ತ್ವಂ = ಧರ್ಮಭೇದವಿಲ್ಲವೆಂಬುದು, ಸಿದ್ಧ್ಯೇತ್ ಏವ= ನಿಶ್ಚಿತವಾಗಿ ಸಿದ್ಧವಾಗುತ್ತದೆ.

**ಅನುವಾದ–** 'ಪರಮಾತ್ಮನಲ್ಲಿ ದೋಷವನ್ನು ತಿಳಿಯಲೇಬಾರದು' ಎಂದು ಹೇಳಿದರೆ ಪರಮಾತ್ಮನಲ್ಲಿ ದೋಷಗಳಿರುವುದಿಲ್ಲವೆಂದು ಸಿದ್ಧವಾಗುತ್ತವೆ. ಅದೇ ರೀತಿಯಾಗಿ

'ಪರಮಾತ್ಮನಿಂದ ಭಿನ್ನವಾಗಿ ಧರ್ಮವನ್ನು ತಿಳಿಯಬಾರದು' ಎಂಬುದಾಗಿ ಪೃಥಕ್ತ್ವಜ್ಞಾನವನ್ನು ನಿರಾಕರಿಸಿದರೆ, ಪರಮಾತ್ಮನಲ್ಲಿರುವ ಧರ್ಮಗಳಿಗೆ ಭೇದವಿರುವುದಿಲ್ಲವೆಂದೇ ನಿಶ್ಚಯವಾಗುತ್ತದೆ.

**ಭಾವವಿಲಾಸಿನೀ–** ಭಗವತ್ಯೇವ ಸಾಮಾನ್ಯದರ್ಶನನಿಷೇಧಸ್ಯಾರ್ಥಾಭಾವಸಾಧಕತ್ವಂ ದೃಷ್ಟಾಂತಮುಖೇನ ದರ್ಶಯತಿ – ದ್ರಷ್ಟವ್ಯ ಇತಿ ॥ ಅಸ್ಮಿನ್ ಭಗವತಿ ॥ ೬೧೭ ॥

**ವಿವರಣೆ–** ದೃಷ್ಟಾಂತಮೂಲಕವಾಗಿ ಸಾಮಾನ್ಯಜ್ಞಾನನಿಷೇಧವು ಅರ್ಥಾಭಾವ ಸಾಧಕವಾಗುತ್ತದೆಂದು ಸಮರ್ಥನೆ ಮಾಡುತ್ತಿದ್ದಾರೆ. ಭಗವಂತನಲ್ಲಿ ಅಸ್ವಾತಂತ್ರ್ಯ, ದುಃಖ ಮೊದಲಾದ ದೋಷಗಳನ್ನು ತಿಳಿಯಬಾರದು ಎಂದು ಹೇಳಿದರೆ ಅಸ್ವಾತಂತ್ರ್ಯ, ದುಃಖ ಮೊದಲಾದವುಗಳು ಪರಮಾತ್ಮನಲ್ಲಿರುವುದಿಲ್ಲವೆಂದೇ ಅರ್ಥ. ಅದರಂತೆ ಪರಮಾತ್ಮನಿಂದ ಬೇರೆಯಾಗಿರುವ ಧರ್ಮಗಳನ್ನು ತಿಳಿಯಬಾರದೆಂದು ಹೇಳಿದರೆ, ಧರ್ಮಗಳು ಭಿನ್ನವಾಗಿಲ್ಲವೆಂದೇ ನಿಶ್ಚಯವಾಗುತ್ತದೆ.

**ಸಾರ–** ಭಗವಂತನಲ್ಲಿ ದೋಷವನ್ನು ತಿಳಿಯಬಾರದು ಎಂದರೆ ದೋಷವಿಲ್ಲವೆಂದರ್ಥ. ಅದರಂತೆ ಭಗವಂತನಲ್ಲಿ ಧರ್ಮಗಳನ್ನು ಪ್ರತ್ಯೇಕವಾಗಿ ತಿಳಿಯಬಾರದೆಂದರೆ ಧರ್ಮಗಳು ಪ್ರತ್ಯೇಕವಾಗಿಲ್ಲವೆಂದೇ ಅರ್ಥ.

**ದ್ವಿತೀಯಾಭಿನಿವೇಶೇನ ಭಯಂ ಸ್ಯಾದಿತಿ ಚೋದಿತೇ ।**
**ದ್ವಿತೀಯಸ್ಯೈವ ಬಾಧ್ಯತ್ವಂ ಕಿಂ ನೋಚುಸ್ತವ ಪೂರ್ವಜಾಃ ॥ ೬೧೮ ॥**

**ಅರ್ಥ–** ದ್ವಿತೀಯಾಭಿನಿವೇಶೇನ = ಆತ್ಮನಿಗಿಂತ ಭಿನ್ನವಾದ ದೇಹ, ಹೆಂಡತಿ ಮೊದಲಾದವರಲ್ಲಿ ಹೆಚ್ಚು ಅಭಿಮಾನ ಮಾಡಿದರೆ, ಭಯಮ್ = ಭಯವುಂಟಾಗುತ್ತದೆ. ಇತಿ ಚ= ಹೀಗೆ, ಉದಿತೇ = ಹೇಳಿದರೆ, ದ್ವಿತಿಯಸ್ಯ ಏವ = ಆತ್ಮನಿಗಿಂತ ಭಿನ್ನವಾದ ದೇಹ, ಹೆಂಡತಿ ಮೊದಲಾದ ಪದಾರ್ಥಗಳಿಗೆ, ಬಾಧ್ಯತ್ವಂ = ಇಲ್ಲದಿರುವಿಕೆಯನ್ನು, ತವ = ನಿನ್ನ ಪೂರ್ವಜಾಃ = ಹಿಂದಿನವರು, ಕಿಂ ನ ಊಚುಃ = ಹೇಳಿಲ್ಲವೇನು?

**ಅನುವಾದ–** 'ದ್ವಿತೀಯಾಭಿನಿವೇಶೇನ' 'ಆತ್ಮನಿಗಿಂತ ಬೇರೆಯಾದ ದೇಹ, ಹೆಂಡತಿ, ಮಕ್ಕಳಿಂದ ಭಯ ಉಂಟಾಗುತ್ತದೆ' ಎಂಬ ಸ್ಮೃತಿಗೆ ಬ್ರಹ್ಮನಿಗಿಂತ ಭಿನ್ನವಾದ ಬೇರೆ ಪದಾರ್ಥಗಳೇ ಇಲ್ಲವೆಂದು ನೀವೇ ವ್ಯಾಖ್ಯಾನ ಮಾಡಿದ್ದೀರಿ. ಅದರಂತೆ ಪರಮಾತ್ಮನಿಗಿಂತ ಭಿನ್ನವಾದ ಧರ್ಮಗಳಿಲ್ಲವೆಂದು ಹೇಳುವ ಶ್ರುತಿಗೂ ಭಿನ್ನವಾದ ಧರ್ಮವಿಲ್ಲವೆಂದು ವ್ಯಾಖ್ಯಾನ ಮಾಡಿದರೆ ಏನು ತಪ್ಪು?

**ಭಾವವಿಲಾಸಿನೀ–** ಇಯಂ ಶಂಕಾ ನ ಮಾಯಾವಾದಿನಾ ಕರ್ತುಂ ಶಕ್ಯೇತ್ಯಾಹ – ದ್ವಿತೀಯಾಭಿನಿವೇಶೇನೇತಿ ॥ ಉದಿತೇ ಉಕ್ತೇ ಸತಿ ಚೇತಿ ಸಂಬಂಧಃ ॥ ೬೧೮ ॥

**ವಿವರಣೆ–** ತಾರ್ಕಿಕರು ಶ್ರುತಿಗೆ ವ್ಯಾಖ್ಯಾನ ಮಾಡುವಂತೆ ಮಾಯಾವಾದಿಗಳೂ ಕೂಡ ವ್ಯಾಖ್ಯಾನ ಮಾಡಬಹುದು. ಅಂತಹ ಮಾಯಾವಾದಿಗಳನ್ನು ಪ್ರಕೃತ ನಿರಾಕರಣೆ ಮಾಡುತ್ತಿದ್ದಾರೆ-

ಭಯಂ ದ್ವಿತೀಯಾಭಿನಿವೇಶತಃ ಸ್ಯಾ-
ದೀಶಾದಪೇತಸ್ಯ ವಿಪರ್ಯಯೋऽಸ್ಮೃತಿಃ ।
ಯನ್ಮಾಯಯಾऽತೋ ಬುಧ ಆಭಜೇತ್ತಂ
ಭಕ್ತ್ಯೈಕವಶ್ಯಂ ಗುರುದೇವತಾತ್ಮಾ ॥
(ಜಾಯಂತೇಯ ಉಪಾಖ್ಯಾನ, ಭಾಗವತ ೧೧-೨-೩೭)

'ಈಶ್ವರನ ಮಾಯೆಯಿಂದ ಸಂಸಾರಿಜೀವರು ಭಗವಂತನನ್ನು ಮರೆತು, ತಮ್ಮಲ್ಲಿರುವ ಅಸ್ವಾತಂತ್ರ್ಯವನ್ನು ಮರೆತು, ಸ್ವಾತಂತ್ರ್ಯ ಭ್ರಮೆಯಿಂದ ಪರಮಾತ್ಮನಿಗಿಂತ ಭಿನ್ನವಾದ ದೇಹ, ಹೆಂಡತಿ, ಮಕ್ಕಳು ಇವರೆಲ್ಲರಲ್ಲಿ ಹೆಚ್ಚಿನ ಆಸಕ್ತಿಯನ್ನು ತಾಳುತ್ತಾರೆ. ಇದರಿಂದ ಮತ್ತಷ್ಟು ಭಯಪೀಡಿತರಾಗಿ ಅಜ್ಞಾನಿಗಳೇ ಆಗುತ್ತಾರೆ. ಆದ್ದರಿಂದ ಭಗವಂತನ ಪ್ರಸಾದವನ್ನು ಪಡೆದು ತನ್ಮೂಲಕ ತತ್ತ್ವಜ್ಞಾನದಿಂದ ಸಂಸಾರಬಂಧನವನ್ನು ಕಳೆದುಕೊಳ್ಳಲು ಪ್ರಯತ್ನಿಸಬೇಕು. ಅದಕ್ಕಾಗಿ ನಿರಂತರ ಶ್ರೀಹರಿಯಲ್ಲಿ ಭಕ್ತಿಯುಳ್ಳವರಾಗಿ ಗುರುಗಳಲ್ಲಿ-ದೇವತೆಗಳಲ್ಲಿ ಮನಸ್ಸನ್ನಿಟ್ಟವರಾಗಿ ಅಥವಾ ಮುಖ್ಯಪ್ರಾಣದೇವರ ಅಂತರ್ಯಾಮಿಯಾದ ಭಗವಂತನಲ್ಲೇ ಮನಸ್ಸನ್ನಿಟ್ಟವರಾಗಿ ಶ್ರೀಹರಿಯನ್ನು ಧ್ಯಾನ ಮಾಡಬೇಕು.'

ಭಾಗವತದ ಈ ಶ್ಲೋಕಕ್ಕೆ ನಮ್ಮ ಸಿದ್ಧಾಂತದ ಪ್ರಕಾರ ಮೇಲೆ ಹೇಳಿದಂತೆ ತಾತ್ಪರ್ಯವನ್ನು ತಿಳಿಸಲಾಗಿದೆ.

ಆದರೆ ಅದ್ವೈತಿಗಳು ಈ ಶ್ರುತಿಗೆ ಐಕ್ಯಪರವಾಗಿ ವ್ಯಾಖ್ಯಾನ ಮಾಡುತ್ತಾರೆ. ಬ್ರಹ್ಮನನ್ನು ಬಿಟ್ಟು ಉಳಿದ ಪದಾರ್ಥಗಳೆಲ್ಲವೂ ಮಿಥ್ಯಾಭೂತವಾದುದರಿಂದ ಅವುಗಳಲ್ಲಿ ಆಸಕ್ತಿಯನ್ನು ತಾಳಬಾರದೆಂದು ವ್ಯಾಖ್ಯಾನ ಮಾಡುತ್ತಾರೆ. 'ಭಯಂ ದ್ವಿತೀಯಾಭಿ-ನಿವೇಶತಃ ಸ್ಯಾತ್' ಎಂದರೆ ದ್ವಿತೀಯ ಪದಾರ್ಥಗಳೆಲ್ಲವೂ ಮಿಥ್ಯಾಭೂತವೆಂದು ವ್ಯಾಖ್ಯಾನಿಸುವ ಅದ್ವೈತಿಗಳು ಪ್ರಕೃತ, 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಎಂಬ ಶ್ರುತಿಗೂ ಧರ್ಮಗಳಿಗೆ ಭೇದವಿಲ್ಲವೆಂದು ವ್ಯಾಖ್ಯಾನ ಮಾಡಬೇಕಷ್ಟೆ ಎಂದರ್ಥ.

ತ್ರಯಾಣಾಮೇಕಭಾವಾನಾಂ ಯೋ ನ ಪಶ್ಯತಿ ವೈ ಭಿದಾಮ್ ।
ಇತ್ಯುಕ್ತಿಸ್ತೇ ಭಿದಾಂ ದ್ವೇಷ್ಟುಮೈಕ್ಯಂ ಪೋಷ್ಟುಂ ಚ ಭೂಃ ಕಿಲ॥ ೬೧೯ ॥

**ಅರ್ಥ–** ಏಕಭಾವಾನಾಂ = ಒಂದೇ ಸ್ವಭಾವವುಳ್ಳ, ತ್ರಯಾಣಾಂ = ಹರಿ-ಹರ-ಬ್ರಹ್ಮರಿಗೆ, ಭಿದಾಂ = ಭೇದವನ್ನು, ಯಃ = ಯಾರು, ನ ಪಶ್ಯತಿ = ತಿಳಿಯುವುದಿಲ್ಲವೋ, ಇತಿ ಉಕ್ತಿಃ =

ಈ ವಾಕ್ಯವು, ತೇ = ನಿನಗೆ, ಭಿದಾಂ = ಭೇದವನ್ನು ದ್ವೇಷ್ಟುಂ = ದ್ವೇಷಿಸಲು, ಐಕ್ಯಂ = ಐಕ್ಯವನ್ನು ಪೋಷ್ಟುಂ ಚ = ಪೋಷಣೆ ಮಾಡಲು, ಭೂಃ = ಸ್ಥಾನವು, ಕಿಲ = ಆಗಿರುವುದಷ್ಟೇ.

**ಅನುವಾದ–** ಏಕಸ್ವರೂಪರಾದ ಹರಿ-ಹರ-ಬ್ರಹ್ಮರಿಗೆ ಪರಸ್ಪರ ಭೇದವನ್ನು ಯಾರು ತಿಳಿಯುವುದಿಲ್ಲವೋ ಅವರು ಮೋಕ್ಷವನ್ನು ಹೊಂದುತ್ತಾರೆ ಎಂಬ ಭಾಗವತ ಶ್ಲೋಕವನ್ನು, ಭೇದವನ್ನು ದ್ವೇಷಿಸಲು, ಐಕ್ಯವನ್ನು ಪೋಷಿಸಲು ನೀವು ಉಪಯೋಗಿಸುತ್ತೀರಿ. ಹೀಗೆ ಭೇದಕ್ಕೆ ಮಿಥ್ಯಾತ್ವವನ್ನು ಎಲ್ಲೆಡೆ ಸಾಧಿಸುವ ನೀನು, ಅದ್ವಿತೀಯನಾದ ಪರಮಾತ್ಮನಲ್ಲಿರುವ ಧರ್ಮಗಳಿಗೆ ಭೇದವನ್ನು ಸಾಧಿಸಲು ಏಕೆ ಇಚ್ಛೆ ಪಡುತ್ತಿ? ಇದು ಸರ್ವಥಾ ಕೂಡುವುದಿಲ್ಲ.

**ಭಾವವಿಲಾಸಿನೀ–** ತ್ರಯಾಣಾಂ ಭಿದಾಂ ಹರಿಹರಬ್ರಹ್ಮಣಾಂ ಭಿದಾಮ್ । ಐಕ್ಯಂ ತೇಷಾಮೈಕ್ಯಮ್। ಭೂಃ ಸ್ಥಾನಮ್ । ಯಥಾತ್ರ ತವ ಭೇದದರ್ಶನನಿಂದಾಯಾಂ ಭೇದಸ್ಯಾಸತ್ತ್ವಮ್, ಏವಂ ಮಮಾಪಿ ಪೃಥಕ್ತ್ವದರ್ಶನನಿಂದಾಯಾಂ ಪೃಥಕ್ತ್ವಾಭಾವಃ ಸೇತ್ಸ್ಯತಿ । ಯಥಾಚ ತವಾತ್ರ ತ್ರಿದೇವತಾಭೇದದರ್ಶನನಿಂದಾಯಾಂ ಭೇದಮಾತ್ರಸ್ಯಾಸತ್ತ್ವಂ ನ ದೇವಾನಾಮ್, ತಥಾ ಧರ್ಮಪೃಥಕ್ತ್ವದರ್ಶನನಿಂದಾಯಾಂ ಧರ್ಮಪೃಥಕ್ತ್ವಸ್ಯೈವಾಸತ್ತ್ವಮ್, ನ ಧರ್ಮಾಣಾಮಿತಿ ಸಮಗ್ರೋಪಮೇಯಮ್ ॥ ೬೧೯ ॥

**ವಿವರಣೆ–** ತ್ರಯಾಣಾಮೇಕಭಾವಾನಾಂ ಯೋ ನ ಪಶ್ಯತಿ ವೈ ಭಿದಾಮ್ ।
ಸರ್ವಭೂತಾತ್ಮನಾ ಬ್ರಹ್ಮನ್ ಸ ಶಾಂತಿಮಧಿಗಚ್ಛತಿ ॥
(ಭಾಗವತ ೪-೮-೫೪, ದಕ್ಷಾಧ್ವರಪ್ರಸಂಗ)

ಹರಿ-ಹರ-ಬ್ರಹ್ಮ ಈ ಮೂವರಿಗೂ ಒಂದೇ ಅಭಿಪ್ರಾಯವಿರುತ್ತದೆ. ಮೂವರ ಅಭಿಪ್ರಾಯದಲ್ಲಿ ಯಾವುದೇ ವಿರೋಧವಿರುವುದಿಲ್ಲ. ಆದ್ದರಿಂದ, ಅವರ ಮತಿಯಲ್ಲಿ ಭೇದವನ್ನು ಸರ್ವಥಾ ತಿಳಿಯಬಾರದು. ಮತ್ತು ಬ್ರಹ್ಮ ರುದ್ರರಲ್ಲಿ ಅಂತರ್ಯಾಮಿಯಾದ ರೂಪಗಳಿಗೂ ಮೂಲ ರೂಪಕ್ಕೂ ಭೇದವಿರುವುದಿಲ್ಲ. ಹೀಗೆ ತಿಳಿದವನು ಶಾಂತಿಯನ್ನು ಹೊಂದುತ್ತಾನೆ.

ಇದು ಸಿದ್ಧಾಂತಪರವಾದ ಅರ್ಥ. ಆದರೆ ಅದ್ವೈತಿಗಳು ಮಿಥ್ಯಾತ್ವವನ್ನು ಸಾಧನೆ ಮಾಡುತ್ತಾರೆ. ಹರಿ-ಹರ-ಬ್ರಹ್ಮರಿಗೆ ಐಕ್ಯವೇ ಇರುತ್ತದೆ. ಭೇದವನ್ನು ಸರ್ವಾತ್ಮನಾ ತಿಳಿಯಬಾರದು. ಮೂಲಚೈತನ್ಯಕ್ಕೂ ಇವರಿಗೂ ಅಭೇದವಿದೆಯೆಂದು ಯಾರು ತಿಳಿಯುತ್ತಾರೋ, ಅವರು ಶಾಂತಿಯನ್ನು ಪಡೆಯುತ್ತಾರೆಂದು ವ್ಯಾಖ್ಯಾನ ಮಾಡುತ್ತಾರೆ. ಹೀಗೆ ಭೇದಜ್ಞಾನವನ್ನು ನಿಂದಿಸಿ ಭೇದಕ್ಕೆ ಮಿಥ್ಯಾತ್ವವನ್ನು ಪ್ರತಿಪಾದನೆ ಮಾಡಲು ಈ ಶ್ಲೋಕವನ್ನು ಸ್ಥಾನವನ್ನಾಗಿ ಉಪಯೋಗಿಸಿಕೊಳ್ಳುತ್ತಾರೆ. ಆದರಂತೆ ನಾವೂ ಸಹ 'ಏವಂ ಧರ್ಮಾನ್' ಎಂಬ ಶ್ರುತಿಯನ್ನು ಧರ್ಮಗಳನ್ನು ಪ್ರತ್ಯೇಕವಾಗಿ ತಿಳಿದರೆ ಅನರ್ಥವಾಗುತ್ತದೆಂಬ ನಿಂದನೆಗೋಸ್ಕರ ಉಪಯೋಗಿಸಿಕೊಂಡು ಧರ್ಮಗಳು

ಪ್ರತ್ಯೇಕವಾಗಿರುವುದಿಲ್ಲವೆಂದು ಸಾಧಿಸುತ್ತೇವೆ. ಮತ್ತು ಹರಿ-ಹರ-ಬ್ರಹ್ಮ ಎಂಬ ಮೂರು ದೇವತೆಗಳ ಭೇದಜ್ಞಾನವನ್ನು ನಿಂದಿಸಿದರೆ ಅವರಿಗಿರುವ ಭೇದವು ಮಾತ್ರ ಇಲ್ಲವೆಂದು ಆಗುತ್ತದೆಯೇ ಹೊರತು ಆ ದೇವತೆಗಳೇ ಇಲ್ಲವೆಂದು ಅರ್ಥವಾಗುವುದಿಲ್ಲ. ಅದರಂತೆ ನಾವೂ ಸಹ ಭಿನ್ನವಾದ ಧರ್ಮಗಳ ಜ್ಞಾನದ ನಿಂದೆಯಲ್ಲಿ ಭಿನ್ನವಾದ ಧರ್ಮಗಳೇ ಇರುವುದಿಲ್ಲವೆಂಬ ವಿಷಯದಲ್ಲಿ ಈ ಶ್ರುತಿಯನ್ನು ವ್ಯಾಖ್ಯಾನ ಮಾಡುತ್ತೇವೆ. ಹೀಗೆ ಉಪಮಾನ-ಉಪಮೇಯಭಾವವನ್ನು ಸ್ಪಷ್ಟವಾಗಿ ತಿಳಿಯಬೇಕು.

**ಸರ್ವತ್ರ ಭೇದಮಿಥ್ಯಾತ್ವಂ ಸಾಧಯಂಸ್ತ್ವಂ ದುರಾಗ್ರಹೀ ।**
**ಕಥಮದ್ಯಾದ್ವಿತೀಯಸ್ಮಿನ್ ಭಿದಾಮಾಧಾತುಮಿಚ್ಛಸಿ ॥ ೬೨೦ ॥**

**ಅರ್ಥ–** ಸರ್ವತ್ರ = ಎಲ್ಲೆಡೆಯೂ, ಭೇದಮಿಥ್ಯಾತ್ವಂ = ಭೇದದ ಮಿಥ್ಯಾತ್ವವನ್ನು, ಸಾಧಯನ್= ಸಾಧಿಸುವ, ದುರಾಗ್ರಹೀ= ದುರಾಗ್ರಹವುಳ್ಳ, ತ್ವಂ = ನೀನು, ಅದ್ಯ = ಈಗ, ಅದ್ವಿತೀಯೇ ಅಸ್ಮಿನ್ = ಅದ್ವಿತೀಯನಾದ ಬ್ರಹ್ಮನಲ್ಲಿ, ಭಿದಾಂ = ಧರ್ಮಭೇದವನ್ನು ಆದಾತುಂ = ಹೇಳಲು, ಕಥಂ ಇಚ್ಛಸಿ = ಹೇಗೆ ಇಚ್ಛಿಸುತ್ತಿ?

**ಅನುವಾದ–** ಎಲ್ಲ ಶ್ರುತಿ-ಸ್ಮೃತಿ-ಪುರಾಣಗಳನ್ನು ಭೇದಮಿಥ್ಯಾತ್ವಪರವಾಗಿ ವ್ಯಾಖ್ಯಾನ ಮಾಡುವ ದುರಾಗ್ರಹವುಳ್ಳ ನೀನು, ಪ್ರಕೃತ, ಪರಮಾತ್ಮನಿಗೂ ಅವನ ಧರ್ಮಗಳಿಗೂ ಭೇದವಿದೆಯೆಂದು ಸಾಧಿಸಲು ಏಕೆ ಹೊರಟಿದ್ದಿ? (ನಿನ್ನ ಸಿದ್ಧಾಂತವನ್ನೇ ನೀನು ಮರೆತಿರುವಿಯೇನು?)

**ಭಾವವಿಲಾಸಿನೀ–** ಏವಂ ಶಂಕಿತುರ್ಮಾಯಾವಾದಿನಃ ಪ್ರಕಾರಾಂತರೇಣ ಸ್ವವ್ಯಾಹತಿಮಾಹ – **ಸರ್ವತ್ರೇತಿ** ॥ ಭಿದಾಂ ಧರ್ಮಭೇದಮ್ ॥ ೬೨೦ ॥

**ವಿವರಣೆ–** ಹೀಗೆ ಆಶಂಕಿಸುವ ಮಾಯಾವಾದಿಗೆ, ಮತ್ತೊಂದು ಪ್ರಕಾರದಿಂದ ವ್ಯಾಹತಿಯನ್ನು ಹೇಳುತ್ತಿದ್ದಾರೆ. ಎಲ್ಲೆಡೆಯೂ ಭೇದಮಿಥ್ಯಾತ್ವವನ್ನೇ ಪ್ರತಿಪಾದಿಸುವ, ನೀನು ಇಲ್ಲಿ ಧರ್ಮಭೇದಸತ್ಯತ್ವವನ್ನು ಸಮರ್ಥನೆ ಮಾಡಿದರೆ ವ್ಯಾಹತಿದೋಷವು ಬರುತ್ತದೆಂದು ಅಭಿಪ್ರಾಯ.

**ಕಿಂಚೇಯಂ ಶ್ರುತಿರೇವಾದೌ ನೇಹ ನಾನಾಸ್ತಿ ಕಿಂಚನ ।**
**ಇತ್ಯಾದಿನಾ ಭಿದಾಮೇನಾಂ ನಿಷೇಧತಿ ಪದೇಪದೇ ॥ ೬೨೧ ॥**

**ಅರ್ಥ–** ಕಿಂಚ = ಮತ್ತು, ಇಯಂ = ಈ ಕಾಠಕಶ್ರುತಿಯು, ಆದೌ = ಮೊದಲು, ನೇಹ ನಾನಾಸ್ತಿ ಕಿಂಚನ = ಭಗವಂತನ ರೂಪ, ಕ್ರಿಯೆ, ಅವತಾರಗಳಲ್ಲಿ ಭೇದವಿರುವುದಿಲ್ಲ. ಇತ್ಯಾದಿನಾ = ಇವೇ ಮೊದಲಾದ ವಾಕ್ಯಗಳಿಂದ, ಪದೇಪದೇ = ಮತ್ತೆ ಮತ್ತೆ, ಏನಾಂ = ಈ, ಭಿದಾಂ = ಭೇದವನ್ನು ನಿಷೇಧತಿ = ನಿಷೇಧ ಮಾಡುತ್ತಿದೆ.

**ಅನುವಾದ–** 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಇತ್ಯಾದಿ ಕಾಠಕಶ್ರುತಿಯು ಪ್ರಾರಂಭದಲ್ಲಿ 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ವಾಕ್ಯಗಳಿಂದ ಪರಮಾತ್ಮನಿಗೂ ಅವನ ಧರ್ಮಗಳಿಗೂ ಯಾವುದೇ ಭೇದವಿರುವುದಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತಿದೆ. ಹೀಗೆ ಪುನಃ ಪುನಃ ಭೇದವನ್ನು ನಿಷೇಧ ಮಾಡುತ್ತಿರುವುದರಿಂದ, ಪರಮಾತ್ಮನಿಗೂ ಅವನ ಧರ್ಮಗಳಿಗೂ ಭೇದವನ್ನು ಸರ್ವಥಾ ತಿಳಿಯಬಾರದು.

**ಭಾವವಿಲಾಸಿನೀ–** ಅಧುನಾಽಸ್ಯಾಮೇವೋಪನಿಷದಿ 'ನೇಹ ನಾನಾಸ್ತಿ ಕಿಂಚನ' ಇತ್ಯಾದೌ ಬ್ರಹ್ಮಣಿ ಸ್ವಗತನಾನಾತ್ವಸ್ಯೈವ ನಿಷೇಧಾದರ್ಥಾಭಾವಪ್ರಯುಕ್ತ್ಯೈವ ದರ್ಶನನಿಂದೇತ್ಯಾಹ – **ಕಿಂಚೇಯ-ಮಿತಿ** ॥ ೬೨೧-೬೨೨ ॥

**ವಿವರಣೆ–** ಅಲ್ಲದೇ ಈ ಉಪನಿಷತ್ತಿನಲ್ಲಿ ಇದಕ್ಕಿಂತ ಹಿಂದಿನ ವಾಕ್ಯದಲ್ಲಿ ಬ್ರಹ್ಮನಲ್ಲಿ ಸ್ವಗತನಾನಾತ್ವವನ್ನು ನಿಷೇಧಿಸಲಾಗಿದೆ. ಆದ್ದರಿಂದ ಈ ವಾಕ್ಯದಲ್ಲಿ ಭಗವಂತನ ಧರ್ಮಗಳನ್ನು ಭಿನ್ನಗಳೆಂದು ತಿಳಿಯಬಾರದೆಂದು ಎಚ್ಚರಿಸುವುದು ಭಗವಂತನಲ್ಲಿ ಭಿನ್ನ ಧರ್ಮಗಳಿಲ್ಲದಿರುವ ಪ್ರಯುಕ್ತವೇ ಎಂದು ತಿಳಿಯುವುದರಿಂದ ಭಗವದ್ಧರ್ಮಗಳಲ್ಲಿ ಭೇದವಿಲ್ಲವೆಂದು ಸಿದ್ಧವಾಗುತ್ತದೆ.

ಅತಸ್ತದ್‍ಜ್ಞಾನನಿಂದಾಽಪಿ ಮಿಥ್ಯಾಭೂತಾರ್ಥದೃಕ್ತ್ವತಃ ।
ಇತಿ ಮನ್ಯಾಮಹೇ ತಸ್ಮಾದ್ಧರ್ಮಾ ಧರ್ಮ್ಯಾತ್ಮಕಾಃ ಪ್ರಭೋಃ ॥ ೬೨೨ ॥

**ಅರ್ಥ–** ಅತಃ = ಆದ್ದರಿಂದ, ಮಿಥ್ಯಾಭೂತಾರ್ಥದೃಕ್ತ್ವತಃ= ಮಿಥ್ಯಾಭೂತವಾದ ಧರ್ಮಭೇದರೂಪವಾದ ಅರ್ಥವಿಷಯಕಜ್ಞಾನವಾದ ಕಾರಣದಿಂದಲೇ, ತದ್‍ಜ್ಞಾನನಿಂದಾಽಪಿ= ಭೇದವನ್ನು ತಿಳಿಯಬಾರದೆಂಬ ಭೇದಜ್ಞಾನದ ನಿಂದೆಯು, ಇತಿ = ಹೀಗೆ, ವಯಂ= ನಾವು, ಮನ್ಯಾಮಹೇ = ತಿಳಿಯುತ್ತೇವೆ. ತಸ್ಮಾತ್ = ಆದ್ದರಿಂದ, ಪ್ರಭೋಃ = ಸ್ವಾಮಿಯಾದ ಭಗವಂತನ, ಧರ್ಮಾಃ = ಸರ್ವಜ್ಞತ್ವಾದಿ ಧರ್ಮಗಳು, ಧರ್ಮ್ಯಾತ್ಮಕಾಃ = ಭಗವತ್‍ಸ್ವರೂಪವೇ ಆಗಿರುತ್ತವೆ.

**ಅನುವಾದ–** ಮಿಥ್ಯಾಭೂತಾರ್ಥವಿಷಯಕಜ್ಞಾನವಾದುದರಿಂದಲೇ ಧರ್ಮಭೇದ-ಜ್ಞಾನವು ನಿಂದಿತವಾಗಿದೆ ಎಂದು ನಾವು ತಿಳಿಯುತ್ತೇವೆ. ಆದ್ದರಿಂದ ಸ್ವಾಮಿಯಾದ ಪರಮಾತ್ಮನಲ್ಲಿ ಇರುವ ಸರ್ವಜ್ಞತ್ವಾದಿ ಧರ್ಮಗಳೆಲ್ಲವೂ ಭಗವತ್‍ಸ್ವರೂಪವೇ ಆಗಿರುತ್ತವೆಂದು ಸಿದ್ಧವಾಯಿತು.

**ವಿವರಣೆ–** ಭಗವಂತನಿಗೂ ಅವನ ಧರ್ಮಗಳಿಗೂ ಅಭೇದವು ಸಿದ್ಧವಾಯಿತು.

ಧರ್ಮಿಸತ್ತ್ವೇಽಪಿ ಯನ್ನಶ್ಯೇತ್ ತತ್ರ ಭೇದೋಽಪಿ ಮೃಗ್ಯತೇ ।
ಭೇದಸ್ಯಾಸಾಧಾರಣಂ ಹಿ ಕಾರ್ಯಂ ನಾಶಾವಿನಾಶನಮ್ ॥ ೬೨೩ ॥

**ಅರ್ಥ–** ಧರ್ಮಿಸತ್ತ್ವೇ ಅಪಿ = ಧರ್ಮಿಯು ಇದ್ದಂತೆಯೇ, ಯತ್=ಯಾವ ಧರ್ಮವು, ನಶ್ಯೇತ್ = ನಾಶವಾಗುತ್ತದೋ, ತತ್ರ = ಅಲ್ಲಿ ಭೇದಃ ಅಪಿ = ಅಭೇದದ ಜೊತೆಗೆ ಭೇದವೂ ಕೂಡ, ಮೃಗ್ಯತೇ = ಹುಡುಕಲ್ಪಡುತ್ತದೆ, ನಾಶಾವಿನಾಶನಂ= ಒಂದರ ನಾಶವಾದರೂ ಮತ್ತೊಂದರ ನಾಶವಾಗದಿರುವಿಕೆಯು, ಭೇದಸ್ಯ = ಭೇದದ, ಅಸಾಧಾರಣಂ ಕಾರ್ಯಮ್ = ಅಸಾಧಾರಣ ಕಾರ್ಯವಷ್ಟೆ

**ಅನುವಾದ–** ಧರ್ಮಿಯು ಇರುವಾಗಲೇ ಧರ್ಮವು ನಾಶ ಹೊಂದಿದರೆ, ಅಂತಹ ಸ್ಥಳದಲ್ಲಿ ಧರ್ಮ ಹಾಗೂ ಧರ್ಮಿಗಳಿಗೆ ಅಭೇದದೊಂದಿಗೆ ಭೇದವನ್ನೂ ಅಂಗೀಕರಿಸಬೇಕು. ಏಕೆಂದರೆ, ಭೇದದ ಅಸಾಧಾರಣ ಕಾರ್ಯವೆಂದರೆ ಒಂದು ಪದಾರ್ಥವು ನಷ್ಟವಾದರೂ ಮತ್ತೊಂದು ಪದಾರ್ಥದ ನಾಶವಾಗದಿರುವಿಕೆ.

**ಭಾವವಿಲಾಸಿನೀ–** ಇದಾನೀಂ ಭಗವದ್ಧರ್ಮಾಣಾಂ ಭೇದಾಭೇದಶಂಕಾಂ ಸಯುಕ್ತಿಕಂ ನಿರಾಕರೋತಿ – **ಧರ್ಮಿಸತ್ತ್ವೇಽಪೀತಿ** ॥ ಯದ್ರೂಪಾದಿಕಮ್ । ನಾಶಾವಿನಾಶನಂ ಏಕನಾಶೇಽಪ್ಯಪರಾವಿನಾಶನಮ್ । ಇತ್ಯತ್ರ ದೃಷ್ಟಾಂತಮಾಹ– **ಯನ್ನಶ್ಯೇತ್ ಇತಿ** ॥ ಯತ್ ಯಸ್ಮಾತ್ ಹಿ ಯಸ್ಮಾನ್ನಾಶಾವಿನಾಶನಂ ಭೇದಾಸಾಧಾರಣಕಾರ್ಯಮ್, ತಸ್ಮಾದಿತಿ **ಪೂರ್ವೇಣಾನ್ವಯಃ** ॥ ೬೨೩ ॥

**ವಿವರಣೆ–** ಈಗ ಭಗವದ್‌ಧರ್ಮಗಳಿಗೆ ಭೇದಾಭೇದವನ್ನು ಆಶಂಕಿಸಿ, ಯುಕ್ತಿಬದ್ಧವಾಗಿ ನಿರಾಕರಣೆ ಮಾಡುತ್ತಿದ್ದಾರೆ-

ಧರ್ಮ-ಧರ್ಮಿಗಳಲ್ಲಿ ಧರ್ಮವು ನಾಶವಾಗಿ, ಧರ್ಮಿ ಮಾತ್ರ ಉಳಿದರೆ, ಅಂತಹ ಸ್ಥಳದಲ್ಲಿ ಭೇದಾಭೇದವನ್ನು ಒಪ್ಪಬೇಕು. ಆದರೆ ಪರಮಾತ್ಮನ ಧರ್ಮವು ಪರಮಾತ್ಮನನ್ನು ಬಿಟ್ಟು ಎಂದೂ ಸಹ ನಾಶವಾಗದ ಕಾರಣ ಭೇದಾಭೇದವನ್ನು ಒಪ್ಪಬೇಕಾಗಿಲ್ಲ. ಏಕೆಂದರೆ, ಭೇದವನ್ನು ಒಪ್ಪುವ ಸ್ಥಳದಲ್ಲಿ ಎರಡರಲ್ಲಿ ಒಂದರ ನಾಶವನ್ನು ಅವಶ್ಯ ಹೇಳಬೇಕು.

**ಅನಶ್ಯದ್ರಿಪುಹಸ್ತೋ ಯದ್ ಭಿನತ್ತ್ಯನ್ಯಂ ವಿನಾಶಿನಮ್ ॥ ೬೨೪ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಅನಶ್ಯದ್ರಿಪುಹಸ್ತಃ = ನಾಶವಾಗದಿರುವ ಶತ್ರುವಿನ ಕೈಯು, ವಿನಾಶಿನಂ = ನಾಶವಾಗುವ, ಅನ್ಯಂ = ತನಗಿಂತ ಭಿನ್ನವಾದ ಶತ್ರುವಿನ ಕೈಯನ್ನು, ಭಿನತ್ತಿ = ಕತ್ತರಿಸುತ್ತದೆ.

**ಅನುವಾದ–** ತನ್ನ ಕೈ ನಾಶವಾಗದಿದ್ದಾಗ ಮಾತ್ರ ಶತ್ರುವಿನ ಕೈಯನ್ನು ನಾಶ ಮಾಡಲು ಸಾಧ್ಯ. ಇಂತಹ ಸ್ಥಳದಲ್ಲಿ ಭೇದವನ್ನೊಪ್ಪಬೇಕಾಗುತ್ತದೆ. ಆದರೆ ಪ್ರಕೃತ, ಪರಮಾತ್ಮನ ಗುಣಗಳು ಹಾಗೂ ಸಾಮರ್ಥ್ಯವಿಶೇಷಗಳು ನಿತ್ಯವಾಗಿರುವುದರಿಂದ ಇಂತಹ ಭೇದಕ್ಕೆ ಅವಕಾಶವೇ ಇರುವುದಿಲ್ಲ.

**ಭಾವವಿಲಾಸಿನೀ–** ಅತ್ರ ದೃಷ್ಟಾಂತಮಾಹ – **ಅನಶ್ಯದಿತಿ** ॥ ಯದ್ ಯಸ್ಮಾದ್ಭಿನತ್ತಿ ವಿದಾರಣ-ಮನ್ಯೋನ್ಯಾಭಾವರೂಪಂ ಭೇದಂ ಚ ಸಾಧಯತಿ । ಘಾತಕಾದ್ಭೇದಾಭಾವೇ ವಧ್ಯಭಾವಸ್ಯೈವಾಯೋಗಾದಿತಿ ಭಾವಃ ॥ ೬೨೪ ॥

**ವಿವರಣೆ–** 'ಪರಮಾತ್ಮನ ಧರ್ಮಗಳು ವ್ಯಾವರ್ತಕಗಳು' ಎಂದರೆ ಪರಮಾತ್ಮನಲ್ಲಿ ಇತರ ಭೇದಸಂಪಾದಕಗಳು ಎಂದು ಅರ್ಥ. ಆದ್ದರಿಂದ ಅವು ಹಸ್ತವಿದ್ದಂತೆ. ಇನ್ನೊಬ್ಬ ಹಸ್ತಗಳು ಶತ್ರುವು ತನ್ನ ಹತ್ತಿರ ಬರದಂತೆ ನಿವಾರಿಸುತ್ತವೆ. ಹಾಗೆಯೇ ಧರ್ಮಗಳು ಇತರಾಭೇದವು ತನ್ನಲ್ಲಿ ಪ್ರಸಕ್ತವಾಗದಂತೆ ನಿವಾರಿಸುತ್ತವೆ. ಧರ್ಮಿ ಇರುವವರೆಗೂ ವ್ಯಾವೃತ್ತಿ ಇರುತ್ತದೆ. ವ್ಯಾವೃತ್ತಿ ಇರುವವರೆಗೂ ವ್ಯಾವರ್ತಕವಿರುತ್ತದೆ. ವ್ಯಾವರ್ತಕವಿಲ್ಲದಿದ್ದರೆ ವ್ಯಾವೃತ್ತಿಯೇ ಇರುವುದಿಲ್ಲವಾದ ಕಾರಣ ಇತರಾಭೇದವನ್ನು ಕತ್ತರಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಭಗವದ್ಧರ್ಮಗಳು ನಿತ್ಯ. ಅವುಗಳಿಗೆ ನಾಶವಿಲ್ಲವೆಂದು ಒಪ್ಪಬೇಕೆಂದು ಅಭಿಪ್ರಾಯ.

**ಸಾರ–** ಹಿಂದೆ ಹೇಳಿದಕ್ಕೆ ದೃಷ್ಟಾಂತವನ್ನು ನೀಡುತ್ತಿದ್ದಾರೆ. ತುಂಡಾಗದ ಕೈಯು ಶತ್ರುವಿನ ಹಸ್ತವನ್ನು ತುಂಡರಿಸುವಾಗ ಮಾತ್ರ ಭೇದವನ್ನು ಒಪ್ಪಬೇಕು. ಭೇದವನ್ನು ಒಪ್ಪದಿದ್ದರೆ ಶತ್ರುವಿನ ಹಸ್ತಕ್ಕೆ ವಧ್ಯತ್ವವೇ ಕೂಡುವುದಿಲ್ಲ.

**ನಾಪ್ಯೈಕ್ಯವಾಕ್ಯಬಲತೋ ವಿರೋಧಿಗುಣವಿಪ್ಲವಃ ॥ ೬೨೫ ॥**

**ಅರ್ಥ–** ಐಕ್ಯವಾಕ್ಯಬಲತಃ ಅಪಿ= 'ತತ್ವಮಸಿ' ಮೊದಲಾದ ಐಕ್ಯವಾಕ್ಯಗಳ ಬಲದಿಂದಲೂ ವಿರೋಧಿಗುಣವಿಪ್ಲವಃ = ಐಕ್ಯಕ್ಕೆ ವಿರೋಧಿಯಾದ ಸರ್ವಜ್ಞತ್ವಾದಿ ಗುಣಗಳ ನಿರಾಕರಣೆಯು, ನ= ಸಿದ್ಧವಾಗುವುದಿಲ್ಲ.

**ಅನುವಾದ–** 'ತತ್ವಮಸಿ' ಮೊದಲಾದ ಐಕ್ಯವಾಕ್ಯಗಳ ಬೆಂಬಲದಿಂದಲೂ ಪರಮಾತ್ಮನಲ್ಲಿ ಇರುವಂತಹ ಸರ್ವಜ್ಞತ್ವಾದಿ ಗುಣಗಳಿಗೆ ನಾಶವನ್ನು ಸಾಧಿಸಲು ಬರುವುದಿಲ್ಲ.

**ಭಾವವಿಲಾಸಿನೀ–** ಇದಾನೀಂ ತತ್ತ್ವಮಸ್ಯಾದ್ಯೈಕ್ಯವಾಕ್ಯಬಲಾದಪಿ ನ ಗುಣಮಿಥ್ಯಾತ್ವಮಿತ್ಯಾಹ – **ನಾಪೀತಿ** ॥ ೬೨೫ ॥

**ವಿರೋಧಿಗುಣಸಂತ್ಯಾಗೇ ಸ್ಯಾದೈಕ್ಯಂ ವಾಕ್ಯಗೋಚರಮ್ ।**
**ಅವಿರುದ್ಧೋ ಹಿ ವಾಕ್ಯಾರ್ಥೋ ಯೋಗ್ಯತಾ ಯದಪೇಕ್ಷಿತಾ॥ ೬೨೬ ॥**

**ಯದಿ ವಾಕ್ಯೋದಿತಾದ್ವೈತಾದೇವ ತದ್ಗುಣಮೋಚನಮ್ ।**
**ತದಾನ್ಯೋನ್ಯಾಶ್ರಯೋ ದೋಷೋ ವಾಕ್ಯಮರ್ಥಾಂತರೇ ನಯೇತ್ ॥ ೬೨೭ ॥**

**ಅರ್ಥ–** ವಿರೋಧಿಗುಣಸಂತ್ಯಾಗೇ = ವಾಕ್ಯಗಳಿಂದ ಸಿದ್ಧವಾದ ವಿರುದ್ಧಗುಣವನ್ನು ಬಿಟ್ಟರೆ ಮಾತ್ರ, ಐಕ್ಯಂ = ಜೀವಬ್ರಹ್ಮೈಕ್ಯವು, ವಾಕ್ಯಗೋಚರಂ ಸ್ಯಾತ್ = 'ತತ್ವಮಸಿ' ಮೊದಲಾದ

ವಾಕ್ಯಗಳಿಗೆ ವಿಷಯವಾಗಿ ಸಿದ್ಧವಾಗುತ್ತದೆ. ಯತಃ= ಯಾವ ಕಾರಣದಿಂದ, ಯೋಗ್ಯತಾ= ಯೋಗ್ಯತೆಯು, ಅಪೇಕ್ಷಿತಾ= ಶಾಬ್ದಬೋಧಕ್ಕೆ ಅವಶ್ಯಕವಾಗಿದೆಯೋ, ತತಃ= ಆದ್ದರಿಂದ, ಅವಿರುದ್ಧಃ= ವಿರೋಧವಿಲ್ಲದ್ದೇ, ವಾಕ್ಯಾರ್ಥಃ ಹಿ= ವಾಕ್ಯದ ಅರ್ಥವಾಗಿದೆ.

ಯದಿ = ಒಂದು ವೇಳೆ, ವಾಕ್ಯೋದಿತಾದ್ವೈತಾತ್ = 'ತತ್ವಮಸಿ' ವಾಕ್ಯದಿಂದ ಹೇಳಲ್ಪಟ್ಟ ಅದ್ವೈತದಿಂದಲೇ, ತದ್ಗುಣಮೋಚನಂ = ಗುಣಪೂರ್ಣತ್ವವನ್ನು ಬಿಡುವುದಾದರೆ, ತದಾ= ಆವಾಗ, ಅನ್ಯೋನ್ಯಾಶ್ರಯದೋಷಃ = 'ಅನ್ಯೋನಾಶ್ರಯ' ಎಂಬ ದೋಷವು, ವಾಕ್ಯಂ= 'ತತ್ವಮಸಿ' ಎಂಬ ವಾಕ್ಯವನ್ನು ಅರ್ಥಾಂತರೇ = ಸಾದೃಶ್ಯ ಮೊದಲಾದ ಬೇರೆ ಅರ್ಥದ ಕಡೆಗೆ, ನಯೇತ್ = ತೆಗೆದುಕೊಂಡು ಹೋಗುತ್ತದೆ.

**ಅನುವಾದ–** ಜೀವಬ್ರಹ್ಮರಿಗೆ ಐಕ್ಯವನ್ನು ಸಮರ್ಥಿಸುವುದಕ್ಕೆ ಪರಮಾತ್ಮನ ಗುಣಪೂರ್ಣತ್ವವು ವಿರೋಧಿಯಾಗಿದೆ. ಹಾಗಾಗಿ ಅದನ್ನು ಬಿಟ್ಟರೆ ಮಾತ್ರ ಐಕ್ಯವು ತತ್ತ್ವಮಸಿ ಇತ್ಯಾದಿ ವಾಕ್ಯಗಳಿಂದ ಪ್ರತಿಪಾದಿತವಾದೀತು. ಏಕೆಂದರೆ ಯೋಗ್ಯತೆಯೂ ಶಾಬ್ದಬೋಧಕ್ಕೆ ಅವಶ್ಯಕವಾದ್ದರಿಂದ ಯಾವುದೇ ಪ್ರಮಾಣದ ವಿರೋಧವಿಲ್ಲದ ವಿಷಯವನ್ನೇ ವಾಕ್ಯದ ಅರ್ಥವೆಂದು ಪರಿಗಣಿಸಬೇಕು.

'ತತ್ವಮಸಿ' ವಾಕ್ಯವು ಐಕ್ಯವನ್ನು ಪ್ರತಿಪಾದನೆ ಮಾಡುತ್ತಿರುವ ಕಾರಣದಿಂದಲೇ ಗುಣಪೂರ್ಣತ್ವವನ್ನು ಬಿಡಬೇಕೆಂದು ಹೇಳಿದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. ಅದಕ್ಕೋಸ್ಕರ, ಈ ಅನ್ಯೋನ್ಯಾಶ್ರಯದೋಷವು ವಾಕ್ಯವನ್ನು ಬೇರೆ ಅರ್ಥದ ಕಡೆಗೆ ತೆಗೆದುಕೊಂಡು ಹೋಗುತ್ತದೆ.

**ಭಾವವಿಲಾಸಿನೀ–** ವಾಕ್ಯಂ ತತ್ವಮಸ್ಯಾದಿವಾಕ್ಯಮ್ । ಅರ್ಥಾಂತರೇ ಸಾದೃಶ್ಯಾದಿರೂಪೇ ॥
॥ ೬೨೬-೬೨೭ ॥

**ವಿವರಣೆ–** 'ವಹ್ನಿನಾ ಸಿಂಚತಿ' ಎಂಬ ವಾಕ್ಯವು ವಾಕ್ಯಾರ್ಥಜ್ಞಾನಜನಕವಾಗುವುದಿಲ್ಲ. ಏಕೆಂದರೆ ಬೆಂಕಿಯು ಸಿಂಪಡಿಸುವಿಕೆಗೆ ಸಾಧನ ಎಂಬ ಅರ್ಥವು ಬಾಧಿತವಾಗಿದೆ. ಇಲ್ಲಿ ಯೋಗ್ಯತೆ ಇಲ್ಲ. ಹಾಗೆಯೇ ಸರ್ವಜ್ಞತ್ವಾದಿಗುಣಗಳಿರುವಾಗ ಐಕ್ಯವನ್ನು ಹೇಳಿದರೆ ಯೋಗ್ಯತೆ ಇಲ್ಲದೆ ಬಾಧಿತವಾಗುತ್ತದೆ. ಅದಕ್ಕಾಗಿ ಐಕ್ಯವನ್ನು ಹೇಳಲು ವಿರೋಧಿ ಗುಣಗಳನ್ನು ತ್ಯಾಗ ಮಾಡಬೇಕು ಎಂದು ಅದ್ವೈತಿಗಳು ಹೇಳುತ್ತಾರೆ.

ಅದಕ್ಕೆ ನಾವು ಗುಣಪೂರ್ಣತ್ವಾರ್ಥವನ್ನು ಬಿಡಲು ಯಾವುದೇ ಆಧಾರವಿಲ್ಲವೆಂದು ಪ್ರತ್ಯುತ್ತರ ಹೇಳುತ್ತೇವೆ. ಈಗ ಪುನಃ ಅದ್ವೈತಿಗಳು 'ತತ್ವಮಸಿ' ಎಂಬ ವಾಕ್ಯದ ಆಧಾರದಿಂದಲೇ ಗುಣಪೂರ್ಣತ್ವವನ್ನು ಬಿಡುತ್ತೇವೆನ್ನುತ್ತಿದ್ದಾರೆ. ಹೀಗೆ ಹೇಳಿದರೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಏಕೆಂದರೆ, 'ತತ್ವಮಸಿ' ಎಂಬ ವಾಕ್ಯವು ಜೀವ ಹಾಗೂ ಪರಮಾತ್ಮನಿಗೆ ಐಕ್ಯವನ್ನು ಪ್ರತಿಪಾದನೆ ಮಾಡಿದರೆ, ಈ ವಾಕ್ಯದ ಆಧಾರದಿಂದ

ಪರಮಾತ್ಮನು ಗುಣಪರಿಪೂರ್ಣನಲ್ಲವೆಂದು ಸಿದ್ಧವಾಗುತ್ತದೆ. ಆದರೆ ಪರಮಾತ್ಮನು ಗುಣಪರಿಪೂರ್ಣನಲ್ಲವೆಂದು ಸಿದ್ಧವಾದರೆ ಮಾತ್ರ 'ತತ್ವಮಸಿ' ವಾಕ್ಯವು ಜೀವ ಹಾಗೂ ಪರಮಾತ್ಮರಿಗೆ ಐಕ್ಯವನ್ನು ಹೇಳಲು ಸಮರ್ಥವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುವ ಕಾರಣ 'ತತ್ವಮಸಿ' ಎಂಬ ವಾಕ್ಯಕ್ಕೆ ಜೀವನು ಬ್ರಹ್ಮನ ಸಾದೃಶ್ಯವನ್ನು ಹೊಂದಿದ್ದಾನೆಂದೇ ವ್ಯಾಖ್ಯಾನ ಮಾಡಬೇಕು.

**ಕಿಂಚೈಕತೋಕ್ತಿರ್ನಾಯುಕ್ತಾ ಸಾದೃಶ್ಯೈಕ್ಯಸ್ಯ ಸಂಭವಾತ್ ।**
**ಸತ್ಯನಿತ್ಯಗುಣತ್ಯಾಗಸ್ಸರ್ವಥಾ ನೋಪಪದ್ಯತೇ ॥ ೬೨೮ ॥**

**ಅರ್ಥ–** ಕಿಂಚ = ಮತ್ತು, ಸಾದೃಶ್ಯೈಕ್ಯಸ್ಯ = ಸಾದೃಶ್ಯರೂಪವಾದ ಐಕ್ಯವು, ಸಂಭವಾತ್ = ಕೂಡುವುದರಿಂದ. ಏಕತೋಕ್ತಿಃ = ತತ್ವಮಸ್ಯಾದಿ ಐಕ್ಯವಾಕ್ಯವು, ನ ಅಯುಕ್ತಾ = ಅಯುಕ್ತವಲ್ಲ. ಸತ್ಯನಿತ್ಯಗುಣತ್ಯಾಗಃ = ಸತ್ಯವೂ, ನಿತ್ಯವೂ ಆದ ಗುಣಗಳನ್ನು ಬಿಡುವುದು, ಸರ್ವಥಾ = ಯಾವುದೇ ರೀತಿಯಿಂದಲೂ, ನ ಉಪಪದ್ಯತೇ = ಯುಕ್ತವಾಗುವುದಿಲ್ಲ.

**ಅನುವಾದ–** 'ತತ್ತ್ವಮಸಿ' ಎಂಬ ವಾಕ್ಯಕ್ಕೆ ಸಾದೃಶ್ಯಾಭೇದವೆಂಬ ಅರ್ಥವನ್ನು ಹೇಳಬಹುದು. ಆದ್ದರಿಂದ ಅದು ವ್ಯರ್ಥವಾಗುವುದಿಲ್ಲ. ಆದರೆ ಸತ್ಯ ಮತ್ತು ನಿತ್ಯವಾದ ಪರಮಾತ್ಮನ ಗುಣಗಳನ್ನು ತ್ಯಾಗಮಾಡುವುದು ಸರ್ವಥಾ ಸಾಧ್ಯವಿಲ್ಲ.

**ಭಾವವಿಲಾಸಿನೀ–** ಸಾವಕಾಶತ್ವಾದಪಿ ಐಕ್ಯವಾಕ್ಯಂ ನ ನಿರವಕಾಶಸಗುಣಶ್ರುತ್ಯುಕ್ತಗುಣ-ಬಾಧಕಮಿತ್ಯಾಹ – **ಕಿಂಚೇತಿ** ॥ ಸತ್ಯನಿತ್ಯೇತ್ಯನೇನ ಸಗುಣಶ್ರುತೇರ್ನಿರವಕಾಶತ್ವಂ ದ್ಯೋತಯತಿ ॥ ೬೨೮ ॥

**ವಿವರಣೆ–** ತತ್ವಮಸಿ ವಾಕ್ಯಕ್ಕೆ ಸಾವಕಾಶತ್ವ ಸಮರ್ಥನೆ:-

'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಶ್ರುತಿಯು ಸತ್ಯತ್ವಾದಿ ಗುಣಗಳನ್ನು ಬ್ರಹ್ಮನಲ್ಲಿ ಹೇಳುತ್ತಿದೆ. ತತ್ವಮಸಿ ಎಂಬ ವಾಕ್ಯವು ಐಕ್ಯವನ್ನು ಹೇಳುತ್ತಿದೆ. ಈ ಎರಡು ವಾಕ್ಯಗಳಲ್ಲಿ 'ಸತ್ಯಂ ಜ್ಞಾನಂ' ಎಂಬ ವಾಕ್ಯವು ನಿರವಕಾಶವಾಗಿ, 'ತತ್ವಮಸಿ' ಎಂಬ ವಾಕ್ಯವು ಸಾವಕಾಶವಾಗಿರುವುದರಿಂದ, ನಿರವಕಾಶವಾದ ಶ್ರುತಿಯೇ ಪ್ರಬಲವಾಗಿರುತ್ತದೆ. ಇಂತಹ ಪ್ರಬಲವಾದ ನಿರವಕಾಶಶ್ರುತಿಯನ್ನು ಸಾವಕಾಶವಾದ ಐಕ್ಯಶ್ರುತಿಯು ಬಾಧಿಸಲು ಸಾಧ್ಯವಿಲ್ಲ. ಏಕೆಂದರೆ, ತತ್ವಮಸಿ ಎಂಬ ವಾಕ್ಯಕ್ಕೆ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುವ ಮೂಲಕವೇ ವ್ಯಾಖ್ಯಾನ ಮಾಡಬೇಕೆಂಬ ನಿಯಮವಿಲ್ಲ. ಹೊರತಾಗಿ, ಜೀವನು ಬ್ರಹ್ಮನ ಸಾದೃಶ್ಯವನ್ನು ಹೊಂದಿದ್ದಾನೆಂದೂ ಸಹ ವ್ಯಾಖ್ಯಾನ ಮಾಡಬಹುದು. ಆದರೆ 'ಸತ್ಯಂ ಜ್ಞಾನಮನಂತಂ' ಇತ್ಯಾದಿ ಶ್ರುತಿಗೆ ಅರ್ಥಾಂತರವನ್ನು ಮಾಡಲು ಸಾಧ್ಯವೇ ಇಲ್ಲ.

**ಅತಃ ಕಸ್ಯ ಬಲಾತ್ಕಸ್ಯ ತ್ಯಾಗ ಇತ್ಯೇವ ಚಿಂತ್ಯತಾಮ್ ।**
**ನ ಚೇಚ್ಛೂನ್ಯೋಕ್ತಿಬಲತಃ ಸತ್ಯಂ ಬ್ರಹ್ಮೈವ ಸಂತ್ಯಜ ॥ ೬೨೯ ॥**

**ಅರ್ಥ–** ಅತಃ = ಆದ್ದರಿಂದ, ಕಸ್ಯ ಬಲಾತ್ = ಯಾವ ವಾಕ್ಯದ ಬಲದಿಂದ, ಕಸ್ಯ = ಯಾವ ವಾಕ್ಯವನ್ನು, ತ್ಯಾಗಃ = ತ್ಯಾಗ ಮಾಡಬೇಕು, ಇತಿ ಏವ = ಎಂಬುದೇ, ಚಿಂತ್ಯತಾಮ್ = ಆಲೋಚಿಸಲ್ಪಡಲಿ, ನ ಚೇತ್ = ಒಂದು ವೇಳೆ ಸಾವಕಾಶ ಶ್ರುತಿಗೆ ಅರ್ಥಾಂತರ ಮಾಡದಿದ್ದರೆ, ಶೂನ್ಯೋಕ್ತಿಬಲತಃ = ಶೂನ್ಯಪ್ರತಿಪಾದಕವಾದ ಶ್ರುತಿಯ ಆಧಾರದಿಂದ, ನಿತ್ಯಂ ಬ್ರಹ್ಮ ಏವ = ನಿತ್ಯನಾದ ಬ್ರಹ್ಮನನ್ನೇ, ಸಂತ್ಯಜ = ಬಿಟ್ಟುಬಿಡು.

**ಅನುವಾದ–** ಹಾಗಾಗಿ ಸಾವಕಾಶ ಹಾಗೂ ನಿರವಕಾಶ ಇವುಗಳಲ್ಲಿ ಯಾವುದರ ಪ್ರಾಬಲ್ಯವನ್ನು ಗಮನಿಸಿ ಯಾವುದನ್ನು ಕಡೆಗಣಿಸಬೇಕೆಂದು ನೀನು ಆಲೋಚನೆ ಮಾಡು. ಅದ್ವೈತಿಯಾದ ನೀನು ನಿರವಕಾಶಶ್ರುತಿಯ ಪ್ರಾಬಲ್ಯವನ್ನು ಒಪ್ಪದಿದ್ದರೆ 'ನಾಸದಾಸೀನ್ನೋ ಸದಾಸೀತ್' ಇತ್ಯಾದಿ ಶೂನ್ಯಪ್ರತಿಪಾದಕವಾದ ಶ್ರುತಿಯ ಆಧಾರದಿಂದ ಎಲ್ಲವನ್ನೂ ಶೂನ್ಯವೆಂದೇ ಹೇಳು. ಬ್ರಹ್ಮನು ನಿತ್ಯನಾಗಿದ್ದಾನೆಂಬ ಶ್ರುತಿಯನ್ನು ಬಿಟ್ಟುಬಿಡು.

**ಭಾವವಿಲಾಸಿನೀ–** ವಿಪಕ್ಷೇ ಬಾಧಕಮಾಹ – **ನಚೇದಿತಿ** ॥ ೬೨೯ ॥

**ವಿವರಣೆ–** ವಿಪಕ್ಷೇ ಬಾಧಕ ತರ್ಕವನ್ನು ಹೇಳುತ್ತಿದ್ದಾರೆ –

'ತತ್ವಮಸಿ' ಶ್ರುತಿಯು ಸಾವಕಾಶವಾಗಿದೆ. 'ಸತ್ಯಂ ಜ್ಞಾನಂ' ಇತ್ಯಾದಿ ಶ್ರುತಿಯು ನಿರವಕಾಶವಾಗಿದೆ. ನಿರವಕಾಶ ಶ್ರುತಿಗೆ ಅನುಸಾರವಾಗಿಯೇ ಸಾವಕಾಶವಾದ 'ತತ್ವಮಸಿ' ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕು. ಒಂದು ವೇಳೆ ಸಾವಕಾಶಶ್ರುತಿಯನ್ನೇ ಎತ್ತಿ ಹಿಡಿದು ನಿರವಕಾಶ ಶ್ರುತಿಯನ್ನು ಕೈ ಬಿಡುವುದಾದರೆ, 'ನಾಸದಾಸೀನ್ನೋ ಸದಾಸೀತ್'ಎಂಬ ಶೂನ್ಯ ಪ್ರತಿಪಾದಕವಾದ ಶ್ರುತಿ ಹೇಳುವಂತೆ ಶೂನ್ಯವೇ ತತ್ವವೆಂದು ಸ್ವೀಕರಿಸಿ ಸತ್ಯಂ ಜ್ಞಾನಂ ಎಂಬ ವಾಕ್ಯವನ್ನು ಪರಿತ್ಯಾಗ ಮಾಡಬೇಕಾಗುತ್ತದೆ. ಆದರೆ ನೀನು ಹಾಗೆ ಮಾಡುವುದಿಲ್ಲ. ಹೀಗೆ, ಬೇರೆ ಕಡೆ ನಿರವಕಾಶ ಶ್ರುತಿಯಿಂದ ಸಾವಕಾಶ ಶ್ರುತಿಗೆ ಬಾಧವನ್ನು ಹೇಳುತ್ತಿರುವ ನೀನು, ಇಲ್ಲಿ ಮಾತ್ರ ಐಕ್ಯಪ್ರತಿಪಾದಕವಾದ ಸಾವಕಾಶ ಶ್ರುತಿಯೇ ಪ್ರಬಲವೆಂದು ಹೇಳಿ, ಇಂತಹ ಐಕ್ಯಶ್ರುತಿಯಿಂದ ನಿರವಕಾಶವಾದ ಸತ್ಯತ್ವ, ನಿತ್ಯತ್ವಪ್ರತಿಪಾದಕವಾದ ಶ್ರುತಿಗೆ ಬಾಧವನ್ನು ಹೇಳುವುದು ಸರ್ವಥಾ ಕೂಡುವುದಿಲ್ಲ. ಆದ್ದರಿಂದ 'ತತ್ವಮಸಿ' ಶ್ರುತಿಗೆ ಅರ್ಥಾಂತರವನ್ನು ಮಾಡುವುದೇ ನಿನಗೆ ನ್ಯಾಯವಾಗಿದೆ.

ವ್ಯಾವಹಾರಿಕತಾ ಸತ್ತಾ ನಿತ್ಯತ್ವಂ ಚಿರಕಾಲತಾ ।
**ಗುಣೇಷು ಯದಿ ತರ್ಹಿ ಸ್ಯಾದ್ ಬ್ರಹ್ಮಣ್ಯಪಿ ತಥೈವ ತೇ ॥ ೬೩೦ ॥**

**ಅರ್ಥ–** ಯದಿ = ಒಂದು ವೇಳೆ, ಗುಣೇಷು = ಗುಣಗಳಲ್ಲಿ ಇರುವ, ಸತ್ತಾ= ಸತ್ಯತ್ವವು, ವ್ಯಾವಹಾರಿಕತಾ = ವ್ಯಾವಹಾರಿಕತ್ವ ರೂಪವಾದರೆ, ನಿತ್ಯತ್ವಂ = ನಿತ್ಯತ್ವವು ಕೂಡ,

ಚಿರಕಾಲತಾ= ದೀರ್ಘಕಾಲ ವೃತ್ತಿತ್ವರೂಪವಾದರೆ, ತದಾ = ಆಗ, ಬ್ರಹ್ಮಣಿ ಅಪಿ= ಬ್ರಹ್ಮನಲ್ಲಿಯೂ ಸಹ, ತೇ = ನಿನಗೆ, ತಥಾ ಏವ= ವ್ಯಾವಹಾರಿಕತ್ವ ಮತ್ತು ದೀರ್ಘಕಾಲ ವೃತ್ತಿತ್ವಗಳ ಅಸ್ತಿತ್ವವು, ಸ್ಯಾತ್= ಇರಬೇಕಾದೀತು.

**ಅನುವಾದ–** ಬ್ರಹ್ಮನ ಗುಣಗಳು, ಸತ್ಯಗಳೆಂದರೆ ವ್ಯಾವಹಾರಿಕಗಳೆಂದೂ ನಿತ್ಯಗಳೆಂದರೆ ದೀರ್ಘಕಾಲ ವೃತ್ತಿಗಳೆಂದೂ ನೀವು ಅಭಿಪ್ರಾಯ ಪಡುವುದಾದರೆ ಬ್ರಹ್ಮನಲ್ಲಿರುವ ಸತ್ಯತ್ವವೂ ವ್ಯಾವಹಾರಿಕತ್ವರೂಪವಾದುದು ಮತ್ತು ನಿತ್ಯತ್ವವೂ ದೀರ್ಘಕಾಲಸ್ಥಿತಿ-ರೂಪವಾದುದು ಎಂದಾಗಲಿ.

**ಭಾವವಿಲಾಸಿನೀ– ಗುಣೇಷು ಸತ್ಯತ್ವಂ ವ್ಯಾವಹಾರಿಕತ್ವಮ್, ನಿತ್ಯತ್ವಂ ಚ ಚಿರಕಾಲೀನತ್ವಮಸ್ತ್ವಿತಿ ಶಂಕಾಂ ಪರಿಹರತಿ – ವ್ಯಾವಹಾರಿಕತೇತಿ ॥ ೬೩೦ ॥**

**ವಿವರಣೆ–** ಗುಣಗಳು ಸತ್ಯವಾಗಿವೆ ಎಂದರೆ ವ್ಯಾವಹಾರಿಕ ಸತ್ಯವಾಗಿದೆ ಎಂದರ್ಥ. ನಿತ್ಯವಾಗಿವೆ ಎಂದರೆ ಬಹುಕಾಲದವರೆಗೆ ಇರುತ್ತವೆಂದರ್ಥ. ಆದ್ದರಿಂದ ಬ್ರಹ್ಮನಿಗೂ ಅವನ ಗುಣಗಳಿಗೂ ಐಕ್ಯವನ್ನು ಹೇಳುವ ಆವಶ್ಯಕತೆಯಿಲ್ಲವೆಂದು ಅದ್ವೈತಿಗಳು ಆಶಂಕಿಸುತ್ತಾರೆ.

ಅದ್ವೈತಿಗಳು ಮೂರು ಬಗೆಯ ಸತ್ಯತ್ವವನ್ನೊಪ್ಪುತ್ತಾರೆ. ಪ್ರಾತಿಭಾಸಿಕ, ವ್ಯಾವಹಾರಿಕ, ಪಾರಮಾರ್ಥಿಕವೆಂದು. ಕೂಡಲೇ ಯಾವುದರ ಬಾಧಜ್ಞಾನ ಬರುತ್ತದೋ, ಅದು ಪ್ರಾತಿಭಾಸಿಕ ಸತ್ಯ. ಉದಾಹರಣೆಗೆ, ಶುಕ್ತಿರಜತವು ಮರುಕ್ಷಣವೇ ರಜತವಲ್ಲವೆಂಬ ಜ್ಞಾನಕ್ಕೆ ವಿಷಯವಾಗಿದೆ. ಆದ್ದರಿಂದ ಶುಕ್ತಿರಜತವು ಪ್ರಾತಿಭಾಸಿಕ ಸತ್ಯವಾಗಿದೆ. ಇನ್ನು ಬಹುಕಾಲದ ತನಕ ಸತ್ಯವೆಂದು ತೋರುವ ಘಟಪಟಾದಿಗಳು ವ್ಯಾವಹಾರಿಕ ಸತ್ಯಗಳಾಗಿವೆ. ಏಕೆಂದರೆ ಮುಂದೆ ಶುದ್ಧ ಬ್ರಹ್ಮನ ಜ್ಞಾನ ಬಂದ ಮೇಲೆ, ಇವೆಲ್ಲವೂ ಮಿಥ್ಯಾಭೂತವೆಂದು ಬಾಧಜ್ಞಾನ ಬರುತ್ತದೆ. ಶುದ್ಧಬ್ರಹ್ಮನು ಪಾರಮಾರ್ಥಿಕ ಸತ್ಯನಾಗಿದ್ದಾನೆ. ಎಂದೂ ಸಹ ಇವನು ಬಾಧಜ್ಞಾನಕ್ಕೆ ವಿಷಯನಾಗಿಲ್ಲ. ಹೀಗೆ ಮೂರು ಬಗೆಯ ಸತ್ಯತ್ವವನ್ನು ಅದ್ವೈತಿಗಳು ಒಪ್ಪುತ್ತಾರೆ. ಪ್ರಕೃತ, ಬ್ರಹ್ಮನಲ್ಲಿರುವ ಗುಣಗಳು ವ್ಯಾವಾಹಾರಿಕಸತ್ಯವೆಂದೂ, ಬ್ರಹ್ಮನು ಪಾರಮಾರ್ಥಿಕಸತ್ಯನಾಗಿದ್ದಾನೆಂದೂ ಅದ್ವೈತಿಗಳು ಹೇಳುತ್ತಿದ್ದಾರೆ. ಯಾವುದೇ ಶ್ರುತಿಯಲ್ಲಿ ಬ್ರಹ್ಮನ ಗುಣಗಳಿಗೆ ಸತ್ಯತ್ವವನ್ನು ಹೇಳಿದರೆ, ವ್ಯಾವಹಾರಿಕ ಸತ್ಯವೆಂದೇ ಅರ್ಥೈಸಬೇಕು. ನಿತ್ಯವೆಂದು ಹೇಳಿದರೆ ದೀರ್ಘಕಾಲದವರೆಗೆ ಇರುತ್ತವೆಂದೇ ವ್ಯಾಖ್ಯಾನಿಸಬೇಕೆಂದು ಅವರ ಆಂತರ್ಯ.

ಹೀಗೆ ಹೇಳುವ ಅದ್ವೈತಿಗಳನ್ನು ಪ್ರಕೃತ ನಿರಾಕರಣೆ ಮಾಡುತ್ತಿದ್ದಾರೆ- ಬ್ರಹ್ಮನಲ್ಲಿರುವ ಗುಣಗಳಿಗೆ ವ್ಯಾವಹಾರಿಕ ಸತ್ಯತ್ವವನ್ನು ದೀರ್ಘಕಾಲದ ಅಸ್ತಿತ್ವವನ್ನು ಒಪ್ಪಿ ಸತ್ಯತ್ವ-ನಿತ್ಯತ್ವಗಳನ್ನು ಕೂಡಿಸುವುದಾದರೆ ಬ್ರಹ್ಮನಲ್ಲಿಯೂ ಹೀಗೆ ಒಪ್ಪಬಹುದಲ್ಲವೆ?

ಏಕೆಂದರೆ, ಬ್ರಹ್ಮನು ಸತ್ಯನು ನಿತ್ಯನು ಎಂದು 'ಸತ್ಯಂ ಜ್ಞಾನಂ' ಇತ್ಯಾದಿ ಶ್ರುತಿಗಳು ಪ್ರತಿಪಾದನೆ ಮಾಡುತ್ತವೆ. ಈಗ ಗುಣಗಳು ವ್ಯಾವಹಾರಿಕಸತ್ಯವೆಂದು ಹೇಳುವುದಾದರೆ, ಬ್ರಹ್ಮನೂ ಕೂಡ ವ್ಯಾವಹಾರಿಕಸತ್ಯನೇ ಆಗಲಿ. ಗುಣಗಳು ಚಿರಕಾಲ ಮಾತ್ರ ಇರತಕ್ಕವು ಎಂದು ವ್ಯಾಖ್ಯಾನ ಮಾಡಿದರೆ ಬ್ರಹ್ಮನೂ ಕೂಡ ಚಿರಕಾಲ ಇರುತ್ತಾನೆಂದೇ ನೀವು ವ್ಯಾಖ್ಯಾನ ಮಾಡಿರಿ. ಒಂದೊಂದು ಕಡೆ ಒಂದೊಂದು ರೀತಿಯಲ್ಲಿ ವ್ಯಾಖ್ಯಾನ ಮಾಡುವುದು ಅಯುಕ್ತವಾಗುತ್ತದೆ.

**ಸಂದಿಗ್ಧಶ್ರುತಿಪಂಕಸ್ಥನೈರ್ಗುಣ್ಯಸ್ತಂಭಲಂಬಿನಃ ।**
**ಕಥಂ ಸತ್ಯತಯಾ ಶ್ರೌತಧರ್ಮಾಃ ಸ್ಯುರ್ವ್ಯಾವಹಾರಿಕಾಃ ॥ ೬೩೧ ॥**

**ಅರ್ಥ–** ಸಂದಿಗ್ಧಶ್ರುತಿಪಂಕಸ್ಥನೈರ್ಗುಣ್ಯಸ್ತಂಭಲಂಬಿನಃ = ಸಂದಿಗ್ಧ ಶ್ರುತಿ ಎಂಬ ಕೆಸರಿನಲ್ಲಿರುವ ನಿರ್ಗುಣತ್ವ ಎಂಬ ಕಂಬವನ್ನು ಆಶ್ರಯಿಸಿರುವ, ಸತ್ಯತಯಾ = ಸತ್ಯವೇ ಎಂದು, ಶ್ರೌತಧರ್ಮಾಃ = ಶ್ರುತಿಯಲ್ಲಿ ಹೇಳಲ್ಪಟ್ಟ ಧರ್ಮಗಳು, ಕಥಂ = ಹೇಗೆ, ವ್ಯಾವಹಾರಿಕಾಃ ಸ್ಯುಃ = ವ್ಯಾವಹಾರಿಕಗಳಾಗುತ್ತವೆ?

**ಅನುವಾದ–** 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯಲ್ಲಿರುವ 'ನಿರ್ಗುಣ' ಪದಕ್ಕೆ ಪ್ರಾಕೃತ ಗುಣವಿಲ್ಲವೆಂದು ಅರ್ಥೈಸಬೇಕೊ, ಗುಣಗಳೇ ಇಲ್ಲವೆಂದು ಅರ್ಥೈಸಬೇಕೋ? ಎಂಬ ಸಂದೇಹವೇ ಪರಿಹಾರವಾಗಿಲ್ಲ. ಇಂತಹ ಸಂದಿಗ್ಧವಾದ ಶ್ರುತಿಯೆಂಬ ಕೆಸರಿನಲ್ಲಿ ಇರುವ ನಿರ್ಗುಣತ್ವ ಎಂಬ ಕಂಬವನ್ನು ನೀನು ಅವಲಂಬಿಸಿರುವಿ. ಇಂತಹ ಭದ್ರವಿಲ್ಲದ ಕಂಬವನ್ನು ಆಶ್ರಯಿಸಿ ಸತ್ಯವಾದ ಪರಮಾತ್ಮನ ಧರ್ಮಗಳನ್ನು ವ್ಯಾವಹಾರಿಕವೆಂದು ಹೇಗೆ ಸಮರ್ಥಿಸುತ್ತೀಯೆ?

**ಭಾವವಿಲಾಸಿನೀ–** ಬ್ರಹ್ಮಣಿ ಸ್ಪಷ್ಟಶೂನ್ಯತ್ವಶ್ರುತಿಬಲಾತ್ ಸ್ಯಾದಪಿ ತಥಾ ಇಹ ತು ಬಾಧಕ-ನಿರ್ಗುಣಶ್ರುತೇರದ್ಯಾಪಿ ಸಂದಿಗ್ಧತ್ವಾತ್, ನ ಸಾ ಕಲ್ಪನಾ ಯುಕ್ತೇತ್ಯಾಹ – **ಸಂದಿಗ್ಧೇತಿ** ॥ ಸಂದಿಗ್ಧೇ-ತ್ಯುಪಲಕ್ಷಣಮ್ । ಅನಿರ್ಗುಣ ಇತಿ ವೈಪರೀತ್ಯಸ್ಯೈವೋಕ್ತತ್ವಾದಿತ್ಯಪಿ ದ್ರಷ್ಟವ್ಯಮ್ ॥ ೬೩೧ ॥

**ವಿವರಣೆ–** 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂಬಲ್ಲಿರುವ ನಿರ್ಗುಣಪದಕ್ಕೆ ಪ್ರಕೃತಿ ಸಂಬಂಧವಾದ ಗುಣಗಳಿಲ್ಲವೆಂದರ್ಥವೋ? ಅಥವಾ ಜ್ಞಾನಾನಂದಾದಿ ಸದ್ಗುಣಗಳಿಲ್ಲವೆಂದರ್ಥವೋ? ಎಂದೇ ಇನ್ನೂ ಸಹ ನಿರ್ಧಾರವಾಗಿಲ್ಲ. ಹೀಗೆ ಸಂದಿಗ್ಧವಾದ ಕಾರಣ ನಿರ್ಗುಣ ಶ್ರುತಿಯು ಕೆಸರಿನಂತಿದೆ. ಈ ಕೆಸರಿನಲ್ಲಿ ನೀನು ನಿರ್ಗುಣತ್ವ ಎಂಬ ಕಂಬವನ್ನು ನೆಟ್ಟಿರುವಿ. ಈ ಕಂಬವನ್ನು ಆಶ್ರಯಿಸಿ ಪರಮಾತ್ಮನ ಗುಣಗಳೆಲ್ಲವೂ ವ್ಯಾವಹಾರಿಕವಾಗಿದ್ದಾವೆಂದು ಸಮರ್ಥಿಸುತ್ತಿದ್ದಿ. ಶ್ಲೋಕದಲ್ಲಿ ಸಂದಿಗ್ಧ ಎಂದು ಹೇಳಿರುವುದು ಉಪಲಕ್ಷಣವಾಗಿದೆ. ನಿರ್ಗುಣಶಬ್ದಕ್ಕೆ ಪ್ರಾಕೃತ ಗುಣರಹಿತ ಎಂಬ ಅರ್ಥವೋ ಅಥವಾ ಸಕಲಗುಣರಹಿತ ಎಂಬ ಅರ್ಥವೋ? ಎಂಬ ಸಂದೇಹವಿರುವುದು

ಮಾತ್ರವಲ್ಲ ಅನಿರ್ಗುಣ ಎಂದೂ ಪದಚ್ಛೇದ ಮಾಡಬಹುದೆಂಬ ವಿಭಿನ್ನ ಮಾರ್ಗವನ್ನೂ ನಾವು ತೋರಿಸಿದ್ದೇವೆ ಎಂದು ಅರ್ಥ.

**ತದಾಪ್ಯಬಾಧೇ ಸತ್ಯಾಃ ಸ್ಯುರ್ಬಾಧೇ ತು ಶ್ರುತ್ಯಮಾನತಾ ।**
**ಅತೋಽಭ್ಯರ್ಥ್ಯಃ ಸ ಏವಾರ್ಥೋ ಯತ್ರ ವಾಗ್ದ್ವಂದ್ವಮಾನತಾ**
**॥ ೬೩೨ ॥**

**ಅರ್ಥ**—ತದಾ = ವ್ಯಾವಹಾರಿಕ ಸತ್ಯತ್ವವನ್ನು ಒಪ್ಪಿದರೆ, ಅಬಾಧೇ ಸತಿ = ಬಾಧವಿಲ್ಲದಿದ್ದರೆ, ಗುಣಾಃ= ಗುಣಗಳು, ಸತ್ಯಾಃ = ಪಾರಮಾರ್ಥಿಕ ಸತ್ಯವೆಂದೇ, ಸ್ಯುಃ = ಆಗುತ್ತವೆ. ಬಾಧೇ ತು = ಬಾಧಿಸಲ್ಪಟ್ಟರೆ, ಶ್ರುತ್ಯಮಾನತಾ = ಶ್ರುತಿಗೆ ಅಪ್ರಾಮಾಣ್ಯವು ಬರುತ್ತದೆ. ಅತಃ = ಆದ್ದರಿಂದ, ಯತ್ರ = ಎಲ್ಲಿ, ವಾಗ್ದ್ವಂದ್ವಮಾನತಾ = ಯಾವ ಅರ್ಥ ಒಪ್ಪಿದರೆ ಎರಡು ವಾಕ್ಯಗಳಿಗೂ ಪ್ರಾಮಾಣ್ಯವು ಬರುತ್ತದೋ, ಸಃ ಏವ ಅರ್ಥಃ = ಅಂತಹ ಅರ್ಥವೇ, ಅಭ್ಯರ್ಥ್ಯಃ = ಅಪೇಕ್ಷಿಸಲ್ಪಡಬೇಕು.

**ಅನುವಾದ**— ವ್ಯಾವಹಾರಿಕವೆಂದು ಒಪ್ಪಿದರೆ ಆ ಗುಣಗಳಿಗೆ ಬಾಧವಿದೆಯೋ ಇಲ್ಲವೋ? ಎಂದು ಪ್ರಶ್ನೆ. ಬಾಧ ಬಾರದಿದ್ದರೆ ಪಾರಮಾರ್ಥಿಕವೆಂದೇ ಆಗುತ್ತದೆ. ಒಂದು ವೇಳೆ ಗುಣಗಳು ಬಾಧಿತವಾಗುವುದಾದರೆ, ಶ್ರುತಿಯು ಅಪ್ರಮಾಣ-ವಾಗುತ್ತದೆ. ಆದ್ದರಿಂದ, ಹೇಗೆ ವ್ಯಾಖ್ಯಾನ ಮಾಡುವುದರಿಂದ ಎರಡೂ ಶ್ರುತಿಗಳು ಪ್ರಮಾಣಗಳಾಗುತ್ತವೋ, ಆ ರೀತಿಯಲ್ಲಿಯೇ ವ್ಯಾಖ್ಯಾನ ಮಾಡುವುದು ಯುಕ್ತವಾಗುತ್ತದೆ. ಅಂತಹ ಅರ್ಥಗಳನ್ನೇ ಶ್ರುತಿಯಿಂದ ಅಪೇಕ್ಷಿಸಬೇಕು.

**ಭಾವವಿಲಾಸಿನೀ**— ದೂಷಣಾಂತರಂ ಚಾಹ – **ತದಾಪೀತಿ** ॥ ತದಾ ವ್ಯಾವಹಾರಿಕ-ಸತ್ಯತಾಯಾಮ್। ಅತಃ ಶ್ರುತೇಃ ಪ್ರಾಮಾಣ್ಯಸ್ಯಾವಶ್ಯಕತ್ವಾತ್ । ಸ ಏವ ತ್ರಿಗುಣ-ವಿವರ್ಜಿತತ್ವಾದಿರೇವ ॥ ೬೩೨ ॥

**ವಿವರಣೆ**— ಮತ್ತೊಂದು ದೋಷವನ್ನು ಹೇಳುತ್ತಿದ್ದಾರೆ -

ಪರಮಾತ್ಮನ ಗುಣಗಳು ವ್ಯಾವಹಾರಿಕವೆಂದು ಅದ್ವೈತಿಗಳು ಹೇಳುತ್ತಾರೆ. ಇಂತಹ ಗುಣಗಳಿಗೆ ಬಾಧ ದೋಷವು ಬರುವುದೇ ಇಲ್ಲ. ಈ ಗುಣಗಳು ಎಂದೂ ಬಾಧಿತವಾಗದ ಕಾರಣ ಪಾರಮಾರ್ಥಿಕಗಳೇ ಆಗುತ್ತವೆ. ವ್ಯಾವಹಾರಿಕವೆಂದು ಹೇಳಿದ್ದು ಕೇವಲ ಶಬ್ದ ಮಾತ್ರ. ಹೊರತು, ಅರ್ಥದಲ್ಲಿ ಏನೂ ವ್ಯತ್ಯಾಸವಿರುವುದಿಲ್ಲ. ಒಂದು ವೇಳೆ ಅರ್ಥದಲ್ಲಿ ವ್ಯತ್ಯಾಸವನ್ನು ಕೂಡಿಸುವುದಕ್ಕಾಗಿ ಗುಣಗಳಿಗೆ ಮುಂದೊಂದು ದಿವಸ ಬಾಧವನ್ನು ಹೇಳಿದರೆ ಬಾಧಿತಾರ್ಥವನ್ನು ಶ್ರುತಿಯು ಪ್ರತಿಪಾದನೆ ಮಾಡಿದಂತಾಗುತ್ತದೆ. ಬಾಧಿತಾರ್ಥಪ್ರತಿಪಾದಕವಾದ ಶ್ರುತಿಯು ಅಪ್ರಮಾಣವೆಂಬುದು ಸರ್ವಸಮ್ಮತವಾದ

ವಿಚಾರ. ಆದ್ದರಿಂದ ಗುಣಪ್ರತಿಪಾದಕವಾದ ಶ್ರುತಿಗೂ ನಿರ್ಗುಣತ್ವಪ್ರತಿಪಾದಕ ಶ್ರುತಿಗೂ ವಿರೋಧ ಬಾರದಂತೆ ವ್ಯಾಖ್ಯಾನ ಮಾಡಬೇಕು. ಆದ್ದರಿಂದ ನಿರ್ಗುಣತ್ವ-ಪ್ರತಿಪಾದಕವಾದ ಶ್ರುತಿಗೆ ಪ್ರಾಕೃತವಾದ ಗುಣಗಳಿಲ್ಲವೆಂದು ವ್ಯಾಖ್ಯಾನ ಮಾಡಿ, ಗುಣಪ್ರತಿಪಾದಕವಾದ ಶ್ರುತಿಗೆ ಸತ್ಯಭೂತವಾದ ಜ್ಞಾನಾನಂದಾದಿ ಸದ್ಗುಣಗಳನ್ನು ಹೇಳುತ್ತಿವೆ ಎಂದು ವ್ಯಾಖ್ಯಾನ ಮಾಡಬೇಕು. ಹೀಗೆ ವ್ಯಾಖ್ಯಾನ ಮಾಡುವುದರಿಂದ ಎರಡೂ ಶ್ರುತಿಗಳಿಗೆ ನ್ಯಾಯವನ್ನು ಒದಗಿಸಿದಂತೆ ಆಗುತ್ತದೆ.

**ಕಥಂ ಸ್ವರೂಪಸ್ಯಾಬಾಧೇ ಶಕ್ತಿಬಾಧೋ ಭವೇದ್ ವದ ।**
**ಕಿಮಚ್ಛಿದ್ರಘಟೇ ತ್ಯಾಜ್ಯಾ ಜಲಾಹರಣಯೋಗ್ಯತಾ ॥ ೬೩೩ ॥**

**ಅರ್ಥ–** ಸ್ವರೂಪಸ್ಯ = ಬ್ರಹ್ಮನ ಸ್ವರೂಪಕ್ಕೆ, ಅಬಾಧೇ = ಬಾಧವಿಲ್ಲದಿದ್ದಾಗ, ಕಥಂ = ಹೇಗೆ, ಶಕ್ತಿಬಾಧಃ = ಗುಣಸಾಮರ್ಥ್ಯಗಳಿಗೆ ಬಾಧವು, ಭವೇತ್ = ಉಂಟಾಗುತ್ತದೆ. ವದ = ನೀನೇ ಹೇಳು. ಅಚ್ಛಿದ್ರಘಟೇ = ರಂಧ್ರವಿಲ್ಲದ ಘಟದಲ್ಲಿ, ಜಲಾಹರಣಯೋಗ್ಯತಾ = ನೀರನ್ನು ತರುವ ಯೋಗ್ಯತೆಯು, ತ್ಯಾಜ್ಯಾ ಕಿಮ್ = ಪರಿತ್ಯಜಿಸಲ್ಪಡಬೇಕೇನು?

**ಅನುವಾದ–** ರಂಧ್ರವಿರುವ ಮಡಿಕೆಯಲ್ಲಿ ನೀರನ್ನು ತರಲಾಗದು. ಆದರೆ ರಂಧ್ರವಿಲ್ಲದ ಮಡಿಕೆಯಲ್ಲಿ ನೀರನ್ನು ತರಬಹುದು. ಅದರಂತೆ ಬ್ರಹ್ಮನ ಸ್ವರೂಪಕ್ಕೆ ಬಾಧ ಬರುವುದಾದಲ್ಲಿ ಅವನಲ್ಲಿರುವ ಗುಣಸಾಮರ್ಥ್ಯಗಳಿಗೂ ಬಾಧಗಳನ್ನು ಹೇಳಬಹುದಾಗಿತ್ತು. ಆದರೆ ಬ್ರಹ್ಮನ ಸ್ವರೂಪಕ್ಕೆ ಯಾವುದೇ ಬಾಧವಿಲ್ಲದಿರುವಾಗ, ಅವನಲ್ಲಿರುವ ಗುಣಸಾಮರ್ಥ್ಯಾದಿಗಳಿಗೆ ಬಾಧವನ್ನು ಹೇಗೆ ತಾನೆ ಹೇಳುತ್ತೀಯೆ?

**ಭಾವವಿಲಾಸಿನೀ–** ಇದಾನೀಂ ಯುಕ್ತ್ಯೈವ ಗುಣಸತ್ಯತ್ವನಿತ್ಯತ್ವೇ ಸಾಧಯತಿ– ಕಥಮಿತಿ ॥ ಸ್ವರೂಪಸ್ಯ ಬ್ರಹ್ಮಸ್ವರೂಪಸ್ಯ ಶಕ್ತಿಬಾಧಃ ಸಾಮರ್ಥ್ಯರೂಪಗುಣಬಾಧಃ । ದೃಷ್ಟಾಂತಮಾಹ – ಕಿಮಿತಿ ॥ ೬೩೩ ॥

**ವಿವರಣೆ–** ಯುಕ್ತಿಯಿಂದಲೇ ಬ್ರಹ್ಮನಲ್ಲಿರುವ ಗುಣಗಳಿಗೆ ಸತ್ಯತ್ವವನ್ನು ಮತ್ತು ನಿತ್ಯತ್ವವನ್ನು ಸಮರ್ಥನೆ ಮಾಡುತ್ತಿದ್ದಾರೆ. 'ಸ್ವರೂಪಸ್ಯ' ಎಂದರೆ ಬ್ರಹ್ಮ ಸ್ವರೂಪ ಎಂದರ್ಥ, ಶಕ್ತಿಬಾಧಃ ಎಂದರೆ ಸಾಮರ್ಥ್ಯ ಎಂಬ ಗುಣಗಳಿಗೆ ಬಾಧ ಎಂದರ್ಥ. ಈ ವಿಷಯದಲ್ಲಿ ದೃಷ್ಟಾಂತವನ್ನು 'ಕಿಂ ಅಚ್ಛಿದ್ರ' ಇತ್ಯಾದಿ ಉತ್ತರಾರ್ಧದಿಂದ ತೋರಿಸುತ್ತಿದ್ದಾರೆ. ರಂಧ್ರವಿಲ್ಲದ ಮಡಿಕೆಯಲ್ಲಿ ನೀರನ್ನು ತುಂಬುವಂತೆ, ಯಾವುದೇ ಬಾಧಾದಿ ದೋಷಗಳಿಲ್ಲದ ಬ್ರಹ್ಮಸ್ವರೂಪವೆಂಬ ಘಟದಲ್ಲಿ ಗುಣಸಾಮರ್ಥ್ಯಗಳನ್ನು ತುಂಬಬಹುದು ಎಂದು ಅಭಿಪ್ರಾಯ.

ಬ್ರಹ್ಮನ ಗುಣಗಳು ಬ್ರಹ್ಮನ ಸ್ವರೂಪಭೂತವಾಗಿವೆ. ಬ್ರಹ್ಮನಿಗೆ ಬಾಧವಿಲ್ಲದಿದ್ದರೆ ಅವನ ಗುಣಗಳಿಗೂ ಬಾಧವಿಲ್ಲ. ಜಲಾಹರಣಯೋಗ್ಯತೆಯು ರಂಧ್ರವಿಲ್ಲದ ಘಟದ

ಸ್ವಭಾವ. ಘಟವಿರುವವರೆಗೆ ಅದು ಎಂದೂ ನಾಶವಾಗುವುದಿಲ್ಲ. ಈ ವಿಷಯವನ್ನು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟಪಡಿಸುತ್ತಾರೆ.

**ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚೇತ್ಯಾಹ ಹಿ ಶ್ರುತಿಃ ॥ ೬೩೪ ॥**

**ಅರ್ಥ–** ಜ್ಞಾನಬಲಕ್ರಿಯಾ ಚ = ಪರಮಾತ್ಮನಲ್ಲಿರುವ ಜ್ಞಾನ, ಸಾಮರ್ಥ್ಯ ಮತ್ತು ಕ್ರಿಯೆಗಳು, ಸ್ವಾಭಾವಿಕೀ = ಸ್ವರೂಪಭೂತಗಳಾಗಿವೆ. ಇತಿ = ಹೀಗೆ, ಶ್ರುತಿಃ = ಶ್ರುತಿಯು, ಆಹ ಹಿ = ಹೇಳುತ್ತಿದೆಯಷ್ಟೆ

**ಅನುವಾದ–** ಬ್ರಹ್ಮನಲ್ಲಿರುವ ಗುಣಗಳೆಲ್ಲವೂ ಅವನ ಸ್ವರೂಪಭೂತಗಳೇ ಆಗಿವೆಯೆಂದು 'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆಯಷ್ಟೇ.

**ಭಾವವಿಲಾಸಿನೀ– ಯುಕ್ತ್ಯುಪಸ್ಕಾರಕಶ್ರುತಿಮಾಹ – ಸ್ವಾಭಾವಿಕೀತಿ ॥ ಹೀತಿ ಶ್ರುತೇಃ ಪ್ರಸಿದ್ಧತಾಮಾಹ ॥ ೬೩೪ ॥**

**ವಿವರಣೆ–** ಯುಕ್ತಿಗೆ ಮೂಲವಾದ ಶ್ರುತಿಯನ್ನು ಹೇಳುತ್ತಿದ್ದಾರೆ 'ಸ್ವಾಭಾವಿಕೀ' ಇತ್ಯಾದಿಯಾಗಿ. 'ಹಿ' ಶಬ್ದವು ಪ್ರಸಿದ್ಧಾರ್ಥದಲ್ಲಿ ಪ್ರಯುಕ್ತವಾಗಿದೆ. ಬ್ರಹ್ಮನ ಜ್ಞಾನ ಬಲ ಕ್ರಿಯೆಗಳು ಸ್ವಾಭಾವಿಕವಾದ್ದರಿಂದ ಅವು ಎಂದಿಗೂ ಬ್ರಹ್ಮನನ್ನು ಬಿಟ್ಟು ಹೋಗುವುದಿಲ್ಲ. ಆದ್ದರಿಂದ ಬ್ರಹ್ಮನ ಗುಣಗಳನ್ನು ಪರಿತ್ಯಾಗ ಮಾಡಲು ಸಾಧ್ಯವಿಲ್ಲವೆಂದು ಇಲ್ಲಿ ಸಮರ್ಥಿಸುತ್ತಿದ್ದಾರೆ.

**ಪೀಲುಪಾಕೇನ ಪಿಠರಪಾಕತೋ ವಾ ಗುಣಕ್ಷಯಃ ।**
**ಏಕತ್ರ ಧರ್ಮಿಣೋ ನಾಶೋಽನ್ಯತ್ರ ಧರ್ಮಾಂತರಂ ಕಿಲ ॥ ೬೩೫ ॥**

**ಅರ್ಥ–** ಪೀಲುಪಾಕೇನ = ತಾರ್ಕಿಕರ ಏಕದೇಶಿಗಳು ಹೇಳುವಂತೆ ಪೀಲುಪಾಕದ ಪ್ರಕಾರ, ಪಿಠರಪಾಕತೋ ವಾ = ಅಥವಾ ಪಿಟರಪಾಕದ ಪ್ರಕಾರ, ಗುಣಕ್ಷಯಃ = ಗುಣಗಳ ನಾಶವನ್ನು ಹೇಳಬೇಕು. ಏಕತ್ರ = ಪೀಲುಪಾಕದ ಪ್ರಕಾರ, ಧರ್ಮಿಣಃ = ಧರ್ಮಿಯ, ನಾಶಃ = ನಾಶವು ಆಗುತ್ತದೆ, ಅನ್ಯತ್ರ = ಪಿಠರಪಾಕದ ಪ್ರಕಾರ, ಧರ್ಮಾಂತರಂ ಕಿಲ = ಧರ್ಮಿ ನಾಶವಾಗದೆ ಮತ್ತೊಂದು ಧರ್ಮವು ಬರುತ್ತದಷ್ಟೇ.

**ಅನುವಾದ– ತಾರ್ಕಿಕರಲ್ಲಿ ಪೀಲುಪಾಕವಾದ ಹಾಗು ಪಿಠರಪಾಕವಾದ ಎಂಬೆರಡು ವಾದಗಳಿವೆ. ಪೀಲುಪಾಕದ ಪ್ರಕಾರ ಧರ್ಮಿಯೇ ನಾಶವಾಗುವುದರಿಂದ, ಧರ್ಮಿ ಇದ್ದು ಧರ್ಮ ಇಲ್ಲದ ಪರಿಸ್ಥಿತಿ ಇರುವುದಿಲ್ಲ. ಪಿಠರಪಾಕದ ಪ್ರಕಾರ, ಒಂದು ಧರ್ಮ ನಾಶವಾದ ಕೂಡಲೇ ಮತ್ತೊಂದು ಧರ್ಮವು ಹುಟ್ಟುವುದರಿಂದಲೂ ಧರ್ಮವಿಲ್ಲದ ಪರಿಸ್ಥಿತಿ ಇರುವುದಿಲ್ಲ.**

ವಿಚಾರ. ಆದ್ದರಿಂದ ಗುಣಪ್ರತಿಪಾದಕವಾದ ಶ್ರುತಿಗೂ ನಿರ್ಗುಣತ್ವಪ್ರತಿಪಾದಕ ಶ್ರುತಿಗೂ ವಿರೋಧ ಬಾರದಂತೆ ವ್ಯಾಖ್ಯಾನ ಮಾಡಬೇಕು. ಆದ್ದರಿಂದ ನಿರ್ಗುಣತ್ವ-ಪ್ರತಿಪಾದಕವಾದ ಶ್ರುತಿಗೆ ಪ್ರಾಕೃತವಾದ ಗುಣಗಳಿಲ್ಲವೆಂದು ವ್ಯಾಖ್ಯಾನ ಮಾಡಿ, ಗುಣಪ್ರತಿಪಾದಕವಾದ ಶ್ರುತಿಗೆ ಸತ್ಯಭೂತವಾದ ಜ್ಞಾನಾನಂದಾದಿ ಸದ್ಗುಣಗಳನ್ನು ಹೇಳುತ್ತಿವೆ ಎಂದು ವ್ಯಾಖ್ಯಾನ ಮಾಡಬೇಕು. ಹೀಗೆ ವ್ಯಾಖ್ಯಾನ ಮಾಡುವುದರಿಂದ ಎರಡೂ ಶ್ರುತಿಗಳಿಗೆ ನ್ಯಾಯವನ್ನು ಒದಗಿಸಿದಂತೆ ಆಗುತ್ತದೆ.

**ಕಥಂ ಸ್ವರೂಪಸ್ಯಾಬಾಧೇ ಶಕ್ತಿಬಾಧೋ ಭವೇದ್ ವದ ।**
**ಕಿಮಚ್ಛಿದ್ರಘಟೇ ತ್ಯಾಜ್ಯಾ ಜಲಾಹರಣಯೋಗ್ಯತಾ ॥ ೬೩೩ ॥**

**ಅರ್ಥ–** ಸ್ವರೂಪಸ್ಯ = ಬ್ರಹ್ಮನ ಸ್ವರೂಪಕ್ಕೆ, ಅಬಾಧೇ = ಬಾಧವಿಲ್ಲದಿದ್ದಾಗ, ಕಥಂ = ಹೇಗೆ, ಶಕ್ತಿಬಾಧಃ = ಗುಣಸಾಮರ್ಥ್ಯಗಳಿಗೆ ಬಾಧವು, ಭವೇತ್ = ಉಂಟಾಗುತ್ತದೆ. ವದ = ನೀನೇ ಹೇಳು. ಅಚ್ಛಿದ್ರಘಟೇ = ರಂಧ್ರವಿಲ್ಲದ ಘಟದಲ್ಲಿ, ಜಲಾಹರಣಯೋಗ್ಯತಾ = ನೀರನ್ನು ತರುವ ಯೋಗ್ಯತೆಯು, ತ್ಯಾಜ್ಯಾ ಕಿಮ್ = ಪರಿತ್ಯಜಿಸಲ್ಪಡಬೇಕೇನು?

**ಅನುವಾದ– ರಂಧ್ರವಿರುವ ಮಡಿಕೆಯಲ್ಲಿ ನೀರನ್ನು ತರಲಾಗದು. ಆದರೆ ರಂಧ್ರವಿಲ್ಲದ ಮಡಿಕೆಯಲ್ಲಿ ನೀರನ್ನು ತರಬಹುದು. ಅದರಂತೆ ಬ್ರಹ್ಮನ ಸ್ವರೂಪಕ್ಕೆ ಬಾಧ ಬರುವುದಾದಲ್ಲಿ ಅವನಲ್ಲಿರುವ ಗುಣಸಾಮರ್ಥ್ಯಗಳಿಗೂ ಬಾಧಗಳನ್ನು ಹೇಳಬಹುದಾಗಿತ್ತು. ಆದರೆ ಬ್ರಹ್ಮನ ಸ್ವರೂಪಕ್ಕೆ ಯಾವುದೇ ಬಾಧವಿಲ್ಲದಿರುವಾಗ, ಅವನಲ್ಲಿರುವ ಗುಣಸಾಮರ್ಥ್ಯಾದಿಗಳಿಗೆ ಬಾಧವನ್ನು ಹೇಗೆ ತಾನೆ ಹೇಳುತ್ತೀಯೆ?**

**ಭಾವವಿಲಾಸಿನೀ–** ಇದಾನೀಂ ಯುಕ್ತ್ಯೈವ ಗುಣಸತ್ಯತ್ವನಿತ್ಯತ್ವೇ ಸಾಧಯತಿ– ಕಥಮಿತಿ ॥ ಸ್ವರೂಪಸ್ಯ ಬ್ರಹ್ಮಸ್ವರೂಪಸ್ಯ ಶಕ್ತಿಬಾಧಃ ಸಾಮರ್ಥ್ಯರೂಪಗುಣಬಾಧಃ । ದೃಷ್ಟಾಂತಮಾಹ – **ಕಿಮಿತಿ** ॥ ೬೩೩ ॥

**ವಿವರಣೆ–** ಯುಕ್ತಿಯಿಂದಲೇ ಬ್ರಹ್ಮನಲ್ಲಿರುವ ಗುಣಗಳಿಗೆ ಸತ್ಯತ್ವವನ್ನು ಮತ್ತು ನಿತ್ಯತ್ವವನ್ನು ಸಮರ್ಥನೆ ಮಾಡುತ್ತಿದ್ದಾರೆ. 'ಸ್ವರೂಪಸ್ಯ' ಎಂದರೆ ಬ್ರಹ್ಮ ಸ್ವರೂಪ ಎಂದರ್ಥ, ಶಕ್ತಿಬಾಧಃ ಎಂದರೆ ಸಾಮರ್ಥ್ಯ ಎಂಬ ಗುಣಗಳಿಗೆ ಬಾಧ ಎಂದರ್ಥ. ಈ ವಿಷಯದಲ್ಲಿ ದೃಷ್ಟಾಂತವನ್ನು 'ಕಿಂ ಅಚ್ಛಿದ್ರ' ಇತ್ಯಾದಿ ಉತ್ತರಾರ್ಧದಿಂದ ತೋರಿಸುತ್ತಿದ್ದಾರೆ. ರಂಧ್ರವಿಲ್ಲದ ಮಡಿಕೆಯಲ್ಲಿ ನೀರನ್ನು ತುಂಬುವಂತೆ, ಯಾವುದೇ ಬಾಧಾದಿ ದೋಷಗಳಿಲ್ಲದ ಬ್ರಹ್ಮಸ್ವರೂಪವೆಂಬ ಘಟದಲ್ಲಿ ಗುಣಸಾಮರ್ಥ್ಯಗಳನ್ನು ತುಂಬಬಹುದು ಎಂದು ಅಭಿಪ್ರಾಯ.

ಬ್ರಹ್ಮನ ಗುಣಗಳು ಬ್ರಹ್ಮನ ಸ್ವರೂಪಭೂತವಾಗಿವೆ. ಬ್ರಹ್ಮನಿಗೆ ಬಾಧವಿಲ್ಲದಿದ್ದರೆ ಅವನ ಗುಣಗಳಿಗೂ ಬಾಧವಿಲ್ಲ. ಜಲಾಹರಣಯೋಗ್ಯತೆಯು ರಂಧ್ರವಿಲ್ಲದ ಘಟದ

ಸ್ವಭಾವ. ಘಟವಿರುವವರೆಗೆ ಅದು ಎಂದೂ ನಾಶವಾಗುವುದಿಲ್ಲ. ಈ ವಿಷಯವನ್ನು ಮುಂದಿನ ಶ್ಲೋಕಗಳಲ್ಲಿ ಸ್ಪಷ್ಟಪಡಿಸುತ್ತಾರೆ.

**ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚೇತ್ಯಾಹ ಹಿ ಶ್ರುತಿಃ ॥ ೬೩೪ ॥**

**ಅರ್ಥ–** ಜ್ಞಾನಬಲಕ್ರಿಯಾ ಚ = ಪರಮಾತ್ಮನಲ್ಲಿರುವ ಜ್ಞಾನ, ಸಾಮರ್ಥ್ಯ ಮತ್ತು ಕ್ರಿಯೆಗಳು, ಸ್ವಾಭಾವಿಕೀ = ಸ್ವರೂಪಭೂತಗಳಾಗಿವೆ. ಇತಿ = ಹೀಗೆ, ಶ್ರುತಿಃ = ಶ್ರುತಿಯು, ಆಹ ಹಿ = ಹೇಳುತ್ತಿದೆಯಷ್ಟೆ

**ಅನುವಾದ–** ಬ್ರಹ್ಮನಲ್ಲಿರುವ ಗುಣಗಳೆಲ್ಲವೂ ಅವನ ಸ್ವರೂಪಭೂತಗಳೇ ಆಗಿವೆಯೆಂದು 'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆಯಷ್ಟೇ.

**ಭಾವವಿಲಾಸಿನೀ–** ಯುಕ್ತ್ಯುಪಸ್ಕಾರಕಶ್ರುತಿಮಾಹ – ಸ್ವಾಭಾವಿಕೀತಿ ॥ ಹೀತಿ ಶ್ರುತೇಃ ಪ್ರಸಿದ್ಧತಾಮಾಹ ॥ ೬೩೪ ॥

**ವಿವರಣೆ–** ಯುಕ್ತಿಗೆ ಮೂಲವಾದ ಶ್ರುತಿಯನ್ನು ಹೇಳುತ್ತಿದ್ದಾರೆ 'ಸ್ವಾಭಾವಿಕೀ' ಇತ್ಯಾದಿಯಾಗಿ. 'ಹಿ' ಶಬ್ದವು ಪ್ರಸಿದ್ಧಾರ್ಥದಲ್ಲಿ ಪ್ರಯುಕ್ತವಾಗಿದೆ. ಬ್ರಹ್ಮನ ಜ್ಞಾನ ಬಲ ಕ್ರಿಯೆಗಳು ಸ್ವಾಭಾವಿಕವಾದ್ದರಿಂದ ಅವು ಎಂದಿಗೂ ಬ್ರಹ್ಮನನ್ನು ಬಿಟ್ಟು ಹೋಗುವುದಿಲ್ಲ. ಆದ್ದರಿಂದ ಬ್ರಹ್ಮನ ಗುಣಗಳನ್ನು ಪರಿತ್ಯಾಗ ಮಾಡಲು ಸಾಧ್ಯವಿಲ್ಲವೆಂದು ಇಲ್ಲಿ ಸಮರ್ಥಿಸುತ್ತಿದ್ದಾರೆ.

**ಪೀಲುಪಾಕೇನ ಪಿಠರಪಾಕತೋ ವಾ ಗುಣಕ್ಷಯಃ ।**
**ಏಕತ್ರ ಧರ್ಮಿಣೋ ನಾಶೋಽನ್ಯತ್ರ ಧರ್ಮಾಂತರಂ ಕಿಲ ॥ ೬೩೫ ॥**

**ಅರ್ಥ–** ಪೀಲುಪಾಕೇನ = ತಾರ್ಕಿಕರ ಏಕದೇಶಿಗಳು ಹೇಳುವಂತೆ ಪೀಲುಪಾಕದ ಪ್ರಕಾರ, ಪಿಠರಪಾಕತೋ ವಾ = ಅಥವಾ ಪಿಟರಪಾಕದ ಪ್ರಕಾರ, ಗುಣಕ್ಷಯಃ = ಗುಣಗಳ ನಾಶವನ್ನು ಹೇಳಬೇಕು. ಏಕತ್ರ = ಪೀಲುಪಾಕದ ಪ್ರಕಾರ, ಧರ್ಮಿಣಃ = ಧರ್ಮಿಯ, ನಾಶಃ = ನಾಶವು ಆಗುತ್ತದೆ, ಅನ್ಯತ್ರ = ಪಿಠರಪಾಕದ ಪ್ರಕಾರ, ಧರ್ಮಾಂತರಂ ಕಿಲ = ಧರ್ಮಿ ನಾಶವಾಗದೆ ಮತ್ತೊಂದು ಧರ್ಮವು ಬರುತ್ತದಷ್ಟೇ.

**ಅನುವಾದ–** ತಾರ್ಕಿಕರಲ್ಲಿ ಪೀಲುಪಾಕವಾದ ಹಾಗು ಪಿಠರಪಾಕವಾದ ಎಂಬೆರಡು ವಾದಗಳಿವೆ. ಪೀಲುಪಾಕದ ಪ್ರಕಾರ ಧರ್ಮಿಯೇ ನಾಶವಾಗುವುದರಿಂದ, ಧರ್ಮಿ ಇದ್ದು ಧರ್ಮ ಇಲ್ಲದ ಪರಿಸ್ಥಿತಿ ಇರುವುದಿಲ್ಲ. ಪಿಠರಪಾಕದ ಪ್ರಕಾರ, ಒಂದು ಧರ್ಮ ನಾಶವಾದ ಕೂಡಲೇ ಮತ್ತೊಂದು ಧರ್ಮವು ಹುಟ್ಟುವುದರಿಂದಲೂ ಧರ್ಮವಿಲ್ಲದ ಪರಿಸ್ಥಿತಿ ಇರುವುದಿಲ್ಲ.

**ಭಾವವಿಲಾಸಿನೀ–** ಪೀಲುಪಾಕಪಿಠರಪಾಕಾಭ್ಯಾಂ ಹಿ ಲೋಕೇಽಪಿ ಪಾಕಜರೂಪಾದಿ-ಗುಣನಾಶಃ । ಸೋಽಪಿ ಕ್ವಚಿದ್ಧರ್ಮಿನಾಶೇ ಕ್ವಚಿದ್ಧರ್ಮಿಣೋ ವಿಕಾರೇ ಚ ಸತಿ ಸ್ಯಾತ್ । ನತ್ವ-ವಿಕೃತಾವಿನಷ್ಟಧರ್ಮಿನಿಷ್ಠರೂಪಾದಿಗುಣಾನಾಮ್, ಕಿಮುತ? ಅಲೌಕಿಕಾವಿನಷ್ಟಪಾಕಾ-ಯೋಗ್ಯನಿರ್ವಿಕಾರಭಗವತೋ ರೂಪಸೌಂದರ್ಯಗುಣಾನಾಮನಾಶ ಇತಿ ಭಾವೇನಾಹ – ಪೀಲುಪಾಕೇನೇತ್ಯಾದಿನಾ ॥ (ಏಕತ್ರ ಪೀಲುಪಾಕೇ ಅನ್ಯತ್ರ ಪಿಠರಪಾಕೇ ಧರ್ಮಾಂತರಂ ಸತಿ ಧರ್ಮಿಣಿ ಪಾಕೇನ ಪೂರ್ವನಾಶೇ ಸತಿ ಧರ್ಮಾಂತರಮ್) (ಪ್ರಕ್ಷಿಪ್ತೋಯಂ ಗ್ರಂಥಃ)॥೬೩॥

**ವಿವರಣೆ–** ಪೀಲುಪಾಕವಾದಿಗಳು ಪಿಠರಪಾಕವಾದಿಗಳು ಎಂಬುದಾಗಿ ತಾರ್ಕಿಕರಲ್ಲಿ ಎರಡು ಪಂಗಡವಿದೆ. ಪೀಲುಪಾಕವಾದಿಗಳು ಸೃಷ್ಟಿ ಪ್ರಕ್ರಿಯೆಗಳನ್ನು ಹೇಗೆ ಹೇಳುತ್ತಾರೋ ತದ್ವಿರುದ್ಧವಾಗಿ ಪಿಠರಪಾಕವಾದಿಗಳು ಹೇಳುತ್ತಾರೆ. ಪೀಲುಶಬ್ದಕ್ಕೆ ಪರಮಾಣು ಎಂದರ್ಥ. ಪರಮಾಣುವಿನಲ್ಲಿ ಯಾರು ಪಾಕಕ್ರಿಯೆಯನ್ನು ಅಂದರೆ ವಿಲಕ್ಷಣತೇಜಸ್ಸಂಯೋಗವನ್ನು ಒಪ್ಪುತ್ತಾರೋ ಅವರು ಪೀಲುಪಾಕವಾದಿಗಳು. ಪಿಠರ ಅಂದರೆ ಅವಯವಿ ಎಂದರ್ಥ. ಅವಯವಿಯಲ್ಲಿ ಯಾರು ಪಾಕಕ್ರಿಯೆಯನ್ನು ಒಪ್ಪುತ್ತಾರೋ ಅವರು ಪಿಠರಪಾಕವಾದಿಗಳು ಎಂದೆನಿಸಿಕೊಳ್ಳುತ್ತಾರೆ.

ಪೀಲುಪಾಕವಾದಿಗಳು ಹೀಗೆ ವಿವರಿಸುತ್ತಾರೆ - ಹಾಲು ಎಂಬ ಪದಾರ್ಥವು ಪರಮಾಣುವಿನ ತನಕ ನಾಶವಾಗುತ್ತದೆ. ಕೇವಲ ಹಾಲಿನ ಪರಮಾಣುಗಳು ಉಳಿದಾಗ, ಅಂತಹ ಪರಮಾಣುಗಳಲ್ಲಿ ಮೊಸರಿಗೆ ಬೇಕಾದ ವಿಲಕ್ಷಣವಾದ ಅಗ್ನಿಸಂಯೋಗವುಂಟಾಗುತ್ತದೆ. ಆದರಿಂದ ದ್ವ್ಯಣುಕಗಳು, ತ್ರ್ಯಣುಕಗಳು ಹುಟ್ಟಿ ಅನಂತರ ಮೊಸರು ಎಂಬ ಧರ್ಮಿಯು ಹುಟ್ಟುತ್ತದೆ.

ಈ ವಾದವನ್ನು ಪ್ರಕೃತ ವಿವಕ್ಷಿಸಿದಾಗ, ಧರ್ಮಿ ಇದ್ದು ಧರ್ಮ ಇಲ್ಲದಿರುವ ಪರಿಸ್ಥಿತಿ ಇರುವುದಿಲ್ಲ. ಏಕೆಂದರೆ ಧರ್ಮಿಯೇ ನಾಶವಾಗುತ್ತದೆಂದು ಇವರು ಒಪ್ಪುವುದರಿಂದ ಧರ್ಮವು ಕೂಡ ನಾಶವಾಗುತ್ತದೆ. ಪುನಃ ಮತ್ತೊಂದು ಧರ್ಮಿ ಹುಟ್ಟಿದಾಗ, ಅದರಲ್ಲಿ ಬೇರೆ ಧರ್ಮಗಳು ಕೂಡ ಹುಟ್ಟುತ್ತವೆಂದು ಸಿದ್ಧವಾಗುತ್ತದೆ.

ಪಿಠರಪಾಕವಾದಿಗಳ ಪ್ರಕಾರ, ಹಾಲು ಎಂಬ ಪದಾರ್ಥವೇ ಪರಿಣಾಮವನ್ನು ಹೊಂದಿ ಮೊಸರು ಆಗುತ್ತದೆ ಹೊರತು ಧರ್ಮನಾಶವಾಗುವುದಿಲ್ಲ. ಧರ್ಮಿ ಇರುವಂತೆಯೇ ರೂಪರಸಾದಿ ಧರ್ಮಗಳು ಪರಿವರ್ತನವನ್ನು ಹೊಂದುತ್ತವೆ. ಆದ್ದರಿಂದ ಧರ್ಮಿಯು ಇರುವಾಗ ಧರ್ಮವಿಲ್ಲವೆಂಬ ಪರಿಸ್ಥಿತಿ ಇರುವುದಿಲ್ಲ.

ಹೀಗೆ ಪೀಲುಪಾಕವಾದಿಗಳಂತೆ ಮತ್ತು ಪಿಠರಪಾಕವಾದಿಗಳಂತೆ ಧರ್ಮನಾಶಗಳು ಲೋಕದಲ್ಲಿ ಕಂಡಿದೆ. ಈ ಧರ್ಮನಾಶವು ಧರ್ಮಿನಾಶಪ್ರಯುಕ್ತವಾಗಿ ಅಥವಾ ಧರ್ಮಿಯ ವಿಕಾರಪ್ರಯುಕ್ತವಾಗಿ ಯುಕ್ತವಾಗುತ್ತದೆ. ಹೊರತು, ವಿಕಾರವನ್ನು

ಹೊಂದದ, ವಿನಾಶ ಹೊಂದದ ಧರ್ಮಿಯಲ್ಲಿರುವ ಗುಣಗಳು ನಾಶವಾಗುವುದು ಲೋಕದಲ್ಲಿ ಕಂಡಿಲ್ಲ. ಹೀಗಿರುವಾಗ, ನಿರ್ವಿಕಾರನಾದ ನಿತ್ಯನಾದ ಎಂದೂ ನಾಶವಾಗದ ಪಾಕಕ್ರಿಯಾದಿಗಳನ್ನು ಹೊಂದದ ಭಗವಂತನಲ್ಲಿ ಇರುವಂತಹ ಸೌಂದರ್ಯ, ಸರ್ವಜ್ಞತ್ವ ಮೊದಲಾದ ಗುಣಗಳಿಗೆ ನಾಶವನ್ನು ಹೇಳುವುದು ಮೂರ್ಢತನವಲ್ಲವೇ?

**ಸತಿ ಧರ್ಮಿಣಿ ಧರ್ಮಾಣಾಂ ಕ್ವಾತ್ಯಂತಾಭಾವ ಇಷ್ಯತೇ ।**
**ಕ್ಷಣಮುತ್ಪನ್ನಮಗುಣಮಿತ್ಯಪ್ಯಾಹಾಗ್ರಹಾತ್ ಪರಮ್ ।**
**ತಂತುನಾ ಪಟನಿರ್ಮಾಣೇ ಕಿಂ ಮಧ್ಯೇ ಶುಕ್ಲತಾ ಗತಾ ॥ ೬೩೬ ॥**

**ಅರ್ಥ–** ಧರ್ಮಿಣಿ ಸತಿ = ಧರ್ಮಿಯು ಇದ್ದಾಗ, ಧರ್ಮಾಣಾಂ = ಧರ್ಮಗಳ, ಅತ್ಯಂತಾಭಾವಃ = ಇಲ್ಲದಿರುವಿಕೆಯು, ಕ್ವ ಇಷ್ಯತೇ = ಎಲ್ಲಿ ತಾನೇ ಅಂಗೀಕರಿಸಲ್ಪಡುತ್ತದೆ? ಉತ್ಪನ್ನಂ = ಹುಟ್ಟಿದ ಪದಾರ್ಥವು, ಕ್ಷಣಂ = ಪ್ರಥಮ ಕ್ಷಣದಲ್ಲಿ, ಅಗುಣಂ = ಗುಣವಿಲ್ಲದ್ದಾಗಿರುತ್ತದೆ. ಇತಿ ಅಪಿ = ಎಂದೂ ಕೂಡ, ಪರಂ = ಬಹಳವಾದ, ಆಗ್ರಹಾತ್ = ಆಗ್ರಹದಿಂದ, ಆಹ = ತಾರ್ಕಿಕನು ಹೇಳುತ್ತಾನೆ. ತಂತುನಾ = ನೂಲಿನಿಂದ, ಪಟನಿರ್ಮಾಣೇ = ಬಟ್ಟೆಯನ್ನು ನಿರ್ಮಿಸುವಾಗ, ಶುಕ್ಲತಾ = ಶೌಕ್ಲ್ಯಬಣ್ಣವು, ಮಧ್ಯೇ = ಮಧ್ಯದಲ್ಲಿ, ಕಿಂ ಗತಾ = ಹೋಗುತ್ತದೇನು?

**ಅನುವಾದ–** ಧರ್ಮಿಯು ಇದ್ದಾಗ ಧರ್ಮದ ಇಲ್ಲದಿರುವಿಕೆಯು ಎಲ್ಲಿಯೂ ಕಂಡಿಲ್ಲ. ಯಾವುದೇ ದ್ರವ್ಯವು ಹುಟ್ಟಿದ ಪ್ರಥಮ ಕ್ಷಣದಲ್ಲಿ, ನಿರ್ಗುಣವಾಗಿರುತ್ತದೆಂದು ತಾರ್ಕಿಕರು ಒಪ್ಪುತ್ತಾರೆ. ಇದು ಕೇವಲ ಆಗ್ರಹದ ಮಾತೇ ಹೊರತು, ವಸ್ತುಸ್ಥಿತಿಯಲ್ಲ. ಏಕೆಂದರೆ, ನೂಲಿನಿಂದ ಬಟ್ಟೆಯನ್ನು ನಿರ್ಮಿಸುವಾಗ, ನೂಲಿನಲ್ಲಿರುವ ಬಿಳಿ ಬಣ್ಣವು ಎಲ್ಲಿ ಓಡಿ ಹೋಗುತ್ತದೆ?

**ಭಾವವಿಲಾಸಿನೀ–** ಅತ್ಯಂತಾಭಾವಃ ಸರ್ವಥಾ ಗುಣಾಭಾವಃ । ಭವದುಕ್ತನೈರ್ಗುಣ್ಯಸ್ಯ ನ ಕ್ವಾಪ್ಯವಕಾಶ ಇತಿ ಭಾವಃ । 'ಉತ್ಪನ್ನಂ ದ್ರವ್ಯಂ ಕ್ಷಣಮಗುಣಂ ತಿಷ್ಠತಿ' ಇತಿ ತಾರ್ಕಿಕ-ಶಂಕಾಂ ಪರಿಹರತಿ – ಕ್ಷಣಮಿತಿ ॥ ಆಗ್ರಹಾತ್ ಕಾರ್ಯಕಾರಣಭಾವಾಂಗೀಕಾರಾಖ್ಯಾ-ಗ್ರಹಾತ್ ॥ ೬೩೬-೬೩೭ ॥

**ವಿವರಣೆ–** ಧರ್ಮಿಯು ಒಂದೇ ರೀತಿಯಾಗಿರುವಾಗ ಧರ್ಮಗಳ ಇಲ್ಲದಿರುವಿಕೆಯು ಎಲ್ಲಿಯೂ ಕಂಡಿಲ್ಲ. ಧರ್ಮಿ ಎಂಬ ಶಬ್ದಕ್ಕೆ ಧರ್ಮವನ್ನು ಹೊಂದಿದೆ ಎಂದರ್ಥ. ಧರ್ಮಿಯಲ್ಲಿ ಧರ್ಮವಿರುವುದಿಲ್ಲ ಎಂಬ ಮಾತು ವ್ಯಾಹತವಾಗಿರುತ್ತದೆ. ಆದ್ದರಿಂದ, ಧರ್ಮಿಯಲ್ಲಿ ಧರ್ಮವಿಲ್ಲ ಎಂಬ ಮಾತು ಅತ್ಯಂತ ಮೂರ್ಖತನದ್ದಾಗಿದೆ.

ಆದರೆ ತಾರ್ಕಿಕರು 'ಉತ್ಪನ್ನಂ ದ್ರವ್ಯಂ ಕ್ಷಣಂ ಅಗುಣಂ ನಿಷ್ಕ್ರಿಯಂ ಚ ತಿಷ್ಠತಿ' 'ಹುಟ್ಟಿದ ಪದಾರ್ಥವು ಪ್ರಥಮಕ್ಷಣದಲ್ಲಿ ಯಾವುದೇ ಗುಣವನ್ನು ಯಾವುದೇ

ಕ್ರಿಯೆಯನ್ನು ಹೊಂದಿರುವುದಿಲ್ಲ' ಎಂಬ ನ್ಯಾಯವನ್ನು ಒಪ್ಪಿರುತ್ತಾರೆ. ಇದು ಕೇವಲ ಆಗ್ರಹ ಮೂಲಕವೇ ಹೊರತು ವಸ್ತುಸ್ಥಿತಿಯಲ್ಲ. ಒಂದು ವೇಳೆ, ಹುಟ್ಟಿದ ಪದಾರ್ಥವು ಪ್ರಥಮ ಕ್ಷಣದಲ್ಲಿ ರೂಪ ಮೊದಲಾದ ಗುಣಗಳಿಗೆ ಆಧಾರವಾಗಿರುವುದಿಲ್ಲವೆಂದು ಹೇಳಿದರೆ, ನೂಲಿನಿಂದ ಬಟ್ಟೆಯು ನಿರ್ಮಿತವಾದ ಪ್ರಥಮ ಕ್ಷಣದಲ್ಲಿ ನೂಲಿನಲ್ಲಿರುವ ಬಿಳಿ ಬಣ್ಣವು ಎಲ್ಲಿ ಓಡಿ ಹೋಯಿತು? ಹೀಗೆ ಅನುಭವವಿರುದ್ಧವಾದ ಇವರ ಯಾವ ನ್ಯಾಯಗಳಿಗೂ ಆಧಾರವಿರುವುದಿಲ್ಲ.

**ಧರ್ಮಿಣೋ ಧರ್ಮವಿಕೃತೌ ವಿಕಾರೋಽಸ್ತ್ಯೇವ ಕಶ್ಚನ ।**
**ಅವಿಕಾರೀ ತು ಯೋ ಧರ್ಮೀ ತದ್ಧರ್ಮೋಽಪಿ ಹ್ಯವಿಕ್ರಿಯಃ ॥**
**ಕಿಮಾಪ್ಯಪರಮಾಣೂನಾಂ ಶುಕ್ಲತಾಯಾಃ ಕ್ವಚಿತ್ ಕ್ಷಯಃ ॥ ೬೩೭ ॥**

**ಅರ್ಥ–** ಧರ್ಮವಿಕೃತೌ = ಧರ್ಮವು ವಿಕಾರವನ್ನು ಪಡೆದರೆ, ಧರ್ಮಿಣಃ = ಧರ್ಮಿಯಾದ ಪದಾರ್ಥಕ್ಕೆ, ಕಶ್ಚನ ವಿಕಾರಃ = ಏನಾದರೊಂದು ಪರಿಣಾಮವು, ಅಸ್ತಿ ಏವ = ಇದ್ದೇ ಇರುತ್ತದೆ. ಯಃ ಧರ್ಮೀ = ಯಾವ ಧರ್ಮಿಯು, ಅವಿಕಾರೀ = ವಿಕಾರವನ್ನು ಹೊಂದಿರುವುದಿಲ್ಲವೋ, ತದ್ಧರ್ಮಃ ಅಪಿ = ಅದರ ಧರ್ಮವೂ ಸಹ, ಅವಿಕ್ರಿಯಃ ಹಿ = ವಿಕಾರವನ್ನು ಹೊಂದಿರುವುದಿಲ್ಲವಷ್ಟೆ. ಆಪ್ಯಪರಮಾಣೂನಾಂ = ಜಲಪರಮಾಣುಗಳ, ಶುಕ್ಲತಾಯಾಃ = ಬಿಳಿ ಬಣ್ಣಕ್ಕೆ, ಕ್ವಚಿತ್ = ಎಂದಾದರೂ, ಕ್ಷಯಃ ಕಿಮ್ = ನಾಶವಿದೆಯೇನು?

**ಅನುವಾದ–** ರೂಪರಸಾದಿಗಳು ವಿಕಾರವನ್ನು ಪಡೆದರೆ ಧರ್ಮಿಯಾದ ಪದಾರ್ಥದಲ್ಲಿ ಯಾವುದಾದರೊಂದು ವಿಕಾರವು ಆಗಿಯೇ ಆಗುತ್ತದೆ. ಯಾವ ಪದಾರ್ಥದಲ್ಲಿ ವಿಕಾರವಿರುವುದಿಲ್ಲವೋ, ಆ ಪದಾರ್ಥದಲ್ಲಿರುವ ಧರ್ಮಗಳೂ ಕೂಡ ವಿಕಾರವನ್ನು ಹೊಂದುವುದಿಲ್ಲ. ಜಲಪರಮಾಣುಗಳಲ್ಲಿರುವ ಬಿಳಿ ಬಣ್ಣವು ಯಾವತ್ತಾದರೂ ನಷ್ಟವಾಗುವುದೇನು !

**ದ್ವಿಪಾಕಪ್ರಕ್ರಿಯಾತೋಽಪಿ ಪಾಕಾಯೋಗ್ಯೇ ನ ವಿಕ್ರಿಯಾ ।**
**ಹರಿಸ್ತು ದಹನಾಂತಃಸ್ಥಃ ಪೀತಾಗ್ನಿರ್ಮುಕ್ತಚೇತನಃ ॥ ೬೩೮ ॥**

**ಅರ್ಥ–** ದ್ವಿಪಾಕಪ್ರಕ್ರಿಯಾತಃ ಅಪಿ = ಪೀಲುಪಾಕ ಹಾಗೂ ಪಿಠರಪಾಕಗಳೆಂಬ ಪ್ರಕ್ರಿಯೆಗಳಿಂದಲೂ, ಪಾಕಾಯೋಗ್ಯೇ = ಪಾಕಕ್ರಿಯೆಗೆ ಅರ್ಹವಲ್ಲದ ವಸ್ತುವಿನಲ್ಲಿ, ವಿಕ್ರಿಯಾ ನ = ಯಾವುದೇ ವಿಕಾರವಾಗಲು ಸಾಧ್ಯವಿಲ್ಲ. ಹರಿಃ ತು= ಶ್ರೀಹರಿಯಾದರೂ, ದಹನಾಂತಸ್ಥಃ = ಬೆಂಕಿಯ ಮಧ್ಯೆ ನಿಂತು, ಪೀತಾಗ್ನಿ= ಅಗ್ನಿಯನ್ನೇ ಪಾನ ಮಾಡಿದ, ಮುಕ್ತಚೇತನಃ = ನಿತ್ಯಮುಕ್ತನಾದ ಚೇತನನು.

**ಅನುವಾದ–** ಪೀಲುಪಾಕದ ಪ್ರಕ್ರಿಯೆಯನ್ನಾಗಲೀ, ಪಿಠರಪಾಕದ ಪ್ರಕ್ರಿಯೆಯನ್ನಾಗಲೀ ಪರಮಾತ್ಮನಲ್ಲಿ ಸರ್ವಥಾ ಹೇಳಲು ಸಾಧ್ಯವಿಲ್ಲ. ಏಕೆಂದರೆ ಪರಮಾತ್ಮನು ಕೃಷ್ಣನ ಅವತಾರರೂಪದಲ್ಲಿ ಬೆಂಕಿಯ ಮಧ್ಯೆ ನಿಂತು, ಬೆಂಕಿಯನ್ನೇ ಕುಡಿದ ಮಹಾಪುರುಷ. ಇಂತಹ ನಿತ್ಯಮುಕ್ತ ಚೇತನನಲ್ಲಿ ಪಾಕಕ್ರಿಯೆಯನ್ನು ಹೇಳುವಂತಹದ್ದು ಹಾಸ್ಯಾಸ್ಪದ ವಿಚಾರ.

**ಭಾವವಿಲಾಸಿನೀ–** ನಿಮಿತ್ತತ್ರಯೇಣ ಹರೇಃ ಪಾಕಾಯೋಗ್ಯತ್ವಮುಪಪಾದಯತಿ – ಹರಿಸ್ತ್ವಿತಿ ॥ ೬೩೮ ॥

**ವಿವರಣೆ–** ಮೂರು ನಿಮಿತ್ತಗಳಿಂದ ಶ್ರೀಹರಿಯು ಪಾಕಕ್ರಿಯೆಗೆ ಅರ್ಹನಲ್ಲನೆಂಬುದನ್ನು ಉಪಪಾದನೆ ಮಾಡುತ್ತಿದ್ದಾರೆ. ನಿರ್ವಿಕಾರನು, ಮುಕ್ತನು ಮತ್ತು ಚೇತನನು. ಆದ್ದರಿಂದ ಅವನಲ್ಲಿ ಧರ್ಮನಾಶವಾಗುವುದಿಲ್ಲವೆಂದು ಅಭಿಪ್ರಾಯ.

**ಅತಸ್ತದ್ರೂಪಸೌಂದರ್ಯಶೌರ್ಯಧೈರ್ಯಪರಾಕ್ರಮಾಃ ।**
**ಸ್ವಾತಂತ್ರ್ಯವಶಿತೇಶತ್ವಪೂರ್ವಾಸ್ಸರ್ವೇ ಗುಣಾ ಧ್ರುವಾಃ ॥ ೬೩೯ ॥**

**ಅರ್ಥ–** ಅತಃ = ಆದ್ದರಿಂದ, ತದ್ರೂಪಸೌಂದರ್ಯಶೌರ್ಯಧೈರ್ಯಪರಾಕ್ರಮಾಃ= ಪರಮಾತ್ಮನಸ್ವರೂಪವಾದ-ಸೌಂದರ್ಯ-ಶೂರತ್ವ-ಧೈರ್ಯ-ಪರಾಕ್ರಮಗಳು-ಸ್ವಾತಂತ್ರ್ಯ ವಶಿತೇಶಿತ್ವಪೂರ್ವಾಃ= ಸರ್ವಸ್ವಾತಂತ್ರ್ಯ-ಸರ್ವಜಗತ್ತನ್ನು ಅಧೀನದಲ್ಲಿಟ್ಟುಕೊಳ್ಳುವಿಕೆ ಸಕಲ ಜಗತ್ತಿನ ಒಡೆತನ ಇವೇ ಮೊದಲಾದ, ಸರ್ವೇ ಗುಣಾಃ = ಎಲ್ಲಾ ಗುಣಗಳು, ಧ್ರುವಾಃ = ನಿತ್ಯವಾಗಿವೆ.

**ಅನುವಾದ–** ಆದ್ದರಿಂದ ಪರಮಾತ್ಮನ ಸ್ವರೂಪವಾದ- ಸೌಂದರ್ಯ-ಧೈರ್ಯ-ಪರಾಕ್ರಮ ಸರ್ವ ಸ್ವಾತಂತ್ರ್ಯ ಶೂರತ್ವ ಸರ್ವ ಜಗತ್ತನ್ನು ಅಧೀನದಲ್ಲಿಟ್ಟುಕೊಳ್ಳುವಿಕೆ-ಸಕಲ ಜಗತ್ತಿನ ಒಡೆತನ ಇವೇ ಮೊದಲಾದ ಗುಣಗಳು ನಿತ್ಯವಾಗಿ ಒಂದೇ ರೀತಿಯಲ್ಲಿರುತ್ತವೆ. ಇವುಗಳು ಇಲ್ಲವೆಂದಾಗಲೀ ಅಥವಾ ಪರಿಣಾಮಗಳನ್ನು ಹೊಂದುತ್ತವೆಂದಾಗಲಿ ಹೇಳಲು ಯಾರಿಗೂ ಸಾಧ್ಯವಿಲ್ಲ.

**ಯದನ್ಯವರತೋಽಪ್ರಾಪ್ತಾಸ್ತೇನ ನೌಪಾಧಿಕಾ ಇಮೇ ।**
**ಅನೌಪಾಧಿಕಧರ್ಮಾಣಾಂ ಧರ್ಮ್ಯನಾಶೇ ನ ನಾಶನಮ್ ॥ ೬೪೦ ॥**

**ಅರ್ಥ–** ಇಮೇ = ಈ ಭಗವಂತನ ಗುಣಗಳು, ಯತ್ = ಯಾವ ಕಾರಣದಿಂದ, ಅನ್ಯವರತಃ = ಬೇರೆಯವರ ವರದಿಂದ, ಅಪ್ರಾಪ್ತಾಃ = ಬಂದಿರುವವಗಳಲ್ಲವೋ. ತೇನ = ಆ ಕಾರಣದಿಂದ, ಔಪಾಧಿಕಾಃ = ಔಪಾಧಿಕಗಳೂ ಕೂಡ, ನ = ಅಲ್ಲ. ಅನೌಪಾಧಿಕ-

ಧರ್ಮಾಣಾಂ = ಸ್ವಾಭಾವಿಕವಾದ ಧರ್ಮಗಳಿಗೆ, ಧರ್ಮಿನಾಶೇ = ಧರ್ಮಿಯ ನಾಶವಿಲ್ಲದಿದ್ದರೆ, ನ ನಾಶನಮ್ = ನಾಶವಿಲ್ಲ.

**ಅನುವಾದ–** ಆದರೆ ಪರಮಾತ್ಮನಲ್ಲಿರುವ ಯಾವ ಸದ್ಗುಣಗಳಿವೆಯೋ ಅವುಗಳು ಮತ್ತೊಬ್ಬರ ವರಬಲದಿಂದ ಬಂದಿರುವುಗಳಲ್ಲ. ಹಾಗೆ ಬಂದಿದ್ದಲ್ಲಿ, ಈ ಗುಣಗಳೂ ಔಪಾಧಿಕಗಳೆಂದು ಹೇಳಬಹುದಿತ್ತು. ಆದ್ದರಿಂದ, ಔಪಾಧಿಕವಾದ ಗುಣಗಳಿಗಷ್ಟೆ ಧರ್ಮಿನಾಶವಿಲ್ಲದಿದ್ದರೂ ಧರ್ಮನಾಶವನ್ನು ಹೇಳಬಹುದು. ಅನೌಪಾಧಿಕವಾದ, ಸ್ವಾಭಾವಿಕವಾದ ಗುಣಗಳಿಗೆ ಧರ್ಮಿನಾಶವಾಗದಿದ್ದರೆ ನಾಶವನ್ನು ಹೇಳಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ಅನೌಪಾಧಿಕತ್ವಾನ್ನ ಭಗವದ್ಗುಣಾನಾಮಪಗಮ ಇತ್ಯಾಹ – **ಯದನ್ಯೇತಿ** ॥ ಧರ್ಮ್ಯನಾಶೇ ನಾಶನಂ ನೇತಿ ಸಂಬಂಧಃ ॥ ೬೪೦ ॥

**ವಿವರಣೆ–** ಔಪಾಧಿಕವಾದ ಗುಣಗಳಿಗೆ ಧರ್ಮಿನಾಶವಿಲ್ಲದಿದ್ದಾಗಲೂ ನಾಶವಿರಬಹುದಾದರೂ. ಪರಮಾತ್ಮನ ಗುಣಗಳು ಸ್ವಾಭಾವಿಕವಾದ್ದರಿಂದ ಧರ್ಮಿ-ನಾಶವಾಗದಿದ್ದರೆ ನಾಶವಿರುವುದಿಲ್ಲ.

**ಜ್ಞಾನಂ ಚ ಮಾನಸಂ ಕ್ಷಯ್ಯಂ ಸಾಕ್ಷಿಜ್ಞಾನಂ ತ್ವನಶ್ವರಮ್ ।**
**ಪೂರ್ವನಾಶೇ ಪರಂ ಜ್ಞಾನಂ ಭಾವನಾ ವಾ ಮನಸ್ಯಪಿ ॥ ೬೪೧ ॥**

**ಅರ್ಥ–** ಮಾನಸಂ ಜ್ಞಾನಂ ಚ = ಮನಸ್ಸಿನಿಂದ ಹುಟ್ಟಿದ ಜ್ಞಾನವಾದರೂ, ಕ್ಷಯ್ಯಮ್ = ನಾಶವುಳ್ಳದ್ದು. ತು = ಆದರೆ, ಸಾಕ್ಷಿಜ್ಞಾನಂ = ಸಾಕ್ಷಿಯಿಂದ ಬರುವ ಜ್ಞಾನವು, ಅನಶ್ವರಮ್ = ನಾಶವಿಲ್ಲದ್ದು. ಪೂರ್ವನಾಶೇ = ಮನಸ್ಸಿನಿಂದ ಬರುವ ಹಿಂದಿನ ಜ್ಞಾನವು ನಾಶವಾದ ಮೇಲೆ, ಪರಂ = ಮತ್ತೊಂದು, ಜ್ಞಾನಂ = ಜ್ಞಾನವು, ವಾ = ಅಥವಾ, ಭಾವನಾ = ಸಂಸ್ಕಾರವು, ಮನಸಿ = ಮನಸ್ಸಿನಲ್ಲಿ ಉಂಟಾಗುತ್ತದೆ.

**ಅನುವಾದ–** ಮನಸ್ಸಿನಿಂದ ಹುಟ್ಟಿದ ಜ್ಞಾನವು ನಾಶವುಳ್ಳದ್ದು. ಮೊದಲು ಬಂದ ಜ್ಞಾನವು ನಾಶ ಹೊಂದಿದ ಬಳಿಕ ಎರಡನೆಯ ಜ್ಞಾನ ಹುಟ್ಟುತ್ತದೆ. ಅಥವಾ ಸಂಸ್ಕಾರವು ಮನಸ್ಸಿನಲ್ಲಿ ಉಳಿಯುತ್ತದೆ. ಆದರೆ ಸಾಕ್ಷಿರೂಪವು ನಿತ್ಯವಾಗಿದೆ.

**ಭಾವವಿಲಾಸಿನೀ–** ಅಪ್ರಾಕೃತತ್ವಾಚ್ಚ ಬ್ರಹ್ಮಣೋ ನ ಜ್ಞಾನಾದಿಗುಣಾನಾಂ ನಾಶ ಇತ್ಯಾಹ – **ಜ್ಞಾನಂ ಚೇತಿ** ॥ ಮನಸ್ಯಪಿ ನ ಸರ್ವಥಾ ಜ್ಞಾನನಾಶ ಇತ್ಯಾಹ – **ಪೂರ್ವೇತಿ** ॥ ಭಾವನಾ ಸಂಸ್ಕಾರಃ ॥ ೬೪೧ ॥

**ವಿವರಣೆ–** ಅಪ್ರಾಕೃತನಾದ ಬ್ರಹ್ಮನ ಜ್ಞಾನಾದಿ ಗುಣಗಳು ನಾಶವಾಗಲು ಸಾಧ್ಯವಿಲ್ಲವೆಂದು ಸಮರ್ಥಿಸುತ್ತಿದ್ದಾರೆ. ಪ್ರಾಕೃತವಾದ ಮನಸ್ಸೇ ಇಲ್ಲದ ಕಾರಣ

ಮಾನಸಿಕ ಜ್ಞಾನನಾಶವನ್ನು ಕೂಡ ಪರಮಾತ್ಮನಲ್ಲಿ ಹೇಳಲಾಗದೆಂದು 'ಪೂರ್ವನಾಶೇ' ಇತ್ಯಾದಿ ಉತ್ತರಾರ್ಧದಿಂದ ಸಮರ್ಥಿಸುತ್ತಿದ್ದಾರೆ.

**ಮನಸ್ತ್ವಾಣುತ್ವಪೂರ್ವಾಸ್ತು ಧರ್ಮಾಸ್ತತ್ರಾಪಿ ಧರ್ಮಿವತ್ ।**
**ಸತಿ ಧರ್ಮಿಣಿ ಧರ್ಮಾಣಾಂ ಸರ್ವಥಾ ಕುತ್ರ ಮುಂಡನಮ್ ॥ ೬೪೨ ॥**

**ಅರ್ಥ–** ತತ್ರ ಅಪಿ= ಮನಸ್ಸಿನ ವಿಷಯದಲ್ಲಿ ಕೂಡ, ಮನಸ್ತ್ವಾಣುತ್ವಪೂರ್ವಾಃ = ಮನಸ್ತ್ವಮತ್ತು ಅಣುತ್ವ ಮೊದಲಾದ, ಧರ್ಮಾಃ = ಧರ್ಮಿಯಾದ ಮನಸ್ಸಿನಂತೆ ನಿತ್ಯಗಳಾಗಿವೆ, ಸತಿ ಧರ್ಮಿಣಿ= ಧರ್ಮಿ ಇರುವ ತನಕ, ಧರ್ಮಾಣಾಂ = ಧರ್ಮಗಳ, ಮುಂಡನಂ = ನಾಶನವು, ಸರ್ವಥಾ = ಖಂಡಿತವಾಗಿಯೂ, ಕುತ್ರ = ಎಲ್ಲಿಂದ ಬರಲು ಸಾಧ್ಯ.

**ಅನುವಾದ–** ಮನಸ್ಸಿನಲ್ಲಿರುವ ಮನಸ್ತ್ವ, ಅಣುತ್ವ ಮೊದಲಾದ ಧರ್ಮಗಳು ಧರ್ಮಿಯಾದ ಮನಸ್ಸಿನಂತೆಯೇ ನಾಶರಹಿತಗಳಾಗಿವೆ. ಧರ್ಮಿ ಇದ್ದು ಧರ್ಮವು ಸರ್ವಥಾ ನಾಶವಾಗುವುದು ಎಲ್ಲಿ ಕಂಡಿದೆ?

**ಭಾವವಿಲಾಸಿನೀ–** ಧರ್ಮಿವನ್ಮನೋವತ್ । ಮನಸ್ಯಪಿ ನಾಣುತ್ವಾದಿಧರ್ಮಾಣಾಂ ನಾಶಃ । ಘಟಾದಾವಪಿ ಸತಿ ಧರ್ಮಿಣಿ ನ ಸರ್ವಥಾ ಧರ್ಮನಾಶಃ, ಕಿಮುತಾಲೌಕಿಕೇ ಭಗವತಿ? ಇತಿ ಭಾವಃ ॥ ೬೪೨ ॥

**ವಿವರಣೆ–** ಮನಸ್ಸಿನಲ್ಲಿರುವ ಮನಸ್ತ್ವ, ಅಣುತ್ವ ಮೊದಲಾದ ಧರ್ಮಗಳೂ ಕೂಡ ನಿತ್ಯವೇ ಆಗಿವೆ. ಘಟಾದಿಗಳಲ್ಲಿಯೂ ಧರ್ಮಿ ಇರುವಾಗಲೇ ಘಟತ್ವಾದಿ ಧರ್ಮ ನಾಶವಾಗಿದ್ದು ಕಂಡಿಲ್ಲ. ಹೀಗೆ ಲೌಕಿಕವಾದ ಪದಾರ್ಥಗಳಲ್ಲಿಯೇ ಧರ್ಮಿ ಇರುವಾಗ ಧರ್ಮ ನಾಶವಾಗಿದ್ದು ಕಾಣದೇ ಇದ್ದಾಗ ಅಲೌಕಿಕನಾದ ಭಗವಂತನಲ್ಲಿ ಸರ್ವಧರ್ಮನಾಶವನ್ನು ಒಪ್ಪಲು ಹೇಗೆ ಸಾಧ್ಯ?

**ಧರ್ಮ್ಯಸತ್ತ್ವೇಽಪಿ ಧರ್ಮಃ ಸನ್ ಪ್ರತಿಯೋಗಿತ್ವಪೂರ್ವವತ್ ।**
**ಸತಿ ಧರ್ಮಿಣಿ ಧರ್ಮಾಣಾಮಸತ್ತ್ವಂ ತು ನ ಕುತ್ರಚಿತ್ ॥ ೬೪೩ ॥**

**ಅರ್ಥ–** ಧರ್ಮ್ಯಸತ್ತ್ವೇ ಅಪಿ = ಧರ್ಮಿಯು ಇಲ್ಲದಿದ್ದರೂ, ಪ್ರತಿಯೋಗಿತ್ವ-ಪೂರ್ವವತ್ = ಘಟದ ಪ್ರತಿಯೋಗಿತ್ವ ಮೊದಲಾದವುಗಳಂತೆ, ಧರ್ಮಃ = ಧರ್ಮವು, ಸನ್ = ಇರುವುದು ಕಂಡಿದೆ. ತು = ಆದರೆ, ಸತಿ ಧರ್ಮಿಣಿ = ಧರ್ಮಿಯು ಇರುತ್ತಿರುವಾಗಲೇ, ಧರ್ಮಾಣಾಂ = ಧರ್ಮಗಳ, ಅಸತ್ತ್ವಂ = ಇಲ್ಲದಿರುವಿಕೆಯು, ನ ಕುತ್ರಚಿತ್ = ಎಲ್ಲಿಯೂ ಕಂಡಿಲ್ಲ.

**ಅನುವಾದ–** ಕೆಲವೊಮ್ಮೆ ಘಟಾದಿ ಧರ್ಮಿಗಳು ನಾಶವಾದ ಮೇಲೂ ಅದರಲ್ಲಿ ಪ್ರತಿಯೋಗಿತ್ವ, ಜ್ಞೇಯತ್ವ ಮೊದಲಾದ ಧರ್ಮಗಳಿರುತ್ತವೆ. ಹೀಗೆ ಧರ್ಮಿ ಇಲ್ಲದಿದ್ದರೂ ಧರ್ಮದ ಇರುವಿಕೆಯು ಲೋಕದಲ್ಲಿ ಕಂಡಿದೆ. ಆದರೆ ಧರ್ಮಿ ಇದ್ದಾಗಲೇ ಧರ್ಮವು ನಾಶವಾಗಿರುವುದು ಲೋಕದಲ್ಲೆಲ್ಲಿಯೂ ಕಂಡಿಲ್ಲ.

**ಭಾವವಿಲಾಸಿನೀ–** ಧರ್ಮ್ಯಸತ್ತ್ವೇಽಪಿ ಧ್ವಸ್ತಘಟಾದೀನಾಮಭಾವೇಽಪಿ ಪ್ರತಿಯೋಗಿತ್ವ-ಪೂರ್ವವದ್ ಅಭಾವಪ್ರತಿಯೋಗಿತ್ವಜ್ಞೇಯತ್ವಾದಿವತ್ । ಬ್ರಹ್ಮನಾಶೇಽಪಿ ನ ತದ್ಧರ್ಮನಾಶ ಇತಿ ಭಾವಃ ॥ ೬೪೩ ॥

**ವಿವರಣೆ–** ಧರ್ಮಿಯಾದ ಘಟವಿಲ್ಲದಿದ್ದರೂ ಅಭಾವಪ್ರತಿಯೋಗಿತ್ವ, ಜ್ಞೇಯತ್ವ ಮೊದಲಾದ ಧರ್ಮಗಳಿರುವುದು ಕಂಡಿದೆ. ಬ್ರಹ್ಮನೇ ನಾಶವನ್ನು ಹೊಂದಿದರೂ ಅವನಲ್ಲಿರುವ ಧರ್ಮಗಳಿಗೆ ನಾಶವನ್ನು ಹೇಳಲು ಸರ್ವಥಾ ಸಾಧ್ಯವಿಲ್ಲ ಎಂದು ಅಭಿಪ್ರಾಯ.

ರೂಪ್ಯಬಾಧೇ ಹಿ ರೂಪ್ಯತ್ವಬಾಧೋ ದೃಷ್ಟೋ ಭ್ರಮೇಽಪಿ ಚ ।
ಅತಃ ಶ್ರೌತಾತ್ಮಧರ್ಮಾಣಾಂ ಬಾಧೋಽಪ್ಯೇಷ ನ ಲೌಕಿಕಃ ॥ ೬೪೪ ॥

**ಅರ್ಥ–** ಭ್ರಮೇ ಅಪಿ = ಭ್ರಮೆಯಲ್ಲಿಯೂ ಸಹ, ರೂಪ್ಯಬಾಧೇ ಹಿ = ಶುಕ್ತಿರಜತವು ಬಾಧಿತವಾದರಷ್ಟೆ ರೂಪ್ಯತ್ವಬಾಧಃ = ಶುಕ್ತಿಯಲ್ಲಿ ತೋರಿದ ರೂಪ್ಯತ್ವದ ಬಾಧವು, ದೃಷ್ಟಃ = ಅನುಭೂತವಾಗಿದೆ. ಅತಃ = ಆದ್ದರಿಂದ, ಶ್ರೌತಾತ್ಮಧರ್ಮಾಣಾಂ = ಶ್ರುತಿಸಿದ್ಧವಾದ ಬ್ರಹ್ಮನ ಧರ್ಮಗಳ, ಏಷಃ= ಈ, ಬಾಧಃ ಅಪಿ= ಬಾಧವಾದರೂ, ನ ಲೌಕಿಕಃ= ಲೋಕದಲ್ಲಿ ಕಂಡ ಕ್ರಮಕ್ಕಿಂತ ವಿಲಕ್ಷಣವಾಗಿದೆ.

**ಅನುವಾದ–** ಶುಕ್ತಿಯನ್ನು ನೋಡಿ ರಜತ ಎಂದು ಭ್ರಾಂತಿ ಬಂದಾಗ ಮುಂದಿರುವ ಪದಾರ್ಥವು ಬೆಳ್ಳಿಯಲ್ಲವೆಂದು ನಿಶ್ಚಯವಾದ ಮೇಲೆ ಶುಕ್ತಿಯಲ್ಲಿ ರೂಪ್ಯತ್ವವಿಲ್ಲವೆಂದು ನಿಶ್ಚಯವಾಗುತ್ತದೆ. ಬ್ರಹ್ಮನು ಇರುವಂತೆಯೇ ಶ್ರುತಿಸಿದ್ಧವಾದ ಧರ್ಮಗಳಿಗೆ ನೀವು ಹೇಳುವ ಬಾಧವು ಲೋಕದಲ್ಲಿ ಕಂಡ ಕ್ರಮಕ್ಕಿಂತ ವಿಲಕ್ಷಣವಾಗಿದೆ.

**ಭಾವವಿಲಾಸಿನೀ–** ಲೋಕಮರ್ಯಾದಯಾ ಬ್ರಹ್ಮಧರ್ಮಾಣಾಮನಾಶ್ಯತ್ವಮುಪಪಾದ್ಯ ಲೋಕಮರ್ಯಾದಯೈವಾಬಾಧ್ಯತ್ವಮುಪಪಾದಯತಿ – **ರೂಪ್ಯಬಾಧೇ ಹೀತಿ** ॥ ನತು ರೂಪ್ಯಾ-ಬಾಧೇ । ಅತಃ ಧರ್ಮಬಾಧಸ್ಯ ಧರ್ಮಿಬಾಧಾವಿನಾಭೂತತ್ವಾತ್ । ಶ್ರೌತೇತ್ಯನೇನಾಬಾಧ್ಯತ್ವೇ ಶ್ರುತಿಸಿದ್ಧತ್ವಹೇತುಂ ಆತ್ಮೇತ್ಯನೇನಾಬಾಧ್ಯಧರ್ಮಿಕತ್ವಂ ಚ ಹೇತುಂ ಸೂಚಯತಿ । ಲೌಕಿಕಃ ಲೋಕದೃಷ್ಟಾನುಸಾರೀ ॥ ೬೪೪ ॥

**ವಿವರಣೆ–** ಇಲ್ಲಿಯ ತನಕ ಲೋಕದ ಕ್ರಮದಂತೆ ಬ್ರಹ್ಮ ಧರ್ಮಗಳಿಗೆ ನಾಶವಿಲ್ಲವೆಂದು ಉಪಪಾದನೆ ಮಾಡಿದರು. ಈಗ ಲೋಕಮರ್ಯಾದೆಯಿಂದಲೇ ಬಾಧ್ಯತ್ವವಿಲ್ಲವೆಂದು ಉಪಪಾದನೆ ಮಾಡುತ್ತಿದ್ದಾರೆ. ಧರ್ಮಬಾಧವು ಧರ್ಮಿ-ಬಾಧದಿಂದ ಅವಿನಾಭೂತವಾಗಿರುತ್ತದೆ. ಎಂದರೆ, ಮೊದಲು ಧರ್ಮಿಯು ಬಾಧಿತ-ವಾದರಷ್ಟೇ ಅನಂತರ ಧರ್ಮವು ಬಾಧಿತವಾಗುತ್ತದೆಂದು ಶುಕ್ತಿರಜತದಲ್ಲಿ ಕಂಡಿದೆ. ಶುಕ್ತಿಯು ರಜತವಲ್ಲವೆಂದು ತಿಳಿದ ಅನಂತರ ಶುಕ್ತಿಯಲ್ಲಿ ರಜತತ್ವವಿಲ್ಲವೆಂಬ ಬಾಧ ಜ್ಞಾನವು ಬರುವುದು ಲೋಕದಲ್ಲಿ ಕಂಡಿದೆ. ಅದರಂತೆ ಪರಮಾತ್ಮನು ಬಾಧಿತನಾದರೆ ಅವನಲ್ಲಿರುವ ಧರ್ಮಗಳಿಗೆ ಬಾಧವನ್ನು ಹೇಳಬಹುದು ಹೊರತು ಪರಮಾತ್ಮನಿಗೆ ಬಾಧವನ್ನು ಹೇಳದೆ ನೇರವಾಗಿ ಪರಮಾತ್ಮನ ಧರ್ಮಗಳಿಗೆ ಬಾಧವನ್ನು ಹೇಳುವುದು ತಪ್ಪಾಗುತ್ತದೆ. 'ಶ್ರೌತಾತ್ಮಧರ್ಮಾಣಾಂ' ಎಂಬಲ್ಲಿ ಶ್ರೌತಪದದಿಂದ ಬ್ರಹ್ಮನ ಧರ್ಮಗಳು ಬಾಧಿತವಾಗುವುದಿಲ್ಲವೆಂಬ ವಿಷಯವು ಶ್ರುತಿಸಿದ್ಧವಾಗಿವೆ ಎಂದು ತಿಳಿಸಿದ್ದಾರೆ. 'ಆತ್ಮ' ಎಂಬ ಪದದಿಂದ ಧರ್ಮಿಯಾದ ಪರಮಾತ್ಮನೂ ಕೂಡ ಬಾಧಿತನಲ್ಲವೆಂದು ತಿಳಿಸಿದ್ದಾರೆ. 'ನ ಲೌಕಿಕಃ' ಎಂದರೆ ಲೋಕದಲ್ಲಿ ಕಂಡಿಲ್ಲ ಎಂದರ್ಥ.

**ಘಟಾದಿಧರ್ಮಾಸ್ತತ್ಸತ್ತಾಸಮಸತ್ತಾ ಯತೋಽಖಿಲಾಃ ।**
**ಅತಃ ಸತ್ಯಾತ್ಮಧರ್ಮಾಶ್ಚ ಸತ್ಯಾಃ ಸ್ಯುರ್ನಾತ್ರ ಸಂಶಯಃ ॥ ೬೪೫ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಅಖಿಲಾಃ = ಸಮಸ್ತವಾದ, ಘಟಾದಿ-ಧರ್ಮಾಃ= ಘಟ ಪಟಾದಿಗಳ ಧರ್ಮಗಳು, ತತ್ಸತ್ತಾಸಮಸತ್ತಾಃ = ಧರ್ಮಿಸತ್ತಾ-ಸಮಾನಸತ್ತಾಕಗಳಾಗಿರುತ್ತವೋ, ಅತಃ = ಆ ಕಾರಣದಿಂದ, ಸತ್ಯಾತ್ಮಧರ್ಮಾಶ್ಚ = ಸತ್ಯಭೂತನಾದ ಆತ್ಮನ ಧರ್ಮಗಳೂ ಕೂಡ, ಸತ್ಯಾಃ = ಸತ್ಯವೇ ಆಗುತ್ತವೆ. ಅತ್ರ = ಈ ವಿಷಯದಲ್ಲಿ, ನ ಸಂಶಯಃ = ಸ್ವಲ್ಪವೂ ಸಂಶಯವಿಲ್ಲ.

**ಅನುವಾದ– ಘಟಪಟಾದಿಗಳೆಲ್ಲವೂ ಸತ್ಯವಾದಂತೆ, ಅವುಗಳ ಧರ್ಮಗಳೂ ಕೂಡ ಸತ್ಯವೇ ಆಗಿರುತ್ತವೆ. ಏಕೆಂದರೆ ಧರ್ಮಗಳೆಲ್ಲವೂ ಧರ್ಮಿಸತ್ತಾಸಮಾನ-ಸತ್ತಾಕವಾಗಿರುತ್ತವೆಂದು ಸರ್ವಾಂಗೀಕೃತವಾದ ನಿಯಮ. ಪ್ರಕೃತ, ಪರಮಾತ್ಮನಲ್ಲಿರುವ ಧರ್ಮಗಳೂ ಕೂಡ ಧರ್ಮಿಸತ್ತಾಸಮಾನಸತ್ತಾಕಗಳೇ ಆಗುತ್ತವೆ. ಪರಮಾತ್ಮನು ಸತ್ಯನಾದ್ದರಿಂದ ಅವನಲ್ಲಿರುವ ಧರ್ಮಗಳೂ ಕೂಡ ಸತ್ಯವೇ ಆಗುತ್ತವೆ ಹೊರತು ಮಿಥ್ಯಾಭೂತವಾಗಲು ಸಾಧ್ಯವಿಲ್ಲ.**

**ಭಾವವಿಲಾಸಿನೀ–** ಪ್ರಾಯಶಃ ಸರ್ವತ್ರ ಧರ್ಮಾಣಾಂ ಧರ್ಮಿಸತ್ತಾಸಮಾನಸತ್ತಾಕತ್ವ-ನಿಯಮದರ್ಶನಾದ್ ಬ್ರಹ್ಮಧರ್ಮಾಣಾಮಪಿ ಬ್ರಹ್ಮಸತ್ತಾಸಮಾನಸತ್ತಾಕತ್ವಂ ಸ್ಯಾದಿತ್ಯಾಹ – **ಘಟಾದೀತಿ ॥ ೬೪೫ ॥**

**ವಿವರಣೆ–** ಲೋಕದಲ್ಲಿ ಪ್ರಾಯಶಃ ಧರ್ಮಿಗಳಿಗೆ ಸತ್ತ್ವ ಇರುವಷ್ಟು ಕಾಲ ಅವುಗಳ ಧರ್ಮಗಳಿಗೂ ಇರುತ್ತದೆ. ಆದ್ದರಿಂದ ಎಲ್ಲ ಧರ್ಮಗಳೂ ಧರ್ಮಿಸತ್ತಾಸಮಾನ ಸತ್ತಾ ಉಳ್ಳವುಗಳು. ಅದರಂತೆ ಬ್ರಹ್ಮನೂ ನಿತ್ಯನಾದ್ದರಿಂದ ಬ್ರಹ್ಮನ ಧರ್ಮಗಳೂ ಕೂಡ ಬ್ರಹ್ಮಸತ್ತಾಸಮಾನಸತ್ತಾಕಗಳೇ ಆಗಬೇಕು.

**ಅದೃಷ್ಟಕಲ್ಪನಾ ಕುರ್ಯಾದ್ ದುರದೃಷ್ಟಸ್ಯ ಕಲ್ಪನಾಮ್ ।**
**ಸತ್ಯಾ ನಿತ್ಯಾಸ್ತತೋ ಧರ್ಮಾಸ್ಸತ್ಯೇ ನಿತ್ಯೇ ಚ ಧರ್ಮಿಣಿ ॥ ೬೪೬ ॥**

**ಅರ್ಥ–** ಅದೃಷ್ಟಕಲ್ಪನಾ = ಅದೃಷ್ಟಕಲ್ಪನೆಯು, ದುರದೃಷ್ಟಸ್ಯ ಕಲ್ಪನಾಂ = ದುರದೃಷ್ಟ ಕಲ್ಪನೆಯನ್ನು, ಕುರ್ಯಾತ್ = ಮಾಡುತ್ತದೆ. ತತಃ = ಆದ್ದರಿಂದ, ಧರ್ಮಾಃ = ಧರ್ಮಗಳು, ಸತ್ಯೇ ನಿತ್ಯೇ ಚ ಧರ್ಮಿಣಿ = ಸತ್ಯನೂ ನಿತ್ಯನೂ ಆದ ಬ್ರಹ್ಮನಲ್ಲಿ, ಸತ್ಯಾ ನಿತ್ಯಾಃ = ಸತ್ಯವು ನಿತ್ಯವೂ ಆಗಿರುತ್ತವೆ.

**ಅನುವಾದ–** ಹೀಗೆ ಪರಮಾತ್ಮನಲ್ಲಿರುವ ಧರ್ಮಗಳೆಲ್ಲವೂ ಸತ್ಯವಾಗಿವೆ ಮತ್ತು ನಿತ್ಯನೂತನವಾಗಿವೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ಅನೇಕ ಲೌಕಿಕ ದೃಷ್ಟಾಂತಗಳಿಂದ ಈ ವಿಷಯವು ನಿಶ್ಚಯವಾಗಿದೆ. ಆದರೂ ಲೌಕಿಕ ಕ್ರಮಕ್ಕೆ ವಿರುದ್ಧವಾಗಿ ಧರ್ಮಗಳಿಗೆ ಅನಿತ್ಯತ್ವವನ್ನು ಅಥವಾ ಬಾಧವನ್ನು ಕಲ್ಪನೆ ಮಾಡುವುದಾದರೆ ನಿನ್ನ ದುರದೃಷ್ಟವನ್ನು ಕಲ್ಪಿಸಿದಂತಾಗುತ್ತದೆ. ಆದ್ದರಿಂದ ಸತ್ಯನೂ ನಿತ್ಯನೂ ಆದ ಪರಮಾತ್ಮನಲ್ಲಿರುವ ಧರ್ಮಗಳೂ ಕೂಡ ಸತ್ಯವೂ ನಿತ್ಯವೂ ಆಗಿರುತ್ತವೆ.

**ಭಾವವಿಲಾಸಿನೀ–** ವಿಪಕ್ಷೇ ಬಾಧಕಮಾಹ – **ಅದೃಷ್ಟಕಲ್ಪನೇತಿ** ॥ ದುರದೃಷ್ಟಸ್ಯ ಭಗವನ್ಮಹಿಮಾಸಹಿಷ್ಣುತ್ವಹೇತುಪಾಪಸ್ಯ । ಉಕ್ತಮರ್ಥಮುಪಸಂಹರತಿ – **ಸತ್ಯಾ ಇತಿ** ॥ ತತಃ ಲೋಕದೃಷ್ಟತ್ವಾತ್ ॥ ೬೪೬ ॥

**ವಿವರಣೆ–** ವಿಪಕ್ಷೇ ಬಾಧಕತರ್ಕವನ್ನು 'ಅದೃಷ್ಟ ಕಲ್ಪನಾ' ಇತ್ಯಾದಿ ಶ್ಲೋಕದಿಂದ ಹೇಳುತ್ತಿದ್ದಾರೆ. (ದುರದೃಷ್ಟ) ಎಂದರೆ ಪಾಪ ಎಂದರ್ಥ. ನೀನು ಮಾಡುವ ಅದೃಷ್ಟ-ಕಲ್ಪನೆಯಿಂದ ಭಗವನ್ಮಹಿಮೆಯನ್ನು ಸಹಿಸದಿರುವುದರಿಂದ ನಿನ್ನಲ್ಲಿ ಪಾಪ ಉಂಟಾಗಿದೆ ಎಂದೇ ಊಹಿಸಿಕೊಳ್ಳಬಹುದು ಎಂದಭಿಪ್ರಾಯ. ಇದುವರೆಗೂ ಸಮರ್ಥಿಸಿದ ವಿಷಯವನ್ನು ಉಪಸಂಹಾರ ಮಾಡುತ್ತಿದ್ದಾರೆ 'ಸತ್ಯಾಃ' ಎಂಬ ಉತ್ತರಾರ್ಧದಿಂದ.

**ಧ್ವನಿಸ್ತೂಪಾಧಿತೋ ಜಾತೋ ನಾಸೌ ಸ್ವಾಭಾವಿಕೋ ಗುಣಃ ॥ ೬೪೭ ॥**

**ಅರ್ಥ–** ಧ್ವನಿಃ ತು = ಧ್ವನಿರೂಪವಾದ ಧರ್ಮವಾದರೂ, ಉಪಾಧಿತಃ = ಭೇರೀತಾಡನಾದಿ ಉಪಾಧಿಗಳಿಂದ, ಜಾತಃ = ಹುಟ್ಟಿರುತ್ತದೆ. ಅಸೌ = ಈ ಧ್ವನಿಯು, ಸ್ವಾಭಾವಿಕಃ ಗುಣಃ = ಆಕಾಶದ ಸಹಜವಾದ ಗುಣವು, ನ = ಆಗಿರುವುದಿಲ್ಲ.

**ಅನುವಾದ**– ಧ್ವನಿರೂಪವಾದ ಶಬ್ದವು ಆಕಾಶದ ಸಹಜವಾದ ಗುಣವಲ್ಲ, ಹೊರತಾಗಿ ಭೇರೀತಾಡನಾದಿಗಳಿಂದ ಔಪಾಧಿಕವಾಗಿ ಹುಟ್ಟಿದ ಗುಣ. ಸ್ವಾಭಾವಿಕವಾದ ಗುಣಗಳಿಗಷ್ಟೆ ನಾಶವಿರುವುದಿಲ್ಲವೆಂದು ನಾವು ಹಿಂದೆ ಹೇಳಿದ್ದೇವೆ. ಔಪಾಧಿಕ ಗುಣಗಳಿಗೆ ನಾಶವಿರಬಹುದು. ಆದ್ದರಿಂದ ಧ್ವನಿಯಲ್ಲಿ ವ್ಯಭಿಚಾರದೋಷವು ಬರುವುದಿಲ್ಲ.

**ಭಾವವಿಲಾಸಿನೀ**– ಧರ್ಮ್ಯನಾಶೇ ಧರ್ಮಾಣಾಮಪ್ಯನಾಶ ಇತಿ ನಿಯಮಸ್ಯ ಧ್ವನೌ ವ್ಯಭಿಚಾರಮಾಶಂಕ್ಯ ಪರಿಹರತಿ–ಧ್ವನಿಸ್ತ್ವಿತಿ ॥ ಉಪಾಧಿತಃ ಭೇರೀತಾಡನಾದ್ಯುಪಾಧಿತಃ ॥ ೬೪೭ ॥

**ವಿವರಣೆ**– ಧರ್ಮಿನಾಶವಾಗದಿದ್ದರೆ ಧರ್ಮಗಳೂ ಕೂಡ ನಾಶವಾಗುವುದಿಲ್ಲ ಎಂಬ ನಿಯಮಕ್ಕೆ ಧ್ವನಿಯಲ್ಲಿ ವ್ಯಭಿಚಾರ ಬರುತ್ತದೆ? ಧರ್ಮಿಯಾದ ಆಕಾಶಕ್ಕೆ ನಾಶವಿಲ್ಲದಿದ್ದರೂ ಆಕಾಶದ ಧರ್ಮಗಳಾದ ಧ್ವನಿಗಳು ನಾಶ ಹೊಂದುತ್ತವಲ್ಲವೇ ಎಂದು ಆಶಂಕಿಸಿ ಉತ್ತರಿಸುತ್ತಿದ್ದಾರೆ. 'ಉಪಾಧಿತಃ' ಎಂದರೆ ಭೇರೀತಾಡನಾದಿ ಉಪಾಧಿಗಳಿಂದ ಎಂದರ್ಥ. ಧ್ವನಿಯು ಸ್ವಾಭಾವಿಕವಲ್ಲ. ಆದ್ದರಿಂದ ಆಕಾಶವು ನಿತ್ಯವಾದರೂ ಧ್ವನಿಯು ನಾಶವಾಗಬಹುದು. ವ್ಯಭಿಚಾರದೋಷವಿಲ್ಲವೆಂದು ಭಾವ.

**ತ್ರಿಕ್ಷಣಸ್ಥಾಯಿ ಯತ್ ಪ್ರಾಹುಃ ಶಬ್ದಂ ಬುದ್ಧಿಂ ಚ ಕರ್ಮ ಚ ।**
**ಅತೋಽಪಿ ನ ಧ್ವನಿರ್ವ್ಯೋಮಸ್ವಭಾವೋ ನಶ್ವರೋ ಹ್ಯಸೌ ॥ ೬೪೮ ॥**

**ಅರ್ಥ**– ಶಬ್ದಂ = ಧ್ವನಿರೂಪವಾದ ಶಬ್ದವನ್ನು, ಚ = ಮತ್ತು, ಬುದ್ಧಿಂ = ಮನೋಜನ್ಯವಾದ ಜ್ಞಾನವನ್ನು, ಚ = ಮತ್ತು, ಕರ್ಮ = ಕ್ರಿಯೆಯನ್ನು, ಯತ್ = ಯಾವ ಕಾರಣದಿಂದ, ತ್ರಿಕ್ಷಣಸ್ಥಾಯಿ = ಮೂರು ಕ್ಷಣದಲ್ಲಿ ಮಾತ್ರ ಇರುತ್ತವೆಂದು, ಆಹುಃ = ಹೇಳುತ್ತಾರೋ, ಅತೋಽಪಿ = ಆ ಕಾರಣದಿಂದಲೂ, ಧ್ವನಿಃ = ಧ್ವನಿಯು, ವ್ಯೋಮಸ್ವಭಾವಃ= ಆಕಾಶದ ಸ್ವಾಭಾವಿಕ ಗುಣವು, ನ = ಅಲ್ಲ, ಅಸೌ = ಈ ಧ್ವನಿಯು, ನಶ್ವರಃ ಹಿ = ನಾಶವನ್ನು ಹೊಂದುವುದಷ್ಟೇ?

**ಅನುವಾದ**– ಧ್ವನಿ, ಮಾನಸ ಜ್ಞಾನ ಹಾಗೂ ಕ್ರಿಯೆ ಇವುಗಳು ಕೇವಲ ಮೂರು ಕ್ಷಣದಲ್ಲಷ್ಟೇ ಇರುತ್ತವೆಂದು ಪಂಡಿತರು ಹೇಳುತ್ತಾರೆ. ಈ ಕಾರಣದಿಂದಲೂ ಧ್ವನಿಯು ಆಕಾಶದ ಸ್ವಾಭಾವಿಕ ಗುಣವಾಗಲು ಸಾಧ್ಯವಿಲ್ಲ, ಹೊರತು, ನಶ್ವರವಾದ ಔಪಾಧಿಕ ಗುಣವಾಗಿರುತ್ತದೆ.

**ಭಾವವಿಲಾಸಿನೀ**– ಶಬ್ದಂ ಧ್ವನ್ಯಾತ್ಮಕಮ್ । ಬುದ್ಧಿಂ ಮಾನಸಜ್ಞಾನಮ್ । ಸಾಪಿ ಇಂದ್ರಿಯಾರ್ಥಜಸನ್ನಿಕರ್ಷತ್ವಾದೌಪಾಧಿಕೀ । ಅತೋಽಪಿ ತ್ರಿಕ್ಷಣಾವಸ್ಥಾಯಿತ್ವಾದಪಿ ॥ ೬೪೮ ॥

**ಅಣುತ್ವಂ ಪರಮಾಣೋರ್ಯನ್ಮಹತ್ತ್ವಂ ಮಹತೋಽಪಿ ಚ ।**
**ಅವಕಾಶಪ್ರದತ್ವಂ ಯದ್ ಗಗನಸ್ಯ ಕದಾ ನ ತತ್ ।**
**ಅತಃ ಸ್ವಾಭಾವಿಕಾ ಧರ್ಮಾ ನಶ್ಯೇರನ್ ಧರ್ಮಿಣಃ ಕ್ಷಯೇ ॥ ೬೪೯ ॥**

**ಅರ್ಥ–** ಪರಮಾಣೋಃ= ಪರಮಾಣುವಿನ, ಯತ್= ಯಾವ, ಅಣುತ್ವಂ= ಅಣುತ್ವವಿದೆಯೋ, ಅಪಿ ಚ= ಮತ್ತೂ, ಮಹತಃ= ಮಹದ್ವಸ್ತುವಿನ, ಯತ್= ಯಾವ ಮಹತ್ವಂ= ಮಹತ್ವವಿದೆಯೋ, ಚ= ಮತ್ತು, ಗಗನಸ್ಯ= ಆಕಾಶದ, ಯತ್= ಯಾವ, ಆಕಾಶಪ್ರದತ್ವಂ= ಆಕಾಶ ಕೊಡುವಿಕೆ ಎಂಬ ಧರ್ಮವಿದೆಯೋ, ತತ್= ಅದು (ಅಣುತ್ವ, ಮಹತ್ವ, ಆಕಾಶಪ್ರದತ್ವ ಎಂಬ ಮೂರು ಧರ್ಮಗಳು), ಕದಾ= ಯಾವಾಗ, ನ= ಇರುವುದಿಲ್ಲ? ಅತಃ= ಆದ್ದರಿಂದ, ಸ್ವಾಭಾವಿಕಾಃ= ಸಹಜವಾಗಿರುವ, ಧರ್ಮಾಃ= ಧರ್ಮಗಳು, ಧರ್ಮಿಣಃ= ಧರ್ಮಿಯ, ಕ್ಷಯೇ= ನಾಶವಾಗುತ್ತಿರಲು, ನಶ್ಯೇರನ್= ನಾಶ ಹೊಂದುತ್ತವೆ.

**ಅನುವಾದ–** ಸ್ವಾಭಾವಿಕವಾದ ಧರ್ಮಗಳು ಧರ್ಮಿನಾಶವಾಗದಿದ್ದರೆ ನಾಶವಾಗುವುದಿಲ್ಲ. ಪರಮಾಣುವಿನಲ್ಲಿ ಪರಮಾಣುತ್ವವಿದೆ. ಗಗನದಲ್ಲಿ ಮಹತ್ವವಿದೆ ಮತ್ತು ಅವಕಾಶಪ್ರದತ್ವವಿದೆ. ಇವೆಲ್ಲವೂ ಸಹಜವಾದ ಗುಣಗಳು. ಧರ್ಮಿಭೂತವಾದ ಪರಮಾಣ್ವಾದಿಗಳು ನಾಶವಾಗದಿದ್ದರೆ ಈ ಧರ್ಮಗಳಿಗೂ ಕೂಡ ನಾಶವಾಗಲು ಸಾಧ್ಯವಿಲ್ಲ. ಆದ್ದರಿಂದ ಪರಮಾತ್ಮನಲ್ಲಿರುವ ಸ್ವಾಭಾವಿಕವಾದ ಗುಣಗಳಿಗೂ ಕೂಡ ನಾಶವನ್ನು ಹೇಳಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ಸ್ವಾಭಾವಿಕಧರ್ಮಾಣಾಂ ಧರ್ಮ್ಯನಾಶೇಽವಿನಾಶಂ ದರ್ಶಯತಿ – **ಅಣುತ್ವಮಿತಿ॥** ತದಣುತ್ವಾದಿಕಂ ಕದಾ ನ ಸರ್ವದಾಸ್ತೀತ್ಯರ್ಥಃ । ಅತಃ ಸ್ವಾಭಾವಿಕಧರ್ಮಾಣಾಂ ಧರ್ಮ್ಯನಾಶೇಽನಾಶದರ್ಶನಾತ್ ॥ ೬೪೯ ॥

**ವಿವರಣೆ–** ಔಪಾಧಿಕಧರ್ಮಗಳು ಧರ್ಮಿ ಇದ್ದಾಗಲೇ ನಾಶವಾಗಬಹುದು. ಆದರೆ ಸ್ವಾಭಾವಿಕಗುಣಗಳು ಧರ್ಮಿ ಇದ್ದಾಗ ನಾಶವಾಗಲು ಸಾಧ್ಯವೇ ಇಲ್ಲ. ಪರಮಾತ್ಮನಲ್ಲಿರುವ ಗುಣಗಳೆಲ್ಲವೂ ಸ್ವಾಭಾವಿಕವಾದ್ದರಿಂದ ಎಂದೂ ಸಹ ನಾಶವನ್ನು ಹೊಂದಲಾರವು.

**ಶ್ರುತೌ ಸ್ಮೃತೌ ಚ ಕೀರ್ತ್ಯಂತೇ ಧರ್ಮಾಃ ಸ್ವಾಭಾವಿಕಾ ಹರೇಃ ।**
**ಸತ್ಯಾ ನಿತ್ಯಾಃ ಸ್ವಭಾವಾಶ್ಚ ಯೇ ಧರ್ಮಾಸ್ತೇ ನ ಮಾಯಿಕಾಃ ॥ ೬೫೦ ॥**

**ಅರ್ಥ–** ಶ್ರುತೌ = ವೇದದಲ್ಲಿ, ಚ = ಮತ್ತು, ಸ್ಮೃತೌ = ಸ್ಮತಿಯಲ್ಲಿ, ಹರೇಃ = ಪರಮಾತ್ಮನ, ಧರ್ಮಾಃ = ಧರ್ಮಗಳು, ಸ್ವಾಭಾವಿಕಾಃ = ಸ್ವಾಭಾವಿಕಗಳಾಗಿವೆಯೆಂದು,

ಕೀರ್ತ್ಯಂತೇ = ಪ್ರತಿಪಾದಿಸಲ್ಪಟ್ಟಿವೆ. ಯೇ = ಯಾವ ಧರ್ಮಗಳು, ಸತ್ಯಾಃ = ಸತ್ಯವು, ಚ = ಮತ್ತು, ನಿತ್ಯಾಃ = ನಿತ್ಯಗಳು ಆಗಿವೆಯೋ, ತೇ= ಆ, ಧರ್ಮಾಃ= ಧರ್ಮಗಳು, ನ ಮಾಯಿಕಾಃ = ಮಾಯಾಕಲ್ಪಿತಗಳಲ್ಲ.

**ಅನುವಾದ–** **ಪರಮಾತ್ಮನ ಗುಣಗಳೆಲ್ಲವೂ ಸ್ವಾಭಾವಿಕವಾಗಿವೆ ಎಂದು ಶ್ರುತಿಸ್ಮೃತಿಗಳೇ ಕೊಂಡಾಡುತ್ತಿವೆ. ಸತ್ಯಗಳೂ ನಿತ್ಯಗಳೂ ಆಗಿರುವ ಪರಮಾತ್ಮನ ಧರ್ಮಗಳು ಮಾಯಾಕಲ್ಪಿತಗಳಾಗಲು ಸಾಧ್ಯವಿಲ್ಲ.**

**ಭಾವವಿಲಾಸಿನೀ–** ಬ್ರಹ್ಮಧರ್ಮಾಣಾಂ ಸ್ವಾಭಾವಿಕತ್ವಾದಿಕಂ ಪ್ರಮಾಣಪ್ರಸಿದ್ಧಮೇವೇತ್ಯಾಹ – **ಶ್ರುತಾವಿತಿ** ॥ ಸ್ವಾಭಾವಿಕಾ ಇತ್ಯುಪಲಕ್ಷಣಮ್ । ಸತ್ಯಾ ನಿತ್ಯಾಶ್ಚೇತ್ಯಪಿ ಗ್ರಾಹ್ಯಮ್ । ಅಧುನೋಕ್ತಹೇತುತ್ರಯೇಣ ಬ್ರಹ್ಮಧರ್ಮಾಣಾಮಮಾಯಿಕತ್ವಂ ಸಾಧಯತಿ – **ಸತ್ಯಾ ಇತಿ** ॥ ತೇ ಧರ್ಮಾಃ ಮಾಯಿಕಾ ನೇತಿ ಸಂಬಂಧಃ ॥ ೬೫೦ ॥

**ವಿವರಣೆ–** ಬ್ರಹ್ಮನ ಧರ್ಮಗಳು ಸ್ವಾಭಾವಿಕವಾಗಿವೆ ಎಂಬ ವಿಷಯದಲ್ಲಿ ಪ್ರಮಾಣಪ್ರಸಿದ್ಧಿಯನ್ನು ತೋರಿಸುತ್ತಿದ್ದಾರೆ. 'ಸ್ವಾಭಾವಿಕಾಃ' ಎಂಬುದು ಉಪಲಕ್ಷಣ. ಸತ್ಯವೂ ನಿತ್ಯವೂ ಆಗಿರುತ್ತವೆಂದು ತಿಳಿಯಬೇಕು. ಹಿಂದೆ ಹೇಳಿದ ಮೂರು ಹೇತುಗಳಿಂದ ಬ್ರಹ್ಮಧರ್ಮಗಳು ಮಾಯಾಕಲ್ಪಿತಗಳಲ್ಲವೆಂಬುದನ್ನು 'ಸತ್ಯಾಃ' ಎಂಬುದರಿಂದ ಸಮರ್ಥಿಸಿದ್ದಾರೆ. ಅಂತಹ ಧರ್ಮಗಳು ಮಾಯಿಕವಾಗಲು ಸಾಧ್ಯವಿಲ್ಲವೆಂದು ತಿಳಿಯಬೇಕು.

**ಅವಿದ್ಯಯಾ ಕಥಂ ವಿದ್ಯಾ ಶಕ್ತಿಸ್ತೇಜೋ ಬಲಂ ಧೃತಿಃ ।**
**ಅಮಾಯಿಕಬ್ರಹ್ಮವತ್ತದ್ಧರ್ಮಾಃ ಸರ್ವೇಽಪ್ಯಮಾಯಿಕಾಃ ॥ ೬೫೧ ॥**

**ಅರ್ಥ–** ಅವಿದ್ಯಯಾ = ಅವಿದ್ಯೆಯಿಂದ, ವಿದ್ಯಾ = ವಿದ್ಯೆಯು, ಶಕ್ತಿಃ = ಶಕ್ತಿಯು, ತೇಜಃ = ತೇಜಸ್ಸು ಬಲಂ = ಬಲವು, ಧೃತಿಃ= ಧೈರ್ಯಾದಿಗಳು, ಕಥಮ್ = ಹೇಗೆ ಉಂಟಾಗುತ್ತವೆ. ತದ್ಧರ್ಮಾಃ = ಬ್ರಹ್ಮನ ಧರ್ಮಗಳು, ಸರ್ವೇ ಅಪಿ = ಎಲ್ಲವೂ, ಅಮಾಯಿಕಬ್ರಹ್ಮವತ್ = ಮಾಯಾಕಲ್ಪಿತನಾಗದ ಬ್ರಹ್ಮನಂತೆ, ಅಮಾಯಿಕಾಃ = ಮಾಯಾಕಲ್ಪಿತಗಳಾಗಿರುವುದಿಲ್ಲ.

**ಅನುವಾದ–** **ಬ್ರಹ್ಮನ ಧರ್ಮಗಳೆಲ್ಲವೂ ಮಾಯಾಕಲ್ಪಿತವೆಂದು ಹೇಳಿದರೆ ಅವಿದ್ಯೆಯಿಂದ ಉಂಟಾಗುತ್ತವೆ ಎಂದು ಹೇಳಬೇಕು. ಆದರೆ, ಅಜ್ಞಾನವು ಜ್ಞಾನಕ್ಕೆ ವಿರೋಧಿಯಾದ್ದರಿಂದ ವಿರೋಧಿಯಾದ ಅಜ್ಞಾನದಿಂದ ಜ್ಞಾನವು, ಶಕ್ತಿಯು, ತೇಜಸ್ಸು, ಬಲ ಮತ್ತು ಧೈರ್ಯಾದಿಗಳು ಹುಟ್ಟಲು ಹೇಗೆ ಸಾಧ್ಯ? ವಿದ್ಯೆಯ ಬಲದಿಂದ ಹುಟ್ಟಬೇಕಾದ ಧರ್ಮಗಳು ಅಜ್ಞಾನದಿಂದ ಹುಟ್ಟಲು ಸಾಧ್ಯವಿಲ್ಲ. ಅಜ್ಞಾನದಿಂದ ಹುಟ್ಟಿದರೆ ಮಾತ್ರ ಮಾಯಾಕಲ್ಪಿತವೆಂದು ಹೇಳಬಹುದಾಗಿದ್ದಿತ್ತು.**

ಆದ್ದರಿಂದ ಬ್ರಹ್ಮನು ಹೇಗೆ ಮಾಯಾಕಲ್ಪಿತನಲ್ಲವೋ, ಅದರಂತೆ ಅವನ ಧರ್ಮಗಳೂ ಕೂಡ ಮಾಯಾಕಲ್ಪಿತವಲ್ಲ.

**ಭಾವವಿಲಾಸಿನೀ–** ವಿದ್ಯಾರೂಪಧರ್ಮಾಣಾಂ ಮಾಯಿಕತ್ವಂ ವಿರೋಧಾದಪಿ ನೇತ್ಯಾಹ – **ವಿದ್ಯಯೇತಿ** ॥ ವಿದ್ಯಾಽವಿದ್ಯಯೋರ್ವಿರೋಧಃ ಸ್ಪಷ್ಟಃ । ಶಕ್ತಿತೇಜಃ- ಪ್ರಭೃತೀನಾಮಪ್ಯ-ರ್ಜುನಾದಿಭಿಸ್ತಪೋರೂಪವಿದ್ಯಯೈವ ಸಾಧಿತತ್ವಸ್ಯ ಪುರಾಣಾದೌ ಪ್ರಸಿದ್ಧತ್ವಾದ್ ವಿರೋಧೋ ದ್ರಷ್ಟವ್ಯಃ । ಉಪಸಂಹರತಿ – **ಅಮಾಯಿಕೇತಿ** ॥ ತದ್ಧರ್ಮಾಃ ಬ್ರಹ್ಮಧರ್ಮಾಃ ॥ ೬೫೧ ॥

**ವಿವರಣೆ–** ಅರ್ಜುನ ಮೊದಲಾದ ಸಾಧಕರು ಶಕ್ತಿ ತೇಜಸ್ ಮೊದಲಾದ ಗುಣಗಳನ್ನು 'ತಪಸ್' ಎಂಬ ವಿದ್ಯೆಯಿಂದಲೇ ಸಾಧಿಸಿದ್ದು, ಪುರಾಣಗಳಲ್ಲಿ ವರ್ಣಿತವಾಗಿದೆ. ಆದ್ದರಿಂದ 'ಶಕ್ತಿ ತೇಜಸ್' ಮೊದಲಾದವುಗಳಿಗೆ ಅವಿದ್ಯೆಯಿಂದ ವಿರೋಧವಿದೆಯೆಂದು ಅರ್ಥ.

**ಸತ್ಯತ್ವಾಚ್ಚ ಸ್ವಭಾವತ್ವಾನ್ನಿತ್ಯತ್ವಾದ್ ಬ್ರಹ್ಮವತ್ ಸದಾ ।**
**ಅಮಾಯಿಕಾ ಬ್ರಹ್ಮಧರ್ಮಾ ಇತಿ ಸ್ಯಾದನುಮಾಪಿ ನಃ ॥ ೬೫೨ ॥**

**ಅರ್ಥ–** ಬ್ರಹ್ಮಧರ್ಮಾಃ = ಬ್ರಹ್ಮನ ಧರ್ಮಗಳು, ಅಮಾಯಿಕಾಃ = ಮಾಯಾಕಲ್ಪಿತಗಳಲ್ಲ, ಸತ್ಯತ್ವಾತ್ = ಸತ್ಯವಾದ್ದರಿಂದ, ಚ = ಮತ್ತು, ಸ್ವಭಾವತ್ವಾತ್ = ಬ್ರಹ್ಮನ ಸ್ವಭಾವವಾದ್ದರಿಂದ, ಸದಾ = ಯಾವಾಗಲೂ, ನಿತ್ಯತ್ವಾತ್ = ನಿತ್ಯವಾದ್ದರಿಂದಲೂ, ಬ್ರಹ್ಮವತ್ = ಬ್ರಹ್ಮನಂತೆ. ಇತಿ = ಹೀಗೆ, ನಃ ಅಪಿ = ನನಗಾದರೂ, ಅನುಮಾ = ಅನುಮಾನ ಪ್ರಯೋಗವು, ಸ್ಯಾತ್ = ಇರುತ್ತದೆ.

**ಅನುವಾದ–** ಬ್ರಹ್ಮನಿಷ್ಠಾಃ ಧರ್ಮಾಃ ನ ಮಾಯಾಕಲ್ಪಿತಾಃ, ಸತ್ಯತ್ವಾತ್ ನಿತ್ಯತ್ವಾತ್ ಸ್ವಭಾವಸಿದ್ಧತ್ವಾಚ್ಚ ಬ್ರಹ್ಮವತ್. ಸತ್ಯ, ನಿತ್ಯ, ಸ್ವಭಾವಸಿದ್ಧಗಳೂ ಆಗಿರುವ ಕಾರಣ ಬ್ರಹ್ಮನ ಧರ್ಮಗಳು ಮಾಯಾಕಲ್ಪಿತಗಳಾಗಲು ಸಾಧ್ಯವಿಲ್ಲ. ಈ ವಿಷಯದಲ್ಲಿ ಬ್ರಹ್ಮನೇ ದೃಷ್ಟಾಂತ. ಹೀಗೆ ಅನುಮಾನವನ್ನು ಪ್ರಯೋಗಿಸಬಹುದು. ಈ ಅನು-ಮಾನಗಳಿಂದ ಬ್ರಹ್ಮನ ಧರ್ಮಗಳು ಮಾಯಾಕಲ್ಪಿತವಲ್ಲವೆಂದು ಸಿದ್ಧವಾಗುತ್ತವೆ.

**ಭಾವವಿಲಾಸಿನೀ–** ಉಕ್ತಮರ್ಥಂ ಪ್ರಯೋಗಾರೂಢಂ ಕರೋತಿ – **ಸತ್ಯತ್ವಾಚ್ಚೇತಿ** ॥ ೬೫೨ ॥

**ಸ್ವನಿಷ್ಠಧರ್ಮೋಽಪಾಧಾತುಸ್ಸ್ಯಾದುಪಾಧೇರುಪಾಧಿತಾ ।**
**ಮಾಯಾಭಿನ್ನತ್ವಾಜ್ಜಡತ್ವಸತ್ತ್ವಚಿತ್ತ್ವಾತ್ಮತಾದಯಃ ॥ ೬೫೩ ॥**

**ವ್ಯಾಪ್ತತ್ವನಿತ್ಯಶುದ್ಧತ್ವಮುಕ್ತತ್ವಾದ್ಯಾ ಹರೇರ್ಗುಣಾಃ ।**
**ಜಡೇಷ್ವಸಂಭಾವಿತಾಃ ಸ್ಯುರ್ಮಾಯೋಪಾಧ್ಯಾಹಿತಾಃ ಕಥಮ್ ॥ ೬೫೪ ॥**

**ಅರ್ಥ–** ಸ್ವನಿಷ್ಠಧರ್ಮೋಪಾಧಾತುಃ = ತನ್ನಲ್ಲಿರುವ ಧರ್ಮಗಳನ್ನು ಸಮೀಪದಲ್ಲಿರುವ ಪದಾರ್ಥದಲ್ಲಿ ತಂದುಕೊಡುವ, ಉಪಾಧೇಃ = ಉಪಾಧಿಗೆ, ಉಪಾಧಿತಾ = ಉಪಾಧಿತ್ವವು, ಸ್ಯಾತ್ = ಕೊಡುತ್ತದೆ. ಮಾಯಾಭಿನ್ನತ್ವಾ ಜಡತ್ವಸತ್ತ್ವಚಿತ್ತ್ವಾತ್ಮತಾದಯಃ = ಮಾಯಾಭಿನ್ನತ್ವ, ಅಜಡತ್ವ, ಸತ್ವ, ಚಿತ್ವ ಆತ್ಮತ್ವ ಮೊದಲಾದ ಧರ್ಮಗಳು, ಚ= ಮತ್ತು,

ವ್ಯಾಪ್ತತ್ವನಿತ್ಯಶುದ್ಧತ್ವಮುಕ್ತತ್ವಾದ್ಯಾಃ = ವ್ಯಾಪ್ತತ್ವ, ನಿತ್ಯಶುದ್ಧತ್ವ, ನಿತ್ಯಮುಕ್ತತ್ವ ಮೊದಲಾದ, ಹರೇಃ = ಶ್ರೀಹರಿಯ, ಗುಣಾಃ = ಗುಣಗಳು, ಜಡೇಷು = ಜಡ ಪದಾರ್ಥಗಳಲ್ಲಿ, ಅಸಂಭಾವಿತಾಃ = ಅಸಂಭಾವಿತವಾದವು. ತೇ= ಅವು, ಮಾಯೋಪಾ-ಧ್ಯಾಹಿತಾಃ = ಮಾಯಾ ಎಂಬ ಉಪಾಧಿಯಿಂದ ಆಹಿತವಾಗಿ, ಕಥಂ ಸ್ಯುಃ = ಹೇಗೆ ಆಗಬಲ್ಲವು?

**ಅನುವಾದ– ತನ್ನಲ್ಲಿರುವ ಧರ್ಮಗಳನ್ನು ಮತ್ತೊಂದು ವಸ್ತುವಿನಲ್ಲಿ ತೋರಿಸುವ ವಸ್ತುವನ್ನೇ ಉಪಾಧಿ ಎನ್ನುತ್ತಾರೆ. ಪ್ರಕೃತ ಪರಮಾತ್ಮನಲ್ಲಿರುವ ಮಾಯಾಭಿನ್ನತ್ವ, ಅಜಡತ್ವ, ಸತ್ತ್ವ, ಚಿತ್ತ್ವ, ಆತ್ಮತ್ವ ಮೊದಲಾದ ಮತ್ತು ವ್ಯಾಪ್ತತ್ವ ನಿತ್ಯಶುದ್ಧತ್ವ ನಿತ್ಯಮುಕ್ತತ್ವ ಮೊದಲಾದ ಧರ್ಮಗಳು ಮಾಯಾ ಎಂಬ ಉಪಾಧಿಕಲ್ಪಿತಗಳಾಗಲು ಹೇಗೆ ಸಾಧ್ಯ? ಏಕೆಂದರೆ ಈ ಎಲ್ಲಾ ಧರ್ಮಗಳು ಜಡಪದಾರ್ಥದಲ್ಲಿ ಅತ್ಯಂತ ಅಸಂಭಾವಿತವಾಗಿವೆ.**

**ಭಾವವಿಲಾಸಿನೀ– ಸ್ವನಿಷ್ಠಧರ್ಮಾಧಾಯಕಸ್ಯೈವ ಜಪಾಕುಸುಮಾದೇರ್ಮುಖ್ಯೋಪಾಧಿತ್ವದರ್ಶನಾದ್ ಬ್ರಹ್ಮಣಿ ಚೋಪಾಧಿತ್ವೇನಾಭಿಮತಾವಿದ್ಯಾಯಾಃ ಸ್ವನಿಷ್ಠಸ್ವಭಿನ್ನತ್ವಾದಿಧರ್ಮಾ-ಧಾಯಕತ್ವಾಸಂಭವೇನ ತೇಷಾಮನೌಪಾಧಿಕತ್ವಂ ಯೌಕ್ತಿಕಮಿತ್ಯಾಹ–ಸ್ವನಿಷ್ಠೇತಿ ॥೬೫೩-೬೫೪॥**

**ವಿವರಣೆ–** ದಾಸವಾಳದ ಹೂವಿನ ಪಕ್ಕದಲ್ಲಿ ಶ್ವೇತವರ್ಣದ ಸ್ಫಟಿಕ ಮಣಿಯನ್ನು ಇಟ್ಟಾಗ ಸ್ಫಟಿಕ ಮಣಿಯಲ್ಲಿಲ್ಲದ ಕೆಂಪು ಬಣ್ಣವು ಕಾಣಿಸುತ್ತದೆ. ಅದರಂತೆ, ಬ್ರಹ್ಮನಲ್ಲಿ ಯಾವುದೇ ಧರ್ಮಗಳಿಲ್ಲದಿದ್ದರೂ 'ಅವಿದ್ಯಾ' ಎಂಬ ಉಪಾಧಿ ಪ್ರಯುಕ್ತವಾಗಿ ತೋರುತ್ತವೆಂಬುದು ಅದ್ವೈತಿಗಳ ವಾದ. ಅದನ್ನು ಇಲ್ಲಿ ಖಂಡನೆ ಮಾಡುತ್ತಿದ್ದಾರೆ. ತನ್ನಲ್ಲಿರುವ ಧರ್ಮವನ್ನು ಬೇರೆ ಕಡೆ ಆಧಾನ ಮಾಡುವ ವಸ್ತುವು ಉಪಾಧಿಯಾಗುತ್ತದೆ. ಆದರೆ ಪ್ರಕೃತ, ಅವಿದ್ಯೆಯು ತನ್ನಲ್ಲಿಲ್ಲದ ಬ್ರಹ್ಮನಲ್ಲಿ ಮಾತ್ರ ಕಾಣುವ ಜಡಾಭಿನ್ನತ್ವ ಮಾಯಾಭಿನ್ನತ್ವ ಚಿತ್ತ್ವಾದಿಧರ್ಮಗಳನ್ನು ಬ್ರಹ್ಮನಲ್ಲಿ ಆಧಾನ ಮಾಡಲು ಸಾಧ್ಯವಿಲ್ಲ. ಆದ್ದರಿಂದ ದಾಸವಾಳ ಹೂವು ಉಪಾಧಿಯಾದಂತೆ ಅವಿದ್ಯೆಯು ಉಪಾಧಿಯಾಗಲು ಸಾಧ್ಯವಿಲ್ಲ. ಆದ್ದರಿಂದ ಆ ಧರ್ಮಗಳು ಔಪಾಧಿಕಗಳಾಗಲೂ ಸಾಧ್ಯವಿಲ್ಲ.

**ಹಂತ ಮಾಯಾಬದ್ಧತಾಽಪಿ ನ ಮಾಯೋಪಾಧಿಕಾ ತ್ವಯಿ ।**
**ಸರ್ವೇಶ್ವರತ್ವಪೂರ್ವಂ ತತ್ ಕಃ ಕುರ್ವೀತ ಮಹಾಪ್ರಭೌ ॥ ೬೫೫ ॥**

**ಅರ್ಥ–** ಹಂತ = ಆಶ್ಚರ್ಯವು. ತ್ವಯಿ = ಜೀವನಾದ ನಿನ್ನಲ್ಲಿ, ಮಾಯಾಬದ್ಧತಾ = ಮಾಯಾಬದ್ಧತ್ವವು, ನ ಮಾಯೋಪಾಧಿಕಾ = ಮಾಯಾಕಲ್ಪಿತವಾಗಿಲ್ಲ. ತತ್ = ಆದ್ದರಿಂದ, ಸರ್ವೇಶ್ವರತ್ವಪೂರ್ವಂ = ಸರ್ವನಿಯಾಮಕತ್ವಾದಿಗಳನ್ನು ಮಹಾಪ್ರಭೌ = ಮಹಾಸ್ವಾಮಿಯಲ್ಲಿ, ಕಃ ಕುರ್ಯಾತ್ = ಯಾರು ತಾನೇ ಮಾಡುತ್ತಾನೆ?

**ಅನುವಾದ–** ಪರಮಾತ್ಮನಲ್ಲಿರುವ ಮಹಾಗುಣಗಳು ಮಾಯಾಕಲ್ಪಿತವಾಗಿಲ್ಲ ಎಂಬ ವಿಚಾರವಿರಲಿ. ಜೀವನಾದ ನಿನ್ನಲ್ಲಿರುವ ಮಾಯಾಬದ್ಧತ್ವವೆಂಬ ಗುಣವೂ ಕೂಡ ಮಾಯಾಕಲ್ಪಿತವಲ್ಲ. ಮಾಯಬದ್ಧತ್ವವು ತನ್ನಲ್ಲಿ ಇಲ್ಲದಿರುವ ಕಾರಣ, ಮಾಯೆಯು ತನ್ನಲ್ಲಿಲ್ಲದಿರುವ ಧರ್ಮವನ್ನು ಜೀವನಲ್ಲಿ ತೋರಿಸುವುದಿಲ್ಲ. ಹೀಗಿರುವಾಗ ಸರ್ವೇಶ್ವರತ್ವ ಮೊದಲಾದ ಧರ್ಮಗಳನ್ನು ಮಹಾಸ್ವಾಮಿಯಾದ ಪರಮಾತ್ಮನಲ್ಲಿ ಯಾರು ತಾನೆ ಮಾಡುತ್ತಾನೆ? ಯಾರಿಂದಲೂ ಸಾಧ್ಯವಿಲ್ಲ.

**ಭಾವವಿಲಾಸಿನೀ–** ತ್ವಯಿ ಜೀವೇ ಮಾಯೋಪಾಧಿಕಾ ನ । ಮಾಯಾಬದ್ಧತ್ವಸ್ಯ ಮಾಯಾಯಾಮಭಾವೇನಾನ್ಯತ್ರೋಪಾಧಾಯಕತ್ವಾಯೋಗಾತ್ । ತತ್ ತಸ್ಮಾನ್ಮಾಯಾಬದ್ಧತ್ವರೂಪಹೀನಗುಣಸ್ಯಾಪಿ ಮಾಯೋಪಾಧಿಕತ್ವಾಯೋಗಾತ್ ಸರ್ವೇಶ್ವರತ್ವಪೂರ್ವಂ ಸರ್ವೇಶ್ವರತ್ವಸರ್ವನಿಯಾಮಕತ್ವಾದಿಕಂ ಕಃ ಕುರ್ವೀತ ನ ಕೋಽಪಿ ಕರ್ತುಂ ಶಕ್ನೋತಿ । ಸರ್ವೇಶ್ವರತ್ವಸ್ಯಾನ್ಯತ್ರಾಭಾವೇನ ತದುಪಾಧಾನಾಯೋಗಾತ್ । ಸ್ವನಿಷ್ಠಸರ್ವೇಶ್ವರತ್ವಸ್ಯಾನ್ಯಾಯತ್ತತ್ವೇ ತದಧೀನತ್ವಾವಶ್ಯಂಭಾವೇನ ಸರ್ವೇಶ್ವರತ್ವಸ್ಯ ವ್ಯಾಹತತ್ವಾಚ್ಚೇತಿ ಭಾವಃ ॥ ೬೫೫ ॥

**ವಿವರಣೆ–** ಮಾಯಾಬದ್ಧತ್ವವು ಮಾಯೆಯಲ್ಲಿಯೇ ಇರುವುದಿಲ್ಲ. ಆದ್ದರಿಂದ ಜೀವನಲ್ಲಿಯೂ ಆ ಧರ್ಮವನ್ನು ತೋರಿಸಲು ಸಾಧ್ಯವಿಲ್ಲ. ಆದ್ದರಿಂದ, ಮಾಯಬದ್ಧತ್ವವೆಂಬ ಹೀನ ಗುಣವೇ ಮಾಯೋಪಾಧಿಕವಾಗಲಾರದು. ಹೀಗಿರುವಾಗ ಸರ್ವೇಶ್ವರತ್ವಾದಿಗಳು ಮಾಯೆಯಲ್ಲಿಲ್ಲದ ಕಾರಣ, ಅವನ್ನೂ ಪರಮಾತ್ಮನಲ್ಲಿ ಉಪಾಧಾನ ಮಾಡಲು ಸಾಧ್ಯವಿಲ್ಲ. ತನ್ನಲ್ಲಿರುವ ಸರ್ವೇಶ್ವರತ್ವಾದಿಗಳೂ ಕೂಡ ಮತ್ತೊಬ್ಬರ ಅಧೀನವಾದರೆ ಅವನ ಅಧೀನ ಶ್ರೀಹರಿಯಾಗುತ್ತಾನೆಂದು ಹೇಳಬೇಕು. ಆವಾಗ ಸರ್ವೇಶ್ವರತ್ವ ಎಂಬ ಧರ್ಮವೇ ವ್ಯಾಹತವಾಗುತ್ತದೆ.

ನಿರೀಕ್ಷತೋ ಯಸ್ಯ ದೃಷ್ಟಿರ್ಮಾಯಯಾಽಣ್ವಪಿ ನಾಜ್ಯತೇ ।
ಇತ್ಯಾಹ ಪಂಚಮಸ್ಕಂಧೇ ತದ್ದ್ರಷ್ಟೃತ್ವಾದಯಃ ಪ್ರಭೋಃ ॥
ಸ್ವಾಭಾವಿಕಾ ಭವೇಯುರ್ಹಿ ತದಭಾವಃ ಕದಾ ವದ ॥ ೬೫೬ ॥

**ಅರ್ಥ–** ನಿರೀಕ್ಷತಃ = ಎಲ್ಲವನ್ನು ಪ್ರತ್ಯಕ್ಷವಾಗಿ ಕಾಣುವ, ಯಸ್ಯ = ಯಾವ ಭಗವಂತನ, ದೃಷ್ಟಿಃ = ಜ್ಞಾನವು, ಮಾಯಯಾ = ಮಾಯೆಯಿಂದ, ಅಣು ಅಪಿ = ಸ್ವಲ್ಪವೂ ಸಹ, ನ ನಾಜ್ಯತೇ = ಸಂಬಂಧವನ್ನು ಹೊಂದುವುದಿಲ್ಲ. ಇತಿ = ಹೀಗೆ, ಪಂಚಮಸ್ಕಂಧೇ = ಭಾಗವತದ

ಪಂಚಮ ಸ್ಕಂಧದಲ್ಲಿ, ಆಹ = ವೇದವ್ಯಾಸರೂಪದಿಂದ ಪರಮಾತ್ಮನೇ ಹೇಳಿದ್ದಾನೆ. ತತ್ = ಆದ್ದರಿಂದ, ಪ್ರಭೋಃ = ಶ್ರೀಹರಿಯ, ದ್ರಷ್ಟೃತ್ವಾದಯಃ = ದ್ರಷ್ಟೃತ್ವಾದಿ ಧರ್ಮಗಳು, ಸ್ವಾಭಾವಿಕಾಃ = ಸ್ವಾಭಾವಿಕಗಳೇ, ಭವೇಯುಃ = ಆಗುತ್ತವೆ. ಹೀಗಿರುವಾಗ, ತದಭಾವಃ = ಧರ್ಮಗಳಿಲ್ಲದಿರುವಿಕೆಯು, ಕದಾ = ಯಾವಾಗ ಎಂದು, ವದ = ಹೇಳು.

**ಅನುವಾದ–** ಸಾಕ್ಷಾತ್ ಪರಮಾತ್ಮನೇ ವೇದವ್ಯಾಸರೂಪದಿಂದ ತನಗೆ ಮಾಯೆಯ ಸಂಬಂಧವಿಲ್ಲವೆಂದು ಹೇಳಿದ್ದಾನೆ. ಶ್ರೀಮದ್‌ಭಾಗವತದ ಪಂಚಮ ಸ್ಕಂದದಲ್ಲಿ 'ನ ಯಸ್ಯ ಮಾಯಾ ಗುಣಚಿತ್ತವೃತ್ತಿಭಿಃ' ಇತ್ಯಾದಿ ಶ್ಲೋಕದಿಂದ ಸಕಲ ಪದಾರ್ಥಗಳನ್ನು ಪ್ರತ್ಯಕ್ಷವಾಗಿ ನೋಡುವ ಪರಮಾತ್ಮನ ಜ್ಞಾನವು ಮಾಯೆಯಿಂದ ಸ್ವಲ್ಪವೂ ಕೂಡ ಒಳಗಾಗಿರುವುದಿಲ್ಲ ಎಂದು ಸ್ಪಷ್ಟವಾಗಿ ಹೇಳಿರುತ್ತಾನಾದ್ದರಿಂದ ಪರಮಾತ್ಮನಲ್ಲಿರುವ ಜ್ಞಾನಾದಿಗಳು ಸ್ವಾಭಾವಿಕವಾಗಿಯೇ ಇರುತ್ತವೆ, ಹೊರತು ಮಾಯಾಕಲ್ಪಿತವಲ್ಲ. ಇಂತಹ ಸ್ವಾಭಾವಿಕಧರ್ಮಗಳು ಯಾವ ಕ್ಷಣದಲ್ಲಿ ಪರಮಾತ್ಮನಲ್ಲಿ ಇರುವುದಿಲ್ಲವೆಂಬುದನ್ನು ನೀನೇ ಹೇಳು.

**ಭಾವವಿಲಾಸಿನೀ–** 'ನಿರೀಕ್ಷತ' ಇತ್ಯಾದಿನಾ 'ನ ಯಸ್ಯ ಮಾಯಾಗುಣಚಿತ್ತವೃತ್ತಿಭಿರ್ನಿರೀಕ್ಷತೋ ಹ್ಯಣ್ವಪಿ ದೃಷ್ಟಿರಜ್ಯತೇ' ಇತಿ ವಾಕ್ಯಂ ಸಂಗೃಹ್ಣಾತಿ। ತತ್ ತಸ್ಮಾನ್ಮಾಯಾಸಂಬಂಧಲೇಶಸ್ಯಾಭಾವಾದ್ ದ್ರಷ್ಟೃತ್ವಾದಯಃ ದ್ರಷ್ಟೃತ್ವಪ್ರಮಾತೃತ್ವಜ್ಞಾತೃತ್ವಾದಯೋ ಜ್ಞಾನನಿಮಿತ್ತಕಧರ್ಮಾಃ। ತದಭಾವಃ ದ್ರಷ್ಟೃತ್ವಾದ್ಯಭಾವಃ ॥ ೬೫೬ ॥

> ಕಿಂಚೋಪಾಧಿರ್ಬಿಂಬಮೇವ ಪ್ರತಿಬಿಂಬಸ್ಯ ಶೋಭತೇ ।
> ಸ್ವಧರ್ಮಾಧಾಯಕತ್ವೇನ ಮಾಯಾದಿಃ ಸ್ಫಟಿಕಾದಿವತ್ ॥
> ನಿಮಿತ್ತಮಾತ್ರಂ ತತ್ಸಂಗಾತ್ತನ್ನಾಮ್ನಾ ಭಣ್ಯತೇ ಪರಮ್ ॥ ೬೫೭ ॥

**ಅರ್ಥ–** ಕಿಂಚ = ಮತ್ತು, ಪ್ರತಿಬಿಂಬಸ್ಯ = ಪ್ರತಿಬಿಂಬನಾದ ಜೀವನಿಗೆ, ಬಿಂಬಮೇವ = ಬಿಂಬಭೂತನಾದ ಶ್ರೀಹರಿಯೇ, ಸ್ವಧರ್ಮಾಧಾಯಕತ್ವೇನ = ಸ್ವಧರ್ಮಗಳನ್ನು ಜೀವನಲ್ಲಿ ತಂದು ಕೊಡುವುದರಿಂದ, ಉಪಾಧಿಃ = ಉಪಾಧಿಯಾಗಿರುತ್ತಾನೆಂಬುದು. ಶೋಭತೇ = ಇದು ಯುಕ್ತಿಯುಕ್ತವಾಗುತ್ತದೆ. ಮಾಯಾದಿಃ = ಮಾಯಾ ಮೊದಲಾದವು, ಸ್ಫಟಿಕಾದಿವತ್ = ಸ್ಫಟಿಕಾದಿಗಳಂತೆ, ನಿಮಿತ್ತಮಾತ್ರಮ್ = ಕೇವಲ ನಿಮಿತ್ತಗಳು, ತತ್ಸಂಗಾತ್ = ಉಪಾಧಿಯ ಸಂಬಂಧದಿಂದ, ಪರಂ = ಮುಖ್ಯವಾಗಿ, ತನ್ನಾಮ್ನಾ = ಉಪಾಧಿನಾಮದಿಂದಲೇ, ಭಣ್ಯತೇ = ವ್ಯವಹರಿಸಲ್ಪಡುತ್ತದೆ.

**ಅನುವಾದ–** ತನ್ನ ಧರ್ಮಗಳನ್ನು ಜೀವನಲ್ಲಿ ಕೊಡುವುದರಿಂದ ಪ್ರತಿಬಿಂಬನಾದ ಜೀವನಿಗೆ ಬಿಂಬಭೂತನಾದ ಶ್ರೀಹರಿಯೇ ಉಪಾಧಿಯಾಗಿದ್ದಾನೆ. ಸ್ಫಟಿಕದಲ್ಲಿ ತೋರುವ ಕೆಂಪು ಬಣ್ಣಕ್ಕೆ ದಾಸವಾಳ ಹೂ ಕಾರಣ ಎಂಬುದು ಲೋಕದಲ್ಲಿ

**ಅರ್ಥ—** ಹಂತ = ಆಶ್ಚರ್ಯವು. ತ್ವಯಿ = ಜೀವನಾದ ನಿನ್ನಲ್ಲಿ, ಮಾಯಾಬದ್ಧತಾ = ಮಾಯಾಬದ್ಧತ್ವವು, ನ ಮಾಯೋಪಾಧಿಕಾ = ಮಾಯಾಕಲ್ಪಿತವಾಗಿಲ್ಲ, ತತ್ = ಆದ್ದರಿಂದ, ಸರ್ವೇಶ್ವರತ್ವಪೂರ್ವಂ = ಸರ್ವನಿಯಾಮಕತ್ವಾದಿಗಳನ್ನು, ಮಹಾಪ್ರಭೌ = ಮಹಾಸ್ವಾಮಿಯಲ್ಲಿ, ಕಃ ಕುರ್ಯಾತ್ = ಯಾರು ತಾನೇ ಮಾಡುತ್ತಾನೆ?

**ಅನುವಾದ—** ಪರಮಾತ್ಮನಲ್ಲಿರುವ ಮಹಾಗುಣಗಳು ಮಾಯಾಕಲ್ಪಿತವಾಗಿಲ್ಲ ಎಂಬ ವಿಚಾರವಿರಲಿ. ಜೀವನಾದ ನಿನ್ನಲ್ಲಿರುವ ಮಾಯಾಬದ್ಧತ್ವವೆಂಬ ಗುಣವೂ ಕೂಡ ಮಾಯಾಕಲ್ಪಿತವಲ್ಲ. ಮಾಯಬದ್ಧತ್ವವು ತನ್ನಲ್ಲಿ ಇಲ್ಲದಿರುವ ಕಾರಣ, ಮಾಯೆಯು ತನ್ನಲ್ಲಿಲ್ಲದಿರುವ ಧರ್ಮವನ್ನು ಜೀವನಲ್ಲಿ ತೋರಿಸುವುದಿಲ್ಲ. ಹೀಗಿರುವಾಗ ಸರ್ವೇಶ್ವರತ್ವ ಮೊದಲಾದ ಧರ್ಮಗಳನ್ನು ಮಹಾಸ್ವಾಮಿಯಾದ ಪರಮಾತ್ಮನಲ್ಲಿ ಯಾರು ತಾನೆ ಮಾಡುತ್ತಾನೆ? ಯಾರಿಂದಲೂ ಸಾಧ್ಯವಿಲ್ಲ.

**ಭಾವವಿಲಾಸಿನೀ—** ತ್ವಯಿ ಜೀವೇ ಮಾಯೋಪಾಧಿಕಾ ನ । ಮಾಯಾಬದ್ಧತ್ವಸ್ಯ ಮಾಯಾಯಾಮಭಾವೇನಾನ್ಯತ್ರೋಪಾಧಾಯಕತ್ವಾಯೋಗಾತ್ । ತತ್ ತಸ್ಮಾನ್ಮಾಯಾಬದ್ಧತ್ವರೂಪಹೀನಗುಣಸ್ಯಾಪಿ ಮಾಯೋಪಾಧಿಕತ್ವಾಯೋಗಾತ್ ಸರ್ವೇಶ್ವರತ್ವಪೂರ್ವಂ ಸರ್ವೇಶ್ವರತ್ವಸರ್ವನಿಯಾಮಕತ್ವಾದಿಕಂ ಕಃ ಕುರ್ವೀತ ನ ಕೋಽಪಿ ಕರ್ತುಂ ಶಕ್ನೋತಿ । ಸರ್ವೇಶ್ವರತ್ವಸ್ಯಾನ್ಯತ್ರಾಭಾವೇನ ತದುಪಾಧಾನಾಯೋಗಾತ್ । ಸ್ವನಿಷ್ಠಸರ್ವೇಶ್ವರತ್ವಸ್ಯಾನ್ಯಾಯತ್ತತ್ವೇ ತದಧೀನತ್ವಾವಶ್ಯಂಭಾವೇನ ಸರ್ವೇಶ್ವರತ್ವಸ್ಯ ವ್ಯಾಹತತ್ವಾಚ್ಚೇತಿ ಭಾವಃ ॥ ೬೫೫ ॥

**ವಿವರಣೆ—** ಮಾಯಾಬದ್ಧತ್ವವು ಮಾಯೆಯಲ್ಲಿಯೇ ಇರುವುದಿಲ್ಲ. ಆದ್ದರಿಂದ ಜೀವನಲ್ಲಿಯೂ ಆ ಧರ್ಮವನ್ನು ತೋರಿಸಲು ಸಾಧ್ಯವಿಲ್ಲ. ಆದ್ದರಿಂದ, ಮಾಯಬದ್ಧತ್ವವೆಂಬ ಹೀನ ಗುಣವೇ ಮಾಯೋಪಾಧಿಕವಾಗಲಾರದು. ಹೀಗಿರುವಾಗ ಸರ್ವೇಶ್ವರತ್ವಾದಿಗಳು ಮಾಯೆಯಲ್ಲಿಲ್ಲದ ಕಾರಣ, ಅವನ್ನೂ ಪರಮಾತ್ಮನಲ್ಲಿ ಉಪಾಧಾನ ಮಾಡಲು ಸಾಧ್ಯವಿಲ್ಲ. ತನ್ನಲ್ಲಿರುವ ಸರ್ವೇಶ್ವರತ್ವಾದಿಗಳೂ ಕೂಡ ಮತ್ತೊಬ್ಬರ ಅಧೀನವಾದರೆ ಅವನ ಅಧೀನ ಶ್ರೀಹರಿಯಾಗುತ್ತಾನೆಂದು ಹೇಳಬೇಕು. ಆವಾಗ ಸರ್ವೇಶ್ವರತ್ವ ಎಂಬ ಧರ್ಮವೇ ವ್ಯಾಹತವಾಗುತ್ತದೆ.

ನಿರೀಕ್ಷತೋ ಯಸ್ಯ ದೃಷ್ಟಿರ್ಮಾಯಯಾಽಣ್ವಪಿ ನಾಜ್ಯತೇ ।
ಇತ್ಯಾಹ ಪಂಚಮಸ್ಕಂಧೇ ತದ್ದ್ರಷ್ಟೃತ್ವಾದಯಃ ಪ್ರಭೋಃ ॥
ಸ್ವಾಭಾವಿಕಾ ಭವೇಯುರ್ಹಿ ತದಭಾವಃ ಕದಾ ವದ ॥ ೬೫೬ ॥

**ಅರ್ಥ—** ನಿರೀಕ್ಷತಃ = ಎಲ್ಲವನ್ನು ಪ್ರತ್ಯಕ್ಷವಾಗಿ ಕಾಣುವ, ಯಸ್ಯ = ಯಾವ ಭಗವಂತನ, ದೃಷ್ಟಿಃ = ಜ್ಞಾನವು, ಮಾಯಯಾ = ಮಾಯೆಯಿಂದ, ಅಣು ಅಪಿ = ಸ್ವಲ್ಪವೂ ಸಹ, ನ ನಾಜ್ಯತೇ = ಸಂಬಂಧವನ್ನು ಹೊಂದುವುದಿಲ್ಲ, ಇತಿ = ಹೀಗೆ, ಪಂಚಮಸ್ಕಂಧೇ = ಭಾಗವತದ

ಪಂಚಮ ಸ್ಕಂಧದಲ್ಲಿ, ಆಹ = ವೇದವ್ಯಾಸರೂಪದಿಂದ ಪರಮಾತ್ಮನೇ ಹೇಳಿದ್ದಾನೆ. ತತ್ = ಆದ್ದರಿಂದ, ಪ್ರಭೋಃ = ಶ್ರೀಹರಿಯ, ದ್ರಷ್ಟೃತ್ವಾದಯಃ = ದ್ರಷ್ಟೃತ್ವಾದಿ ಧರ್ಮಗಳು, ಸ್ವಾಭಾವಿಕಾಃ = ಸ್ವಾಭಾವಿಕಗಳೇ, ಭವೇಯುಃ = ಆಗುತ್ತವೆ. ಹೀಗಿರುವಾಗ, ತದಭಾವಃ = ಧರ್ಮಗಳಿಲ್ಲದಿರುವಿಕೆಯು, ಕದಾ = ಯಾವಾಗ ಎಂದು, ವದ = ಹೇಳು.

**ಅನುವಾದ–** ಸಾಕ್ಷಾತ್ ಪರಮಾತ್ಮನೇ ವೇದವ್ಯಾಸರೂಪದಿಂದ ತನಗೆ ಮಾಯೆಯ ಸಂಬಂಧವಿಲ್ಲವೆಂದು ಹೇಳಿದ್ದಾನೆ. ಶ್ರೀಮದ್‌ಭಾಗವತದ ಪಂಚಮ ಸ್ಕಂದದಲ್ಲಿ 'ನ ಯಸ್ಯ ಮಾಯಾ ಗುಣಚಿತ್ತವೃತ್ತಿಭಿಃ' ಇತ್ಯಾದಿ ಶ್ಲೋಕದಿಂದ ಸಕಲ ಪದಾರ್ಥಗಳನ್ನು ಪ್ರತ್ಯಕ್ಷವಾಗಿ ನೋಡುವ ಪರಮಾತ್ಮನ ಜ್ಞಾನವು ಮಾಯೆಯಿಂದ ಸ್ವಲ್ಪವೂ ಕೂಡ ಒಳಗಾಗಿರುವುದಿಲ್ಲ ಎಂದು ಸ್ಪಷ್ಟವಾಗಿ ಹೇಳಿರುತ್ತಾನಾದ್ದರಿಂದ ಪರಮಾತ್ಮನಲ್ಲಿರುವ ಜ್ಞಾನಾದಿಗಳು ಸ್ವಾಭಾವಿಕವಾಗಿಯೇ ಇರುತ್ತವೆ, ಹೊರತು ಮಾಯಾಕಲ್ಪಿತವಲ್ಲ. ಇಂತಹ ಸ್ವಾಭಾವಿಕಧರ್ಮಗಳು ಯಾವ ಕ್ಷಣದಲ್ಲಿ ಪರಮಾತ್ಮನಲ್ಲಿ ಇರುವುದಿಲ್ಲವೆಂಬುದನ್ನು ನೀನೇ ಹೇಳು.

**ಭಾವವಿಲಾಸಿನೀ–** 'ನಿರೀಕ್ಷತ' ಇತ್ಯಾದಿನಾ 'ನ ಯಸ್ಯ ಮಾಯಾಗುಣಚಿತ್ತವೃತ್ತಿಭಿರ್ನಿರೀಕ್ಷತೋ ಹ್ಯಣ್ವಪಿ ದೃಷ್ಟಿರಜ್ಯತೇ' ಇತಿ ವಾಕ್ಯಂ ಸಂಗೃಹ್ಣಾತಿ। ತತ್ ತಸ್ಮಾನ್ಮಾಯಾಸಂಬಂಧಲೇಶಸ್ಯಾಭಾವಾದ್ ದ್ರಷ್ಟೃತ್ವಾದಯಃ ದ್ರಷ್ಟೃತ್ವಪ್ರಮಾತೃತ್ವಜ್ಞಾತೃತ್ವಾದಯೋ ಜ್ಞಾನನಿಮಿತ್ತಕಧರ್ಮಾಃ । ತದಭಾವಃ ದ್ರಷ್ಟೃತ್ವಾದ್ಯಭಾವಃ ॥ ೬೫೬ ॥

**ಕಿಂಚೋಪಾಧಿರ್ಬಿಂಬಮೇವ ಪ್ರತಿಬಿಂಬಸ್ಯ ಶೋಭತೇ ।**
**ಸ್ವಧರ್ಮಾಧಾಯಕತ್ವೇನ ಮಾಯಾದಿಃ ಸ್ಫಟಿಕಾದಿವತ್ ॥**
**ನಿಮಿತ್ತಮಾತ್ರಂ ತತ್ಸಂಗಾತ್ತನ್ನಾಮ್ನಾ ಭಣ್ಯತೇ ಪರಮ್ ॥ ೬೫೭ ॥**

**ಅರ್ಥ–** ಕಿಂಚ = ಮತ್ತು, ಪ್ರತಿಬಿಂಬಸ್ಯ = ಪ್ರತಿಬಿಂಬನಾದ ಜೀವನಿಗೆ, ಬಿಂಬಮೇವ = ಬಿಂಬಭೂತನಾದ ಶ್ರೀಹರಿಯೇ, ಸ್ವಧರ್ಮಾಧಾಯಕತ್ವೇನ = ಸ್ವಧರ್ಮಗಳನ್ನು ಜೀವನಲ್ಲಿ ತಂದು ಕೊಡುವುದರಿಂದ, ಉಪಾಧಿಃ = ಉಪಾಧಿಯಾಗಿರುತ್ತಾನೆಂಬುದು. ಶೋಭತೇ = ಇದು ಯುಕ್ತಿಯುಕ್ತವಾಗುತ್ತದೆ. ಮಾಯಾದಿಃ = ಮಾಯಾ ಮೊದಲಾದವು, ಸ್ಫಟಿಕಾದಿವತ್ = ಸ್ಫಟಿಕಾದಿಗಳಂತೆ, ನಿಮಿತ್ತಮಾತ್ರಮ್ = ಕೇವಲ ನಿಮಿತ್ತಗಳು, ತತ್ಸಂಗಾತ್ = ಉಪಾಧಿಯ ಸಂಬಂಧದಿಂದ, ಪರಂ = ಮುಖ್ಯವಾಗಿ, ತನ್ನಾಮ್ನಾ = ಉಪಾಧಿನಾಮದಿಂದಲೇ, ಭಣ್ಯತೇ = ವ್ಯವಹರಿಸಲ್ಪಡುತ್ತದೆ.

**ಅನುವಾದ– ತನ್ನ ಧರ್ಮಗಳನ್ನು ಜೀವನಲ್ಲಿ ಕೊಡುವುದರಿಂದ ಪ್ರತಿಬಿಂಬನಾದ ಜೀವನಿಗೆ ಬಿಂಬಭೂತನಾದ ಶ್ರೀಹರಿಯೇ ಉಪಾಧಿಯಾಗಿದ್ದಾನೆ. ಸ್ಫಟಿಕದಲ್ಲಿ ತೋರುವ ಕೆಂಪು ಬಣ್ಣಕ್ಕೆ ದಾಸವಾಳ ಹೂ ಕಾರಣ ಎಂಬುದು ಲೋಕದಲ್ಲಿ**

**ಕಂಡಿದೆ. ಆದ್ದರಿಂದ ದಾಸವಾಳ ಹೂವನ್ನೇ ಉಪಾಧಿಯೆಂದು ಹೇಳಬೇಕು. ಮಾಯಾದಿಗಳು ಸ್ಫಟಿಕಾದಿಗಳಂತೆ ಕೇವಲ ನಿಮಿತ್ತವೆನಿಸಿವೆ. ಅಂದರೆ ಅಪ್ರಧಾನ ಕಾರಣವಾಗಿವೆ, ಹೊರತು ಉಪಾಧಿಲಯಲ. ಉಪಾಧಿಯ ಸಂಬಂಧದಿಂದ ಮಾತ್ರ ಸ್ಫಟಿಕಾದಿಗಳಲ್ಲಿ ಉಪಾಧಿಶಬ್ದದ ವ್ಯವಹಾರವಿದೆ.**

**ಭಾವವಿಲಾಸಿನೀ–** ಪೂರ್ವಂ ಮಾಯಾಯಾ ಏವೋಪಾಧಿತ್ವಮಂಗೀಕೃತ್ಯ ಮಾಯಾ-ಭಿನ್ನತ್ವಾದಿಬ್ರಹ್ಮಗುಣಾನಾಂ ಸ್ವಾಭಾವಿಕತ್ವಂ ಸಮರ್ಥಿತಮ್ । ವಸ್ತುತಸ್ತು ಪ್ರತಿಬಿಂಬಸ್ಯ ಬಿಂಬ ಏವೋಪಾಧಿಃ । ಸ್ವನಿಷ್ಠಧರ್ಮಾಧಾಯಕತ್ವಸ್ಯ ತತ್ರೈವ ಸಂಭವಾತ್ । ಸ್ಫಟಿಕಲೌಹಿತ್ಯಾದೌ ಜಪಾಕುಸುಮಸ್ಯೈವೋಪಾಧಿತ್ವಪ್ರಸಿದ್ಧೇಶ್ಚ । ಏವಂ ಚ ಪ್ರತಿಬಿಂಬಭೂತಜೀವಗುಣಾನಾಂ ಕಥಂಚಿದೌಪಾಧಿಕತ್ವಪ್ರಾಪ್ತಾವಪಿ ಬಿಂಬಭೂತಬ್ರಹ್ಮಗುಣಾನಾಂ ಸ್ವಾಭಾವಿಕತ್ವಮೇವ ನ್ಯಾಯ್ಯಮಿತ್ಯಾಹ – **ಕಿಂಚೋಪಾಧಿರಿತ್ಯಾರಭ್ಯ ಕಿಂ ತೇऽಭೂನ್ನಾನುಮಾನತ ಇತ್ಯಂತೇನ ॥** ತತ್ಸಂಗಾದುಪಾಧಿಸಂಬಂಧಾತ್ । ತನ್ನಾಮ್ನಾ ಉಪಾಧಿನಾಮ್ನಾ ॥ ೬೫೭ ॥

**ವಿವರಣೆ–** ಇಲ್ಲಿಯ ತನಕ,ಅಜ್ಞಾನವನ್ನು ಉಪಾಧಿಯೆಂದು ಅಂಗೀಕರಿಸಿ ಅಂತಹ ಮಾಯಾಭಿನ್ನತ್ವ, ಜ್ಞಾನಾನಂದಾದಿರೂಪತ್ವ ಇವೇ ಮೊದಲಾದ ಪರಮಾತ್ಮನ ಗುಣಗಳು ಮಾಯಾಕಲ್ಪಿತಗಳಾಗುವುದಿಲ್ಲ, ಹೊರತು, ಸ್ವಾಭಾವಿಕವಾಗಿ ಇರುತ್ತವೆಂದು ಸಮರ್ಥಿ-ಸಿದರು. ಪ್ರಕೃತ ಜೀವನಲ್ಲಿರುವ ಗುಣಗಳು ಔಪಾಧಿಕಗಳೆಂದು ಹೇಳಬಹುದಾದರೂ ಪರಮಾತ್ಮನ ಗುಣಗಳು ಔಪಾಧಿಕಗಳಲ್ಲ ಎಂಬುದನ್ನು ಸಮರ್ಥಿಸುತ್ತಿದ್ದಾರೆ.

ವಸ್ತುತಃ ಪ್ರತಿಬಿಂಬಕ್ಕೆ ಬಿಂಬವೇ ಉಪಾಧಿಯಾಗುತ್ತದೆ. ಏಕೆಂದರೆ ಸ್ವನಿಷ್ಠ ಧರ್ಮ ಆಧಾಯಕತ್ವವು ಬಿಂಬದಲ್ಲೇ ಯುಕ್ತವಾಗುತ್ತದೆ. ಸ್ಫಟಿಕದಲ್ಲಿ ಕೆಂಬಣ್ಣ ಕಾಣಲು ದಾಸವಾಳ ಹೂವೇ ಉಪಾಧಿಯಾಗಿರುವುದು ಕಂಡಿದೆ. ಆದ್ದರಿಂದ, ಪ್ರತಿಬಿಂಬನಾದ ಜೀವನ ಗುಣಗಳು ಔಪಾಧಿಕವೆಂದಾದರೂ, ಬಿಂಬನಾದ ಬ್ರಹ್ಮನ ಗುಣಗಳಿಗೆ ಸ್ವಾಭಾವಿಕತ್ವವನ್ನೇ ಒಪ್ಪಬೇಕು. ಈ ವಿಷಯವನ್ನು 'ಕಿಂಚ ಉಪಾಧಿಃ' ಎಂಬ ಶ್ಲೋಕದಿಂದ 'ಕಿಂ ತೇऽಭೂನ್ನಾನುಮಾನತಃ' ಎಂಬ ಶ್ಲೋಕದ ತನಕ ಸಮರ್ಥಿಸುತ್ತಿದ್ದಾರೆ. 'ತತ್ಸಂಗಾತ್' ಎಂದರೆ ಉಪಾಧಿಸಂಬಂಧದಿಂದ ಎಂದರ್ಥ. 'ತನ್ನಾಮ್ನಾ' ಎಂದರೆ ಉಪಾಧಿ ಹೆಸರಿನಿಂದ ಎಂದರ್ಥ.

**ತಸ್ಮಾದ್ ಬ್ರಹ್ಮಸ್ಥಸುಗುಣಾ ಏವ ತತ್ಪ್ರತಿಬಿಂಬಕೇ ।**
**ದೃಶ್ಯೇರನ್ನಾನ್ಯತಸ್ತೇ ಸ್ಯುಃ ಸೂರ್ಯಕಶ್ರೀರ್ಹಿ ಸೂರ್ಯತಃ ॥ ೬೫೮ ॥**

**ಅರ್ಥ–** ತಸ್ಮಾತ್ = ಬಿಂಬನೇ ಉಪಾಧಿಯಾಗಿರುವುದರಿಂದ, ಪ್ರತಿಬಿಂಬಕೇ = ಪ್ರತಿಬಿಂಬನಾದ ಜೀವನಲ್ಲಿ, ಬ್ರಹ್ಮಸ್ಥಸುಗುಣಾಃ = ಪರಬ್ರಹ್ಮನಲ್ಲಿರುವ ಶುಭಧರ್ಮಗಳೇ, ದೃಶ್ಯೇರನ್ = ಕಂಡು ಬರುತ್ತವೆ. ತೇ = ಆ ಗುಣಗಳು, ಅನ್ಯತಃ = ಬೇರೆಯವರಿಂದ, ನ ಸ್ಯುಃ

= ಉಂಟಾಗಲಾರವು. ಸೂರ್ಯತಃ ಹಿ = ಸೂರ್ಯನಿಂದಷ್ಟೇ, ಸೂರ್ಯಕಶ್ರೀಃ = ಸೂರ್ಯ ಪ್ರತಿಬಿಂಬದ ಕಾಂತಿಯು.

**ಅನುವಾದ–** ಬಿಂಬರೂಪನಾದ ಪರಬ್ರಹ್ಮನಲ್ಲಿರುವ ಸದ್ಗುಣಗಳು ಪ್ರತಿಬಿಂಬನಾದ ಜೀವನಲ್ಲಿ ಕಂಡು ಬರುತ್ತವೆ. ಉದಾಹರಣೆಗೆ, ಸೂರ್ಯನಲ್ಲಿ ತೋರುವ ತೇಜಸ್ಸು ಸೂರ್ಯಪ್ರತಿಬಿಂಬದಲ್ಲಿ ಕಾಣಿಸುತ್ತದೆ. ಆದ್ದರಿಂದ ಪ್ರತಿಬಿಂಬದಲ್ಲಿ ಕಂಡು ಬರುವ ಗುಣಗಳು ಬಿಂಬದಲ್ಲಿ ಸ್ವಾಭಾವಿಕವಾಗಿರಬೇಕು.

**ಭಾವವಿಲಾಸಿನೀ–** ತಸ್ಮಾದ್ ಬಿಂಬಸ್ಯೋಪಾಧಿತ್ವಾತ್ । ತತ್ಪ್ರತಿಬಿಂಬಕೇ ಬ್ರಹ್ಮಪ್ರತಿಬಿಂಬೇ ಜೀವೇ । ಸೂರ್ಯಕಶ್ರೀಃ ಸೂರ್ಯಪ್ರತಿಬಿಂಬಶ್ರೀಃ ॥ ೬೫೮ ॥

**ಬಿಂಬಸ್ಥಗುಣಸರ್ವಸ್ವಮನೌಪಾಧಿಕಮೇವ ಹಿ ।**
**ತನ್ನಾಶನಾಶಿ ತದ್‌ದ್ರೌವ್ಯೇ ಧ್ರುವಮೇವಾಭವದ್ಧಿ ತತ್ ॥ ೬೫೯ ॥**

**ಅರ್ಥ–** ಬಿಂಬಸ್ಯ = ಬಿಂಬದಲ್ಲಿರುವ, ಗುಣಸರ್ವಸ್ವಂ = ಸಮಸ್ತ ಗುಣಗಳು, ಅನೌಪಾಧಿಕಮೇವ ಹಿ = ಸ್ವಾಭಾವಿಕಗಳೇ ಆಗಿರುತ್ತವೆ. ತನ್ನಾಶನಾಶಿನಿ = ಬಿಂಬ ನಾಶದಿಂದ ನಾಶವನ್ನು ಹೊಂದುತ್ತವೆ, ತದ್ರೌವ್ಯೇ = ಬಿಂಬವು ನಿತ್ಯವಾದಲ್ಲಿ, ತತ್ = ಬಿಂಬಗಳಲ್ಲಿರುವ ಗುಣಗಳೆಲ್ಲವೂ ಕೂಡ, ಧ್ರುವಂ ಏವ = ನಿತ್ಯವೇ, ಅಭವತ್ ಹಿ= ಆಯಿತಷ್ಟೆ.

**ಅನುವಾದ–** ಬಿಂಬದಲ್ಲಿರುವ ಗುಣಗಳು ಸ್ವಾಭಾವಿಕಗಳು. ಬಿಂಬವು ನಷ್ಟವಾದರೆ ಮಾತ್ರ ಆ ಧರ್ಮಗಳು ನಷ್ಟವಾಗುತ್ತವೆ. ಬಿಂಬವು ನಿತ್ಯ ಹಾಗೂ ಸತ್ಯವಾದ್ದರಿಂದ ಬಿಂಬದಲ್ಲಿರುವ ಗುಣಗಳೂ ಕೂಡ ನಿತ್ಯ ಹಾಗೂ ಸತ್ಯವೇ ಆಗುತ್ತವೆ.

**ಭಾವವಿಲಾಸಿನೀ–** ತನ್ನಾಶನಾಶಿ ಬಿಂಬನಾಶನಾಶಿ । ಹೀತ್ಯನೇನಾಸ್ಯಾರ್ಥಸ್ಯ ಜಪಾಕುಸುಮ-ಸೂರ್ಯಾದೌ ಪ್ರಸಿದ್ಧಿಂ ದರ್ಶಯತಿ । ತದ್ ಬಿಂಬಗುಣಜಾತಮ್ ॥ ೬೫೯ ॥

**ವಿವರಣೆ–** 'ಹಿ' ಎಂಬ ಶಬ್ದದಿಂದ ಜಪಾಕುಸುಮ ಹಾಗೂ ಸೂರ್ಯಾದಿಗಳಲ್ಲಿ ಈ ವಿಷಯವು ಪ್ರಸಿದ್ಧವಾಗಿದೆ ಎಂಬುದನ್ನು ತೋರಿಸಿದ್ದಾರೆ. ದಾಸವಾಳ ಹೂವಿನಲ್ಲಿ ಕೆಂಪು ಬಣ್ಣವು ಕಾಣಿಸುತ್ತಿದೆ. ದಾಸವಾಳದ ಹೂ ಇರುವಷ್ಟು ಕಾಲ, ಅದರಲ್ಲಿ ಕೆಂಪು ಬಣ್ಣವೂ ಕೂಡ ಇದ್ದೇ ಇರುತ್ತದೆ. ದಾಸವಾಳ ಹೂ ನಾಶವಾದ ಮೇಲೆ ಕೆಂಪು ಬಣ್ಣವು ನಾಶವಾಗುತ್ತದೆ. ಹೊರತು, ಹೂ ಇರುವಾಗಲೇ ಕೆಂಪು ಬಣ್ಣ ನಾಶವಾಗಿದ್ದು ಎಲ್ಲಿಯೂ ಕಂಡಿಲ್ಲ. ಆದರಂತೆ, ಸೂರ್ಯನು ಇದ್ದಾಗ ಅವನಲ್ಲಿ ತೇಜಸ್ಸು ಇದ್ದೇ ಇರುತ್ತದೆ. ಸೂರ್ಯನು ಅಸ್ತನಾದ ಮೇಲೆ ತೇಜಸ್ಸೂ ಸಹ ಅಸ್ತವಾಗುತ್ತದೆ. ಹೊರತಾಗಿ, ಸೂರ್ಯನಿರುವಾಗಲೇ ತೇಜಸ್ಸು ನಾಶವಾಗಿದ್ದು ಇದುವರೆಗೂ ಕಂಡಿಲ್ಲ. ಆದ್ದರಿಂದ, ಬಿಂಬದಲ್ಲಿರುವ ಗುಣಗಳು ಯಾವದ್‌ದ್ರವ್ಯಭಾವಿಧರ್ಮಗಳಾಗಿವೆ.

ಯಾವುದೇ ಬಿಂಬದಲ್ಲಿರುವ ಗುಣಗಳೆಲ್ಲವೂ ಸ್ವಾಭಾವಿಕವೇ ಆಗಿರುತ್ತವೆ. ಆದ್ದರಿಂದ, ಬಿಂಬನಾದ ಶ್ರೀಹರಿಯ ಗುಣಗಳೆಲ್ಲವೂ ಸ್ವಾಭಾವಿಕಗಳೇ ಆಗಬೇಕು.

**ಪ್ರತಿಬಿಂಬಸ್ಯ ಸರ್ವಸ್ಯ ಯದ್ ಬಿಂಬಂ ಬ್ರಹ್ಮ ತದ್ಧಿ ಮೇ ।**
**ತಚ್ಚ ಸತ್ಯಂ ಚ ನಿತ್ಯಂ ಚ ನಿರ್ಗುಣಂ ಸ್ಯಾತ್ ಕದಾಚನ ॥ ೭೬೦ ॥**

**ಅರ್ಥ–** ಸರ್ವಸ್ಯ ಪ್ರತಿಬಿಂಬಸ್ಯ=ಲಕ್ಷ್ಮೀದೇವಿಯಿಂದ ಆರಂಭಿಸಿ ತೃಣಪರ್ಯಂತ ಸಕಲ ಜೀವ ರಾಶಿಗಳೆಂಬ ಪ್ರತಿಬಿಂಬ ಸಮೂಹಕ್ಕೆ, ಯದ್ = ಯಾವಾಗ, ಬಿಂಬಂ = ಬಿಂಬವಿದೆಯೋ, ತತ್ ಹಿ = ಅದೇ, ಮೇ = ನನ್ನ ಬ್ರಹ್ಮ = ಬ್ರಹ್ಮನು. ತತ್ ಚ= ಅಂತಹ ಭಿನ್ನನಾದ ಬ್ರಹ್ಮನಾದರೂ, ಸತ್ಯಂ = ಸತ್ಯಸ್ವರೂಪನೂ, ಚ= ಮತ್ತು, ನಿತ್ಯಂ= ನಿತ್ಯಸ್ವರೂಪನೂ, ಸ್ಯಾತ್ = ಆಗಿರುತ್ತಾನೆ. ಕದಾಚನ = ಯಾವಾಗ, ನಿರ್ಗುಣಂ ಸ್ಯಾತ್= ನಿರ್ಗುಣನು ಆಗುತ್ತಾನೆ?

**ಅನುವಾದ–** ಲಕ್ಷ್ಮೀದೇವಿಯಿಂದ ಆರಂಭಿಸಿ ತೃಣ ಪರ್ಯಂತ ಸಕಲ ಜೀವರಾಶಿಗಳಿಗೂ ಬಿಂಬನಾಗಿರುವವನು ಪರಬ್ರಹ್ಮನೇ ಆಗಿರುತ್ತಾನೆ. ಅಂತಹ ಪರಬ್ರಹ್ಮನು ಸತ್ಯನೂ, ನಿತ್ಯನೂ ಆಗಿರುವುದರಿಂದ ಆ ಬ್ರಹ್ಮನು ಯಾವಾಗ ನಿರ್ಗುಣನಾಗುವನು?

**ಭಾವವಿಲಾಸಿನೀ–** ಸರ್ವಸ್ಯ ಲಕ್ಷ್ಮ್ಯಾದಿಪಿಪೀಲಿಕಾಂತಸಮಸ್ತಚೇತನಸಮುದಾಯಾತ್ಮಕಸ್ಯ ಪ್ರತಿಬಿಂಬಸ್ಯ ಯದ್ ಬಿಂಬಂ ಮೂಲೀಭೂತಮ್, ತದೇವ ಮೇ ಬ್ರಹ್ಮ ಹೀತಿ ಯೋಜನಾ । ತದ್ ಬಿಂಬಭೂತಂ ಬ್ರಹ್ಮ ಸತ್ಯಮಬಾಧ್ಯಮ್ । ನಿತ್ಯಂ ಸಾರ್ವಕಾಲಿಕಮ್ । ಏವಂ ಚ ತವ ನಿರ್ಗುಣಂ ಕದಾ ಸ್ಯಾತ್, ಅವಸರಾಭಾವಾದಿತಿ ಭಾವಃ ॥ ೭೬೦ ॥

**ವಿವರಣೆ–** ಲಕ್ಷ್ಮೀದೇವಿಯಿಂದ ಆರಂಭಿಸಿ ಇರುವೆಯ ತನಕ ಸಕಲ ಚೇತನರು ಬ್ರಹ್ಮನಿಗೆ ಪ್ರತಿಬಿಂಬರೇ ಆಗಿರುತ್ತಾರೆ. ಬಿಂಬನಾದ ಪರಮಾತ್ಮನ ಗುಣಗಳು ಸತ್ಯವೂ ನಿತ್ಯವೂ ಆಗಿರುವುದರಿಂದ ಎಂದೂ ನಾಶ ಹೊಂದುವುದಿಲ್ಲ. ಆದ್ದರಿಂದ ನಿನ್ನ ಅಭಿಪ್ರಾಯದಂತೆ ಬ್ರಹ್ಮನು ಯಾವಾಗ ನಿರ್ಗುಣನಾಗುತ್ತಾನೆ?

**ಸಗುಣಪ್ರತಿಬಿಂಬೇಽಸ್ಮಿನ್ ಬಿಂಬತ್ವಾದ್ ರುದ್ರಪುಷ್ಪವತ್ ।**
**ಸ್ವಾಭಾವಿಕಗುಣಂ ಬ್ರಹ್ಮ ಕಿಂ ತೇಽಭೂನ್ನಾನುಮಾನತಃ ॥ ೭೬೧ ॥**

**ಅರ್ಥ–** ಬ್ರಹ್ಮ = ಬ್ರಹ್ಮನು, ಸ್ವಾಭಾವಿಕಗುಣಂ = ಸ್ವಾಭಾವಿಕವಾದ ಗುಣಗಳುಳ್ಳವನು, ಅಸ್ಮಿನ್ = ಈ, ಸಗುಣಪ್ರತಿಬಿಂಬೇ = ಸಗುಣನಾದ ಪ್ರತಿಬಿಂಬನಾದ ಜೀವನಿಗೆ, ಬಿಂಬತ್ವಾತ್ = ಬಿಂಬ ನಾಗಿರುವುದರಿಂದ, ರುದ್ರಪುಷ್ಪವತ್ = ದಾಸವಾಳ ಹೂವಿನಂತೆ ಎಂಬ, ಅನುಮಾನತಃ = ಈ ಅನುಮಾನದಿಂದಲೂ, ತೇ = ನಿನ್ನ ಮತದಲ್ಲಿಯೂ, ನಾಭೂತ್ ಕಿಂ = ಆಗುವುದಿಲ್ಲವೇನು?

**ಅನುವಾದ–** ನಿನ್ನ ಮತದಲ್ಲಿಯೂ ಇದು ಅನುಮಾನವೇ ಆಗುತ್ತದೆ. ಸ್ಫಟಿಕ ಮಣಿಯಲ್ಲಿ ತೋರುವ ಕೆಂಪು ಬಣ್ಣಕ್ಕೆ ಬಿಂಬಭೂತವಾದದ್ದು ದಾಸವಾಳ ಹೂ. ಆ ಹೂವಿನಲ್ಲಿ ಕೆಂಪು ಬಣ್ಣವು ಸ್ವಾಭಾವಿಕವಾಗಿಯೇ ಇರುತ್ತದೆ. ಅದರಂತೆ ಬಿಂಬಭೂತನಾದ ಪರಮಾತ್ಮನಿಗೆ ಸಗುಣರಾದ ಜೀವರು ಪ್ರತಿಬಿಂಬರಾಗಿದ್ದಾರೆ. ಈ ಜೀವರಿಗೆ ಬಿಂಬರೂಪನಾದ ಪರಬ್ರಹ್ಮನಲ್ಲಿರುವ ಗುಣಗಳೂ ಕೂಡ ಸ್ವಾಭಾವಿಕವೇ ಆಗಬೇಕು ಎಂದು ಅನುಮಾನ ಮಾಡುತ್ತೇವೆ. ಈ ಅನುಮಾನದಿಂದ ನಿನ್ನ ಮತದಲ್ಲಿಯೂ ಬ್ರಹ್ಮನಿಗೆ ಸ್ವಾಭಾವಿಕಗುಣವು ಸಿದ್ಧಿಸುವುದಿಲ್ಲವೆ?

**ಭಾವವಿಲಾಸಿನೀ–** ಅನುಮಾನಪ್ರಯೋಗಂ ದರ್ಶಯತಿ – **ಸಗುಣೇತಿ** ॥ ವಿಮತಂ ಬ್ರಹ್ಮ ಸ್ವಾಭಾವಿಕಗುಣವತ್, ಸಗುಣಪ್ರತಿಬಿಂಬೇಽಸ್ಮಿನ್ ಜೀವೇ ಬಿಂಬತ್ವಾತ್ । ಅತ್ರ ಬಿಂಬತ್ವಾದಿತ್ಯೇವ ಹೇತುಃ । ನೀರೂಪಕಾಲವಾಯ್ವಾದೇಃ ಪ್ರತಿಫಲನಾದರ್ಶನಾತ್ । ಸಗುಣೇತ್ಯಾದಿವಿಶೇಷಣಂ ಪ್ರಯೋಜ್ಯಪ್ರಯೋಜಕಭಾವಸ್ಫೋರಕತಯೋಪಾತ್ತಮಿತಿ ಜ್ಞಾತವ್ಯಮ್ । ರುದ್ರಪುಷ್ಪವತ್ ಜಪಾಕುಸುಮವತ್ । ತೇ ತವ ಮತೇಽಪಿ ನಾಭೂತ್ ಕಿಮ್? ಅಭೂದೇವ ॥ ೬೬೧ ॥

**ವಿವರಣೆ–** ಅನುಮಾನದ ಮೂಲಕ ಪರಬ್ರಹ್ಮನಲ್ಲಿರುವ ಗುಣಗಳಿಗೆ ಸ್ವಾಭಾವಿಕತ್ವವನ್ನು ಸಮರ್ಥಿಸುತ್ತಿದ್ದಾರೆ-

'ವಿಮತಂ ಬ್ರಹ್ಮ ಸ್ವಾಭಾವಿಕಗುಣವತ್, ಸಗುಣಪ್ರತಿಬಿಂಬೇಽಸ್ಮಿನ್ ಜೀವೇ ಬಿಂಬತ್ವಾತ್ ರುದ್ರಪುಷ್ಪವತ್' ಯಾವ ರೀತಿಯಾಗಿ ದಾಸವಾಳ ಹೂವು ಸ್ಫಟಿಕದಲ್ಲಿ ತೋರುವ ಕೆಂಪು ಬಣ್ಣಕ್ಕೆ ಬಿಂಬವಾಗಿ ಸ್ವಾಭಾವಿಕಗುಣ ಹೊಂದಿದೆಯೋ, ಅದರಂತೆ ವಿವಾದಕ್ಕೆ ವಿಷಯನಾದ ಬ್ರಹ್ಮನೂ ಕೂಡ ಸಗುಣರಾದ ಪ್ರತಿಬಿಂಬರಾದ ಸಕಲ ಜೀವರಿಗೆ ಬಿಂಬನಾಗಿದ್ದಾನೆ. ಆದ್ದರಿಂದ, ಸ್ವಾಭಾವಿಕ ಗುಣವುಳ್ಳವನೂ ಆಗಲೇಬೇಕು. ಈ ಅನುಮಾನದಿಂದ ಪರಬ್ರಹ್ಮನಲ್ಲಿ ಇರುವ ಗುಣಗಳು ಸ್ವಾಭಾವಿಕವೆಂದು ನಿರ್ಣಯವಾಗುತ್ತದೆ. ರೂಪವಿಲ್ಲದ ಕಾಲ, ವಾಯು ಮೊದಲಾದವುಗಳಲ್ಲಿ ಪ್ರತಿಫಲನವು ಯುಕ್ತವಾಗುವುದಿಲ್ಲ. ಆದ್ದರಿಂದ ಸಗುಣ ಪ್ರತಿಬಿಂಬದಲ್ಲಿ ಎಂದು ಹೇಳಿರುತ್ತಾರೆ. ಜೀವನು ಸಗುಣನಾದ್ದರಿಂದ ಇವನನ್ನೇ ಪ್ರತಿಬಿಂಬನೆಂದು ಯೋಚಿಸಬೇಕು. ಸಗುಣ ಇತ್ಯಾದಿಯಾಗಿ ವಿಶೇಷಣವನ್ನು ನೀಡಿದ್ದು ಸಾಧ್ಯ ಹೇತುಗಳಿಗೆ ಇರುವ ಕಾರಣ ಕಾರ್ಯಸಂಬಂಧವನ್ನು ಸ್ಪಷ್ಟಪಡಿಸುವುದಕ್ಕಾಗಿ ಎಂದು ತಿಳಿಯಬೇಕು.

ರುದ್ರಪುಷ್ಪ ಎಂದರೆ ದಾಸವಾಳ ಹೂ ಎಂದರ್ಥ.

ಯಾವುದೇ ವಸ್ತು ಯಾವ ಧರ್ಮವನ್ನು ಮತ್ತೊಂದರಲ್ಲಿ ಪ್ರತಿಬಿಂಬಿಸುತ್ತದೋ, ಆ ಧರ್ಮವು ಬಿಂಬದಲ್ಲಿ ಸ್ವಾಭಾವಿಕವಾಗಿ ಇರುತ್ತದೆಂಬುದು ಲೋಕದಲ್ಲಿ ಕಂಡಿದೆ. ಜೀವನ ಗುಣಗಳಿಗೆ ಬ್ರಹ್ಮನು ಬಿಂಬನಾದ್ದರಿಂದ ಬ್ರಹ್ಮನಲ್ಲಿರುವ ಧರ್ಮಗಳು ಸ್ವಾಭಾವಿಕವೇ ಆಗಬೇಕೆಂಬುದು ಇಲ್ಲಿ ಹೇಳಿದ ಯುಕ್ತಿ

**ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚೇತ್ಯಾಹ ತಚ್ಛ್ರುತಿಃ ।**
**ಯನ್ಮೂಲಂ ಸಗುಣಂ ತೇ ಸ್ಯಾತ್ ಸ ಏವಾಸ್ಮಾಕಮೀಶ್ವರಃ ॥ ೬೬೨ ॥**

**ಅರ್ಥ–** ತತ್ = ಆದ್ದರಿಂದ, ಶ್ರುತಿಃ = ಶ್ರುತಿಯು, ಜ್ಞಾನಬಲಕ್ರಿಯಾ ಚ = ಪರಮಾತ್ಮನ ಜ್ಞಾನ, ಬಲ ಕ್ರಿಯಾದಿಗಳೆಲ್ಲವೂ, ಸ್ವಾಭಾವಿಕೀ = ಸ್ವಾಭಾವಿಕವಾಗಿವೆ. ಇತಿ = ಎಂದು, ಆಹ = ಹೇಳುತ್ತಿದೆ. ತೇ = ನಿನ್ನ, ಸಗುಣಂ = ಶಬಲ ಬ್ರಹ್ಮನು, ಯನ್ಮೂಲಂ = ಯಾವ ಅನಂತ ಸ್ವಾಭಾವಿಕ ಕಲ್ಯಾಣ ಗುಣಪೂರ್ಣನಾದ ವಸ್ತುವನ್ನು ಮೂಲವಾಗಿ ಹೊಂದಿದ್ದಾನೋ, ಸಃ ಏವ = ಅವನೇ, ಅಸ್ಮಾಕಂ = ನಮ್ಮ ಮತದಲ್ಲಿ, ಈಶ್ವರಃ = ಸರ್ವೇಶ್ವರನಾಗಿದ್ದಾನೆ.

**ಅನುವಾದ–** ಪರಮಾತ್ಮನಲ್ಲಿರುವ ಜ್ಞಾನ, ಶಕ್ತಿ, ಜಗತ್ಸ್ರಷ್ಟೃತ್ವಾದಿ ಕ್ರಿಯೆಗಳೆಲ್ಲವೂ ಸ್ವಾಭಾವಿಕವಾಗಿಯೇ ಆಗಿರುತ್ತವೆ. ಹೀಗೆ 'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಎಂಬ ಶ್ರುತಿಯು ಸಾರುತ್ತಿದೆ. ಇಂತಹ ಬ್ರಹ್ಮನನ್ನು ನೀನು ಶಬಲ ಬ್ರಹ್ಮನೆಂದು ಹೇಳುತ್ತಿರುವಿ. ಅವನಿಗೆ ಮೂಲನಾದ ಸ್ವಾಭಾವಿಕವಾದ ಅನಂತಗುಣಪೂರ್ಣ ಬ್ರಹ್ಮನೇ ನಮ್ಮ ಸಿದ್ಧಾಂತದಲ್ಲಿ ಸರ್ವೇಶ್ವರನಾಗಿದ್ದಾನೆ.

**ಭಾವವಿಲಾಸಿನೀ–** ತತ್ ತಸ್ಮಾದ್ಬಿಂಬಸ್ಯ ಸ್ವಾಭಾವಿಕಗುಣವತ್ತ್ವಾವಶ್ಯಂಭಾವಾತ್ । ನನು ಮೇ ಮತೇ ಸಗುಣಂ ವಿಷ್ಣ್ವಾದಿಕಮೇವ ಪ್ರತಿಬಿಂಬಂ ಚ । ಅತೋ ಭವದಭಿಮತವಿಷ್ಣೋಃ ಕಥಂ ಬಿಂಬತೇತ್ಯತ ಆಹ –**ಯನ್ಮೂಲಮಿತಿ** ॥ ತೇ ತವ ಸಗುಣಂ ಶಬಲಂ ಬ್ರಹ್ಮ ಯನ್ಮೂಲಂ ಯದನಂತ-ಸ್ವಾಭಾವಿಕಕಲ್ಯಾಣಗುಣಪೂರ್ಣಮ್, ಮೂಲಂ ಬಿಂಬಂ ಯಸ್ಯೇತಿ ವಿಗ್ರಹಃ । ಸ ಏವಾನಂತ-ಸ್ವಾಭಾವಿಕಕಲ್ಯಾಣಗುಣಪೂರ್ಣಬಿಂಬಭೂತ ಏವ । ನ ನಾಮ್ನಿ ವಿಪ್ರತಿಪತ್ತಿರಿತಿ ಭಾವಃ ॥೬೬೨॥

**ವಿವರಣೆ–** 'ತತ್' ಎಂಬ ಪದಕ್ಕೆ ಬಿಂಬದಲ್ಲಿ ಸ್ವಾಭಾವಿಕ ಗುಣಗಳನ್ನು ಅವಶ್ಯವಾಗಿ ಒಪ್ಪಬೇಕಾದ್ದರಿಂದ ಎಂದರ್ಥ.

ನಮ್ಮ ಮತದಲ್ಲಿ ಸಗುಣನಾದ ವಿಷ್ಣುವೇ ಪ್ರತಿಬಿಂಬನಾಗಿದ್ದಾನೆ. ಆದ್ದರಿಂದ ನಿಮಗೆ ಅಭಿಪ್ರೇತನಾದ ವಿಷ್ಣು ಹೇಗೆ ಬಿಂಬನಾಗುತ್ತಾನೆ? ಎಂದು ಅದ್ವೈತಿಗಳು ಪ್ರಶ್ನಿಸಿದರೆ ಉತ್ತರಿಸುತ್ತಿದ್ದಾರೆ.

ನಿಮ್ಮ ಅದ್ವೈತ ಮತದಲ್ಲಿ ಯಾವ ಸಗುಣನಾದ ಶಬಲಬ್ರಹ್ಮನಿದ್ದಾನೋ, ಅವನಿಗೆ ಮೂಲನಾಗಿ ಯಾವ ಬ್ರಹ್ಮನನ್ನು ಒಪ್ಪುತ್ತಿಯೋ ಅವನೇ ಅನಂತವಾದ, ಸ್ವಾಭಾವಿಕವಾದ, ಕಲ್ಯಾಣಗುಣಗಳಿಂದ ಪರಿಪೂರ್ಣನಾದ ಸರ್ವೇಶ್ವರನಾಗಿದ್ದಾನೆಂದು ನಾವು ಹೇಳುತ್ತೇವೆ. ಆದ್ದರಿಂದ, ಕೇವಲ ಹೆಸರಿನಲ್ಲಿ ವಿವಾದ ಹೊರತು ವಿಷಯದಲ್ಲಿ ಏನೂ ವಿವಾದವಿರುವುದಿಲ್ಲ.

**ಅತಸ್ಸಗುಣಮೇವಾರ್ಥ್ಯಂ ತ್ವಯಾಪಿ ಚ ಮಯಾಪಿ ಚ ।**
**ನಿರ್ಗುಣಾಶಾಂ ತ್ಯಜ ಭಜ ಶ್ರೀಶಂ ಮೇ ಸಗುಣಂ ಪ್ರಭುಮ್ ॥ ೬೬೩ ॥**

**ಅರ್ಥ–** ಅತಃ = ಆದ್ದರಿಂದ, ಮಯಾ ಅಪಿ = ನನ್ನಿಂದಲೂ, ತ್ವಯಾಪಿ = ನಿನ್ನಿಂದಲೂ, ಸಗುಣಂ ಏವ = ಗುಣಪರಿಪೂರ್ಣನಾದ ಬ್ರಹ್ಮನೇ, ಅರ್ಥ್ಯಮ್ = ಪ್ರಾರ್ಥಿಸಲು ಯೋಗ್ಯನಾಗಿದ್ದಾನೆ. ಹಾಗಾಗಿ, ನಿರ್ಗುಣಾಶಾಂ = ನಿರ್ಗುಣನೆಂಬ ಆಸೆಯನ್ನು ತ್ಯಜ = ಬಿಡು. ಮೇ = ನನ್ನ ಸಗುಣಂ = ಗುಣಪರಿಪೂರ್ಣನಾದ, ಪ್ರಭುಂ = ಸ್ವಾಮಿಯಾದ, ಶ್ರೀಶಂ = ಲಕ್ಷ್ಮೀಪತಿಯನ್ನು ಭಜ = ಆರಾಧಿಸು.

**ಅನುವಾದ–** ಆದ್ದರಿಂದ ಪ್ರತಿಬಿಂಬರಾದ ಜೀವರಿಗೆಲ್ಲ ಬಿಂಬನಾಗಿರುವವನು ಮತ್ತು ಸ್ವಾಭಾವಿಕ ಗುಣಗಳಿಂದ ಪರಿಪೂರ್ಣನಾಗಿರುವವನು ಸಗುಣಬ್ರಹ್ಮನೇ ಆಗಿದ್ದಾನೆ. ಇಂತಹ ಗುಣಪರಿಪೂರ್ಣನಾದ ಸಗುಣ ಬ್ರಹ್ಮನನ್ನು ನಾನು ಹಾಗೂ ನೀನು ಇಬ್ಬರೂ ಸೇರಿ ಪ್ರಾರ್ಥಿಸೋಣ. ನಿರ್ಗುಣ ಬ್ರಹ್ಮನ ಆಸೆಯನ್ನು ಬಿಟ್ಟು, ನಮ್ಮ ಮತದ ಸಿದ್ಧಾಂತದಂತೆ, ನಿರ್ಣೀತನಾದ ಅನಂತ ಗುಣರಾಶಿಗಳಿಂದ ಕೂಡಿರುವ ಜಗದೊಡೆಯನಾದ ಲಕ್ಷ್ಮೀಪತಿಯನ್ನೇ ಆರಾಧನೆ ಮಾಡು.

**ಭಾವವಿಲಾಸಿನೀ–** ಉಪಸಂಹರತಿ – ಅತ ಇತಿ ॥ ಅತಃ ಬಿಂಬಸ್ಯ ಸ್ವಾಭಾವಿಕಗುಣವತ್ತ್ವಾವಶ್ಯಂಭಾವಾತ್ ॥ ೬೬೩ ॥

**ವಿವರಣೆ–** ಇಲ್ಲಿಯ ತನಕ ಸಮರ್ಥಿಸಿದ ವಿಷಯವನ್ನು ಉಪಸಂಹಾರ ಮಾಡುತ್ತಿದ್ದಾರೆ – ಬಿಂಬನೇ ಸ್ವಾಭಾವಿಕ ಗುಣವುಳ್ಳವನಾಗಿದ್ದಾನೆಂದು ಅವಶ್ಯವಾಗಿ ನೀನೂ ಒಪ್ಪಬೇಕು ನಾನೂ ಒಪ್ಪಬೇಕು.

ನಿರ್ಗುಣ ಬ್ರಹ್ಮನ ಆಸೆಯನ್ನು ತೊರೆದು, ಗುಣಪರಿಪೂರ್ಣನಾದ ಬಿಂಬನಾದ ಪರಮಾತ್ಮನನ್ನು ಆರಾಧನೆ ಮಾಡು.

**ವಚಸಾಂ ಗೌರವಾಯೈವ ಸಗುಣದ್ವಯಕಲ್ಪನಮ್ ।**
**ನ ಚೇತ್ ಸ್ಯಾತ್ ಸಿದ್ಧಸಗುಣಭಜನೇ ಗೌರವಂ ತವ ॥ ೬೬೪ ॥**

**ಅರ್ಥ–** ಸಗುಣದ್ವಯಕಲ್ಪನಂ = ಇಬ್ಬರು ಸಗುಣ ಬ್ರಹ್ಮರನ್ನು ಕಲ್ಪನೆ ಮಾಡುವುದು, ವಚಸಾಂ = ಶಾಸ್ತ್ರಗಳ, ಗೌರವಾಯ ಏವ = ಗೌರವ ದೋಷಕ್ಕೋಸ್ಕರ ಮಾತ್ರ. ನ ಚೇತ್ = ಎಲ್ಲರಿಗೂ ಬಿಂಬನಾದ ಸಗುಣನಾದ ಬ್ರಹ್ಮನನ್ನೇ ನಾರಾಯಣ ಎಂದು ಒಪ್ಪದಿದ್ದರೆ, ಸಿದ್ಧಸಗುಣಭಜನೇ = ಸಿದ್ಧನಾದ ಸಗುಣಬ್ರಹ್ಮನನ್ನು ಆರಾಧನೆ ಮಾಡಿದರೆ, ತವ = ನಿನಗೆ, ಗೌರವಮ್ = ಗೌರವವು ದೊರೆಯುತ್ತದೆ.

**ಅನುವಾದ–** ಎಲ್ಲರಿಗೂ ಬಿಂಬಸ್ಥಾನದಲ್ಲಿರುವ ಸಗುಣಬ್ರಹ್ಮನನ್ನು ಗುಣಪರಿ- ಪೂರ್ಣನೆಂದು ಅವಶ್ಯವಾಗಿ ಒಪ್ಪಲೇಬೇಕು. ಒಂದು ವೇಳೆ ಬಿಂಬನೆಂದು ಒಪ್ಪಿ ಜಗತ್ಸೃಷ್ಟ್ಯಾದಿಗಳಿಗೆ ಕಾರಣಕರ್ತನಾದ ಮತ್ತೊಬ್ಬ ಪರಬ್ರಹ್ಮನನ್ನು ಕಲ್ಪನೆ

ಮಾಡಿದರೆ ನಿನಗೆ ಗೌರವ ದೋಷ ಬರುತ್ತದೆ. ನೀನು ಅಂತಹ ಬ್ರಹ್ಮನನ್ನು ಕಲ್ಪನೆ ಮಾಡುವುದರಿಂದ ಏನೂ ಉಪಯೋಗವಿಲ್ಲ. ಕೇವಲ ಗೌರವ ದೋಷವನ್ನು ತಂದುಕೊಂಡಂತಾಯಿತಷ್ಟೆ ಒಂದು ವೇಳೆ ಪರಬ್ರಹ್ಮನನ್ನೇ ಜಗತ್‌ಸೃಷ್ಟ್ಯಾದಿ-ಕಾರಣನೆಂದು, ಎಲ್ಲರಿಗೂ ಮೂಲರೂಪನಾದವನೆಂದು ಒಪ್ಪಿ ಅಂತಹ ಪರಮಾತ್ಮನನ್ನು ಭಜನೆ ಮಾಡಿದರೆ ನಿನಗೆ ಜಗತ್ತಿನಲ್ಲಿ ಒಳ್ಳೆಯ ಗೌರವ ಸಲ್ಲುತ್ತದೆ.

**ಭಾವವಿಲಾಸಿನೀ–** ನ ಚೇನ್ಮೂಲೀಭೂತಗುಣಬೃಂಹಿತಬಿಂಬಸ್ಯೈವ ನಾರಾಯಣತ್ವಾನಂಗೀಕಾರೇ ಯತ್ ಸಗುಣದ್ವಯಕಲ್ಪನಮ್, ತದ್ ವಚಸೋ ಗೌರವಾಯೈ ಅಪಾಂಡಿತ್ಯಾಪಾದಕ-ವಚೋಬಾಹುಲ್ಯಾಯೈವ । ದೋಷಮಜಾನತೋ ಬಹುಶಾಸ್ತ್ರರಚನಂ ವ್ಯರ್ಥಮಿತಿ ಭಾವಃ । ಸಿದ್ಧಸಗುಣಭಜನೇ ಆವಶ್ಯಕೈಕಸಗುಣಸ್ಯ ಭಜನೇ ತವೈವ ಗೌರವಂ ಸ್ಯಾತ್ । ತ್ವಮೇವ ಲೋಕಸ್ಯ ಗುರುಃ ಸ್ಯಾ ಇತಿ ಭಾವಃ ॥ ೬೬೪ ॥

**ವಿವರಣೆ–** ಎಲ್ಲರಿಗೂ ಮೂಲನಾದ ಪರಿಪೂರ್ಣನಾದ ಬಿಂಬನನ್ನು ನಾರಾಯಣನೆಂದು ಅಂಗೀಕಾರ ಮಾಡದಿದ್ದರೆ ಇಬ್ಬರು ಬ್ರಹ್ಮರನ್ನು ಒಪ್ಪಿದಂತಾಗುತ್ತದೆ. ಹೀಗೆ ಒಪ್ಪುವುದು ಕೇವಲ ಮಾತುಗಳಲ್ಲಿ ಗೌರವ ದೋಷಗಳನ್ನು ತಂದೊಡ್ಡುತ್ತದೆ. ಒಂದು ವೇಳೆ ಸಿದ್ಧನಾದ ಸಗುಣ ಬ್ರಹ್ಮನನ್ನು ಭಜನೆ ಮಾಡಿದರೆ ನಿನಗೆ ಲೋಕದಲ್ಲಿ ಒಳ್ಳೆಯ ಗೌರವ ಸಿಗುತ್ತದೆ. ನೀನು ಲೋಕದೊಳಗೆ ಗುರುವೂ ಕೂಡ ಆಗುತ್ತಿ

**ಅಸ್ತು ಮಾಯಾವಿನಾ ಮಾಯಾದರ್ಶಿತಂ ವಸ್ತು ಮಾಯಿಕಮ್ ।**
**ಮಾಯಾವಿದೇಹೇಂದ್ರಿಯೇಚ್ಛಾಪ್ರಯತ್ನಾದಿತ್ವಮಾಯಿಕಮ್ ॥ ೬೬೫ ॥**

**ಅರ್ಥ–** ಮಾಯಾವಿನಾ = ಐಂದ್ರಜಾಲಿಕನಿಂದ, ಮಾಯಾದರ್ಶಿತಂ = ಮಾಯೆಯಿಂದ ತೋರಿಸಲ್ಪಟ್ಟ ವಸ್ತುಗಳು, ಮಾಯಿಕಂ = ಮಾಯಾಕಲ್ಪಿತವೆಂಬುದು, ಅಸ್ತು = ಆಗಲಿ. ಮಾಯಾವಿದೇಹೇಂದ್ರಿಯೇಚ್ಛಾಪ್ರಯತ್ನಾದಿತು = ಮಾಯಾವಿ ಪುರುಷನ ದೇಹ, ಇಂದ್ರಿಯ, ಇಚ್ಛೆ ಪ್ರಯತ್ನಾದಿಗಳಾದರೂ, ಅಮಾಯಿಕಮ್ = ಮಾಯಾಕಲ್ಪಿತಗಳಾಗಲು ಸಾಧ್ಯವಿಲ್ಲವಷ್ಟೆ

**ಅನುವಾದ–** ಐಂದ್ರಜಾಲಿಕನು ಮಾಯೆಯಿಂದ ಸೃಷ್ಟಿಸುವ ವಸ್ತುಗಳು ಮಾಯಾ-ಮಯಗಳಾಗಿರಲಿ. ಆದರೆ ಆತನ ದೇಹ ಇಂದ್ರಿಯ ಇಚ್ಛಾಪ್ರಯತ್ನಾದಿಗಳು ಮಾಯಾಮಯಗಳಾಗಿರಲು ಸಾಧ್ಯವಿಲ್ಲ. ಏಕೆಂದರೆ ಆತನು ತನ್ನ ದೇಹೇಂದ್ರಿಯಾದಿಗಳನ್ನು ತನ್ನ ಮಾಯೆಯಿಂದ ಸೃಷ್ಟಿಸಿಲ್ಲ.

**ಭಾವವಿಲಾಸಿನೀ–** ಬಿಂಬಸ್ಯೈವೋಪಾಧಿತ್ವಮಂಗೀಕೃತ್ಯ ವಿಷ್ಣೋಸ್ಸ್ವಾಭಾವಿಕಗುಣತಾ ಸಮರ್ಥಿತಾ। ಅಧುನಾ ಭವತು ಮಾಯೈವೋಪಾಧಿಃ, ತಥಾಪಿ ದೃಷ್ಟಬಲಾದ್ ವಿಷ್ಣೋ-

ಗುಣಾದಿಕಮಮಾಯಿಕಂ ಸ್ಯಾದೇವೇತ್ಯಾಹ–ಅಸ್ತ್ವಿತಿ ॥ ಮಾಯಾವಿನಾ ದರ್ಶಿತಂ ಗಜತುರಗಾದಿವಸ್ತು ಮಾಯಿಕಮಸ್ತ್ವಿತಿ ಸಂಬಂಧಃ । ಅಮಾಯಿಕಂ ಲೋಕೇ ದೃಷ್ಟಮಿತಿ ಶೇಷಃ ॥ ೬೬೫ ॥

**ವಿವರಣೆ–** ಇದುವರೆಗೆ ಬಿಂಬವೇ ಉಪಾಧಿಯಾಗಿರುವುದೆಂದು ಅಂಗೀಕರಿಸಿ, ಬಿಂಬಗಳಲ್ಲಿರುವ ಧರ್ಮಗಳೆಲ್ಲವೂ ಸ್ವಾಭಾವಿಕವಾಗಿರುತ್ತವೆಂದು ಸಮರ್ಥಿಸಲಾಯಿತು. ಪ್ರಕೃತ, ಮಾಯೆಯನ್ನು ಉಪಾಧಿಯೆಂದು ಒಪ್ಪಿದರೂ, ಲೌಕಿಕ ದೃಷ್ಟಾಂತದಂತೆ ಪರಮಾತ್ಮನಲ್ಲಿರುವ ಗುಣಗಳು ಸ್ವಾಭಾವಿಕವಾಗಿರುತ್ತವೆಂದು ನಿರೂಪಣೆ ಮಾಡುತ್ತಿದ್ದಾರೆ.

**ಏವಂ ಚಾಮಾಯಿಕಮಭೂದ್ಧರೇರ್ದೇಹೇಂದ್ರಿಯಾದಿಕಮ್ ।**
**ಶಕ್ತಿಸೌಂದರ್ಯಧೈರ್ಯಾದಿಭಾರ್ಯಾಭವನಪೂರ್ವಕಮ್ ॥ ೬೬೬ ॥**

**ಅರ್ಥ–** ಏವಂ ಚ = ಆದ್ದರಿಂದ, ಹರೇಃ = ಶ್ರೀಹರಿಯ, ದೇಹೇಂದ್ರಿಯಾದಿಕಂ = ದೇಹ, ಇಂದ್ರಿಯಗಳು, ಚ = ಮತ್ತು, ಶಕ್ತಿಸೌಂದರ್ಯಧೈರ್ಯಾದಿ= ಪರಮಾತ್ಮನ ಸಾಮರ್ಥ್ಯ, ಸೌಂದರ್ಯ, ಧೈರ್ಯ ಮೊದಲಾದ ಗುಣಗಳು, ಭಾರ್ಯಾಭವನಪೂರ್ವಕಮ್= ಹೆಂಡತಿಯಾದ ಲಕ್ಷ್ಮೀದೇವಿ, ವೈಕುಂಠಾದಿ ಲೋಕಗಳು ಇವೆಲ್ಲವೂ, ಅಮಾಯಿಕಂ = ಸತ್ಯ ವಸ್ತುಗಳೆಂದು, ಅಭೂತ್ = ಸಿದ್ಧವಾಯಿತು.

**ಅನುವಾದ–** ಐಂದ್ರಜಾಲಿಕನ ದೇಹೇಂದ್ರಿಯಾದಿಗಳು ಸತ್ಯವಾದಂತೆ ಪರಮಾತ್ಮನ ಸಾಮರ್ಥ್ಯ, ಸೌಂದರ್ಯ, ಧೈರ್ಯ ಮೊದಲಾದವುಗಳೂ ಕೂಡ ಸತ್ಯವೆಂದು ಸಿದ್ಧವಾದವು. ಅಷ್ಟೇ ಅಲ್ಲದೆ, ಐಂದ್ರಜಾಲಿಕನು ನಿಂತಿರುವ ಸ್ಥಳ, ಅವನ ಹೆಂಡತಿ ಮೊದಲಾದವುಗಳು ಸತ್ಯವಾಗಿರುವಂತೆ, ಪರಮಾತ್ಮನ ಹೆಂಡತಿಯಾದ ಲಕ್ಷ್ಮೀದೇವಿ ಅವನ ವಾಸಸ್ಥಾನ ವೈಕುಂಠಾದಿ ಲೋಕಗಳು ವಾಹನ ಎಲ್ಲವೂ ಸತ್ಯವೆಂದು ಸಿದ್ಧವಾದವು.

**ಭಾವವಿಲಾಸಿನೀ–** ಏವಂ ದೃಷ್ಟಲೌಕಿಕಮಾಯಾನುಸಾರೇಣ । ಭಾರ್ಯಾ ಮಹಾಲಕ್ಷ್ಮೀಃ। ಭವನಂ ವೈಕುಂಠಾದಿ । ಪೂರ್ವಪದೇನ ವಾಹನಾದಿಕಂ ಗೃಹ್ಯತೇ ॥ ೬೬೬ ॥

**ಗುಣಿನಾಂ ಹಿ ಗುಣಸ್ತುತ್ಯಾ ಸ್ವಸ್ಯಾಪಿ ಸ್ಯಾನ್ಮಹಾಫಲಮ್ ।**
**ಯನ್ಮಮಾವಸಿತಂ ಭಾರಸ್ಯಾರ್ಧಂ ಗುಣನಿರೂಪಣೇ ॥ ೬೬೭ ॥**

**ಅರ್ಥ–** ಗುಣಿನಾಂ = ಗುಣವುಳ್ಳವರ, ಗುಣಸ್ತುತ್ಯಾ = ಗುಣವನ್ನು ಸ್ತೋತ್ರ ಮಾಡುವುದರಿಂದ, ಸ್ವಸ್ಯ ಅಪಿ = ತನಗೂ, ಮಹಾಫಲಂ = ಅನೇಕ ಗುಣಗಳನ್ನು ಹೊಂದುವಿಕೆಯ ಮಹಾಫಲವು, ಸ್ಯಾತ್ = ಉಂಟಾಗುತ್ತದೆ. ಯತ್= ಏಕೆಂದರೆ, ಗುಣನಿರೂಪಣೇ = ಭಗವದ್‌ಗುಣಗಳ ವರ್ಣನೆಯಲ್ಲಿ, ಭಾರಸ್ಯಾರ್ಧಂ = ಅರ್ಧ ಭಾಗದ ಭಾರವು, ಮಮ = ನನಗೆ, ಅವಸಿತಮ್ = ಉಳಿಯಿತು.

**ಅನುವಾದ–** ಮಹಾಗುಣವಂತನಾದ ಭಗವಂತನಲ್ಲಿರುವ ಗುಣಗಳನ್ನು ಸ್ತೋತ್ರ ಮಾಡಿದರೆ ತನ್ನಲ್ಲಿಯೂ ಅನೇಕ ಗುಣಗಳು ಬಂದು ಮಹಾಫಲವೇ ಲಭಿಸುತ್ತದೆ. ಹೀಗೆ ಭಗವಂತನ ಗುಣಗಳ ಸತ್ಯತ್ವವನ್ನು ಸಮರ್ಥನೆ ಮಾಡಿದ್ದರಿಂದ, ವಿಶ್ವಸೌರಭದಲ್ಲಿ ಸಮರ್ಥನೆ ಮಾಡಬೇಕಾದ ಅರ್ಥ ವಿಷಯದ ಭಾರವು ನನಗೆ ಉಳಿಯಿತು.

**ಭಾವವಿಲಾಸಿನೀ–** ಗುಣಸೌರಭೇ ವಿಶ್ವಸೌರಭಸರ್ವಸ್ವಪ್ರಮೇಯಂ ಕಿಮಿತಿ ಚರ್ಚಿತಮ್? ಇತ್ಯಾಶಂಕ್ಯ ಪ್ರಸಂಗಸಂಗತ್ಯೇತಿ ಹೃದಯಂ ಸಾಹಿತ್ಯಮುದ್ರಯಾ ರಂಜಯತಿ – **ಗುಣೆನಾಮಿತಿ** ॥ ಮಮ ವಿಶ್ವಸತ್ಯತ್ವವಾದಿನೋ ಮಮ ಭಾರಸ್ಯ ವಿಶ್ವಸತ್ಯತ್ವಸಾಧನಪ್ರಯತ್ನರೂಪಸ್ಯ ಅರ್ಧಂ ವಿಶ್ವಾಂತಃಪಾತಿಭಗವದ್ದೇಹೇಂದ್ರಿಯಾದಿಸತ್ಯತ್ವಸಾಧನಪ್ರಯತ್ನರೂಪಂ ಅವಸಿತಂ ಪರ್ಯಾಪ್ತಮ್ ॥ ೬೬೭ ॥

**ವಿವರಣೆ–** ಗುಣಸೌರಭದಲ್ಲಿ ವಿಶ್ವಸೌರಭದ ಪ್ರಮೇಯವನ್ನು ಏಕೆ ವಿವರಿಸುತ್ತಿದ್ದೀರಿ? ಎಂಬ ಪ್ರಶ್ನೆಗೆ ಪ್ರಸಂಗಸಂಗತಿಯಿಂದ ನಿರೂಪಣೆ ಮಾಡಬೇಕಾಯಿತೆಂದು ಹೇಳುತ್ತಿದ್ದಾರೆ-

ವಿಶ್ವಸೌರಭದಲ್ಲಿ ಜಗತ್ಸತ್ಯತ್ವಾದಿ ಪ್ರಮೇಯಗಳನ್ನು ನಿರೂಪಣೆ ಮಾಡಲಾಗಿದೆ. ಪ್ರಕೃತ ಜಗತ್ತಿನಲ್ಲಿ ಸೇರುವ ವೈಕುಂಠಾದಿ ಲೋಕಗಳಿಗೆ, ಲಕ್ಷ್ಮೀ ಮೊದಲಾದವರಿಗೆ ಸತ್ಯತ್ವವನ್ನು ಸಮರ್ಥನೆ ಮಾಡಿದ್ದರಿಂದ ವಿಶ್ವಸೌರಭದ ಜಗತ್ಸತ್ವ ಪ್ರಮೇಯದ ಅರ್ಥವನ್ನು ಇಲ್ಲಿಯೇ ಸಮರ್ಥನೆ ಮಾಡಿದಂತಾಯಿತು. ಜಗತ್‌ಸತ್ಯತ್ವ, ಪರಮಾತ್ಮನ ವೈಕುಂಠಾದಿ ಲೋಕ, ರಮಾಬ್ರಹ್ಮಾದಿ ಪರಿವಾರ, ಜಗತ್‌ಸೃಷ್ಟ್ಯಾದಿ ಕಾರಣವಾದ ಮಹಾಸಾಮರ್ಥ್ಯ, ಜ್ಞಾನ, ಇಚ್ಛೆ, ಮೊದಲಾದ ಪದಾರ್ಥಗಳ ಸತ್ಯತ್ವವೂ ಸಹ ಸಿದ್ಧವಾಯಿತು.

**ವಿಶ್ವಾಂತಃಪಾತಿನೋ ಹ್ಯುಕ್ತಸ್ಯಾಸ್ಯ ಯತ್ಸತ್ಯತಾಽಪ್ಯಭೂತ್ ।**
**ಲೋಕದೃಷ್ಟ್ಯೈವ ನ ಪುನಃ ಶ್ರುತಿಸ್ಮೃತಿವಿಚಾರಣಾತ್ ॥ ೬೬೮ ॥**

**ಅರ್ಥ–** ಯತ್ = ಯಾವ ಕಾರಣದಿಂದ, ವಿಶ್ವಾಂತಃಪಾತಿನಃ = ವಿಶ್ವದಲ್ಲಿ ಸೇರಿರುವ, ಉಕ್ತಸ್ಯ = ಹೇಳಲ್ಪಟ್ಟ ಅಸ್ಯ = ರಮಾದಿಗಳ, ಸತ್ಯತಾ ಅಪಿ = ಸತ್ಯತ್ವವೂ ಸಹ, ಲೋಕದೃಷ್ಟ್ಯಾ ಏವ = ಲೌಕಿಕದೃಷ್ಟಾಂತದಿಂದಲೇ, ಅಭೂತ್ = ಸಿದ್ಧವಾಯಿತೋ, ಪುನಃ = ಮತ್ತು, ಶ್ರುತಿಸ್ಮೃತಿವಿಚಾರಣಾತ್ = ಶ್ರುತಿಸ್ಮೃತಿಗಳ ವಿಚಾರದಿಂದ, ನ= ಸಿದ್ಧವಾಗಲಿಲ್ಲವೋ. (ಆ ಕಾರಣದಿಂದ ಅರ್ಧಭಾರ ಕಳೆಯಿತು)

**ಅನುವಾದ–** ವಿಶ್ವದಲ್ಲಿ ಸೇರಿರುವ ರಮಾವೈಕುಂಠಾದಿಗಳ ಸತ್ಯತ್ವವೂ ಕೂಡ ಇದರಿಂದಲೇ ಸಿದ್ಧವಾಯಿತು. ಲೌಕಿಕದೃಷ್ಟಾಂತಗಳನ್ನು ಹೇಳುವ ಮೂಲಕವೇ

ಜಗತ್ತಿನ ಸತ್ಯತ್ವವು ಸಿದ್ಧವಾದ ಮೇಲೆ ಪುನಃ ಈ ವಿಷಯದಲ್ಲಿ ಶ್ರುತಿಸ್ಮೃತಿಗಳನ್ನು ಆಧಾರವನ್ನಾಗಿ ನೀಡಿ, ಪ್ರತ್ಯೇಕವಾಗಿ ವಿಶ್ವಸೌರಭದಲ್ಲಿ ಸಮರ್ಥನೆ ಮಾಡಬೇಕಾಗಿಲ್ಲ.

**ಭಾವವಿಲಾಸಿನೀ–** ಕಥಮಿತ್ಯತ ಆಹ – ವಿಶ್ವೇತಿ ॥ ೬೬೮ ॥

**ನಿತ್ಯಜ್ಞಾನಬಲೈಶ್ವರ್ಯಭೋಗೋಪಕರಣಾಚ್ಯುತ ।**
**ಇತಿ ತುಷ್ಟಾವ ತತ್‌ಸ್ರಷ್ಟಾ ಪಂಚರಾತ್ರೇ ನಿಜಂ ಪ್ರಭುಮ್ ॥ ೬೬೯ ॥**

**ಅರ್ಥ–** ತತ್= ಮಾಯಾವಿಯ ದೇಹೇಂದ್ರಿಯಾದಿಗಳನ್ನು ಮಾಯಾಮಯ-ವಲ್ಲವೆಂದು ಎಲ್ಲರೂ ಒಪ್ಪಬೇಕಾದ್ದರಿಂದ, ಸ್ರಷ್ಟಾ = ಜಗತ್ತನ್ನು ಸೃಷ್ಟಿಮಾಡಿದ ಚತುರ್ಮುಖನು, ನಿತ್ಯಜ್ಞಾನಬಲೈಶ್ವರ್ಯಭೋಗೋಪಕರಣಾಚ್ಯುತ = ನಿತ್ಯಜ್ಞಾನ, ಬಲ, ಐಶ್ವರ್ಯ, ಭೋಗಸಾಮಗ್ರಿಗಳಿಂದ ಕೂಡಿರುವ ಎಲೈ ವಿಷ್ಣುವೇ, ಇತಿ = ಎಂದು, ಪಂಚರಾತ್ರೇ = ಪಂಚರಾತ್ರಾಗಮದಲ್ಲಿ, ನಿಜಂ = ತನ್ನ, ಪ್ರಭುಮ್ = ಸ್ವಾಮಿಯಾದ ಶ್ರೀಹರಿಯನ್ನು, ತುಷ್ಟಾವ = ಸ್ತುತಿಸಿದ್ದಾನೆ.

**ಅನುವಾದ–** ಚತುರ್ಮುಖಬ್ರಹ್ಮದೇವರು ಪಂಚರಾತ್ರಾಗಮದಲ್ಲಿ ತನ್ನ ಸ್ವಾಮಿಯಾಗಿರುವ ಪರಮಾತ್ಮನನ್ನು ಹೀಗೆ ಹೊಗಳಿದ್ದಾರೆ. ಅಚ್ಯುತನೇ ನೀನು ನಿತ್ಯವಾದ ಜ್ಞಾನ, ಬಲ, ಐಶ್ವರ್ಯ, ಉಪಭೋಗ ಸಾಧನಾದಿಗಳಿಂದ ಕೂಡಿರುವವನು ಎಂದು.

**ಭಾವವಿಲಾಸಿನೀ–** ಉಕ್ತಯುಕ್ತ್ಯುಪೋದ್ಬಲಕಸ್ಮೃತಿಂ ಚಾಹ – ನಿತ್ಯೇತಿ ॥ ತತ್ತಸ್ಮಾನ್ಮಾಯಾ-ವಿದೇಹಾದೇರಮಾಯಿಕತ್ವಸ್ಯ ಸರ್ವೈರಂಗೀಕಾರ್ಯತ್ವಾತ್ । ಸ್ರಷ್ಟಾ ಬ್ರಹ್ಮಾ ॥ ೬೬೯ ॥

**ವಿವರಣೆ–** ಹಿಂದೆ ಹೇಳಿದ ಉಕ್ತಿಗೆ ಸಮರ್ಥವಾಗಿ ನಿತ್ಯಜ್ಞಾನಬಲೈಶ್ವರ್ಯ ಭೋಗೋಪಕರಣಾಚ್ಯುತ ಎಂಬ ಪಂಚರಾತ್ರಸ್ಮೃತಿಯನ್ನು ಉಲ್ಲೇಖಿಸಿದ್ದಾರೆ. ಯಾವ ಕಾರಣದಿಂದ ಐಂದ್ರಜಾಲಿಕನ ದೇಹ, ಇಂದ್ರಿಯ ಮೊದಲಾದವುಗಳು ಮಾಯಾ-ಕಲ್ಪಿತಗಳಲ್ಲವೆಂದು ಎಲ್ಲರೂ ಅಂಗೀಕರಿಸಿದ್ದಾರೋ, ಅದೇ ಕಾರಣದಿಂದ ಭಗವಂತನ ಜ್ಞಾನ, ಬಲ ಮೊದಲಾದವುಗಳೂ ಕೂಡ ಮಾಯಾಕಲ್ಪಿತಗಳಲ್ಲವೆಂದು ಚತುರ್ಮುಖ-ಬ್ರಹ್ಮದೇವರು ಸ್ತುತಿಸಿದ್ದಾರೆ. ಆದ್ದರಿಂದ ಭಗವದ್ಗುಣಗಳಿಗೆ ಸತ್ಯತ್ವವು ಸಿದ್ಧವಾಗುತ್ತದೆ.

**ನ ಯತ್ರ ಮಾಯಾ ತತ್ರಾಪಿ ಮಹಿಮಾ ಸ್ಮರ್ಯತೇಽಸ್ಯ ತತ್ ।**
**ಉಲ್ಲಂಘ್ಯಲೋಕಮರ್ಯಾದಾಂ ಧರ್ಮತ್ಯಾಗಃ ಕಥಂ ಪ್ರಭೌ ॥ ೬೭೦ ॥**

**ಅರ್ಥ–** ಯತ್ರ = ಎಲ್ಲಿ, ಮಾಯಾ = ಮಾಯೆಯು, ನ = ಇರುವುದಿಲ್ಲವೋ, ತತ್ರ ಅಪಿ = ಅಲ್ಲಿಯೂ ಸಹ, ಅಸ್ಯ = ಶ್ರೀಹರಿಯ, ಮಹಿಮಾ = ಮಹಿಮೆಯು, ಸ್ಮರ್ಯತೇ=

ಸ್ಮೃತಿಪ್ರತಿಪಾದ್ಯವಾಗಿದೆ, ತತ್ = ಆ ಕಾರಣದಿಂದ, ಲೋಕಮರ್ಯಾದಾಂ = ಲೋಕನೀತಿಯನ್ನು, ಉಲ್ಲಂಘ್ಯ = ಅತಿಕ್ರಮಿಸಿ, ಪ್ರಭೌ = ಶ್ರೀಹರಿಯಲ್ಲಿ, ಧರ್ಮತ್ಯಾಗಃ = ಧರ್ಮ ಪರಿತ್ಯಾಗವು, ಕಥಂ = ಹೇಗೆ ಸಾಧ್ಯ ?

**ಅನುವಾದ–** ಯಾವ ವೈಕುಂಠ ಮೊದಲಾದ ಲೋಕಗಳಲ್ಲಿ ಮಾಯೆ, ಅಜ್ಞಾನ, ಮೊದಲಾದವುಗಳಿಗೆ ಅವಕಾಶವೇ ಇಲ್ಲವೋ, ಅಂತಹ ಲೋಕಗಳಲ್ಲಿಯೂ ಪರಮಾತ್ಮನ ಮಹಾಮಹಿಮೆಯನ್ನು 'ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ' ಎಂಬಲ್ಲಿ ಪ್ರತಿಪಾದನೆ ಮಾಡಲಾಗಿದೆ. ಹೀಗಿರುವಾಗ ಲೋಕಮರ್ಯಾದೆಯನ್ನು ಮೀರಿ ಹರಿಯ ಧರ್ಮತ್ಯಾಗವನ್ನು ಮಾಡುವುದು ಹೇಗೆ?

**ಭಾವವಿಲಾಸಿನೀ–** ತತ್ತಸ್ಮಾತ್ಪೂರ್ವೋಕ್ತಹೇತೋರೇವ । ಯತ್ರ ಯಸ್ಮಿನ್ ವೈಕುಂಠಾದಿಲೋಕೇ ಮಾಯಾ ನ ತತ್ರಾಪಿ ಅಸ್ಯ ವಿಷ್ಣೋರ್ಮಹಿಮಾ ನಗರೈಶ್ವರ್ಯಾದಿಕಃ ಸ್ಮರ್ಯತೇ 'ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ' ಇತಿ ಸ್ಮೃತ್ಯಾ ಪ್ರತಿಪಾದ್ಯತೇ ॥ ೬೭೦ ॥

**ವಿವರಣೆ–** ಯಾವ ಕಾರಣದಿಂದ ಮಾಯೆ ಇಲ್ಲದ ವೈಕುಂಠಾದಿಗಳಲ್ಲಿಯೂ ಶ್ರೀಹರಿಯ ಮಹಿಮೆ ಹೇಳಲ್ಪಟ್ಟಿದೆಯೋ, ಆ ಕಾರಣದಿಂದಲೇ ವೈಕುಂಠಾದಿಲೋಕದಲ್ಲಿ ವಿಷ್ಣುವಿನ ಮಹಿಮೆಗಳು ಮತ್ತು ವೈಕುಂಠಾದಿ ಲೋಕಗಳು, ಐಶ್ವರ್ಯ ಮೊದಲಾದವುಗಳು ಸತ್ಯವಾಗಿವೆ. ಸ್ಮೃತಿವಾಕ್ಯವು ಹೀಗಿದೆ - 'ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ' ಎಂದು.

ಅತಃ ಸ್ವಾಭಾವಿಕಂ ಸರ್ವಂ ಜ್ಞಾನೈಶ್ವರ್ಯಾದಿಕಂ ಹರೇಃ ।
ಕಥಂ ತಸ್ಯ ನಿವೃತ್ತಿಃ ಸ್ಯಾಚ್ಚೈತನ್ಯಸ್ಯಾನಿವರ್ತನೇ ॥ ೬೭೧ ॥

**ಅರ್ಥ–** ಅತಃ = ಈ ಎಲ್ಲಾ ಕಾರಣಗಳಿಂದ, ಹರೇಃ = ಶ್ರೀಹರಿಯ, ಸರ್ವಂ = ಎಲ್ಲ, ಜ್ಞಾನೈಶ್ವರ್ಯಾದಿಕಂ = ಜ್ಞಾನ, ಐಶ್ವರ್ಯಾದಿ ಧರ್ಮಗಳು, ಸ್ವಾಭಾವಿಕಂ = ಸ್ವಾಭಾವಿಕವೇ ಆಗಿವೆ, ತಸ್ಯ = ಅದರ, ನಿವೃತ್ತಿಃ = ಬಿಡುಗಡೆಯು, ಚೈತನ್ಯಸ್ಯ = ಚೈತನ್ಯದ, ಅನಿವರ್ತನೇ = ನಿವೃತ್ತಿಯಾಗದಿದ್ದರೆ, ಕಥಂ = ಹೇಗೆ, ಸ್ಯಾತ್ = ಆದೀತು.

**ಅನುವಾದ–** ಹೀಗೆ ಅನೇಕ ಪ್ರಮಾಣಗಳಿರುವುದರಿಂದ ಪರಮಾತ್ಮನಲ್ಲಿರುವ ಜ್ಞಾನ, ಐಶ್ವರ್ಯ ಮೊದಲಾದ ಧರ್ಮಗಳೆಲ್ಲವೂ ಸ್ವಾಭಾವಿಕವೇ ಆಗಿರುತ್ತವೆ. ಹಿಂದೆ ನಿರೂಪಿಸಿದ, ಅನೇಕ ಹೇತುಗಳಿಂದ ಪರಮಾತ್ಮನ ಗುಣಗಳು ಸ್ವಾಭಾವಿಕವಾದ್ದರಿಂದ, ಸ್ವಾಭಾವಿಕವಾದ ಧರ್ಮಿಭೂತವಾದ ಚೈತನ್ಯದ ನಿವೃತ್ತಿಯಾಗದೇ ಈ ಗುಣಗಳ ನಿವೃತ್ತಿ ಹೇಗಾಗುತ್ತದೆ?

**ಭಾವವಿಲಾಸಿನೀ–** ಭಗವದ್ಗುಣಾನಾಂ ಸ್ವಾಭಾವಿಕತ್ವಸಮರ್ಥನಮುಪಸಂಹರತಿ – **ಅತ ಇತಿ** ॥ ೬೭೧ ॥

**ತದ್ಧರ್ಮಬಾಧಾಯೋಗೇನ ಬಾಧ್ಯಂ ಸ್ಯಾದೈಕ್ಯಮೇವ ತೇ ।**
**ಅರ್ಥಾಪತ್ತಿಸ್ತವೈವಾಭೂದನರ್ಥಾಪತ್ತಿಕಾರಣಮ್ ॥ ೬೭೨ ॥**

**ಅರ್ಥ–** ತತ್ = ಆದ್ದರಿಂದ, ಧರ್ಮಬಾಧಾಯೋಗೇನ = ಪರಮಾತ್ಮನಲ್ಲಿರುವ ಗುಣಗಳಿಗೆ ಎಂದೂ ಬಾಧವು ಬಾರದ ಕಾರಣ, ತೇ = ನಿನ್ನ, ಐಕ್ಯಂ ಏವ = ಐಕ್ಯವೇ, ಬಾಧ್ಯಮ್ = ಬಾಧಿತವು, ಸ್ಯಾತ್ = ಆಗುತ್ತದೆ. ತವ= ನಿನ್ನ, ಅರ್ಥಾಪತ್ತಿಃ = ಅರ್ಥಾಪತ್ತಿ ಪ್ರಮಾಣವು, ತವ ಏವ = ನಿನಗೆ, ಅನರ್ಥಾಪತ್ತಿಕಾರಣಮ್ = ಅನರ್ಥವನ್ನು ತಂದುಕೊಡುವುದರಲ್ಲಿ ಹೇತುವು, ಅಭೂತ್ = ಆಯಿತು.

**ಅನುವಾದ– ಆದ್ದರಿಂದ ಪರಮಾತ್ಮನಲ್ಲಿರುವ ಧರ್ಮಗಳಿಗೆ ಎಂದೂ ಬಾಧವಿಲ್ಲ. ಹೊರತಾಗಿ, ನಿನ್ನ ಕಲ್ಪಿತವಾದ ಐಕ್ಯವೇ ಬಾಧಿತವಾಯಿತು. ಅರ್ಥಾಪತ್ತಿ ಪ್ರಮಾಣದಿಂದ, ಯಾವ ಐಕ್ಯವನ್ನು ಸಮರ್ಥಿಸಲು ಹೊರಟದ್ದೆಯೋ, ಅಂತಹ ಅರ್ಥಾಪತ್ತಿಯೇ ನಿನಗೆ ಅನರ್ಥವನ್ನು ತಂದೊಡ್ಡಿತು.**

**ಭಾವವಿಲಾಸಿನೀ–** ಪರಮಪ್ರಕೃತಮುಪಸಂಹರತಿ – **ತದಿತಿ** ॥ ತತ್ತಸ್ಮಾತ್ಸ್ವಾಭಾವಿಕತ್ವಾತ್ । ತವಾರ್ಥಾಪತ್ತಿಃ ಐಕ್ಯಾನ್ಯಥಾನುಪಪತ್ತ್ಯಾ ಗುಣತ್ಯಾಗರೂಪಾ । ಅನರ್ಥಾಪತ್ತಿಕಾರಣಂ ಸ್ವಾಭಾವಿಕಗುಣಾನ್ಯಥಾನುಪಪತ್ತ್ಯಾ ಐಕ್ಯಸ್ಯೈವ ತ್ಯಾಗರೂಪಾನರ್ಥಪ್ರಾಪ್ತೇಃ ಕಾರಣಮ್ ॥ ೬೭೨ ॥

**ವಿವರಣೆ–** ಭಗವದ್‌ಗುಣಗಳಿಗೆ ಪರಿತ್ಯಾಗವನ್ನು ಒಪ್ಪದಿದ್ದರೆ ವಿರುದ್ಧಧರ್ಮಗಳಿರುವಾಗ ಐಕ್ಯವೇ ಕೂಡುವುದಿಲ್ಲವೆಂದು 'ಐಕ್ಯಾನ್ಯಥಾನುಪಪತ್ತ್ಯಾ ಗುಣತ್ಯಾಗರೂಪ'ವಾದ ಅರ್ಥಾಪತ್ತಿಪ್ರಮಾಣವನ್ನು ಅದ್ವೈತಿಗಳು ಹೇಳಿದ್ದರು. ಈಗ ಗುಣಗಳಿಗೆ ಸ್ವಾಭಾವಿಕತ್ವವನ್ನು ಸಮರ್ಥನೆ ಮಾಡಿದ್ದರಿಂದ ಅರ್ಥಾಪತ್ತಿಯು ಅವರಿಗೆ ವಿರುದ್ಧವಾಯಿತು. ಸ್ವಾಭಾವಿಕತ್ವಾನ್ಯಥಾ ಅನುಪಪತ್ತ್ಯಾ ಐಕ್ಯತ್ಯಾಗರೂಪವಾದ ಅರ್ಥಾಪತ್ತಿಯನ್ನು ನಾವು ಹೇಳುತ್ತೇವೆ. ಗುಣಗಳು ಸ್ವಾಭಾವಿಕವಾದ್ದರಿಂದ ಐಕ್ಯವನ್ನೇ ಬಿಡಬೇಕೆಂದು ನಮ್ಮ ಅರ್ಥಾಪತ್ತಿಯಿಂದ ಸಿದ್ಧವಾಗುತ್ತದೆ. ಐಕ್ಯತ್ಯಾಗವು ಅದ್ವೈತಿಗಳಿಗೆ ಅನರ್ಥರೂಪವಾದುದು ಎಂದು ಅಭಿಪ್ರಾಯ.

**ವೃಥೈವ ಗುಣಸಂತ್ಯಾಗೇ ವೈದುಷ್ಯಂ ತೇ ಗಮಿಷ್ಯತಿ ।**
**ಅತ್ಯಾಗೇ ಮಹಿಮಧ್ರೌವ್ಯಾನ್ನಿರ್ಗುಣಂ ಸ್ಯಾತ್ಕದಾ ತವ ॥ ೬೭೩ ॥**

**ಅರ್ಥ–** ವೃಥಾ ಏವ = ವ್ಯರ್ಥವಾಗಿ, ಗುಣಸಂತ್ಯಾಗೇ = ಭಗವದ್ಧರ್ಮಗಳನ್ನು ತ್ಯಾಗ ಮಾಡಿದರೆ, ತೇ = ನಿನ್ನ, ವೈದುಷ್ಯಂ = ಪಾಂಡಿತ್ಯವು, ಗಮಿಷ್ಯತಿ = ಹೊರಟು ಹೋಗುತ್ತದೆ,

ಅತ್ಯಾಗೇ = ಭಗದ್ಗುಣಗಳನ್ನು ಬಿಡದಿದ್ದರೆ, ಮಹಿಮಧ್ರೌವ್ಯಾತ್ = ಭಗವನ್ಮಹಿಮೆಗಳು ನಿತ್ಯವಾಗುವುದರಿಂದ, ತವ = ನಿನ್ನ ನಿರ್ಗುಣಂ = ನಿರ್ಗುಣನಾದ ಬ್ರಹ್ಮನು, ಕದಾ = ಯಾವಾಗ, ಸ್ಯಾತ್ = ಸಿದ್ಧನಾಗುತ್ತಾನೆ.

**ಅನುವಾದ–** ಪರಮಾತ್ಮನಲ್ಲಿರುವ ಸದ್ಗುಣಗಳನ್ನು ಕಾರಣವಿಲ್ಲದೇ ತ್ಯಾಗ ಮಾಡಿದರೆ ನಿನ್ನ ಪಾಂಡಿತ್ಯವೇ ಹೊರಟು ಹೋಗುತ್ತದೆ. ಒಂದು ವೇಳೆ ಗುಣಗಳನ್ನು ಪರಮಾತ್ಮನಲ್ಲಿ ಒಪ್ಪಿದರೆ, ಆ ಮಹಾಮಹಿಮನ ಗುಣಗಳು ನಿತ್ಯವಾಗುವುದರಿಂದ ಪರಬ್ರಹ್ಮನು ಯಾವ ಕಾಲದಲ್ಲಿಯೂ ನಿರ್ಗುಣನಾಗುವುದಿಲ್ಲ.

**ಭಾವವಿಲಾಸಿನೀ–** ವೃಥೈವ ತ್ಯಾಗಕಾರಣಂ ವಿನೈವ । ತೇ ವೈದುಷ್ಯಂ ವೈದುಷ್ಯಾಖ್ಯಗುಣಃ । ವೃಥಾ ಗುಣತ್ಯಾಗಿನಃ ಅವೈದುಷ್ಯಾವಶ್ಯಂಭಾವಾತ್ ತ್ವಂ ವೃಥೈವ ಗುಣಂ ತ್ಯಜಸಿ । ನಿಮಿತ್ತೇ ಸತಿ ಗುಣತ್ಯಾಗಃ ಕಥಂ ನ ಸ್ಯಾದಿತಿ ಭಾವಃ । ಅತ್ಯಾಗೇ ಭಗವದ್ಗುಣಾನಾ-ಮತ್ಯಾಗೇ । ಸರ್ವಜ್ಞತ್ವಸರ್ವೇಶ್ವರತ್ವಾದಿಗುಣಾನಾಮ್ ಅತ್ಯಾಗೇ ಉಕ್ತಮಹಿಮ್ನಃ ಧ್ರೌವ್ಯಾತ್ಸರ್ವಕಾಲೀನತ್ವಾತ್ ತವ ನಿರ್ಗುಣಂ ಕದಾ ಸ್ಯಾತ್ । ಗುಣಾಪಾಯೇ ಸತಿ ಸಗುಣ-ಮೇವೇದಂ ತವ ಮತೇ ನಿರ್ಗುಣಂ ಭವೇತ್। ಗುಣಾನಾಮುಕ್ತವಿಧಯಾ ಸಾರ್ವಕಾಲೀನತ್ವಾತ್ ತಸ್ಯಾನವಸರ ಏವ ॥ ೬೭೩ ॥

**ವಿವರಣೆ–** ಅದ್ವೈತಿಯು ಅಪಂಡಿತನಾದ್ದರಿಂದಲೇ ವ್ಯರ್ಥವಾಗಿ ಭಗವದ್ಗುಣಗಳನ್ನು ಬಿಡುತ್ತಿದ್ದಾನೆ. ಈ ಅಪಾಂಡಿತ್ಯವನ್ನು ತೋರಿಸಿಕೊಳ್ಳುವ ಉದ್ದೇಶವಿಲ್ಲದಿದ್ದಲ್ಲಿ, ಭಗವದ್ಗುಣಗಳನ್ನು ಅದ್ವೈತಿಯು ಬಿಡುತ್ತಿರಲಿಲ್ಲ. ಒಂದುವೇಳೆ ತಾನು ಪಂಡಿತನೆಂದು ಸಮರ್ಥಿಸಿಕೊಳ್ಳಲು ಗುಣವನ್ನು ಒಪ್ಪುವುದಾದರೆ ಸರ್ವಜ್ಞತ್ವ, ಸರ್ವೇಶ್ವರತ್ವ ಮೊದಲಾದ ಅನೇಕ ಭಗವನ್ಮಹಿಮೆಗಳು ಸಾರ್ವಕಾಲಿಕವಾಗಿ ಸತ್ಯವೆಂದಾದವು. ಆವಾಗ ಯಾವ ಕಾಲದಲ್ಲಿಯೂ ಭಗವಂತನು ನಿರ್ಗುಣನೆಂದು ಒಪ್ಪಲು ಅದ್ವೈತಿಗೆ ಸಾಧ್ಯವಾಗುವುದಿಲ್ಲ. ಭಗವದ್ಗುಣಗಳೆಲ್ಲವೂ ಸಾರ್ವಕಾಲಿನವಾದ್ದರಿಂದ ಯಾವ ಕಾಲದಲ್ಲಿಯೂ ಅವುಗಳ ಅಭಾವವನ್ನು ಒಪ್ಪಲಾಗದು.

**ಅತೋऽನವಸರಾದ್ದುಃಸ್ಥಮಶ್ರೌತಂ ಚ ಪರೋದಿತಮ್ ।**
**ಬ್ರಹ್ಮೈಷ ನಿತ್ಯೋ ಮಹಿಮೇತ್ಯಾದ್ಯಾ ವಾಕ್ ತತ್ರ ತತ್ರ ಹಿ ॥ ೬೭೪ ॥**

**ಅರ್ಥ–** ಅತಃ = ಆದ್ದರಿಂದ, ಅನವಸರಾತ್= ಅವಕಾಶವಿಲ್ಲದ ಕಾರಣ, ಪರೋದಿತಮ್ = ಪರರು ಹೇಳುವ, ಬ್ರಹ್ಮ = ನಿರ್ಗುಣಬ್ರಹ್ಮನು, ದುಃಸ್ಥಮ್ = ನಿಲ್ಲಲು ಸಾಧ್ಯವಿಲ್ಲ, ಅಶ್ರೌತಂ ಚ = ಮತ್ತು ವೇದಪ್ರತಿಪಾದ್ಯನೂ ಅಲ್ಲ, ಏಷ ನಿತ್ಯೋ ಮಹಿಮೇತ್ಯಾದ್ಯಾಃ = 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' 'ನ ಕರ್ಮಣಾ ವರ್ಧತೇ' 'ನಿತ್ಯೋ ನಿತ್ಯಾನಾಮ್' ಇವೇ ಮೊದಲಾದ, ವಾಕ್ = ವೇದವಾಕ್ಯವು, ತತ್ರ ತತ್ರ ಹಿ = ಅಲ್ಲಲ್ಲಿ ಇವೆಯಷ್ಟೆ?

**ಅನುವಾದ–** ಆದ್ದರಿಂದ ಅದ್ವೈತಿಗಳಿಂದ ಹೇಳಲ್ಪಟ್ಟ ನಿರ್ಗುಣಬ್ರಹ್ಮನೆಂಬ ಪದಾರ್ಥವು ವೇದಪ್ರತಿಪಾದ್ಯನೇ ಆಗಿರುವುದಿಲ್ಲ. ಇಂತಹ ಅಸಿದ್ಧನಾದ ನಿರ್ಗುಣಬ್ರಹ್ಮನನ್ನು ಅಂಗೀಕರಿಸಲು ಅವಕಾಶವೇ ಇಲ್ಲ. ಮತ್ತು **'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' 'ನ ಕರ್ಮಣಾ ವರ್ಧತೇ ನೋ ಕನೀಯಾನ್' 'ನಿತ್ಯೋ ನಿತ್ಯಾನಾಮ್ ಚೇತನಶ್ಚೇತನಾನಾಮ್'** ಇವೇ ಮೊದಲಾದ ವಾಕ್ಯಗಳು ಪರಮಾತ್ಮನು ಮಹಾಮಹಿಮನೆಂದು ಹೇಳುತ್ತಿವೆ. ಅವನಲ್ಲಿರುವ ಶಕ್ತಿ, ಸಾಮರ್ಥ್ಯ ಮೊದಲಾದವುಗಳೆಲ್ಲವೂ ನಿತ್ಯವಾಗಿರುವವೆಂದು ಸಾಧಿಸುತ್ತಿವೆ. ಹೀಗಿರುವಾಗ ನಿರ್ಗುಣಬ್ರಹ್ಮನನ್ನು ಅಂಗೀಕರಿಸಲು ಸ್ವಲ್ಪವೂ ಅವಕಾಶವಿರುವುದಿಲ್ಲ.

**ಭಾವವಿಲಾಸಿನೀ–** ಅತೋ ಗುಣತ್ಯಾಗಾವಸರಾಭಾವಾತ್ಪರೋದಿತಬ್ರಹ್ಮ ನಿರ್ಗುಣಂ ಬ್ರಹ್ಮ ಅನವಸರದುಸ್ಥಮ್ । ಅಶ್ರೌತಂ ಚ ಸ್ವಾಭಾವಿಕಸಾರ್ವಜ್ಞಾದಿಗುಣನಿಷೇಧಾಯೋಗೇನ ನಿರ್ಗುಣಶ್ರುತ್ಯಾಪಿ ಸತ್ವಾದಿಗುಣನಿಷೇಧಮುಖೇನ ಸಗುಣಸ್ಯೈವ ಪ್ರತಿಪಾದನೀಯತ್ವಾತ್ ಪ್ರತಿ-ಪಾದಕಶ್ರುತಿಶೂನ್ಯಂ ಚಾಭೂದಿತಿ ಶೇಷಃ । ಪೂರ್ವಮಂತಂ ನಾಪೇತಿ ನಿತ್ಯತ್ವಮಭಿಹಿತಮ್ । ಇದಾನೀಂ ನಿತ್ಯತ್ವೇ ಸ್ಪಷ್ಟಾಂ ಚ ಶ್ರುತಿಮಾಹ – **ಏಷ ನಿತ್ಯ ಇತಿ ॥** ಅನೇನ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' 'ನ ಕರ್ಮಣಾ ವರ್ಧತೇ ನೋ ಕನೀಯಾನ್' ಆದ್ಯಪದೇನ 'ಪೂಷ್ಣಶ್ಚಕ್ರಂ ನ ರಿಷ್ಯತಿ' । ನ ಕೋಶೋಽವಪದ್ಯತೇ । ನೋ ಅಸ್ಯ ವ್ಯಥತೇ ಪವಿಃ । 'ನಿತ್ಯೋ ನಿತ್ಯಾನಾಮ್' ಇತ್ಯಾದಿಸಂಗ್ರಹಃ । ಇತ್ಯಾದ್ಯಾ ವಾಕ್ ವೇದವಾಕ್ । ಅತೋಽನವಸರದುಸ್ಥಮಿತಿ ಪೂರ್ವೇಣ ಸಂಬಂಧಃ ॥ ೬೭೪ ॥

**ವಿವರಣೆ–** ಪರಮಾತ್ಮನಲ್ಲಿರುವ ಗುಣಗಳನ್ನು ತ್ಯಾಗ ಮಾಡಲು ಅದ್ವೈತಿಗೆ ಅವಕಾಶವೇ ಇರುವುದಿಲ್ಲ. ಆದ್ದರಿಂದ ಅದ್ವೈತಿಯು ಅಂಗೀಕರಿಸಿದ ನಿರ್ಗುಣಬ್ರಹ್ಮನು ಸಿದ್ಧನಾಗಲು ಅವಕಾಶವಿಲ್ಲವೆಂದಾಯಿತು. ಅಂತಹ ನಿರ್ಗುಣಬ್ರಹ್ಮನು ಶ್ರುತಿಪ್ರತಿಪಾದ್ಯನೂ ಆಗಿರುವುದಿಲ್ಲ. ನಿರ್ಗುಣಶ್ರುತಿಗಳು ಪ್ರಾಕೃತಗುಣಗಳ ರಾಹಿತ್ಯವನ್ನಷ್ಟೇ ಹೇಳುತ್ತಿವೆಯೆಂದು ವ್ಯಾಖ್ಯಾನ ಮಾಡಬೇಕು. ಆದ್ದರಿಂದ ನಿರ್ಗುಣಪ್ರತಿಪಾದಕಶ್ರುತಿಗಳು ಇರುವುದಿಲ್ಲವೆಂದು ತಿಳಿಯಬೇಕು. ಪರಮಾತ್ಮನ ಗುಣಗಳೆಲ್ಲವೂ ನಿತ್ಯವಾಗಿವೆಯೆನ್ನಲು ಸ್ಪಷ್ಟವಾದ ಶ್ರುತಿಯನ್ನು ಹೇಳುತ್ತಿದ್ದಾರೆ – 'ಏಷ ನಿತ್ಯೋ' ಇತ್ಯಾದಿಯಾಗಿ. ಇದರಿಂದ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತಿಯ ಜೊತೆಗೆ 'ನ ಕರ್ಮಣಾ ವರ್ಧತೇ ನೋ ಕನೀಯಾನ್' ಎಂಬ ಶ್ರುತಿಯನ್ನು ಆದ್ಯಪದದಿಂದ 'ಪೂಷ್ಣಶ್ಚಕ್ರಂ ನ ರಿಷ್ಯತಿ ನ ಕೋಶೋಽವಪದ್ಯತೇ । ನೋ ಅಸ್ಯ ವ್ಯಥತೇ ಪವಿಃ । 'ನಿತ್ಯೋ ನಿತ್ಯಾನಾಮ್' ಇತ್ಯಾದಿ ಶ್ರುತಿಗಳನ್ನು ಸಂಗ್ರಹಿಸಬೇಕು. 'ಇತ್ಯಾದ್ಯಾ ವಾಕ್' ಎಂದರೆ 'ವೇದವಾಕ್ಯ' ಎಂದರ್ಥ. ಆದ್ದರಿಂದ ಭಗವಂತನ ನಿರ್ಗುಣತ್ವವು ನಿರಾಕೃತವಾಯಿತು.

ಕೊನೆಗೂ ಅದ್ವೈತಿಗಳು ನಿರ್ಗುಣಬ್ರಹ್ಮನನ್ನು ಪ್ರತಿಪಾದನೆ ಮಾಡಲು ಸಂಪೂರ್ಣವಾಗಿ ಸೋತುಹೋದರು. ಯಾವ ಶ್ರುತಿ-ಸ್ಮೃತಿಗಳೂ ಸಹ ಅವರನ್ನು ಬೆಂಬಲಿಸುವುದಿಲ್ಲ. ಹೊರತಾಗಿ ಪರಮಾತ್ಮನು ಗುಣಪರಿಪೂರ್ಣನಾಗಿದ್ದಾನೆನ್ನಲು ಅವನ ಗುಣಗಳೆಲ್ಲವೂ ಸತ್ಯವಾಗಿವೆಯೆಂದು 'ಏಕೋದಾಧಾರ' ಇತ್ಯಾದಿ ಅನೇಕ ಶ್ರುತಿಗಳು ಸಮರ್ಥಿಸುತ್ತಿವೆ. ಆದ್ದರಿಂದ ಪರಮಾತ್ಮನು ಸಕಲಗುಣಪರಿಪೂರ್ಣನು, ಸರ್ವೋತ್ತಮನು, ಅಭಿನ್ನವಾದ ಅನಂತಗುಣಗಳುಳ್ಳವನೆಂದು ಸಿದ್ಧವಾಯಿತು.

ನೀನು ಅಂಗೀಕರಿಸಿರುವ ನಿರ್ಗುಣ ಬ್ರಹ್ಮನ ಆವಶ್ಯಕತೆಯಿಲ್ಲ ಎನ್ನುವುದನ್ನು ಶ್ರೀವಾದಿರಾಜರು ಶ್ರುತಿ - ವಾಕ್ಯದಿಂದ ಸಮರ್ಥಿಸುತ್ತಾರೆ-

**ಏಕೋ ದಾಧಾರ ವಿಶ್ವಾನಿ ಭುವನಾನೀತಿ ಚಾಪರಾ ।**
**ತಂ ಸ್ತೌತಿ ಸರ್ವಾಧಾರತ್ವಾತ್ ಪರಂ ಬ್ರಹ್ಮ ಸ ಏವ ಹಿ ॥ ೬೭೫ ॥**

**ಅರ್ಥ–** ಏಕಃ=ಒಬ್ಬನೇ, ವಿಶ್ವಾನಿ ಭುವನಾನಿ=ಎಲ್ಲಾ ಲೋಕಗಳನ್ನೂ ದಾಧಾರ=ಧರಿಸಿರುವನು, ಇತಿ=ಎಂದು, ಅಪರಾ ಚ=ಬೇರೊಂದು ಶ್ರುತಿಯೂ, ತಂ=ಆ ವಿಷ್ಣುವನ್ನು ಸ್ತೌತಿ=ಸ್ತೋತ್ರಮಾಡುತ್ತಿದೆ, ಸರ್ವಾಧಾರತ್ವಾತ್= ಸರ್ವಾಧಾರನಾಗಿರುವುದರಿಂದ, ಸ ಏವ=ಅವನೇ, ಪರಂ ಬ್ರಹ್ಮ ಹಿ=ಪರಬ್ರಹ್ಮನೆಂದು ಪ್ರಸಿದ್ಧನಾಗಿರುವನಷ್ಟೇ.

**ಅನುವಾದ–** 'ಏಕೋ ದಾಧಾರ ಭುವನಾನಿ ವಿಶ್ವಾ', 'ಯ ಉ ತ್ರಿಧಾತು ಪೃಥವೀಮುತದ್ಯಾಂ' ಎಂಬ ವಿಷ್ಣುಸೂಕ್ತದಲ್ಲಿರುವ ಈ ಶ್ರುತಿ-ವಾಕ್ಯಗಳು ವಿಷ್ಣುವನ್ನೇ ಸ್ತೋತ್ರ ಮಾಡುತ್ತಿವೆ. ವಿಷ್ಣುವೇ ಎಲ್ಲಾ ಜಗತ್ತಿಗೆ ಆಧಾರನಾಗಿರುವುದರಿಂದ ಅವನೇ ಪರಬ್ರಹ್ಮನೆಂದು ಪ್ರಸಿದ್ಧನಾಗಿರುವವನು.

**ಭಾವವಿಲಾಸಿನೀ–** ಇದಾನೀಂ ಪರೋದೀರಿತಬ್ರಹ್ಮಣೋ ವ್ಯರ್ಥತಾಮುಪಪಾದಯತಿ– **ಏಕೋ ದಾಧಾರೇತಿ॥** ವಿಶ್ವೇತ್ಯಸ್ಯಾರ್ಥಕಥನಮ್– ವಿಶ್ವಾನೀತಿ। ಅನೇನ 'ಯ ಉ ತ್ರಿಧಾ ತು ಪೃಥಿವೀಮುತ ದ್ಯಾಮ್' ಇತ್ಯಾದಿಶ್ರುತಿಮುಪಾದತ್ತೇ । ತಂ ವಿಷ್ಣುಮ್ । ವಿಷ್ಣುಸೂಕ್ತಸ್ಥತ್ವಾದಸ್ಯ ವಾಕ್ಯಸ್ಯ । ಸರ್ವಾಧಾರತ್ವಾತ್ ಸರ್ವಜಗದಾಧಾರತ್ವಾತ್ । ಸ ಏವ ವಿಷ್ಣುರೇವ ಪರಂ ಬ್ರಹ್ಮ ಹಿ ॥೬೭೫॥

**ವಿವರಣೆ–** ಜಗತ್ತಿನ ಸ್ಥಿತಿಗೋಸ್ಕರ ಅಥವಾ ಸೃಷ್ಟಿಗೋಸ್ಕರ ಅಥವಾ ಮುಕ್ತಿಗೋಸ್ಕರ ಶಬಲಬ್ರಹ್ಮನನ್ನು ಅಂಗೀಕರಿಸಬೇಕೆಂಬ ಆಕ್ಷೇಪಕ್ಕೆ ಉತ್ತರರೂಪವಾಗಿ ಶ್ರೀವಾದಿರಾಜರು ಜಗತ್ತಿನ ಸ್ಥಿತಿಗಾಗಿ ಶಬಲ ಬ್ರಹ್ಮನನ್ನು ಅಂಗೀಕರಿಸುವ ಆವಶ್ಯಕತೆಯಿಲ್ಲ 'ಏಕೋ ದಾಧಾರ ಭುವನಾನಿ ವಿಶ್ವಾ' ಮುಂತಾದ ಶ್ರುತಿವಾಕ್ಯಗಳು ವಿಷ್ಣುವೇ ಸರ್ವಜಗದಾಧಾರಭೂತನೆಂದು ಸ್ತೋತ್ರಮಾಡುತ್ತಿವೆ ಎಂದು ಹೇಳುತ್ತಿದ್ದಾರೆ.

**ಸರ್ವಸ್ಯಾಧಾರತಾ ಸರ್ವವ್ಯಾಪಿತಾ ಕೇಶವಸ್ಯ ಚೇತ್ ।**
**ಅನ್ಯದ್ಬ್ರಹ್ಮ ಕಿಮರ್ಥಂ ತೇ ವ್ಯರ್ಥತ್ವಾದಪಿ ತದ್ ಗತಂ ॥ ೬೭೬ ॥**

**ಅರ್ಥ–** ಸರ್ವಸ್ಯ ಆಧಾರತಾ=ಎಲ್ಲದಕ್ಕೂ ಆಧಾರವಾಗಿರುವಿಕೆಯು, ಸರ್ವವ್ಯಾಪಿತಾ= ಸರ್ವತ್ರವ್ಯಾಪ್ತಿಯು, ಕೇಶವಸ್ಯ=ಕೇಶವನಿಗೆ, ಅಸ್ತಿ ಚೇತ್=ಇರುವುದಾದರೆ, ತೇ=ನಿನ್ನ ಅನ್ಯತ್=ಮತ್ತೊಬ್ಬ ಬ್ರಹ್ಮ=ನಿರ್ಗುಣಬ್ರಹ್ಮನು, ಕಿಮರ್ಥಂ=ಏಕೆ? ವ್ಯರ್ಥತ್ವಾದಪಿ= ವ್ಯರ್ಥವಾದುದರಿಂದಲೂ ಕೂಡ, ತದ್=ಆ ನಿರ್ಗುಣಬ್ರಹ್ಮ ತತ್ತ್ವವು, ಗತಂ=ಹೋಯಿತು.

**ಅನುವಾದ–** ವಿಷ್ಣುವು ಎಲ್ಲಾ ಜಗತ್ತಿಗೆ ಆಧಾರನಾಗಿರುವುದರಿಂದ, ಎಲ್ಲಾ ಕಡೆಯಲ್ಲಿಯೂ ವ್ಯಾಪ್ತನಾಗಿರುವನು. 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' - ಶ್ರುತಿಯೂ ಕೂಡ ಸರ್ವತ್ರ ವಿಷ್ಣುವಿಗೆ ವ್ಯಾಪ್ತತ್ವವನ್ನು ಹೇಳಿದೆ. ಹೀಗೆ ವಿಷ್ಣುಸೂಕ್ತದಲ್ಲಿ ಹೇಳಿದಂತೆ ಸ್ವತಂತ್ರನಾಗಿ ಎಲ್ಲಾ ಲೋಕಗಳನ್ನೂ ಧರಿಸುವವನಾಗಿ, ಸರ್ವವ್ಯಾಪಿಯಾಗಿ ವಿಷ್ಣು ಇರುವುದಾದರೆ ಅವನಿಂದ ಭಿನ್ನನಾದ ನಿರ್ಗುಣಬ್ರಹ್ಮನನ್ನು ಏಕೆ ಅಂಗೀಕರಿಸಬೇಕು? ನಿರ್ಗುಣಬ್ರಹ್ಮನನ್ನು ಅಂಗೀಕರಿಸುವುದು ವ್ಯರ್ಥ.

**ಭಾವವಿಲಾಸಿನೀ–** ಆಧಾರತಾ ಚ ಸರ್ವವ್ಯಾಪಿತಾ ಚೇತಿ ಸಂಬಂಧಃ । ಸರ್ವವ್ಯಾಪಿತಾ ಚ 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಇತಿ ಶ್ರುತ್ಯುಕ್ತಾ । ಅನ್ಯದ್ ಇತೋಽನ್ಯತ್ ॥ ೬೭೬ ॥

**ವಿವರಣೆ–** 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಎಂಬ ಶ್ರುತಿ ಇರುವುದರಿಂದ ನಾರಾಯಣನೇ ಸರ್ವವ್ಯಾಪಿಯಾಗಿ ಸರ್ವಾಧಾರನಾಗಿದ್ದಾನೆ. ಅವನನ್ನು ಬಿಟ್ಟು ಬೇರೆ ಬ್ರಹ್ಮನನ್ನು ಕಲ್ಪಿಸಲು ಯಾವ ಕಾರಣವಾಗಲೀ, ಪ್ರಯೋಜನವಾಗಲೀ ಇಲ್ಲ ಎಂದು ಅಭಿಪ್ರಾಯ.

**ಯೋ ನಃ ಪಿತಾ ವಿಧಾತೇತಿ ಸೃಷ್ಟಿಶ್ಚಾಶ್ರಾವಿ ಕೇಶವಾತ್ ।**
**ಅತೋ ಭುಕ್ತ್ಯೈ ನ ತೇ ಬ್ರಹ್ಮ ಮೋಕ್ಷಮಿಚ್ಛೇತ್ ಜನಾರ್ದನಾತ್ ॥ ೬೭೭ ॥**

**ಅರ್ಥ–** ಯಃ=ಯಾರು, ನಃ=ನಮ್ಮೆಲ್ಲರ, ಪಿತಾ=ಜನಕನೋ, ವಿಧಾತಾ= ನಾನಾರೀತಿಯಿಂದ ಧಾರಣೆ ಪೋಷಣೆಗಳನ್ನು ಮಾಡುತ್ತಾನೋ, ಇತಿ=ಎಂದು, ಯೋ ನಃ ಪಿತಾ ಎಂಬ ಶ್ರುತಿಯು, ಕೇಶವಾತ್=ವಿಷ್ಣುವಿನಿಂದ, ಸೃಷ್ಟಿಶ್ಚ= ಸೃಷ್ಟಿಸ್ಥಿತ್ಯಾದಿಗಳು, ಅಶ್ರಾವಿ= ತಿಳಿಸಲ್ಪಡುತ್ತವೆ, ಅತಃ=ಆದ್ದರಿಂದ, ಭುಕ್ತ್ಯೈ=ಮುಕ್ತಿಗಾಗಿ, ತೇ=ನಿನ್ನ ಬ್ರಹ್ಮ=ನಿರ್ಗುಣ ಬ್ರಹ್ಮನು, ನ=ಅಲ್ಲ, ಜನಾರ್ದನಾತ್=ವಿಷ್ಣುವಿನಿಂದ, ಮೋಕ್ಷಂ= ಮೋಕ್ಷವನ್ನು ಇಚ್ಛೇತ್= ಅಪೇಕ್ಷಿಸಬೇಕು.

**ಅನುವಾದ–** ಯೋ ನಃ ಪಿತಾ ಜನಿತಾ ಯೋ ವಿಧಾತಾ ಎಂಬ ಶ್ರುತಿಯು ಲೋಕದ ಸೃಷ್ಟಿ ಸ್ಥಿತಿ, ಸಂಹಾರಗಳು ಕೇಶವನಿಂದಲೇ ಆಗುತ್ತವೆಯೆಂದು ಹೇಳುತ್ತವೆ. ಮೋಕ್ಷಪ್ರಾಪ್ತಿಗೂ ನೀನು ತಿಳಿಸಿರುವ ನಿರ್ಗುಣಬ್ರಹ್ಮನ ಅವಶ್ಯಕತೆ ಇರುವುದಿಲ್ಲ. ಯಾರು ಮೋಕ್ಷವನ್ನು ಇಚ್ಛೆಪಡುತ್ತಾರೆಯೋ ಅವರು ಜನಾರ್ದನನಿಂದಲೇ ಪಡೆಯಬೇಕೆಂದು ಸ್ಮೃತಿಯು ಸಾರುತ್ತಿದೆ.

**ಭಾವವಿಲಾಸಿನೀ–** ಸೃಷ್ಟ್ಯರ್ಥಂ ತದಿತ್ಯತ ಆಹ– **ಯೋ ನಃ ಪಿತೇತಿ ॥** ಅತಃ ಸೃಷ್ಟಿಸ್ಥಿತ್ಯಾದೀನಾಂ ವಿಷ್ಣುಕೃತತ್ವಾತ್ । ತೇ ಬ್ರಹ್ಮ ಭುಕ್ತ್ಯೈ ಭೋಗಭುಕ್ತ್ಯೈ । ಮೋಕ್ಷಾರ್ಥಂ ತದಿತ್ಯತ ಆಹ– ಮೋಕ್ಷಮಿಚ್ಛೇದಿತ್ಯಾದಿನಾ ॥ ಅನೇನ 'ಶಂಕರಾಜ್ಜ್ಞಾನಮನ್ವಿಚ್ಛೇನ್ಮೋಕ್ಷಮಿಚ್ಛೇಜ್ಜನಾರ್ದನಾತ್' ಇತಿ ಸ್ಮೃತಿಮ್ । 'ವರಂ ವರಯ ಭದ್ರಂ ತೇ ಋತೇ ಕೈವಲ್ಯಮಾತ್ಮನಃ ।' 'ಏಕ ಏವೇಶ್ವರಃ' ಇತ್ಯಾದಿಭಾಗವತವಚನಂ ಚ ಗೃಹ್ಯತೇ । ಇತಿ ಸ್ಮೃತೇರ್ವಿಷ್ಣೋರೇವ ಮೋಕ್ಷದಾತೃತ್ವ-ಪ್ರತಿಪಾದಕಸ್ಮೃತೇಃ। ಉಪಸಂಹರತಿ– ವ್ಯರ್ಥಮೇವಾಭವತ್ ತಃ ಇತಿ ॥ ತತಃ ಸೃಷ್ಟಿಸ್ಥಿತಿ-ನಿಯಮನಮೋಕ್ಷಾನುಪಯೋಗಾತ್ ॥ ೬೭೭-೬೭೮ ॥

**ವಿವರಣೆ–** ಸೃಷ್ಟಿಯ ಸಲುವಾಗಿ ನಿರ್ಗುಣಬ್ರಹ್ಮನನ್ನು ಅಂಗೀಕರಿಸುತ್ತೇನೆ ಎಂದು ಹೇಳುವಂತಿಲ್ಲ. ಏಕೆಂದರೆ ಯೋನಃ ಪಿತಾ ಎಂಬ ಶ್ರುತಿಯು ಸೃಷ್ಟಿಸ್ಥಿತ್ಯಾದಿಗಳನ್ನು ವಿಷ್ಣುವಿನ ವ್ಯಾಪಾರವೆಂದೇ ಹೇಳುತ್ತದೆ. ಆದ್ದರಿಂದ ನಿನ್ನ ನಿರ್ಗುಣಬ್ರಹ್ಮನಿಂದ ಈ ಲೋಕದ ಯಾವ ಭೋಗವೂ ಲಭಿಸುವುದಿಲ್ಲ. ಇನ್ನು ಮೋಕ್ಷಕ್ಕಾಗಿಯೂ ನಿರ್ಗುಣಬ್ರಹ್ಮನನ್ನು ಕಲ್ಪಿಸುವ ಅಗತ್ಯವಿಲ್ಲ. ಏಕೆಂದರೆ ಮೋಕ್ಷವನ್ನು ಕೊಡುವವನು ನಾರಾಯಣನೇ ಎಂದು 'ಶಂಕರಾದ್‌ಜ್ಞಾನಮನ್ವಿಚ್ಛೇನ್ಮೋಕ್ಷಮಿಚ್ಛೇಜ್ಜನಾರ್ದನಾದ್' ಮುಂತಾದ ಪ್ರಮಾಣಗಳು ನಿರೂಪಿಸುತ್ತವೆ. ಆದ್ದರಿಂದ ನೀನು ಅಂಗೀಕರಿಸುವ ನಿರ್ಗುಣಬ್ರಹ್ಮನು ವ್ಯರ್ಥವಾದವನು.

**ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ ।**
**ಇತಿ ಸ್ಮೃತೇರ್ನಾಪಿ ಮುಕ್ತ್ಯೈ ವ್ಯರ್ಥಮೇವಾಭವತ್ ತತಃ ॥ ೬೭೮ ॥**

**ಅರ್ಥ–** ತಸ್ಯ=ಆ ಮೋಕ್ಷಕ್ಕೆ, ಈಶ್ವರಃ=ನಿಯಾಮಕನು, ಭಗವಾನ್= ಷಡ್ಗುಣೈಶ್ವರ್ಯ ಸಂಪನ್ನನಾದ, ಅವ್ಯಯಃ=ನಾಶರಹಿತನಾದ, ವಿಷ್ಣುಃ=ವಿಷ್ಣುವು, ಏಕ ಏವ=ಒಬ್ಬನೇ ಸ್ವತಂತ್ರನು. ಇತಿ=ಎಂದು, ಸ್ಮೃತೇಃ= ಭಾಗವತಾದಿಸ್ಮೃತಿಯಿರುವುದರಿಂದ, ಮುಕ್ತ್ಯೈ ಅಪಿ= ಮುಕ್ತಿಗಾಗಿ ಕೂಡ, ನ= ಅವಶ್ಯಕತೆಯಿಲ್ಲ. ತತಃ= ಆದ್ದರಿಂದ ನಿನ್ನ ನಿರ್ಗುಣಬ್ರಹ್ಮನು, ವ್ಯರ್ಥಂ ಏವ= ಪ್ರಯೋಜನಶೂನ್ಯನಾಗಿ, ಅಭವತ್=ಆದನು.

**ಅನುವಾದ–** 'ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ' ಇತ್ಯಾದಿ ಸ್ಮೃತಿಗಳಿಂದ ವಿಕಾರರಹಿತನಾದ ವಿಷ್ಣು ಒಬ್ಬನೇ ಷಡ್ಗುಣೈಶ್ವರ್ಯಸಂಪನ್ನನಾದ್ದರಿಂದ

ಸ್ವತಂತ್ರನಾದ್ದರಿಂದ ಮೋಕ್ಷಪ್ರಾಪ್ತಿಗೆ ಕಾರಣ ಎಂದು ಹೇಳಲಾಗಿದೆ. ಮೋಕ್ಷಕ್ಕಾಗಿ ನಿನ್ನ ನಿರ್ಗುಣಬ್ರಹ್ಮನ ಅವಶ್ಯಕತೆ ಇರುವುದಿಲ್ಲ. ನಿರ್ಗುಣಬ್ರಹ್ಮನನ್ನು ಅಂಗೀಕರಿಸುವುದು ವ್ಯರ್ಥವೇ ಸರಿ.

**ವ್ಯಾಪ್ತಂ ಚೈತನ್ಯಯುಗ್ಮಂ ಚೇದ್ ಬ್ರಹ್ಮಣಿ ದ್ವೈತಕಲ್ಪನಾತ್ ।**
**ಅನರ್ಥಶ್ಚ ಭವೇತ್ ತಸ್ಮಾದ್ ಬ್ರಹ್ಮೈಕಂ ವಿಷ್ಣುರೇವ ಹಿ ॥ ೬೭೯ ॥**

**ಅರ್ಥ–** ವ್ಯಾಪ್ತಂ=ಎಲ್ಲ ಕಡೆಯಲ್ಲಿ ಇರುವ, ಚೈತನ್ಯಯುಗ್ಮಂ=ಎರಡು ಚೇತನಗಳು (ನಾರಾಯಣಬ್ರಹ್ಮ ಹಾಗೂ ನಿರ್ಗುಣಬ್ರಹ್ಮನೊಬ್ಬನು - ಹೀಗೆ ಇಬ್ಬರು ಬ್ರಹ್ಮರು), ಚೇತ್=ಆದರೆ, ಬ್ರಹ್ಮಣಿ=ಬ್ರಹ್ಮನಲ್ಲಿ, ದ್ವೈತಕಲ್ಪನಾತ್=ಇಬ್ಬರೆಂದು ಕಲ್ಪನೆ ಮಾಡಬೇಕಾಗುವುದರಿಂದ, ಅನರ್ಥಃ ಚ=ಅನರ್ಥವೂ ಕೂಡ, ಭವೇತ್=ಉಂಟಾದೀತು. ತಸ್ಮಾತ್=ಆದ್ದರಿಂದ, ಬ್ರಹ್ಮ=ಬ್ರಹ್ಮನು, ಏಕಃ=ಒಬ್ಬನೇ, ವಿಷ್ಣುರೇವ ಹಿ=ವಿಷ್ಣುವೇ, ಭವೇತ್=ಆಗುತ್ತಾನೆ.

**ಅನುವಾದ–** ನಿರ್ಗುಣಬ್ರಹ್ಮನನ್ನು (ಬ್ರಹ್ಮದ್ವಯರನ್ನು) ಕಲ್ಪಿಸಿದರೆ ಅನರ್ಥಕ್ಕೆ ಗುರಿಯಾಗಬೇಕಾದೀತು. ಏಕೆಂದರೆ 'ವ್ಯಾಪ್ಯ ನಾರಾಯಣಃ ಸ್ಥಿತಃ' ಎಂಬ ಶ್ರುತಿಯಲ್ಲಿ ವಿಷ್ಣುವು ಎಲ್ಲ ಕಡೆಯಲ್ಲಿಯೂ ವ್ಯಾಪ್ತನಾಗಿರುವವನೆಂದು ಹೇಳಿರುವುದರಿಂದ ನಾರಾಯಣನೆಂಬ ಒಬ್ಬ ಬ್ರಹ್ಮನು, ನಿರ್ಗುಣನೆಂಬ ಇನ್ನೊಬ್ಬ ಬ್ರಹ್ಮನು ಹೀಗೆ ಇಬ್ಬರನ್ನು ಕಲ್ಪಿಸಿದ್ದರಿಂದ ದ್ವೈತಪ್ರಾಪ್ತಿಯಾಗಿ ಇಷ್ಟಹಾನಿಯು ಆದೀತು. ಈ ಅನರ್ಥಪರಿಹಾರಕ್ಕಾಗಿ ಒಬ್ಬನೇ ಬ್ರಹ್ಮನು ವಿಷ್ಣುವೇ ಆಗಬೇಕು. ಎರಡು ಬ್ರಹ್ಮರನ್ನು ಅಂಗೀಕರಿಸಿದರೆ ಅದ್ವೈತಹಾನಿ ಎಂಬ ಅನರ್ಥ ಉಂಟಾದೀತು.

**ಭಾವವಿಲಾಸಿನೀ–** ಇದಾನೀಂ ಪರೋದೀರಿತಬ್ರಹ್ಮಣಃ ಅನರ್ಥಹೇತುತಾಮುಪ್ಪಾಹ– **ವ್ಯಾಪ್ತಮಿತಿ॥** ವ್ಯಾಪ್ತಂ ಚೈತನ್ಯಯುಗ್ಮಮಂಗೀಕ್ರಿಯತೇ ಚೇತ್ । 'ವ್ಯಾಪ್ಯ ನಾರಾಯಣಃ ಸ್ಥಿತಃ' ಇತಿ ಶ್ರುತಿಬಲಾದೇಕಮ್ । ಸ್ವಮತದುರಾಗ್ರಹಾದಪರಮ್ । 'ಏಕಮೇವಾದ್ವಿತೀಯಮ್' ಇತ್ಯುಕ್ತಬ್ರಹ್ಮಣಿ ದ್ವೈತಕಲ್ಪನಾದ್ ಅನರ್ಥಃ ಸರ್ವತ್ರ ದ್ವೈತಮಸಹಮಾನಸ್ಯ ಬ್ರಹ್ಮಣ್ಯೇವ ದ್ವೈತಪ್ರಾಪ್ತಿರೂಪಃ । ತಸ್ಮಾದನರ್ಥಪರಿಹಾರಸ್ಯ ಕರ್ತವ್ಯತ್ವಾತ್ । ಬ್ರಹ್ಮಣ ಏಕತ್ವೇ ಆವಶ್ಯಕೇ ಸತಿ ತದೇಕಂ ಬ್ರಹ್ಮ ವಿಷ್ಣುರೇವ ಹಿ ಭವೇದಿತಿ ಕ್ರಿಯಾವೃತ್ತ್ಯಾ ಯೋಜನೀಯಮ್ ॥ ೬೭೯॥

**ವಿವರಣೆ–** ಸಗುಣಬ್ರಹ್ಮನಾದ ನಾರಾಯಣನಲ್ಲಿ ಸ್ರಷ್ಟೃತ್ವಾದಿಗುಣಗಳು ಸ್ವಾಭಾವಿಕವಾಗಿರುವುದರಿಂದ ಅವನೇ ಒಂದು ಕಾಲದಲ್ಲಿ ನಿರ್ಗುಣನಾಗುತ್ತಾನೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಸ್ವಾಭಾವಿಕವಾದ ಗುಣಗಳಿಗೆ ಎಂದೂ ನಾಶವಿಲ್ಲ. ಆದ್ದರಿಂದ ಸಗುಣನಿಗಿಂತ ಭಿನ್ನನಾದ ಇನ್ನೊಬ್ಬ ಬ್ರಹ್ಮನನ್ನು ಕಲ್ಪನೆ ಮಾಡಲೇಬೇಕು. ದುರಾಗ್ರಹದಿಂದ ಹಾಗೆ ಕಲ್ಪನೆ ಮಾಡಿದರೆ ಇಬ್ಬರು ಬ್ರಹ್ಮರನ್ನು ಅಂಗೀಕರಿಸಬೇಕಾಗುತ್ತದೆ ಎಂದು ಅಭಿಪ್ರಾಯ.

**ಪ್ರಾಗುಕ್ತಯುಕ್ತ್ಯಾ ಸಗುಣನ್ನೈರ್ಗುಣ್ಯಂ ಯನ್ಮೃತೌ ಚ ನ ।**
**ಅತೋಽನ್ಯನ್ನಿರ್ಗುಣಂ ವಾಚ್ಯಂ ತದಾ ಬ್ರಹ್ಮದ್ವಿತಾ ನ ಕಿಮ್ ॥ ೬೮೦ ॥**

**ಅರ್ಥ–** ಯತ್= ಯಾವ ಕಾರಣದಿಂದ, ಪ್ರಾಗುಕ್ತಯುಕ್ತ್ಯಾ=ಹಿಂದೆ ಹೇಳಿದ ಸ್ವಾಭಾವಿಕಗುಣತ್ವಾದಿ ಯುಕ್ತಿಗಳಿಂದ, ಮೃತೌ ಚ=ಮರಣದಲ್ಲಿ ಕೂಡ, ಸಗುಣನ್ನೈರ್ಗುಣ್ಯಂ= ಸಗುಣಬ್ರಹ್ಮನಿಗೆ ನಿರ್ಗುಣತ್ವವು, ನ=ಕೂಡುವುದಿಲ್ಲವೋ, ಅತಃ= ಆದ್ದರಿಂದ, ನಿರ್ಗುಣಂ= ನಿರ್ಗುಣಬ್ರಹ್ಮನು, ಅನ್ಯತ್=ಸಗುಣಬ್ರಹ್ಮನಿಂದ ಬೇರೆಯಾಗಿ, ವಾಚ್ಯಂ=ಹೇಳಲ್ಪಡಬೇಕು. ತದಾ=ಆಗ, ಬ್ರಹ್ಮದ್ವಿತಾ ನ ಕಿಂ?=ಇಬ್ಬರು ಬ್ರಹ್ಮರು ಆಗುವುದಿಲ್ಲವೇ?

**ಅನುವಾದ–** ನಾನು ಬ್ರಹ್ಮದ್ವಯರನ್ನು ಅಂಗೀಕರಿಸುವುದಿಲ್ಲ ಎಂದರೆ, ಸಗುಣ ಬ್ರಹ್ಮನಾದ ವಿಷ್ಣುವಿಗೆ ಯಾವ ಸಂದರ್ಭದಲ್ಲಿ ನಿರ್ಗುಣತ್ವವು ಕೂಡುವುದಿಲ್ಲ, ಮರಣ ಹೊಂದಿದರೂ ಸಗುಣನು ನಿರ್ಗುಣನಾಗಲು ಸಾಧ್ಯವಿಲ್ಲ ಎಂದ ಮೇಲೆ ನಿರ್ಗುಣನೆಂಬ ಇನ್ನೊಬ್ಬ ಬ್ರಹ್ಮನನ್ನು ಅಂಗೀಕರಿಸಬೇಕು. ಆಗ ಬ್ರಹ್ಮದ್ವಯರು ಆಗುವುದಿಲ್ಲವೇ?

**ಭಾವವಿಲಾಸಿನೀ–** ತತ್ರ ಯುಕ್ತಿಮಾಹ– ಪ್ರಾಗುಕ್ತೇತಿ ॥ ಪ್ರಾಗುಕ್ತಸ್ವಾಭಾವಿಕತ್ವಾದಿಯುಕ್ತ್ಯಾ ಸಗುಣನ್ನೈರ್ಗುಣ್ಯಂ ಸಗುಣಸ್ಯ ನೈರ್ಗುಣ್ಯಮ್ । ಅತಃ ಸಗುಣಸ್ಯ ನಿರ್ಗುಣತಾಯೋಗಾತ್ ಅನ್ಯತ್ 'ಸಗುಣಾನ್ನಿರ್ಗುಣಂ ಸರ್ವಧರ್ಮಶೂನ್ಯರೂಪಂ ವಾಚ್ಯಮ್ । ತಾದೃಶನಿರ್ಗುಣೇ ದುರಾಗ್ರಹವತಾ ನ ಕಿಂ ನ ಭವೇತ್ ಕಿಮ್? ಭವೇದೇವೇತ್ಯರ್ಥಃ ॥ ೬೮೦ ॥

**ಏವಂ ಚಾವಸರಾಭಾವದುಃಸ್ಥಂ ವ್ಯರ್ಥಮನರ್ಥದಮ್ ।**
**ವಿಷ್ಣೋರನ್ಯತ್ ಪರಂ ಬ್ರಹ್ಮ ಕೋ ವಿದ್ವಾನ್ ವಕ್ತುಮರ್ಹತಿ ॥ ೬೮೧ ॥**

**ಅರ್ಥ–** ಏವಂ ಚ=ಉಕ್ತಪ್ರಕಾರವಾಗಿ, ಅವಸರಾಃ ಭಾವದುಸ್ಥಂ=ಅವಕಾಶವಿಲ್ಲದೆ, ನಿರ್ಗುಣಬ್ರಹ್ಮನನ್ನು ಕಲ್ಪಿಸುವುದು, ವ್ಯರ್ಥಂ=ವ್ಯರ್ಥವು. ಅನರ್ಥದಂ=ಅಪ್ರಯೋಜಕ, ವಿಷ್ಣೋಃ=ವಿಷ್ಣುವಿನಿಂದ, ಅನ್ಯತ್=ಬೇರೆ, ಪರಂ ಬ್ರಹ್ಮ=ಪರಬ್ರಹ್ಮನನ್ನು, ಕಃ ವಿದ್ವಾನ್= ಯಾವ ಪಂಡಿತನು, ವಕ್ತುಂ=ಹೇಳಲು, ಅರ್ಹತಿ=ಶಕ್ತನಾಗುತ್ತಾನೆ.

**ಅನುವಾದ–** ನಿರ್ಗುಣಬ್ರಹ್ಮನನ್ನು ಒಪ್ಪಲು ಯಾವ ಪ್ರಮಾಣವೂ ಇಲ್ಲದಿರುವುದರಿಂದ ನಿರ್ಗುಣಬ್ರಹ್ಮನನ್ನು ಕಲ್ಪಿಸುವುದು ಅಪ್ರಯೋಜಕ ಹಾಗೂ ದುಃಖವನ್ನು ಉಂಟುಮಾಡುವುದು. ಪಾಪಮೂಲಕ ದುಃಖವೂ ಸಾಧ್ಯ. ಅದ್ವೈತಹಾನಿ ಮೂಲಕ ನಿನ್ನ ಸಿದ್ಧಾಂತ ಭಂಗವಾಗುವುದು. ಆದ್ದರಿಂದ ಭಗವಂತನಾದ ನಾರಾಯಣನಿಗಿಂತ ಭಿನ್ನನಾದ ಪರಬ್ರಹ್ಮನನ್ನು ಯಾವ ವಿವೇಕಿಯು ಹೇಳುತ್ತಾನೆ?

**ಭಾವವಿಲಾಸಿನೀ–** ಉಕ್ತಮರ್ಥಂ ಸಂಕಲಯ್ಯಾಹ ಏವಂಚೇತಿ ॥ ೬೮೧ ॥

**ವಿವರಣೆ–** ಉಕ್ತಾರ್ಥವನ್ನು ಸಂಗ್ರಹಿಸಿ ನಿರೂಪಿಸುತ್ತಿದ್ದಾರೆ. ನಿರ್ಗುಣ ಬ್ರಹ್ಮನಿಗೆ ಅವಕಾಶವೇ ಇಲ್ಲವಾದ್ದರಿಂದ ಅವನನ್ನು ಕಲ್ಪನೆ ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲ, ಜೊತೆಗೆ ಅನರ್ಥವೇ ಉಂಟಾಗುತ್ತದೆ. ಏಕೆಂದರೆ ಇಲ್ಲದಿರುವ ಒಂದು ವಸ್ತುವನ್ನು ನಾರಾಯಣನಿಗೆ ಪ್ರತಿಸ್ಪರ್ಧಿಯಾಗಿ ಕಲ್ಪನೆಮಾಡಿದಂತಾಗಿ ಪಾಪವೇ ಉಂಟಾಗುವುದರಿಂದ ಯಾವ ವಿವೇಕಿಯೂ ವಿಷ್ಣುವನ್ನು ಬಿಟ್ಟು ಬೇರೆ ಯಾವ ಪರಬ್ರಹ್ಮನನ್ನೂ ಅಂಗೀಕರಿಸುವುದಿಲ್ಲ ಎಂದು ಅಭಿಪ್ರಾಯ.

**ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।**
**ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಂ ॥ ೬೮೨ ॥**

**ಅರ್ಥ–** ನಾರಾಯಣಸಮಂ=ನಾರಾಯಣನಿಗೆ ಸಮವಾದ ವಸ್ತು, ನಾಸ್ತಿ=ಇರುವುದಿಲ್ಲ, ನ ಭೂತಂ=ಹಿಂದೆ ಇದ್ದಿಲ್ಲ, ನ ಭವಿಷ್ಯತಿ=ಮುಂದೆ ಇರುವುದಿಲ್ಲ. ಏತೇನ=ಈ ಯಾವ, ಸತ್ಯವಾಕ್ಯೇನ=ಸತ್ಯದ ವಾಕ್ಯದಿಂದ, ಸರ್ವಾರ್ಥಾನ್=ಎಲ್ಲ ಅರ್ಥಗಳನ್ನೂ ಎಲ್ಲ ಪ್ರಮೇಯಗಳನ್ನೂ, ಅಹಂ=ನಾನು, ಸಾಧಯಾಮಿ=ಸಾಧಿಸುತ್ತೇನೆ.

**ಅನುವಾದ– ನಾರಾಯಣನಿಗೆ ಸಮಾನವಾದ ವಸ್ತುವು (ಜಡವಾಗಲೀ ಅಥವಾ ಚೇತನವಾಗಲೀ) ನಾಸ್ತಿ= ಈಗ ಇಲ್ಲ, ಹಿಂದೆ ಇರಲಿಲ್ಲ ಮತ್ತು ಮುಂದೆ ಬರುವುದಿಲ್ಲ. ಈ ಒಂದು ಸತ್ಯವಾಕ್ಯದ ಆಧಾರದಿಂದ ನಾನು ಶಾಸ್ತ್ರದ ಎಲ್ಲಾ ಪ್ರಮೇಯಗಳನ್ನೂ ಸಾಧಿಸುತ್ತೇನೆ.**

**ವಿವರಣೆ–** ಇನ್ನು ಈ ಪ್ರಕರಣದಿಂದ ವಿಷ್ಣುವೇ ಸರ್ವೋತ್ತಮನೆಂದು, ಅವನೇ ಪರಬ್ರಹ್ಮನೆಂದು ಅವನಿಗಿಂತ ಅತಿರಿಕ್ತವಾದ ಬ್ರಹ್ಮನು ಇಲ್ಲವೆಂದು ಭಾರತವಾಕ್ಯಗಳನ್ನು ಉದಾಹರಿಸಿ ಸಮರ್ಥನೆ ಮಾಡುತ್ತಾರೆ. 'ನಾಸ್ತಿ ನಾರಾಯಣ ಸಮಂ' ಎಂಬ ಎಂದು ಶ್ಲೋಕದಿಂದ ಆರಂಭಿಸಿ, 'ನ ದೈವಂ ಕೇಶವಾತ್ ಪರಂ' ಈ ಶ್ಲೋಕದವರೆಗೆ ಉದಾಹರಿಸಿದ ವಾಕ್ಯಗಳೆಲ್ಲವೂ ಭಾರತವಾಕ್ಯಗಳು ಎಂದು ತಿಳಿಯಬೇಕು.

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೬೮೩ ॥**

**ಅರ್ಥ–** ಲೋಕೇ=ಲೋಕದಲ್ಲಿ ಕ್ಷರಃ ಚ=ಕ್ಷರವೆಂದು, ಅಕ್ಷರ ಏವ ಚ=ಅಕ್ಷರವೆಂದೂ, ಇಮೌ ದ್ವೌ= ಈ ಎರಡು ರೀತಿಯ, ಪುರುಷೌ=ಪುರುಷರು (ಚೇತನರು) ಇರುವರು. ಸರ್ವಾಣಿ=ಎಲ್ಲಾ ಭೂತಾನಿ - ಪ್ರಾಣಿಗಳು, ಕ್ಷರಃ=ಕ್ಷರವೆಂದು, ಕೂಟಸ್ಥಃ=ನಾಶವಿಲ್ಲದ್ದರಿಂದ ನಿತ್ಯಮುಕ್ತಳಾದ ಲಕ್ಷ್ಮೀದೇವಿಯು, ಅಕ್ಷರಃ=ಅಕ್ಷರಳೆಂದು, ಉಚ್ಯತೇ=ಹೇಳಲ್ಪಡುತ್ತದೆ.

**ಅನುವಾದ–** ಲೋಕದಲ್ಲಿ ಕ್ಷರ ಮತ್ತು ಅಕ್ಷರರೆಂಬ ಎರಡು ವಿಧದ ಪುರುಷರಿದ್ದಾರೆ. ಬ್ರಹ್ಮಾದಿಸಮಸ್ತಜೀವರು ಶರೀರನಾಶವಿರುವ ಪ್ರಯುಕ್ತ ಕ್ಷರರೆನಿಸುತ್ತಾರೆ. ಲಕ್ಷ್ಮೀದೇವಿಯು ಶರೀರನಾಶವಿಲ್ಲದ ಪ್ರಯುಕ್ತ ಅಕ್ಷರಳೆನಿಸುತ್ತಾಳೆ.

**ಭಾವವಿಲಾಸಿನೀ–** ಅಧುನಾ ವಿಷ್ಣೋರೇವ ಸರ್ವೋತ್ತಮಬ್ರಹ್ಮತ್ವೇ ತದತಿರಿಕ್ತಬ್ರಹ್ಮಾಭಾವೇ ಚ ಭಾರತವಾಕ್ಯಾನಿ ಪ್ರಮಾಣಯತಿ ॥ 'ನಾಸ್ತಿ ನಾರಾಯಣಸಮಮ್' ಇತ್ಯಾರಭ್ಯ 'ನ ದೈವಂ ಕೇಶವಾತ್ ಪರಮ್' ಇತ್ಯಂತೇನ । ವಶೇ ಅವರ್ತತೇತಿ ಪದಚ್ಛೇದಃ । ನಾರಾಯಣಸಮಂ ನ ಭೂತಂ ನಾಸ್ತಿ ನ ಭವಿಷ್ಯತೀತ್ಯನೇನ ತಸ್ಯೈವ ಪರಬ್ರಹ್ಮತ್ವಂ ತತೋಽತಿರಿಕ್ತಪರಬ್ರಹ್ಮಾಭಾವಶ್ಚ ಸಿದ್ಧ್ಯತಿ ॥ ೬೮೨-೬೮೩॥

**ವಿವರಣೆ–** ಲಕ್ಷ್ಮೀದೇವಿಗೆ ಸಮಸ್ತಕ್ಷರ ಪುರುಷವರ್ಗಕ್ಕಿಂತ ಅತ್ಯಧಿಕ ಸಾಮರ್ಥ್ಯ-ವಿರುವುದರಿಂದ ಶಾಸ್ತ್ರದಲ್ಲಿ ಅವಳು ಪುಲ್ಲಿಂಗಶಬ್ದವಾದ ಪುರುಷಶಬ್ದದಿಂದಲೂ ಕರೆಯಲ್ಪಡುತ್ತಾಳೆ.

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೬೮೪ ॥**

**ಅರ್ಥ–** ಅನ್ಯಃ=ಕ್ಷರಾಕ್ಷರಚೇತನಗಳಿಂದ ಭಿನ್ನನಾದವನು, ಉತ್ತಮಃ ಪುರುಷಃ= ಉತ್ತಮನಾಗಿರುವ ಪುರುಷನು, ಪರಮಾತ್ಮಾ ಇತಿ=ಪರಮಾತ್ಮನೆಂದು, ಉದಾಹೃತಃ= ಹೇಳಲ್ಪಡುವವನಾಗಿದ್ದಾನೆ. ಯಃ=ಆ ಯಾವ ಪರಮಾತ್ಮನು, ಲೋಕತ್ರಯಂ= ಮೂರುಲೋಕಗಳನ್ನು ಆವಿಶ್ಯ= ಪ್ರವೇಶಿಸಿ, ಅವ್ಯಯಃ= ನಾಶರಹಿತನಾಗಿ, ಈಶ್ವರಃ=ಒಡೆಯನಾಗಿ, ಬಿಭರ್ತಿ= ಧರಿಸಿರುವನು.

**ಅನುವಾದ–** ಕ್ಷರಾಕ್ಷರಪುರುಷರಿಂದ ಭಿನ್ನನಾದ ಉತ್ತಮಚೇತನನಾದ ಪರಮಾತ್ಮನಿರುವನು. ಈ ಪರಮಾತ್ಮನು ತಾನು ನಾಶರಹಿತನಾಗಿ ಈ ಮೂರು ಲೋಕಗಳನ್ನೂ ಧರಿಸಿರುತ್ತಾನೆ.

**ವಿವರಣೆ–** ಎಲ್ಲ ಪುರುಷರನ್ನೂ ಕ್ಷರ ಮತ್ತು ಅಕ್ಷರ ಎಂದು ವಿಭಾಗ ಮಾಡಿ, ಕೃಷ್ಣನನ್ನು ಅವರಿಗಿಂತ ಉತ್ತಮನೆಂದು ಮತ್ತು ಪರಮಾತ್ಮನೆಂದು ನಿರ್ದೇಶನ ಮಾಡಿರುವುದರಿಂದ, ವಿಷ್ಣುವೇ ಪರಬ್ರಹ್ಮ. ಬೇರೆ ಪರಬ್ರಹ್ಮನಿಲ್ಲವೆಂದು ಸಿದ್ಧವಾಗುತ್ತದೆ. ಇದ್ದಿದ್ದರೆ ಕ್ಷರ, ಅಕ್ಷರ, ಪುರುಷ ಮತ್ತು ಆ ಇನ್ನೊಂದು ವಸ್ತುವೆಂದು ನಾಲ್ಕು ವಿಧವಾಗಿ ಪುರುಷನನ್ನು ನಿರ್ದೇಶನ ಮಾಡಬೇಕಾದಿದ್ದೀತು.

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ೬೮೫ ॥**

**ಅರ್ಥ–** ಯಸ್ಮಾತ್=ಯಾವ ಕಾರಣದಿಂದ, ಅಹಂ=ನಾನು, ಕ್ಷರಂ ಅತೀತಃ= ಕ್ಷರಪುರುಷರನ್ನು, ಅತಿಕ್ರಮಿಸಿರುವೆನೋ, ಅಕ್ಷರಾದಪಿ=ಅಕ್ಷರಳಾದ ಲಕ್ಷ್ಮೀಗಿಂತಲೂ, ಉತ್ತಮಃ= ಮಿಗಿಲಾಗಿರುವೆನೋ, ಅತಃ= ಆದ್ದರಿಂದ, ಲೋಕೇ=ಪೌರುಷೇಯ ಆಗಮದಲ್ಲಿಯೂ, ವೇದೇ ಚ=ವೇದದಲ್ಲಿಯೂ ಕೂಡ, ಪುರುಷೋತ್ತಮಃ =ಪುರುಷೋತ್ತಮನೆಂದು, ಪ್ರಥಿತಃ=ಪ್ರಸಿದ್ಧನಾಗಿರುವೆನು.

**ಅನುವಾದ–** ಯಾವ ಕಾರಣದಿಂದ ನಾನು ಕ್ಷರಪುರುಷರನ್ನು ಮತ್ತು ಅಕ್ಷರ ಪುರುಷರನ್ನು ಮೀರಿದವನಾಗಿ ಅವರಿಗಿಂತ ಶ್ರೇಷ್ಠನಾಗಿದ್ದೇನೆಯೋ, ಆ ಕಾರಣದಿಂದ ವೇದಗಳಲ್ಲಿಯೂ, ಪೌರುಷೇಯ ಗ್ರಂಥಗಳಲ್ಲಿಯೂ ನಾನು ಪುರುಷೋತ್ತಮ-ನೆಂದು ಪ್ರಸಿದ್ಧನಾಗಿದ್ದೇನೆ.

**ಭಾವವಿಲಾಸಿನೀ–** ಅನ್ಯಃ ಕ್ಷರಾಕ್ಷರಾಭ್ಯಾಮ್ ಅತ್ರಾಪಿ ಲೌಕಿಕಾಲೌಕಿಕಪುರುಷಾಣಾಂ ಕ್ಷರಾಕ್ಷರೋತ್ತಮಪುರುಷತಯಾ ವಿಭಾಗಾತ್ 'ಯಸ್ಮಾತ್ ಕ್ಷರಮತೀತೋಽಹಮ್' ಇತ್ಯುಕ್ತೋತ್ತಮಪುರುಷಸ್ಯ ಸ್ವಸ್ಯ ಕೃಷ್ಣಸ್ಯ ಪರಮಾತ್ಮತಯಾ ನಿರ್ದೇಶಾಚ್ಚ ವಿಷ್ಣೋರೇವ ಪರಬ್ರಹ್ಮತ್ವಂ ತದನ್ಯಪರಬ್ರಹ್ಮಾಭಾವಶ್ಚ ಸಿದ್ಧ್ಯತಿ । ಅಸ್ತಿ ಚೇತ್ ಸೋಽಪಿ ಚತುರ್ಥಪುರುಷತಯಾ ಪರಮಾತ್ಮ-ತಯಾ ವಾ ನಿರ್ದಿಶ್ಯೇತೇತ್ಯತಸ್ಸ ನಾಸ್ತ್ಯೇವೇತಿ ಭಾವಃ ॥ ೬೮೪-೬೮೫ ॥

**ವಿವರಣೆ–** ಕೃಷ್ಣನು ತನ್ನನ್ನು ತಾನೇ ಪುರುಷೋತ್ತಮನೆಂದು ಹೇಳುವುದರಿಂದ, ಕೃಷ್ಣನಿಗಿಂತ ಅತಿರಿಕ್ತವಾದ ಅದ್ವೈತಿಗಳು ಶ್ರೇಷ್ಠನೆಂದು ಒಪ್ಪುವ ಒಬ್ಬ ನಿರ್ಗುಣಬ್ರಹ್ಮನು ಅಪ್ರಾಮಾಣಿಕನೆಂದು ತಿಳಿಯುತ್ತದೆ.

**ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೬೮೬ ॥**

**ಅರ್ಥ–** ಧನಂಜಯ=ಎಲೈ ಅರ್ಜುನನೇ, ಮತ್ತಃ=ನನಗಿಂತ, ಪರತರಂ=ಉತ್ತಮ ವಸ್ತು, ಅನ್ಯತ್ ಕಿಂಚಿತ್=ಬೇರಾವುದೂ, ನ=ಇರುವುದಿಲ್ಲ. ಮಯಿ=ನನ್ನಲ್ಲಿ, ಇದಂ ಸರ್ವಂ =ಈ ಜಗತ್ತೆಲ್ಲಾ, ಸೂತ್ರೇ=ದಾರದಲ್ಲಿ, ಮಣಿಗಣಾ ಇವ=ಮುತ್ತಿನ ಸಮೂಹಗಳಂತೆ, ಪ್ರೋತಂ=ಪೋಣಿಸಲ್ಪಟ್ಟಿದೆ.

**ಅನುವಾದ–** ಎಲೈ ಅರ್ಜುನನೇ! ನನಗಿಂತ ಉತ್ತಮವಾದ ವಸ್ತುವು ಲೋಕದಲ್ಲಿ ಯಾವುದೂ ಇಲ್ಲ. ರತ್ನಮಣಿಗಳು ದಾರದಲ್ಲಿ ಪೋಣಿಸಲ್ಪಟ್ಟಂತೆ, ಎಲ್ಲ ಪ್ರಪಂಚವು ನನ್ನನ್ನು ಆಶ್ರಯಿಸಿದೆ.

**ವಿವರಣೆ–** 'ಮತ್ತಃ ಪರತರಂ ನಾಸ್ತಿ' ಎಂದು ಹೇಳಿರುವುದರಿಂದ, ವಿಷ್ಣುವಿಗಿಂತ ಭಿನ್ನನಾದ ಪರಬ್ರಹ್ಮನು ಇಲ್ಲವೆಂದು ಈ ವಾಕ್ಯದಿಂದಲೂ ಸಿದ್ಧವಾಗುತ್ತದೆ.

**ಸಸುರಾಸುರಗಂಧರ್ವಂ ಸಯಕ್ಷೋರಗರಾಕ್ಷಸಮ್ ।**
**ಜಗದ್ವಶೇ ವರ್ತತೇದಂ ಕೃಷ್ಣಸ್ಯ ಸಚರಾಚರಮ್ ॥ ೬೮೭ ॥**

**ಅರ್ಥ–** ಸಸುರಾಸುರಗಂಧರ್ವಂ=ದೇವ ದಾನವ ಗಂಧರ್ವರಿಂದ ಸಹಿತವಾದ, ಸಯಕ್ಷೋರಗರಾಕ್ಷಸಂ=ಯಕ್ಷ ಉರಗ, ರಾಕ್ಷಸರಿಂದ ಸಹಿತವಾದ, ಸಚರಾಚರಂ= ಚರಾಚರಾತ್ಮಕವಸ್ತುಸಹಿತವಾದ, ಇದಂ ಜಗತ್=ಈ ಜಗತ್ತು, ಕೃಷ್ಣಸ್ಯ=ಶ್ರೀಕೃಷ್ಣನ, ವಶೇ= ವಶದಲ್ಲಿ, ವರ್ತತೇ=ಇರುತ್ತದೆ.

**ಅನುವಾದ– ದೇವತೆಗಳು, ಅಸುರರು, ಗಂಧರ್ವರು, ಯಕ್ಷರು, ನಾಗರು, ರಾಕ್ಷಸರು ಇವರೆಲ್ಲರಿಂದ ಸಹಿತವಾದ ಚರಾಚರಾತ್ಮಕಜಗತ್ತು ಶ್ರೀಕೃಷ್ಣನ ಅಧೀನದಲ್ಲಿ ಇದೆ.**

**ಭಾವವಿಲಾಸಿನೀ–** 'ಮತ್ತಃ ಪರತರಂ ನಾಸ್ತಿ' ಇತ್ಯತ್ರ ವಿಷ್ಣೋರನ್ಯಪರಬ್ರಹ್ಮಾಭಾವಃ ಸ್ಪಷ್ಟ ಏವ ॥ ೬೮೬-೬೮೭ ॥

**ವಿವರಣೆ–** ಈ ಶ್ಲೋಕವು ವಿಷ್ಣು ಸಹಸ್ರನಾಮದ ಸಂದರ್ಭದಲ್ಲಿ ಬಂದಿದೆ. ಸಮಸ್ತವಾದ ಜಗತ್ತು ನನ್ನ ವಶ ಎಂದು ಕೃಷ್ಣನು ಹೇಳಿದ ಮೇಲೆ, ಕೃಷ್ಣನಿಗಿಂತ ಭಿನ್ನನಾದ ಇನ್ನೊಬ್ಬ ಬ್ರಹ್ಮನು ಇಲ್ಲವೆಂದು ಸಿದ್ಧವಾಗುತ್ತದೆ.

**ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ ।**
**ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ ॥ ೬೮೮ ॥**

**ಅರ್ಥ–** ದೇವಾಃ=ದೇವತೆಗಳು, ರುದ್ರಂ=ರುದ್ರನನ್ನು ಸಮಾಶ್ರಿತಾಃ= ಆಶ್ರಯಿಸಿರವವರು. ರುದ್ರಃ=ರುದ್ರನು, ಬ್ರಹ್ಮಾಣಂ=ಬ್ರಹ್ಮನನ್ನು ಆಶ್ರಿತಃ= ಆಶ್ರಯಿಸಿರುವನು. ಬ್ರಹ್ಮಾ =ಚತುರ್ಮುಖಬ್ರಹ್ಮನು, ಮಾಂ=ನನ್ನನ್ನು ಆಶ್ರಿತಃ= ಆಶ್ರಯಿಸಿರುವನು. ಅಹಂ=ನಾನು, ನಿತ್ಯಂ=ಎಂದೂ, ಕಂಚಿತ್=ಯಾರೊಬ್ಬರನ್ನೂ ಉಪಾಶ್ರಿತಃ= ಆಶ್ರಯಿಸಿರುವವನು, ನ=ಆಗಿರುವುದಿಲ್ಲ.

**ಅನುವಾದ– ಎಲ್ಲಾ ದೇವತೆಗಳು ರುದ್ರನನ್ನು ಆಶ್ರಯಿಸಿರುವರು. ರುದ್ರನು ಚತುರ್ಮುಖ ಬ್ರಹ್ಮನನ್ನು ಆಶ್ರಯಿಸಿರುವನು. ಆ ಬ್ರಹ್ಮನು ನನ್ನನ್ನು ಆಶ್ರಯಿಸಿರುವನು. ನಾನು ಮಾತ್ರ ಯಾರನ್ನೂ ಆಶ್ರಯಿಸಿರುವುದಿಲ್ಲ ಆದ್ದರಿಂದ ನಾನೇ ಸ್ವಂತಂತ್ರನಾದವನು.**

**ಭಾವವಿಲಾಸಿನೀ–'ರುದ್ರಂ ಸಮಾಶ್ರಿತಾ ದೇವಾಃ' ಇತ್ಯತ್ರಾಪಿ ಕೃಷ್ಣೇನ 'ನಾಹಂ ಕಂಚಿದುಪಾಶ್ರಿತಃ' ಇತಿ ಸ್ವಾಶ್ರಯಸ್ಯಾನ್ಯಸ್ಯಾಭಾವಕಥನಾತ್ ತದನ್ಯಪರಬ್ರಹ್ಮಾಭಾವಃ ಅತಿಸ್ಪಷ್ಟ ಏವ ॥ ೬೮೮ ॥**

**ವಿವರಣೆ–** ಗೀತೆಯಲ್ಲಿ ಶ್ರೀಕೃಷ್ಣನು 'ರುದ್ರಂ ಸಮಾಶ್ರಿತಾ ದೇವಾಃ' ಮೊದಲಾದ ವಾಕ್ಯಗಳಿಂದ ಉಳಿದ ದೇವತೆಗಳಿಗೆ ಸಾಕ್ಷಾತ್ತಾಗಿ ಅಥವಾ ಪರಂಪರೆಯಿಂದ ತಾನು

ಆಶ್ರಯನಾಗಿದ್ದೇನೆ ಎಂದು ತಿಳಿಸಿ, ತನಗೆ ಬೇರೆ ಯಾರೂ ಆಶ್ರಯನಿಲ್ಲ ಎಂದು ಹೇಳಿರುವುದರಿಂದ, ಕೃಷ್ಣನಿಗಿಂತ ಭಿನ್ನನಾದ ಪರಬ್ರಹ್ಮನು ಇಲ್ಲವೆಂದು ಅತ್ಯಂತ ಸ್ಪಷ್ಟವಾಗಿ ತಿಳಿಯುತ್ತದೆ.

**ಸತ್ಯಂಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।**
**ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಮ್ ॥ ೬೮೯ ॥**

**ಇತಿ ಭಾರತವಾಕ್ಯಾನಿ ಸ್ಪಷ್ಟೀಕುರ್ವಂತಿ ತಂ ಪ್ರಭುಮ್ ॥ ೬೯೦ ॥**

**ಅರ್ಥ–** ವೇದಶಾಸ್ತ್ರಾತ್=ವೇದ ಮತ್ತು ಶಾಸ್ತ್ರಗಳಿಗಿಂತ, ಪರಂ=ಶ್ರೇಷ್ಠವಾದ, ಶಾಸ್ತ್ರವು ನಾಸ್ತಿ=ಇರುವುದಿಲ್ಲ, ಕೇಶವಾತ್=ಕೇಶವನಿಗಿಂತ, ಪರಂ=ಉತ್ತಮವಾದ, ದೈವಂ=ದೈವವು, ನ=ಇಲ್ಲ, ಸತ್ಯಂ=ಸತ್ಯವು, ಸತ್ಯಂ=ಸತ್ಯವು, ಪುನಃ ಸತ್ಯಂ=ಮತ್ತೆ ಸತ್ಯವು, ಇತಿ=ಎಂದು, ಭುಜಂ=ಭುಜವನ್ನು, ಉದ್ಧೃತ್ಯ=ಮೇಲೆತ್ತಿ, ಉಚ್ಯತೇ=ಹೇಳಲ್ಪಡುತ್ತದೆ.

**ಅನುವಾದ–** ಅಪೌರುಷೇಯವಾದ ವೇದ ಹಾಗೂ ಬ್ರಹ್ಮಮೀಮಾಂಸಾದಿ-ಶಾಸ್ತ್ರಗಳಿಗಿಂತ ಉತ್ತಮವಾದ ಶಾಸ್ತ್ರ ಬೇರೆ ಇಲ್ಲ, ಕೇಶವಶಬ್ದವಾಚ್ಯನಾದ ಭಗವಂತನಿಗಿಂತ ಉತ್ತಮನಾದ ಬೇರೊಬ್ಬ ದೇವನಿಲ್ಲ ಎಂಬ ವಿಷಯವನ್ನು ಕೈ ಎತ್ತಿ ಪುನಃ ಪುನಃ ತ್ರಿವಾರ ಸತ್ಯವೆಂದು ಹೇಳುತ್ತೇನೆ. ಇಂತಹ ಭಾರತವಾಕ್ಯಗಳು ಶ್ರೀಕೃಷ್ಣನೇ ಉತ್ತಮೋತ್ತಮನು ಎಂದು ಸ್ಪಷ್ಟಪಡಿಸುತ್ತವೆ.

**ಭಾವವಿಲಾಸಿನೀ–** 'ಸತ್ಯಂ ಸತ್ಯಮ್' ಇತ್ಯತ್ರ ತು 'ನ ದೈವಂ ಕೇಶವಾತ್ ಪರಮ್' ಇತಿ ಕೇಶವಾದನ್ಯಪರಬ್ರಹ್ಮಾಭಾವೋಽತಿಸ್ಪಷ್ಟಃ ॥ ೬೮೯-೬೯೦ ॥

**ವಿವರಣೆ–** ಈ ಭಾರತವಾಕ್ಯದಲ್ಲಂತೂ, 'ನ ದೈವಂ ಕೇಶವಾತ್ ಪರಂ' ಎಂದೂ ಕೇಶವನಿಗಿಂತ ಭಿನ್ನನಾದ ಮತ್ತು ಉತ್ತಮನಾದ ಇನ್ನೊಂದು ದೈವವಿಲ್ಲವೆಂದು ಹೇಳುವುದರಿಂದ, ಕೃಷ್ಣನಿಗಿಂತ ಭಿನ್ನವಾದ ಪರಬ್ರಹ್ಮನು ಇಲ್ಲವೆಂಬುದು ಅತೀ ಸ್ಪಷ್ಟವಾಗಿ ತಿಳಿಯುತ್ತದೆ.

**ಉಪಕ್ರಮ್ಯಾಖಿಲೇಶತ್ವಂ ಪುರಾ ನಾರಾಯಣಸ್ಯ ಯತ್ ।**
**ಮಧ್ಯೇಭ್ಯಸ್ತಂ ತದೇವಾಂತೇಽಪ್ಯುಪಸಂಜಹ್ರುರಂಜಸಾ ॥ ೬೯೧ ॥**

**ಅರ್ಥ–** ಪುರಾ=ಮೊದಲು, ಯತ್= ಯಾವ, ನಾರಾಯಣಸ್ಯ=ನಾರಾಯಣನ, ಅಖಿಲೇಶತ್ವಂ=ಸರ್ವೋತ್ತಮತ್ವವನ್ನು ಉಪಕ್ರಮ್ಯ=ಆರಂಭಿಸಿ, ಮಧ್ಯೇ=ಮಧ್ಯದಲ್ಲಿ ಅಭ್ಯಸ್ತಂ=ತಾತ್ಪರ್ಯಪೂರ್ವಕವಾಗಿ ಪುನಃ ಪುನಃ ಹೇಳಿದ. ತದೇವ=ಆ ವಿಷಯವನ್ನೇ, ಅಂತೇ ಅಪಿ=ಕೊನೆಯಲ್ಲಿಯೂ, ಅಂಜಸಾ=ಸ್ಪಷ್ಟವಾಗಿ, ಉಪಸಂಜಹ್ರುಃ=ಉಪಸಂಹಾರ ಮಾಡಿರುವರು.

**ಅನುವಾದ–** ಮಹಾಭಾರತವಾಕ್ಯಗಳು ನಾರಾಯಣನಿಗೆ ಮೊದಲು ಸರ್ವೋತ್ತಮತ್ವವನ್ನು ಹೇಳಿ ಪುನಃ ಮಧ್ಯದಲ್ಲಿ ಅದನ್ನೇ ಹೇಳಿ, ಉಪಸಂಹಾರದಲ್ಲಿ ಕೂಡ ಸ್ಪಷ್ಟವಾಗಿ ನಾರಾಯಣನಿಗೆ ಸರ್ವೋತ್ತಮತ್ವವನ್ನೇ ಹೇಳಿರುತ್ತದೆ.

**ವಿವರಣೆ–** ಮಹಾಭಾರತದ ಆದಿಯಲ್ಲಿ 'ನಾಸ್ತಿ ನಾರಾಯಣಸಮಂ' ಎಂಬ ವಾಕ್ಯವಿದೆ. ಮಧ್ಯದಲ್ಲಿ ಗೀತೆಯಲ್ಲಿಯೂ ಮತ್ತು ಉಳಿದ ಕಡೆಗಳಲ್ಲಿಯೂ 'ಮತ್ತಃ ಪರತರಂ ನಾಸ್ತಿ' ಮುಂತಾದ ವಾಕ್ಯಗಳಿಂದ ಕೃಷ್ಣನೇ ಸರ್ವೋತ್ತಮನೆಂದು ಹೇಳಿದೆ. ಕೊನೆಯಲ್ಲಿಯೂ ಸಹ 'ನ ದೈವಂ ಕೇಶವಾತ್ ಪರಂ' ಎಂದು ಹೇಳಿ ಕೃಷ್ಣನನ್ನೇ ಸರ್ವೋತ್ತಮನೆಂದು ಹೇಳಿದೆ. ಹೀಗೆ ಉಪಕ್ರಮ, ಅಭ್ಯಾಸ ಮತ್ತು ಉಪಸಂಹಾರಗಳು ಇರುವುದರಿಂದ ಮಹಾಭಾರತಗ್ರಂಥದಿಂದ ಕೃಷ್ಣನೇ ಸರ್ವೋತ್ತಮನೆಂದೂ, ಕೃಷ್ಣನಿಗಿಂತ ಭಿನ್ನವಾದ ಒಂದು ಬ್ರಹ್ಮವಸ್ತುವಿಲ್ಲವೆಂದೂ ಸ್ಪಷ್ಟವಾಗಿ ತಿಳಿಯುತ್ತದೆ.

ತಸ್ಮಾದ್ ಭಾರತವಾಕ್ಯಾನಾಂ ಲಕ್ಷಮೈಕಾರ್ಥ್ಯಸಿದ್ಧಯೇ ।
ವಿಷ್ಣೋರತ್ಯುತ್ತಮತ್ವಾಖ್ಯಮರ್ಥಮಾಹೇತಿ ಸಿಧ್ಯತಿ ॥೬೨॥

**ಅರ್ಥ–** ತಸ್ಮಾತ್=ಆದ್ದರಿಂದ, (ಆದಿ ಮಧ್ಯ ಅಂತ್ಯದಲ್ಲಿ ಹೇಳಲ್ಪಟ್ಟ ವಿಷಯಕ್ಕೆ ಏಕಾರ್ಥಪರತ್ವವು ಅವಶ್ಯಕವಾದ್ದರಿಂದ) ಭಾರತವಾಕ್ಯಾನಾಂ=ಭಾರತವಾಕ್ಯಗಳ, ಲಕ್ಷಂ= ಲಕ್ಷವೂ (ಲಕ್ಷಸಂಖ್ಯಾಕ ಭಾರತವಾಕ್ಯಗಳು), ಐಕ್ಯಾರ್ಥಸಿದ್ಧಯೇ= ಏಕಾರ್ಥಸಿದ್ಧಿಗಾಗಿ, ವಿಷ್ಣೋಃ=ವಿಷ್ಣುವಿಗೆ, ಅತ್ಯುತ್ತಮತ್ವಾಖ್ಯಂ=ಸರ್ವೋತ್ತಮತ್ವ ಎಂಬ, ಅರ್ಥಂ= ಅರ್ಥವನ್ನು, ಆಹ ಇತಿ=ಹೇಳಿತೆಂದು, ಸಿಧ್ಯತಿ=ಸಿದ್ಧಿಸುತ್ತದೆ.

**ಅನುವಾದ–** ಭಾರತವಾಕ್ಯಗಳು ಆರಂಭದಲ್ಲಿ ನಾರಾಯಣನಿಗೆ ಸರ್ವೋತ್ತಮತ್ವವನ್ನು ತಿಳಿಸಿ, ಅದನ್ನೇ ಮಧ್ಯದಲ್ಲಿ ಪುನಃ ಪುನಃ ನಿರೂಪಿಸಿ ಉಪಸಂಹಾರದಲ್ಲಿ ಕೂಡ ಅದನ್ನೇ ಹೇಳಿರುತ್ತದೆ. ಆದ್ದರಿಂದ ಲಕ್ಷಸಂಖ್ಯಾಕ ಭಾರತವಾಕ್ಯಗಳು ನಾರಾಯಣನಿಗೇ ಸರ್ವೋತ್ತಮತ್ವವನ್ನು ಹೇಳುತ್ತವೆ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಯದ್ ಯಸ್ಮಾತ್ । ತಸ್ಮಾದಾದಿಮಧ್ಯಾವಸಾನಾನಾಮೇಕಾರ್ಥಪರತ್ವಸ್ಯಾವಶ್ಯಕತ್ವಾತ್ ॥ ೬೧-೬೨ ॥

**ವಿವರಣೆ–** ಭಾರತದಲ್ಲಿ ಒಂದು ಲಕ್ಷ ಶ್ಲೋಕಗಳಿವೆ. ಮೇಲೆ ಹೇಳಿದ ಯುಕ್ತಿಯಿಂದ ಆ ಎಲ್ಲಾ ಶ್ಲೋಕಗಳಿಗೂ ಏಕವಾಕ್ಯತ್ವವೂ ಇದೆ. ಆ ಏಕವಾಕ್ಯತ್ವವೆಂದರೆ ವಿಷ್ಣುವೇ ಸರ್ವೋತ್ತಮನೆಂದು ಹೇಳುವುದರಲ್ಲಿ ತಾತ್ಪರ್ಯವನ್ನು ಹೊಂದಿರುವುದು. ಆದ್ದರಿಂದ ನಾರಾಯಣನೇ ಸರ್ವೋತ್ತಮನೆಂದು ಮಹಾಭಾರತದ ಸಾರವಾಗಿ ತಿಳಿದುಬರುತ್ತದೆ.

ನಾರಾಯಣಪರಾ ವೇದಾ ನಾರಾಯಣಪರಾ ಮಖಾಃ ।
ನಾರಾಯಣಪರಾ ಯೋಗಾ ನಾರಾಯಣಪರಾಃ ಕ್ರಿಯಾಃ ॥ ೬೩ ॥

ನಾರಾಯಣಪರಂ ಜ್ಞಾನಂ ನಾರಾಯಣಪರಂ ತಪಃ ।
ನಾರಾಯಣಪರೋ ಧರ್ಮೋ ನಾರಾಯಣಪರಾ ಗತಿಃ ॥ ೬೪ ॥

**ಅರ್ಥ–** ವೇದಾಃ=ಎಲ್ಲಾ ವೇದಗಳು, ನಾರಾಯಣಪರಾಃ= ಶ್ರೀಮನ್ನಾರಾಯಣನಲ್ಲಿಯೇ ಮಹಾತಾತ್ಪರ್ಯವುಳ್ಳವು. ಮಖಾಃ= ಯಾಗ, ಸಂಧ್ಯಾವಂದನೆ, ತಪೋದಾನಾದಿಧರ್ಮಗಳು, ನಾರಾಯಣಪರಾಃ= ಶ್ರೀಮನ್ನಾರಾಯಣನ ಉದ್ದೇಶವಾಗಿಯೇ ಇರುವಂತಹವು, ಯೋಗಾಃ= ಶ್ರವಣಾದಿಯೋಗಮಾರ್ಗಗಳು, ನಾರಾಯಣಪರಾಃ= ಶ್ರೀಮನ್ನಾರಾಯಣನಲ್ಲಿಯೇ ಮಹಾತಾತ್ಪರ್ಯವುಳ್ಳವುಗಳು. ಕ್ರಿಯಾಃ= ಎಲ್ಲ ಸತ್ಕರ್ಮಗಳು, ನಾರಾಯಣಪರಾಃ= ಶ್ರೀಮನ್ನಾರಾಯಣನಲ್ಲಿಯೇ ತಾತ್ಪರ್ಯವುಳ್ಳವುಗಳು. (ನಾರಾಯಣನ ಪ್ರೀತಿಯನ್ನೇ ಉದ್ದೇಶಿಸಿ ಇರುವಂತಹವು).

**ಅನುವಾದ–** ನಾರಾಯಣನೇ ಎಲ್ಲ ವೇದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಎಲ್ಲ ಯಜ್ಞತಪೋದಾನಾದಿಧರ್ಮಗಳೂ ಕೂಡ ನಾರಾಯಣನ ಉದ್ದೇಶವಾಗಿಯೇ ವೇದಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಎಲ್ಲ ಕರ್ಮಗಳೂ ನಾರಾಯಣನಪ್ರೀತಿಗೆ ಕಾರಣವಾಗಿರುತ್ತವೆ.

**ಭಾವವಿಲಾಸಿನೀ–** ಭಾಗವತವಾಕ್ಯೈರಪಿ ವಿಷ್ಣೋರೇವ ಪರಬ್ರಹ್ಮತಾಂ ತತೋಽನ್ಯ-ಪರಬ್ರಹ್ಮಾಭಾವಂ ಚ ಸಾಧಯತಿನಾರಾಯಣಪರಾ ವೇದಾ ಇತ್ಯಾದಿನಾ ॥ ನಾರಾಯಣಪರಾಃ ನಾರಾಯಣ ಏವ ಮಹಾತಾತ್ಪರ್ಯವಂತಃ । ನನು ವೇದೇಷು ಕ್ವಚಿತ್ಕ್ವಚಿದ್ ಯಜ್ಞಯೋಗ-ಸಂಧ್ಯಾವಂದನಾದಿಕ್ರಿಯಾಜ್ಞಾನತಪೋದಾನಾದಿಧರ್ಮಮೋಕ್ಷಾದಯಶ್ಚ ಪ್ರತಿಪಾದ್ಯಂತೇ । ಅತಃ ಕಥಂ 'ನಾರಾಯಣಪರಾ ವೇದಾಃ' ಇತ್ಯುಚ್ಯತ ಇತ್ಯಾಶಂಕ್ಯ ತೇಷಾಂ ವಿಷ್ಣುಮುದ್ದಿಶ್ಯ ಕ್ರಿಯಮಾಣತ್ವೇನ ತತ್ಪ್ರತಿಪಾದನಮಪಿ ಪರಮ್ಪರಯಾ ವಿಷ್ಣುಪ್ರತಿಪಾದನಮೇವೇತಿ ಭಾವೇನಾಹ– **ನಾರಾಯಣಪರಾ ಮಖಾ** ಇತ್ಯಾದಿನಾ ॥ ವೇದಾದೇವ ಹಿ ಪರಬ್ರಹ್ಮಸಿದ್ಧಿಃ । ತಸ್ಯ ಚ ನಾರಾಯಣೈಕಪರತ್ವೇ ತಸ್ಯೈವ ಪರಬ್ರಹ್ಮತ್ವಸಿದ್ಧಿಃ ॥ ೬೩-೬೪ ॥

**ವಿವರಣೆ–** ಭಾಗವತವಾಕ್ಯಗಳಿಂದಲೂ ನಾರಾಯಣನೇ ಪರಬ್ರಹ್ಮನೆಂದು, ನಾರಾಯಣನನ್ನು ಬಿಟ್ಟು ಬೇರೆ ಯಾವ ಬ್ರಹ್ಮನಿಲ್ಲವೆಂದು ಸಮರ್ಥನೆ ಮಾಡುತ್ತಾರೆ. ಎಲ್ಲ ವೇದಗಳಿಗೂ ನಾರಾಯಣನಲ್ಲಿಯೇ ತಾತ್ಪರ್ಯವಿದೆ. ಯಾಗ-ಯಜ್ಞಾದಿಗಳನ್ನು ಪ್ರತಿಪಾದನೆ ಮಾಡಿದರೂ, ಅದು ವಿಷ್ಣುವಿನ ಪ್ರೀತಿಯನ್ನು ಉದ್ದೇಶಿಸಿಯೇ ಪ್ರತಿಪಾದನೆ ಮಾಡುವುದರಿಂದ, ಯಾಗ-ಯಜ್ಞಾದಿಗಳಲ್ಲಿ ಅವಾಂತರ ತಾತ್ಪರ್ಯವಿದ್ದರೂ, ವೇದಗಳಿಗೆ ವಿಷ್ಣುವಿನಲ್ಲಿಯೇ ಮಹಾತಾತ್ಪರ್ಯ. ಪರಬ್ರಹ್ಮಸಿದ್ಧಿಯೂ ವೇದಗಳಿಂದಲೇ ಆಗಬೇಕು. 'ನಾರಾಯಣಪರಾ ವೇದಾಃ' ಎಂದು ಎಲ್ಲ ವೇದಗಳೂ ನಾರಾಯಣನಲ್ಲಿಯೇ ತಾತ್ಪರ್ಯವುಳ್ಳವು ಎಂದು ಹೇಳಿದ್ದರಿಂದ, ನಾರಾಯಣನೇ ಪರಬ್ರಹ್ಮನೆಂದು ಸಿದ್ಧನಾಗುತ್ತಾನೆ.

**ಸೃಜಾಮಿ ತನ್ನಿಯುಕ್ತೋऽಹಂ ಹರೋ ಹರತಿ ತದ್ವಶಃ ।**
**ವಿಶ್ವಂ ಪುರುಷರೂಪೇಣ ಪರಿಪಾತಿ ತ್ರಿಶಕ್ತಿಧೃ(ಭೃ)ತ್ ॥ ೬೯೫ ॥**

**ಅರ್ಥ–** ತನ್ನಿಯುಕ್ತಃ= ಆ ನಾರಾಯಣನಿಂದ ನಿಯುಕ್ತನಾಗಿ, ಅಹಂ= ನಾನು, ಸೃಜಾಮಿ= ಜಗತ್ತಿನ ಸೃಷ್ಟಿಯನ್ನು ಮಾಡುತ್ತೇನೆ, ಹರಃ= ಹರನು, ತದ್ವಶಃ= ವಿಷ್ಣುವಿಗೆ ಅಧೀನನಾಗಿ, ಹರತಿ= ಸಂಹಾರವನ್ನು ಮಾಡುತ್ತಾನೆ, ತ್ರಿಶಕ್ತಿಧೃತ್= ಸೃಷ್ಟಿ, ಸ್ಥಿತಿ ಮತ್ತು ಸಂಹಾರ ಶಕ್ತಿಗಳನ್ನು ಹೊಂದಿದ ವಿಷ್ಣುವು, ಪುರುಷರೂಪೇಣ= ಪುರುಷ ರೂಪದಿಂದ, ವಿಶ್ವಂ= ಜಗತ್ತನ್ನು, ಪರಿಪಾತಿ= ಪಾಲನೆ ಮಾಡುತ್ತಾನೆ.

**ಅನುವಾದ–** ನಾನು ವಿಷ್ಣುವಿಗೆ ಅಧೀನನಾಗಿ ಸೃಷ್ಟಿಯನ್ನು ಮಾಡುತ್ತೇನೆ. ಈಶ್ವರನು ವಿಷ್ಣುವಿಗೆ ಅಧೀನನಾಗಿ ಸಂಹಾರ ಮಾಡುತ್ತಾನೆ. ಸೃಷ್ಟಿಸ್ಥಿತಿಸಂಹಾರ ಶಕ್ತಿಯನ್ನು ಹೊಂದಿದ ವಿಷ್ಣುವು, ಪುರುಷರೂಪದಿಂದ ಎಲ್ಲ ಜಗತ್ತನ್ನು ಪಾಲನೆ ಮಾಡುತ್ತಾನೆ.

**ಭಾವವಿಲಾಸಿನೀ–** ಸೃಜಾಮೀತ್ಯೇತಚ್ಚತುರ್ಮುಖಸ್ಯ ವಾಕ್ಯಮ್ । ಪುರುಷರೂಪೇಣ ವಿಷ್ಣುರೂಪೇಣ। ತ್ರಿಶಕ್ತಿಭೃತ್ ಸೃಷ್ಟಿಸ್ಥಿತಿಸಂಹಾರಾಖ್ಯಶಕ್ತಿತ್ರಯಧಾರಕಃ । ಅತ್ರ ದೈವಶ್ರೇಷ್ಠಯೋರ್ಬ್ರಹ್ಮ ರುದ್ರಯೋರ್ವಿಷ್ಣ್ವಧೀನತ್ವಶ್ರವಣಾತ್ ಸಿದ್ಧಾ ವಿಷ್ಣೋರೇವ ಸರ್ವೋತ್ತಮತಾ ॥ ೬೯೫ ॥

**ವಿವರಣೆ–** ಇದು ಬ್ರಹ್ಮದೇವರ ವಾಕ್ಯ. ಈ ವಾಕ್ಯದಲ್ಲಿ ಬ್ರಹ್ಮದೇವರು ಸ್ಪಷ್ಟವಾಗಿ ತಾನು ಮತ್ತು ರುದ್ರದೇವರು ವಿಷ್ಣುವಿನ ಅಧೀನ ಎಂದು ಹೇಳುತ್ತಾರೆ. ಆದ್ದರಿಂದ ವಿಷ್ಣುವಿಗೇ ಸರ್ವೋತ್ತಮತ್ವ ಸಿದ್ಧವಾಗುತ್ತದೆ. 'ಹರೋ ಹರತಿ ತದ್ವಶಃ' ಎಂಬಲ್ಲಿ 'ಮದ್ವಶಃ' ಎಂಬ ಪಾಠವೂ ಇದೆ. ಆಗ ರುದ್ರನು ನನಗೆ ಅಧೀನನಾಗಿ ಸಂಹಾರ ಮಾಡುತ್ತಾನೆ ಎಂಬ ಅರ್ಥವು ದೊರೆತು, ಬ್ರಹ್ಮ-ರುದ್ರರ ತಾರತಮ್ಯವೂ ತಿಳಿಯುತ್ತದೆ.

**ಸ ಏವ ಭಗವಾನ್ ಲಿಂಗೈಸ್ತ್ರಿಭಿರೇತೈರಧೋಕ್ಷಜಃ ।**
**ಸ್ವಲಕ್ಷಿತಗತಿರ್ಬ್ರಹ್ಮನ್ ಸರ್ವೇಷಾಂ ಮಮ ಚೇಶ್ವರಃ ॥ ೬೯೬ ॥**

**ಅರ್ಥ–** ಬ್ರಹ್ಮನ್= ಎಲೈ ನಾರದರೇ!, ಏತೈಃ= ಪೂರ್ವೋಕ್ತ, ತ್ರಿಭಿರ್ಲಿಂಗೈಃ = ಸೃಷ್ಟಿಸ್ಥಿತಿಸಂಹಾರ ಲಿಂಗಗಳಿಂದ, ಸ್ವಲಕ್ಷಿತಗತಿಃ= ಲಕ್ಷಿಸಲ್ಪಟ್ಟ ಸ್ವರೂಪವುಳ್ಳ, ಭಗವಾನ್= ಷಡ್ಗುಣೈಶ್ವರ್ಯಸಂಪನ್ನನಾದ, ಸ ಅಧೋಕ್ಷಜ ಏವ= ಆ ಅಧೋಕ್ಷಜನೇ, ಸರ್ವೇಷಾಂ= ಎಲ್ಲರಿಗೂ, ಮಮ ಚ= ಮತ್ತು ನನಗೂ, ಈಶ್ವರಃ= ಪ್ರಭುವಾದವನು.

**ಅನುವಾದ–** ಎಲೈ ನಾರದರೇ! ಸೃಷ್ಟಿಸ್ಥಿತಿಸಂಹಾರಕಾರಣತ್ವರೂಪವಾದ ತನ್ನ ಸ್ವಲಕ್ಷಣಗಳಿಂದ ಲಕ್ಷಿತನಾದ ಪೂರ್ಣಷಡ್ಗುಣೈಶ್ವರ್ಯಸಂಪನ್ನನಾದ ಈ ಅಧೋಕ್ಷಜನೇ ಎಲ್ಲ ಜೀವರಿಗೂ ಮತ್ತು ನನಗೂ ಪ್ರಭುವಾದವನು.

**ಭಾವವಿಲಾಸಿನೀ–** ಲಿಂಗೈಃ ಸೃಷ್ಟ್ಯಾದಿವ್ಯಾಪಾರರೂಪಲಿಂಗೈಃ । ಸ್ವಲಕ್ಷಿತಗತಿಃ ಸೃಷ್ಟಿಕರ್ತೃತ್ವಾದಿಸ್ವರೂಪಭೂತಲಕ್ಷಣೈರ್ಲಕ್ಷಿತಸ್ವರೂಪಃ । ಬ್ರಹ್ಮನ್ನಾರದೇತಿ ನಾರದಂ ಪ್ರತಿ ಚತುರ್ಮುಖಸ್ಯ ವಚನಮ್ । ಸ್ಪಷ್ಟ್ಯತ್ರ ಸರ್ವೇಶ್ವರತಾ ವಿಷ್ಣೋಃ ॥ ೬೯೬ ॥

**ವಿವರಣೆ–** ಇಲ್ಲಿ ಬ್ರಹ್ಮದೇವರು ಎಲ್ಲ ಜೀವರಿಗೂ ಮತ್ತು ನನಗೂ ಎಂದು ಹೇಳಿದ ಮೇಲೆ, ಇಲ್ಲಿ ಇನ್ನಾವ ಚೇತನ ವಸ್ತುವೂ ಉಳಿದಿಲ್ಲ. ಎಲ್ಲರಿಗೂ ಪ್ರಭುವಾದವನು ಅಧೋಕ್ಷಜನೇ ಎಂದು ಹೇಳಿ ವಿಷ್ಣುವೇ ಸರ್ವೋತ್ತಮನೆಂದು ಪ್ರತಿಪಾದನೆ ಮಾಡುತ್ತಾರೆ.

**ತಮುಪಾಗತಮಾಲಕ್ಷ್ಯ ಸರ್ವೇ ಸುರಗಣಾದಯಃ ।**
**ಪ್ರಣೇಮುಃ ಸಹಸೋತ್ಥಾಯ ಬ್ರಹ್ಮೇಂದ್ರತ್ರ್ಯಕ್ಷನಾಯಕಾಃ ॥ ೬೯೭ ॥**

**ತತ್ತೇಜಸಾ ಹತರುಚಃ ಸನ್ನಜಿಹ್ವಾಃ ಸಸಾಧ್ವಸಾಃ ।**
**ಮೂರ್ಧ್ನ್ಯಧೃತಾಂಜಲಿಪುಟಾ ಉಪತಸ್ಥುರಧೋಕ್ಷಜಮ್ ॥ ೬೯೮ ॥**

**ಅಪ್ಯರ್ವಾಗ್ವೃತ್ತಯೋ ಯಸ್ಯ ಮಹಿತ್ವೇ ಸ್ವಭುವಾದಯಃ ।**
**ಯಥಾಮತಿ ಗೃಣಂತಿ ಸ್ಮ ಕೃತಾನುಗ್ರಹವಿಗ್ರಹಮ್ ॥ ೬೯೯ ॥**

**ಅರ್ಥ–** ತಂ= ಆ ವಿಷ್ಣುವನ್ನು, ಆಲಕ್ಷ್ಯ= ನೋಡಿ, ಬ್ರಹೇಂದ್ರತ್ರ್ಯಕ್ಷನಾಯಕಾಃ= ಬ್ರಹ್ಮ, ರುದ್ರ, ಇಂದ್ರರೇ ನಾಯಕರನ್ನಾಗಿ ಉಳ್ಳ, ಸರ್ವೇ ಸುರಗಣಾದಯಃ= ಎಲ್ಲಾ ದೇವಗಣ ಮುಂತಾದವು, ಸಹಸಾ= ಇದ್ದಕ್ಕಿದ್ದಂತೆ, ಉತ್ಥಾಯ= ಎದ್ದು ಪ್ರಣೇಮುಃ= ನಮಸ್ಕಾರವನ್ನು ಮಾಡಿದರು.

ತತ್ತೇಜಸಾ= ವಿಷ್ಣುವಿನ ತೇಜಸ್ಸಿನಿಂದ, ಹತರುಚಃ= ತಮ್ಮ ಕಾಂತಿಯನ್ನು ಕಳೆದುಕೊಂಡವರಾಗಿ, ಸನ್ನಜಿಹ್ವಾಃ= ನಾಲಿಗೆಯು ಉಡುಗಿಹೋದವರಾಗಿ, ಸಸಾಧ್ವಸಾಃ= ಭಯದಿಂದ ಕೂಡಿದವರಾಗಿ, ಮೂರ್ಧ್ನ್ಯಧೃತಾಂಜಲಿಪುಟಾಃ= ತಲೆಯ ಮೇಲೆ ತಮ್ಮ ಕೈಗಳನ್ನು ಜೋಡಿಸಿ, ಅಧೋಕ್ಷಜಂ= ಅಧೋಕ್ಷಜನನ್ನು, ಉಪತಸ್ಥುಃ= ಸ್ತೋತ್ರ ಮಾಡಿದರು.

ಸ್ವಭುವಾದಯಃ= ಚತುರ್ಮುಖಬ್ರಹ್ಮಮೊದಲಾದವರು, ಮಹಿತ್ವೇ= ಮಹಿಮೆಯ ವಿಷಯದಲ್ಲಿ, ಯಸ್ಯ= ಯಾವ ನಾರಾಯಣನಿಗೆ, ಅರ್ವಾಗ್ವೃತ್ತಯಃ ಅಪಿ= ಕೆಳಗೆ ಇರುವವರಾದರೂ, ಕೃತಾನುಗ್ರಹವಿಗ್ರಹಂ= ಭಕ್ತರ ಮೇಲೆ ಅನುಗ್ರಹ ಮಾಡಲು ಅಭಿವ್ಯಕ್ತನಾದ ಆ ನಾರಾಯಣನನ್ನು, ಯಥಾಮತಿ= ತಮ್ಮ ತಮ್ಮ ಬುದ್ಧಿಗೆ ಸಾಧ್ಯವಾದಷ್ಟು, ಗೃಣಂತಿ ಸ್ಮ= ಸ್ತೋತ್ರ ಮಾಡಿದರು.

**ಅನುವಾದ–** ದಕ್ಷಪ್ರಜಾಪತಿಯು ನಡೆಸುತ್ತಿದ್ದ ಯಜ್ಞದಲ್ಲಿ ಕಲಹಶಮನಕ್ಕಾಗಿ ನಾರಾಯಣನು ಸಾಕ್ಷಾತ್ತಾಗಿ ಬಂದುದನ್ನು ನೋಡಿ, ಬ್ರಹ್ಮ, ರುದ್ರೇಂದ್ರರೇ

ನಾಯಕರಾಗಿ ಉಳ್ಳ, ದೇವಗಣ, ಋಷಿಗಣ ಮೊದಲಾದವರೆಲ್ಲರೂ ಇದ್ದಕ್ಕಿದ್ದಂತೆ ಎದ್ದು ನಮಸ್ಕಾರವನ್ನು ಮಾಡಿದರು.

ನಾರಾಯಣನ ಕಾಂತಿಯ ಮುಂದೆ ಅವರು ಕಾಂತಿಹೀನರಾಗಿ ನಾಲಿಗೆಯು ಉಡುಗಿಹೋಗಿ, ಭಯದಿಂದ ಕೂಡಿದವರಾಗಿ, ತಲೆಯ ಮೇಲೆ ಕೈಗಳನ್ನು ಜೋಡಿಸಿ ಅಧೋಕ್ಷಜನನ್ನು ಸ್ತೋತ್ರ ಮಾಡಿದರು.

ಬ್ರಹ್ಮಾದಿ ದೇವತೆಗಳು ಮಹಿಮೆಯ ವಿಷಯದಲ್ಲಿ ನಾರಾಯಣನಿಗಿಂತ ಯಾವಾಗಲೂ ಕೆಳಗೇ ಇರುವವರಾದರೂ, ಭಕ್ತರ ಮೇಲಿನ ಅನುಗ್ರಹಬುದ್ಧಿಯಿಂದ ಅಲ್ಲಿ ಅಭಿವ್ಯಕ್ತನಾದ ಅಧೋಕ್ಷಜನನ್ನು ತಮ್ಮ ತಮ್ಮ ಬುದ್ಧಿಗೆ ನಿಲುಕುವಷ್ಟು ರೀತಿಯಲ್ಲಿ ಸ್ತೋತ್ರವನ್ನು ಮಾಡಿದರು.

**ಭಾವವಿಲಾಸಿನೀ**– ತಂ ದಕ್ಷಾಧ್ವರೇ ಕಲಹಶಮನಾಯೋಪಾಗತಂ ನಾರಾಯಣಮ್ । ತತ್ತೇಜಸಾ ನಾರಾಯಣತೇಜಸಾ ಹತರುಚಃ ತಿರಸ್ಕೃತಕಾನ್ತಿಮಂತಃ । ಸನ್ನಜಿಹ್ವಾಃ ಭಯಾಚ್ಛುಷ್ಕೀಭೂತ-ಜಿಹ್ವಾ । ಸಸಾಧ್ವಸಾಃ ಭಯಸಹಿತಾಃ । ಮೂರ್ಧ್ನ್ಯುದ್ಧೃತಾಂಜಲಿಪುಟಾಃ ಅಧೋಕ್ಷಜಮುಪತಸ್ಥುಃ ಉಪಾಸಾಂಚಕ್ರುಃ । ಕುತಸ್ತೇಷಾಮೇತಾದೃಶೀ ನೀಚಾವಸ್ಥೇತ್ಯತ ಉಕ್ತಮ್ । ಯಸ್ಯ ವಿಷ್ಣೋರ್ಮಹಿತ್ವೇ ಮಹಿಮ್ನಿ ವಿಚಾರ್ಯಮಾಣೇ ಅರ್ವಾಗಧಸ್ತಾದ್ ವೃತ್ತಿರ್ಯೇಷಾಂ ತೇ ತನ್ಮಹಿಮಸದೃಶಮಹಿಮರಹಿತಾ ಇತಿ ಭಾವಃ । ಸ್ವಭುವಾದಯಃ ಸ್ವಯಮ್ಭ್ವಾದಯಃ । ಮುಖ್ಯಸ್ಯ ಸ್ವಭೂತ್ವಸ್ಯ ವಿಷ್ಣ್ವೇಕನಿಷ್ಠತ್ವಾದ್ ಬ್ರಹ್ಮಣ್ಯಸಂಧಿಕರಣಮ್ । ಕೃತೋಽನುಗ್ರಹೋ ಯೇನ ಸ ವಿಗ್ರಹೋ ಯಸ್ಯ ತಮನುಗ್ರಹೇಣ ಪ್ರದರ್ಶಿತವಿಗ್ರಹಮಿತ್ಯರ್ಥಃ । ಯಥಾಮತಿ ಗೃಣನ್ತಿ ಶಕ್ತ್ಯನುಸಾರೇಣ ಸ್ತುವನ್ತಿ । ಸಕಲತನ್ಮಹಿಮ್ನಾಂ ಸ್ತವನೇಽಪಿ ನ ಶಕ್ತಿಸ್ತನ್ಮಹಿಮಪ್ರಾಪ್ತಿಸ್ತು ದೂರಾಪಾಸ್ತೇತಿ ಭಾವಃ ॥ ೬೯೭-೬೯೯ ॥

**ವಿವರಣೆ**– ಇದು ಭಾಗವತದಲ್ಲಿ ಚತುರ್ಥಸ್ಕಂದದಲ್ಲಿ ದಕ್ಷಾಧ್ವರ ಭಂಗವಾದ ಮೇಲೆ, ಪುನಃ ಆ ಯಾಗವನ್ನು ಪೂರ್ಣಗೊಳಿಸುವ ಸಂದರ್ಭದಲ್ಲಿ ಬರುವ ವಾಕ್ಯಗಳು. ಆ ಸಂದರ್ಭದಲ್ಲಿ ನಾರಾಯಣನು ಅಲ್ಲಿ ಪ್ರಾಪ್ತವಾಗಿ ಬರುತ್ತಾನೆ. ಬ್ರಹ್ಮಾದಿ ಎಲ್ಲ ದೇವತೆಗಳು ಅವನಿಗೆ ನಮಸ್ಕಾರ ಮಾಡುತ್ತಾರೆ. ಅವರ ಕಾಂತಿಯು ಹೀನವಾಗುತ್ತದೆ. ನಾಲಿಗೆಯ ಶಕ್ತಿಯು ಹೋಗುತ್ತದೆ. ಭಯದಿಂದ ಕೂಡಿದವರಾಗುತ್ತಾರೆ. ಕೈಗಳನ್ನು ಜೋಡಿಸುತ್ತಾರೆ. ಸ್ತೋತ್ರವನ್ನು ಮಾಡುತ್ತಾರೆ. ಅವರೆಲ್ಲರೂ ನಾರಾಯಣನಿಗಿಂತ ಅಲ್ಪಮಹಿಮೆಯುಳ್ಳವರು. ಅವರು ಯಾರೂ ನಾರಾಯಣನನ್ನು ಸಮಗ್ರವಾಗಿ ಸ್ತೋತ್ರಮಾಡಲಾರರು. ತಮ್ಮ ತಮ್ಮ ಬುದ್ಧಿಯಿದ್ದಷ್ಟು ಮಾತ್ರ ಸ್ತೋತ್ರ ಮಾಡುತ್ತಾರೆ. ಈ ಮೂರು ಶ್ಲೋಕಗಳಲ್ಲಿರುವ ಪ್ರತಿಯೊಂದು ವಿಷಯವೂ ನಾರಾಯಣನು ಬ್ರಹ್ಮಾದಿ ದೇವತೆಗಳಿಗಿಂತ ಶ್ರೇಷ್ಠನೆಂದೂ, ಬ್ರಹ್ಮಾದಿ ದೇವತೆಗಳೆಲ್ಲರೂ ಅವನ ಅಧೀನರೆಂದೂ ತಿಳಿಸುತ್ತದೆ. ಅಂತಹ ನಾರಾಯಣನನ್ನು ಬಿಟ್ಟು ಬೇರೆ ಯಾವ ಪರಬ್ರಹ್ಮನಿದ್ದಾನೆ?

ದೇವಾಸುರಾಣಾಂ ಮಘವಾನ್ ಪ್ರಧಾನಸ್ತಸ್ಯ ಶಂಕರಃ ।
ತಸ್ಯ ಬ್ರಹ್ಮಾ ಪ್ರಭುಸ್ತಸ್ಯ ಸ್ವಯಂ ನಾರಾಯಣಃ ಕಿಲ ।
ದ್ವಿಜಾನಾಂ ದೇವತಾನಾಂ ಚ ಯೋ ದೇವಃ ಸಃ ಸ್ವಯಂ ಕಿಲ ॥ ೭೦೦ ॥

**ಅರ್ಥ–** ದೇವಾಸುರಾಣಾಂ= ದೇವತೆಗಳ ಮತ್ತು ಅಸುರರ ಮಧ್ಯದಲ್ಲಿ, ಮಘವಾನ್= ಇಂದ್ರನು, ಪ್ರಧಾನಃ= ಶ್ರೇಷ್ಠನಾದವನು, ತಸ್ಯ= ಇಂದ್ರನಿಗಿಂತ, ಶಂಕರಃ= ಶಂಕರನು, ಪ್ರಧಾನನಾದವನು, ತಸ್ಯ= ಆ ಶಂಕರಿನಿಗೆ, ಬ್ರಹ್ಮಾ= ಚತುರ್ಮುಖನು, ಪ್ರಭುಃ= ಸ್ವಾಮಿಯಾದವನು, ತಸ್ಯ= ಆ ಚತುರ್ಮುಖನಿಗೆ ನಾರಾಯಣಃ= ನಾರಾಯಣನು, ಸ್ವಯಂ= ತಾನೇ, ಪ್ರಭುಃ ಕಿಲ= ಸ್ವಾಮಿಯಷ್ಟೇ. ದ್ವಿಜಾನಾಂ= ಬ್ರಾಹ್ಮಣರಿಗೂ, ದೇವತಾನಾಂ ಚ= ಮತ್ತು ದೇವತೆಗಳಿಗೂ, ಯಃ= ಯಾವನು, ದೇವಃ= ಪೂಜ್ಯನಾಗಿ ದೇವನೆನಿಸಿಕೊಳ್ಳುತ್ತಾನೆಯೋ, ಸಃ= ಅವನು, ಸ್ವಯಂ ಕಿಲ= ನಾರಾಯಣನು ತಾನೇ ಅಷ್ಟೇ?

**ಅನುವಾದ–** ದೇವಾಸುರರಲ್ಲಿ ಇಂದ್ರನು ಶ್ರೇಷ್ಠನಾದವನು. ಇಂದ್ರನಿಗಿಂತ ರುದ್ರನು ಶ್ರೇಷ್ಠನಾದವನು. ಚತುರ್ಮುಖನು ರುದ್ರನಿಗೆ ಪ್ರಭು. ಚತುರ್ಮುಖನಿಗೆ ಸ್ವಯಂ ನಾರಾಯಣನೇ ಪ್ರಭು. ಇದು ಪ್ರಸಿದ್ಧವಾದುದು. ಬ್ರಾಹ್ಮಣರಿಗೂ ಮತ್ತು ದೇವತೆಗಳಿಗೂ ಯಾವನು ದೇವನೆಂದು ಕರೆಸಿಕೊಳ್ಳಲ್ಪಡುತ್ತಾನೆಯೋ ಅವನು ನಾರಾಯಣನೇ ಅಷ್ಟೇ?

**ಭಾವವಿಲಾಸಿನೀ–** ದೇವಾಸುರಾಣಾಮಿತ್ಯನೇನ 'ದೇವಾಸುರಾಣಾಂ ಮಘವಾನ್ ಪ್ರಧಾನೋ ದಕ್ಷಾದಯೋ ಬ್ರಹ್ಮಸುತಾಶ್ಚ ತೇಷಾಮ್ । ಭವಃ ಪರಃ ಸೋಽಥ ವಿರಿಂಚವೀರ್ಯಃ ಸ ಮತ್ಪರೋಽಹಂ ದ್ವಿಜದೇವದೇವಃ ॥' ಇತಿ ಪಂಚಮಸ್ಕಂಧಸ್ಥವೃಷಭವಚನಮರ್ಥತಃ ಸಂಗೃಹ್ಣಾತಿ । ಅರ್ಥಸ್ತು ದೇವಾಸುರಾಣಾಂ ಚಂದ್ರಸೂರ್ಯಾದಿದೇವಾ ನಾಮ ಸುರಾಣಾಂ ಚ ಮಘವಾನಿಂದ್ರಃ ಪ್ರಧಾನಃ । ದಕ್ಷಾದಯೋ ಬ್ರಹ್ಮಸುತಾಶ್ಚ ಪ್ರಧಾನಾಃ । ಇಂದ್ರಸ್ಯ ಸರ್ವಜ್ಯೇಷ್ಠತ್ವಾತ್ ಪ್ರಥಮತೋ ಗ್ರಹಣಮ್ । ತೇಷಾಂ ದಕ್ಷಾದೀನಾಮಿಂದ್ರಸ್ಯ ಚ ಭವೋ ರುದ್ರಃ ಪರಃ ಪ್ರಧಾನಃ । ಸ ಭವಃ ವಿರಿಂಚವೀರ್ಯಃ ವಿರಿಂಚಸ್ಯ ವೀರ್ಯಂ ಜನಕಂ ಯಸ್ಯ ಸ ಇತಿ ವಿರಿಂಚವೀರ್ಯಃ ವಿರಿಂಚಪುತ್ರ ಇತ್ಯರ್ಥಃ । ರುದ್ರಾದ್ ವಿರಿಂಚಃ ಪ್ರಧಾನ ಇತಿ ಭಾವಃ । ಸ ವಿರಿಂಚಃ ಅಹಂ ಪರೋ ಯಸ್ಯೇತಿ ಮತ್ಪರಃ । ವಿರಿಂಚಾದಪ್ಯಹಮೇವ ಸರ್ವೋತ್ತಮ ಇತ್ಯರ್ಥಃ । ಅತ್ರಾಪಿ ದೇವತಾತಾರತಮ್ಯಕಥನಪೂರ್ವಕಂ ವಿಷ್ಣೋಸ್ಸರ್ವೋತ್ತಮತ್ವಂ ಕಥ್ಯತೇ । ಮೂಲಸ್ಥದ್ವಿಜದೇವದೇವಪದಸ್ಯಾರ್ಥಮಾಹ– ದ್ವಿಜಾನಾಮಿತಿ ॥ ೭೦೦ ॥

**ವಿವರಣೆ–** ಇದು ಭಾಗವತದಲ್ಲಿ ಪಂಚಮ ಸ್ಕಂದದಲ್ಲಿ ಬರುವ ವೃಷಭನಾಮಕ ಪರಮಾತ್ಮನ ವಚನ. ಇದರಲ್ಲಿ ವಿಷ್ಣುವನ್ನು 'ದೇವತಾನಾಂ ಯೋ ದೇವಃ' ಎಂದರೆ

ದೇವದೇವ, ದೇವತೆಗಳಿಗೂ ದೇವನಾದವನು ಎಂದು ಹೇಳಿರುವುದರಿಂದ, ಬ್ರಹ್ಮಾದಿ ದೇವತೆಗಳಿಗಿಂತ ಉತ್ತಮನು, ಆದ್ದರಿಂದ ಸರ್ವೋತ್ತಮನೆಂದು, ಅವನೇ ಪರಬ್ರಹ್ಮನೆಂದು ಸಿದ್ಧವಾಗುತ್ತದೆ.

**ನಿಮಿತ್ತಮಾತ್ರಮೀಶಸ್ಯ ವಿಶ್ವಸರ್ಗನಿರೋಧಯೋಃ ।**
**ಹಿರಣ್ಯಗರ್ಭಃ ಶರ್ವಶ್ಚ ಕಾಲಾಖ್ಯಾರೂಪಿಣಸ್ತವ ॥ ೭೦೧ ॥**

**ಅರ್ಥ–** ಕಾಲಾಖ್ಯಾರೂಪಿಣಃ= ಕಾಲವೆಂಬ ಶ್ರೇಷ್ಠವಾದ ರೂಪವನ್ನು ಧರಿಸಿದ, ಈಶಸ್ಯ= ಪ್ರಭುವಾದ, ತವ= ನೀನು ಮಾಡುವ, ವಿಶ್ವಸರ್ಗನಿರೋಧಯೋಃ= ಜಗತ್ತಿನ ಸೃಷ್ಟಿ ಮತ್ತು ಸಂಹಾರಗಳಲ್ಲಿ, ಹಿರಣ್ಯಗರ್ಭಃ ಶರ್ವಶ್ಚ= ಬ್ರಹ್ಮನೂ ಮತ್ತು ರುದ್ರನೂ, ನಿಮಿತ್ತಮಾತ್ರಂ= ನಿಮಿತ್ತಮಾತ್ರ (ನೆಪಮಾತ್ರ).

**ಅನುವಾದ–** ಕಾಲನಾಮಕನಾದ ಶ್ರೇಷ್ಠವಾದ ರೂಪವನ್ನು ಧರಿಸಿದ ಪ್ರಭುವಾದ ನೀನು ಮಾಡುವ ಜಗತ್ತಿನ ಸೃಷ್ಟಿ, ಸಂಹಾರಗಳಲ್ಲಿ ಬ್ರಹ್ಮ ಮತ್ತು ರುದ್ರರು ಕೇವಲ ನಿಮಿತ್ತರಾದವರು.

**ಭಾವವಿಲಾಸಿನೀ–** ಕಾಲಾಖ್ಯಾರೂಪಿಣಃ ಕಾಲ ಇತ್ಯಾಖ್ಯಾ ರೂಪಂ ಚಾಸ್ಯಾಸ್ತೀತಿ ಕಾಲಾಖ್ಯಾರೂಪೀ। ತಸ್ಯ ತವ । ಇದಂ ಕೃಷ್ಣಂ ಪ್ರತಿ ಭಕ್ತಸ್ಯ ವಚನಮ್ । ಅತ್ರಾಪಿ ವಿಷ್ಣೋಃ ಸರ್ವೋತ್ತಮತಾ ಬ್ರಹ್ಮರುದ್ರಾದೀನಾಂ ಚ ತದಧೀನತಾ ಸ್ಪಷ್ಟಾ ॥ ೭೦೧ ॥

**ವಿವರಣೆ–** ಕೇವಲ ನಿಮಿತ್ತರಾದವರು ಎಂದರೆ ಅತ್ಯಲ್ಪಕರ್ತೃತ್ವವುಳ್ಳವರು ಎಂದು ಅರ್ಥ. ಗೀತೆಯಲ್ಲಿ 'ಮಯ್ಯೆವತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವಸವ್ಯಸಾಚಿನ್'. ಎಲೈ ಅರ್ಜುನನೇ! ನಾನು ಈಗಾಗಲೇ ಅವರನ್ನು ಕೊಂದಿದ್ದೇನೆ. ನೀನು ಕೇವಲ ಬಾಣಪ್ರಯೋಗವನ್ನು ಮಾಡಿ ನಿಮಿತ್ತಮಾತ್ರನಾಗು ಎಂಬ ಈ ವಚನದಲ್ಲಿ ನಿಮಿತ್ತಮಾತ್ರ ಎಂದರೆ ಅತ್ಯಲ್ಪಕರ್ತೃತ್ವವುಳ್ಳವನು ಎಂಬ ಅರ್ಥವು ದೊರೆಯುತ್ತದೆ. ನಾರಾಯಣನೇ ಜಗತ್ತಿನ ಸೃಷ್ಟಿಕರ್ತ ಮತ್ತು ಸಂಹಾರಕರ್ತ, ಬ್ರಹ್ಮರುದ್ರರು ಅವನ ಅಧೀನರಾದ ಅಲ್ಪಕರ್ತೃಗಳೆಂದು ಹೇಳಿದಾಗ ನಾರಾಯಣನ ಸರ್ವೋತ್ತಮತ್ವವು ಸ್ಪಷ್ಟವಾಗಿ ಸಿದ್ಧವಾಗುತ್ತದೆ.

**ಸರಸ್ವತ್ಯಾಸ್ತಟೇ ರಾಜನ್ ಋಷಯಃ ಸತ್ರಮಾಸತ ।**
**ವಿತರ್ಕಃ ಸಮಭೂತ್ ತೇಷಾಂ ತ್ರಿಷ್ವಧೀಶೇಷು ಕೋ ಮಹಾನ್ ॥ ೭೦೨ ॥**

**ಅರ್ಥ–** ರಾಜನ್= ಪರೀಕ್ಷಿತ್ ರಾಜನೇ, ಸರಸ್ವತ್ಯಾಸ್ತಟೇ= ಸರಸ್ವತೀ ನದಿಯ ತೀರದಲ್ಲಿ, ಋಷಯಃ= ಋಷಿಗಳು, ಸತ್ರಂ= ಸತ್ರಯಾಗದಲ್ಲಿ, ಆಸತ= ಭಾಗವಹಿಸಿದರು, ತೇಷಾಂ=

ಅವರಿಗೆ, ತ್ರಿಷ್ವಧೀಶೇಷು= ಅಧೀಶ್ವರರಾದ ಬ್ರಹ್ಮವಿಷ್ಣುರುದ್ರರಲ್ಲಿ, ಕಃ= ಯಾರು, ಮಹಾನ್= ಶ್ರೇಷ್ಠನಾದವನು ಎಂದು, ವಿತರ್ಕಃ= ಜಿಜ್ಞಾಸೆಯು, ಸಮಭೂತ್= ಉಂಟಾಯಿತು.

**ಅನುವಾದ–** ರಾಜನೇ, ಸರಸ್ವತಿಯ ದಡದಲ್ಲಿ ಋಷಿಗಳು ಸತ್ರಯಾಗವನ್ನು ಮಾಡಿದರು. ಅವರಿಗೆ ಅಧೀಶ್ವರರಾದ ಬ್ರಹ್ಮ-ವಿಷ್ಣು-ಮಹೇಶ್ವರ ಈ ಮೂವರಲ್ಲಿ ಯಾರು ಶ್ರೇಷ್ಠನಾದವನು ಎಂಬ ವಿಚಾರವು ಉಂಟಾಯಿತು.

**ಭಾವವಿಲಾಸಿನೀ–** ತ್ರಿಷ್ವಧೀಶೇಷು ವಿಷ್ಣುಬ್ರಹ್ಮರುದ್ರೇಷು ಮಹಾನ್ ಶ್ರೇಷ್ಠಃ ಕ ಇತಿ ವಿತರ್ಕೋ ವಿಚಾರಃ। ಸರ್ವೇಷು ತ್ರಯಾಣಾಮಧೀಶ್ವರತ್ವಕಥನೇನ ತೇಷ್ವಪ್ಯೇಕಸ್ಯ ಮಹತ್ತ್ವಪ್ರಶ್ನೇನ ಚ ಸರ್ವೈಕ್ಯಂ ತ್ರಿದೇವತೈಕ್ಯಂ ತ್ರಿದೇವತಾಸಾಮ್ಯಂ ಚ ಗರ್ಭಸ್ರಾವೇಣ ಗತಮ್ ॥ ೭೦೨॥

**ವಿವರಣೆ–** ಬ್ರಹ್ಮವಿಷ್ಣುಮಹೇಶ್ವರ ಈ ಮೂವರು ಅಧೀಶ್ವರರೆಂದು ಹೇಳಿರುವುದರಿಂದ, ಉಳಿದ ಎಲ್ಲಾ ದೇವರಿಗಿಂತಲೂ ಶೇಷ್ಠರಾದವರು ಎಂದು ಉಲ್ಲೇಖವಿದೆ. ಅವರಲ್ಲಿಯೂ ಯಾರು ಶ್ರೇಷ್ಠರು ಎಂದು ವಿಚಾರಮಾಡಿರುವುದರಿಂದ, ಬ್ರಹ್ಮ ವಿಷ್ಣು ಮಹೇಶ್ವರರಿಗೆ ಐಕ್ಯವಿಲ್ಲವೆಂದು ಸಿದ್ಧವಾಗುತ್ತದೆ.

**ತಚ್ಛ್ರುತ್ವಾ ಮನಯಃ ಸರ್ವೇ ವಿಸ್ಮಿತಾ ಮುಕ್ತಸಂಶಯಾಃ ।**
**ಭೂಯಾಂಸಂ ಶ್ರದ್ದಧುರ್ವಿಷ್ಣುಂ ಯತಃ ಶಾಂತಿರ್ಯಶೋಽಭಯಂ**
**॥ ೭೦೩ ॥**

**ಅರ್ಥ–** ತಚ್ಛ್ರುತ್ವಾ= ಭೃಗುವಿನ ಆ ಮಾತನ್ನು ಕೇಳಿ, ಸರ್ವೇ ಮುನಯಃ= ಎಲ್ಲ ಋಷಿಗಳೂ, ವಿಸ್ಮಿತಾಃ= ವಿಸ್ಮಯಗೊಂಡವರಾಗಿ, ಮುಕ್ತಸಂಶಯಾಃ= ಸಂಶಯದಿಂದ ಮುಕ್ತರಾದವರಾಗಿ, ಯತಃ= ಯಾವನಿಂದ, ಶಾಂತಿಃ= ಸುಖವು, ಯತಃ=ಯಾವನಿಂದ, ಅಭಯಂ= ಆತ್ಯಂತಿಕದುಃಖನಿವೃತ್ತಿಯು ಉಂಟಾಗುವುದೋ, ಅಂತಹ, ವಿಷ್ಣುಂ= ವಿಷ್ಣುವನ್ನು, ಭೂಯಾಂಸಂ= ಶ್ರೇಷ್ಠನೆಂದು, ಶ್ರದ್ದಧುಃ= ತಿಳಿದು ಶ್ರದ್ಧೆಯನ್ನು ಮಾಡಿದರು.

**ಅನುವಾದ–** ಭೃಗುಗಳ ಮಾತಿನಿಂದ ಬ್ರಹ್ಮ ಮತ್ತು ಶಿವರಿಗೆ ಅಜ್ಞಾನನಿಮಿತ್ತವಾದ ಕೋಪವನ್ನು, ವಿಷ್ಣುವಿಗೆ ಸರ್ವಜ್ಞತ್ವನಿಮಿತ್ತವಾದ ಶಾಂತಿಯನ್ನು ತಿಳಿದು, ಶ್ರದ್ಧಾಪೂರ್ವಕವಾಗಿ ವಿಷ್ಣುವನ್ನೇ ಸರ್ವೋತ್ತಮನೆಂದು ತಿಳಿದರು. ನಿಶ್ಚಯಿಸಿದರು ಎಂದು ಹೇಳಲು ಶ್ರದ್ದಧುಃ ಎಂದು ಹೇಳಿರುವುದರಿಂದ ವಿಷ್ಣುವಿನಿಂದಲೇ ಮೋಕ್ಷಾದಿಫಲವು ದೊರಕುವುದು ಎಂದು ಸೂಚಿಸಿ ಉಕ್ತಾರ್ಥದಲ್ಲಿ ಮಹಾಫಲವಿರುವುದರಿಂದ ಈ ವಿಷ್ಣುಸರ್ವೋತ್ತಮತ್ವದಲ್ಲಿ ಮಹಾತಾತ್ಪರ್ಯವಿದೆ ಎಂದು ಸೂಚಿಸಿದ್ದಾರೆ.

ಇತ್ಯಾದ್ಯನಂತವಾಕ್ಯಾನಿ ಸಂತಿ ಭಾಗವತೇ ಸ್ಫುಟಂ ।
ಸರ್ವೋತ್ತಮಪರಬ್ರಹ್ಮಭಾವೇ ನಾರಾಯಣಸ್ಯ ಹಿ ॥ ೭೦೪ ॥

**ಅರ್ಥ–** ಭಾಗವತೇ= ಭಾಗವತದಲ್ಲಿ, ಇತ್ಯಾದಿ= ಈ ರೀತಿಯಾಗಿರುವ, ನಾರಾಯಣಸ್ಯ= ನಾರಾಯಣನು, ಸರ್ವೋತ್ತಮಪರಬ್ರಹ್ಮಭಾವೇ= ಸರ್ವೋತ್ತಮನು ಮತ್ತು ಪರಬ್ರಹ್ಮನು ಎಂಬ ವಿಷಯದಲ್ಲಿ, ಸ್ಫುಟಂ= ಸ್ಪಷ್ಟವಾಗಿ, ಅನಂತವಾಕ್ಯಾನಿ= ಅನೇಕ ವಾಕ್ಯಗಳು, ಸಂತಿ ಹಿ= ಇವೆಯಷ್ಟೇ.

**ಅನುವಾದ–** ಹೀಗೆ ಭಾಗವತದಲ್ಲಿ ನಾರಾಯಣನಿಗೆ ಸರ್ವೋತ್ತಮತ್ವವನೂ, ಪರಬ್ರಹ್ಮತ್ವವನೂ ನಿರವಕಾಶವಾಗಿ ಪ್ರತಿಪಾದನೆ ಮಾಡುವ ಅನಂತ ವಾಕ್ಯಗಳು ಇವೆಯಷ್ಟೇ.

**ಭಾವವಿಲಾಸಿನೀ–** ತದ್ ಭೃಗೂಕ್ತಮ್ । ಬ್ರಹ್ಮಶಿವಯೋರಜ್ಞಾನನಿಮಿತ್ತಂ ಕೋಪಂ ವಿಷ್ಣೋಃ ಸರ್ವಜ್ಞತಾನಿಮಿತ್ತಶಾಂತಿಂ ಚ ಶ್ರುತ್ವಾ ಭೂಯಾಂಸಂ ಸರ್ವೋತ್ತಮಂ ಶ್ರದ್ದಧುಃ ಶ್ರದ್ಧಾಪೂರ್ವಕಂ ದಧುಃ । ನಿಶ್ಚಿತವಂತ ಇತ್ಯರ್ಥಃ । ಶ್ರದ್ದಧುರಿತ್ಯನೇನ ಏವಂ ಜ್ಞಾನತ ಏವ ಮೋಕ್ಷಾದಿಫಲಮಸ್ತಿ, ನತ್ವನ್ಯಥೇತಿ ಧ್ವನಿತಮ್ । ಏವಂಚ ಫಲಕಥನಾದುಕ್ತಾರ್ಥೇ ಮಹಾತಾತ್ಪರ್ಯಮಿತಿ ಸೂಚಿತಮ್ ॥ ೭೦೪ ॥

**ವಿವರಣೆ–** ಆದ್ದರಿಂದ, ನಾರಾಯಣನೇ ಸರ್ವೋತ್ತಮ ಮತ್ತು ಪರಬ್ರಹ್ಮ ಎಂದು ಸಿದ್ಧವಾಗುತ್ತದೆ.

ಸಮಸ್ತಧರ್ಮಶೂನ್ಯಂ ತನ್ನಿರ್ಗುಣಂ ಕುತ್ರ ಕಥ್ಯತೇ ॥ ೭೦೫ ॥

**ಅರ್ಥ–** ಸಮಸ್ತಧರ್ಮಶೂನ್ಯಂ= ಸರ್ವಧರ್ಮರಹಿತವಾದ, ನಿರ್ಗುಣಂ= ನಿರ್ಗುಣವಾದ, ತತ್= ಆ ವಸ್ತುವು, ಕುತ್ರ= ಎಲ್ಲಿ, ಕಥ್ಯತೇ= ಹೇಳಲ್ಪಡುತ್ತದೆ?

**ಅನುವಾದ–** ಸರ್ವಧರ್ಮರಹಿತವಾದ ಬ್ರಹ್ಮನು ಎಲ್ಲಿ ಹೇಳಲ್ಪಡುತ್ತಾನೆ?

**ಭಾವವಿಲಾಸಿನೀ–** ತದ್ ಉಕ್ತಾನಾಂ ಭಾಗವತಸ್ಥಾದಿಮಧ್ಯಾಂತವಚನಾನಾಂ ಸರ್ವೇಷಾಂ ಸರ್ವಗುಣಪರಿಪೂರ್ಣಶ್ರೀನಾರಾಯಣಾಖ್ಯಪರಬ್ರಹ್ಮಪ್ರತಿಪಾದಕತ್ವಾತ್ ಸ್ಪಷ್ಟೋಪಕ್ರಮೋಪಸಂಹಾರಾನುಸಾರೇಣೈವಾಸ್ಪಷ್ಟವಚನಾನಾಂ ವ್ಯಾಖ್ಯೇಯತ್ವಾತ್ ಸಮಸ್ತಧರ್ಮಶೂನ್ಯಂ ನಿರ್ಗುಣಂ ಕುತ್ರ ಕಥ್ಯತೇ? ನ ಕುತ್ರಾಪೀತಿ ಭಾವಃ ॥ ೭೦೫॥

**ವಿವರಣೆ–** 'ನಾರಾಯಣಪರಾ ವೇದಾಃ' ಎಂಬುದು ಭಾಗವತದ ಉಪಕ್ರಮದಲ್ಲಿ ಬರುವ ವಾಕ್ಯ. ಗತಮುಪಾತ ಮಾಲಕ್ಷ್ಮ ಮೊದಲಾದ ಶ್ಲೋಕಗಳು ಭಾಗವತದ ಮಧ್ಯದಲ್ಲಿ ಇರುವ ಶ್ಲೋಕಗಳು. ಭೂಯಾಂಸಂಶ್ರುದ್ದಧುಃ ವಿಷ್ಣು ಎಂಬ ಶ್ಲೋಕವು

ಭಾಗವತದ ಕೊನೆಯಲ್ಲಿ ಬರುವ ಶ್ಲೋಕ. ಹೀಗೆ, ಆದಿ, ಮಧ್ಯ ಮತ್ತು ಅಂತ್ಯದಲ್ಲಿ ವಿಷ್ಣುವನ್ನೇ ಸರ್ವೋತ್ತಮನೆಂದೂ, ಪರಬ್ರಹ್ಮನೆಂದೂ ಉಪಪಾದನೆ ಮಾಡಿರುವುದರಿಂದ, ನಿರ್ಗುಣಬ್ರಹ್ಮನು ಎಲ್ಲೂ ಪ್ರತಿಪಾದಿಸಲ್ಪಟ್ಟಿಲ್ಲ.

ಸತ್ಯಂ ಶೌಚಂ ದಯಾ ದಾನಂ ತ್ಯಾಗಃ ಸಂತೋಷ ಆರ್ಜವಂ ।
ಶಮೋ ದಮಸ್ತಪಃ ಸಾಮ್ಯಂ ತಿತಿಕ್ಷೋಪರತಿಃ ಶ್ರುತಂ ॥ ೭೦೬ ॥

ಜ್ಞಾನಂ ವಿರಕ್ತಿರೈಶ್ವರ್ಯಂ ಶೌರ್ಯಂ ತೇಜೋ ಧೃತಿಃ ಸ್ಮೃತಿಃ ।
ಸ್ವಾತಂತ್ರ್ಯಂ ಕೌಶಲಂ ಕಾಂತಿಃ ಸೌಭಗಂ ಮಾರ್ದವಂ ಕ್ಷಮಾ ॥ ೭೦೭ ॥

ಪ್ರಾಗಲ್ಭ್ಯಂ ಪ್ರಶ್ರಯಂ ಶೀಲಂ ಸಹ ಓಜೋ ಬಲಂ ಭಗಃ ।
ಗಾಂಭೀರ್ಯಂ ಸ್ಥೈರ್ಯಮಾಸ್ತಿಕ್ಯಂ ಕೀರ್ತಿರ್ಮಾನೋಽನಹಂಕೃತಿಃ
॥ ೭೦೮ ॥

**ಅರ್ಥ–** ಸತ್ಯಂ= ಸತ್ಯ, ಶೌಚಂ= ಶೌಚವು, ದಯಾ= ದಯೆಯು, ದಾನಂ= ದಾನವು, ತ್ಯಾಗಃ= ತ್ಯಾಗವು, ಸಂತೋಷಃ= ಸಂತೋಷವು, ಆರ್ಜವಂ= ತ್ರಿಕರಣಗಳಲ್ಲಿ ಏಕರೂಪತೆಯು, ಶಮಃ= ಶಾಂತಿಯು, ದಮಃ= ಇಂದ್ರಿಯ ನಿಗ್ರಹವು, ತಪಃ= ತಪಸ್ಸು ಸಾಮ್ಯಂ= ಮನಸ್ಸಿನ ಸಮಾಧಾನವು,ತಿತಿಕ್ಷಾ= ದ್ವಂದ್ವಸಹಿಷ್ಣುತೆ, ಶ್ರುತಂ= ಶಾಸ್ತ್ರಾಭ್ಯಾಸ, ಜ್ಞಾನಂ= ಜ್ಞಾನ, ವಿರಕ್ತಿಃ= ವೈರಾಗ್ಯ, ಐಶ್ವರ್ಯಂ= ಪ್ರಭುತ್ವ, ಶೌರ್ಯಂ= ಪರಾಕ್ರಮ, ತೇಜಃ= ತೇಜಸ್ಸು ಧೃತಿಃ= ಧೈರ್ಯ, ಸ್ಮೃತಿಃ= ಸ್ಮರಣಶಕ್ತಿ, ಸ್ವಾತಂತ್ರ್ಯಂ= ಸ್ವಾತಂತ್ರ್ಯ, ಕೌಶಲಂ= ನಿಪುಣತೆ, ಕಾಂತಿಃ= ಕಾಂತಿ, ಸೌಭಗಂ= ಸೌಂದರ್ಯ, ಮಾರ್ದವಂ= ಮೃದುಭಾವ, ಕ್ಷಮಾ= ಸಹನಶೀಲತೆ, ಪ್ರಾಗಲ್ಭ್ಯಂ= ದೊಡ್ಡಸ್ತಿಕೆ, ಪ್ರಶ್ರಯಂ= ವಿನಯ, ಶೀಲಂ= ನಡತೆ, ಸಹಃ= ಶತ್ರುಗಳನ್ನು ಸಹಿಸುವ ಶಕ್ತಿ, ಓಜಃ= ಶತ್ರುಗಳ ಮೇಲೆ ಎರಗುವ ಶಕ್ತಿ, ಬಲಂ= ಶರೀರದ ಬಲ, ಭಗಃ= ಭಾಗ್ಯ, ಗಾಂಭೀರ್ಯಂ= ಗಂಭೀರತೆ, ಸ್ಥೈರ್ಯಂ= ಸ್ಥಿರತ್ವ, ಆಸ್ತಿಕ್ಯಂ= ಸದ್ಬುದ್ಧಿ ಕೀರ್ತಿಃ= ಯಶಸ್ಸು ಮಾನಃ= ಆತ್ಮಗೌರವ, ಅನಹಂಕೃತಿಃ= ಅಹಂಕಾರ ಶೂನ್ಯತೆ.

**ಭಾವವಿಲಾಸಿನೀ–** ಇದಾನೀಂ ಸ್ಪಷ್ಟಂ ನಾರಾಯಣಸ್ಯ ಗುಣಪೂರ್ಣತಾಪ್ರತಿಪಾದಕಾನಿ ಭಾಗವತವಚನಾನ್ಯಾಹ– **ಸತ್ಯಮಿತ್ಯಾದಿನಾ** ॥ ಅತ್ರ ಸತ್ಯಾದ್ಯಾಃ ಅನಹಂಕೃತ್ಯನ್ತಾಃ ಚತ್ವಾರಿಂಶದ್ಗುಣಾ ವಿಶಿಷ್ಯ ಗೃಹೀತಾಃ ॥ ೭೦೬-೭೦೮ ॥

**ವಿವರಣೆ–** ಇದು ಭಾಗವತ ಪ್ರಥಮ ಸ್ಕಂಧದಲ್ಲಿ ಬರುವ ಭೂದೇವಿಯ ವಾಕ್ಯ. ಇಲ್ಲಿ ಸತ್ಯ ಮೊದಲಾದ ಅನಹಂಕೃತಿಯವರೆಗೂ ಇರುವ 24 ಗುಣಗಳನ್ನು

ನಾರಾಯಣನ ಗುಣಪೂರ್ಣತ್ವಕ್ಕೆ ಸಂಭಾವಕವಾಗಿ ಹೇಳಿ, ನಾರಾಯಣನ ಗುಣಪೂರ್ಣತ್ವವನ್ನು ಸಮರ್ಥನೆ ಮಾಡಿದ್ದಾರೆ.

**ಇಮೇ ಚಾನ್ಯೇ ಚ ಭಗವನ್ ನಿತ್ಯಾ ಯತ್ರ ಮಹಾಗುಣಾಃ ।**
**ಪ್ರಾರ್ಥ್ಯಾ ಮಹತ್ವಮಿಚ್ಛದ್ಭಿರ್ನ ಚ ಯಾಂತಿ ಸ್ಮ ಕರ್ಹಿಚಿತ್ ॥ ೭೦೯ ॥**

**ತೇನಾಹಂ ಗುಣಪಾತ್ರೇಣ ಶ್ರೀನಿವಾಸೇನ ಸಾಂಪ್ರತಂ ।**
**ಶೋಚಾಮಿ ರಹಿತಂ ಲೋಕಂ ಪಾಪ್ಮನಾ ಕಲಿನೇಕ್ಷಿತಂ ॥ ೭೧೦ ॥**

**ಅರ್ಥ–** ಭಗವನ್= ಪೂಜ್ಯನಾದ ಧರ್ಮನೇ, ಯತ್ರ= ಯಾವ ಕೃಷ್ಣನಲ್ಲಿ, ಇಮೇಚ ಅನ್ಯೇಚ= ಇವುಗಳು ಮತ್ತು ಬೇರೆಯವುಗಳಾದ, ಮಹಾಗುಣಾಃ= ಶ್ರೇಷ್ಠವಾದ ಗುಣಗಳು, ಮಹತ್ವಂಮಿಚ್ಛದ್ಭಿಃ=ಮಹತ್ವವನ್ನು ಬಯಸುವುದರಿಂದ, ಪ್ರಾರ್ಥ್ಯಾಃ= ಪ್ರಾರ್ಥಿಸಲ್ಪಡುತ್ತವೆಯೋ, ಕರ್ಹಿಚಿತ್= ಯಾವ ಕಾರಣದಿಂದಲೂ ಕೂಡ, ನಚ ಯಾಂತಿಸ್ಮ= ನಾಶವನ್ನು ಹೊಂದುವುದಿಲ್ಲವೋ ಅಂತಹ, ಗುಣಪಾತ್ರೇಣ= ಗುಣಾಶ್ರಯನಾದ, ಶ್ರೀನಿವಾಸೇನ= ಲಕ್ಷ್ಮೀಪತಿಯಾದ ಕೃಷ್ಣನಿಂದ, ಸಾಂಪ್ರತಂ= ಈಗ, ರಹಿತಂ= ರಹಿತವಾದ, ಪಾಪ್ಮನಾ= ಪಾಪಿಯಾದ, ಕಲಿನಾ= ಕಲಿಯಿಂದ, ಈಕ್ಷಿತಂ= ನೋಡಲ್ಪಟ್ಟ ಲೋಕಂ= ಜನರನ್ನು ನೋಡಿ, ಶೋಚಾಮಿ= ದುಃಖಪಡುತ್ತಿದ್ದೇನೆ.

**ಅನುವಾದ–** ಪೂಜ್ಯನಾದ ಧರ್ಮನೇ, ಮಹತ್ವವನ್ನು ಹೊಂದಲು ಇಚ್ಛಿಸುವವರು ಯಾವ ಗುಣಗಳನ್ನು ಬಯಸುತ್ತಾರೆಯೋ ಮತ್ತು ಯಾವ ಗುಣಗಳು ಯಾವನನ್ನು ಬಿಟ್ಟು ಎಂದೂ ಹೋಗುವುದಿಲ್ಲವೋ ಇಂತಹ ಮತ್ತು ಇನ್ನೂ ಅನೇಕ ಮಹಾಗುಣಗಳು ಯಾವನಲ್ಲಿ ನಿತ್ಯವಾಗಿ ಇರುತ್ತಿವೆಯೋ ಅಂತಹ ಗುಣಪೂರ್ಣನಾದ ಲಕ್ಷ್ಮೀಪತಿಯಾದ ಕೃಷ್ಣನಿಂದ ರಹಿತವಾದ ಪಾಪಿಯಾದ ಕಲಿಯಿಂದ ವೀಕ್ಷಿಸಲ್ಪಟ್ಟ ಲೋಕವನ್ನು ನೋಡಿ ನಾನು ಈಗ ದುಃಖಪಡುತ್ತಿದ್ದೇನೆ.

**ಭಾವವಿಲಾಸಿನೀ–** ಅನ್ಯೇ ಚೇತ್ಯನೇನೈತದತಿರಿಕ್ತಾನಂತಶ್ರುತ್ಯುಕ್ತಕಲ್ಯಾಣಗುಣಾನಾಂ ಸಂಗ್ರಹಃ । ಮಹಾಗುಣಾ ಇತ್ಯನೇನ ತೇಷಾಂ ಪ್ರತ್ಯೇಕಂ ಪೂರ್ಣತ್ವಮಭಿಪ್ರೈತಿ । ನಿತ್ಯಾ ಇತ್ಯನೇನ ಕರ್ಹಿಚಿತ್ ನ ಯಾಂತಿ, ಕದಾಪಿ ನ ಗಚ್ಛಂತೀತ್ಯನೇನ ಚ ಸಾರ್ವಕಾಲೀನತ್ವರೂಪನಿತ್ಯತ್ವಮಭ್ಯಸ್ಯತೇ ॥ ॥ ೭೦೯-೭೧೦ ॥

**ಇತಿ ಭಾಗವತೇ ಸ್ಪಷ್ಟಂ ಧರಾಧರ್ಮಕಥಾಂತರೇ ।**
**ಗುಣಾನಾಂ ನಿತ್ಯತಾಭ್ಯಾಸಾನ್ನಿರ್ಗುಣಂ ಸ್ಯಾತ್ ಕದಾ ವದ ॥೭೧೧ ॥**

**ಅರ್ಥ–** ಇತಿ= ಹೀಗೆ, ಧರಾಧರ್ಮಕತಾಂತರೇ= ಭೂದೇವಿ ಮತ್ತು ಧರ್ಮನ ಸಂವಾದದ ಸಂದರ್ಭದಲ್ಲಿ, ಸ್ಪಷ್ಟಂ= ನಿರವಕಾಶವಾಗಿ, ಭಾಗವತೇ= ಭಾಗವತದಲ್ಲಿ,

ಗುಣಾನಾಂ= ಗುಣಗಳಿಗೆ, ನಿತ್ಯತಾಭ್ಯಾಸಾತ್= ಅಭ್ಯಾಸಪೂರ್ವಕವಾಗಿ ನಿತ್ಯತ್ವವನ್ನು ಹೇಳಿರುವುದರಿಂದ, ಆ ಬ್ರಹ್ಮನು, ಕದಾ= ಯಾವಾಗ, ನಿರ್ಗುಣಂಸ್ಯಾತ್= ನಿರ್ಗುಣನಾಗುತ್ತಾನೆ ಎಂದು, ವದ= ಹೇಳು.

**ಅನುವಾದ–** ಹೀಗೆ, ಭಾಗವತದಲ್ಲಿ ಭೂದೇವಿ ಮತ್ತು ಧರ್ಮನ ಸಂವಾದದ ಸಂದರ್ಭದಲ್ಲಿ ಸ್ಪಷ್ಟವಾಗಿ ಕೃಷ್ಣನ ಗುಣಗಳಿಗೆ ಅಭ್ಯಾಸಪೂರ್ವಕವಾಗಿ ನಿತ್ಯತ್ವವನ್ನು ಹೇಳಿರುವುದರಿಂದ, ಅವನು ಯಾವಾಗ ನಿರ್ಗುಣನಾಗುತ್ತಾನೆ ಎಂದು ಹೇಳು.

**ಭಾವವಿಲಾಸಿನೀ–** ಧರಾಧರ್ಮಕಥಾಂತರೇ ಗೋರೂಪಾಯಾ ಧರಾಯಾಃ ವೃಷಭರೂಪಸ್ಯ ಧರ್ಮಸ್ಯ ಚ ಕಥಾಮಧ್ಯೇ । ನಿತ್ಯತಾಭ್ಯಾಸಾತ್ ನಿತ್ಯತ್ವಸ್ಯ ಪೌನಃಪುನ್ಯೇನ ಕಥನರೂಪಾಭ್ಯಾ-ಸಾನ್ನಿತ್ಯತ್ವೇ ಮಹಾತಾತ್ಪರ್ಯಮವಗಮ್ಯತೇ । ತತಶ್ಚ ನ ನಿತ್ಯತ್ವಮನ್ಯಥೀಕರ್ತುಂ ಶಕ್ಯತೇ । ಅತೋ ಗುಣನಾಶೋತ್ತರಭಾವಿನಿರ್ಗುಣಂ ಕದಾ ಸ್ಯಾದಿತಿ ಸಂಬಂಧಃ ॥ ೭೧೧ ॥

**ವಿವರಣೆ–** ಈ ಶ್ಲೋಕಗಳಲ್ಲಿ ಕೃಷ್ಣನ ಗುಣಗಳು ನಿತ್ಯ ಎಂದು ಹೇಳಿ ಗುಣಗಳಿಗೆ ನಿತ್ಯತ್ವವು ಹೇಳಲ್ಪಟ್ಟಿದೆ. ನ ಚ ಯಾಂತಿ ಸ್ಮ ಎಂಬ ಭಾಗದಿಂದ ಅವು ಎಂದೂ ನಾಶವನ್ನು ಹೊಂದುವುದಿಲ್ಲ ಎಂದೂ ನಿತ್ಯತ್ವವನ್ನು ಹೇಳಲಾಗಿದೆ. ಹೀಗೆ ಅಭ್ಯಾಸಪೂರ್ವಕವಾಗಿ ನಿತ್ಯತ್ವವನ್ನು ಹೇಳಿರುವುದರಿಂದ ಆ ಗುಣಗಳು ಎಂದೂ ನಾಶವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ. ಆದುದರಿಂದ ಸಗುಣನಾದವನು ಎಂದೂ ನಿರ್ಗುಣನಾಗುವುದಿಲ್ಲ

**ಮಹಾಗುಣಾನ್ ಸ್ಥಾಪಯಂತೀ ಮಹೀಯಸಿ ಮಹೀ ಹರೌ ।**
**ಜಡತುಚ್ಛಗುಣಾಭಾವಂ ನೈರ್ಗುಣ್ಯೋಕ್ತೇರ್ಗತಿಂ ದದೌ ॥ ೭೧೨ ॥**

**ಅರ್ಥ–** ಮಹೀ= ಭೂದೇವಿಯು, ಮಹೀಯಸಿ= ಶ್ರೇಷ್ಠನಾದ, ಹರೌ= ಹರಿಯಲ್ಲಿ, ಮಹಾಗುಣಾನ್= ಮಹಾಗುಣಗಳನ್ನು, ಸ್ಥಾಪಯಂತೀ= ಸ್ಥಾಪಿಸುತ್ತಾ, ನೈರ್ಗುಣ್ಯೋಕ್ತೇಃ= ನಿರ್ಗುಣವಾಕ್ಯಗಳಿಗೆ, ಜಡತುಚ್ಛಾಗುಣಾಭಾವಂ= ಜಡವಾದ ಹೇಯವಾದ ಗುಣಗಳ ಅಭಾವವೆಂಬ, ಗತಿಂ= ಮಾರ್ಗವನ್ನು, ದದೌ= ಕೊಟ್ಟಿದೆ (ತೋರಿಸಿದೆ).

**ಅನುವಾದ–** ಭೂದೇವಿಯು ಸರ್ವೋತ್ತಮನಾದ ಹರಿಯಲ್ಲಿ ಮಹಾಗುಣಗಳನ್ನು ಸ್ಥಾಪಿಸುತ್ತಾ, ನಿರ್ಗುಣವಚನಗಳಿಗೆ ಹೇಯವಾದ ಜಡರೂಪವಾದ ಗುಣಗಳ ಅಭಾವವು ಅರ್ಥವೆಂದು ಹೇಳಿ ಆ ವಾಕ್ಯಗಳಿಗೆ ಬೇರೆ ಗತಿಯನ್ನು ಪ್ರದರ್ಶಿಸಿದೆ.

**ಭಾವವಿಲಾಸಿನೀ–** ತರ್ಹಿ ನಿರ್ಗುಣೋಕ್ತೇಃ ಕಾ ಗತಿಃ? ಇತ್ಯಾಶಂಕ್ಯ ಧರಯೈವ ಗತಿ-ರಸೂಚೀತ್ಯಾಹ– ಮಹಾಗುಣಾನಿತಿ ॥ ೭೧೨ ॥

**ವಿವರಣೆ–** ನಿತ್ಯಾ ಯತ್ರ ಮಹಾಗುಣಾಃ ಎಂದು ದೇವರ ಗುಣಗಳಿಗೆ ಮಹಾಗುಣಗಳೆಂದು ಹೇಳಲಾಗಿದೆ. ಮಹಾಗುಣವಿದೆ ಎಂದು ಹೇಳಿದ ಮೇಲೆ,

ಅಲ್ಪಗುಣವಿಲ್ಲ ಎಂದು ಹೇಳಿದಂತಾಯಿತು. ಅಲ್ಪವಾದುದು ಹೇಯವಾದ ಪರಿಮಿತವಾದ, ಪ್ರಾಕೃತವಾದ ಗುಣಗಳು. ಆದ್ದರಿಂದ ಹೇಯವಾದ ಪ್ರಾಕೃತಗುಣಗಳಿಲ್ಲ, ಅಪ್ರಾಕೃತವಾದ ಜ್ಞಾನಾನಂದಾದಿಗುಣಗಳು ಇವೆ ಎಂದು ಸಿದ್ಧವಾಯಿತು. ಅಷ್ಟೇ ಅಲ್ಲದೆ, ಕೇವಲೋ ನಿರ್ಗುಣಶ್ಚ ಇತ್ಯಾದಿ ವಾಕ್ಯಗಳಿಗೆ ಪ್ರಾಕೃತ ಗುಣಶೂನ್ಯ ಎಂದು ಅರ್ಥಮಾಡಬೇಕೆಂದು ಸೂಚನೆ ಮಾಡಿ, ಆ ವಾಕ್ಯಗಳಿಗೆ ಸಾವಕಾಶತ್ವವನ್ನು ಕಲ್ಪನೆ ಮಾಡಿಕೊಟ್ಟಿದೆ.

**ಮಯ್ಯನಂತಗುಣೇऽನಂತೇ ಗುಣತೋऽನಂತವಿಗ್ರಹೇ ।**
**ಯದಾಸೀತ್ ತತ ಏವಾದ್ಯಃ ಸ್ವಯಂಭೂಃ ಸಮಭೂದಜಃ ॥ ೭೧೩ ॥**

**ಇತಿ ಭಾಗವತೇ ಕೃಷ್ಣೋ ನಿಸ್ಸಂಖ್ಯಾನ್ ಸ್ವಗುಣಾನಪಿ ।**
**ಅನಂತಾನಾಹ ದೇಹಾಂಶ್ಚಾಪ್ಯನಂತಾನವತಾರಗಾನ್ ॥ ೭೧೪ ॥**

**ಅರ್ಥ–** ಅನಂತಗುಣೇ= ಅನಂತಗುಣಗಳನ್ನುಳ್ಳ, ಗುಣತೋ ಅನಂತೇ= ಒಂದೊಂದು ಗುಣವೂ ಅನಂತವಾದ, ಅನಂತವಿಗ್ರಹೇ= ಅನಂತ ರೂಪಗಳನ್ನು ಧರಿಸಿದ, ಮಯಿ= ನನ್ನಲ್ಲಿ (ನನ್ನ ನಾಭಿಯಲ್ಲಿ), ಯತ್= ಯಾವ ಪದ್ಮವು, ಆಸೀತ್= ಇದ್ದಿತೋ, ತತ ಏವ= ಆ ಪದ್ಮದಿಂದಲೇ, ಆದ್ಯಃ= ಮೊದಲಿಗನಾದ, ಅಜಃ= ಅಜನೆಂದು ಕರೆಸಲ್ಪಡುವ, ಸ್ವಯಂಭೂಃ= ಬ್ರಹ್ಮನು, ಸಮಭೂತ್= ಜನಿಸಿದನು.

ಇತಿ= ಈ ರೀತಿಯಲ್ಲಿ, ಕೃಷ್ಣಃ= ಕೃಷ್ಣನು, ಭಾಗವತೇ= ಭಾಗವತದಲ್ಲಿ, ಸ್ವಗುಣಾನ್= ತನ್ನ ಗುಣಗಳನ್ನು, ನಿಸ್ಸಂಖ್ಯಾನ್= ಸಂಖ್ಯಾಶೂನ್ಯವೆಂದೂ, ಅನಂತಾನ್ ಅಪಿ= ಒಂದೊಂದೂ ಅನಂತವೆಂದೂ, ಅವತಾರಗಾನ್= ಅವತಾರದಲ್ಲಿರುವ, ದೇಹಾಂಶ್ಚಾಪಿ= ದೇಹಗಳನ್ನೂ ಸಹ, ಅನಂತಾನ್= ಅನಂತಗಳೆಂದೂ, ಆಹ= ಹೇಳಿದ್ದಾನೆ.

**ಅನುವಾದ–** ಸಂಖ್ಯಾಶೂನ್ಯವಾದ ಗುಣಗಳುಳ್ಳ, ಒಂದೊಂದು ಗುಣವೂ ಪರಿಮಿತಿಶೂನ್ಯವಾದ, ಅನಂತರೂಪಗಳನ್ನು ಧರಿಸಿದ ನನ್ನ ನಾಭಿಕಮಲದಿಂದ ಬ್ರಹ್ಮನು ಜನಿಸಿದನು ಎಂದು ಭಾಗವತದಲ್ಲಿ ಕೃಷ್ಣನು ತನ್ನ ಗುಣಗಳಿಗೆ ಸಂಖ್ಯೆಯ ಮಿತಿ ಇಲ್ಲವೆಂದೂ, ಒಂದೊಂದು ಗುಣಕ್ಕೂ ಪರಿಮಿತಿ ಇಲ್ಲವೆಂದೂ, ಮತ್ತು ತನ್ನ ರೂಪಗಳೂ ಅನಂತವೆಂದೂ ಸ್ಪಷ್ಟವಾಗಿ ಹೇಳಿದ್ದಾನೆ.

**ವಿವರಣೆ–** ಈ ಶ್ಲೋಕದಿಂದ ಕೃಷ್ಣನ ಗುಣಗಳು ಒಂದೊಂದೂ ಅನಂತವೆಂದೂ, ಆ ಗುಣಗಳ ಸಮುದಾಯವು ಸಂಖ್ಯಾಶೂನ್ಯವಾದ್ದರಿಂದ ಅದು ಅನಂತವೆಂದೂ, ಕೃಷ್ಣನ ಅವತಾರದಲ್ಲಿ ಸ್ವೀಕರಿಸಿದ ದೇಹಗಳೂ ಅನಂತವೆಂದೂ ಪ್ರತಿಪಾದನೆ ಮಾಡಿದ್ದಾರೆ.

**ದೇಶತಃ ಕಾಲತಶ್ಚೈವ ಗುಣತೋऽಪಿ ಹ್ಯನಂತತಾ ।**

ಅತಸ್ತ್ವನ್ನಿರ್ಗುಣಬ್ರಹ್ಮ ಕಸ್ಮಿನ್ ದೇಶೇ ಕದಾ ಭವೇತ್ ॥ ೭೧೫ ॥

ಸರ್ವೇಭ್ಯೋ ದೇಶಕಾಲೇಭ್ಯಃ ಪ್ರಾಯಸ್ತತ್ ತು ಬಹಿಷ್ಕೃತಂ ।
ಲಜ್ಜಯಾ ಶತಶೃಂಗಸ್ಯ ಮಧ್ಯೇ ಲೀನಮಭೂತ್ ಸದಾ ॥ ೭೧೬ ॥

**ಅರ್ಥ—** ಅನಂತತಾ= ಅನಂತತ್ವವೆಂದರೆ, ದೇಶತಃ= ದೇಶದಿಂದ, ಕಾಲತಶ್ಚೈವ= ಮತ್ತು ಕಾಲದಿಂದ, ಅಪಿ= ಮತ್ತು, ಗುಣತೋऽಪಿ= ಗುಣದಿಂದಲೂ ಕೂಡ ಇರುವುದಷ್ಟೇ. ಅತಃ= ಆದ್ದರಿಂದ, ತ್ವನ್ನಿರ್ಗುಣಬ್ರಹ್ಮ= ನಿನ್ನ ನಿರ್ಗುಣ ಬ್ರಹ್ಮನು, ಕಸ್ಮಿನ್ ದೇಶೇ= ಯಾವ ದೇಶದಲ್ಲಿ ಕದಾ= ಯಾವ ಕಾಲದಲ್ಲಿ ಭವೇತ್= ಇರುತ್ತಾನೆ. ತತ್ತು= ಆ ನಿರ್ಗುಣ ಬ್ರಹ್ಮನಾದರೂ, ಸರ್ವೇಭ್ಯಃ= ಎಲ್ಲಾ ದೇಶಕಾಲೇಭ್ಯಃ= ದೇಶ, ಕಾಲಗಳಿಂದಲೂ, ಪ್ರಾಯಃ= ಪೂರ್ಣವಾಗಿ, ಬಹಿಷ್ಕೃತಂ= ಬಹಿಷ್ಕೃತನಾಗಿ, ಲಜ್ಜಯಾ= ನಾಚಿಕೆಯಿಂದ, ಶಶಶೃಂಗಸ್ಯ ಮಧ್ಯೇ= ಶಶವಿಷಾಣದ ಮಧ್ಯದಲ್ಲಿ, ಸದಾ= ಯಾವಾಗಲೂ, ಲೀನಮಭೂತ್= ಲೀನನಾಗಿ ನಿಂತನು.

**ಅನುವಾದ— ಅನಂತತ್ವ ಎಂದರೆ ದೇಶದಿಂದ ಅನಂತತ್ವ, ಕಾಲದಿಂದ ಅನಂತತ್ವ ಮತ್ತು ಗುಣದಿಂದ ಅನಂತತ್ವ ಎಂದು ಅರ್ಥ. ಆದ್ದರಿಂದ ನಿನ್ನ ನಿರ್ಗುಣ ಬ್ರಹ್ಮನು, ಯಾವ ದೇಶದಲ್ಲಿ ಮತ್ತು ಯಾವ ಕಾಲದಲ್ಲಿ ಇರಲು ಸಾಧ್ಯ? ಎಲ್ಲ ದೇಶಕಾಲಗಳಿಂದಲೂ ಬಹಿಷ್ಕೃತನಾದ ಆ ಬ್ರಹ್ಮನು ನಾಚಿಕೆಯಿಂದ ಯಾವಾಗಲೂ ಶಶವಿಷಾಣದ ಮಧ್ಯೆ ಅಡಗಿ ಕುಳಿತುಕೊಂಡನು.**

**ಭಾವವಿಲಾಸಿನೀ—**ಅಧುನಾ ಗುಣಾನಾಮಸಙ್ಖ್ಯಾತತ್ವರೂಪಾನನ್ತ್ಯಂ ಪ್ರತ್ಯೇಕಂ ಪರಿಪೂರ್ಣತ್ವ-ಲಕ್ಷಣಾನನ್ತ್ಯಂ ಸ್ವದೇಹಾನನ್ತ್ಯಂ ಚ ಸ್ಪಷ್ಟಂ ಪ್ರತಿಪಾದಯತ್ ಸಗುಣಭಗವದ್ವಚನಮಾಹ—**ಮಯ್ಯನಂತಗುಣ ಇತಿ** ॥ ಶಶಶೃಂಗಸ್ಯ ಮಧ್ಯೇ ಲೀನಮಭೂತ್ ಶಶಶೃಂಗಪ್ರಾಯಮಭೂದಿತಿ ಭಾವಃ । ಉತ್ತರಾರ್ಧಸ್ಯ ತ್ವಯಮರ್ಥಃ । ಮಯಿ ಮಮ ದೇಹೇ ಯತ್ಪದ್ಮಮಾಸೀತ್ ತತಃ ಪದ್ಮಾತ್ ಸ್ವಯಂಭೂಃ ಸ್ವಯಮೇವಾಭೂನ್ನತು ಸ್ವೇನ ಸಹಾನ್ಯೋऽಪ್ಯುತ್ಪನ್ನ ಇತಿ ಸ್ವಯಮ್ಭೂಶಬ್ದವಾಚ್ಯಃ ಅಜಃ ಸಮಭೂದಿತಿ ॥ ೭೧೫-೭೧೬ ॥

**ವಿವರಣೆ—** ಬ್ರಹ್ಮನಲ್ಲಿ ದೇಶತಃ ಅನಂತತ್ವವಿದೆ ಎಂದರೆ, ಎಲ್ಲ ದೇಶದಲ್ಲೂ ಇದ್ದಾನೆ ಎಂದು ಅರ್ಥ. ಬ್ರಹ್ಮನು ಇಲ್ಲದಿರುವ ದೇಶವಿಲ್ಲ ಎಂದು ಅರ್ಥ. ಹಾಗೆಯೇ ಕಾಲತಃ ವ್ಯಾಪ್ತ ಎಂದರೆ ಎಲ್ಲ ಕಾಲದಲ್ಲಿಯೂ ಇದ್ದಾನೆ, ಅವನು ಇಲ್ಲದಿರುವ ಕಾಲವಿಲ್ಲ ಎಂದು ಅರ್ಥ. ಗುಣತಃ ಅನಂತತ್ವ ಎಂದರೆ ಅವನಲ್ಲಿ ಎಲ್ಲ ಗುಣಗಳೂ ಇವೆ, ಅವನಲ್ಲಿ ಇಲ್ಲದಿರುವ ಗುಣವಿಲ್ಲ ಎಂದು ಅರ್ಥ. ಈ ಅನಂತತ್ವವನ್ನು ಹೊಂದಿರುವ ಬ್ರಹ್ಮನು ಸಗುಣನಾದ ಕೃಷ್ಣನೇ. ಆದ್ದರಿಂದ ಆ ಕೃಷ್ಣನರೂಪವಾದ ಪರಬ್ರಹ್ಮನನ್ನು ಬಿಟ್ಟು ನೀನು ಹೇಳುವ ನಿರ್ಗುಣ ಬ್ರಹ್ಮನಿಗೆ ಯಾವ ದೇಶದಲ್ಲಿಯೂ, ಕಾಲದಲ್ಲಿಯೂ ಅವಕಾಶವೇ

ಇಲ್ಲ, ಆದ್ದರಿಂದ ಅವನು ಅತ್ಯಂತ ಅಸತ್ ಆದವನು. ಶಶವಿಷಾಣವು ಅಸತ್. ಅಸತ್ ಆದ ಬ್ರಹ್ಮ ಅಸತ್ ಪದಾರ್ಥದಲ್ಲಿಯೇ ಇರಬೇಕಷ್ಟೇ. ಆದ್ದರಿಂದ ನಿರ್ಗುಣಬ್ರಹ್ಮನು ಶಶವಿಷಾಣದ ಮಧ್ಯೆ ಅಡಗಿ ಸದಾ ಕುಳಿತುಕೊಂಡನು ಎಂದು ಹೇಳಿ ಪರಿಹಾಸವನ್ನು ಮಾಡಿದ್ದಾರೆ.

**ಸಮಸ್ತಧರ್ಮಶೂನ್ಯಂ ಚ ಬ್ರಹ್ಮಾನ್ಯತ್ ಕಿಲವರ್ತತೇ ।**
**ಸ್ವಯಂ ತದ್ದರ್ಶನಾತ್ ಸರ್ವಧರ್ಮಶೂನ್ಯೋ ಭವೇತ್ ಕಿಲ ॥ ೭೧೭ ॥**

**ಅರ್ಥ–** ಸಮಸ್ತಧರ್ಮಶೂನ್ಯಂ= ಸಮಸ್ತಧರ್ಮರಹಿತವಾದ, ಅನ್ಯತ್ ಬ್ರಹ್ಮಚ = ಇನ್ನೊಬ್ಬ ಬ್ರಹ್ಮನೂ ಸಹ, ವರ್ತತೇ ಕಿಲ= ಇದ್ದಾನಷ್ಟೇ. ತದ್ದರ್ಶನಾತ್= ಅವನ ದರ್ಶನದಿಂದ, ಸ್ವಯಂ= ತಾನೂ ಸಹ, ಸರ್ವಧರ್ಮಶೂನ್ಯಃ= ಸರ್ವಧರ್ಮರಹಿತನಾಗಿ, ಭವೇತ್ ಕಿಲ= ಆಗುತ್ತಾನಷ್ಟೇ!

**ಅನುವಾದ–** ಸರ್ವಧರ್ಮರಹಿತನಾದ ಇನ್ನೊಬ್ಬ ಬ್ರಹ್ಮನು ಇರುವನಷ್ಟೇ! ಅವನ ದರ್ಶನದಿಂದ ಅಧಿಕಾರಿಯು ತಾನೂ ಸಹ ಸರ್ವಧರ್ಮಶೂನ್ಯನಾಗುವನಷ್ಟೇ!

**ಭಾವವಿಲಾಸಿನೀ–** ನನು ಮಾಭೂದಾಗಮೇನ ನಿರ್ಗುಣಬ್ರಹ್ಮಸಿದ್ಧಿಃ ಅನುಮಾನೇನ ಭವಿಷ್ಯತೀತ್ಯಾಶಂಕ್ಯ ದೂಷಯತಿ– **ಸಮಸ್ತೇತಿ** ॥ ತದ್ದರ್ಶನಾತ್ ಸಮಸ್ತಧರ್ಮಶೂನ್ಯ-ಬ್ರಹ್ಮಾಪರೋಕ್ಷಜ್ಞಾನಾತ್ ॥ ೭೧೭ ॥

**ವಿವರಣೆ–** ಸರ್ವಧರ್ಮರಹಿತವಾದ ವಸ್ತುವು ಅಪ್ರಾಮಾಣಿಕವಾದುದು. ನಿರ್ಗುಣಬ್ರಹ್ಮಪ್ರಾಪ್ತಿಯು ಸಹ ಪುರುಷಾರ್ಥವೇ ಅಲ್ಲ. ಏಕೆಂದರೆ ತನಗೂ ನಿರ್ಗುಣತ್ವ ಉಂಟಾಗುತ್ತದೆ. ನಿರ್ಗುಣತ್ವವು ಯಾರಿಗೂ ಬೇಡವಾದ ವಸ್ತು. ಆದ್ದರಿಂದ ನಿನ್ನ ಬ್ರಹ್ಮನೂ ನಿರ್ಗುಣ, ಅವನನ್ನು ಉಪಾಸನೆ ಮಾಡುವ ನೀನೂ ನಿರ್ಗುಣನಾಗುತ್ತೀಯೆ ಎಂದು ಶ್ಲೋಕದಲ್ಲಿ ಉಪಪಾದನೆ ಮಾಡುತ್ತಾರೆ.

**ಯದಾ ಮಾನೇನ ತೇನೇದಂ ಸಾಧ್ಯತೇ ಮೋಕ್ಷಸಿದ್ಧಯೇ ।**
**ದೃಶ್ಯತೇ ಚ ತದಾ ಮಾನಮೇಯತಾ ಜ್ಞಾನದೃಶ್ಯತಾ ॥ ೭೧೮ ॥**

**ಇತಿ ಧರ್ಮದ್ವಯಂ ಪ್ರಾಪ್ತಂ ತತ್ಪದೇನ ಚ ವಾಚ್ಯತಾ ।**
**ಲಕ್ಷ್ಯತಾ ವಾ ಯತೋಽವಶ್ಯಂ ತೇನ ಪ್ರಾಪ್ತಾ ಪದಾರ್ಥತಾ॥ ೭೧೯ ॥**

**ಅರ್ಥ–** ಯದಾ= ಯಾವಾಗ, ಇದಂ= ಈ ನಿರ್ಗುಣ ಬ್ರಹ್ಮವು, ಮೋಕ್ಷಸಿದ್ಧಯೇ= ಮೋಕ್ಷಪ್ರಾಪ್ತಿಗಾಗಿ, ಮಾನೇನ= ಪ್ರಮಾಣದಿಂದ, ಸಾಧ್ಯತೇ= ಸಾಧಿಸಲ್ಪಡುತ್ತದೆಯೋ, ದೃಶ್ಯತೇ ಚ= ಮತ್ತು ನೋಡಲ್ಪಡುತ್ತದೆಯೋ, ತದಾ= ಆಗ, ಮಾನಮೇಯತಾ=

ಪ್ರಮೇಯತ್ವವು, ಜ್ಞಾನದೃಶ್ಯತಾ= ಜ್ಞೇಯತ್ವ, ಇತಿ= ಎಂಬ, ಧರ್ಮದ್ವಯಂ= ಎರಡು ಧರ್ಮಗಳು, ಪ್ರಾಪ್ತಂ= ಪ್ರಾಪ್ತವಾದವು. ತತ್ಪದೇನ= ನಿರ್ಗುಣ ಎಂಬ ಪದದಿಂದ, ವಾಚ್ಯತಾ= ವಾಚ್ಯತ್ವವು, ಲಕ್ಷ್ಯತಾವಾ= ಅಥವಾ ಲಕ್ಷ್ಯತ್ವವು, ಯತಃ= ಯಾವ ಕಾರಣದಿಂದ, ಅವಶ್ಯಂ= ಅವಶ್ಯಕವಾಗಿ ಸ್ವೀಕಾರಮಾಡಲ್ಪಡಬೇಕೋ, ತೇನ= ಆ ಕಾರಣದಿಂದ, ಪದಾರ್ಥತಾ= ಪದಾರ್ಥತ್ವ ರೂಪವಾದ ಧರ್ಮವು, ಪ್ರಾಪ್ತಾ= ಪ್ರಾಪ್ತವಾಯಿತು.

**ಅನುವಾದ–** ಮೋಕ್ಷಸಿದ್ಧಿಗೋಸ್ಕರವಾಗಿ ಪ್ರಮಾಣದಿಂದ ನಿರ್ಗುಣಬ್ರಹ್ಮನನ್ನು ಸಾಧಿಸಿ, ಆ ನಿರ್ಗುಣ ಬ್ರಹ್ಮನ ದರ್ಶನವನ್ನು ಅಂಗೀಕಾರ ಮಾಡಿದರೆ, ಆಗ ಆ ನಿರ್ಗುಣ ಬ್ರಹ್ಮನಲ್ಲಿ ಪ್ರಮೇಯತ್ವ ಮತ್ತು ಜ್ಞೇಯತ್ವ ಎಂಬ ಎರಡು ಧರ್ಮಗಳು ಬಂದವು. ನಿರ್ಗುಣಬ್ರಹ್ಮನು ನಿರ್ಗುಣಪದದಿಂದ ವಾಚ್ಯನಾಗಲೀ ಎಂಬ ಅಥವಾ ಲಕ್ಷ್ಯನಾಗಲೀ ಅವಶ್ಯಕವಾಗಿ ಆಗಲೇಬೇಕು. ಆದ್ದರಿಂದ ಪದಾರ್ಥತ್ವರೂಪವಾದ ಧರ್ಮವು ಬಂದಿತು.

**ಭಾವವಿಲಾಸಿನೀ–** ಕಿಂಚ ಮಾನೇನ ನಿರ್ಗುಣಬ್ರಹ್ಮಸಿದ್ಧಿಮಭಿಲಷತಃ ಸ್ವವ್ಯಾಹತಿಪರಮ್ಪರಾಮಾಹ–ಯದೇತಿ ॥ ತೇನ ಮಾಯಾವಾದಿನಾ ಇದಂ ನಿರ್ಗುಣತ್ವಂ ಸಾಧ್ಯತೇ । ಮೋಕ್ಷಸಿದ್ಧ್ಯೇ ಮುಕ್ತ್ಯೈ ದೃಶ್ಯತೇ । ತದಾ ಸಾಧನೇ ದರ್ಶನೇ ಚ । ಯತಶ್ಚ ತತ್ಪದೇನ ಮೇಯಪದೇನ ದೃಶ್ಯಪದೇನ ಚ ವಾಚ್ಯತಾ ವಾಚ್ಯತ್ವಾನಂಗೀಕಾರೇ ಲಕ್ಷ್ಯತಾ ವಾ । ತೇನ ಮುಖ್ಯಯಾ ವಾಽಮುಖ್ಯಯಾ ವಾ ವೃತ್ತ್ಯಾ ಶಬ್ದಬೋಧ್ಯತ್ವೇನ ॥ ೭೧೮-೭೨೦ ॥

**ವಿವರಣೆ–** ನಿರ್ಗುಣ ಬ್ರಹ್ಮವಸ್ತುವನ್ನು ಸಾಧನೆ ಮಾಡಿದರೆ ನಿನಗೆ ಸ್ವವ್ಯಾಹತಿ ಪರಂಪರೆಯುಂಟಾಗುತ್ತದೆ. ನಿರ್ಗುಣ ಬ್ರಹ್ಮನನ್ನು ಸಾಧನೆ ಮಾಡಿ ಅದರ ಜ್ಞಾನದಿಂದ ಮೋಕ್ಷವನ್ನು ಒಪ್ಪಿದರೆ, ನಿರ್ಗುಣಬ್ರಹ್ಮನಲ್ಲಿ ಪ್ರಮೇಯತ್ವ, ಜ್ಞೇಯತ್ವ, ಪದಾರ್ಥತ್ವ ರೂಪವಾದ ಧರ್ಮಗಳು ಬರುವುದರಿಂದ ಅದು ನಿನಗೆ ವಿರುದ್ಧವಾಗುತ್ತದೆ ಎಂದು ಅಭಿಪ್ರಾಯ.

**ವ್ಯಾವೃತ್ತ್ಯೈ ಶಶಶೃಂಗಸ್ಯ ವಸ್ತುತ್ವಂ ಸರ್ವಥಾ ತವ ॥ ೭೨೦ ॥**

**ಅರ್ಥ–** ಶಶಶೃಂಗಸ್ಯ= ಶಶವಿಷಾಣದ, ವ್ಯಾವೃತ್ತ್ಯೈ= ಭೇದಕ್ಕೋಸ್ಕರವಾಗಿ, ಸರ್ವಥಾ= ಎಲ್ಲ ರೀತಿಯಿಂದಲೂ, ತವ= ನಿನ್ನ ಆ ಬ್ರಹ್ಮನಿಗೆ, ವಸ್ತುತ್ವಂ= ವಸ್ತುತ್ವವು ಪ್ರಾಪ್ತವಾಗುತ್ತದೆ.

**ಅನುವಾದ–** ಶತಶೃಂಗದ ಭೇದಸಿದ್ಧಿಗಾಗಿ ನಿರ್ಗುಣಬ್ರಹ್ಮನಲ್ಲಿ ನೀನು ಅವಶ್ಯವಾಗಿ ವಸ್ತುತ್ವವನ್ನು ಅಂಗೀಕರಿಸಬೇಕು.

**ವಿವರಣೆ–** ನಿರ್ಗುಣಬ್ರಹ್ಮನಿಗೂ ಶಶವಿಷಾಣಕ್ಕೂ ಏನು ವ್ಯತ್ಯಾಸ ಎಂದು ಕೇಳಿದರೆ, ನಿರ್ಗುಣ ಬ್ರಹ್ಮನು ಒಂದು ವಸ್ತು, ಶಶವಿಷಾಣವು ವಸ್ತುವೇ ಅಲ್ಲ ಎಂದು ಹೇಳಬೇಕು. ಆಗ ನಿರ್ಗುಣಬ್ರಹ್ಮನಲ್ಲಿ ವಸ್ತುತ್ವ ರೂಪವಾದ ಧರ್ಮವು ಬರುವುದರಿಂದ, ಅದು ನಿರ್ಗುಣತ್ವಕ್ಕೆ ವಿರೋಧಿಯಾಗುತ್ತದೆ.

**ಅತಸ್ತತ್ಸಾಧಯನ್ನೇವ ತದ್ರೂಪಮವಸಾದಯನ್ ।**
**ಸಾಧಕಶ್ಚಾಸಿ ತಸ್ಯ ತ್ವಂ ಬಾಧಕಶ್ಚೇತಿ ಕಿಂ ಪರೈಃ ॥ ೭೨೧ ॥**

**ಅರ್ಥ–** ಅತಃ= ಆ ಕಾರಣದಿಂದ, ತತ್= ಆ ನಿರ್ಗುಣಬ್ರಹ್ಮಸ್ವರೂಪವನ್ನು, ಸಾಧಯನ್ನೇವ= ಸಾಧಿಸುವಾಗಲೇ, ತದ್ರೂಪಂ= ಆ ನಿರ್ಗುಣಬ್ರಹ್ಮಸ್ವರೂಪವನ್ನು, ಅವಸಾದಯನ್= ನಿರಾಕರಣೆ ಮಾಡುವ, ತ್ವಂ= ನೀನು, ತಸ್ಯ= ನಿರ್ಗುಣಬ್ರಹ್ಮನಿಗೆ, ಸಾಧಕಃ= ಸಾಧಕನೂ, ಬಾಧಕಶ್ಚ= ಮತ್ತು ಬಾಧಕನೂ, ಅಸಿ= ಆಗಿದ್ದೀಯೆ, ಇತಿ= ಈ ಕಾರಣದಿಂದ, ಪರೈಃ= ನಿನ್ನ ಪ್ರತಿವಾದಿಗಳಿಂದ, ಕಿಂ= ಏನು ಕೆಡುಕಾದೀತು? (ಏನು ಪ್ರಯೋಜನ?)

**ಅನುವಾದ–** ಆದ್ದರಿಂದ ನಿರ್ಗುಣಬ್ರಹ್ಮನನ್ನು ಸಾಧಿಸುವಾಗಲೇ ನಿರ್ಗುಣಬ್ರಹ್ಮನ ಸ್ವರೂಪವನ್ನು ನಾಶಮಾಡುವ ನೀನು ನಿರ್ಗುಣಬ್ರಹ್ಮಸ್ವರೂಪಕ್ಕೆ ಸಾಧಕನೂ ಮತ್ತು ಬಾಧಕನೂ ಆಗಿದ್ದೀಯೆ. ನೀನೇ ಬಾಧಕನಾಗಿರುವುದರಿಂದ ನಿನ್ನ ಪ್ರತಿಪಕ್ಷಿಗಳಿಗೆ ಮಾಡಬೇಕಾದ ಕಾರ್ಯವಿಲ್ಲ.

**ಭಾವವಿಲಾಸಿನೀ–** ಅತಃ ಉಕ್ತಧರ್ಮಾಣಾಮಾವಶ್ಯಕತ್ವಾತ್ ತನ್ನಿರ್ಗುಣಂ ತದ್ರೂಪಂ ನಿರ್ಗುಣಬ್ರಹ್ಮಸ್ವರೂಪಮ್ । ತಸ್ಯ ನಿರ್ಗುಣಸ್ಯ । ಪರೈಃ ಪ್ರತಿವಾದಿಭಿಃ । ಕಿಂ ಕಿಂಕೃತ್ಯಮ್ । ತತ್ಕಾರ್ಯಸ್ಯ ಸಗುಣತ್ವಸಾಧನಸ್ಯ ತ್ವಯ್ಯೈವ ಕೃತತ್ವಾತ್ ॥ ೭೨೧ ॥

**ವಿವರಣೆ–** ನಿರ್ಗುಣಬ್ರಹ್ಮನನ್ನು ಪ್ರಮಾಣಗಳಿಂದ ಸಾಧನೆ ಮಾಡಬೇಕು. ಆಗ ಪ್ರಮಾಣವಿಷಯತ್ವವು ಬರುತ್ತದೆ. ಅವನು ನಿರ್ಗುಣ ಎಂದು ಹೇಳಿ, ಪ್ರಮಾಣ ವಿಷಯತ್ವವನ್ನಾಗಲೀ, ವಸ್ತುತ್ವವನ್ನಾಗಲೀ, ಪದಾರ್ಥತ್ವವನ್ನಾಗಲೀ ಅಂಗೀಕರಿಸದಿದ್ದರೆ ಆ ನಿರ್ಗುಣಬ್ರಹ್ಮ ಸ್ವರೂಪವೇ ಸಿದ್ಧವಾಗುವುದಿಲ್ಲ. ಆದ್ದರಿಂದ ನಿರ್ಗುಣತ್ವವನ್ನು ಹೇಳುವ ನೀನು, ನಿರ್ಗುಣಬ್ರಹ್ಮಸ್ವರೂಪವನ್ನೇ ನಾಶಮಾಡುತ್ತೀಯೆ. ನಿನ್ನ ಪ್ರತಿಪಕ್ಷಿಗಳು ಮಾಡಬೇಕಾದ ಕೆಲಸವನ್ನು ನೀನೇ ಮಾಡಿದುದರಿಂದ ನಿನ್ನ ಪ್ರತಿಪಕ್ಷಿಗಳಿಗೆ ಏನೂ ಕಾರ್ಯವಿಲ್ಲದಂತಾಯಿತು ಎಂದು ಪರಿಹಾಸಮುಖದಿಂದ ಹೇಳುತ್ತಾರೆ.

**ಮೃನ್ಮಯಸ್ಯ ಹಿ ಲಿಂಗಸ್ಯ ಮಜ್ಜನಂ ರೂಪಮಾರ್ಜನಮ್ ।**
**ನ ಚೇತ್ ಪ್ರಮಾಣಶೂನ್ಯತ್ವಾತ್ ಗತಮಸ್ನೇಹದೀಪವತ್ ॥ ೭೨೨ ॥**

**ಅರ್ಥ–** ಮೃನ್ಮಯಸ್ಯ= ಮಣ್ಣಿನಿಂದ ಮಾಡಿದ, ಲಿಂಗಸ್ಯ= ಲಿಂಗಕ್ಕೆ, ಮಜ್ಜನಂ= ಅಭಿಷೇಕವು, ರೂಪಮಾರ್ಜನಂ= ಅದರ ಸ್ವರೂಪವನ್ನೇ ನಾಶಮಾಡುವಂತಹದು, ಹಿ= ಪ್ರಸಿದ್ಧವಷ್ಟೇ. ನಚೇತ್= ಈ ನಿರ್ಗುಣಬ್ರಹ್ಮನನ್ನು ಸಾಧಿಸಲು ಪ್ರಮಾಣವನ್ನು ಕೊಡದಿದ್ದರೆ, ಪ್ರಮಾಣಶೂನ್ಯತ್ವಾತ್= ಪ್ರಮಾಣವಿಲ್ಲದಿರುವ ಕಾರಣದಿಂದಲೇ, ಅಸ್ನೇಹದೀಪವತ್= ಎಣ್ಣೆಯಿಲ್ಲದ ದೀಪದಂತೆ, ಗತಂ= ನಿರ್ಗುಣಬ್ರಹ್ಮಸ್ವರೂಪವು ಹೊರಟು ಹೋಯಿತು.

**ಅನುವಾದ–** ಮಣ್ಣಿನಿಂದ ಮಾಡಿದ ಲಿಂಗಕ್ಕೆ ಅಭಿಷೇಕವನ್ನು ಮಾಡಿದರೆ, ಮಣ್ಣಿನ ಲಿಂಗವೇ ನಾಶವಾಗಿ ಹೋಗುತ್ತದೆ. ನಿರ್ಗುಣಬ್ರಹ್ಮನನ್ನು ಸಾಧಿಸಲು ಪ್ರಮಾಣಗಳನ್ನು ಕೊಡದಿದ್ದರೆ, ಪ್ರಮಾಣವಿಲ್ಲದಿರುವುದರಿಂದಲೇ ತೈಲವಿಲ್ಲದ ದೀಪದಂತೆ ನಿರ್ಗುಣಬ್ರಹ್ಮಸ್ವರೂಪವು ನಾಶವನ್ನು ಹೊಂದುತ್ತದೆ.

**ಭಾವವಿಲಾಸಿನೀ–ತತ್ರಾಭಾಣಕಮಾಹ– ಮೃಣ್ಮಯಸ್ಯ ಹೀತಿ ॥ ನಚೇದ್ ಧರ್ಮಾಗಮನಭೀತ್ಯಾ ಪ್ರಮಾಣಂ ನ ಕಥ್ಯತೇ ಚೇದ್ ಅಸ್ನೇಹದೀಪವತ್ ತೈಲಶೂನ್ಯದೀಪವತ್ । ಗತಂ ನಿರ್ಗುಣಮಿತಿ ಶೇಷಃ ॥ ೭೨೨ ॥**

**ವಿವರಣೆ–** ಮಣ್ಣಿನ ಲಿಂಗಕ್ಕೆ ಪೂಜೆಯನ್ನು ಮಾಡಲು ಅಭಿಷೇಕವನ್ನು ಮಾಡಿದರೆ ಆ ಲಿಂಗವೇ ಕರಗಿಹೋಗುತ್ತದೆ. ಹಾಗೆಯೇ ನಿರ್ಗುಣಬ್ರಹ್ಮನನ್ನು ಸಾಧಿಸಲು ಪ್ರಮಾಣವನ್ನು ಉಪನ್ಯಾಸ ಮಾಡಿದರೆ ನಿರ್ಗುಣಬ್ರಹ್ಮನಲ್ಲಿ ಪ್ರಮಾಣವಿಷಯತ್ವವು ಬರುವುದರಿಂದ ನಿರ್ಗುಣಬ್ರಹ್ಮನು ಹೊರಟು ಹೋಗುತ್ತಾನೆ. ಅದಕ್ಕೆ ಹೆದರಿ ಪ್ರಮಾಣವನ್ನು ಉಪನ್ಯಾಸ ಮಾಡದಿದ್ದರೆ ಪ್ರಮಾಣವಿಲ್ಲದಿರುವುದರಿಂದಲೇ ನಿರ್ಗುಣ-ಬ್ರಹ್ಮನು ಹೊರಟು ಹೋಗುತ್ತಾನೆ. ಎರಡು ರೀತಿಯಲ್ಲಿಯೂ ನಿರ್ಗುಣಬ್ರಹ್ಮಸ್ವರೂಪವು ಸಿದ್ಧಿಸುವುದಿಲ್ಲ ಎಂದು ಅಭಿಪ್ರಾಯ.

**ಬ್ರಹ್ಮಶಬ್ದೇನ ಚಾಪ್ಯುಕ್ತಾ ಗುಣಬೃಂಹಿತತೈವ ಹಿ ।**
**ಅತಸ್ತತ್ಪದಯೋಶ್ಚ ಸ್ಯಾತ್ ಪರಸ್ಪರವಿರುದ್ಧತಾ ॥ ೭೨೩ ॥**

**ಅರ್ಥ–** ಬ್ರಹ್ಮಶಬ್ದೇನಚಾಪಿ= ಬ್ರಹ್ಮಶಬ್ದದಿಂದಲಾದರೂ, ಉಕ್ತಾ= ಹೇಳಲ್ಪಡುವುದು, ಗುಣಬೃಂಹಿತತೈವ ಹಿ= ಗುಣಪೂರ್ಣತ್ವವಷ್ಟೇ. ಅತಃ ತತ್ ಪದಯೋಶ್ಚ= ಆ ಕಾರಣದಿಂದ ಅವೆರಡುಪದಗಳಿಗೆ, ಪರಸ್ಪರವಿರುದ್ಧತಾ= ಪರಸ್ಪರ ವಿರೋಧವು, ಸ್ಯಾತ್= ಉಂಟಾಗುತ್ತದೆ.

**ಅನುವಾದ–** ಬ್ರಹ್ಮಶಬ್ದವಾದರೂ ಗುಣಪೂರ್ಣತ್ವವನ್ನೇ ಹೇಳುತ್ತದೆ. ಆದ್ದರಿಂದ ನಿರ್ಗುಣಬ್ರಹ್ಮ ಎಂಬಲ್ಲಿರುವ ನಿರ್ಗುಣ ಮತ್ತು ಬ್ರಹ್ಮ ಎಂಬ ಎರಡು ಶಬ್ದಗಳು ಪರಸ್ಪರ ವಿರುದ್ಧವಾಗಿವೆ.

**ಭಾವವಿಲಾಸಿನೀ–** ಅತಃ ಏಕಸ್ಯ ಗುಣಪೂರ್ಣತಾವಾಚಿತ್ವಾದ್ ಅಪರಸ್ಯ ತಚ್ಛೂನ್ಯತ್ವವಾಚಿತ್ವಾತ್ ತತ್ಪದಯೋರ್ನಿರ್ಗುಣಬ್ರಹ್ಮಪದಯೋಃ ॥ ೭೨೩ ॥

**ವಿವರಣೆ–** ನಿರ್ಗುಣ ಎಂಬ ಶಬ್ದವು ಗುಣಾಭಾವವನ್ನು ಹೇಳುತ್ತದೆ. ಬ್ರಹ್ಮಶಬ್ದವು ಗುಣಪೂರ್ಣತ್ವವನ್ನು ಹೇಳುತ್ತದೆ. ಆದ್ದರಿಂದ ನಿರ್ಗುಣಬ್ರಹ್ಮ ಎಂಬ ಶಬ್ದವು ನನ್ನ ತಾಯಿಯು ಬಂಜೆ ಎಂದು ಹೇಳಿದಂತೆ, ಸ್ವವಚನವಿರೋಧಕ್ಕೆ ಒಳ್ಳೆಯ ಉದಾಹರಣೆಯಾಗಿದೆ ಎಂದು ಅಭಿಪ್ರಾಯ.

**ಯದಿ ಜ್ಞಾಪನಮಾತ್ರೇಣ ಪುನಸ್ತೇಷಾಂ ನಿವೃತ್ತತಾ ।**
**ಮಾನಶಕ್ತೇಃ ಪುನಃ ಪ್ರಾಪ್ತ್ಯಾ ನಿರ್ಗುಣಂ ತೇ ಕದಾಪಿ ನ ।**
**ತದ್ಗಾನಾಂ ಜ್ಞಾಪಕತ್ವೇ ತು ನೋಕ್ತದೋಷೋ ನಿವರ್ತತೇ ॥ ೭೨೪ ॥**

**ಅರ್ಥ–** ಯದಿ= ಒಂದು ಪಕ್ಷ, ಜ್ಞಾಪನಮಾತ್ರೇಣ= ನಿರ್ಗುಣಬ್ರಹ್ಮಸ್ವರೂಪವನ್ನು ಕೇವಲ ಜ್ಞಾಪಿಸಿ, ತೇಷಾಂ= ಆ ಪ್ರಮಾಣಗಳಿಗೆ, ಪುನಃ= ಮತ್ತೆ, ನಿವೃತ್ತತಾ= ನಿವೃತ್ತಿಯನ್ನು ಅಂಗೀಕರಿಸಿದರೆ, ಪುನಃ= ಮತ್ತೆ, ಮಾನಶಕ್ತೇಃ= ಪ್ರಮಾಣವಿಷಯತ್ವದ, ಪ್ರಾಪ್ತ್ಯಾ= ಪ್ರಾಪ್ತಿಯಿಂದ, ಕದಾಪಿ= ಯಾವಾಗಲೂ ಸಹ, ನಿರ್ಗುಣಂ ನ= ನಿರ್ಗುಣನಾಗುವುದಿಲ್ಲ. ತೇ= ಆ ಪ್ರಮಾಣಗಳು, ತದ್ಗಾನಾಂ= ನಿರ್ಗುಣಬ್ರಹ್ಮನಲ್ಲಿರುವ ಧರ್ಮಗಳಿಗೆ, ಜ್ಞಾಪಕತ್ವೇತು= ಜ್ಞಾಪಕವಾದರೂ, ಉಕ್ತದೋಷಃ= ಹಿಂದೆ ಹೇಳಿದ ದೋಷವು, ನ ನಿವರ್ತತೇ= ನಿವೃತ್ತವಾಗುವುದಿಲ್ಲ.

**ಅನುವಾದ–** ಪ್ರಮಾಣಗಳು ನಿರ್ಗುಣಬ್ರಹ್ಮಸ್ವರೂಪವನ್ನು ಜ್ಞಾಪಿಸಿ ಅನಂತರ ನಿವೃತ್ತಿಯಾಗುತ್ತವೆ ಎಂದು ಹೇಳಿದರೆ, ನಿರ್ಗುಣಬ್ರಹ್ಮನಿಗೆ ಪ್ರಮಾಣ-ವಿಷಯತ್ವವನ್ನು ಅಂಗೀಕರಿಸಲೇಬೇಕು. ಪ್ರಮಾಣಗಳು ನಿವೃತ್ತವಾದರೂ ಪ್ರಮಾಣವಿಷಯತ್ವವು ನಿವೃತ್ತವಾಗುವುದಿಲ್ಲವಾದ್ದರಿಂದ ಬ್ರಹ್ಮನು ಎಂದೂ ನಿರ್ಗುಣನಾಗುವುದಿಲ್ಲ, ಸಗುಣನೇ ಆಗುತ್ತಾನೆ. ಪ್ರಮಾಣಗಳು ನಿರ್ಗುಣ-ಬ್ರಹ್ಮನಲ್ಲಿರುವ ಧರ್ಮಗಳನ್ನು ಜ್ಞಾಪಿಸುತ್ತವೆ ಎಂದರೂ ಮೊದಲು ಹೇಳಿದ ದೋಷವು ನಿವೃತ್ತವಾಗುವುದಿಲ್ಲ.

**ಭಾವವಿಲಾಸಿನೀ–** ತೇಷಾಂ (ಅನುಮಾನಾದೀನಾಂ) ಉಕ್ತವಿಧಯಾ ತವ್ಯೈವಾವಶ್ಯಕ-ಮೇಯತ್ವಾದಿ ಧರ್ಮಾಣಾಮ್ । ಮಾನಶಕ್ತೇಃ ನಿರ್ಗುಣಸಾಧಕಪ್ರಮಾಣಬಲಾತ್ ಪುನಃ ಪ್ರಾಪ್ತ್ಯಾ ಧರ್ಮನಿವೃತ್ತ್ಯೈ ಪೌನಃಪುನ್ಯೇನ ಪ್ರಮಾಣೋಕ್ತೌ ಪುನಃಪುನರ್ಧರ್ಮಾಣಾಮೇವ ಪ್ರಾಪ್ತ್ಯಾ ಕದಾಪಿ ನ । ತದ್ಗಾನಾಂ ನಿರ್ಗುಣಬ್ರಹ್ಮಾಶ್ರಿತಾನಾಮ್ । ಉಕ್ತಃ ಸಗುಣತ್ವಪ್ರಾಪ್ತಿ-ಲಕ್ಷಣಃ । ನ ನಿವರ್ತತ ಇತಿ ಸಂಬಂಧಃ । ನಿರ್ಗುಣತ್ವಸ್ಯ ಸ್ವಸಿದ್ಧ್ಯರ್ಥಂ ಮಾನಮೇಯ-ತ್ವಾದಿಧರ್ಮೋಪಜೀವನಾನ್ನತನ್ನಿವರ್ತಕತಾ । ಉಪಜೀವಕಸ್ಯೋಪಜೀವ್ಯನಿವರ್ತಕ-ತ್ವಾಯೋಗಾತ್ । ಅನ್ಯಸ್ಯ ಚ ನಿವರ್ತಕಸ್ಯಾಭಾವಾತ್ । ಉಕ್ತ ಧರ್ಮಬಲಾದಾಗತಾ ಸಗುಣತಾ ಪುನರ್ನ ನಿವರ್ತ್ಯೇತಿ ಭಾವಃ ॥ ೭೨೪ ॥

**ವಿವರಣೆ—** ಪ್ರಮಾಣಗಳು ನಿರ್ಗುಣಬ್ರಹ್ಮಸ್ವರೂಪವನ್ನು ಜ್ಞಾಪಿಸಿದರೆ ಪ್ರಮಾಣವಿಷಯತ್ವವು ಬಂದೇ ಬರುತ್ತದೆ. ಅನಂತರ ಪ್ರಮಾಣಗಳು ನಿವೃತ್ತವಾದರೂ ಬ್ರಹ್ಮನಲ್ಲಿರುವ ಪ್ರಮಾಣವಿಷಯತ್ವವು ನಿವೃತ್ತವಾಗುವುದಿಲ್ಲವಾದ್ದರಿಂದ, ಬ್ರಹ್ಮನಿಗೆ ಸಗುಣತ್ವವು ಉಂಟಾಗುತ್ತದೆ. ಪ್ರಮಾಣಗಳು ಬ್ರಹ್ಮನ ಧರ್ಮಗಳನ್ನು ನಿಷೇಧಿಸುತ್ತವೆ ಎಂದು ಹೇಳಿದರೂ, ಪ್ರಮಾಣಗಳು ಅಧಿಕರಣವನ್ನು ತೋರಿಸಿ ಅಲ್ಲಿ ಧರ್ಮಗಳನ್ನು ನಿಷೇಧಿಸಬೇಕು. ಆದ್ದರಿಂದ ಅಧಿಕರಣನಾದ ನಿರ್ಗುಣಬ್ರಹ್ಮನನ್ನು ಅಧಿಕರಣವಾಗಿ ತೋರಿಸಿದರೆ, ಪ್ರಮಾಣವಿಷಯತ್ವವು ಖಂಡಿತವಾಗಿಯೂ ಬರುವುದರಿಂದ ಸಧರ್ಮತ್ವವೇ ಪ್ರಾಪ್ತವಾಗುತ್ತದೆ ಎಂದು ಅಭಿಪ್ರಾಯ.

**ಅನ್ಯಗಾನಾಂ ಜ್ಞಾಪಕತ್ವೇ ಜ್ಞಾಪ್ಯಸ್ಯಾಪ್ಯನ್ಯನಿಷ್ಠತಾ ।**
**ಅಸತೋ ಜ್ಞಾಪಕತ್ವೇ ಸ್ಯಾಜ್ಜ್ಞಾಪ್ಯಮಪ್ಯಸದೇವ ಹಿ ॥ ೭೨೫ ॥**

**ಅರ್ಥ—** ಅನ್ಯಗಾನಾಂ= ಬೇರೆ ವಸ್ತುವಿನಲ್ಲಿರುವ ಧರ್ಮಗಳನ್ನು, ಜ್ಞಾಪಕತ್ವೇ= ಜ್ಞಾಪಿಸಿದರೆ, ಜ್ಞಾಪ್ಯಶ್ಚಾಪಿ= ಜ್ಞಾಪಿಸಲ್ಪಡುವ ಧರ್ಮಗಳಿಗೂ ಸಹ, ಅನ್ಯನಿಷ್ಠತಾ= ಅನ್ಯನಿಷ್ಠತ್ವವೇ ಉಂಟಾದೀತು. ಅಸತಃ= ಮಿಥ್ಯಾಭೂತವಾದ ಧರ್ಮಗಳನ್ನು, ಜ್ಞಾಪಕತ್ವೇ= ಜ್ಞಾಪಿಸಿದರೆ, ಜ್ಞಾಪ್ಯಮಪಿ= ಜ್ಞಾಪಿಸಲ್ಪಡುವ ಧರ್ಮಗಳೂ ಸಹ, ಅಸದೇವ ಸ್ಯಾತ್= ಅಸತ್ಯವಾಗುತ್ತದೆ, ಹಿ= ಇಂದು ಪ್ರಸಿದ್ಧವಷ್ಟೇ.

**ಅನುವಾದ— ಪ್ರಮಾಣಗಳು ನಿರ್ಗುಣಬ್ರಹ್ಮನನ್ನು ಬಿಟ್ಟು ಬೇರೊಂದು ಕಡೆ ಇರುವ ನಿರ್ಗುಣತ್ವವನ್ನು ಸಾಧಿಸುತ್ತವೆ ಎಂದು ಹೇಳಿದರೆ, ನಿರ್ಗುಣಬ್ರಹ್ಮನಲ್ಲಿ ನಿರ್ಗುಣತ್ವವು ಇಲ್ಲದಂತಾಯಿತು. ಜ್ಞಾಪಕವು ಮಿಥ್ಯಾಭೂತವಾದರೆ ಜ್ಞಾಪ್ಯವಾದ ಧರ್ಮಗಳೂ ಮಿಥ್ಯೆಯಾಗುತ್ತವೆಯಷ್ಟೆ?**

**ಭಾವವಿಲಾಸಿನೀ— ಅನ್ಯಗಾನಾಮನ್ಯನಿಷ್ಠಾನಾಮ್ । ಜ್ಞಾಪ್ಯಸ್ಯ ನಿರ್ಗುಣತ್ವಸ್ಯ । ಸಾಧ್ಯಸಾಧನಯೋರೇಕಾಶ್ರಿತತ್ವಾವಶ್ಯಂಭಾವಾತ್ । ಮಿಥ್ಯಾತ್ವಾತ್ ತನ್ನಿವೃತ್ತಿರಿತ್ಯತ ಆಹ । ಅಸತ ಇತಿ ॥ ಅಸತಃ ಮಿಥ್ಯಾಭೂತಸ್ಯ । ಅಸತ್ ಮಿಥ್ಯಾಭೂತಮ್ ॥ ೭೨೫ ॥**

**ಆರೋಪಿತೇನ ಧೂಮೇನ ಸಿದ್ಧ್ಯೇದಾರೋಪಿತೋಽನಲಃ ।**
**ಶೂದ್ರೀಪ್ರಸೂತಪುತ್ರಸ್ಯ ಶೂದ್ರತಾ ಲೋಕಸಮ್ಮತಾ ॥ ೭೨೬ ॥**

**ಅರ್ಥ—** ಆರೋಪಿತೇನ= ಆರೋಪಿತವಾದ, ಧೂಮೇನ= ಧೂಮದಿಂದ, ಆರೋಪಿತಃ= ಆರೋಪಿತವಾದ, ಅನಲಃ= ಅಗ್ನಿಯೇ, ಸಿದ್ಧ್ಯೇತ್= ಸಿದ್ಧವಾಗುತ್ತದೆ, ಶೂದ್ರೀಪ್ರಸೂತಪುತ್ರಸ್ಯ= ಶೂದ್ರಸ್ತ್ರೀಯು ಪಡೆದ ಮಗನಿಗೆ, ಶೂದ್ರತಾ= ಶೂದ್ರತ್ವವು, ಲೋಕಸಮ್ಮತಾ= ಲೋಕಸಮ್ಮತವಾಗಿದೆ.

**ಅನುವಾದ–** ಆರೋಪಿತ ಧೂಮದಿಂದ ಸಿದ್ಧವಾಗುವ ವಹ್ನಿಯು ಆರೋಪಿತ-ವಾದುದೇ. ಶೂದ್ರ ಸ್ತ್ರೀಯ ಮಗನು ಶೂದ್ರನೆಂದೇ ಲೋಕಸಮ್ಮತವಾಗಿದೆ.

**ಭಾವವಿಲಾಸಿನೀ–** ತತ್ರ ದೃಷ್ಟಾಂತಮಾಹ– **ಆರೋಪಿತೇನೇತಿ** ॥ ದೃಷ್ಟಾನ್ತಾಂತರಂ ಚಾಹ– **ಶೂದ್ರೀತಿ** ॥ ೭೨೬ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ವಿಷಯದಲ್ಲಿ ಇಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ. ಆರೋಪಿತವಾದ ಧೂಮದಿಂದ ವಾಸ್ತವ ವಹ್ನಿಯು ಸಿದ್ಧವಾಗುವುದಿಲ್ಲ. ಆರೋಪಿತ ವಹ್ನಿಯೇ ಸಿದ್ಧವಾಗುತ್ತದೆ. ಶೂದ್ರಸ್ತ್ರೀಯ ಮಗನು ಶೂದ್ರನೇ ಆಗುತ್ತಾನೆಯೇ ಹೊರತು ಬ್ರಾಹ್ಮಣನಾಗುವುದಿಲ್ಲ. ಹಾಗೆಯೇ ಮಿಥ್ಯಾಭೂತ-ಪ್ರಮಾಣದಿಂದ ಸಿದ್ಧವಾದ ನಿರ್ಗುಣತ್ವವು ಮಿಥ್ಯಾಭೂತವೇ ಆಗುತ್ತದೆ. ನಿರ್ಗುಣತ್ವವು ವಾಸ್ತವವಲ್ಲವಾದ ಕಾರಣ, ಅದಕ್ಕೆ ವಿರುದ್ಧವಾದ ಸಗುಣತ್ವವು ವಾಸ್ತವವಾಗುತ್ತದೆ ಎಂದು ಅಭಿಪ್ರಾಯ.

**ವ್ಯಾವಹಾರಿಕಸತ್ತ್ವಂ ತು ರಾಜಾಶ್ವಖುರತಾಡನಮ್ ।**
**ಸಶೇಷಬಾಧಾದ್ ಯದತಿಕ್ರೂರಂ ನಿಶ್ಶೇಷಬಾಧನಮ್ ॥ ೭೨೭ ॥**

**ಬ್ರಹ್ಮಜ್ಞಾನೇನ ಬಾಧೋ ಹಿ ಸರ್ವಬಾಧೋ ಭವನ್ಮತೇ ।**
**ಬ್ರಹ್ಮಪ್ರಮಾ ಬಾಧ್ಯತಾ ಚ ವ್ಯಾವಹಾರಿಕಸತ್ಯತಾ ॥ ೭೨೮ ॥**

**ಅರ್ಥ–** ವ್ಯಾವಹಾರಿಕಸತ್ತ್ವಂ ತು= ವ್ಯಾವಹಾರಿಕವಾದ ಸತ್ತ್ವವಾದರೂ, ರಾಜಾಶ್ವಖುರತಾಡನಮ್= ರಾಜಾಶ್ವದ ಗೊರಸಿನ ಹೊಡೆತವಿದ್ದಂತೆ, ಯತ್= ಏಕೆಂದರೆ, ಸಶೇಷಬಾಧಾತ್= ಸಶೇಷವಾದ ಬಾಧಕ್ಕಿಂತಲೂ, ನಿಶ್ಶೇಷಬಾಧನಮ್= ನಿಶ್ಶೇಷವಾದ ಬಾಧವು, ಅತಿಕ್ರೂರಂ= ಅತ್ಯಂತ ಕ್ರೂರವಾದುದು, ಭವನ್ಮತೇ= ನಿನ್ನ ಮತದಲ್ಲಿ, ಬ್ರಹ್ಮಜ್ಞಾನೇನ ಬಾಧಃ= ಬ್ರಹ್ಮಜ್ಞಾನದಿಂದ ಉಂಟಾಗುವ ಬಾಧವು, ಸರ್ವಬಾಧೋ ಹಿ= ಸರ್ವಬಾಧವಷ್ಟೇ, ಚ= ಮತ್ತು, ವ್ಯಾವಹಾರಿಕಸತ್ಯತಾ= ವ್ಯಾವಹಾರಿಕ ಸತ್ಯವೆಂದರೆ, ಬ್ರಹ್ಮಪ್ರಮಾ ಬಾಧ್ಯತಾ= ಬ್ರಹ್ಮಪ್ರಮೆಯಿಂದ ಬಾಧ್ಯವಾಗುವಿಕೆ.

**ಅನುವಾದ– ನೀನು ವ್ಯಾವಹಾರಿಕತ್ವವೆಂದರೆ ಬ್ರಹ್ಮಜ್ಞಾನಬಾಧ್ಯತ್ವವೆಂದು ಹೇಳುತ್ತೀಯೆ. ಬ್ರಹ್ಮಜ್ಞಾನದಿಂದ ಉಂಟಾಗುವ ಬಾಧವಾದರೂ ನಿನ್ನ ಮತದಲ್ಲಿ ಸರ್ವಬಾಧವೇ ಆಗಿದೆ. ಸಶೇಷವಾದ ಅಲ್ಪಬಾಧಕ್ಕಿಂತಲೂ ನಿಶ್ಶೇಷವಾದ ಬಹುಬಾಧವು ಅತ್ಯಂತ ಕ್ರೂರವಾದುದು. ಆದ್ದರಿಂದ ವ್ಯಾವಹಾರಿಕ ಸತ್ತ್ವವು ರಾಜನ ಪಟ್ಟದ ಕುದುರೆಯ ಒದೆತವಿದ್ದಂತೆ.**

**ಭಾವವಿಲಾಸಿನೀ–** ವ್ಯಾವಹಾರಿಕಸತ್ತ್ವಾಂಗೀಕಾರಾನ್ನೋಕ್ತದೋಷ ಇತಿ ಚೇತ್ ಉಕ್ತವಿಧಯಾ ಸಾಧ್ಯನಿರ್ಗುಣತ್ವಸ್ಯಾಪಿ ವ್ಯಾವಹಾರಿಕತಾಪಾತಾತ್ । ಕಿಂಚ ಬಾಧಾವಿಶೇಷೇ ಕಿಮನೇನ

ವ್ಯಾವಹಾರಿಕತ್ವವ್ಯಪದೇಶಮಾತ್ರೇಣ । ಬಹೋರ್ಬಾಧಕಾದಸ್ಮಾದಪಿ ಪ್ರಾತಿಭಾಸಿಕಾಂಗೀಕಾರ ಏವ ಶ್ರೇಯಾನಿತ್ಯಾಹ– **ವ್ಯಾವಹಾರಿಕಸತ್ತ್ವಮಿತಿ** ॥ ದುರ್ಬಲಾಶ್ವಾದಪಿ ಪ್ರಬಲಾಶ್ವಖುರತಾಡನಸ್ಯ ಬಹ್ವನಿಷ್ಟಹೇತುತ್ವಾದಿತ್ಯಭಿಪ್ರಾಯೇಣೋಕ್ತಮ್– **ರಾಜಾಶ್ವೇತಿ** ॥ ತದೇವೋಪಪಾದಯತಿ– **ಸಶೇಷಬಾಧಾದಿತಿ** ॥ ೭೨೭-೭೨೮ ॥

**ವಿವರಣೆ–** ಅದ್ವೈತಿಗಳಿಗೆ ಮಿಥ್ಯಾಭೂತವಾದುದು ಎರಡು ವಿಧ. ಪ್ರಾತಿಭಾಸಿಕ ಮತ್ತು ವ್ಯಾವಹಾರಿಕ ಎಂದು. ಎರಡಕ್ಕೂ ಬಾಧವಿದೆ. ಪ್ರಾತಿಭಾಸಿಕಕ್ಕೆ ಬ್ರಹ್ಮಜ್ಞಾನವನ್ನು ಬಿಟ್ಟು ಬೇರೆ ಜ್ಞಾನದಿಂದ ಬಾಧ. ವ್ಯಾವಹಾರಿಕಕ್ಕೆ ಬ್ರಹ್ಮಜ್ಞಾನದಿಂದ ಮಾತ್ರ ಬಾಧ. ಬ್ರಹ್ಮಜ್ಞಾನೇತರಜ್ಞಾನದಿಂದ ಬಾಧವುಂಟಾದಾಗ ಯಾವುದೋ ಒಂದು ಅಂಶ ಬಾಧಿತವಾಗಿ, ಇನ್ನೊಂದು ಅಂಶವಾದರೂ ಉಳಿಯುತ್ತದೆ. ಬ್ರಹ್ಮಜ್ಞಾನದಿಂದ ಬಾಧ ಉಂಟಾದರೆ ಸರ್ವವೂ ನಿವೃತ್ತವಾಗುತ್ತದೆ. ಆದ್ದರಿಂದ ಬ್ರಹ್ಮಜ್ಞಾನದಿಂದ ಬಾಧವು ಅತ್ಯಂತ ಕ್ರೂರವಾದುದು. ಏನನ್ನೂ ಉಳಿಸುವುದಿಲ್ಲ. ಅದು ಪಟ್ಟದ ಕುದುರೆಯ ಕಾಲಿನ ಒದೆತದಂತೆ. ಸಾಧಾರಣ ಕುದುರೆಯ ಒದೆತವಾದರೆ ಯಾವುದೋ ಒಂದು ಅವಯವ ನಷ್ಟವಾಗಬಹುದು. ಆದರೆ ರಾಜನ ಕುದುರೆಯ ಒದೆತದಿಂದ ಪ್ರಾಣವೇ ಹೋಗುತ್ತದೆ. ಆದ್ದರಿಂದ ವ್ಯಾವಹಾರಿಕಸತ್ತ್ವವನ್ನು ಅಂಗೀಕಾರ ಮಾಡುವುದು ಉಚಿತವಲ್ಲ ಎಂದು ಅಭಿಪ್ರಾಯ.

**ತ್ರಿಕಾಲಾಸತ್ತ್ವಸಾಮ್ಯೇ ತು ಕಿಂ ಜ್ಞಾನಾಂತರತಃ ಫಲಮ್ ।**
**ಪರಪ್ರತಾರಣೇನ ಸ್ಯಾದ್ ದೋಷೋಽಧಿಕತರಸ್ತವ ॥ ೭೨೯ ॥**

**ಅರ್ಥ–** ತ್ರಿಕಾಲಾಸತ್ತ್ವಸಾಮ್ಯೇ ತು= ತ್ರಿಕಾಲ ಅಸತ್ತ್ವವೆನ್ನುವುದು ಎರಡು ಕಡೆಯಲ್ಲೂ ಸಮವಾಗಿರುವಾಗ, ಜ್ಞಾನಾಂತರತಃ= ಬೇರೆ ಜ್ಞಾನದಿಂದ, ಕಿಂ ಫಲಮ್= ಏನು ಫಲ, ತವ= ನಿನಗೆ, ಪರಪ್ರತಾರಣೇನ= ಪರರನ್ನು ವಂಚಿಸುವುದರಿಂದ, ಅಧಿಕತರಃ= ಅತ್ಯಂತ ಹೆಚ್ಚಾದ, ದೋಷಃ= ಪಾಪವು, ಸ್ಯಾತ್= ಉಂಟಾಗುತ್ತದೆ.

**ಅನುವಾದ–** ಪ್ರಾತಿಭಾಸಿಕ ಮತ್ತು ವ್ಯಾವಹಾರಿಕ ಎರಡು ಸ್ಥಳಗಳಲ್ಲಿಯೂ ತ್ರಿಕಾಲದಲ್ಲಿ ಅಸತ್ತ್ವವೆಂಬುದು ಸಮನಾಗಿದೆ. ಹೀಗಿರುವಾಗ ಬ್ರಹ್ಮಜ್ಞಾನದಿಂದ ಬಾಧಬಂದರೆ ಏನಾಯಿತು? ಬಾಧಿತವಾದ ವಸ್ತುವನ್ನು ನೀನು ವ್ಯಾವಹಾರಿಕ ಸತ್ತ್ವವುಳ್ಳದ್ದು ಎಂದು ಹೇಳಿ, ಪರರನ್ನು ವಂಚನೆ ಮಾಡಿದುದರಿಂದ ಅಧಿಕವಾದ ಪಾಪವೇ ಉಂಟಾಗುತ್ತದೆ.

**ಭಾವವಿಲಾಸಿನೀ–** ಪರಪ್ರತಾರಣೇನ ಬಾಧಿತತ್ವೇನ ಮಿಥ್ಯಾಭೂತಾರ್ಥಸ್ಯೈವ ಸತ್ಯಮಿತಿ ವ್ಯಪದೇಶರೂಪಪರಪ್ರತಾರಣೇನ ॥ ೭೨೯ ॥

**ವಿವರಣೆ–** ಪ್ರಾತಿಭಾಸಿಕ ಮತ್ತು ವ್ಯಾವಹಾರಿಕ ಎರಡೂ ಬಾಧಿತವಾಗುತ್ತದೆ. ಬಾಧಿತವಾದುದನ್ನು ಸತ್ಯವೆಂದು ಯಾರೂ ಕರೆಯುವುದಿಲ್ಲ. ನೀನು ಸಹ ಬಾಧ್ಯವಾದುದನ್ನು ಮಿಥ್ಯಾ ಎಂದು ಕರೆಯುತ್ತೀಯೆ. ಹೀಗಿರುವಾಗ ಜಗತ್ತಿಗೆ ಬಾಧವನ್ನು ಒಪ್ಪಿ ಅದು ವ್ಯಾವಹಾರಿಕಸತ್ಯ ಎಂದು ಹೇಳಿದರೆ ಬಾಧ್ಯವಾದುದು ಎಂದೂ ಸತ್ಯವಾಗಲು ಸಾಧ್ಯವಾಗುವುದಿಲ್ಲವಾದ್ದರಿಂದ ಪರರನ್ನು ವಂಚನೆ ಮಾಡಿದಂತಾಗುತ್ತದೆ. ಅಂತಹ ದೋಷಕ್ಕೆ ನೀನು ಒಳಗಾಗುತ್ತೀಯೆ ಎಂದು ಅಭಿಪ್ರಾಯ.

**ಕಿಂಚ ಬಾಧಸ್ಯ ಬಾಧ್ಯತ್ವೇ ಗುಣಾನಾಂ ಸ್ಯಾದಬಾಧ್ಯತಾ ।**
**ಬಾಧಸ್ಯಾಬಾಧ್ಯತಾಯಾಂ ತು ಸದದ್ವೈತಮತಂ ಗತಮ್ ॥ ೭೩೦ ॥**

**ಅರ್ಥ–** ಕಿಂಚ= ಅದೂ ಅಲ್ಲದೆ, ಬಾಧಸ್ಯ= ಬಾಧವು, ಬಾಧ್ಯತ್ವೇ= ಬಾಧ್ಯವಾದರೆ, ಗುಣಾನಾಂ= ಗುಣಗಳಿಗೆ, ಅಬಾಧ್ಯತಾ= ಅಬಾಧ್ಯತ್ವವು, ಸ್ಯಾತ್= ಉಂಟಾಗುತ್ತದೆ, ಬಾಧಸ್ಯ= ಬಾಧಕ್ಕೆ, ಅಬಾಧ್ಯತಾಯಾಂ ತು= ಅಬಾಧ್ಯತ್ವವಿದ್ದ ಪಕ್ಷದಲ್ಲಿ, ಸದದ್ವೈತಮತಂ= ಸತ್ಯವಾದ ವಸ್ತುವು ಒಂದೇ ಎಂಬ ಮತವು, ಗತಮ್= ಹೊರಟು ಹೋಯಿತು.

**ಅನುವಾದ–** ಬ್ರಹ್ಮನಲ್ಲಿರುವ ಗುಣಗಳಿಗೆ ಬಾಧ ಉಂಟಾಗುತ್ತದೆ ಎಂದು ನೀನು ಹೇಳುತ್ತೀಯೆ. ಈ ಬಾಧವು ಬಾಧ್ಯವೋ ಅಥವಾ ಅಬಾಧ್ಯವೋ? ಬಾಧವು ಬಾಧ್ಯವಾದರೆ ಬ್ರಹ್ಮನಲ್ಲಿ ಗುಣಗಳು ಸ್ಥಿರವಾಗುತ್ತವೆ. ಬಾಧವು ಅಬಾಧ್ಯವಾದರೆ ಬ್ರಹ್ಮ ಒಂದು ಸತ್ಯ, ಬಾಧವು ಇನ್ನೊಂದು ಸತ್ಯ ಎಂದು ಒಪ್ಪಬೇಕಾಗುವುದರಿಂದ ಸತ್ಯವಾದ ವಸ್ತುವು ಒಂದೇ ಎಂಬ ಮತವು ಬಿದ್ದುಹೋಗುತ್ತದೆ.

**ಭಾವವಿಲಾಸಿನೀ–** ದೂಷಣಾಂತರಂ ಚಾಹ– **ಕಿಂಚೇತಿ** ॥ ಬಾಧಸ್ಯ ಗುಣಬಾಧಸ್ಯ ॥ ೭೩೦ ॥

**ವಿವರಣೆ–** ಬ್ರಹ್ಮನ ಗುಣಗಳಿಗೆ ಬಾಧವು ಬರುತ್ತದೆ ಎಂದರೆ ಆ ಬಾಧವು ಮಿಥ್ಯವಾದರೆ, ಆ ಬಾಧವು ಬಾಧ್ಯವಾದರೆ ಗುಣಗಳು ನಿವೃತ್ತಿಯಾಗುವುದಿಲ್ಲ ಎಂದಾಯಿತು. ಆದ್ದರಿಂದ ಬ್ರಹ್ಮ ಸಗುಣನಾಗುತ್ತಾನೆ. ಬಾಧವು ಅಬಾಧ್ಯವೆಂದರೆ ಇಲ್ಲಿ ಜ್ಞಾನರೂಪವಾದ ಬಾಧವನ್ನು ಅಂಗೀಕಾರ ಮಾಡಿದರೆ ಆಗ ಬಾಧರೂಪವಾದ ಜ್ಞಾನ ಒಂದು ಸತ್ಯ. ಬ್ರಹ್ಮ ಇನ್ನೊಂದು ಸತ್ಯ ಎಂದು ಎರಡು ವಿಧವಾದ ಸತ್ಯಪದಾರ್ಥವನ್ನು ಅಂಗೀಕಾರ ಮಾಡಬೇಕಾಗುವುದರಿಂದ ಅದ್ವೈತ ಮತವು ಬಿದ್ದುಹೋಗುತ್ತದೆ.

**ತಸ್ಯಾಪಿ ಬ್ರಹ್ಮರೂಪತ್ವೇ ಪುನರ್ಧರ್ಮಿತ್ವಮಾಪತೇತ್ ।**
**ಜಡತ್ವಂ ಭಾವಸಾಪೇಕ್ಷಪ್ರತೀತಿತ್ವಮಭಾವತಾ ।**
**ಇತ್ಯಾದ್ಯಭಾವಧರ್ಮಾಣಾಂ ಬ್ರಹ್ಮಣ್ಯೇವ ಪ್ರಸಕ್ತಿತಃ ॥ ೭೩೧ ॥**

**ಅರ್ಥ**– ತಸ್ಯಾಪಿ= ಆ ಬಾಧವೂ ಕೂಡ, ಬ್ರಹ್ಮರೂಪತ್ವೇ= ಬ್ರಹ್ಮಸ್ವರೂಪವಾದರೆ, ಪುನಃ= ಮತ್ತೆ, ಧರ್ಮಿತ್ವಂ= ಬ್ರಹ್ಮನಿಗೆ ಧರ್ಮಿತ್ವರೂಪವಾದ ಧರ್ಮವು, ಆಪತೇತ್= ಉಂಟಾದೀತು, ಜಡತ್ವಂ= ಜಡತ್ವವು, ಭಾವಸಾಪೇಕ್ಷಪ್ರತೀತಿತ್ವಂ= ಭಾವಜ್ಞಾನಾಧೀನ ಜ್ಞಾನತ್ವವು, ಅಭಾವತಾ= ಅಭಾವತ್ವವು, ಇತ್ಯಾದ್ಯಬಾವಧರ್ಮಾಣಾಂ= ಮೊದಲಾದ ಅಬಾಧ್ಯವಾದ ಧರ್ಮಗಳು, ಬ್ರಹ್ಮಣ್ಯೇವ= ಬ್ರಹ್ಮನಲ್ಲಿಯೇ, ಪ್ರಸಕ್ತಿತಃ= ಪ್ರಸಕ್ತವಾಗುವುದರಿಂದ (ಬ್ರಹ್ಮನಿಗೆ ಧರ್ಮಿತ್ವ ಉಂಟಾಯಿತು).

**ಅನುವಾದ**– ಬಾಧವು ಅಬಾಧ್ಯವೆಂದು ಹೇಳಿ, ಆ ಬಾಧವು ಬ್ರಹ್ಮಸ್ವರೂಪವೆಂದು ಹೇಳಿದರೆ ಬ್ರಹ್ಮನಲ್ಲಿ ಅಬಾಧ್ಯತ್ವರೂಪವಾದ ಧರ್ಮವನ್ನು ಕುರಿತು ಧರ್ಮಿತ್ವವನ್ನು ಒಪ್ಪಬೇಕಾಗುತ್ತದೆ. ಬಾಧವು ನಿವೃತ್ತಿರೂಪವಾದರೆ ಅದನ್ನು ಬ್ರಹ್ಮಸ್ವರೂಪವೆಂದು ಒಪ್ಪಿದರೆ, ಬ್ರಹ್ಮನಲ್ಲಿ ಜಡತ್ವವನ್ನು, ಭಾವಜ್ಞಾನಾಧೀನವಾದಜ್ಞಾನತ್ವವನ್ನು, ಅಭಾವತ್ವವನ್ನು ಒಪ್ಪಬೇಕಾಗುವುದರಿಂದ ಈ ಧರ್ಮಗಳನ್ನು ಕುರಿತು ಬ್ರಹ್ಮನಿಗೆ ಧರ್ಮಿತ್ವವು ಉಂಟಾಗುತ್ತದೆ.

**ಭಾವವಿಲಾಸಿನೀ**– ತಸ್ಯ ಅಬಾಧ್ಯಸ್ಯಾಽಭಾವರೂಪಬಾಧಸ್ಯ । ಧರ್ಮಿತ್ವಂ ಬ್ರಹ್ಮಣ ಇತಿ ಶೇಷಃ । ಇತ್ಯಾದೀತ್ಯತ್ರಾದಿಪದೇನ ಪದಾರ್ಥತ್ವಸ್ವಾಧಿಕರಣತ್ವಜ್ಞೇಯತ್ವಾದೀನಾಂ ಗ್ರಹಣಮ್ । ಅಭಾವಧರ್ಮಾಣಾಂ ಅಭಾವಾಶ್ರಿತಧರ್ಮಾಣಾಮ್ । ಪ್ರಸಕ್ತಿತಃ ಬ್ರಹ್ಮಣ ಏವಾಭಾವರೂಪತ್ವಾಂಗೀಕಾರಾತ್ ॥ ೭೩೦ ॥

**ವಿವರಣೆ**– ಅದ್ವೈತ ಮತದಲ್ಲಿ ಬಾಧವೆಂದರೆ ನಿವೃತ್ತಿ ಎಂದು ಒಂದು ಪಕ್ಷ. ನಿವೃತ್ತಿಯೆಂದರೆ ಧ್ವಂಸ. ಅದು ಅಭಾವರೂಪವಾದುದು. ಭಾವವು ಅಭಾವರೂಪವಾದುದರಿಂದ ನಾವು ಅಭಾವ ದ್ವೈತವನ್ನು ಒಪ್ಪುತ್ತೇವೆ ಎಂಬುದು ಅವರ ಮತ. ಆದರೂ ಅಭಾವ ಜ್ಞಾನಕ್ಕೆ ಪ್ರತಿಯೋಗಿಜ್ಞಾನಸಾಪೇಕ್ಷತ್ವ ಇರುವುದರಿಂದ ಬಾಧವು ಅಭಾವರೂಪವಾದರೆ ಮತ್ತು ಬ್ರಹ್ಮಸ್ವರೂಪವಾದರೆ, ಅಲ್ಲಿ ಜಡತ್ವವನ್ನು ಪ್ರತಿಯೋಗಿಜ್ಞಾನಾತ್ವವನ್ನು, ಅಭಾವತ್ವವನ್ನು ಅವಶ್ಯಕವಾಗಿ ಒಪ್ಪಲೇಬೇಕು. ಆಗ ಬ್ರಹ್ಮನಿಗೆ ಪುನಃ ಧರ್ಮಿತ್ವವು ಉಂಟಾಗುತ್ತದೆ ಎಂದು ಅಭಿಪ್ರಾಯ.

**ಅಭಾವಧರ್ಮಶೂನ್ಯತ್ವೇ ನಿಷೇಧತ್ವಂ ಚ ತಸ್ಯ ನ ।**
**ನಿಷೇಧಪ್ರತಿಯೋಗಿತ್ವಂ ಗುಣಾನಾಂ ನೇತ್ಯಬಾಧ್ಯತಾ ॥ ೭೩೨ ॥**

**ಅರ್ಥ**– ಅಭಾವಧರ್ಮಶೂನ್ಯತ್ವೇ= ಬ್ರಹ್ಮನು ಅಭಾವಧರ್ಮಗಳಿಂದ ರಹಿತನಾದರೆ, ತಸ್ಯ= ಆ ಬ್ರಹ್ಮನಿಗೆ, ನಿಷೇಧತ್ವಂ ಚ= ನಿಷೇಧರೂಪತ್ವವು, ನ= ಇರುವುದಿಲ್ಲ, ಆಗ, ಗುಣಾನಾಂ= ಗುಣಗಳಿಗೆ, ನಿಷೇಧಪ್ರತಿಯೋಗಿತ್ವಂ= ನಿಷೇಧ ಪ್ರತಿಯೋಗಿತ್ವವು, ನ ಇತಿ= ಇಲ್ಲ ಎಂಬ ಕಾರಣದಿಂದ, ಅಬಾಧ್ಯತಾ= ಅಬಾಧ್ಯತ್ವವೇ ಸಿದ್ಧಿಸುತ್ತದೆ.

**ಅನುವಾದ–** ಬ್ರಹ್ಮನಲ್ಲಿ ಅಭಾವಧರ್ಮಗಳೇ ಇಲ್ಲವೆಂದರೆ, ಆಗ ಬ್ರಹ್ಮ ನಿಷೇಧರೂಪನಲ್ಲ. ಆಗ ನಿಷೇಧರೂಪವಾದ ಬಾಧವು ಬ್ರಹ್ಮಸ್ವರೂಪವಲ್ಲ. ಆದ್ದರಿಂದ ಗುಣಗಳಿಗೆ ನಿಷೇಧ ಪ್ರತಿಯೋಗಿತ್ವವು ಬರುವುದಿಲ್ಲವಾದ್ದರಿಂದ ಗುಣಗಳು ಅಬಾಧ್ಯವೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅಭಾವಧರ್ಮಶೂನ್ಯತ್ವೇ ಉಕ್ತಾಭಾವತ್ವಪ್ರಯೋಜಕಧರ್ಮಶೂನ್ಯತ್ವೇ । ನಿಷೇಧತ್ವಂ ಗುಣನಿಷೇಧರೂಪಾಭಾವತ್ವಮ್ । ತತಃ ಕಿಮ್? ಇತ್ಯತ ಆಹ– ನಿಷೇಧೇತಿ ॥ ನಿಷೇಧಪ್ರತಿಯೋಗಿತ್ವಂ ನೇತಿ ಹೇತೋಃ ಗುಣಾನಾಮಬಾಧ್ಯತಾ ಸ್ಯಾದಿತ್ಯರ್ಥಃ ॥ ೭೩೨ ॥

**ವಿವರಣೆ–** ಬಾಧವು ಅವರ ರೀತ್ಯಾ ಗುಣನಿಷೇಧರೂಪವಾದುದು. ಅದು ಬ್ರಹ್ಮಸ್ವರೂಪ. ನಿಷೇಧವೆಂದರೆ ಅಭಾವವೆಂದೇ ಅರ್ಥ. ಆದ್ದರಿಂದ ಬ್ರಹ್ಮನಲ್ಲಿ ಅಭಾವಧರ್ಮಗಳಿಲ್ಲದಿದ್ದರೆ ಬ್ರಹ್ಮನಿಗೆ ನಿಷೇಧರೂಪತ್ವವೇ ಸಿದ್ಧವಾಗುವುದಿಲ್ಲ. ಆಗ ಬ್ರಹ್ಮಸ್ವರೂಪವಾದ ಗುಣನಿಷೇಧವೂ ಸಿದ್ಧವಾಗುವುದಿಲ್ಲ. ಗುಣನಿಷೇಧವೂ ಸಿದ್ಧವಾಗದಿದ್ದರೆ ಗುಣಗಳಲ್ಲಿ ನಿಷೇಧ ಪ್ರತಿಯೋಗಿತ್ವವು ಇಲ್ಲದಿರುವುದರಿಂದ, ಗುಣಗಳು ಅಬಾಧ್ಯವೆಂದೇ ಸಿದ್ಧವಾಗುತ್ತದೆ.

**ಬೋಧ್ಯಂ ಚೇನ್ನಿರ್ಗುಣತ್ವಂ ಸ್ಯಾನ್ನಿರ್ಗುಣತ್ವಂ ನ ಸಿದ್ಧ್ಯತಿ ।**
**ನ ಬೋಧ್ಯಂ ನಿರ್ಗುಣತ್ವಂ ಚೇನ್ನಿರ್ಗುಣತ್ವಂ ನ ಸಿದ್ಧ್ಯತಿ ॥ ೭೩೩ ॥**

**ಅರ್ಥ–** ನಿರ್ಗುಣತ್ವಂ= ನಿರ್ಗುಣತ್ವವು, ಬೋಧ್ಯಂ ಚೇತ್= ತಿಳಿಸಲ್ಪಡುವುದಾದರೆ, ನಿರ್ಗುಣತ್ವಂ= ನಿರ್ಗುಣತ್ವವು, ನ ಸಿದ್ಧ್ಯತಿ= ಸಿದ್ಧಿಸುವುದಿಲ್ಲ, ನಿರ್ಗುಣತ್ವಂ= ನಿರ್ಗುಣತ್ವವು, ಬೋಧ್ಯಂ ನ= ತಿಳಿಸಲ್ಪಡುವುದು ಅಲ್ಲದಿದ್ದರೆ, ನಿರ್ಗುಣತ್ವಂ= ನಿರ್ಗುಣತ್ವವು, ನ ಸಿದ್ಧ್ಯತಿ= ಸಿದ್ಧಿಸುವುದಿಲ್ಲ.

ನಿರ್ಗುಣತ್ವಂ= ನಿರ್ಗುಣತ್ವವು, ಬಾಧ್ಯಂ ಚೇತ್= ಬಾಧ್ಯವಾದರೆ, ನಿರ್ಗುಣತ್ವಂ= ನಿರ್ಗುಣತ್ವವು, ನ ಸಿದ್ಧ್ಯತಿ= ಸಿದ್ಧಿಸುವುದಿಲ್ಲ, ನಿರ್ಗುಣತ್ವಂ= ನಿರ್ಗುಣತ್ವವು, ನ ಬಾಧ್ಯಂ ಚೇತ್= ಬಾಧ್ಯವಲ್ಲವೆಂದಾದರೆ, ನಿರ್ಗುಣತ್ವಂ= ನಿರ್ಗುಣತ್ವವು, ನ ಸಿದ್ಧ್ಯತಿ= ಸಿದ್ಧಿಸುವುದಿಲ್ಲ.

**ಅನುವಾದ–** ನಿರ್ಗುಣತ್ವವು ಬೋಧ್ಯವಾದರೆ (ಬಾಧ್ಯವಾದರೆ) ನಿರ್ಗುಣತ್ವವು ಸಿದ್ಧಿಸುವುದಿಲ್ಲ. ನಿರ್ಗುಣತ್ವವು ಬೋಧ್ಯವಲ್ಲದಿದ್ದರೂ (ಬಾಧ್ಯವಲ್ಲದಿದ್ದರೂ) ನಿರ್ಗುಣತ್ವವು ಸಿದ್ಧಿಸುವುದಿಲ್ಲ.

**ಭಾವವಿಲಾಸಿನೀ–** ಉಕ್ತಾರ್ಥಂ ಸಂಕಲಯ್ಯಾಹ– **ಬೋಧ್ಯಂ ಚೇದಿತಿ** ॥ )ಬಾಧ್ಯಮಿತಿ ಪಾಠೇ ತು ಪ್ರಕಾರಾಂತರೇಣಾಪಿ ನಿರ್ಗುಣತ್ವಂ ದುರ್ವಚಮಿತ್ಯಾಹೇತಿ ಸಂಗತಿಃ । ಆದ್ಯೇ ಸ್ವವಿರೋಧಿ

**ಭೂತನಿರ್ಗುಣತ್ವಾಭಾವಾತ್ ಸಗುಣತ್ವಸಿದ್ಧಿಃ । ದ್ವಿತೀಯೇ ಅಬಾಧಿತನಿರ್ಗುಣತ್ವಾಖ್ಯ ಧರ್ಮೇಣೈವ ಸಗುಣತ್ವಸಿದ್ಧಿರಿತ್ಯರ್ಥಃ ।) (ಪ್ರಕ್ಷಿಪ್ತೋಽಯಂ ಗ್ರಂಥಃ) ನ ಸಿಧ್ಯತಿ ಉಕ್ತವಿಧಯಾ ಮೇಯತ್ವಾದಿಧರ್ಮಾಣಾಂ ಪ್ರಾಪ್ತೇಃ । ಪಕ್ಷಾಂತರೇ ತು ಪ್ರಮಾಣಾಭಾವಾದಿತ್ಯು-ಭಯತ್ರಾಪ್ಯೇಕಮೇವ ದೂಷಣಮ್ ॥ ೭೩೩ ॥**

**ವಿವರಣೆ–** ನಿರ್ಗುಣತ್ವವು ಬೋಧ್ಯವೆಂದರೆ ಅಧಿಕರಣನಾದ ನಿರ್ಗುಣಬ್ರಹ್ಮನಲ್ಲಿಯೇ ನಿರ್ಗುಣತ್ವವನ್ನು ಹೇಳಬೇಕಾಗುವುದರಿಂದ, ಬ್ರಹ್ಮನಿಗೆ ಪ್ರಮಾಣವಿಷಯತ್ವವು ಬರುವುದರಿಂದ ನಿರ್ಗುಣತ್ವವು ಸಿದ್ಧಿಸುವುದಿಲ್ಲ. ನಿರ್ಗುಣತ್ವವು ಬೋಧ್ಯವಾಗದಿದ್ದರೆ ನಿರ್ಗುಣತ್ವವನ್ನು ಹೇಳುವ ಪ್ರಮಾಣವೇ ಇಲ್ಲವಾದ್ದರಿಂದಲೂ ನಿರ್ಗುಣತ್ವವು ಸಿದ್ಧವಾಗುವುದಿಲ್ಲ. ನಿರ್ಗುಣತ್ವವು ಬಾಧ್ಯವಲ್ಲವಾದರೆ ನಿರ್ಗುಣತ್ವ ಎಂಬ ಧರ್ಮವು ಉಳಿಯುವುದರಿಂದ, ನಿರ್ಗುಣತ್ವ ಎಂಬ ಧರ್ಮದಿಂದಲೇ ಬ್ರಹ್ಮನು ಸಗುಣನಾಗುತ್ತಾನೆ. ಆದ್ದರಿಂದ ನಿರ್ಗುಣತ್ವ ಸಿದ್ಧಿಸುವುದಿಲ್ಲ.

**ಅತಃ ಶುಭಗುಣಾಂಭೋಧಿರ್ಹರಿಃ ಸರ್ವೇಶ್ವರೇಶ್ವರಃ ।**
**ತತಃ ಪರತರಂ ನಾನ್ಯದಿತಿ ಸರ್ವಂ ಮನೋರಮಮ್ ॥ ೭೩೪ ॥**

**ಅರ್ಥ–** ಅತಃ= ಆ ಕಾರಣದಿಂದ, ಸರ್ವೇಶ್ವರೇಶ್ವರಃ= ಸರ್ವೇಶ್ವರೇಶ್ವರನಾದ, ಹರಿಃ= ಹರಿಯು, ಶುಭಗುಣಾಂಭೋಧಿಃ= ಸದ್ಗುಣ ಸಮುದ್ರನು, ತತಃ= ಅವನಿಗಿಂತಲೂ, ಪರತರಂ= ಉತ್ತಮವಾದುದು, ಅನ್ಯತ್ ನ= ಇನ್ನೊಂದು ಇಲ್ಲ, ಇತಿ= ಎಂದು, ಸರ್ವಂ= ಎಲ್ಲವೂ, ಮನೋರಮಮ್= ಮನೋರಮವಾಯಿತು.

**ಅನುವಾದ– ಆದ್ದರಿಂದ ಸರ್ವೇಶ್ವರೇಶ್ವರನಾದ ಹರಿಯೇ ಶುಭಗುಣಗಳ ಸಮುದ್ರನಾದವನು, ಅವನನ್ನು ಬಿಟ್ಟು ಬೇರೆ ಹಿರಣ್ಯಗರ್ಭಾದಿಗಳು ಯಾರೂ ಅವನಿಗಿಂತ ಶ್ರೇಷ್ಠರಲ್ಲ ಎಂದು ಸರ್ವವೂ ಸಮಂಜಸವಾಯಿತು.**

**ಭಾವವಿಲಾಸಿನೀ– ಉಕ್ತಾರ್ಥಮುಪಸಂಹರತಿ– ಅತ ಇತಿ ॥ ೭೩೪ ॥**

**ಏಷ ನಿಷ್ಕಂಟಕಃ ಪಂಥಾ ಯತ್ರ ಸಂಪೂಜ್ಯತೇ ಹರಿಃ ।**
**ಕುಪಥಂ ತಂ ವಿಜಾನೀಯಾದ್ ಗೋವಿಂದರಹಿತಾಗಮಮ್ ॥ ೭೩೫ ॥**

**ಅರ್ಥ–** ಯತ್ರ= ಎಲ್ಲಿ, ಹರಿಃ= ಹರಿಯು, ಸಂಪೂಜ್ಯತೇ= ಚೆನ್ನಾಗಿ ಪೂಜಿಸಲ್ಪಡುತ್ತಾನೆಯೋ, ಏಷಃ= ಅಂತಹ ಈ ಮಾರ್ಗವು, ನಿಷ್ಕಂಟಕಃ= ನಿರ್ವಿಘ್ನವಾದ, ಪಂಥಾಃ= ಮಾರ್ಗವು, ತಂ= ಆ, ಗೋವಿಂದರಹಿತಾಗಮ್= ಗೋವಿಂದನ ಪ್ರತಿಪಾದನೆಯಿಲ್ಲದಿರುವ ಆಗಮವನ್ನು, ಕುಪಥಂ= ದುರ್ಮಾರ್ಗವೆಂದು, ವಿಜಾನೀಯಾತ್= ತಿಳಿಯಬೇಕು.

**ಅನುವಾದ–** ಎಲ್ಲಿ ಹರಿಯು ಚೆನ್ನಾಗಿ ಪೂಜಿಸಲ್ಪಡುತ್ತಾನೆಯೋ, ಅದೇ ನಿಷ್ಕಂಟಕವಾದ ಮಾರ್ಗ. ಗೋವಿಂದನ ಶ್ರೇಷ್ಠತೆಯನ್ನು ಪ್ರತಿಪಾದನೆ ಮಾಡದಿರುವ ಆಗಮವು ದುರ್ಮಾರ್ಗ.

**ವಿವರಣೆ–** ಗೋವಿಂದರಹಿತಾಗಮವೆಂದರೆ ಅವೈಷ್ಣವ ಪುರಾಣಗಳು, ಪಾಶುಪತಾಗಮಗಳು, ರುದ್ರಾದಿಪರತ್ವೇನ ಅನ್ಯರು ಅಂಗೀಕಾರ ಮಾಡಿದ ಶ್ರುತಿಗಳೂ ಸಹ ಅವೆಲ್ಲವೂ ದುರಾಗಮವೆಂದು ಇಲ್ಲಿ ತಿಳಿಸಿದ್ದಾರೆ.

**ಇತಿ ಭಾರತವಾಕ್ಯಂ ಹಿ ಗೋವಿಂದರಹಿತಾಗಮಮ್ ।**
**ಕುಪಥಂ ವಕ್ತ್ಯತೋಽಪ್ಯಾಸೀನ್ನಿರ್ಮೂಲಂ ನಿರ್ಗುಣಂ ತವ ॥ ೭೩೬ ॥**

**ಅರ್ಥ–** ಇತಿ= ಈ ರೀತಿಯಲ್ಲಿ, ಭಾರತವಾಕ್ಯಂ= ಮಹಾಭಾರತವಾಕ್ಯವು, ಗೋವಿಂದರಹಿತಾಗಮಮ್= ಗೋವಿಂದನಿಲ್ಲದಿರುವ ಆಗಮವನ್ನು, ಕುಪಥಂ= ದುರ್ಮಾರ್ಗವೆಂದು, ವಕ್ತಿ ಹಿ= ಹೇಳುತ್ತದಷ್ಟೇ, ಅತಃ= ಆ ಕಾರಣದಿಂದ, ತವ= ನಿನ್ನ, ನಿರ್ಗುಣಂ= ನಿರ್ಗುಣಬ್ರಹ್ಮನು, ನಿರ್ಮೂಲಂ= ಪ್ರಮಾಣರಹಿತವಾದ ವಸ್ತು.

**ಅನುವಾದ–** ಹೀಗೆ ಭಾರತವಾಕ್ಯವು ಗೋವಿಂದರಹಿತಾಗಮವನ್ನು ದುರ್ಮಾರ್ಗವೆಂದು ಹೇಳಿದುದರಿಂದ ನಿನ್ನ ನಿರ್ಗುಣಬ್ರಹ್ಮನು ಗೋವಿಂದನಲ್ಲವಾದ್ದರಿಂದ ಅಂತಹ ಬ್ರಹ್ಮನು ನಿರ್ಮೂಲನಾದವನು.

**ವಿವರಣೆ–** ಅಂತಹ ನಿರ್ಗುಣಬ್ರಹ್ಮನು ಸಚ್ಛಾಸ್ತ್ರಗಳಲ್ಲಿ ಎಲ್ಲೂ ಪ್ರತಿಪಾದಿತನಾಗುವುದಿಲ್ಲ. ಅವನನ್ನು ಸಾಧಿಸಲು ಯಾವ ಪ್ರಮಾಣವೂ ಇಲ್ಲ ಎಂದು ಅಭಿಪ್ರಾಯ.

**ಅವೈಷ್ಣವಪುರಾಣಾನಾಮವೈಷ್ಣವಮತಸ್ಯ ಚ ।**
**ಅವೈಷ್ಣವಶ್ರುತೀನಾಂ ಚ ಕುಪಥತ್ವಮಭೂದಹೋ ॥ ೭೩೭ ॥**

**ಅರ್ಥ–** ಅವೈಷ್ಣವಪುರಾಣಾನಾಮ್= ಅವೈಷ್ಣವಪುರಾಣಗಳಿಗೂ, ಅವೈಷ್ಣವಮತಸ್ಯ ಚ= ಮತ್ತು ಅವೈಷ್ಣವ ಮತಕ್ಕೂ, ಅವೈಷ್ಣವಶ್ರುತೀನಾಂ ಚ= ಮತ್ತು ವಿಷ್ಣುಪರತ್ವವನ್ನು ಹೇಳದೆ, ಅನ್ಯಪರತ್ವವನ್ನು ಹೇಳಿ ವ್ಯಾಖ್ಯಾನ ಮಾಡುವ ಶ್ರುತಿಗಳಿಗೂ, ಕುಪಥತ್ವಂ= ದುರ್ಮಾರ್ಗತ್ವವು, ಅಭೂತ್= ಉಂಟಾಯಿತು. ಅಹೋ= ಆಶ್ಚರ್ಯವು!

**ಅನುವಾದ–** ಈ ಭಾರತವಾಕ್ಯದಿಂದ ಅವೈಷ್ಣವಪುರಾಣಗಳು, ಅವೈಷ್ಣವಮತಗಳು, ವಿಷ್ಣುಪರತ್ವರಹಿತವಾಗಿ ವ್ಯಾಖ್ಯಾನ ಮಾಡಿದ ಶ್ರುತಿಗಳು ದುರ್ಮಾರ್ಗವೆಂದು ಸಿದ್ಧವಾಗುತ್ತವೆ ಎಂಬುದು ಆಶ್ಚರ್ಯಕರ ಸಂಗತಿ.

**ಭಾವವಿಲಾಸಿನೀ–** ಕಿಂ ಬಹುನಾ ಭಾರತಸ್ಥೈಕಪದ್ಯೇನೈವ ಸರ್ವೋಽಪಿ ಮಾಧ್ವರಾದ್ಧಾಂತಃ ಸಿದ್ಧ್ಯತೀತ್ಯಾಹ– **ಏಷ ಇತಿ ॥** ಅತಃ ಗೋವಿನ್ದರಹಿತಾಗಮಸ್ಯ ಕುಮಾರ್ಗತ್ವಾತ್ ಪರೋದೀರಿತ-ನೈರ್ಗುಣ್ಯಮತಸ್ಯ ಚ ಗೋವಿಂದರಹಿತಾಗಮತ್ವಾತ್ ನಿರ್ಮೂಲಂ ಕುಮತಸ್ಯಾರ್ಥಾ-ಸಾಧಕತ್ವಾದ್ ಅವೈಷ್ಣವಪುರಾಣಾನಾಂ ಶೈವಬ್ರಾಹ್ಮಪುರಾಣಾನಾಮ್ । ಅವೈಷ್ಣವಮತಸ್ಯ ಪಾಶುಪತಾದಿಮತಸ್ಯ । ಅವೈಷ್ಣವಶ್ರುತೀನಾಂ ರುದ್ರಾದಿವಿಷಯತ್ವೇನ ತೈರಂಗೀಕೃತಶ್ರುತೀನಾಂ ಚ ॥ ೭೩೫-೭೩೭ ॥

ಹರೇರ್ಭಿನ್ನತ್ವಪೂಜ್ಯತ್ವಸ್ವಾಮಿತ್ವಪ್ರತಿಪಾದಿಕಾ ।
ನಿಷ್ಕಂಟಕಾ ಮಾಧ್ವಶುದ್ಧಪದ್ಧತಿಶ್ಚೇತಿ ಸಿದ್ಧ್ಯತಿ ॥ ೭೩೮ ॥

**ಅರ್ಥ–** ಹರೇಃ= ಹರಿಯ, ಭಿನ್ನತ್ವಪೂಜ್ಯತ್ವಸ್ವಾಮಿತ್ವಪ್ರತಿಪಾದಿಕಾ= ಭಿನ್ನತ್ವವನ್ನು, ಪೂಜ್ಯತ್ವವನ್ನು ಮತ್ತು ಸ್ವಾಮಿತ್ವವನ್ನು ಪ್ರತಿಪಾದನೆ ಮಾಡುವ, ಮಾಧ್ವ ಶುದ್ಧಪದ್ಧತಿಃ= ಮಧ್ವಾಚಾರ್ಯರ ಶುದ್ಧವಾದ ಮಾರ್ಗವು, ನಿಷ್ಕಂಟಕಾ= ನಿಷ್ಕಂಟಕವಾದುದು, ಇತಿ= ಎಂದು, ಸಿದ್ಧ್ಯತಿ= ಸಿದ್ಧಿಸುತ್ತದೆ.

**ಅನುವಾದ–** ಹರಿಗೆ ಸಮಸ್ತ ಜಗತ್ತಿನಿಂದ ಭಿನ್ನತ್ವವನ್ನು, ಪೂಜ್ಯತ್ವವನ್ನು ಮತ್ತು ಸಮಸ್ತ ಜಗತ್ತಿನ ಸ್ವಾಮಿತ್ವವನ್ನು ಪ್ರತಿಪಾದನೆ ಮಾಡುವ ಮಧ್ವಾಚಾರ್ಯರ ಮಾರ್ಗವೇ ಶುದ್ಧವಾದ ಮಾರ್ಗ ಮತ್ತು ನಿಷ್ಕಂಟಕವಾದ ಮಾರ್ಗವೆಂದು ಸಿದ್ಧವಾಯಿತು.

**ಭಾವವಿಲಾಸಿನೀ–** ಪೂಜ್ಯತ ಇತ್ಯುಕ್ತ್ಯಾ ಹರೇಃ ಪೂಜ್ಯತ್ವಸ್ಯ ಪೂಜ್ಯಪೂಜಕಭಾವೋಪಯುಕ್ತ-ಭೇದಸ್ಯ ಪೂಜ್ಯತ್ವಪ್ರಯೋಜಕಸ್ವಾಮಿತ್ವಸ್ಯ ಚ ಲಾಭಾತ್ ಸಿದ್ಧಮರ್ಥಮಾಹ– **ಹರೇರಿತಿ ॥೭೩೮॥**

ಸಮ್ಯಕ್ತ್ವಾರ್ಥೋಪಸರ್ಗೋಽಸಾವಸಮ್ಯಕ್ತ್ವಂ ನಿಷೇಧತಿ ।
ಸತ್ಯೋಽಭೂತ್ ತೇನ ಭೇದಾದಿರಸ್ತಂ ತತ್ಸಮಪೂಜನಮ್ ॥ ೭೩೯ ॥

**ಅರ್ಥ–** ಅಸೌ= ಈ, ಸಮಕ್ತ್ವಾರ್ಥೋಪಸರ್ಗಃ= ಚೆನ್ನಾಗಿ ಎಂದು ಹೇಳುವ ಉಪಸರ್ಗವು, ಅಸಮ್ಯಕ್ತ್ವಂ= ಸಮಕ್ತ್ವವಿಲ್ಲದಿರುವುದನ್ನು, ನಿಷೇಧತಿ= ನಿಷೇಧಿಸುತ್ತದೆ, ತೇನ= ಆ ಕಾರಣದಿಂದ, ಭೇದಾದಿಃ= ಭೇದ ಮೊದಲಾದವು, ಸತ್ಯಃ ಅಭೂತ್= ಸತ್ಯವಾಯಿತು, ತತ್ಸಮಪೂಜನಮ್= ವಿಷ್ಣುವಿಗೆ ಸಮವಾಗಿ ರುದ್ರಾದಿಗಳನ್ನು ಪೂಜಿಸುವುದು, ಅಸ್ತಂ= ನಿರಸ್ತವಾಯಿತು.

**ಅನುವಾದ–** ಸಂಪೂಜ್ಯತೇ ಎಂಬಲ್ಲಿರುವ 'ಸಂ' ಎಂಬ ಉಪಸರ್ಗವು ಪೂಜೆಯಲ್ಲಿ ಸಮ್ಯಕ್ತ್ವವನ್ನು ಹೇಳುತ್ತದೆ. ಪೂಜೆಯಲ್ಲಿ ಸಮ್ಯಕ್ತ್ವ ಎಂದರೆ ಮಧ್ವಾಚಾರ್ಯರು ಹೇಳಿದಂತೆ ವಿಷ್ಣುವಿನ ಭೇದ, ಸ್ವಾಮಿತ್ವವನ್ನು ತಿಳಿದು ಮಾಡುವ ಪೂಜೆ. ಆದ್ದರಿಂದ ಭೇದಾದಿಗಳು ಸತ್ಯವಾಯಿತು. ವಿಷ್ಣುವಿಗೆ ಸಮನಾಗಿ ರುದ್ರನನ್ನು ಪೂಜೆ

**ಮಾಡುವುದು, ಅಥವಾ ವಿಷ್ಣುವಿನಿಂದ ಅಭಿನ್ನನೆಂದು ತಿಳಿದು ಪೂಜೆಮಾಡುವುದು ಇವೆಲ್ಲಾ ದುಷ್ಟವಾದ ಪೂಜೆಗಳು ಎಂದು ಸಿದ್ಧವಾಗುತ್ತವೆ.**

**ಭಾವವಿಲಾಸಿನೀ**— ಸಮ್ಪೂಜ್ಯತ ಇತ್ಯತ್ರ ಸಮಿತ್ಯುಪಸರ್ಗಲಬ್ಧಾರ್ಥಮಾಹ– ಸಮ್ಯಕ್ತ್ವೇತಿ ॥ ತೇನ ಮಿಥ್ಯಾತ್ವರೂಪಾಸಮ್ಯಕ್ತ್ವನಿಷೇಧೇನ ಭೇದಪೂಜ್ಯತ್ವಸ್ವಾಮಿತ್ವಾದಿಃ ಸತ್ಯೋಽಭೂತ್ । ತಸ್ಯ ಹರೇಃ ರುದ್ರಾದಿಸಾಮ್ಯೇನ ಪೂಜನಂ ಅಸ್ತಂ ನಿರಾಕೃತಮ್ । ಹರೇರೇವ ಸಮ್ಯಕ್ಪೂಜ್ಯತ್ವೋಕ್ತ್ಯಾ ತದಿತರೇಷಾಮ್ ಅತಾದೃಶಪೂಜಾವಿಷಯತ್ವಲಾಭಾತ್ । ಏತಾವಂತಮರ್ಥಮೇಕಮೇವ ಪದ್ಯಂ ವಕ್ತೀತ್ಯಹೋ ಇತ್ಯುಕ್ತಮ್ ॥ ೭೩೯ ॥

**ವಿವರಣೆ**— ಸಂಪೂಜ್ಯತೇ ಎಂಬಲ್ಲಿರುವ 'ಸಂ' ಎಂಬ ಉಪಸರ್ಗವೇ ಮಾಧ್ವ ಸಿದ್ಧಾಂತದ ಶುದ್ಧತ್ವವನ್ನು ಉಳಿದ ಸಿದ್ಧಾಂತಗಳ ಮತ್ತು ಆ ಸಿದ್ಧಾಂತವನ್ನು ಆಚರಿಸಿದ ಪೂಜೆಗಳ ದುಷ್ಟತ್ವವನ್ನು ಸಾಧಿಸಿಕೊಡುತ್ತದೆ ಎಂದು ತಾತ್ಪರ್ಯ.

ಮತ್ತೊಂದು ರೀತಿಯಿಂದ ನಿರ್ಗುಣಬ್ರಹ್ಮನು ವೇದಪುರಾಣಗಳಿಂದ ಪ್ರತಿಪಾದ್ಯನಲ್ಲ ಎಂದು ತೋರಿಸುತ್ತಿದ್ದಾರೆ.

**ಶೈವಂ ಬ್ರಾಹ್ಮಂ ವೈಷ್ಣವಂ ಚ ಪುರಾಣಮಖಿಲಂ ಯತಃ ।**
**ಅತಸ್ತೇಭ್ಯಃ ಪುರಾಣೇಭ್ಯೋ ಯದ್ ಬಹಿಸ್ತಚ್ಛ್ರುತೇರ್ಬಹಿಃ ॥ ೭೪೦ ॥**

**ಅರ್ಥ**— ಯತಃ=ಯಾವ ಕಾರಣದಿಂದ, ಅಖಿಲಂ ಪುರಾಣಂ=ಸಮಸ್ತಪುರಾಣಗಳು, ಶೈವಂ=ಶಿವನನ್ನು ಪ್ರತಿಪಾದಿಸುವುದು, ಬ್ರಾಹ್ಮಂ=ಬ್ರಹ್ಮದೇವರನ್ನು ಪ್ರತಿಪಾದಿಸುವುದು, ವೈಷ್ಣವಂ=ವಿಷ್ಣುದೇವತೆಯನ್ನು ಪ್ರತಿಪಾದಿಸುವುದು ಆಗಿವೆಯೋ, ಅತಃ=ಆದ್ದರಿಂದ, ತೇಭ್ಯಃ ಪುರಾಣೇಭ್ಯಃ=ಆ ಪುರಾಣಗಳಿಂದ, ಯದ್=ಯಾವ ನಿರ್ಗುಣನಾದ ಬ್ರಹ್ಮನು, ಬಹಿಃ=ಬಾಹ್ಯನಾಗಿದ್ದಾನೆಯೋ, ತತ್= ಆನಿರ್ಗುಣನಾದ ಬ್ರಹ್ಮನು, ಶ್ರುತೇಃ= ಶ್ರುತಿಯಿಂದಲೂ, ಬಹಿಃ=ಬಾಹ್ಯನು.

**ಅನುವಾದ**— **ಯಾವ ಕಾರಣದಿಂದ ಎಲ್ಲ ಪುರಾಣಗಳು, ಶೈವ, ಬ್ರಾಹ್ಮ ಮತ್ತು ವೈಷ್ಣವ ವಿಭಾಗಗಳಲ್ಲಿ ಸಿಗುತ್ತವೆಯೋ, ಆ ಕಾರಣದಿಂದ ಆ ಪುರಾಣಗಳಿಂದ ಯಾವುದು ಬಾಹ್ಯವಾದುದೋ ಅದು ಸ್ತುತಿಯಿಂದಲೂ ಬಾಹ್ಯವಾದುದು.**

**ಭಾವವಿಲಾಸಿನೀ**— ಪ್ರಕಾರಾಂತರೇಣ ನಿರ್ಗುಣಸ್ಯ ಪುರಾಣವೇದಬಹಿರ್ಭೂತತ್ವಂ ಪ್ರದರ್ಶಯತಿ– **ಶೈವಮಿತ್ಯಾದಿನಾ** ॥ ಯತಃ ಅಖಿಲಮಷ್ಟಾದಶಾತ್ಮಕಂ ಪುರಾಣಂ ಶೈವಂ ಬ್ರಾಹ್ಮಂ ವೈಷ್ಣವಂ ಚ ಶಿವಬ್ರಹ್ಮವಿಷ್ಣ್ವಾಖ್ಯತ್ರಿದೇವತಾವಿಷಯಮ್ । ಅತಃ ಸರ್ವಪುರಾಣಾನಾಂ ತ್ರಿದೇವತಾವಿಷಯತ್ವಾದ್ ಯನ್ನಿರ್ಗುಣಂ ಪುರಾಣೇಭ್ಯೋ ಬಹಿಃ ತನ್ನಿರ್ಗುಣಂ ಶ್ರುತೇರಪಿ ಬಹಿಃ । ಪುರಾಣಶ್ರುತ್ಯೋರೈಕಾರ್ಥ್ಯನಿಯಮಾತ್ ॥ ೭೪೦ ॥

**ವಿವರಣೆ**– ಹದಿನೆಂಟು ಪುರಾಣಗಳಲ್ಲಿ ಕೆಲವು ಪುರಾಣಗಳು ಶಿವನನ್ನು ಪ್ರತಿಪಾದಿಸುವುದು, ಕೆಲವು ಬ್ರಹ್ಮನನ್ನು, ಕೆಲವು ವಿಷ್ಣುವನ್ನು ಪ್ರತಿಪಾದಿಸುತ್ತವೆ. ನೀನು ಹೇಳುವ ನಿರ್ಗುಣನಾದ ಬ್ರಹ್ಮನು, ಪುರಾಣಪ್ರತಿಪಾದ್ಯರಾದ ಶಿವ ಬ್ರಹ್ಮ ವಿಷ್ಣುಗಳಿಂದ ಭಿನ್ನನು.

ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ ಎಂದು ಶ್ರುತಿಯು ಪುರಾಣಗಳನ್ನು ಐದನೆಯ ವೇದವೆಂದು ಗ್ರಹಿಸಿದೆ. ಅದಲ್ಲದೆ ಪುರಾಣದ ಅರ್ಥ ಶ್ರುತಿಯ ಅರ್ಥ ಎರಡೂ ಭಿನ್ನವಲ್ಲ, ಅವೆಲ್ಲವೂ ಏಕಾರ್ಥಪ್ರತಿಪಾದಕವಾಗಿವೆ. ಹೀಗೆ ನಿಮ್ಮ ಬ್ರಹ್ಮನು ಪುರಾಣಗಳಿಂದಲೂ ಪ್ರತಿಪಾದ್ಯನಲ್ಲ, ವೇದಪ್ರತಿಪಾದ್ಯನೂ ಅಲ್ಲ.

**ಬ್ರಹ್ಮವಿಷ್ಣುಶಿವೇಭ್ಯೋಽಪಿ ಹ್ಯನ್ಯದ್ ಬ್ರಹ್ಮ ಮತಂ ತವ ।**
**ನಹಿ ಲೋಕಸ್ಯ ಸಂಮತ್ಯಾ ಪುರಾಣಂ ತತ್ರ ಕಿಂಚನ ॥ ೭೪೧ ॥**

**ಅರ್ಥ**– ಬ್ರಹ್ಮವಿಷ್ಣುಶಿವೇಭ್ಯೋ= ಬ್ರಹ್ಮವಿಷ್ಣುಶಿವನಿಗಿಂತ, ಅನ್ಯದ್‌ಬ್ರಹ್ಮ= ಭಿನ್ನನಾದ ಬ್ರಹ್ಮನೇ, ತವ ಮತಂ ಹಿ= ನಿನಗೆ ಅಭಿಮತನೆಂದು ನಿಶ್ಚಯವಷ್ಟೇ, ತತ್ರ=ಆ ಬ್ರಹ್ಮನ ವಿಷಯದಲ್ಲಿ, ಲೋಕಸ್ಯ=ಪುರಾಣಗಳನ್ನು ಮೂರು ಭಾಗವಾಗಿ ವಿಂಗಡಿಸುವ ಸಜ್ಜನರ, ಸಂಮತ್ಯಾ=ಸಮ್ಮತಿಯಿಂದ, ಕಿಂಚನ ಪುರಾಣಂ=ಯಾವ ಪುರಾಣವೂ, ನ= ಪ್ರತಿಪಾದಕವಾಗಿ ಇಲ್ಲ.

**ಅನುವಾದ**– ಲೋಕದಲ್ಲಿ ಪ್ರಸಿದ್ಧರಾದವರು ಬ್ರಹ್ಮ ವಿಷ್ಣು ಮಹೇಶ್ವರರು ದೇವತೆಗಳು. ಆದರೆ ನೀನು ಹೇಳುವ ಈ ನಿರ್ಗುಣನಾದ ಬ್ರಹ್ಮನು ಇವರಿಗಿಂತ ಭಿನ್ನ, ಅವನ ವಿಷಯದಲ್ಲಿ ಪ್ರಮಾಣವಾದ ಯಾವ ಪುರಾಣಗಳೂ ಇಲ್ಲ.

**ಭಾವವಿಲಾಸಿನೀ**– ತವ ಬ್ರಹ್ಮ ನಿರ್ಗುಣಮ್ । ತ್ರೇಧಾ ವಿಭಾಜಕಲೋಕಸಮ್ಮತ್ಯಾ । ತತ್ರ ನಿರ್ಗುಣೇ ॥ ೭೪೧ ॥

**ಷಟ್ಕಂ ಷಟ್ಕಂ ಪುರಾಣಾನಾಂ ರಾಜಸಂ ತಾಮಸಂ ಕಿಲ ।**
**ಷಟ್ಕಂ ತು ವಿಷ್ಣುವಿಷಯಂ ಸಾತ್ವಿಕಂ ಮೋಕ್ಷದಂ ಕಿಲ ॥ ೭೪೨ ॥**

**ಅರ್ಥ**– ಪುರಾಣಾನಾಂ=ಪುರಾಣಗಳ, ಷಟ್ಕಂ=ಆರರ ಗುಂಪು, ರಾಜಸಂ=ರಾಜಸವು, ಷಟ್ಕಂ=ಆರರ ಸಮೂಹವು, ತಾಮಸಂ=ತಾಮಸವು, ಷಟ್ಕಂ ತು=ಉಳಿದ ಆರರ ಸಮೂಹವು, ವಿಷ್ಣುವಿಷಯಂ= ವಿಷ್ಣುಪ್ರತಿಪಾದಕವಾದದ್ದು ಸಾತ್ವಿಕಂ= ಸಾತ್ವಿಕವು, ಮೋಕ್ಷದಂ ಕಿಲ= ಮೋಕ್ಷವನ್ನು ನೀಡುವುದಷ್ಟೇ.

**ಅನುವಾದ**– ಆರು ಪುರಾಣಗಳು ರಾಜಸ, ಆರು ಪುರಾಣಗಳು ತಾಮಸವೆಂದು ಪ್ರಸಿದ್ಧವಷ್ಟೇ? ವಿಷ್ಣುವಿಷಯಕವಾದ ಆರು ಪುರಾಣಗಳು ಸಾತ್ವಿಕ ಮತ್ತು ಮೋಕ್ಷದಾಯಕವೆಂತಲೂ ಪ್ರಸಿದ್ಧವಷ್ಟೇ?

ಲೋಕಸ್ಯ – ಔರಂಗಾಬಾದ್ ವೇದದಂದ

**ಭಾವವಿಲಾಸಿನೀ–** ಪ್ರಾಕ್ ಸರ್ವಾಣಿ ಪುರಾಣಾನ್ಯಂಗೀಕೃತ್ಯ ನಿರ್ಗುಣಂ ಬಹಿಷ್ಕೃತಮ್ । ಅಧುನಾ ತಾನಿ ವಿವಿಚ್ಯ ವಿಷ್ಣೋರೇವೋತ್ತಮತಾಂ ಶ್ರೌತತಾಂ ಸಾಧಯನ್ನಾಹ–ಷಟ್‌ಕಂ ಷಟ್‌ಕಮಿತಿ ॥ ಕಿಲೇತ್ಯನೇನ ಪೌರಾಣಿಕೀಂ ಪ್ರಸಿದ್ಧಿಂ ದ್ಯೋತಯತಿ ॥ ೭೪೨ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ನಿನಗೆ ಅಭಿಪ್ರೇತವಾದ ಬ್ರಹ್ಮನು ಹದಿನೆಂಟು ಪುರಾಣಗಳಿಂದಲೂ ಪ್ರತಿಪಾದ್ಯನಲ್ಲ ಎಂದು ತಿಳಿಸಿದರು. ಈಗ ಪುರಾಣಗಳನ್ನು ಸಾತ್ವಿಕ,ರಾಜಸ ತಾಮಸ ಎಂದು ವಿಭಾಗಮಾಡಿ ನೋಡಿದಾಗಲೂ ವಿಷ್ಣುವೇ ಉತ್ತಮನೆಂದು ನಿರ್ಣಯವಾಗುತ್ತದೆ ಎಂದು ತಿಳಿಸುತ್ತಿದ್ದಾರೆ.

ಸಾತ್ವಿಕಪುರಾಣಗಳು ಮೋಕ್ಷವನ್ನು ನೀಡುವವುಗಳೆಂದು ಪ್ರಸಿದ್ಧವಾಗಿದೆ. ಈ ಸಾತ್ವಿಕಪುರಾಣಗಳೆಲ್ಲವೂ ವಿಷ್ಣುವನ್ನು ಪ್ರತಿಪಾದಿಸುತ್ತಿವೆ. ಆದ್ದರಿಂದ ವಿಷ್ಣುವೇ ಸರ್ವೋತ್ತಮನೆಂದು ನಿರ್ಣಯವಾಗುತ್ತದೆ. ಕಿಲ ಎಂಬುದರಿಂದ ಈ ವಿಷಯವು ಪುರಾಣಪ್ರಸಿದ್ಧವೆಂದು ಸೂಚಿಸಿದ್ದಾರೆ.

**ಪಾದ್ಮಸ್ಯ ಪೂರ್ವಕಾಂಡಸ್ತು ಪೂರ್ವಪಕ್ಷೋ ಭವೇದ್ ಧ್ರುವಮ್ ।**
**ಯತಃ ಪಂಚಪುರಾಣೇಭ್ಯಃ ಸಾತ್ವಿಕೇಭ್ಯೋ ಬಹಿಷ್ಕೃತಃ ॥ ೭೪೩ ॥**

**ಅರ್ಥ–** ಪಾದ್ಮಸ್ಯ=ಪದ್ಮಪುರಾಣದ, ಪೂರ್ವಕಾಂಡಸ್ತು=ಪೂರ್ವಭಾಗವಾದರೂ, ಯತಃ= ಯಾವ ಕಾರಣದಿಂದ, ಪಂಚಪುರಾಣೇಭ್ಯಃ= ಕೇವಲ ಸಾತ್ವಿಕವಾದ ಐದು ಪುರಾಣಗಳಿಂದ, ಬಹಿಷ್ಕೃತಃ=ವಿರುದ್ಧಾರ್ಥವನ್ನು ಹೇಳುತ್ತಿದೆಯೋ, ಆ ಕಾರಣದಿಂದ, ಧ್ರುವಂ=ನಿಶ್ಚಯವಾಗಿ, ಪೂರ್ವಪಕ್ಷಃ=ಪೂರ್ವಪಕ್ಷವು, ಭವೇತ್=ಆಗಿದೆ.

**ಅನುವಾದ–** ಪದ್ಮಪುರಾಣದ ಪೂರ್ವಕಾಂಡದಲ್ಲಿ ಹೇಳಿದ ವಿಷಯವು ಐದು ಸಾತ್ವಿಕಪುರಾಣಗಳಲ್ಲಿ ಹೇಳಿದ ವಿಷಯಗಳಿಗಿಂತ ಬಾಹ್ಯವೇ (ವಿರುದ್ಧವೇ) ಆಗಿರುವ ಕಾರಣದಿಂದ ಪಾದ್ಮಪುರಾಣದ ಪೂರ್ವಕಾಂಡವು ನಿಶ್ಚಿತವಾಗಿ ಪೂರ್ವಪಕ್ಷವೇ ಆಗುತ್ತವೆ.

**ಭಾವವಿಲಾಸಿನೀ–** ಸಾತ್ವಿಕತ್ವೇನೋಕ್ತಪದ್ಮಪುರಾಣಪೂರ್ವಕಾಣ್ಡಸ್ಯ ಶೈವತ್ವಾತ್ ಕಥಂ ನಿರ್ಣಯ ಇತ್ಯತ ಆಹ– **ಪಾದ್ಮಸ್ಯೇತಿ** ॥ ಧ್ರುವಮಿತ್ಯನೇನ ಪೂರ್ವಕಾಣ್ಡಪೂರ್ವಪಕ್ಷಪದಯೋಃ ಉತ್ತರಕಾಣ್ಡೋತ್ತರಪಕ್ಷಪದಯೋಃ ಸಮಾನಾರ್ಥಕತ್ವ ಲಕ್ಷಣಯುಕ್ತಿಂ ಸೂಚಯತಿ । ಯುಕ್ತ್ಯಂತರಂ ಚಾಹ– **ಯತ ಇತಿ** ॥ ಪಂಚಪುರಾಣೇಭ್ಯಃ ಈದೃಗ್ವಿಭಾಗರಹಿತೇಭ್ಯಃ ಕೇವಲಸಾತ್ವಿಕೇಭ್ಯೋ ಬಹಿಷ್ಕೃತಃ ತದರ್ಥವಿರುದ್ಧಾರ್ಥವಾದೀ ತತೋಽಪಿ ಪೂರ್ವಪಕ್ಷ ಇತಿ ಸಂಬಂಧಃ ॥ ೭೪೩॥

**ವಿವರಣೆ–** ವಿಷ್ಣುವು ಸರ್ವೋತ್ತಮ ಎಂಬ ವಿಷಯದಲ್ಲಿ ಸಾತ್ವಿಕಪುರಾಣಗಳು ವಿಷ್ಣುವನ್ನು ಪ್ರತಿಪಾದಿಸುತ್ತಿವೆ ಎಂಬ ಯುಕ್ತಿಯು ಸಾಧುವಲ್ಲ, ಪಾದ್ಮಪುರಾಣದ

ಪೂರ್ವಭಾಗವು ಶಿವಪ್ರತಿಪಾದಕವಾಗಿದೆ. ಆದ್ದರಿಂದ ಇದು ನಿರ್ಣಾಯಕವಲ್ಲ ಎಂಬ ವಾದವನ್ನು ಇಲ್ಲಿ ನಿರಾಕರಿಸಿದ್ದಾರೆ.

ಯುಕ್ತಿ 1- ಪೂರ್ವಕಾಂಡವೆಂದರೆ ಪೂರ್ವಪಕ್ಷ ಎಂದೇ ಅರ್ಥ. ಉತ್ತರಕಾಂಡವೆಂದರೆ ಸಿದ್ಧಾಂತ ಎಂದು ಅರ್ಥ. ಪದ್ಮಪುರಾಣದ ಪೂರ್ವಕಾಂಡವು ಪೂರ್ವಪಕ್ಷ ಅದೇ ನಿರ್ಣಯವಲ್ಲ ಎಂಬುದನ್ನು ಆ ಪದವೇ ಸೂಚಿಸುತ್ತದೆ.

ಯುಕ್ತಿ 2 - ಶಿವಾದಿಗಳನ್ನು ಪ್ರತಿಪಾದಿಸದ ಕೇವಲ ಸಾತ್ವಿಕಪುರಾಣಗಳು ಪ್ರತಿಪಾದಿಸುವ ವಿಷಯಕ್ಕೆ ವಿರುದ್ಧವಾಗಿ ಪೂರ್ವಕಾಂಡವು ಪ್ರತಿಪಾದಿಸುತ್ತಿರುವುದರಿಂದಲೂ ಸಹ ಅದು ಪೂರ್ವಪಕ್ಷವೇ ಆಗಿದೆ.

**ವಿಸ್ತರೋಽಸ್ಯ ಪ್ರಮೇಯಸ್ಯ ಹ್ಯುತ್ತರತ್ರ ಭವಿಷ್ಯತಿ ।**
**ತತ್ ಸಾತ್ವಿಕಪುರಾಣೋಕ್ತೋ ವಿಷ್ಣುರ್ಬ್ರಹ್ಮ ಸ್ಮೃತೇರ್ಬಲಾತ್ ॥ ೭೪೪ ॥**

**ಅರ್ಥ–** ಅಸ್ಯ ಪ್ರಮೇಯಸ್ಯ=ಈ ಪ್ರಮೇಯದ, ವಿಸ್ತರಃ=ವಿಸ್ತಾರವು, ಉತ್ತರತ್ರ=ಮುಂದೆ, ಭವಿಷ್ಯತಿ=ಆಗುತ್ತದೆ. ತತ್= ಆದ್ದರಿಂದ, ಸ್ಮೃತೇಃ=ವೈಷ್ಣವಸ್ಮೃತಿಗಳ, ಬಲಾತ್= ಪ್ರಮಾಣಗಳಿಂದಲೂ, ಸಾತ್ವಿಕಪುರಾಣೋಕ್ತಃ= ಸಾತ್ವಿಕಪುರಾಣಗಳಿಂದ ಪ್ರತಿಪಾದ್ಯನಾದ, ವಿಷ್ಣುಃ= ವಿಷ್ಣುವೇ, ಬ್ರಹ್ಮ=ಬ್ರಹ್ಮನು.

**ಅನುವಾದ–** ಈ ಪ್ರಮೇಯವನ್ನು ಮುಂದೆ ವಿಸ್ತಾರವಾಗಿ ಹೇಳಲಾಗುವುದು. ಸಾತ್ವಿಕವಾದ ಸ್ಮೃತಿಗಳಿಂದಲೂ ಸಹ ವಿಷ್ಣುವೇ ಬ್ರಹ್ಮ ಎಂದು ನಿರ್ಣಯವಾಗುವುದು.

**ಭಾವವಿಲಾಸಿನೀ–** ತತ್ ಶೈವಬ್ರಾಹ್ಮಪುರಾಣಾನಾಂ ತಾಮಸರಾಜಸತ್ವಾತ್ । ಸ್ಮೃತೇಃ ಸಾತ್ವಿಕಪುರಾಣರೂಪಸ್ಮೃತೇಃ ॥ ೭೪೪ ॥

**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।**
**ಬಿಭೇತ್ಯಲ್ಪಶ್ರುತಾದ್ ವೇದೋ ಮಾಮಯಂ ಪ್ರಚಲಿಷ್ಯತಿ ॥ ೭೪೫ ॥**

**ಅರ್ಥ–** ಇತಿಹಾಸಪುರಾಣಾಭ್ಯಾಂ=ಇತಿಹಾಸ ಮತ್ತು ಪುರಾಣಗಳಿಂದ, ವೇದಂ = ವೇದವನ್ನು ಸಮುಪಬೃಂಹಯೇತ್=ಪುಷ್ಟೀಕರಿಸಬೇಕು, ಅಲ್ಪಶ್ರುತಾತ್= ಅಲ್ಪಜ್ಞಾನಿಯಿಂದ, ವೇದಃ=ವೇದವು, ಮಾಂ=ನನ್ನನ್ನು ಅಯಂ=ಈ ಅಲ್ಪಜ್ಞಾನಿಯು, ಪ್ರಚಲಿಷ್ಯತಿ= ನಿಜವಾದ ಅರ್ಥದಿಂದ ದೂರ ತೆಗೆದುಕೊಂಡು ಹೋಗುವನೆಂದು, ಬಿಭೇತಿ= ಹೆದರುತ್ತದೆ.

**ಭಾವವಿಲಾಸಿನೀ–** ಪ್ರಾಕ್ ಸರ್ವಾಣಿ ಪುರಾಣಾನ್ಯಂಗೀಕೃತ್ಯ ನಿರ್ಗುಣಂ ಬಹಿಷ್ಕೃತಮ್ । ಅಧುನಾ ತಾನಿ ವಿವಿಚ್ಯ ವಿಷ್ಣೋರೇವೋತ್ತಮತಾಂ ಶ್ರೌತತಾಂ ಸಾಧಯನ್ನಾಹ–ಷಟ್ಕಂ ಷಟ್ಕಮಿತಿ ॥ ಕಿಲೇತ್ಯನೇನ ಪೌರಾಣಿಕೀಂ ಪ್ರಸಿದ್ಧಿಂ ದ್ಯೋತಯತಿ ॥ ೭೪೨ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ನಿನಗೆ ಅಭಿಪ್ರೇತವಾದ ಬ್ರಹ್ಮನು ಹದಿನೆಂಟು ಪುರಾಣಗಳಿಂದಲೂ ಪ್ರತಿಪಾದ್ಯನಲ್ಲ ಎಂದು ತಿಳಿಸಿದರು. ಈಗ ಪುರಾಣಗಳನ್ನು ಸಾತ್ವಿಕ,ರಾಜಸ ತಾಮಸ ಎಂದು ವಿಭಾಗಮಾಡಿ ನೋಡಿದಾಗಲೂ ವಿಷ್ಣುವೇ ಉತ್ತಮನೆಂದು ನಿರ್ಣಯವಾಗುತ್ತದೆ ಎಂದು ತಿಳಿಸುತ್ತಿದ್ದಾರೆ.

ಸಾತ್ವಿಕಪುರಾಣಗಳು ಮೋಕ್ಷವನ್ನು ನೀಡುವವುಗಳೆಂದು ಪ್ರಸಿದ್ಧವಾಗಿದೆ. ಈ ಸಾತ್ವಿಕಪುರಾಣಗಳೆಲ್ಲವೂ ವಿಷ್ಣುವನ್ನು ಪ್ರತಿಪಾದಿಸುತ್ತಿವೆ. ಆದ್ದರಿಂದ ವಿಷ್ಣುವೇ ಸರ್ವೋತ್ತಮನೆಂದು ನಿರ್ಣಯವಾಗುತ್ತದೆ. ಕಿಲ ಎಂಬುದರಿಂದ ಈ ವಿಷಯವು ಪುರಾಣಪ್ರಸಿದ್ಧವೆಂದು ಸೂಚಿಸಿದ್ದಾರೆ.

**ಪಾದ್ಮಸ್ಯ ಪೂರ್ವಕಾಂಡಸ್ತು ಪೂರ್ವಪಕ್ಷೋ ಭವೇದ್ ಧ್ರುವಮ್ ।**
**ಯತಃ ಪಂಚಪುರಾಣೇಭ್ಯಃ ಸಾತ್ವಿಕೇಭ್ಯೋ ಬಹಿಷ್ಕೃತಃ ॥ ೭೪೩ ॥**

**ಅರ್ಥ–** ಪಾದ್ಮಸ್ಯ=ಪದ್ಮಪುರಾಣದ, ಪೂರ್ವಕಾಂಡಸ್ತು=ಪೂರ್ವಭಾಗವಾದರೂ, ಯತಃ= ಯಾವ ಕಾರಣದಿಂದ, ಪಂಚಪುರಾಣೇಭ್ಯಃ= ಕೇವಲ ಸಾತ್ವಿಕವಾದ ಐದು ಪುರಾಣಗಳಿಂದ, ಬಹಿಷ್ಕೃತಃ=ವಿರುದ್ಧಾರ್ಥವನ್ನು ಹೇಳುತ್ತಿದೆಯೋ, ಆ ಕಾರಣದಿಂದ, ಧ್ರುವಂ=ನಿಶ್ಚಯವಾಗಿ, ಪೂರ್ವಪಕ್ಷಃ=ಪೂರ್ವಪಕ್ಷವು, ಭವೇತ್=ಆಗಿದೆ.

**ಅನುವಾದ–** ಪದ್ಮಪುರಾಣದ ಪೂರ್ವಕಾಂಡದಲ್ಲಿ ಹೇಳಿದ ವಿಷಯವು ಐದು ಸಾತ್ವಿಕಪುರಾಣಗಳಲ್ಲಿ ಹೇಳಿದ ವಿಷಯಗಳಿಗಿಂತ ಬಾಹ್ಯವೇ (ವಿರುದ್ಧವೇ) ಆಗಿರುವ ಕಾರಣದಿಂದ ಪಾದ್ಮಪುರಾಣದ ಪೂರ್ವಕಾಂಡವು ನಿಶ್ಚಿತವಾಗಿ ಪೂರ್ವಪಕ್ಷವೇ ಆಗುತ್ತವೆ.

**ಭಾವವಿಲಾಸಿನೀ–** ಸಾತ್ವಿಕತ್ವೇನೋಕ್ತಪದ್ಮಪುರಾಣಪೂರ್ವಕಾಣ್ಡಸ್ಯ ಶೈವತ್ವಾತ್ ಕಥಂ ನಿರ್ಣಯ ಇತ್ಯತ ಆಹ– **ಪಾದ್ಮಸ್ಯೇತಿ** ॥ ಧ್ರುವಮಿತ್ಯನೇನ ಪೂರ್ವಕಾಣ್ಡಪೂರ್ವಪಕ್ಷಪದಯೋಃ ಉತ್ತರಕಾಣ್ಡೋತ್ತರಪಕ್ಷಪದಯೋಃ ಸಮಾನಾರ್ಥಕತ್ವ ಲಕ್ಷಣಯುಕ್ತಿಂ ಸೂಚಯತಿ । ಯುಕ್ತ್ಯಂತರಂ ಚಾಹ– **ಯತ ಇತಿ** ॥ ಪಂಚಪುರಾಣೇಭ್ಯಃ ಈದೃಗ್ವಿಭಾಗರಹಿತೇಭ್ಯಃ ಕೇವಲಸಾತ್ವಿಕೇಭ್ಯೋ ಬಹಿಷ್ಕೃತಃ ತದರ್ಥವಿರುದ್ಧಾರ್ಥವಾದೀ ತತೋಽಪಿ ಪೂರ್ವಪಕ್ಷ ಇತಿ ಸಂಬಂಧಃ ॥ ೭೪೩॥

**ವಿವರಣೆ–** ವಿಷ್ಣುವು ಸರ್ವೋತ್ತಮ ಎಂಬ ವಿಷಯದಲ್ಲಿ ಸಾತ್ವಿಕಪುರಾಣಗಳು ವಿಷ್ಣುವನ್ನು ಪ್ರತಿಪಾದಿಸುತ್ತಿವೆ ಎಂಬ ಯುಕ್ತಿಯು ಸಾಧುವಲ್ಲ. ಪಾದ್ಮಪುರಾಣದ

ಪೂರ್ವಭಾಗವು ಶಿವಪ್ರತಿಪಾದಕವಾಗಿದೆ. ಆದ್ದರಿಂದ ಇದು ನಿರ್ಣಾಯಕವಲ್ಲ ಎಂಬ ವಾದವನ್ನು ಇಲ್ಲಿ ನಿರಾಕರಿಸಿದ್ದಾರೆ.

ಯುಕ್ತಿ 1- ಪೂರ್ವಕಾಂಡವೆಂದರೆ ಪೂರ್ವಪಕ್ಷ ಎಂದೇ ಅರ್ಥ. ಉತ್ತರಕಾಂಡವೆಂದರೆ ಸಿದ್ಧಾಂತ ಎಂದು ಅರ್ಥ. ಪದ್ಮಪುರಾಣದ ಪೂರ್ವಕಾಂಡವು ಪೂರ್ವಪಕ್ಷ ಅದೇ ನಿರ್ಣಯವಲ್ಲ ಎಂಬುದನ್ನು ಆ ಪದವೇ ಸೂಚಿಸುತ್ತದೆ.

ಯುಕ್ತಿ 2 - ಶಿವಾದಿಗಳನ್ನು ಪ್ರತಿಪಾದಿಸದ ಕೇವಲ ಸಾತ್ವಿಕಪುರಾಣಗಳು ಪ್ರತಿಪಾದಿಸುವ ವಿಷಯಕ್ಕೆ ವಿರುದ್ಧವಾಗಿ ಪೂರ್ವಕಾಂಡವು ಪ್ರತಿಪಾದಿಸುತ್ತಿರುವುದರಿಂದಲೂ ಸಹ ಅದು ಪೂರ್ವಪಕ್ಷವೇ ಆಗಿದೆ.

**ವಿಸ್ತರೋಽಸ್ಯ ಪ್ರಮೇಯಸ್ಯ ಹ್ಯುತ್ತರತ್ರ ಭವಿಷ್ಯತಿ ।**
**ತತ್ ಸಾತ್ವಿಕಪುರಾಣೋಕ್ತೋ ವಿಷ್ಣುರ್ಬ್ರಹ್ಮ ಸ್ಮೃತೇರ್ಬಲಾತ್ ॥ ೭೪೪ ॥**

**ಅರ್ಥ–** ಅಸ್ಯ ಪ್ರಮೇಯಸ್ಯ=ಈ ಪ್ರಮೇಯದ, ವಿಸ್ತರಃ=ವಿಸ್ತಾರವು, ಉತ್ತರತ್ರ=ಮುಂದೆ, ಭವಿಷ್ಯತಿ=ಆಗುತ್ತದೆ. ತತ್= ಆದ್ದರಿಂದ, ಸ್ಮೃತೇಃ=ವೈಷ್ಣವಸ್ಮೃತಿಗಳ, ಬಲಾತ್= ಪ್ರಮಾಣಗಳಿಂದಲೂ, ಸಾತ್ವಿಕಪುರಾಣೋಕ್ತಃ= ಸಾತ್ವಿಕಪುರಾಣಗಳಿಂದ ಪ್ರತಿಪಾದ್ಯನಾದ, ವಿಷ್ಣುಃ= ವಿಷ್ಣುವೇ, ಬ್ರಹ್ಮ=ಬ್ರಹ್ಮನು.

**ಅನುವಾದ–** ಈ ಪ್ರಮೇಯವನ್ನು ಮುಂದೆ ವಿಸ್ತಾರವಾಗಿ ಹೇಳಲಾಗುವುದು. ಸಾತ್ವಿಕವಾದ ಸ್ಮೃತಿಗಳಿಂದಲೂ ಸಹ ವಿಷ್ಣುವೇ ಬ್ರಹ್ಮ ಎಂದು ನಿರ್ಣಯವಾಗುವುದು.

**ಭಾವವಿಲಾಸಿನೀ–** ತತ್ ಶೈವಬ್ರಾಹ್ಮಪುರಾಣಾನಾಂ ತಾಮಸರಾಜಸತ್ವಾತ್ । ಸ್ಮೃತೇಃ ಸಾತ್ವಿಕಪುರಾಣರೂಪಸ್ಮೃತೇಃ ॥ ೭೪೪ ॥

**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।**
**ಬಿಭೇತ್ಯಲ್ಪಶ್ರುತಾದ್ ವೇದೋ ಮಾಮಯಂ ಪ್ರಚಲಿಷ್ಯತಿ ॥ ೭೪೫ ॥**

**ಅರ್ಥ–** ಇತಿಹಾಸಪುರಾಣಾಭ್ಯಾಂ=ಇತಿಹಾಸ ಮತ್ತು ಪುರಾಣಗಳಿಂದ, ವೇದಂ = ವೇದವನ್ನು ಸಮುಪಬೃಂಹಯೇತ್=ಪುಷ್ಟೀಕರಿಸಬೇಕು, ಅಲ್ಪಶ್ರುತಾತ್= ಅಲ್ಪಜ್ಞಾನಿಯಿಂದ, ವೇದಃ=ವೇದವು, ಮಾಂ=ನನ್ನನ್ನು ಅಯಂ=ಈ ಅಲ್ಪಜ್ಞಾನಿಯು, ಪ್ರಚಲಿಷ್ಯತಿ= ನಿಜವಾದ ಅರ್ಥದಿಂದ ದೂರ ತೆಗೆದುಕೊಂಡು ಹೋಗುವನೆಂದು, ಬಿಭೇತಿ= ಹೆದರುತ್ತದೆ.

**ಅನುವಾದ–** ಇತಿಹಾಸ ಪುರಾಣವಾಕ್ಯಗಳಿಗೆ ಅನುಗುಣವಾಗಿ ಶ್ರುತಿವಾಕ್ಯಗಳನ್ನು ಯೋಜಿಸಬೇಕು. ಪ್ರಮಾಣವಿರುದ್ಧವಾಗಿ ಅಬದ್ಧವಾಗಿ ಅರ್ಥೈಸಿ ಅಪಮಾನ-ಮಾಡುವನೆಂದು ಶ್ರುತಿಮಾತೆಯು ಅಲ್ಪಜ್ಞಾನಿಗೆ ಹೆದರುತ್ತಾಳೆ.

ಇತಿ ಸ್ಮೃತೇಃ ಸತ್ಪುರಾಣಭಾರತೋಕ್ತಪ್ರಕಾರತಃ ।
ಯಚ್ಛ್ರುತೇರ್ಯೋಜನಾ ತಸ್ಮಾದ್ ವಿಷ್ಣುರ್ಬ್ರಹ್ಮ ಶ್ರುತೇರ್ಬಲಾತ್
॥ ೭೪೬ ॥

**ಅರ್ಥ–** ಇತಿ=ಹೀಗೆಂದು, ಸ್ಮೃತೇಃ = ಸ್ಮೃತಿ ಇರುವುದರಿಂದ, ಸತ್ಪುರಾಣಭಾರತೋಕ್ತ ಪ್ರಕಾರತಃ= ಸಾತ್ವಿಕಪುರಾಣಗಳು, ಮಹಾಭಾರತ ಇವುಗಳಲ್ಲಿ ಹೇಳಿರುವ ರೀತಿಯಿಂದ, ಯತ್=ಯಾವಕಾರಣದಿಂದ, ಶ್ರುತೇಃ=ಶ್ರುತಿವಾಕ್ಯಗಳಿಗೆ, ಯೋಜನಾ= ಅನ್ವಯವೋ, ತಸ್ಮಾತ್=ಆದ್ದರಿಂದ, ಶ್ರುತೇಃ ಬಲಾತ್ =ಶ್ರುತಿಪ್ರಮಾಣದಿಂದಲೂ ಸಹ, ವಿಷ್ಣುಃ=ವಿಷ್ಣುವೇ, ಬ್ರಹ್ಮ=ಬ್ರಹ್ಮನು.

**ಅನುವಾದ–** ಸಾತ್ವಿಕಪುರಾಣಗಳು, ಮಹಾಭಾರತ ಇವುಗಳಿಗೆ ಅನುಗುಣವಾಗಿ ಶ್ರುತಿಗಳಿಗೆ ಅರ್ಥವನ್ನು ಮಾಡಬೇಕೆಂದು ಪ್ರಮಾಣವಿದೆ. ಆದ್ದರಿಂದ ಶ್ರುತಿ-ಪ್ರಮಾಣದಿಂದ ವಿಷ್ಣುವೇ ಬ್ರಹ್ಮನೆಂದು ನಿರ್ಣಯವಾಗುತ್ತದೆ.

**ಭಾವವಿಲಾಸಿನೀ–** ತಸ್ಮಾತ್ ಸಾತ್ವಿಕಪುರಾಣಾನುಸಾರೇಣ ಭಾರತಾನುಸಾರೇಣ ಶ್ರುತೇ-ರ್ಯೋಜನೀಯತ್ವಾತ್ ॥ ೭೪೬ ॥

ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥ ೭೪೭ ॥

**ಅರ್ಥ–** ವೇದೇ=ವೇದದಲ್ಲಿ, ರಾಮಾಯಣೇ=ರಾಮಾಯಣದಲ್ಲಿ, ಪುರಾಣೇ= ಪುರಾಣಗಳಲ್ಲಿ, ಭಾರತೇ=ಮಹಾಭಾರತದಲ್ಲಿ ಈ ಗ್ರಂಥಗಳ, ಆದೌ=ಆರಂಭದಲ್ಲಿ ಈ ಗ್ರಂಥಗಳ, ಮಧ್ಯೇ=ಮಧ್ಯದಲ್ಲಿ ಅಂತೇ ಚ=ಉಪಸಂಹಾರದಲ್ಲಿ ಸರ್ವತ್ರ ಚ= ಮತ್ತು ಎಲ್ಲ ವಾಕ್ಯಪದಗಳಲ್ಲೂ ಸಹ, ವಿಷ್ಣುಃ=ವಿಷ್ಣುವೇ, ಗೀಯತೇ=ಹೇಳಲ್ಪಟ್ಟಿದ್ದಾನೆ.

**ಅನುವಾದ–** ವೇದದಲ್ಲಿಯೂ, ರಾಮಾಯಣದಲ್ಲಿಯೂ, ಪುರಾಣದಲ್ಲಿಯೂ ಮತ್ತು ಭಾರತದಲ್ಲಿಯೂ, ಆದಿಯಲ್ಲಿಯೂ, ಮಧ್ಯದಲ್ಲಿಯೂ ಮತ್ತು ಅಂತ್ಯದಲ್ಲಿಯೂ ವಿಷ್ಣುವೇ ಎಲ್ಲಾ ಕಡೆಗಳಲ್ಲಿಯೂ ಗಾನಮಾಡಲ್ಪಡುತ್ತಾನೆ.

**ಭಾವವಿಲಾಸಿನೀ–** ಪೂರ್ವಂ ಶ್ರುತಿಸ್ಮೃತ್ಯೋಃಶ್ಚೈಕಾರ್ಥ್ಯರೂಪಯುಕ್ತಿತಃ ಶ್ರೌತತ್ವಂ ವಿಷ್ಣೋರಾನೀತಮ್ । ಅಧುನಾ ಸಾಕ್ಷಾತ್ ಸ್ಮೃತ್ಯೈವ ತತ್ ಸಾಧಯನ್ ಶ್ರುತ್ಯಂತಃಪಾತಿ-ನಿರ್ಗುಣವಾಕ್ಯಸ್ಯಾಪಿ ವಿಷ್ಣುಪ್ರತಿಪಾದಕತ್ವಮೇತ್ಯಾಹ– ವೇದ ಇತ್ಯಾದಿನಾ ॥ ೭೪೭ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಶ್ರುತಿಸ್ಮೃತಿಗಳು ಏಕಾರ್ಥಪ್ರತಿಪಾದಕವಾಗಿವೆ ಎಂಬ ಯುಕ್ತಿಯಿಂದ ಶ್ರುತಿಯು ವಿಷ್ಣುಪ್ರತಿಪಾದಕ ಎಂದು ಸಮರ್ಥಿಸಿದರು. ಈಗ ಸಾಕ್ಷಾತ್ತಾಗಿ ಸ್ಮೃತಿಯಿಂದಲೇ ಅದನ್ನು ಸಾಧಿಸುತ್ತಾ ನಿರ್ಗುಣಶ್ರುತಿಯೂ ವಿಷ್ಣುಪ್ರತಿಪಾದಕವೆಂದು ಇಲ್ಲಿ ಪ್ರಮಾಣವನ್ನು ಉದಾಹರಿಸಿದ್ದಾರೆ.

**ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯೋಽಪೋಹ್ಯ ಇತ್ಯಹಮ್ ।**
**ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ ವೇದ ಕಶ್ಚನ ॥ ೭೪೮ ॥**

**ವೈದೈಶ್ಚ ಸರ್ವೈರ್ವೇದ್ಯೋಽಹಮೇವೇತ್ಯವದಧಾರ ಹಿ ॥ ೭೪೯ ॥**

**ಅರ್ಥ–** ಮಾಂ=ನನ್ನನ್ನು ಉದ್ದೇಶಿಸಿ, ವಿಧತ್ತೇ=ಶ್ರುತಿಗಳು ವಿಧಾನಮಾಡುತ್ತಿವೆ. ಮಾಂ=ನನ್ನ ಸಂಬಂಧಿಯಾದ ಗುಣಗಳನ್ನು, ಅಭಿಧತ್ತೇ=ಹೇಳುತ್ತಿವೆ. ಅಹಂ=ನಾನು, ವಿಕಲ್ಪ್ಯಃ=ವಿವಿಧರೂಪಗಳಿಂದ ವಿಧೇಯ. ಅಹಂ=ನಾನು, ಅಪೋಹ್ಯಃ= ದೋಷಗಳಿಂದ ನಿಷೇಧ್ಯನೂ ಆಗಿದ್ದೇನೆ. ಇತಿ=ಈ ರೀತಿಯಾದ, ಅಸ್ಯಾಃ=ಶ್ರುತಿಯ, ಸಾಕ್ಷಾತ್=ಸಾಕ್ಷಾತ್ತಾದ, ಇತಿ=ಈ ಪ್ರಕಾರದ, ಹೃದಯಂ=ಅಭಿಪ್ರಾಯವನ್ನು, ಮತ್=ನನ್ನಿಂದ ಬೇರೆಯಾದ, ಕಶ್ಚನ= ಯಾರೊಬ್ಬನೂ, ನ ವೇದ=ತಿಳಿದಿಲ್ಲ. ಸರ್ವೈಃ=ಸಮಸ್ತವಾದ, ವೇದೈಶ್ಚ=ವೇದಗಳಿಂದಲೂ ಸಹ, ಅಹಮೇವ=ನಾನೇ ವೇದ್ಯ ಪ್ರತಿಪಾದ್ಯನು, ಇತಿ=ಹೀಗೆಂದು, ಅವದಧಾರ ಹಿ= ನಿರ್ಣಯಿಸಿದೆಯಷ್ಟೆ

**ಅನುವಾದ– ಶ್ರುತಿಗಳು ನನ್ನನ್ನು ಉದ್ದೇಶಿಸಿ ವಿಧಾನಮಾಡುತ್ತವೆ. ನನ್ನ ಗುಣಗಳನ್ನೇ ಹೇಳುತ್ತವೆ. ನಾನೇ ವಿವಿಧ ರೂಪಗಳುಳ್ಳವನೆಂದು ಕಲ್ಪಿಸಲ್ಪಡಬೇಕೆಂದು ಹೇಳುತ್ತವೆ. ನಿಷಿದ್ಧ ಕರ್ಮದಿಂದ ಉಂಟಾಗುವ ಅಪ್ರೀತಿಯಿಂದ ನಾನೇ ದೂರಸರಿಸಲ್ಪಡಬೇಕು ಎಂದು ಹೇಳುತ್ತವೆ. ಶ್ರುತಿಯ ರಹಸ್ಯವಾದ ಇಂತಹ ತಾತ್ಪರ್ಯ ವಿಷಯವನ್ನು ನಾನೊಬ್ಬನೇ ತಿಳಿದಿದ್ದೇನೆ. ನನ್ನಿಂದ ಭಿನ್ನರಾದ ಯಾರೂ ತಿಳಿದಿಲ್ಲ. ಎಲ್ಲ ವೇದಗಳಿಂದಲೂ ನಾನೇ ಪ್ರತಿಪಾದ್ಯನಾದವನು ಎಂದು ಅವಧಾರಣಪೂರ್ವಕವಾಗಿ ಹೇಳಿದೆಯಷ್ಟೆ.**

**ವಿವರಣೆ–** ಉದ್ಧವನನ್ನು ಕುರಿತು ಕೃಷ್ಣನು ಹೇಳಿದ ವಚನವಿದು. ವಸಂತೇ ವಸಂತೇ ಜ್ಯೋತಿಷಾ ಯಜೇತ, ಸ್ವಾಧ್ಯಾಯೋಽಧ್ಯೇತವ್ಯಃ ಮೊದಲಾದ ವಿಧಿವಾಕ್ಯಗಳು, ನನ್ನ ಪೂಜಾರೂಪವಾದ ಕರ್ಮಗಳನ್ನು ವಿಧಾನಮಾಡುತ್ತಿವೆ. ಸತ್ಯಂ ಜ್ಞಾನಮನಂತಂ ಬ್ರಹ್ಮ ಮುಂತಾದ ಲಕ್ಷಣವಾಕ್ಯಘಟಕವಾದ ಪದಗಳು ಮಹಾಯೋಗವೃತ್ತಿಯಿಂದ ನನ್ನನ್ನು ಪ್ರತಿಪಾದಿಸುತ್ತಿವೆ. ವಾಸುದೇವ ಸಂಕರ್ಷಣ ಪ್ರದ್ಯುಮ್ನ ಮುಂತಾದ ರೂಪಗಳನ್ನು ಧರಿಸಿರುವನೆಂದು ವೇದಗಳು ನನ್ನನ್ನು ಸ್ತೋತ್ರಮಾಡುತ್ತಿವೆ. ನ ಸುರಾಂ ಪಿಬೇತ್ ಮುಂತಾದ ನಿಷೇಧವಾಕ್ಯಗಳು ಸಹ ನನ್ನ ಪ್ರೀತಿಯನ್ನು ಉದ್ದೇಶಿಸಿ ನಿಷೇಧಮಾಡುತ್ತಿವೆ.

"सामीप्ये च प्रधाने च पाप शब्दो अवधारणे"

ಸಮಸ್ತವೇದಗಳಿಂದ ಪ್ರತಿಪಾದ್ಯನು ನಾನೇ ಆಗಿದ್ದೇನೆ ಎಂದು ಶ್ರೀಕೃಷ್ಣನು ಗೀತೆಯಲ್ಲಿ ತಿಳಿಸಿದ್ದಾನೆ. ಎಲ್ಲ ವೇದಗಳಿಗೆ ವಿಷ್ಣುವಿನಲ್ಲಿ ಮಹಾತಾತ್ಪರ್ಯ, ಹೊರತಾಗಿ ಇತರ ವಸ್ತುಗಳಲ್ಲಿ ಅಲ್ಲ ಎಂದು ವ್ಯವಚ್ಛೇದಾರ್ಥದಲ್ಲಿ ಅಹಮೇವ ಎಂದು ಏವಶಬ್ದವನ್ನು ಪ್ರಯೋಗಿಸಲಾಗಿದೆ.

**ಪೂರ್ವಾದ್ ಭಾರತವಾಕ್ಯಾಚ್ಚ ಪರಾದ್ ಭಾಗವತೋದಿತಾತ್ ।**
**ಸ್ಪಷ್ಟಗೀತೋಕ್ತಿತಃ ಸರ್ವವೇದಾರ್ಥೋ ವಿಷ್ಣುರೇವ ಹಿ ॥ ೭೪೯ ॥**

**ಅರ್ಥ–** ಪೂರ್ವಾತ್=ಮೊದಲು ಹೇಳಿದ, ಭಾರತವಾಕ್ಯಾತ್=ಮಹಾಭಾರತದ ವಾಕ್ಯದಿಂದ, ಪರಾತ್=ಅನಂತರ ಭಾಗವತೋದಿತಾತ್=ಭಾಗವತದಲ್ಲಿ ಹೇಳಿದ ವಾಕ್ಯದಿಂದ, ಚ=ಮತ್ತು, ಸ್ಪಷ್ಟಗೀತೋಕ್ತಿತಃ=ಸ್ಪಷ್ಟವಾಗಿ ಗೀತೆಯಲ್ಲಿ ಹೇಳಿದ ಮಾತಿನಿಂದಲೂ, ಸರ್ವವೇದಾರ್ಥಃ=ಸಮಸ್ತವೇದಗಳ ಅರ್ಥವೂ, ವಿಷ್ಣುರೇವ=ವಿಷ್ಣುವೇ ಆಗಿದ್ದಾನೆ. ಹಿ=ಇದು ಶ್ರುತಿಪ್ರಸಿದ್ಧವು.

**ಅನುವಾದ–** ವೇದೇ ರಾಮಾಯಣೇ ಚೈವ ಎಂದು ಮಹಾಭಾರತದ ವಾಕ್ಯ, ಮಾಂ ವಿಧತ್ತೇಽಭಿಧತ್ತೇ ಎಂದು ಭಾಗವತದ ವಾಕ್ಯ ಹಾಗೂ ವೇದೈಶ್ಚ ಸರ್ವೈರಹಮೇವ ವೇದ್ಯಃ ಎಂಬ ಗೀತಾವಾಕ್ಯ, ಇವೆಲ್ಲ ಪ್ರಮಾಣಗಳಿಂದಲೂ ಸಹ ವಿಷ್ಣುವೇ ವೇದಗಳ ಮಹಾತಾತ್ಪರ್ಯವಿಷಯ ಎಂದು ತಿಳಿಯುತ್ತದೆ.

**ವೇದಮಧ್ಯಗತಾ ನಿರ್ಗುಣೋಕ್ತಿರಪ್ಯಾಹ ತಂ ಪ್ರಭುಮ್ ।**
**ನಿರ್ಗುಣೋ ನಿಷ್ಕಲೋಽನಂತೋಽಭಯೋಽಚಿಂತ್ಯೋಽಚಲೋಽಚ್ಯುತಃ ।**
**ಇತಿ ವಿಷ್ಣೋರ್ದಿವ್ಯನಾಮಸಹಸ್ರೇ ಪಠನಾದಪಿ ॥ ೭೫೦ ॥**

**ಅರ್ಥ–** ವೇದಮಧ್ಯಗತಾ=ವೇದದ ಮಧ್ಯದಲ್ಲಿರುವ, ನಿರ್ಗುಣೋಕ್ತಿರಪಿ= ನಿರ್ಗುಣವೆಂಬ ವಚನವೂ ಸಹ, ತಂ=ಆ, ಪ್ರಭುಂ=ಸಮರ್ಥನಾದ ಶ್ರೀಹರಿಯನ್ನು ಆಹ= ಹೇಳುತ್ತಿದೆ. ವಿಷ್ಣೋಃ=ವಿಷ್ಣುವಿನ, ದಿವ್ಯನಾಮಸಹಸ್ರೇ= ದಿವ್ಯವಾದ ಸಹಸ್ರನಾಮ ಸ್ತೋತ್ರದಲ್ಲಿ, ನಿರ್ಗುಣಃ=ಪ್ರಾಕೃತಗುಣರಹಿತನು, ನಿಷ್ಕಲಃ= ವಿಕಾರರಹಿತನು, ಅನಂತಃ= ಅಂತವಿಲ್ಲದವನು, ಅಭಯಃ=ಭಯರಹಿತನು, ಅಚಿಂತ್ಯಃ= ಚಿಂತನೆಗೆ ಅವಿಷಯನು, ಅಚಲಃ=ಚಾಂಚಲ್ಯವಿಲ್ಲದವನು, ಅಚ್ಯುತಃ= ಚ್ಯುತಿರಹಿತನು, ಇತಿ=ಇತ್ಯಾದಿ ರೀತಿಯಿಂದ, ಪಠನಾದಪಿ= ಹೇಳಿರುವುದರಿಂದಲೂ ಸಹ.

**ಅನುವಾದ–** ವೇದದ ಮಧ್ಯದಲ್ಲಿ ಬರುವ ನಿರ್ಗುಣ ಎಂಬ ಉಕ್ತಿಯೂ ಸಹ ಪ್ರಭುವಾದ ಅವನನ್ನೇ ಹೇಳುತ್ತದೆ. ಪಾದ್ಮಪುರಾಣದಲ್ಲಿರುವ (ವಾಸುದೇವ) ವಿಷ್ಣುಸಹಸ್ರನಾಮದಲ್ಲಿ ನಿರ್ಗುಣಃ, ನಿಷ್ಕಲಃ, ಅನಂತಃ, ಅಭಯಃ, ಅಚಿಂತ್ಯಃ,

ಅಚಲಃ, ಅಚ್ಯುತಃ ಎಂಬ ಶ್ಲೋಕದಲ್ಲಿ ವಿಷ್ಣುವನ್ನು ನಿರ್ಗುಣ ಎಂದು ಕರೆದಿರುವುದರಿಂದ, ನಿರ್ಗುಣ ಶಬ್ದವು ಅವನನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ವಿಷ್ಣೋರ್ದಿವ್ಯನಾಮಸಹಸ್ರೇ ಪಠನಾತ್ ನಿರ್ಗುಣೋಕ್ತಿಃ ತಂ ವಿಷ್ಣುಮಾಹೇತಿ ಸಂಬಂಧಃ । ನಿರ್ಗುಣನಾಮ್ನಾ ಯಃ ಶಿವೇನ ಸ್ತೂಯತೇ ಸ ಏವ ನಿರ್ಗುಣಶ್ರುತೇರರ್ಥೋ ನ ಪರಾಭಿಲಷಿತನಿರ್ಗುಣ ಇತಿ ಭಾವಃ ॥ ೭೫೦ ॥

**ವಿವರಣೆ–** ವೇದದ ಉಪಕ್ರಮ ಉಪಸಂಹಾರಾದಿ ಎಲ್ಲ ವಾಕ್ಯಗಳೂ ಸಹ ಪರಮಾತ್ಮನ ಗುಣಗಳನ್ನು ಪ್ರತಿಪಾದಿಸುತ್ತಿವೆ. ಆ ಗುಣಪ್ರತಿಪಾದಕವಾದ ವಾಕ್ಯಗಳ ಮಧ್ಯದಲ್ಲಿಯೇ ಕೇವಲೋ ನಿರ್ಗುಣಶ್ಚ ಎಂದು ಗುಣರಹಿತ ಎನ್ನುವ ಶ್ರುತಿವಾಕ್ಯಗಳೂ ಇವೆ. ಈ ನಿರ್ಗುಣವಚನವೂ ಸಹ ಪರಮಾತ್ಮನನ್ನು ಪ್ರತಿಪಾದಿಸುತ್ತಿದೆ. ಪದ್ಮಪುರಾಣದಲ್ಲಿ ರುದ್ರದೇವರು ಪಾರ್ವತಿಯನ್ನು ಕುರಿತು ಉಪದೇಶಿಸಿದ ವಾಸುದೇವ ಸಹಸ್ರನಾಮವಿದೆ. ಅಲ್ಲಿಯೂ ರುದ್ರದೇವರಿಂದ ನಿರ್ಗುಣ ಎಂದೇ ಪರಮಾತ್ಮನು ಸ್ತುತಿಸಲ್ಪಟ್ಟಿದ್ದಾನೆ. ಈ ಸ್ತೋತ್ರಗಳಲ್ಲಿರುವ ಎಲ್ಲ ಶಬ್ದಗಳೂ ಪರಮಾತ್ಮನ ಅನೇಕ ಗುಣಗಳನ್ನು ಪ್ರತಿಪಾದಿಸುತ್ತಿವೆ. ಸಹಪಠಿತವಾದ ನಿರ್ಗುಣಶಬ್ದವೂ ಸರ್ವಾತ್ಮನಾ ಗುಣರಾಹಿತ್ಯವನ್ನು ಪ್ರತಿಪಾದಿಸುವುದಾದರೆ ಪೂರ್ವೋತ್ತರವಿರೋಧವು ಬರುತ್ತದೆ. ಆದ್ದರಿಂದ ಸ್ತೋತ್ರದಲ್ಲಿರುವ ನಿರ್ಗುಣಶಬ್ದಕ್ಕೆ ಕೇವಲ ಪ್ರಾಕೃತಗುಣರಹಿತ ಎಂದು ಅರ್ಥ. ಅದರಂತೆ ಶ್ರುತಿಯಲ್ಲಿರುವ ನಿರ್ಗುಣಶಬ್ದಕ್ಕೂ ಅದೇ ಅರ್ಥ.

**ಶ್ರುತ್ಯಾಖ್ಯಾ ರಾಜಕನ್ಯಾ ಯತ್ ಸರ್ವಾ ಸ್ಮೃತಿಸಖೀವಶಾ ।**
**ಅತಸ್ತದುಕ್ತಮಾರ್ಗೇಣ ಸಾ ವ್ರಜೇನ್ನ ತ್ವದುಕ್ತಿತಃ ॥ ೭೫೧ ॥**

**ಅರ್ಥ–** ಯತ್=ಯಾವಕಾರಣದಿಂದ, ಸರ್ವಾ=ಸಮಸ್ತವಾದ, ಶ್ರುತ್ಯಾಖ್ಯರಾಜಕನ್ಯಾ= ಶ್ರುತಿಎಂಬ ರಾಜಕನ್ಯೆಯು, ಸ್ಮೃತಿಸಖೀವಶಾ=ಸ್ಮೃತಿರೂಪವಾದ ಸಖಿಯ ಅಧೀನಳೋ ಅತಃ=ಆ ಕಾರಣದಿಂದ, ತದುಕ್ತಮಾರ್ಗೇಣ=ಸ್ಮೃತಿಯು ಹೇಳಿದ ಮಾರ್ಗದಿಂದ, ಸಾ= ಶ್ರುತಿಕನ್ಯೆಯು, ವ್ರಜೇತ್=ಸಾಗುತ್ತಾಳೆ, ತ್ವದುಕ್ತಿತಃ=ನಿನ್ನ ಮಾತಿನಂತೆ, ನ ವ್ರಜೇತ್= ಹೋಗುವುದಿಲ್ಲ.

**ಅನುವಾದ–** ರಾಜಕನ್ಯೆ ತಾನು ಪ್ರಬಲಳಾಗಿದ್ದರೂ ತನ್ನ ಸ್ನೇಹಿತೆ ತೋರಿಸಿದ ಮಾರ್ಗದಲ್ಲಿ ಸಾಗುತ್ತಾಳೆ. ಪ್ರಕೃತ ಶ್ರುತಿಕನ್ಯೆಯೂ ಅಪೌರುಷೇಯಳಾದ್ದರಿಂದ ತಾನೇ ಪ್ರಬಲ. ಆದರೆ ತಾನು ಸಾಗುವ ದಾರಿ - ಸ್ಮೃತಿ ತೋರುವ ದಾರಿ. ಮೇಲ್ನೋಟಕ್ಕೆ ತೋರುವ ಅರ್ಥವೇ ವೇದಾರ್ಥವಲ್ಲ. ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ - ಇತಿಹಾಸ ಪುರಾಣಗಳಿಂದ ವೇದಾರ್ಥವನ್ನು ನಿರ್ಣಯಿಸಬೇಕು. ಸ್ಮೃತಿಗಳು ವೇದವ್ಯಾಖ್ಯಾನರೂಪವಾದವುಗಳು. ಪಾಶುಪತವೇ

**ಮೊದಲಾದ ದುರಾಗಮಗಳಿಂದ ವೇದದ ಅರ್ಥವನ್ನು ನಿರ್ಣಯಿಸುವುದಲ್ಲ. ಸಾತ್ವಿಕ ಸ್ಮೃತಿಗಳಿಗನುಗುಣವಾಗಿ ಅರ್ಥೈಸಬೇಕು.**

**ಭಾವವಿಲಾಸಿನೀ– 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಇತ್ಯುಕ್ತ್ಯಾ ಯದ್ ಯಸ್ಮಾತ್ ಕಾರಣಾತ್ ಸ್ಮೃತಿಸಖೀವಶೇತಿ ಸಂಬಂಧಃ । ಅತಃ ಸಖೀವಶತ್ವಾತ್ ತದುಕ್ತ-ಮಾರ್ಗೇಣ ಸ್ಮೃತ್ಯುಕ್ತಮಾರ್ಗೇಣ ಸ್ಮೃತ್ಯಾ ತವಾಯಮರ್ಥ ಇತ್ಯುಕ್ತಮಾರ್ಗೇಣ । ಸಾ ಶ್ರುತಿಃ ॥ ೭೫೧ ॥**

**ಕಿಂ ಚಾಖಂಡಾರ್ಥವಾದಂ ತೇ ಸ್ಮರ ವಾಕ್ಯಂ ಪದಾನಿ ಚ ।**
**ಯತ್ರ ಸ್ವಾರ್ಥವಿಶಿಷ್ಟಾರ್ಥಪರಂ ನೈವ ಹಿ ಕಿಂಚನ ॥ ೭೫೨ ॥**

**ಅರ್ಥ–** ಕಿಂಚ=ಅಷ್ಟಲ್ಲದೆ, ತೇ=ನಿನ್ನ ಅಖಂಡಾರ್ಥವಾದಂ=ನಿರ್ಧರ್ಮಕನಾದ ಬ್ರಹ್ಮನನ್ನು ಆಗಮಗಳು ಪ್ರತಿಪಾದಿಸುತ್ತವೆ ಎಂಬ ವಾದವನ್ನು, ಸ್ಮರ=ಸ್ಮರಿಸು. ಯತ್ರ=ಯಾವ ನಿನ್ನ ವಾದದಲ್ಲಿ, ಕಿಂಚನ=ಯಾವುದೇ, ವಾಕ್ಯಂ=ವಾಕ್ಯವು, ಪದಾನಿ ಚ=ಪದಗಳೂ ಸಹ, ಸ್ವಾರ್ಥವಿಶಿಷ್ಟಾರ್ಥಪರಂ=ತನ್ನ ಅರ್ಥವಾದ ವಿಶಿಷ್ಟಾರ್ಥವನ್ನು ಪ್ರತಿಪಾದಿಸುತ್ತವೆ ಎಂಬುದನ್ನು, ನೈವ=ಸಮ್ಮತಿಸುವುದಿಲ್ಲ.

**ಅನುವಾದ– ಮತ್ತು ನಿನಗೆ ಅಭಿಪ್ರೇತವಾದ ಅಖಂಡಾರ್ಥವನ್ನು ಸ್ಮರಿಸಿಕೋ. ಆ ಅಖಂಡಾರ್ಥದಲ್ಲಿ ಯಾವುದೇ ಪದವಾಗಲೀ ಅಥವಾ ವಾಕ್ಯವಾಗಲೀ ವಿಶಿಷ್ಟಾರ್ಥವನ್ನು ಪ್ರತಿಪಾದಿಸುವುದಿಲ್ಲವೆಂದು ಪ್ರಸಿದ್ಧವಾಗಿದೆಯಷ್ಟೇ?**

**ಭಾವವಿಲಾಸಿನೀ– ನಿರ್ಗುಣ ಇತಿ ಸಾಮಾನ್ಯತಃ ಸಕಲಗುಣನಿಷೇಧಕಾನಿರ್ಗುಣೋಕ್ತೇಸ್ತ್ರಿಗುಣ ವರ್ಜಿತತ್ವರೂಪಸಂಕುಚಿತಾರ್ಥಕಥನೇನ ಕಥಂ ವಿಷ್ಣುವಿಷಯತೇತಿ ಶಂಕಾಂ ನಿರಾಕರ್ತುಮಾಹ- ಕಿಂಚೇತಿ ॥ ೭೫೨ ॥**

**ವಿವರಣೆ–** ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿಪದಗಳು ಧರ್ಮರಹಿತನಾದ ಬ್ರಹ್ಮನನ್ನು ಪ್ರತಿಪಾದಿಸುತ್ತವೆ ಎಂದು ಶಾಂಕರದರ್ಶನದಲ್ಲಿ ಹೇಳಿದ್ದಾರೆ. ಇದನ್ನೇ ಅಖಂಡಾರ್ಥವಾದ ಎನ್ನುವರು. ವೇದಾಂತವಾಕ್ಯಗಳು ಎರಡು ರೀತಿಯಾಗಿವೆ. ಕೆಲವು ಪದಾರ್ಥಪ್ರತಿಪಾದಕ. ಕೆಲವು ವಾಕ್ಯಾರ್ಥಪ್ರತಿಪಾದಕ. ಬ್ರಹ್ಮಜ್ಞಾನವನ್ನು ಸಂಪಾದಿಸಿದವನು ಆ ಬ್ರಹ್ಮನನ್ನೇ ಹೊಂದುತ್ತಾನೆ ಎಂದಾಗ ಬ್ರಹ್ಮನ ಸ್ವರೂಪವನ್ನು ತಿಳಿಯುವ ಅಪೇಕ್ಷೆ ಉಂಟಾಯಿತು. ಆಗ ಪ್ರವೃತ್ತವಾದ ವಾಕ್ಯವು ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂಬುದು. ಸ್ವರೂಪದ ಬಗ್ಗೆ ಪ್ರಶ್ನೆ ಕೇಳಿದ್ದರಿಂದ ಉತ್ತರವಾಕ್ಯವೂ ಸಹ ಸ್ವರೂಪಸಾಧಕ. ಆದ್ದರಿಂದ ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂಬ ವಾಕ್ಯಘಟಕವಾದ ಪದಗಳು ಸತ್ಯತ್ವವೇ ಮೊದಲಾದ ಧರ್ಮಗಳನ್ನು ಹೇಳದೆ ಕೇವಲ ಸ್ವರೂಪವನ್ನು

ತಿಳಿಸುತ್ತವೆ. ಪರ್ಯಾಯತಾದೋಷಕ್ಕೆ ಅವಕಾಶವಿಲ್ಲ. ಏಕೆಂದರೆ ಸತ್ಯಜ್ಞಾನಾದಿಪದಗಳು ಶಕ್ತಿವೃತ್ತಿಯಿಂದ ಶಬಲಬ್ರಹ್ಮನನ್ನು ಪ್ರತಿಪಾದಿಸಿದರೂ ಲಕ್ಷಣಾವೃತ್ತಿಯಿಂದ ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುತ್ತವೆ. ತತ್ ತ್ವಮಸಿ ಮುಂತಾದ ವಾಕ್ಯಗಳು ಜೀವಬ್ರಹ್ಮರ ಐಕ್ಯವನ್ನು ಪ್ರತಿಪಾದಿಸುತ್ತಿವೆ. ಇದು ಮಾಯಾವಾದಿಗಳ ಅಖಂಡಾರ್ಥವಾದ.

ಶ್ರುತಿಗಳು ನಿರ್ಗುಣತ್ವ ಹಾಗೂ ಐಕ್ಯವನ್ನು ಪ್ರತಿಪಾದಿಸುತ್ತವೆ ಎನ್ನುವುದು ಯುಕ್ತವಾಗುವುದಿಲ್ಲ ಎಂದು ಈ ಶ್ಲೋಕದಲ್ಲಿ ಅಖಂಡಾರ್ಥವಾದವನ್ನು ನಿರಾಕರಿಸುತ್ತಿದ್ದಾರೆ.

ಸಂಸರ್ಗಾಸಂಗಿಸಮ್ಯಗ್‌ಧೀಹೇತುತಾ ಯಾ ಗಿರಾಮಿಯಂ ।
ಉಕ್ತಾಖಂಡಾರ್ಥತಾ ಯದ್ವಾ ತತ್‌ಪ್ರಾತಿಪದಿಕಾರ್ಥತಾ ।

ಅಖಂಡಾರ್ಥಪರವಾಕ್ಯವೆಂದರೆ ಸಂಸರ್ಗವನ್ನು ವಿಷಯೀಕರಿಸದೆ ಕೇವಲ ಪದಾರ್ಥಜ್ಞಾನಜನಕವಾದ ವಾಕ್ಯ ಅಥವಾ ಕೇವಲ ಪ್ರಾತಿಪದಿಕಾರ್ಥಪ್ರತಿಪಾದಕ ವಾಕ್ಯ.

**ಯಸ್ಮಾತ್ ತ್ವದುಕ್ತವಾಕ್ಯಾರ್ಥಸ್ತ್ವಯೈವ ತ್ಯಾಜಿತೋಽಖಿಲಃ ।**
**ತಸ್ಮಾದೈಕ್ಯಂ ನೈವ ಸಿದ್ಧ್ಯೇನ್ನಿರ್ಗುಣತ್ವಾದಿಕಂ ಚ ತೇ ॥ ೭೫೩ ॥**

**ಅರ್ಥ–** ಯಸ್ಮಾತ್=ಯಾವ ಕಾರಣದಿಂದ, ಅಖಿಲಃ=ಸಮಸ್ತವಾದ, ತ್ವದುಕ್ತವಾಕ್ಯಾರ್ಥಃ= ನೀನು ಹೇಳಿದ ಐಕ್ಯ ಮತ್ತು ನಿರ್ಗುಣತ್ವವು, ತ್ವಯೈವ=ನಿನ್ನಿಂದಲೇ, ತ್ಯಾಜಿತಃ= ತ್ಯಜಿಸಲ್ಪಟ್ಟಿದೆ. ತಸ್ಮಾತ್=ಆ ಕಾರಣದಿಂದ, ತೇ= ನಿನಗೆ, ಐಕ್ಯಂ=ಐಕ್ಯವು, ನಿರ್ಗುಣತ್ವಾದಿಕಂ ಚ=ನಿರ್ಗುಣತ್ವವೇ ಮೊದಲಾದವುಗಳೂ ಸಹ, ನೈವ ಸಿದ್ಧ್ಯೇತ್=ಸಿದ್ಧಿಸುವುದಿಲ್ಲ.

**ಅನುವಾದ–** ನೀನು ಹೇಳಿದ ವಾಕ್ಯಾರ್ಥವನ್ನು ನೀನೇ ಪರಿತ್ಯಾಗಮಾಡಿದ್ದೀಯೆ. ಆದ್ದರಿಂದ ನಿನಗೆ ಸಮ್ಮತವಾದ ಐಕ್ಯ ಹಾಗೂ ಬ್ರಹ್ಮನ ನಿರ್ಗುಣತ್ವಾದಿಗಳು ಯಾವುದೂ ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ತಸ್ಮಾತ್ ತ್ವದುಕ್ತವಾಕ್ಯಾರ್ಥಸ್ಯ ತ್ವಯೈವ ತ್ಯಾಜಿತತ್ವಾತ್ ॥ ೭೫೩ ॥

**ವಿವರಣೆ–** ನೀನು ಹೇಳಿದ ಐಕ್ಯರೂಪವಾದ ವಾಕ್ಯಾರ್ಥವನ್ನು ನೀನೇ ಪರಿತ್ಯಾಗ ಮಾಡಿದ್ದೀಯೆ. ಏಕೆಂದರೆ ಎಲ್ಲಾ ವಾಕ್ಯಗಳು ಮತ್ತು ಪದಗಳು ಅಖಂಡಾರ್ಥ ಪರವಾದ್ದರಿಂದ ಅವು ಅಖಂಡ ಚೈತನ್ಯವನ್ನು ಬಿಟ್ಟು ಬೇರೆ ಯಾವ ಧರ್ಮವನ್ನೂ ಬೋಧಿಸುವುದಿಲ್ಲ. ಐಕ್ಯವೂ ಒಂದು ಧರ್ಮವಾದ್ದರಿಂದ ಅದನ್ನೂ ವಾಕ್ಯವು ಬೋಧಿ ಸಲಾರದು. ಹಾಗೆಯೇ, ನಿರ್ಗುಣತ್ವವೂ ಸಹ. ಆದ್ದರಿಂದ ಅಖಂಡಾರ್ಥವಾದವನ್ನು

ಅಂಗೀಕರಿಸುವ ನಿನಗೆ ಯಾವುದೇ ವೇದವಾಕ್ಯದಿಂದ ಐಕ್ಯವಾಗಲೀ ಅಥವಾ ನಿರ್ಗುಣತ್ವವಾಗಲೀ ಸಿದ್ಧಿಸುವುದಿಲ್ಲವೆಂದು ಅಭಿಪ್ರಾಯ.

**ಇತ್ಥಂ ಹ್ಯನಶನೇನೈವ ಶ್ರುತೀಸ್ತ್ವಂ ತು ಜಿಘಾಂಸಸಿ ।**
**ಸತ್ಯಂ ಕದಶನೇನಾಪಿ ನಿತ್ಯಾ ಸಾ ವಾಗ್ ಜಿಜೀವಿಷೇತ್ ॥ ೭೫೪ ॥**

**ಅರ್ಥ–** ಇತ್ಥಂ=ಧರ್ಮವನ್ನು ಬೋಧಿಸದೆ ಕೇವಲ ಸ್ವರೂಪಪರಿಚಾಯಕ ಎಂದು ಹೇಳಿ, ತ್ವಂ=ನೀನು, ಅನಶನೇನೈವ=ಉಪವಾಸದಿಂದಲೇ, ಶ್ರುತೀಃ=ಶ್ರುತಿಗಳನ್ನು, ಜಿಘಾಂಸಸಿ= ಸಂಹರಿಸಲು ಬಯಸುತ್ತೀಯೆ, ನಿತ್ಯಾ=ನಿತ್ಯವಾದ, ಸಾ ವಾಕ್=ಆ ಶ್ರುತಿಯು, ಕದಶನೇನಾಪಿ= ಕೆಟ್ಟಊಟದಿಂದಲೂ, ಸತ್ಯಂ=ಸತ್ಯವಾಗಿ, ಜಿಜೀವಿಷೇತ್= ಜೀವಿಸಲು ಇಚ್ಛಿಸುತ್ತದೆ.

**ಅನುವಾದ–** ಹೀಗೆ ನಿರ್ಗುಣ ಶ್ರುತಿಗೆ ಯಾವ ವಿಷಯವನ್ನೂ ಕೊಡದೆ, ಉಪವಾಸವನ್ನೇ ಮಾಡಿಸಿ ನೀನು ಅದನ್ನು ಕೊಲ್ಲಲು ಬಯಸುತ್ತೀಯೆ. ಆದರೆ ನಿತ್ಯವಾದ ಆ ವೇದವಾಕ್ಯವು ಕದನ್ನವನ್ನು ಸ್ವೀಕರಿಸಿಯಾದರೂ ಬದುಕಲು ಇಷ್ಟಪಡುತ್ತದೆ.

**ಭಾವವಿಲಾಸಿನೀ–** ಅನಶನೇನ ಅರ್ಥಾಭಾವಲಕ್ಷಣೇನ । ಜಿಘಾಂಸಸಿ ವೈಯರ್ಥ್ಯರೂಪಹಿಂಸಾಂ ಕರ್ತುಮಿಚ್ಛಸಿ । ಸಂಕುಚಿತಃ ಅಸಂಕುಚಿತೋ ವಾ ಕೋಽಪ್ಯರ್ಥೋ ನಾಸ್ತೀತಿ ವದಸೀತಿ ಭಾವಃ । ಕದಶನೇನ ಸಂಕುಚಿತಾರ್ಥಕಥನರೂಪೇಣ । ಅನಶನಾತ್ ಕದಶನಂ ವರಮಿತಿ ನ್ಯಾಯಾತ್ ಜಿಜೀವಿಷೇತ್ ಸ್ವವೈಯರ್ಥ್ಯರೂಪಾಪ್ರಾಮಾಣ್ಯಂ ಪರಿಹರ್ತುಮಿಚ್ಛೇತ್ । ಏತತ್ ಸತ್ಯಮ್ । ನಿತ್ಯೇತ್ಯನೇನಾಪೌರುಷೇಯತಯಾಽಪ್ರಾಮಾಣ್ಯಲೇಶಸ್ಯಾಯೋಗ್ಯತಾಂ ಸೂಚಯತಿ ॥ ೭೫೪ ॥

**ವಿವರಣೆ–** ನಿರ್ಗುಣಶ್ರುತಿಗೆ ಸಂಕುಚಿತಾರ್ಥವನ್ನೂ ಒಪ್ಪಲಿಲ್ಲ, ಅಸಂಕುಚಿತಾರ್ಥ- ವನ್ನೂ ಒಪ್ಪಲಿಲ್ಲವಾದ್ದರಿಂದ ಶ್ರುತಿಗೆ ವೈಯರ್ಥ್ಯವನ್ನು ಹೇಳಿದಂತಾಯಿತು. ಇದರಿಂದ ಶ್ರುತಿಗೆ ಅಪ್ರಾಮಾಣ್ಯವೂ ಬಂದಿತು. ಊಟವಿಲ್ಲದೆ ಮರಣಹೊಂದುವುದಕ್ಕಿಂತಲೂ ಕೆಟ್ಟ ಊಟದಿಂದಲಾದರೂ ಬದುಕುವುದೇ ಲೇಸು ಎಂಬ ನ್ಯಾಯದಂತೆ ಸಂಕುಚಿತ ಅರ್ಥವನ್ನಾದರೂ ಬೋಧಿಸಿ ಶ್ರುತಿಯು ಪ್ರಾಮಾಣ್ಯವನ್ನು ಸಂಪಾದಿಸುತ್ತದೆ. ಶ್ರುತಿಯು ಅಪೌರುಷೇಯವಾದ್ದರಿಂದ ಎಂದಿಗೂ ಅಪ್ರಮಾಣವಾಗಲು ಸಾಧ್ಯವಿಲ್ಲ ಎಂದು ನಿತ್ಯಾ ಶಬ್ದಪ್ರಯೋಗದಿಂದ ಸೂಚಿಸಿದ್ದಾರೆ.

**ಸರ್ವಥಾಽರ್ಥಪರಿತ್ಯಾಗಾತ್ ಸಂಕೋಚಂ ಕೋ ನ ಮಾನಯೇತ್ ।**
**ಅತೋ ನಿರ್ಗುಣವಾಗ್ ವವ್ರೇ ಹರಿಂ ತ್ರಿಗುಣವರ್ಜಿತಮ್ ॥ ೭೫೫ ॥**

**ಅರ್ಥ–** ಸರ್ವಥಾ=ಎಲ್ಲ ರೀತಿಯಿಂದಲೂ, ಅರ್ಥಪರಿತ್ಯಾಗಾತ್= ಅರ್ಥಪರಿತ್ಯಾಗಕ್ಕಿಂತಲೂ, ಸಂಕೋಚಂ=ಸಂಕುಚಿತ ಅರ್ಥವನ್ನು ಕಃ=ಯಾರು ತಾನೇ, ನ ಮಾನಯೇತ್= ಸಮ್ಮತಿಸುವುದಿಲ್ಲ? ಅತಃ=ಆದ್ದರಿಂದ, ನಿರ್ಗುಣವಾಕ್= ನಿರ್ಗುಣಶ್ರುತಿಯು ಹರಿಂ= ಪರಮಾತ್ಮನನ್ನು ತ್ರಿಗುಣವರ್ಜಿತಂ=ಮೂರು ಗುಣಗಳಿಂದ ರಹಿತನೆಂದು, ವವ್ರೇ=ಸ್ವೀಕರಿಸಿತು.

**ಅನುವಾದ–** ಸರ್ವಥಾ ಅರ್ಥವನ್ನು ಪರಿತ್ಯಾಗ ಮಾಡುವುದಕ್ಕಿಂತಲೂ, ಅರ್ಥಕ್ಕೆ ಸಂಕೋಚ ಮಾಡುವುದನ್ನು ಯಾರು ಗೌರವಿಸುವುದಿಲ್ಲ? ಆದ್ದರಿಂದ ನಿರ್ಗುಣವಾಕ್ಯವು ತ್ರಿಗುಣವರ್ಜಿತನಾದ ಹರಿಯನ್ನು ಸ್ವೀಕರಿಸಿತು.

**ಭಾವವಿಲಾಸಿನೀ–ಫಲಿತಮಾಹ– ಸರ್ವಥೇತಿ ॥ ಉಪಸಂಹರತಿ– ಅತ ಇತಿ ॥ ಅತಃ ಸಙ್ಕೋಚಸ್ಯ ನ್ಯಾಯ್ಯತ್ವಾತ್ ॥ ೭೫೫ ॥**

**ವಿವರಣೆ–** ನಿರ್ಗುಣಶ್ರುತಿಗೆ ಸಂಕುಚಿತಾರ್ಥವೂ ಇಲ್ಲ, ಅಸಂಕುಚಿತಾರ್ಥವೂ ಇಲ್ಲ ಎಂದು ಹೇಳುವುದಕ್ಕಿಂತಲೂ ಸಂಕುಚಿತಾರ್ಥವನ್ನು ಹೇಳುವುದೇ ಸಮಂಜಸ. ಆದ್ದರಿಂದ ನಿರ್ಗುಣಶ್ರುತಿಯು ಸತ್ವ ರಜಸ್ತಮಸ್ ಎಂಬ ಪ್ರಾಕೃತಗುಣರಹಿತನು ಶ್ರೀಹರಿ ಎಂದು ಪ್ರತಿಪಾದಿಸುತ್ತಿದೆ.

ಹಿಂದಿನ ಶ್ಲೋಕದಲ್ಲಿ ಊಟವಿಲ್ಲದಿರುವುದಕ್ಕಿಂತಲೂ ಕೆಟ್ಟ ಊಟವಾದರೂ ಯುಕ್ತವೆಂಬ ನ್ಯಾಯದಿಂದ ಮುಖ್ಯಾರ್ಥವನ್ನು ಶ್ರುತಿಗೆ ಹೇಳಲು ಸಾಧ್ಯವಾಗದಿದ್ದಲ್ಲಿ ಅಮುಖ್ಯಾರ್ಥವನ್ನಾದರೂ ಹೇಳಬೇಕೆಂದು ಪ್ರತಿಪಾದಿಸಿದ್ದರು.

ಈಗ ಶ್ರುತಿಯು ಕೆಟ್ಟ ಊಟವನ್ನು ಎಂದೂ ತಿನ್ನುವುದಿಲ್ಲ. ರಾಜಭೋಗವನ್ನೇ ಅದು ಭೋಗಿಸುವುದು. ಸಂಕುಚಿತಾರ್ಥವು ಮುಖ್ಯಾರ್ಥವೇ ಆಗಿದೆ. ಅದು ಗೌಣಾರ್ಥವಲ್ಲ ಎಂದು ಸಮರ್ಥಿಸಿದ್ದಾರೆ.

**ವಿಮತಃ ಪರಮೋ ಮುಕ್ತಃ ಪರಮಾತ್ಮಾ ಘಟಾದಿವತ್ ।**
**ಮುಕ್ತತ್ವಾದ್ ಭಾವಧರ್ಮಾಣಾಮಪಿ ಧರ್ಮೀತ್ಯಬಾಧಿತಾ ।**
**ಅನುಮಾ ಸಗುಣಬ್ರಹ್ಮಸಾಧಿಕಾ ಬಾಧಿಕಾ ತವ ॥ ೭೫೬ ॥**

**ಅರ್ಥ–** ವಿಮತಃ=ವಿವಾದವಿಷಯನಾದ, ಪರಮೋ ಮುಕ್ತಃ=ಶ್ರೇಷ್ಠಮುಕ್ತನಾದ, ಪರಮಾತ್ಮಾ=ಪರಮಾತ್ಮನು, ಮುಕ್ತತ್ವಾತ್=ಮುಕ್ತನಾದ್ದರಿಂದ, ಘಟಾದಿವತ್= ಘಟಾದಿಗಳಂತೆ, ಭಾವಧರ್ಮಾಣಾಂ=ಭಾವರೂಪಧರ್ಮಗಳಿಗೆ, ಧರ್ಮೀ= ಆಶ್ರಯ, ಇತಿ= ಈ ರೀತಿಯಾದ, ಅಬಾಧಿತಾ= ಬಾಧಿತವಾಗದ, ಸಗುಣಬ್ರಹ್ಮಸಾಧಿಕಾ= ಬ್ರಹ್ಮನಲ್ಲಿ ಗುಣಗಳಿವೆ ಎಂದು ಸಾಧಿಸುವ, ಅನುಮಾ=ಅನುಮಾನವು, ತವ=ನಿನಗೆ, ಬಾಧಿಕಾ= ಬಾಧಕವು.

**ಅನುವಾದ–** ಪರಮೋ ಮುಕ್ತಃ ಪರಮಾತ್ಮಾ ಭಾವಧರ್ಮಾಣಾಂ ಧರ್ಮೀ, ಮುಕ್ತತ್ವಾತ್ ಘಟಾದಿವತ್ ಎಂಬ ಅಬಾಧಿತವಾದ ಅನುಮಾನವೂ ಸಹ ಬ್ರಹ್ಮನಿಗೆ ಸಗುಣತ್ವವನ್ನು ಸಾಧಿಸುವುದಾಗಿ ನಿನಗೆ ಬಾಧಕವಾಗುತ್ತದೆ.

**ಭಾವವಿಲಾಸಿನೀ–** ವ್ಯಾವಹಾರಿಕತಯಾ ಸಿದ್ಧಸಾಧನತ್ವಾದಿಶಂಕಾಂ ಗರ್ಭಸ್ರಾವೇಣ ನಿವಾರಯನ್ ಪರಮಮುಕ್ತಂ ಪರಮಾತ್ಮಾನಂ ಪಕ್ಷೀಕೃತ್ಯ ತಸ್ಯ ಸಗುಣತ್ವೇಽನುಮಾನಮಾಹ– **ಏಮತ ಇತಿ** ॥ ಅತ್ರ ಪರಮೋ ಮುಕ್ತಃ ಪರಮಾತ್ಮೇತಿ ಪಕ್ಷಃ। ಭಾವಧರ್ಮಾಣಾಂ ಧರ್ಮೀತಿ ಸಾಧ್ಯಂ ಮುಕ್ತತ್ವಾದಿತಿ ಹೇತುಃ। ಘಟಾದಿವದಿತಿ ದೃಷ್ಟಾಂತಃ ॥ ೭೫೬ ॥

**ವಿವರಣೆ–** ಶ್ರೀಹರಿಯು ಗುಣರಹಿತನಲ್ಲ, ಅವನು ಗುಣಪರಿಪೂರ್ಣನೆಂದು ಯುಕ್ತಿಯಿಂದಲೂ ಸಿದ್ಧವಾಗುತ್ತದೆ ಎಂದು ಯುಕ್ತಿಯನ್ನು ಈ ಶ್ಲೋಕದಲ್ಲಿ ಹೇಳುತ್ತಿದ್ದಾರೆ.

ಪರಮೋ ಮುಕ್ತಃ ಪರಮಾತ್ಮಾ ಭಾವಧರ್ಮಾಣಾಂ ಧರ್ಮೀ, ಮುಕ್ತತ್ವಾತ್ ಘಟಾದಿವತ್.

ಘಟಾದಿಗಳಂತೆ ಎಂದು ದೃಷ್ಟಾಂತವನ್ನು ನೀಡಿರುವುದರಿಂದ ಉಂಟಾಗುವ ಸಂಶಯಗಳ ಪರಿಹಾರಕ್ಕಾಗಿ ಪರಮಃ ಎಂದು ವಿಶೇಷಣವನ್ನು ನೀಡಿದ್ದಾರೆ. ಸ್ವತಂತ್ರವಾಗಿ ಮುಕ್ತನಾದವನು ಶ್ರೀಹರಿಮಾತ್ರ, ಇತರರಲ್ಲ.

ಶಾಂಕರದರ್ಶನದಲ್ಲಿ ಬ್ರಹ್ಮನಲ್ಲಿ ಅಭಾವರೂಪಧರ್ಮಗಳನ್ನು ಒಪ್ಪಿದ್ದಾರೆ. ಭಾವಧರ್ಮಗಳನ್ನು ಒಪ್ಪಿಲ್ಲ. ಆದ್ದರಿಂದ ಭಾವಧರ್ಮಾಣಾಂ ಧರ್ಮೀ ಎಂದು ಸಾಧ್ಯನಿರ್ದೇಶವನ್ನು ಮಾಡಿದ್ದಾರೆ. ಕೇವಲ ಅವನಲ್ಲಿ ಭಾವಧರ್ಮಗಳು ಮಾತ್ರವಲ್ಲ ಅಭಾವಧರ್ಮಗಳೂ ಅವನಲ್ಲಿವೆ ಎಂದು ಅಪಿಶಬ್ದದಿಂದ ಸೂಚಿಸಿದ್ದಾರೆ. ನಿರ್ದುಷ್ಟವಾದ ಈ ಅನುಮಾನವು ಬ್ರಹ್ಮನಲ್ಲಿ ಗುಣಗಳಿವೆ ಎಂದು ಪ್ರತಿಪಾದಿಸುತ್ತದೆ. ಇದು ಗುಣಗಳಿಲ್ಲ ಎನ್ನುವ ಶಾಂಕರರಿಗೆ ಬಾಧಕವಾಗಿದೆ.

**ಬಂಧಾಭಾವಾಧಿಕರಣೋ ಮುಕ್ತೋ ಹ್ಯತ್ರ ವಿವಕ್ಷಿತಃ ।**
**ಬಂಧಶ್ಚ ಚೇತನಸ್ಯೈವ ನ ಘಟೇ ನಾಪಿ ಮೋಚಿತೇ ॥ ೭೫೭ ॥**

**ಅರ್ಥ–** ಅತ್ರ= ಈ ಅನುಮಾನದಲ್ಲಿ, ಮುಕ್ತಃ= ಮುಕ್ತನೆಂದರೆ, ಬಂಧಾಭಾವಾಧಿಕರಣಃ= ಬಂಧಾಭಾವಾಧಿಕರಣನೆಂದು, ಅಭಿಪ್ರೇತಃ= ವಿವಕ್ಷಿತನಾಗಿದ್ದಾನೆ, ಬಂಧಶ್ಚ= ಬಂಧವಾದರೂ, ಚೇತನಸ್ಯೈವ= ಚೇತನನಿಗೇ ಇದೆ, ಘಟೇ= ಘಟದಲ್ಲಿ, ನ= ಇಲ್ಲ, ಮೋಚಿತೇಽಪಿ= ಮುಕ್ತನಲ್ಲಿಯೂ, ನ= ಇಲ್ಲ.

**ಅನುವಾದ– ಈ ಅನುಮಾನದಲ್ಲಿ ಮುಕ್ತ ಎಂದರೆ ಬಂಧಾಭಾವಾಶ್ರಯ ಎಂದು ಅರ್ಥ. ಬಂಧವು ಚೇತನನಿಗೇ ಇರುವಂತಹದು. ಘಟಕ್ಕಾಗಲೀ ಮುಕ್ತನಿಗಾಗಲೀ ಬಂಧವು ಇರುವುದಿಲ್ಲ.**

**ವಿವರಣೆ–** ಪರಮಾತ್ಮಾ ಭಾವಧರ್ಮಧರ್ಮೀ ಮುಕ್ತತ್ವಾತ್ ಘಟವತ್ ಎಂದು ಅನುಮಾನ. ಘಟದಲ್ಲಿ ಮುಕ್ತತ್ವವು ಹೇಗೆ ಎಂದು ಪ್ರಶ್ನೆ. ಮುಕ್ತತ್ವ ಎಂದರೆ ಬಂಧಧ್ವಂಸ ಎಂದು ಹೇಳಿದರೆ ಘಟದಲ್ಲಿ ಬಂಧವಿಲ್ಲದ ಕಾರಣ ಬಂಧಧ್ವಂಸವೂ ಇಲ್ಲದಿರುವುದರಿಂದ ದೃಷ್ಟಾಂತದಲ್ಲಿ ಸಾಧನವೈಕಲ್ಯವು ಬರುತ್ತದೆ. ಬಂಧಾಭಾವ ಎಂದು ಹೇಳಿದರೆ ಅದು ಘಟದಲ್ಲಿ ಬರುತ್ತದೆ. ಆಗ ಸಾಧನವೈಕಲ್ಯವಿಲ್ಲ. ಅದರಂತೆ ಪರಮಾತ್ಮನಲ್ಲಿಯೂ ಬಂಧಧ್ವಂಸವಿಲ್ಲದಿದ್ದರೂ ಬಂಧಾಭಾವವಿದೆ. ಆದ್ದರಿಂದ ಅಸಿದ್ಧಿದೋಷವೂ ಇಲ್ಲ ಎಂದು ಅಭಿಪ್ರಾಯ.

**ಅಭಾವದ್ವೈತವಾದೇ ತೇ ಕಥಂ ನಾಭಾವಧರ್ಮಿತಾ ।**
**ಅವ್ಯಾಹತಮತಿರ್ಮುಕ್ತೇ ಬಂಧಾಭಾವಂ ನ ಕೋ ವದೇತ್ ॥ ೭೫೮ ॥**

**ಅರ್ಥ–** ಅಭಾವದ್ವೈತವಾದೇ=ಅಭಾವರೂಪದ್ವಿತೀಯಪದಾರ್ಥವನ್ನು ಸಮ್ಮತಿಸುವ ವಾದದಲ್ಲಿ, ಅಭಾವಧರ್ಮಿತಾ=ಅಭಾವಧರ್ಮಿತ್ವವು, ಕಥಂ=ಹೇಗೆ, ತೇ=ನಿನಗೆ, ನ=ಇಲ್ಲ? ಅವ್ಯಾಹತಮತಿಃ=ಪರಿಶುದ್ಧವಾದ ಬುದ್ಧಿವುಳ್ಳ, ಕಃ=ಯಾರು ತಾನೇ, ಮುಕ್ತೇ=ಮುಕ್ತನಲ್ಲಿ ಬಂಧಾಭಾವಂ=ಬಂಧರಾಹಿತ್ಯವನ್ನು, ನ ವದೇತ್=ಹೇಳುವುದಿಲ್ಲ?

**ಅನುವಾದ– ಅಭಾವದ್ವೈತವನ್ನು ಅಂಗೀಕರಿಸುವ ನಿನ್ನ ಮತದಲ್ಲಿ ಬ್ರಹ್ಮನಿಗೆ ಅಭಾವಧರ್ಮತ್ವವು ಹೇಗೆ ಇರುವುದಿಲ್ಲ? ಪರಿಶುದ್ಧವಾದ ಬುದ್ಧಿಯುಳ್ಳ ಯಾವನು ತಾನೇ ಮುಕ್ತನಿಗೆ ಬಂಧಾಭಾವವನ್ನು ಹೇಳುವುದಿಲ್ಲ?**

**ಭಾವವಿಲಾಸಿನೀ–** ಮುಕ್ತತ್ವಹೇತೋರಸಿದ್ಧ್ಯಾದಿಕಂ ಪರಿಹರ್ತುಂ ವಿವೇಚಯತಿ– ಬಂಧಾ-ಭಾವಾಧಿಕರಣ ಇತ್ಯಾರಭ್ಯ ಮುಕ್ತೇ ಬಂಧಾಭಾವಂ ನ ಕೋ ವದೇದಿತ್ಯಂತೇನ ॥೭೫೭-೭೫೮॥

**ವಿವರಣೆ–** ಅಭಾವರೂಪಾಃ ಧರ್ಮಾಃ ಅದ್ವೈತಂ ನ ನಿಘ್ನಂತಿ - ದ್ವಿತೀಯವಸ್ತುವನ್ನು ಅಂಗೀಕರಿಸದ ಶಾಂಕರರೂ ಕೂಡ ಅಭಾವರೂಪವಾದ ದ್ವಿತೀಯವಸ್ತುವನ್ನು ಅಂಗೀಕರಿಸುತ್ತಾರೆ. ಭಾವರೂಪವಾದ ದ್ವಿತೀಯವಸ್ತುವನ್ನು ಅಂಗೀಕರಿಸಿದಲ್ಲಿ ಅದ್ವೈತಭಂಗ ಉಂಟಾಗುವುದು ಹೊರತಾಗಿ ಅಭಾವರೂಪಧರ್ಮದಿಂದ ಅಲ್ಲ. ಬಂಧರಾಹಿತ್ಯವು ಮುಕ್ತನಲ್ಲಿ ಪ್ರಮಾಣದಿಂದ ಸಿದ್ಧವಾಗಿದೆ. ಆದ್ದರಿಂದ ಅಸಿದ್ಧಿದೋಷವಿಲ್ಲ.

**ಮುಕ್ತತ್ವಂ ನಾಸ್ತಿ ಚೇತ್ ತರ್ಹಿ ಬದ್ಧತ್ವೇನೈವ ಧರ್ಮವಾನ್ ।**
**ಬದ್ಧಪೂರುಷವತ್ ಸ್ಯಾದ್ಧಿ ವ್ಯಾಹತಿಸ್ತು ತವಾಧಿಕಾ ॥ ೭೫೯ ॥**

**ಅರ್ಥ–** ಮುಕ್ತತ್ವಂ=ಮುಕ್ತತ್ವವು, ನಾಸ್ತಿ ಚೇತ್=ಇಲ್ಲವಾದರೆ, ತರ್ಹಿ=ಆ ಪಕ್ಷದಲ್ಲಿ ಬದ್ಧತ್ವೇನೈವ=ಬದ್ಧತ್ವವಿರುವುದರಿಂದಲೇ, ಹಿ=ಆ ಕಾರಣದಿಂದ, ಬದ್ಧಪೂರುಷವತ್=

ಬದ್ಧನಾದ ಚೈತ್ರನಂತೆ, ಧರ್ಮವಾನ್ ಸ್ಯಾತ್= ಪರಮಾತ್ಮನು ಧರ್ಮವುಳ್ಳವನಾದನು. ತವ= ನಿನಗೆ, ವ್ಯಾಹತಿಸ್ತು= ವ್ಯಾಹತಿಯೂ, ಅಧಿಕಾ= ಅಧಿಕವಾಗಿ ಉಂಟಾಗುತ್ತದೆ ಎಂದು, ಹಿ= ನಿಶ್ಚಿತ.

**ಅನುವಾದ–** ಮುಕ್ತತ್ವವು ಇಲ್ಲದಿದ್ದರೆ ಅದಕ್ಕೆ ವಿರುದ್ಧವಾದ ಬದ್ಧತ್ವವು ಇರುವುದರಿಂದ, ಬದ್ಧತ್ವ ಧರ್ಮದಿಂದಲೇ ಬ್ರಹ್ಮನು ಬದ್ಧಪುರುಷನಂತೆ ಸಗುಣನಾಗುತ್ತಾನೆ. ನಿನಗೆ ಮಾತ್ರ ವ್ಯಾಹತಿಯು ಅಧಿಕವಾಗಿ ಬರುತ್ತದೆ.

**ಭಾವವಿಲಾಸಿನೀ–** ಏವಮಪಿ ಚಕ್ಷುಷೀ ನಿಮೀಲ್ಯ ಮುಕ್ತತ್ವಾಭಾವಂ ವದಂತಂ ಪ್ರತಿ ಚೇತನಸ್ಯ ಸತೋ ಮುಕ್ತತ್ವಾಭಾವೇ ಬದ್ಧತ್ವಾವಶ್ಯಮ್ಭಾವೇನ ತದೇವ ಹೇತುಃ ಸ್ಯಾದಿತ್ಯಾಹಮುಕ್ತತ್ವಂ ನಾಸ್ತಿ ಚೇದಿತಿ ॥ ವ್ಯಾಹತಿರಿತ್ಯತ್ರ ಮುಕ್ತ ಇತ್ಯಂಗೀಕೃತ್ಯ ಪುನರ್ಮುಕ್ತತ್ವಾಭಾವಾಂಗೀಕಾರಾದೇಕಾ ಮುಕ್ತಸ್ಯ ಬದ್ಧತ್ವಾಂಗೀಕಾರಾದಪರಾ ಚೇತಿ ವ್ಯಾಹತಿದ್ವಯಂ ದ್ರಷ್ಟವ್ಯಮ್ ॥ ೭೫೯ ॥

**ವಿವರಣೆ–** ಮುಕ್ತತ್ವಹೇತುವೇ ಪರಮಾತ್ಮನಲ್ಲಿ ಇಲ್ಲ, ಆದ್ದರಿಂದ ಪಕ್ಷಧರ್ಮತಾ ಇಲ್ಲ, ಅನುಮಿತಿ ಉಂಟಾಗುವುದಿಲ್ಲ ಎಂದು ಪರಪಕ್ಷಿಯು ನಮ್ಮ ಅನುಮಾನಕ್ಕೆ ದೋಷವನ್ನು ಹೇಳಬಹುದು. ಈ ರೀತಿ ಹೇಳಿದರೆ ತನಗೆ ತೊಂದರೆ ಇದೆ ಎಂದು ತಿಳಿಯದೇ ಮಾತನಾಡುತ್ತಾನೆ. ಅವನಿಗೆ ಬರುವ ತೊಂದರೆಯನ್ನು ಇಲ್ಲಿ ತೋರಿಸುತ್ತಿದ್ದಾರೆ.

ಪರಸ್ಪರವಿರುದ್ಧವಾದ ಎರಡರಲ್ಲಿ ಒಂದರ ನಿಷೇಧವು ಮತ್ತೊಂದರ ವಿಧಿಯಿಂದ ವ್ಯಾಪ್ತ ಎಂದು ನಿಯಮ. ಮುಕ್ತತ್ವ, ಬದ್ಧತ್ವ ಎರಡು ವಿರುದ್ಧಧರ್ಮಗಳು. ಮುಕ್ತತ್ವವು ಇಲ್ಲ ಎಂದಾಗ ಬದ್ಧತ್ವವು ಇದೆ ಎಂದು ಸಿದ್ಧವಾಗುವುದು. ಹೀಗೆ ಬದ್ಧತ್ವರೂಪಭಾವಧರ್ಮವೇ ಇರುವುದರಿಂದ ಅವನ ನಿರ್ಧರ್ಮಕತ್ವಕ್ಕೆ ಭಂಗವು ಬರುತ್ತದೆ. ಪರಮಾತ್ಮಾ ಭಾವಧರ್ಮವಾನ್ ಬದ್ಧತ್ವಾತ್ ಚೈತ್ರವತ್ ಎಂದು ಅನುಮಾನಪ್ರಯೋಗ. ಚೈತ್ರನಲ್ಲಿ ಬದ್ಧತ್ವರೂಪಹೇತುವು ಹಾಗೂ ಭಾವಧರ್ಮ-ರೂಪಸಾಧ್ಯವು ಇದೆ. ಪಕ್ಷನಾದ ಪರಮಾತ್ಮನಲ್ಲಿ ಬದ್ಧತ್ವವಿರುವುದರಿಂದ ಭಾವರೂಪ-ಧರ್ಮವಿದೆ ಎಂದು ಸಾಧಿಸಬಹುದು. ಈ ರೀತಿ ಭಾವಧರ್ಮವು ಸಿದ್ಧವಾಗುವುದು ಮಾತ್ರವಲ್ಲದೇ ವ್ಯಾಹತಿಯೂ ಪರಪಕ್ಷಿಗೆ ಬರುತ್ತದೆ. ಪರಮಾತ್ಮನಿಗೆ ಮುಕ್ತತ್ವವನ್ನು ಒಪ್ಪಿ ಪುನಃ ಅವನನ್ನು ಬದ್ಧ ಎನ್ನುವುದರಿಂದ ವ್ಯಾಹತಿಯೂ ಅಧಿಕವಾಗಿ ಬರುತ್ತದೆ.

**ಪರಾಂಗೀಕಾರಸಿದ್ಧೇನ ಹೇತುನಾ ಪರದೂಷಣಮ್ ।**
**ಭಕ್ತೇಷು ಕರುಣಾಬಂಧಬದ್ಧಸ್ತು ಸ್ಯಾನ್ಮಮಾಪಿ ಹಿ ॥ ೭೬೦ ॥**

**ಅರ್ಥ–** ಪರಾಂಗೀಕಾರಸಿದ್ಧೇನ= ಪರರು ಅಂಗೀಕರಿಸುವುದರಿಂದ ಸಿದ್ಧವಾದ, ಹೇತುನಾ= ಹೇತುವಿನಿಂದ, ಪರದೂಷಣಂ ಸ್ಯಾತ್= ಪರರ ದೂಷಣೆಯನ್ನು

ಮಾಡಬಹುದು. ಮಮ ಅಪಿ= ನನಗೂ ಸಹ ಪರಮಾತ್ಮನು, ಭಕ್ತೇಷು= ಭಕ್ತರಲ್ಲಿ ಕರುಣಾಬಂಧಬದ್ಧಃ= ಕರುಣಾಬಂಧ ಬದ್ಧನಾಗಿದ್ದಾನಷ್ಟೇ, ಹಿ= ಇದು ಪ್ರಸಿದ್ಧವಾಗಿದೆ.

**ಅನುವಾದ–** **ಪರರು ಅಂಗೀಕರಿಸಿದ ಹೇತುವಿನಿಂದಲೇ ಪರರ ದೂಷಣೆಯನ್ನು ಮಾಡಬಹುದು. ಪರಮಾತ್ಮನು ಭಕ್ತರ ವಿಷಯದಲ್ಲಿ ತನಗಿರುವ ಕರುಣೆಯ ಬಂಧದಿಂದ ಬದ್ಧನಾಗಿರುವುದರಿಂದ ಪರಮಾತ್ಮನಲ್ಲಿಯೂ ಬದ್ಧತ್ವರೂಪವಾದ ಹೇತುವು ಬರುತ್ತದೆ.**

**ಭಾವವಿಲಾಸಿನೀ–** ಸ್ವಮತೇ ಬದ್ಧತ್ವಹೇತೋರಸಿದ್ಧಿಮಾಶಂಕ್ಯ ದ್ವೇಧಾ ಪರಿಹರತಿ– **ಪರಾಂಗೀಕಾರೇತ್ಯಾದಿನಾ ॥ ೭೬೦ ॥**

**ವಿವರಣೆ–** 'ಪರಮಾತ್ಮಾ ಭಾವಧರ್ಮವಾನ್ ಬದ್ಧತ್ವಾತ್' ಪ್ರಕೃತ ಅನುಮಾನದಲ್ಲಿ ದ್ವೈತಿಗಳಿಗೆ ಬದ್ಧತ್ವಹೇತುವು ಪಕ್ಷದಲ್ಲಿ ಸಿದ್ಧವಾಗಿಲ್ಲ. ಆದ್ದರಿಂದ ಅಸಿದ್ಧಿದೋಷ ಎಂದು ಆಕ್ಷೇಪಿಸಬಾರದು. ಇದು ದೂಷಣಾನುಮಾನ. ದೂಷಣಾನುಮಾನದಲ್ಲಿ ಹೇತುವು ಪರನಿಗೆ ಸಿದ್ಧವಾಗಿರಬೇಕು, ಹೊರತು ಅನುಮಾನಪ್ರಯೋಕ್ತೃವಿಗಲ್ಲ. ಬದ್ಧತ್ವಹೇತುವು ಪರನಿಗೆ ಸಿದ್ಧವಾಗಿದೆ. ಅಥವಾ ಇದನ್ನು ಸಾಧನಾನುಮಾನ ಎಂದೂ ಹೇಳಬಹುದು. ಭಕ್ತರ ವಿಷಯದಲ್ಲಿ ಕಾರುಣ್ಯವನ್ನು ತೋರಿಸುವ ಪರಮಾತ್ಮನು ಕರುಣೆಯ ಪಾಶದಿಂದ ಬದ್ಧನಾಗಿದ್ದಾನೆ. ಹೀಗೆ ಬದ್ಧತ್ವವು ಪರಮಾತ್ಮನಲ್ಲಿರುವುದರಿಂದ ಅಸಿದ್ಧಿದೋಷಕ್ಕೆ ಅವಕಾಶವಿಲ್ಲ.

**ನೋಭಯಂ ಚೇದ್ ದ್ವಯಾಭಾವಾದ್ ಭಾವಧರ್ಮೀ ಘಟಾದಿವತ್ ।**
**ಬಂಧೋ ಬಂಧಧ್ವಂಸರೂಪಮುಕ್ತತ್ವಂ ಚ ನ ಯತ್ ಪರೇ ।**
**ನಿತ್ಯಮುಕ್ತೇ ನಾಪಿ ಘಟೇ ತತಃ ಕಾ ಮೇ ಕ್ಷತಿರ್ವದ ॥ ೭೬೧ ॥**

**ಅರ್ಥ–** ಉಭಯಂ =ಬದ್ಧತ್ವ ಹಾಗೂ ಮುಕ್ತತ್ವವೆರಡೂ, ನ ಚೇದ್=ಇಲ್ಲವಾದಲ್ಲಿ ದ್ವಯಾಭಾವಾತ್=ಎರಡೂ ಇಲ್ಲದಿರುವುದರಿಂದ, ಘಟಾದಿವತ್=ಘಟಾದಿಗಳಂತೆ, ಭಾವಧರ್ಮೀ=ಪರಮಾತ್ಮನು ಭಾವರೂಪಧರ್ಮವುಳ್ಳವನು. ಬಂಧಃ=ಬಂಧವೂ, ಬಂಧಧ್ವಂಸರೂಪಮುಕ್ತತ್ವಂ ಚ=ಬಂಧಧ್ವಂಸರೂಪಮುಕ್ತತ್ವವೂ ಸಹ, ಯತ್=ಯಾವ ಕಾರಣದಿಂದ, ಪರೇ=ಸರ್ವೋತ್ತಮನಾದ, ನಿತ್ಯಮುಕ್ತೇ= ನಿತ್ಯಮುಕ್ತನಾದ ಪರಮಾತ್ಮನಲ್ಲಿ ನ=ಇಲ್ಲವೋ, ಘಟೇ ಅಪಿ=ಘಟದಲ್ಲಿಯೂ ಸಹ, ನ= ಇಲ್ಲವೋ. ತತಃ=ಆ ಕಾರಣದಿಂದ, ಮೇ=ನನಗೆ, ಕಾ ಕ್ಷತಿಃ=ಹಾನಿ ಏನೆಂಬುದನ್ನು, ವದ= ಹೇಳು.

**ಅನುವಾದ–** **ಪರಮಾತ್ಮನಲ್ಲಿ ಬದ್ಧತ್ವ ಮತ್ತು ಮುಕ್ತತ್ವ ಎರಡೂ ಇಲ್ಲವೆಂದು ಹೇಳಿದರೆ, ಬಂಧವೂ ಬಂಧಧ್ವಂಸವೂ ಇಲ್ಲದಿರುವ ಘಟಾದಿಯಂತೆ ಅವನು ಭಾವಧರ್ಮ**

ಉಳ್ಳವನಾಗುತ್ತಾನೆ. ನಿತ್ಯಮುಕ್ತನಾದ ಪರಮಾತ್ಮನಲ್ಲಾಗಲೀ ಅಥವಾ ಘಟದಲ್ಲಾಗಲೀ ಬಂಧವೂ ಮತ್ತು ಬಂಧಧ್ವಂಸರೂಪವಾದ ಮುಕ್ತತ್ವವೂ ಇಲ್ಲ. ಆದ್ದರಿಂದ ನನಗೆ ಏನು ಹಾನಿ ಎಂದು ಹೇಳು.

**ಭಾವವಿಲಾಸಿನೀ–** ಬದ್ಧತ್ವಂ ಮುಕ್ತತ್ವಂ ಚೋಭಯಂ ನಾಸ್ತೀತಿ ವದಂತಂ ಪ್ರತ್ಯಾಹ– ನೋಭಯಂ ಚೇದಿತಿ ॥ ದ್ವಯೋಭಾವಾದ್ಬದ್ಧತ್ವಮುಕ್ತತ್ವಯೋರನಧಿಕರಣತ್ವಾತ್ । ಬಂಧಾಭಾವಂ ವದತೈವ ಪುನಸ್ಸಾಮಾನ್ಯತೋ ಬಂಧಾಭಾವರೂಪಮುಕ್ತತ್ವಾಭಾವೇನ ವಕ್ತುಮುಚಿತಃ ವ್ಯಾಹತೇಃ। ಅತೋ ಬಂಧಧ್ವಂಸರೂಪಮುಕ್ತತ್ವಾಭಾವೋ ವಕ್ತವ್ಯಃ । ತತ್ರ ಹೇತೋಽಸ್ಸಿದ್ಧಿಪ್ರಕಾರಮಾಹ–ಬಂಧ ಇತಿ । ಯತ್ ಯಸ್ಮಾತ್ । ತತಃ ಪಕ್ಷದೃಷ್ಟಾಂತಯೋರನುಪಪತ್ತ್ಯಭಾವಾತ್ । ಏವಂ ಮುಕ್ತತ್ವಹೇತೌ ಯದ್ಯತ್ಪರೇಣ ದೂಷಣಮುದಿತಂ ತತ್ತತ್ಸರ್ವಂ ಹೇತೂಕೃತ್ಯ ಚಮತ್ಕಾರೋ ದರ್ಶಿತಃ ॥೭೬೦॥

**ವಿವರಣೆ–** ಪರಮಾತ್ಮಾ ಭಾವಧರ್ಮವಾನ್ ಉಭಯಾಭಾವಾತ್ ಘಟವತ್- ಪರಮಾತ್ಮನು ಭಾವರೂಪಧರ್ಮವುಳ್ಳವನು, ಬದ್ಧತ್ವ ಹಾಗೂ ಮುಕ್ತತ್ವಗಳೆರಡೂ ಇಲ್ಲದಿರುವುದರಿಂದ, ಘಟ ಪಟ ಮೊದಲಾದ ವಸ್ತುಗಳಂತೆ. ಬಂಧವಿದ್ದವನಿಗೆ ಬಂಧಧ್ವಂಸರೂಪಮುಕ್ತತ್ವವು ಇರುತ್ತದೆ. ಬಂಧವೇ ಇಲ್ಲದವನಿಗೆ ಬಂಧಧ್ವಂಸರೂಪ- ಮುಕ್ತತ್ವವಾದರೂ ಹೇಗೆ ಸಾಧ್ಯ? ಹೀಗೆ ಪಕ್ಷದಲ್ಲಿ ಹೇತುವು ಸಿದ್ಧವಾಗಿರುವುದರಿಂದ ಅಸಿದ್ಧಿದೋಷವಿಲ್ಲ. ಸಾಧನವೈಕಲ್ಯವೂ ಇಲ್ಲ.

**ಅಭಾವಾಧಾರತ್ವತೋ ವಾ ಭಾವಧರ್ಮೀ ಕಪಾಲವತ್ ।**
**ಸಮಸ್ತಧರ್ಮಾಭಾವೇಽಪಿ ಹ್ಯಭಾವಾಧಾರತಾ ದೃಢಾ ॥ ೭೬೨ ॥**

**ಅರ್ಥ–** ಅಭಾವಾಧಾರತ್ವತಃ=ಅಭಾವಕ್ಕೆ ಆಧಾರನಾಗಿರುವುದರಿಂದ, ಭಾವಧರ್ಮೀ= ಪರಮಾತ್ಮನು ಭಾವಧರ್ಮವುಳ್ಳವನು, ಕಪಾಲವತ್=ಕಪಾಲದಂತೆ, ಸಮಸ್ತ ಧರ್ಮಾಭಾವೇಽಪಿ= ಯಾವಧರ್ಮಗಳೂ ಇಲ್ಲದವನಾದರೂ, ಅಭಾವಾಧಾರತಾ= ಅಭಾವಕ್ಕೆ ಆಧಾರನೆಂಬುದು, ದೃಢಾ=ದೃಢವಾಯಿತು.

**ಅನುವಾದ–** ಯಾವ ಧರ್ಮವೂ ಇಲ್ಲವೆಂದು ಹೇಳಿದರೆ ಧರ್ಮಾಭಾವವೇ ಇದೆ ಎಂದು ಸಿದ್ಧವಾಗುತ್ತದೆ. ಬ್ರಹ್ಮನಲ್ಲಿ ಧರ್ಮಾಭಾವಾಧಾರತ್ವವು ದೃಢವಾಗುತ್ತದೆ. ಆದ್ದರಿಂದ ಬ್ರಹ್ಮ ಭಾವಧರ್ಮೀ, ಅಭಾವಾಧಾರತ್ವಾತ್ ಕಪಾಲವತ್ ಎಂಬ ಅನುಮಾನದಿಂದ ಬ್ರಹ್ಮನಲ್ಲಿ ಭಾವಧರ್ಮವನ್ನು ಸಾಧಿಸುತ್ತೇವೆ.

**ವಿವರಣೆ–** ಕಪಾಲದಲ್ಲಿ ಪಟವಿಲ್ಲ, ಪುಣ್ಯಪಾಪಾದಿಗಳು ಇಲ್ಲ. ಹೀಗೆ ಕಪಾಲವು ಅವುಗಳ ಅಭಾವಕ್ಕೆ ಆಧಾರವಾಗಿದೆ. ಆದರೆ ಅದು ಸಂಖ್ಯಾಪರಿಮಾಣ ಮುಂತಾದ ಭಾವಧರ್ಮಗಳಿಗೂ ಆಶ್ರಯವಾಗಿದೆ. ಅದೇ ರೀತಿ ಪರಮಾತ್ಮನೂ ಸಹ ಅಭಾವಕ್ಕೆ

ಆಧಾರನಾದ್ದರಿಂದ ಭಾವಧರ್ಮವುಳ್ಳವನಾಗಿದ್ದಾನೆ. ಎಂದು ಅಭಾವಾಧಾರತ್ವವನ್ನೇ ಹೇತುವನ್ನಾಗಿ ಮಾಡಿ ಭಾವಧರ್ಮವುಳ್ಳವನೆಂದು ಸಾಧಿಸಬಹುದು. ಬ್ರಹ್ಮನನ್ನು ನಿರ್ಧರ್ಮಕ ಎಂದು ಅದ್ವೈತದರ್ಶನದಲ್ಲಿ ಪ್ರತಿಪಾದಿಸಿದ್ದಾರೆ. ಅಂದರೆ ಅವನಲ್ಲಿ ಯಾವ ಧರ್ಮಗಳೂ ಇಲ್ಲ. ಇದರಿಂದ ಬ್ರಹ್ಮನಲ್ಲಿ ಅಭಾವಾಧಾರತ್ವವು ದೃಢವಾಯಿತು. ಆಧಾರತ್ವವೆಂಬ ಭಾವಧರ್ಮವು ಬ್ರಹ್ಮನಲ್ಲಿ ಪ್ರಾಪ್ತವಾಯಿತು.

**ಯತಶ್ಚಾಭಾವರೂಪೋಽಸೌ ವಿನಾ ಸಾಧ್ಯಂ ನ ಗಚ್ಛತಿ ।**
**ಅತೋ ನಾಸಿದ್ಧಿಶಂಕಾಽಸ್ಯ ನಾನೈಕಾಂತ್ಯಂ ಚ ಕುತ್ರಚಿತ್ ॥ ೭೬೩ ॥**

**ಅರ್ಥ–** ಯತಃ=ಯಾವಕಾರಣದಿಂದ, ಅಭಾವರೂಪಃ=ಅಭಾವಘಟಿತವಾದ, ಅಸೌ= ಅಭಾವಾಧಾರತ್ವವು, ಸಾಧ್ಯಂ ವಿನಾ=ಸಾಧ್ಯವಿಲ್ಲದೆ, ನ ಗಚ್ಛತಿ=ಇರುವುದಿಲ್ಲ. ಅತಃ=ಆದ್ದರಿಂದ, ಅಸ್ಯ=ಅಭಾವಾಧಾರತ್ವಹೇತುವಿಗೆ, ನಾಸಿದ್ಧಿಃ=ಅಸಿದ್ಧಿದೋಷವಿಲ್ಲ. ಚ=ಮತ್ತು, ಕುತ್ರಚಿತ್=ಎಲ್ಲಿಯೂ ಸಹ, ಅನೈಕಾಂತ್ಯಂ ನ=ಅನೈಕಾಂತ್ಯದೋಷವೂ ಇಲ್ಲ.

**ಅನುವಾದ–** ಅಭಾವಧಾರತ್ವರೂಪವಾದ ಅಭಾವಘಟಿತವಾದ ಈ ಹೇತುವು ಆಧಾರತ್ವರೂಪವಾದ ಭಾವರೂಪಸಾಧ್ಯವನ್ನು ಬಿಟ್ಟು ಎಂದೂ ಹೋಗುವುದಿಲ್ಲ. ಆದ್ದರಿಂದ ಅಭಾವಾಧಾರತ್ವ ಹೇತುವಿಗೆ ಅಸಿದ್ಧಿಯು ಇಲ್ಲ ಮತ್ತು ಬೇರೆ ಎಲ್ಲಿಯೂ ವ್ಯಭಿಚಾರವೂ ಇಲ್ಲ.

**ಭಾವವಿಲಾಸಿನೀ–** ಹೇತ್ವಂತರಂ ಚಾಹ– **ಅಭಾವಾಧಾರತ್ವತ ಇತಿ** ॥ ಅತ್ರಾಪಿ ಪಕ್ಷಃ ಪೂರ್ವೋಕ್ತ ಏವ । ಹೇತೋರಸಿದ್ಧಿಮನೈಕಾನ್ತ್ಯಂ ಚ ಪರಿಹರತಿ–**ಯತಶ್ಚೇತಿ** ॥ ಅಭಾವರೂಪಃ ಅಭಾವಘಟಿತಃ । ಅಭಾವದ್ವೈತವಾದೇ ಚಾಸ್ಯ ಹೇತೋಃ ಪರೇಣಾಪ್ಯಂಗೀಕೃತತ್ವಾನ್ನಾಸಿದ್ಧಿಃ । ಯತಶ್ಚ ಸಾಧ್ಯಂ ವಿನಾ ಗಚ್ಛತಿ ಸದ್ಭ್ಯಾಮೇವಾಭಾವೋ ನಿರೂಪ್ಯತ ಇತಿ ನ್ಯಾಯೇನಾಭಾವಾಧಿಕರಣಸ್ಯ ಸತ್ತ್ವಾಖ್ಯ- ಭಾವರೂಪಧರ್ಮವತ್ತ್ವನಿಯಮಃ ತತೋ ನಾನೈಕಾನ್ತ್ಯಂ ಚೇತಿ ಭಾವಃ ॥ ೭೬೨-೭೬೩ ॥

**ವಿವರಣೆ–** ಅದ್ವೈತದರ್ಶನದಲ್ಲಿ ದ್ವಿತೀಯಭಾವಪದಾರ್ಥವನ್ನು ಒಪ್ಪಿಲ್ಲ. ಎರಡನೆಯ ಅಭಾವಪದಾರ್ಥವನ್ನು ಒಪ್ಪಿದ್ದಾರೆ. ಆದ್ದರಿಂದ ಅಭಾವಾಧಾರತ್ವಹೇತುವು ಅವರಿಗೂ ಸಿದ್ಧವಾಗಿದೆ. ಅಸಿದ್ಧಿದೋಷವಿಲ್ಲ. ಸದ್‌ಭ್ಯಾಮಧಿಕರಣಪ್ರತಿಯೋಗಿಭ್ಯಾಮಭಾವೋ ನಿರೂಪ್ಯತೇ ಎಂದು ಅಂಗೀಕರಿಸಿರುವ ನಿಯಮ. ಅಧಿಕರಣ ಪ್ರತಿಯೋಗಿಗಳು ಇದ್ದಾಗ ಮಾತ್ರ ಅಭಾವವನ್ನು ನಿರೂಪಣೆ ಮಾಡಲು ಸಾಧ್ಯ. ಅಭಾವಾಧಿಕರಣವು ಸತ್ವರೂಪವಾದ ಭಾವಧರ್ಮಕ್ಕೆ ಆಶ್ರಯವಾಗಿದೆ. ಇದರಿಂದ ಭಾವಧರ್ಮರೂಪ- ಸಾಧ್ಯವೇ ಇರುವುದರಿಂದ ವ್ಯಭಿಚಾರಶಂಕೆಗೂ ಅವಕಾಶವಿಲ್ಲ.

**ಗಚ್ಛನ್ ಸ್ವಾಭಾವದೋ ಯಸ್ಮಾತ್ ತಿಷ್ಠಂಶ್ಚ ಸ್ವಾಶ್ರಯತ್ವಕೃತ್ ।**
**ಗಾಂಧರ್ವೋದ್ವಾಹಶೀಲಸ್ಯ ಕುತ್ರ ಸ್ಯಾದ್ ವ್ಯಭಿಚಾರಿತಾ ॥ ೭೬೪ ॥**

**ಅರ್ಥ–** ಗಚ್ಛನ್= ಪಕ್ಷವನ್ನು ಪರಿತ್ಯಜಿಸಿ ಹೋಗುವಾಗ, ಸ್ವಾಭಾವದಃ=ಪಕ್ಷದಲ್ಲಿ ತನ್ನ ಅಭಾವವನ್ನು ತಂದು ನೀಡುವ, ತಿಷ್ಠನ್=ಎಲ್ಲಿಯಾದರೂ ಇದ್ದರೂ, ಸ್ವಾಶ್ರಯತ್ವಕೃತ್= ಹೇತುವಿನ ಆಶ್ರಯವನ್ನಾಗಿ ಮಾಡುವ, ಗಾಂಧರ್ವೋದ್ವಾಹಶೀಲಸ್ಯ= ಗಾಂಧರ್ವ-ಪದ್ಧತಿಯ ವಿವಾಹದಲ್ಲಿ ಆಸಕ್ತನಾದವನಿಗೆ, ವ್ಯಭಿಚಾರಿತಾ= ವ್ಯಭಿಚಾರದೋಷವು, ಕುತ್ರ ಸ್ಯಾತ್?=ಎಲ್ಲಿ ಉಂಟಾದೀತು?

**ಅನುವಾದ– ಯಾವ ಹೇತುವು ತಾನು ಪಕ್ಷದಿಂದ ಹೊರಗೆ ಹೋದರೆ ಪಕ್ಷದಲ್ಲಿ ಸ್ವಾಭಾವಾಧಾರತ್ವವನ್ನು ಕೊಡುತ್ತದೆಯೋ, ತಾನು ಇದ್ದಲ್ಲಿ ಆಶ್ರಯತ್ವವನ್ನು ಕೊಡುತ್ತದೆಯೋ, ಗಾಂಧರ್ವವಿವಾಹಸ್ವಭಾವವುಳ್ಳ ಅಂತಹ ಹೇತುವಿಗೆ ಎಲ್ಲಿ ವ್ಯಭಿಚಾರವು ಬರಲು ಸಾಧ್ಯ?**

**ಭಾವವಿಲಾಸಿನೀ–** ಪ್ರಕಾರಾಂತರೇಣೋಕ್ತದೋಷದ್ವಯಂ ಪರಿಹರತಿ– **ಗಚ್ಛನ್ನಿತಿ ॥** ಯಸ್ಮಾಚ್ಚ ಗಚ್ಛನ್ ಅಸಿದ್ಧ್ಯರ್ಥಂ ಪಕ್ಷಂ ವಿಹಾಯಾನ್ಯತ್ರ ಗಚ್ಛನ್ ಸ್ವಾಭಾವದಃ ಪಕ್ಷೇ ಸ್ವಾಭಾವಸಮ್ಪಾದಕಃ। ತಿಷ್ಠನ್ ಯತ್ರಕುತ್ರಾಪಿ ತಿಷ್ಠನ್ ಸ್ವಾಶ್ರಯತ್ವಕೃದ್ ಹೇತೋಃ ಸ್ವಸ್ಯಾಶ್ರಯತ್ವಕೃದ್ ಆಶ್ರಯತ್ವರೂಪಭಾವಧರ್ಮಂ ಸ್ವಾಧಿಕರಣೇ ಕುರ್ವನ್ । ಅತೋ ಹೇತ್ವಪಗಮೇ ಸ್ವಾಭಾವ-ಸ್ಥಾಪನೇನೈವ ಅಭಾವಾಧಾರತ್ವಹೇತೋಃ ಪೌನಃಪುನ್ಯೇನ ಛಿದ್ಯಮಾನರಾವಣಶಿರೋವತ್ ಸ್ಥಿರೀಕರಣಾತ್ ಸಾಧ್ಯಾಭಾವವತಿ ಹೇತುಸತ್ತ್ವೇನ ಯತ್ರಾನೈಕಾನ್ಯಂ ಪರೇಣೋಚ್ಯತೇ, ತತ್ರತತ್ರ ಸ್ವಾಶ್ರಯತ್ವರೂಪಭಾವಧರ್ಮಾಧರ್ಮಿತ್ವಸ್ಯ ಚ ಸ್ಥಿರೀಕರಣಾನ್ನಾಸಿದ್ಧಿಶಂಕಾ, ನಾನೈಕಾನ್ಯಂ ಚೇತಿ ಪೂರ್ವೇಣಾನ್ವಯಃ। ಅನೈಕಾನ್ತ್ಯಾಭಾವೇ ದೃಷ್ಟಾಂತಮಾಹ– **ಗಾಂಧರ್ವೇತಿ ॥** ಮಿಥಃ ಸಮಯಂ ಕೃತ್ವೋಪಗಚ್ಛೇತ ಸ ಗಾಂಧರ್ವ ಇತಿ ಗಾಂಧರ್ವವಿವಾಹಲಕ್ಷಣಮ್ । ಸಮಯಾಭಾವೇ ಸಂಗಮ ಏವ ನ। ಸಮಯೇ ಸತಿ ವಿವಾಹ ಏವೇತಿವದ್ ಹೇತ್ವಭಾವೇ ವ್ಯಭಿಚಾರ ಏವ ನ। ಹೇತುಸತ್ತ್ವೇ ಚ ಸಾಧ್ಯಸ್ಯಾಪಿ ಸತ್ತ್ವನಿಯಮಾತ್ ಕುತೋ ವ್ಯಭಿಚಾರ ಇತಿ ಭಾವಃ ॥ ೭೬೪ ॥

**ವಿವರಣೆ–** ಹಿಂದೆ ಹೇಳಿದ ಅನುಮಾನಕ್ಕೆ ಪ್ರಕಾರಾಂತರದಿಂದ ಅಸಿದ್ಧಿ ಮತ್ತು ವ್ಯಭಿಚಾರ ದೋಷವನ್ನು ಪರಿಹರಿಸುತ್ತಾರೆ. ಪರಮಾತ್ಮಾ, ಭಾವಧರ್ಮವಾನ್, ಅಭಾವಾಶ್ರಯತ್ವಾತ್, ಘಟವತ್ ಎಂದು ನಮ್ಮ ಅನುಮಾನ. ಈ ಅನುಮಾನಕ್ಕೆ ಅಸಿದ್ಧಿಯೆಂದು ಹೇಳುವುದಾದರೆ ಹೇತುವು ಪಕ್ಷದಲ್ಲಿ ಇಲ್ಲವೆಂದು ಹೇಳಬೇಕು. ಹೇತುವು ಪಕ್ಷವನ್ನು ಬಿಟ್ಟು ಎಲ್ಲಿ ಹೋಗುತ್ತದೆಯೋ, ಆ ಅಧಿಕರಣದಲ್ಲಿ ಅಭವಾಶ್ರಯತ್ವವು ಇರುತ್ತದೆಯಷ್ಟೇ, ಮತ್ತು ಆಶ್ರಯರೂಪವಾದ ಸಾಧ್ಯಭಾವಧರ್ಮವು ಇರುತ್ತದೆಯಷ್ಟೇ. ಆದ್ದರಿಂದ ಆ ಸ್ಥಳದಲ್ಲಿ ಹೇತುವಿಗೆ ವ್ಯಭಿಚಾರದೋಷವಿಲ್ಲ. ಏಕೆಂದರೆ ಅಲ್ಲಿ ಹೇತುವು ಇದೆ, ಸಾಧ್ಯವೂ ಇದೆ. ಹೇತುವೂ ಪಕ್ಷದಲ್ಲಿ ಇರುವಾಗ ಅಭವಾಶ್ರಯತ್ವವೂ ಇದೆ ಆಶ್ರಯತ್ವರೂಪವಾದ ಸಾಧ್ಯವೂ ಇದೆ. ಅಲ್ಲಿಯೂ ವ್ಯಭಿಚಾರವು ಇಲ್ಲ. ಅಭವಾಶ್ರಯ್ವರೂಪವಾದ ಹೇತುವು ಪಕ್ಷದಲ್ಲಿ ಇಲ್ಲವೆಂದು ಹೇಳಿದರೆ ಪಕ್ಷದಲ್ಲಿ

ಅಭವಾಶ್ರಯತ್ವಾಭಾವಾಶ್ರಯತ್ವವೂ ಬಂದೇ ಬರುತ್ತದೆ. ಅಭಾವಾಶ್ರಯತ್ವಾ-ಭಾವಾಶ್ರಯತ್ವವೂ ಇಲ್ಲವೆಂದು ಹೇಳಿದರೆ ಅಭಾವಾಶ್ರಯತ್ವಾಭಾವಾಶ್ರಯತ್ವಾಭಾವಾಶ್ರಯತ್ವವೂ ಬರುತ್ತದೆ. ಹೀಗೆ ರಾವಣನ ತಲೆಯಂತೆ ಒಂದು ಅಭವಾಶ್ರಯತ್ವವು ಹೋದರೆ ಇನ್ನೊಂದು ಅಭವಾಶ್ರಯತ್ವವು ಬಂದೇ ಬರುತ್ತದೆ. ಆದ್ದರಿಂದ ಅಸಿದ್ಧಿಯೂ ಇಲ್ಲ, ಅಭವಾಶ್ರಯತ್ವವಿದ್ದಲ್ಲಿ ಆಶ್ರಯತ್ವರೂಪವಾದ ಭಾವಧರ್ಮವೂ ಇದ್ದೇ ಇರುತ್ತದೆ. ಆದ್ದರಿಂದ ವ್ಯಭಿಚಾರವೂ ಇಲ್ಲ. ಇದಕ್ಕೆ ಗಾಂಧರ್ವ ವಿವಾಹವನ್ನು ದೃಷ್ಟಾಂತವಾಗಿ ಕೊಟ್ಟಿದ್ದಾರೆ. ಸಮಯ ನಿಬಂಧನೆಯನ್ನು ಮಾಡಿಕೊಂಡ ವಿವಾಹವು ಗಾಂಧರ್ವ ವಿವಾಹ. ಹಾಗೆಯೇ ಸಮಯ ನಿಬಂಧನೆಯನ್ನು ಮಾಡಿಕೊಂಡು ಕನ್ಯೆಯ ಸಮಾಗಮವನ್ನು ಮಾಡಿದರೆ, ಅವಳು ವಿವಾಹ ಪತ್ನಿಯೇ ಆಗುವುದರಿಂದ ವ್ಯಭಿಚಾರದೋಷವು ಇಲ್ಲ. ಸಮಯ ನಿಬಂಧನೆಯನ್ನು ಮಾಡಿಕೊಳ್ಳದಿದ್ದರೆ ಆಗ ಸಮಾಗಮವೇ ಆಗುವುದಿಲ್ಲ. ಆದ್ದರಿಂದ ಆಗಲೂ ವ್ಯಭಿಚಾರ ದೋಷವು ಇಲ್ಲ. ಹಾಗೆ ಪ್ರಕೃತದಲ್ಲಿ ಹೇತುವಿದ್ದಲ್ಲಿಯೂ ಸಾಧ್ಯವಿರುತ್ತದೆ, ಹೇತುವಿಲ್ಲವೆಂದು ಹೇಳಿದರೂ ಅಲ್ಲಿ ಸಾಧ್ಯವಿರುತ್ತದೆ. ಆದ್ದರಿಂದ ಹೇತುವಿದ್ದು ಸಾಧ್ಯವಿಲ್ಲ ಎಂಬ ಒಂದು ಸ್ಥಳವಿಲ್ಲ-ದಿರುವುದರಿಂದ ಹೇತುವಿಗೆ ಎಲ್ಲಿಯೂ ವ್ಯಭಿಚಾರ ದೋಷವಿಲ್ಲ ಎಂದು ಅಭಿಪ್ರಾಯ.

**ಮುಕ್ತತ್ವಂ ಭಾವಧರ್ಮೋ ಯತ್ ತತ್ಸತ್ವೇ ಧರ್ಮವಾನ್ ನ ಕಿಮ್ ॥ ೭೬೫ ॥**

**ಅರ್ಥ–** ಯತ್=ಯಾವ ಕಾರಣದಿಂದ, ಮುಕ್ತತ್ವಂ=ಮುಕ್ತತ್ವವು, ಭಾವಧರ್ಮಃ= ಭಾವರೂಪಧರ್ಮವಾಗಿದೆಯೋ ಆದ್ದರಿಂದ, ತತ್=ಆ ಭಾವರೂಪಧರ್ಮವು, ಸತ್ವೇ=ಇದ್ದರೆ, ಧರ್ಮವಾನ್=ಭಾವಧರ್ಮವುಳ್ಳವನು, ನ ಕಿಂ=ಆಗಲಾರನೇ?

**ಅನುವಾದ–** ಮುಕ್ತತ್ವವು ಒಂದು ಭಾವಧರ್ಮ. ಬ್ರಹ್ಮನಲ್ಲಿ ಮುಕ್ತತ್ವವನ್ನು ಅಂಗೀಕರಿಸಿದರೆ ಅವನು ಭಾವಧರ್ಮವುಳ್ಳವನಾಗುವುದಿಲ್ಲವೇ?

**ಭಾವವಿಲಾಸಿನೀ–** ಹೇತೋರಪ್ರಯೋಜಕತಾಶಂಕಾಂ ನಿರಾಕರೋತಿ– **ಮುಕ್ತತ್ವಮಿತಿ** ॥ ಯದ್ ಯಸ್ಮಾನ್ಮುಕ್ತತ್ವಂ ಭಾವಧರ್ಮಃ ಸ್ವರೂಪಾನನ್ದಾನುಭವರೂಪತಯಾ ಭಾವಧರ್ಮಃ । ತಸ್ಮಾತ್ ತತ್ಸತ್ವೇ ಮುಕ್ತತ್ವಸತ್ವೇ ಧರ್ಮವಾನ್ ಭಾವಧರ್ಮವಾನ್ ॥ ೭೬೫ ॥

**ವಿವರಣೆ–** ಪರಮಾತ್ಮಾ ಭಾವಧರ್ಮವಾನ್ ಮುಕ್ತತ್ವಾತ್ ಈ ಅನುಮಾನದಲ್ಲಿ ಮುಕ್ತತ್ವರೂಪ ಹೇತು ಇರಲಿ, ಭಾವಧರ್ಮವೆಂಬ ಸಾಧ್ಯವು ಬೇಡ ಎಂದು ಅಪ್ರಯೋಜಕತಾಶಂಕೆಗೆ ಅವಕಾಶವಿಲ್ಲ. ಭಾವಧರ್ಮರೂಪಸಾಧ್ಯವಿಲ್ಲದಿದ್ದರೆ ಸಂಸಾರಾಭಾವಾಶ್ರಯತ್ವರೂಪಹೇತುವೂ ಇರಲು ಸಾಧ್ಯವಿಲ್ಲ. ಈ ರೀತಿ ಅನುಕೂಲ-ತರ್ಕವಿದೆ. ಸ್ವರೂಪಾನಂದರೂಪವಾದದ್ದು ಮುಕ್ತತ್ವ. ಅದು ಭಾವಧರ್ಮ. ಅದು ಈಶ್ವರನಲ್ಲಿರುವುದರಿಂದ ಭಾವಧರ್ಮರೂಪಸಾಧ್ಯವು ಬೇಡ ಎನ್ನಲು ಸಾಧ್ಯವಿಲ್ಲ

**ಅಭಾವಾಧಾರತಾತ್ಮಾऽಯಮರ್ಧನಾರೀಶ್ವರೋ ಯತಃ ।**
**ತತ್ ಸ್ವಾಧಾರೇ ಸ್ಥಲೇ ಮೂರ್ಧಭೂಷಾಂ ಯೋಷಾಂ ನ ಕಿಂ ದಿಶೇತ್ ॥ ೭೬೬ ॥**

**ಅರ್ಥ–** ಅಭಾವಾಧಾರತಾತ್ಮಾ=ಅಭಾವಾಶ್ರಯತ್ವರೂಪನಾದ, ಅಯಂ=ಈ ಮುಕ್ತತ್ವವು, ಯತಃ= ಯಾವ ಕಾರಣದಿಂದ, ಅರ್ಧನಾರೀಶ್ವರಃ= ಅರ್ಧನಾರೀ-ನರಸ್ವರೂಪನಾದ ಈಶ್ವರನಂತೆ ಇರುವುದೋ, ತತ್=ಆ ಕಾರಣದಿಂದ, ಸ್ವಾಧಾರೇ ಸ್ಥಲೇ=ತನ್ನ ಆಶ್ರಯಕ್ಕೆ ಯೋಗ್ಯವಾದ ಸ್ಥಳದಲ್ಲಿ, ಮೂರ್ಧಭೂಷಾಂ=ಶಿರಸ್ಸಿನ ಅಲಂಕಾರವಾದ, ಯೋಷಾಂ= ಸ್ತ್ರೀಯನ್ನು, ನ ದಿಶೇತ್ ಕಿಂ=ನೀಡುವುದಿಲ್ಲವೇನು?

**ಅನುವಾದ– ಅಭಾವಾಶ್ರಯತ್ವರೂಪವಾದ ಮುಕ್ತತ್ವವು ಅರ್ಧನಾರೀನರರೂಪನಾದ ಈಶ್ವರನಂತೆ ಇರುವುದು. ಇದು ತನಗೆ ಆಶ್ರಯವಾದ ಪದಾರ್ಥದಲ್ಲಿ ಅಲಂಕಾರಪ್ರಾಯವಾದ ಭಾವಧರ್ಮರೂಪವಾದ ಸ್ತ್ರೀಯನ್ನು ಸ್ಥಾಪಿಸದೇ ಇರುವುದಿಲ್ಲ.**

**ಭಾವವಿಲಾಸಿನೀ–** ಪ್ರಕಾರಾಂತರೇಣಾಪ್ಯಸಿದ್ಧಿಮನೈಕಾನ್ತ್ಯಂ ಚ ಪರಿಹರತಿ– **ಅಭಾವಾಧಾರತಾತ್ಮೇತಿ॥** ಯತಃ ಅರ್ಧನಾರೀಶ್ವರಃ ಅರ್ಧನಾರೀನರಾತ್ಮಕಪರಮೇಶ್ವರವದ್ ವರ್ತಮಾನಃ । ಪೂರ್ವಭಾಗಸ್ಯಾಭಾವರೂಪತಯಾ ರೌದ್ರತ್ವಾತ್ । ಆಧಾರತಾಖ್ಯ-ಕೋಮಲಭಾವ ರೂಪಸ್ಯಾಂತೇ ವರ್ತಮಾನತ್ವಾತ್ । ಇಯಾಂಸ್ತು ವಿಶೇಷಃ । ತಸ್ಯ ನಾರೀಶರೀರಾರ್ಧೇ । ಅಸ್ಯ ತು ಶಿರಸಿ । ತತ್ ತಸ್ಮಾನ್ಮೂರ್ಧಭೂಷಾಂ ಆಧಾರತಾಖ್ಯಾಮ್ । ಅಭಾವದ್ವೈತವಾದಾದ್ವಾ ಪಂಚಮಪ್ರಕಾರಾವಿದ್ಯಾನಿವೃತ್ತಿವದ್ ವಾ ಅಸ್ಯಾಪ್ಯಭಾವಸ್ಯ । (ಮುಕ್ತೇऽಪಿ ಪರಮಾತ್ಮನಿ) ಅಸ್ತಿತ್ವಸಂಭವಾನ್ನಾಸಿದ್ಧಿಃ । ಆಧಾರತ್ವಾಖ್ಯಭಾವಧರ್ಮಸತ್ತ್ವಸ್ಯಾಪಿ ಪರಮಾತ್ಮನಿ ಸತ್ವಸಂಭವಾತ್ ಹೇತುಮತ್ತ್ಯಾವಶ್ಯ ಕತ್ವಾನ್ನಾನೈಕಾನ್ತ್ಯಂ ಚ ಸ್ವರೂಪಸಮ್ಬಂಧಪಕ್ಷೇಪಿ ಅಭಾವನಿಷ್ಠಸ್ಯಾಧಾರನಿಷ್ಠತ್ವಸ್ಯಾಪಿ ಭಾವತ್ವನಿಯಮಾದಿತಿ ಭಾವಃ। ಕಿಂಚ ಪಕ್ಷಾತ್ ಹೇತ್ವಪಗಮೇ ತತ್ರ ತದಭಾವಾಧಾರತ್ವಸ್ಯ ಹೇತುವೃತ್ಯಾ ಅನೈಕಾಂತ್ಯಂ ವದಸಿಚೇತ್ ಹೇತುಶಿರೋಭೂತಾ-ಧಾರತ್ವಸ್ವಾಭಾವರೂಪಧರ್ಮಸ್ಯಚಾವಶ್ಯಕತ್ವೇನ ನಾಸಿದ್ಧಿರ್ನಾನೈಕಾಂತ್ಯಂ ಚೇತಿ ಮೂಕತೈವ ಪರಸ್ಯೇತಿ ದ್ರಷ್ಟವ್ಯಮ್ ॥ ೭೬೬ ॥

**ವಿವರಣೆ–** ಮುಕ್ತತ್ವಹೇತುವಿಗೆ ಅಸಿದ್ಧಿ ಮತ್ತು ಅನೈಕಾಂತಿಕತಾದೋಷವನ್ನು ಮತ್ತೊಂದು ರೀತಿಯಿಂದ ಪರಿಹರಿಸುತ್ತಿದ್ದಾರೆ.

ಅಭಾವಾಶ್ರಯತ್ವಹೇತುವು ಅರ್ಧನಾರೀನರರೂಪನಾದ ಈಶ್ವರನಂತೆ ಇದೆ. ಅದರ ಪೂರ್ವಭಾಗವಾದ ಅಭಾವವು ಸಂಹಾರಕಾರಣನಾದ ರುದ್ರದೇವರ ಉಗ್ರ-ರೂಪದಂತಿದೆ. ಉತ್ತರಭಾಗವು, ಅಂದರೆ ಆಶ್ರಯತ್ವವು (ಆಶ್ರಯತೆಯು)

ಪಾರ್ವತಿಯಂತೆ ಅತಿ ಕೋಮಲವಾಗಿದೆ. ಆದ್ದರಿಂದಲೇ ಅದು ಶಿರೋಭೂಷಣದಂತೆ ಶೋಭಾಯಮಾನವಾಗಿದೆ. ಪಕ್ಷನಾದ ಪರಮಾತ್ಮನಲ್ಲಿ ಸಂಸಾರಾಭಾವರೂಪ ಮುಕ್ತತ್ವವಿರುವ ಕಾರಣ ಅಭಾವಾಶ್ರಯತ್ವರೂಪಹೇತು ಇದೆ. ಅಸಿದ್ಧಿದೋಷಕ್ಕೆ ಅವಕಾಶವಿಲ್ಲ. ಪ್ರಕೃತ ಆಶ್ರಯತ್ವರೂಪಭಾವಧರ್ಮವೇ ಇರುವುದರಿಂದ ಸಾಧ್ಯಾಭಾವವಿಲ್ಲ. ಆದ್ದರಿಂದ ವ್ಯಭಿಚಾರವಿಲ್ಲ. ಅದ್ವೈತವೇದಾಂತದಲ್ಲಿ ಅಭಾವ-ರೂಪದ್ವಿತೀಯಪದಾರ್ಥವನ್ನು ಒಪ್ಪಿರುವುದರಿಂದ ಅಭಾವಾಶ್ರಯತ್ವವು ಬ್ರಹ್ಮನಲ್ಲಿ ಸಿದ್ಧವಾಗುತ್ತದೆ. ಪಂಚಮಪ್ರಕಾರವಾದ ಅಜ್ಞಾನನಿವೃತ್ತಿಯಂತೆ ಈ ಅಭಾವವು ಸಹ ಮುಕ್ತನಾದ ಪರಮಾತ್ಮನಲ್ಲಿರುವುದರಿಂದಲೂ ಸಹ ವ್ಯಭಿಚಾರವೂ ಇಲ್ಲ ಅಸಿದ್ಧಿದೋಷವೂ ಇಲ್ಲ.

ನಿತ್ಯತ್ವಂ ಧರ್ಮಶೂನ್ಯತ್ವಂ ಸರೂಪತ್ವಮಬಾಧ್ಯತಾಂ ।
ಬ್ರಹ್ಮಣ್ಯಾನಂದರೂಪತ್ವಮನಾನಂದವಿರೋಧಿತಾಂ ।
ಜ್ಞಾನರೂಪತ್ವಮಜ್ಞಾನಶೂನ್ಯತಾಂ ನಿತ್ಯಶುದ್ಧತಾಮ್ ॥ ೭೬೭ ॥

ಧರ್ಮಾನೇತಾನ್ ವಿಮುಕ್ತಾನಾಮಪ್ಯವಶ್ಯಮಪೇಕ್ಷಿತಾನ್ ।
ಕೋ ವಾ ನಿವಾರಯೇದ್ ವಾದೀ ಶೂನ್ಯತ್ವಸ್ಯ ನಿವಾರಕಾನ್ ॥ ೭೬೮ ॥

**ಅರ್ಥ–** ಮುಕ್ತಾನಾಮಪಿ=ಮುಕ್ತರಿಗೂ ಸಹ, ಅಪೇಕ್ಷಿತಾನ್= ಬೇಕಾದ, ಶೂನ್ಯತ್ವಸ್ಯ= ಶೂನ್ಯತ್ವವನ್ನು, ನಿವಾರಕಾನ್=ಪರಿಹರಿಸುವ, ನಿತ್ಯತ್ವಂ= ನಿತ್ಯತ್ವವನ್ನು, ಧರ್ಮಶೂನ್ಯತ್ವಂ= ಪುಣ್ಯಪಾಪರೂಪ ಧರ್ಮರಹಿತತ್ವವನ್ನು, ಸರೂಪತ್ವಂ= ಸಾಕಾರತ್ವವನ್ನು, ಅಬಾಧ್ಯತಾಂ= ಯಾವುದರಿಂದಲೂ ನಾಶವಿಲ್ಲದಿರುವಿಕೆಯನ್ನು, ಆನಂದರೂಪತ್ವಂ= ಆನಂದಸ್ವರೂಪತ್ವವನ್ನು, ಅನಾನಂದ ವಿರೋಧಿತಾಂ= ದುಃಖದ ವಿರೋಧಿರೂಪತ್ವವನ್ನು, ಜ್ಞಾನರೂಪತ್ವಂ= ಜ್ಞಾನರೂಪತ್ವವನ್ನು, ಅಜ್ಞಾನಶೂನ್ಯತಾಂ= ಅಜ್ಞಾನರಾಹಿತ್ಯವನ್ನು ನಿತ್ಯಶುದ್ಧತಾಂ= ನಿತ್ಯಶುದ್ಧತೆಯನ್ನು, ಏತಾನ್= ಈ ಯಾವ, ಧರ್ಮಾನ್= ಧರ್ಮಗಳನ್ನು, ಬ್ರಹ್ಮಣಿ= ಬ್ರಹ್ಮನಲ್ಲಿ, ಕೋ ವಾ ವಾದೀ=ಯಾವ ವಾದಿಯು, ನಿವಾರಯೇತ್= ಪರಿತ್ಯಜಿಸುವನು?

**ಅನುವಾದ–** ಸರ್ವಕಾಲಸಂಬಂಧಿತ್ವರೂಪವಾದ ನಿತ್ಯತ್ವ ಪುಣ್ಯಪಾಪರಾಹಿತ್ಯ, ಸಾಕಾರತ್ವ ಅಬಾಧ್ಯತ್ವ ಆನಂದರೂಪತ್ವ ಸುಖರೂಪತ್ವ ಜ್ಞಾನರೂಪತ್ವ ಅಜ್ಞಾನರಾಹಿತ್ಯ, ನಿತ್ಯಶುದ್ಧತ್ವ ಈ ಧರ್ಮಗಳನ್ನು ಬ್ರಹ್ಮನಲ್ಲಿ ಅಂಗೀಕರಿಸಲೇಬೇಕು. ಮುಕ್ತನಿಗೂ ಸಹ ಈ ಧರ್ಮಗಳು ಅತ್ಯಂತ ಅಗತ್ಯ. ಈ ಧರ್ಮಗಳು ಇಲ್ಲದಿದ್ದಲ್ಲಿ ಅವನು ಮುಕ್ತನೇ ಆಗಲಾರ. ಬ್ರಹ್ಮನು ನಿತ್ಯಮುಕ್ತನಾಗಿರುವನು. ಅವನಲ್ಲಿಯೂ ಈ ಧರ್ಮಗಳು ಆವಶ್ಯಕವೆಂದು ಪುನಃ ಹೇಳುವ ಅಗತ್ಯವಿಲ್ಲ. ಬ್ರಹ್ಮನು

ಶೂನ್ಯರೂಪನಲ್ಲ. ಶೂನ್ಯಕ್ಕಿಂತ ವಿಲಕ್ಷಣ ಎಂದು ಹೇಳುವ ವಾದಿಗಳೆಲ್ಲರೂ ಬ್ರಹ್ಮನಲ್ಲಿ ಈ ಧರ್ಮಗಳನ್ನು ಒಪ್ಪಲೇಬೇಕು. ಇಲ್ಲದಿದ್ದಲ್ಲಿ ಬ್ರಹ್ಮನು ಶೂನ್ಯರೂಪನೇ ಆಗುತ್ತಾನೆ.

**ಭಾವವಿಲಾಸಿನೀ–** ಅಧುನಾ ಸಾಧ್ಯಾನಂಗೀಕಾರೇ ಬಾಧಕಾನ್ಯಾಹ– **ನಿತ್ಯತ್ವಮಿತ್ಯಾದಿನಾ ॥** ಅತ್ರ ಸರ್ವಧರ್ಮಶೂನ್ಯತ್ವಂ ಪರಸ್ಯ । ಅಸ್ಮಾಕಂ ತು ಪುಣ್ಯಲಕ್ಷಣಧರ್ಮಶೂನ್ಯತ್ವಮ್ । ಶೂನ್ಯತ್ವಸ್ಯ ನಿವಾರಕಾನಿತ್ಯನೇನ ಉಕ್ತಧರ್ಮಾನಂಗೀಕಾರೇ ಶೂನ್ಯತ್ವಂ ಸ್ಯಾದಿತಿ ಸೂಚಯತಿ ॥ ೭೬೮ ॥

**ವಿವರಣೆ–** ಜ್ಞಾನಸುಖಾದಿಧರ್ಮಗಳನ್ನು ಮುಕ್ತನಿಗೆ ಅಂಗೀಕರಿಸದಿದ್ದಲ್ಲಿ ಮುಕ್ತಿಯು ಪುರುಷಾರ್ಥವೇ ಆಗಲಾರದು. ಮುಕ್ತಸಾಮಾನ್ಯರಿಗೆ ಈ ಧರ್ಮಗಳ ಅಗತ್ಯವಿದೆ ಎಂದಾಗ ನಿತ್ಯಮುಕ್ತನಾದ ಪರಮಾತ್ಮನಲ್ಲಿ ಈ ಧರ್ಮಗಳು ಅಪರಿಹಾರ್ಯ ಎಂದು ಅಪಿಶಬ್ದದಿಂದ ಸೂಚಿಸಿದ್ದಾರೆ. ಬ್ರಹ್ಮನಿಗೆ ಪರಕೀಯರು ಸರ್ವಧರ್ಮಶೂನ್ಯತ್ವವನ್ನು ಹೇಳಿದ್ದಾರೆ.ನಿರ್ಧರ್ಮಕತ್ವವನ್ನು ಒಪ್ಪುವುದರಿಂದ ಅವರಿಗೆ ಇದು ಸಂಗತ. ದ್ವೈತಮತದ ದೃಷ್ಟಿಯಿಂದ ಸರ್ವಧರ್ಮಶೂನ್ಯತ್ವವೆಂದರೆ ಪುಣ್ಯಪಾಪರಾಹಿತ್ಯ.

ವ್ಯಾವಹಾರಿಕಮಸ್ತೀತಿ ವ್ಯಾಹತೇರ್ಮೂಲಭೂರಿಯಮ್ ।
ತ್ರಿಕಾಲನಾಸ್ತಿತಾ ಸೇತಿ ಹ್ಯಸ್ತಿತಾ ನಾಸ್ತಿತಾಽಪ್ಯಭೂತ್ ॥ ೭೬೯ ॥

**ಅರ್ಥ–** ವ್ಯಾವಹಾರಿಕಮಸ್ತೀತಿ=ವ್ಯಾವಹಾರಿಕವಾಗಿ ಈ ಧರ್ಮಗಳಿವೆ ಎಂಬ, ಇಯಂ=ಈ ಮಾತು, ವ್ಯಾಹತೇಃ=ವ್ಯಾಹತಿದೋಷಕ್ಕೆ, ಮೂಲಭೂಃ=ಜನ್ಮಭೂಮಿಯು. ಸಾ=ಆ ವ್ಯಾವಹಾರಿಕತ್ವವು, ತ್ರಿಕಾಲನಾಸ್ತಿತಾ=ಮೂರುಕಾಲದಲ್ಲಿ ಇಲ್ಲದಿರುವಿಕೆಯು, ಇತಿ=ಈ ಕಾರಣದಿಂದ, ಅಸ್ತಿತಾ=ಅಸ್ತಿತ್ವವು, ನಾಸ್ತಿತಾಽಪಿ=ನಾಸ್ತಿತ್ವವೂ ಕೂಡ, ಅಭೂತ್=ಉಂಟಾಗುತ್ತದೆ.

**ಅನುವಾದ–** ವ್ಯಾವಹಾರಿಕ ವಸ್ತುವು ಇದೆ ಎಂಬುದು ವ್ಯಾಹತಿದೋಷಕ್ಕೆ ಜನ್ಮಸ್ಥಾನವಾಗಿದೆ. ವ್ಯಾವಹಾರಿಕ ಎಂದರೆ ಮೂರು ಕಾಲದಲ್ಲಿಯೂ ಇಲ್ಲ ಎಂದು ಅರ್ಥ. ಇದೆ ಎಂದರೆ ಅಸ್ತಿತ್ವ ಇದೆ ಎಂದು ಅರ್ಥ. ಅಸ್ತಿತ್ವ ಮತ್ತು ನಾಸ್ತಿತ್ವ ಎರಡನ್ನೂ ಒಟ್ಟಿಗೆ ಅಂಗೀಕರಿಸುವುದರಿಂದ ಈ ವ್ಯಾವಹಾರಿಕ ತತ್ತ್ವ ಎಂಬ ಶಬ್ದವೇ ವ್ಯಾಹತಿ ದೋಷಕ್ಕೆ ಮೂಲಸ್ಥಾನ.

**ಭಾವವಿಲಾಸಿನೀ–** ಮುಕ್ತಪಕ್ಷೀಕರಣಾತ್ ತದ್ಗತಧರ್ಮಾಣಾಂ ಮುಕ್ತ್ಯವಸ್ಥಾಯಾಮಪ್ಯ ವಶ್ಯಮುಪೇಕ್ಷಿತಾನಾಂ ವ್ಯಾವಹಾರಿಕತ್ವಶಂಕೈವ ನೋದೇತೀತಿ ತತ್ತ್ವಮ್ । ವೈಯಾತ್ಯಾದ್ ವದಂತಂ ಪ್ರತಿ ದ್ವೇಧಾ ವ್ಯಾಹತಿಮಾಹ– ವ್ಯಾವಹಾರಿಕಮಿತಿ ॥ ಸಾ ವ್ಯಾವಹಾರಿಕತಾ ॥೭೬೯॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಮುಕ್ತನಿಗೆ ನಿತ್ಯತ್ವವೇ ಮೊದಲಾದ ಧರ್ಮಗಳನ್ನು ಅಂಗೀಕರಿಸುವುದು ಅನಿವಾರ್ಯ. ಇಲ್ಲದಿದ್ದಲ್ಲಿ ಮುಕ್ತತ್ವಕ್ಕೆ ಭಂಗ ಉಂಟಾಗುತ್ತದೆ

ಎಂದರು. ಅದಕ್ಕೆ ಪೂರ್ವಪಕ್ಷಿಗಳು ಆ ಧರ್ಮಗಳನ್ನು ಅಂಗೀಕರಿಸಿದ್ದೇವೆ, ಆದರೆ ಆ ಧರ್ಮಗಳು ಪಾರಮಾರ್ಥಿಕವಲ್ಲ ಕೇವಲ ವ್ಯಾವಹಾರಿಕ ಎಂದರೆ , ಆಗ ವ್ಯಾಹತಿದೋಷ ಬರುತ್ತದೆ ಎಂದು ಈ ಶ್ಲೋಕದಲ್ಲಿ ಹೇಳುತ್ತಿದ್ದಾರೆ.

ವ್ಯಾವಹಾರಿಕ ಎಂದರೇನು? ತ್ರೈಕಾಲಿಕನಿಷೇಧಪ್ರತಿಯೋಗಿ ಎಂದು ಅರ್ಥ. ಮೂರು ಕಾಲದಲ್ಲಿಯೂ ವಸ್ತುವು ಇಲ್ಲ, ಇದ್ದಂತೆ ತೋರಿ ವ್ಯವಹಾರಕ್ಕೆ ವಿಷಯ ಎಂದು ಹೇಳಿದಂತಾಯಿತು. ಧರ್ಮಗಳು ತ್ರೈಕಾಲಿಕನಿಷೇಧಪ್ರತಿಯೋಗಿ ಎಂದರೆ ಧರ್ಮಗಳು ಇಲ್ಲ ಎಂದೇ ಅರ್ಥ. ಮತ್ತೆ ವ್ಯಾವಹಾರಿಕವಾಗಿ ಇದೆ ಎಂದಾಗ ವ್ಯಾಹತಿಯು ಸ್ಪಷ್ಟ

ನಿತ್ಯಮುಕ್ತನಾದ ಪರಮಾತ್ಮನನ್ನು ಪಕ್ಷವನ್ನಾಗಿಸಿ ಭಾವಧರ್ಮಗಳು ಅವನಲ್ಲಿವೆ ಎಂದು ಸಾಧನೆ ಮಾಡುತ್ತಿರುವುದು; ನಿತ್ಯತ್ವವೇ ಮೊದಲಾದ ಧರ್ಮಗಳು ವ್ಯಾವಹಾರಿಕವೋ, ಪಾರಮಾರ್ಥಿಕವೋ ಎಂಬ ಶಂಕೆಯೇ ಸಮಂಜಸವಲ್ಲ. ಮುಕ್ತರಲ್ಲಿ ವ್ಯಾವಹಾರಿಕಧರ್ಮಕ್ಕೆ ಅವಕಾಶವಿಲ್ಲ. ಆದರೂ ಉದ್ಧಟತನದಿಂದ ಆ ಧರ್ಮಗಳು ವ್ಯಾವಹಾರಿಕ ಎನ್ನುವವರಿಗೆ ವ್ಯಾಹತಿದೋಷವನ್ನು ಹೇಳುತ್ತಿದ್ದಾರೆ.

**ಮುಕ್ತತ್ವವ್ಯಾಹತಿಶ್ಚ ಸ್ಯಾದ್ ವ್ಯಾವಹಾರಿಕಸಂಗಮೇ ।**
**ಮುಕ್ತಾದಿಃ ಸ್ಯಾತ್ ಮುಕ್ತತಾದಿರ್ನೇತಿ ಚ ವ್ಯಾಹತೇರ್ಗೃಹಮ್ ॥ ೭೭೦ ॥**

**ಅರ್ಥ–** ವ್ಯಾವಹಾರಿಕಸಂಗಮೇ=ವ್ಯಾವಹಾರಿಕ ಧರ್ಮವನ್ನು, ಅಂಗೀಕರಿಸಿದರೆ, ಮುಕ್ತತ್ವವ್ಯಾಹತಿಃ=ಮುಕ್ತತ್ವದ ವಿರೋಧವು, ಸ್ಯಾತ್=ಆಗುತ್ತದೆ. ಮುಕ್ತಾದಿಃ= ಮುಕ್ತನೇ ಮೊದಲಾದವರು, ಸ್ಯಾತ್=ಇರಲಿ, ಮುಕ್ತತಾದಿಃ=ಮುಕ್ತತ್ವವೇ ಮೊದಲಾದ ಧರ್ಮಗಳು, ನ ಸ್ಯಾತ್=ಇಲ್ಲವೆನ್ನುವುದು, ಇತಿ ಚ=ಹೀಗೆ ಹೇಳುವುದು, ವ್ಯಾಹತೇಃ=ವಿರೋಧಕ್ಕೆ, ಗೃಹಂ=ಆಶ್ರಯವು.

**ಅನುವಾದ– ಮೋಕ್ಷದಲ್ಲಿ ವ್ಯಾವಹಾರಿಕವಾದುದರ ಸಂಗಮವು ಇದ್ದರೆ ಮುಕ್ತತ್ವವೇ ವ್ಯಾಹತವಾಗುತ್ತದೆ. ಮುಕ್ತನು ಇರುತ್ತಾನೆ, ಮುಕ್ತತ್ವವು ಇಲ್ಲ ಎಂಬ ಅಂಗೀಕಾರವು ವ್ಯಾಹತಿಗೆ ಆವಾಸಸ್ಥಾನವಾಗಿದೆ.**

**ಭಾವವಿಲಾಸಿನೀ–** ಮುಕ್ತೋ ಭವತಿ ಮುಕ್ತತ್ವಂ ನಾಸ್ತಿ । ನಿತ್ಯೋ ಭವತಿ ನಿತ್ಯತ್ವಂ ನಾಸ್ತೀತ್ಯಾದಿ ಪ್ರಲಪತೋಽಪಿ ವ್ಯಾಹತಿರೇವೇತ್ಯಾಹ– **ಮುಕ್ತಾದಿರಿತಿ** ॥ ೭೭೦ ॥

**ವಿವರಣೆ–** ಮುಕ್ತಿಯಲ್ಲಿರುವ ಧರ್ಮಗಳು ವ್ಯಾವಹಾರಿಕ ಎಂದರೆ ಮುಕ್ತತ್ವಕ್ಕೆ ಭಂಗ ಉಂಟಾಗುತ್ತದೆ. ವ್ಯಾವಹಾರಿಕವೆಂದರೆ ಇಲ್ಲ ಎಂದೇ ಅಭಿಪ್ರಾಯ. ಮುಕ್ತನಾಗಿದ್ದಾನೆ ಮುಕ್ತತ್ವವಿಲ್ಲ, ನಿತ್ಯನಾಗಿದ್ದಾನೆ, ನಿತ್ಯತ್ವವಿಲ್ಲ ಎಂದು ಹೇಳಿದಂತಾಗುತ್ತದೆ. ಆಗ ವ್ಯಾಹತಿಯು ಸ್ಪಷ್ಟವಾಗಿಯೇ ತೋರುತ್ತಿದೆ. ಹೀಗೆ ನಿನ್ನ ಮಾತು ವಿರೋಧಗಳಿಗೆ

ಆಶ್ರಯವಾಗಿದೆ. ಅವಿದ್ಯಾಶ್ರಯೋ ಮೋಕ್ಷಃ ಅವಿದ್ಯಾನಿವೃತ್ತಿಯನ್ನೇ ಮುಕ್ತಿ ಎಂದಿರುವರು.ಈ ಅವಿದ್ಯಾನಿವೃತ್ತಿಯು ವ್ಯಾವಹಾರಿಕವೆಂದರೆ ಅವಿದ್ಯೆಯು ಸತ್ಯ ಎಂದಾಗುತ್ತದೆ. ನಿವೃತ್ತಿಯು ನಿತ್ಯವಾದುದರಿಂದ ಮೋಕ್ಷದಲ್ಲಿಯೂ ವ್ಯಾವಹಾರಿಕ-ವಾದುದು ಇದ್ದರೆ ಅದು ಮೋಕ್ಷವೇ ಆಗುವುದಿಲ್ಲ ಎಂದು ಭಾವ.

**ಕಿಂ ವ್ಯಾಹತಿಪುರಂಧ್ರೀಣಾಂ ಪಾಣಿಗ್ರಹಣಮಸ್ತಿ ತೇ ॥ ೭೭೧ ॥**

**ಅರ್ಥ–** ತೇ=ನಿನಗೆ, ವ್ಯಾಹತಿಪುರಂಧ್ರೀಣಾಂ=ವ್ಯಾಹತಿ ಎಂಬ ಸ್ತ್ರೀಯರೊಂದಿಗೆ, ಪಾಣಿಗ್ರಹಣಂ=ವಿವಾಹೋತ್ಸವವು, ಅಸ್ತಿ=ಇದೆಯೇನು?

**ಅನುವಾದ–** ನಿನಗೇನು ಅನೇಕ ವ್ಯಾಹತಿಸ್ತ್ರೀಯರ ಪಾಣಿಗ್ರಹಣವಿದೆಯೇ?

**ಭಾವವಿಲಾಸಿನೀ–** ಬಹುವ್ಯಾಹತಭಾಷಿಣಂ ಪ್ರತಿ ವಾದಿನಮುಪಹಸತಿ– **ಕಿಂ ವ್ಯಾಹತಿ-ಪುರಂಧ್ರೀಣಾಮಿತಿ॥** ಸ್ತ್ರೀಲಿಂಗತ್ವಾದ್ ವ್ಯಾಹತೀನಾಂ ಸ್ತ್ರೀತ್ವಮ್ ॥ ೭೭೧ ॥

**ವಿವರಣೆ–** ಬಹಳವಾದ ವ್ಯಾಹತಿಗಳು ಪೂರ್ವಪಕ್ಷಿಗಳಿಗೆ ಬರುತ್ತಿರುವುದರಿಂದ ಈ ರೀತಿ ಹಾಸ್ಯ ಮಾಡುತ್ತಿದ್ದಾರೆ. ವ್ಯಾಹತಿಶಬ್ದವು ಸ್ತ್ರೀಲಿಂಗ. ಆದ್ದರಿಂದ ವ್ಯಾಹತಿ-ಪುರಂಧ್ರೀಣಾಂ ಎಂದಿದ್ದಾರೆ. ನಿನ್ನ ಮಾತುಗಳೆಲ್ಲವೂ ಬಹುವ್ಯಾಹತವಾಗಿವೆ. ವ್ಯಾಹತಿ ಎಂಬ ಬಹುಮಂದಿದುಷ್ಟ ಸ್ತ್ರೀಯರೊಂದಿಗೆ ಮದುವೆಯಾಗುತ್ತೀಯೇನು ಎಂದು ಅಭಿಪ್ರಾಯ.

**ವಿಪ್ರಃ ಸ್ಯಾದ್ ವಿಪ್ರತಾ ನೈವ ಗೋಮಾನ್ ಸ್ಯಾದ್ ಗೌರ್ನ ಕಾ ಚನ ।**
**ಧನೀ ನೈವ ಧನಂ ಚೇತಿ ಕೋ ನೂನ್ಮತ್ತೋ ವದೇದ್ ವದ ॥ ೭೭೨ ॥**

**ಅರ್ಥ–** ವಿಪ್ರಃ=ಬ್ರಾಹ್ಮಣನು, ಸ್ಯಾತ್=ಆಗಿದ್ದಾನೆ. ವಿಪ್ರತಾ=ಬ್ರಾಹ್ಮಣ್ಯವು, ನೈವ=ಇಲ್ಲವೇ ಇಲ್ಲ, ಗೋಮಾನ್=ಹಸುವುಳ್ಳವನು, ಸ್ಯಾತ್=ಆಗಿದ್ದಾನೆ. ಕಾಚನ ಗೌಃ=ಒಂದು ಹಸುವೂ, ನ=ಇಲ್ಲ, ಧನೀ=ಧನವುಳ್ಳವನು ಆಗಿದ್ದಾನೆ, ಧನಂ=ಧನವು, ನೈವ=ಇಲ್ಲವೇ ಇಲ್ಲ, ಇತಿ=ಹೀಗೆಂದು, ಕೋ ನು ಉನ್ಮತ್ತಃ=ಯಾವ ಮೂರ್ಖನು ತಾನೇ, ವದೇತ್=ಹೇಳುತ್ತಾನೆ? ವದ=ಹೇಳು.

**ಅನುವಾದ–** ಬ್ರಾಹ್ಮಣನು ಇದ್ದಾನೆ, ಅವನಲ್ಲಿ ಬ್ರಾಹ್ಮಣತ್ವವಿಲ್ಲ. ಅವನು ಹಸುವುಳ್ಳವನಾಗಿದ್ದಾನೆ, ಅವನ ಬಳಿ ಒಂದು ಹಸುವೂ ಇಲ್ಲ, ಧನಿಕನಾಗಿದ್ದಾನೆ ಧನವಿಲ್ಲ ಎಂದು ಯಾವ ಹುಚ್ಚನು ತಾನೇ ಹೇಳುತ್ತಾನೆ ಎಂದು ಹೇಳು.

**ಭಾವವಿಲಾಸಿನೀ–** ಪೂರ್ವೋಕ್ತವ್ಯಾಹತಿದಾರ್ಢ್ಯಾಯ ಲೌಕಿಕೋದಾಹರಣಾನ್ಯಾಹ– **ವಿಪ್ರಃ ಸ್ಯಾದಿತಿ** ॥ ೭೭೨ ॥

**ವಿವರಣೆ–** ಪೂರ್ವಪಕ್ಷಿಯ ಮಾತುಗಳು ಯಾವ ರೀತಿ ವ್ಯಾಹತವಾಗಿವೆ ಎಂಬುದನ್ನು ಲೌಕಿಕ ಉದಾಹರಣೆಯ ಮೂಲಕ ದೃಢಪಡಿಸುತ್ತಿದ್ದಾರೆ. ಬ್ರಾಹ್ಮಣನಾದ ಇವನಲ್ಲಿ ಬ್ರಾಹ್ಮಣ್ಯವಿಲ್ಲ, ಗೋಸಂಪತ್ತುಳ್ಳ ಇವನಲ್ಲಿ ಒಂದು ಹಸುವೂ ಇಲ್ಲ, ಧನಿಕನಾದ ಇವನಲ್ಲಿ ಧನವಿಲ್ಲ, ಇಂತಹ ವಿರುದ್ಧವಾದ ಮಾತುಗಳನ್ನು ಯಾವ ಮೂರ್ಖನು ಹೇಳುತ್ತಾನೆ? ಪರನ ಮಾತುಗಳು ಇದೇ ರೀತಿ ಇವೆ ಎಂದು ಅಭಿಪ್ರಾಯ.

ತಸ್ಮಾನ್ನಿರ್ಗುಣತಾವಾಣೀ ವ್ಯಾಹತಿಸ್ವೈರಿಣೀ ಗೃಹಂ ।
ಇದಂ ನೈವ ವಿಶೇತ್ ಸಾಧ್ವೀ ತ್ವತ್ಸಂಗಾತ್ ಪ್ರವಿಶೇದ್ ಯದಿ ॥ ೭೭೩ ॥

ಸ್ವೈರಿಣೀಸಂಗದೋಷೇಣ ಸ್ವಯಂ ಚ ವ್ಯಾಹತಾ ಭವೇತ್ ।
ಯತ್ ಸ್ವೋಕ್ತನಿರ್ಗುಣತ್ವಾಖ್ಯಗುಣೇನೈವ ವ್ಯರುಧ್ಯತ ॥ ೭೭೪ ॥

**ಅರ್ಥ–** ನಿರ್ಗುಣತಾವಾಣೀ=ನಿರ್ಗುಣತ್ವವನ್ನು ಹೇಳುವ ವೇದವಾಣಿಯು, ಸಾಧ್ವೀ= ಪತಿವ್ರತಾ ಸ್ತ್ರೀಯು, ತಸ್ಮಾತ್=ಆದ್ದರಿಂದ, ಇದಂ=ಈ ಯಾವ, ವ್ಯಾಹತಿಸ್ವೈರಿಣೀಗೃಹಂ= ವ್ಯಾಹತಿರೂಪವೇಶ್ಯೆಯ ಮನೆಯನ್ನು, ನೈವ ವಿಶೇತ್= ಪ್ರವೇಶಿಸುವುದಿಲ್ಲ, ಯದಿ= ಒಂದು ಪಕ್ಷ, ತ್ವತ್ಸಂಗಾತ್= ನಿನ್ನ ಸಂಪರ್ಕದಿಂದ, ಪ್ರವಿಶೇತ್= ಪ್ರವೇಶಿಸಿದರೆ, ಸ್ವೈರಿಣೀ- ಸಂಗದೋಷೇಣ= ವ್ಯಾಹತಿಸ್ವೈರಿಣಿಯ ಸಂಪರ್ಕದೋಷದಿಂದ, ಸ್ವಯಂ ಚ= ತಾನೂ ಸಹ, ವ್ಯಾಹತಾ=ವ್ಯಾಹತಿದೋಷವುಳ್ಳದ್ದು ಭವೇತ್=ಆಗುತ್ತದೆ. ಯತ್=ಏಕೆಂದರೆ, ಸ್ವೋಕ್ತನಿರ್ಗುಣತ್ವಾಖ್ಯ ಗುಣೇನೈವ= ತನ್ನಿಂದ ಹೇಳಲ್ಪಟ್ಟ ನಿರ್ಗುಣತ್ವವೆಂಬ ಗುಣದಿಂದಲೇ, ವ್ಯರುಧ್ಯತ= ವಿರುದ್ಧವಾಗಿದೆ.

**ಅನುವಾದ–** ಆದ್ದರಿಂದ, 'ಕೇವಲೋ ನಿರ್ಗುಣಶ್ಚ' ಎಂಬ ನಿರ್ಗುಣವಾಣಿಯು ಸಾಧ್ವಿಯಾದ ವನಿತೆಯಂತೆ. ಅವಳು ಈ ನಿನ್ನ ವ್ಯಾಹತಿವೇಶ್ಯೆಯ ಗೃಹವನ್ನು ಪ್ರವೇಶಿಸುವುದಿಲ್ಲ. ಒಂದು ಪಕ್ಷ ಅವಳು ಪ್ರವೇಶಿಸಿದರೆ ವೇಶ್ಯೆಯ ಸಂಗದೋಷದಿಂದ ಅವಳೂ ವ್ಯಾಹತಳೇ ಆಗುತ್ತಾಳೆ. ಏಕೆಂದರೆ ತಾನು ಹೇಳಿದ ನಿರ್ಗುಣತ್ವವೆಂಬ ಗುಣವೇ ಬರುವುದರಿಂದ ನಿರ್ಗುಣತ್ವಕ್ಕೂ ಮತ್ತು ಗುಣಕ್ಕೂ ವಿರೋಧವೇ ಇದೆ.

**ಭಾವವಿಲಾಸಿನೀ–** ನಿರ್ಗುಣಶ್ರುತಿಬಲಾದ್ ವ್ಯಾಹತಮಂಗೀಕ್ರಿಯತ ಇತಿ ವದಂತಂ ಪ್ರತ್ಯಾಹ– ತಸ್ಮಾದಿತಿ ॥ ತಸ್ಮಾದ್ ವ್ಯಾಹತಭಾಷಿತ್ವಾತ್ । ಇದಂ ಮಾಯಿಮತಮ್ । ಸಾಧ್ವೀ ಪತಿವ್ರತಾ ಅವ್ಯಾಹತಾರ್ಥಪ್ರತಿಪಾದನನಿಯಮವತೀತ್ಯರ್ಥಃ । ತ್ವಮೇವೋನ್ಮತ್ತೋ ವ್ಯಾಹತಂ ವದಸಿ । ನ ಶ್ರುತಿರೇವಂ ವಕ್ತುಮರ್ಹತಿ । ಕಿಂತ್ವನುಕೂಲಂ ಕಮಪ್ಯರ್ಥಂ ವ್ಯಾಹತಮೇವ ವದೇದಿತಿ ಭಾವಃ । ತ್ವತ್ಸಂಗಾತ್ ತವ ಬಲಾದ್ ಗ್ರಹಣರೂಪಸಂಗಾತ್ । ಸ್ವೈರಿಣೀ ಸಂಗದೋಷೇಣ ಸ್ವೈರಿಣೀನಾಂ ವ್ಯಾಹತೀನಾಂ ಸಂಸರ್ಗದೋಷೇಣ । ಸ್ವಪತಿವದೇಕಸ್ಯ ಪ್ರಾಮಾಣಿಕಧರ್ಮಸ್ಯ

**ಜಾರವತ್ ತದ್ವಿರುದ್ಧಾಪ್ರಾಮಾಣಿಕಧರ್ಮಸ್ಯ ಚಾಂಗೀಕಾರಾದ್ ವ್ಯಾಹತೀನಾಂ ಸ್ವೈರಿಣೀತ್ವಂ ದ್ರಷ್ಟವ್ಯಮ್ । ನಿರ್ಗುಣಶ್ರುತೇಃ ಪರೋದೀರಿತಾರ್ಥಕಥನೇ ಸ್ವವ್ಯಾಹತಿ ಮುಪಪಾದಯತಿ–ಯದೀತಿ ॥ ಯದ್ ಯಸ್ಮಾತ್ ಸರ್ವಧರ್ಮಶೂನ್ಯತ್ವರೂಪ ಸಕಲಗುಣಾಭಾವಂ ವಕ್ತುಮಾಗತಾ ಅಂತತಃ ಸ್ವಾರ್ಥಭೂತಂ ನಿರ್ಗುಣತ್ವಾಖ್ಯಗುಣಮಪಿ ವದತೀತಿ ವ್ಯಾಹತ್ಯಾಖ್ಯವಿರೋಧಮಗಮದಿತ್ಯರ್ಥಃ ॥ ೭೭೪ ॥**

**ವಿವರಣೆ–** ವ್ಯಾಹತಿ ಇದ್ದರೂ 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯು ನಿರ್ಗುಣತ್ವವನ್ನು ಬ್ರಹ್ಮನಿಗೆ ಹೇಳುತ್ತಿದೆ. ಆದ್ದರಿಂದ ಧರ್ಮರಾಹಿತ್ಯವವನ್ನು ಒಪ್ಪುತ್ತೇವೆ ಎಂಬ ವಾದಕ್ಕೆ ದೋಷವನ್ನು ಹೇಳುತ್ತಿದ್ದಾರೆ.

ನಿರ್ಗುಣತ್ವಶ್ರುತಿಯು ನಿನಗೆ ಅಭಿಮತವಾದ ಸರ್ವಧರ್ಮರಾಹಿತ್ಯರೂಪ ಅರ್ಥವನ್ನು ಹೇಳುವುದಿಲ್ಲ. ಆ ವೇದವಾಣಿಯು ಪತಿವ್ರತಾಸ್ತ್ರೀಯಂತೆ ಪರಿಶುದ್ಧಳಾಗಿರುವವಳು. ವ್ಯಾಹತಿದೋಷದುಷ್ಟವಾದ ಅರ್ಥವನ್ನು ಆಕೆ ಹೊಂದಿಲ್ಲ. ಅಬಾಧಿತವಾದ ಅರ್ಥವನ್ನೇ ಆ ಪತಿವ್ರತಾಸ್ತ್ರೀ ಪ್ರತಿಪಾದಿಸುತ್ತಾಳೆ. ವ್ಯಾಹತಿರೂಪದೋಷವೇ ಸ್ವೈರಿಣೀ, ಅವಳ ಮನೆ ಎಂದರೆ ಪರಮತ. ಈ ಪರಮತವೆಂಬ ಸ್ವೈರಿಣಿಯ ಮನೆಯನ್ನು ನಿರ್ಗುಣವೆಂಬ ಶ್ರುತಿಯು ಎಂದಿಗೂ ಪ್ರವೇಶಿಸುವುದಿಲ್ಲ, ಎಂದರೆ ಪರನಿಗೆ ಅಭಿಮತವಾದ ಸರ್ವಧರ್ಮರಾಹಿತ್ಯವೆಂಬ ಅಭಿಪ್ರಾಯವನ್ನು ಬೋಧಿಸುವುದಿಲ್ಲ. ನಿನ್ನ ಸಂಪರ್ಕದಿಂದ ಪ್ರವೇಶಿಸಿದರೆ ತಾನೂ ಸಹ ವ್ಯಾಹತಿರೂಪದೋಷದಿಂದ ಸ್ವೈರಿಣಿಯೇ ಆಗುತ್ತಾಳೆ. ನಿರ್ಗುಣಶ್ರುತಿಯು ಸರ್ವಧರ್ಮರಾಹಿತ್ಯವನ್ನು ಹೇಳಿದರೆ ರಾಹಿತ್ಯರೂಪಧರ್ಮವನ್ನೇ ಒಪ್ಪುವುದರಿಂದ, ತಾನೂ ವ್ಯಾಹತಭಾಷಿಯಾಗುತ್ತದೆ. ಆದ್ದರಿಂದ 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಶ್ರುತಿಯಲ್ಲಿರುವ ನಿರ್ಗುಣಶಬ್ದಕ್ಕೆ ಸರ್ವಾತ್ಮನಾ ಧರ್ಮರಾಹಿತ್ಯ ಎಂಬ ಅರ್ಥವನ್ನು ಮಾಡಬಾರದು.

**ಯದಿ ಬ್ರಹ್ಮಣಿ ನೈರ್ಗುಣ್ಯಂ ಧರ್ಮಂ ಸ್ವಾರ್ಥಂ ಸಮರ್ಪಯೇತ್ ।**
**ಅನುಮಾನುಗ್ರಾಹಕಂ ಸಾ ಮಾನಂ ತರ್ಹಿ ಭವಿಷ್ಯತಿ ।**
**ನ ಸ್ಥಾಪಯೇಚ್ಚ ನೈವ ಸ್ಯಾತ್ ಸಾಧಿಕಾ ಬಾಧಿಕಾ ಮಮ ॥ ೭೭೫ ॥**

**ಅರ್ಥ–** (ನೈರ್ಗುಣ್ಯಂ=ನಿರ್ಗುಣತ್ವಶ್ರುತಿಯು), ಸ್ವಾರ್ಥಂ=ತನ್ನ ಅರ್ಥವಾದ, ನೈರ್ಗುಣ್ಯಂ ಧರ್ಮಂ=ನಿರ್ಗುಣತ್ವರೂಪಧರ್ಮವನ್ನು ಬ್ರಹ್ಮಣಿ=ಬ್ರಹ್ಮನಲ್ಲಿ ಯದಿ ಸಮರ್ಪಯೇತ್=ಪ್ರತಿಪಾದಿಸಿದರೆ, ಅನುಮಾನುಗ್ರಾಹಕಂ=ನಮ್ಮ ಅನುಮಾನಕ್ಕೆ ಸಹಕಾರಿಯಾಯಿತು. ತರ್ಹಿ=ಆ ಪಕ್ಷದಲ್ಲಿ ಸಾ=ಆ ಶ್ರುತಿಯು, ಮಾನಂ=ಪ್ರಮಾಣವು, ಭವಿಷ್ಯತಿ=ಆಗುತ್ತದೆ. ನ ಸ್ಥಾಪಯೇತ್=ಶ್ರುತಿಯು ನಿರ್ಗುಣತ್ವವನ್ನು ಪ್ರತಿಪಾದಿಸದಿದ್ದರೆ,

ನೈವ ಸಾಧಿಕಾ=ಧರ್ಮರಾಹಿತ್ಯಕ್ಕೆ ಸಾಧಕವಾಗುವುದಿಲ್ಲ. ಮಮ =ನನಗೆ, ನೈವ ಬಾಧಿಕಾ=ಬಾಧಕವೂ ಆಗುವುದಿಲ್ಲ.

**ಅನುವಾದ–** ನಿರ್ಗುಣ ಶ್ರುತಿಯು ಬ್ರಹ್ಮನಲ್ಲಿ ಸ್ವಾರ್ಥವಾದ ನೈರ್ಗುಣ್ಯರೂಪದ ಧರ್ಮವನ್ನು ಸಮರ್ಪಣೆ ಮಾಡಿದರೆ ಬ್ರಹ್ಮನಲ್ಲಿ ಗುಣಾಭಾವವತ್ವರೂಪವಾದ ಭಾವಧರ್ಮವು ಬರುವುದರಿಂದ ಆ ಶ್ರುತಿಯು ನನ್ನ ಅನುಮಾನಕ್ಕೆ ಅನುಗ್ರಾಹಕವಾಗುತ್ತದೆ. ಬ್ರಹ್ಮನಲ್ಲಿ ನೈರ್ಗುಣ್ಯವನ್ನು ಸಮರ್ಪಣೆ ಮಾಡದಿದ್ದರೆ ಆ ಶ್ರುತಿಯು ನನಗೆ ಸಾಧಕವೂ ಆಗುವುದಿಲ್ಲ, ಬಾಧಕವೂ ಆಗುವುದಿಲ್ಲ.

**ಭಾವವಿಲಾಸಿನೀ–** ಕಿಂಚ ನಿರ್ಗುಣಶ್ರುತಿಃ ಸ್ವಾರ್ಥಂ ನಿರ್ಗುಣತ್ವಂ ಬ್ರಹ್ಮಣಿ ಸಮರ್ಪಯತಿ ನವೇತಿ ವಿಕಲ್ಪ್ಯ ಪ್ರಕಾರಾಂತರೇಣ ದೂಷಯತಿ– ಯದಿ ಬ್ರಹ್ಮಣೀತಿ ॥ ಅನುಮಾನಾನುಗ್ರಾಹಕಮ್ ಅಸ್ಮದುಕ್ತಾನುಮಾನಸ್ಯಾನುಗ್ರಾಹಕಂ ಸಹಾಯಭೂತಮಿತಿ ಭಾವಃ । ತಥಾಪಿ ಬ್ರಹ್ಮಣಿ ಗುಣಾಭಾವಾಧಿಕರಣತ್ವರೂಪನಿರ್ಗುಣತ್ವಾಖ್ಯಭಾವಗುಣಸ್ಯ ನಿರೂಪಣಾದಿತ್ಯಾದ್ಯಪಕ್ಷದೂಷಣಮ್ । ದ್ವಿತೀಯಪಕ್ಷಂ ದೂಷಯತಿ– ನ ಸ್ಥಾಪಯೇಚ್ಚೇದಿತಿ ॥ ಮಮಾನುಕೂಲ-ಪ್ರತಿಕೂಲಸಗುಣತ್ವನಿರ್ಗುಣತ್ವಯೋರುಭಯೋರಪ್ಯಪ್ರತಿಪಾದನಾತ್ ಸಾಧಿಕಾ ಬಾಧಿಕಾ ಚ ನೇತಿ ಸಂಬಂಧಃ ॥ ೭೭೫ ॥

**ವಿವರಣೆ–** ನಿರ್ಗುಣಶ್ರುತಿಯು ತನ್ನ ಅರ್ಥವಾದ ನಿರ್ಗುಣತ್ವವನ್ನು ಬ್ರಹ್ಮನಲ್ಲಿ ಪ್ರತಿಪಾದಿಸುತ್ತದೆಯೋ ಅಥವಾ ಇಲ್ಲವೋ ಎಂದು ವಿಕಲ್ಪವನ್ನು ಮಾಡಿ ದೋಷವನ್ನು ಹೇಳುತ್ತಿದ್ದಾರೆ. ಶ್ರುತಿಯು ಬ್ರಹ್ಮನನ್ನು ನಿರ್ಗುಣ ಎಂದು ಪ್ರತಿಪಾದಿಸಿದರೆ ಗುಣಾಭಾವಾಶ್ರಯತ್ವವು ಬ್ರಹ್ಮನಲ್ಲಿದೆ ಎಂದು ಹೇಳಿದಂತಾಗುತ್ತದೆ. ಆಗ ಆಶ್ರಯತ್ವರೂಪಭಾವಧರ್ಮವು ಬ್ರಹ್ಮನಲ್ಲಿದೆ ಎಂದು ಒಪ್ಪಿದಂತಾಗುತ್ತದೆ.

ಈಶ್ವರಃ ಭಾವಧರ್ಮವಾನ್ ಅಭಾವಾಶ್ರಯತ್ವಾತ್ ಎಂಬ ನಮ್ಮ ಅನುಮಾನಕ್ಕೆ ಶ್ರುತಿಯು ಸಹಕಾರಿಯಾಗುತ್ತದೆ. ನಿರ್ಗುಣತ್ವವನ್ನು ಪ್ರತಿಪಾದಿಸದಿದ್ದರೆ ನಿನಗೆ ಅನುಕೂಲವಾದ ಅರ್ಥಕ್ಕೆ ಅದು ಸಾಧಕವಾಗುವುದಿಲ್ಲ, ಎಂದರೆ ನಿರ್ಗುಣತ್ವವು ಸಿದ್ಧವಾಗುವುದಿಲ್ಲ. ಆಗ ಅದು ನಮಗೆ ಬಾಧಕವೂ ಆಗುವುದಿಲ್ಲ.

ಲೌಕಿಕದೃಷ್ಟಾಂತದಿಂದ ಹಿಂದಿನ ಪ್ರಮೇಯವನ್ನೇ ಸಾಧಿಸುತ್ತಿದ್ದಾರೆ.

**ನಹಿ ಛತ್ರಿಪದಂ ರಾಜಭೃತ್ಯೇ ಛತ್ರಮನಾದಧತ್ ।**
**ಘರ್ಮಂ ನಿರ್ಮೂಲಯೇತ್ ತಸ್ಯ ಛತ್ರಛಾಯಾವಿರೋಧಿನಂ ॥ ೭೭೬ ॥**

**ಅರ್ಥ–** ರಾಜಭೃತ್ಯೇ=ರಾಜಸೇವಕನಲ್ಲಿ ಛತ್ರಂ= ಛತ್ರಿಯನ್ನು (ನೆರಳನ್ನು), ಅನಾದಧತ್= ಉಂಟುಮಾಡದಿರುವ, ಛತ್ರಿಪದಂ= ಛತ್ರಿಪದದಿಂದ ವಾಚ್ಯವಾದ ವಸ್ತುವು,

ತಸ್ಯ=ರಾಜಸೇವಕನ, ಛತ್ರಛಾಯಾವಿರೋಧಿನಂ= ಛತ್ರಿಯ ನೆರಳಿಗೆ ವಿರೋಧಿಯಾದ, ಘರ್ಮಂ=ಬಿಸಿಲನ್ನು, ನ ಹಿ ನಿರ್ಮೂಲಯೇತ್=ನಾಶಪಡಿಸುವುದಿಲ್ಲ.

**ಅನುವಾದ–** **ಛತ್ರಿಪದವು ಛತ್ರಛಾಯೆಯಲ್ಲಿ ಇಲ್ಲದಿರುವ ರಾಜಭೃತ್ಯನಿಗೆ ಛತ್ರಛಾಯೆಗೆ ವಿರೋಧವಾದ ಬಿಸಿಲನ್ನು ನಾಶಪಡಿಸುವುದಿಲ್ಲವಷ್ಟೇ.**

**ಭಾವವಿಲಾಸಿನೀ–** **ತತ್ರ ಲೌಕಿಕದೃಷ್ಟಾಂತಮಾಹ– ನಹೀತಿ ॥ ಛತ್ರಿಪದಂ ರಾಜಭೃತ್ಯೇ ಸ್ವಾರ್ಥಭೂತಂ ಛತ್ರಮನಾದಧತ್ ಛತ್ರಚ್ಛಾಯಾಮಕುರ್ವದಿತ್ಯರ್ಥಃ। ತಸ್ಯ ರಾಜಭೃತ್ಯಸ್ಯ ಛತ್ರ-ಚ್ಛಾಯಾವಿರೋಧಿನಂ ಧರ್ಮಂ ನಹಿ ನಿರ್ಮೂಲಯೇದಿತಿ ಸಂಬಂಧಃ। ಏವಂ ಲಕ್ಷಣಯಾ ಪ್ರಯುಕ್ತಾ ನಿರ್ಗುಣಶ್ರುತಿರಪಿ ನಿರ್ಧರ್ಮಕತಯಾಽಂಗೀಕೃತೇ ಬ್ರಹ್ಮಣಿ ನಿರ್ಗುಣತ್ವರೂಪಂ ಧರ್ಮಮಸಮರ್ಪಯಂತೀ ಸ್ವಾರ್ಥವಿರೋಧ್ಯಪಿ ಸಗುಣತ್ವಂ ನ ಬಾಧೇತೇತಿ ಭಾವಃ ॥೭೭೮॥**

**ವಿವರಣೆ–** ರಾಜಸೇವಕನಿಗೆ ಹಿಡಿದ ಛತ್ರಿಯು ಅವನ ಮೇಲೆ ನೆರಳನ್ನು ಉಂಟುಮಾಡಿದರೆ ಮಾತ್ರ ಸಾರ್ಥಕ. ನೆರಳು ಮೂಡಿದಾಗ ಬಿಸಿಲಿನ ಬೇಗೆಯು ಪರಿಹಾರವಾಗುವುದು. ನೆರಳು ಮೂಡದಿದ್ದಾಗ ಆ ಛತ್ರಿಯಿಂದ ಪ್ರಯೋಜನವೇನಿದೆ? ಅದರಂತೆ ಪ್ರಕೃತ ನಿರ್ಗುಣಶ್ರುತಿಯು ಧರ್ಮರಹಿತನೆಂದು ಅಂಗೀಕೃತನಾದ ಬ್ರಹ್ಮನಲ್ಲಿ ನಿರ್ಗುಣತ್ವರೂಪಧರ್ಮವನ್ನು ಪ್ರತಿಪಾದಿಸದಿದ್ದರೆ, ನಿನಗೆ ಅಭಿಪ್ರೇತವಾದ ಧರ್ಮರಹಿತನೆಂಬ ಪ್ರಮೇಯವೇ ಸಿದ್ಧಿಸುವುದಿಲ್ಲ. ನಮ್ಮ ಪ್ರಮೇಯವಾದ ಸಗುಣತ್ವಕ್ಕೆ ಬಾಧಕವೂ ಆಗುವುದಿಲ್ಲ.

**ನ ಹೀಯಂ ಪೂತನಾವಾಣೀ ಯಾ ಶಬ್ದೇನೈವ ಭೀಷಯೇತ್ ॥ ೭೭೭ ॥**

**ಅರ್ಥ–** ಯಾ=ಯಾವುದು, ಶಬ್ದೇನೈವ=ಕೇವಲಶಬ್ದದಿಂದಲೇ, ಭೀಷಯೇತ್=ಹೆದರಿಸುತ್ತದೋ, ಸಾ=ಅಂತಹ, ಪೂತನಾವಾಣೀ=ಪೂತನೆಯ ಧ್ವನಿಯು, ಇಯಂ=ಈ ವೇದವಾಕ್ಯವು, ನ ಹಿ=ಅಲ್ಲವಷ್ಟೇ!

**ಅನುವಾದ–** **ನಿರ್ಗುಣ ಎಂಬ ನಿನ್ನ ಶಬ್ದವು ಶಬ್ದದಿಂದಲೇ ನಮ್ಮನ್ನು ಹೆದರಿಸಲು ಅದೇನೂ ಪೂತನೆಯ ಗರ್ಜನೆಯಲ್ಲ.**

**ಭಾವವಿಲಾಸಿನೀ–** **ಸಗುಣತ್ವವಿರೋಧಿಭೂತನಿರ್ಗುಣತ್ವಾಪ್ರತಿಪಾದನೇ ತು ನಿರ್ಗುಣ ಇತಿ ಶಬ್ದಮಾತ್ರಾತ್ ನ ಮಮ ಭೀರಿತ್ಯಾಹ– ನಹೀಯಂ ಪೂತನೇತಿ ॥ ಯಾ ಶಬ್ದೇನೈವ ಮೃತಿಕಾಲೀನಾರ್ತಸ್ವರೇಣೈವ ಭೀಷಯೇತ್, ಸಾ ಪೂತನೇಯಂ ವಾಣೀ ನಹೀತಿ ॥ ೭೭೯ ॥**

**ವಿವರಣೆ–** ನಿರ್ಗುಣಶ್ರುತಿಯು ಬ್ರಹ್ಮನನ್ನು ಧರ್ಮರಹಿತ ಎಂದು ಪ್ರತಿಪಾದಿಸಿದರೆ ನಮ್ಮ ಸಿದ್ಧಾಂತಕ್ಕೆ ವಿರೋಧ. ಆ ಅರ್ಥವನ್ನು ಪ್ರತಿಪಾದಿಸದ ಕೇವಲ ಶಬ್ದವು ನಮಗೆ ವಿರೋಧವನ್ನು ಮಾಡುವುದಿಲ್ಲ. ಅದು ಯುಕ್ತಿಯುಕ್ತವಾಗಿದ್ದರೆ ಮಾತ್ರ ವಿರೋಧ.

ಪೂತನೆ ಮರಣಹೊಂದುವಾಗ ಭಯಾನಕವಾದ ಆರ್ತಸ್ವರವನ್ನು ಮಾಡಿದಳು, ನಂದಗೋಕುಲದ ಜನರನ್ನು ಆ ಶಬ್ದವು ಭಯಗೊಳಿಸಿತು. ಅದರಂತೆ ಈ ನಿರ್ಗುಣಶಬ್ದವಲ್ಲ.

**ಅತೋ ನಿಷ್ಕಾರಣಂ ಬ್ರಹ್ಮಧರ್ಮಾನೇತಾನ್ ಮನೋರಮಾನ್ ।**
**ನಿಷೇಧತೋ ಗತಿಃ ಸಾ ಸ್ಯಾದ್ ಯಾ ಧರ್ಮೈರ್ನೈವ ಸಾಧ್ಯತೇ ॥ ೭೭೮ ॥**

**ಅರ್ಥ–** ಅತಃ=ಆದ್ದರಿಂದ, ನಿಷ್ಕಾರಣಂ=ಕಾರಣವಿಲ್ಲದೆ, ಮನೋರಮಾನ್= ಸುಂದರವಾದ, ಏತಾನ್=ಶ್ರುತಿಸಿದ್ಧವಾದ, ಬ್ರಹ್ಮಧರ್ಮಾನ್=ಪರಮಾತ್ಮನ ಧರ್ಮಗಳನ್ನು ನಿಷೇಧತಃ=ನಿಷೇಧಿಸುವ ನಿನಗೆ, ಯಾ= ಯಾವ ಗತಿಯು, ಧರ್ಮೈಃ= ಧರ್ಮಗಳಿಂದ, ನೈವ ಸಾಧ್ಯತೇ= ಸಾಧಿಸಲ್ಪಡುವುದಿಲ್ಲವೋ, ಸಾ= ಅಂತಹ ಅಂಧಂತಮೋರೂಪವಾದ ದುರ್ಗತಿಯು, ಸ್ಯಾತ್= ಆಗುತ್ತದೆ.

**ಅನುವಾದ–** ಆದ್ದರಿಂದ, ನಿಷ್ಕಾರಣವಾಗಿ ಮನೋಹರವಾದ ಈ ಬ್ರಹ್ಮಧರ್ಮಗಳನ್ನು ನಿಷೇಧಿಸುವ ನಿನಗೆ ಧರ್ಮವನ್ನು ಮಾಡಿದವರಿಗೆ ಯಾವ ಗತಿ ಎಂದೂ ದೊರೆಯುವುದಿಲ್ಲವೋ, ಅಂತಹ ಅಂಧಂತಮೋರೂಪವಾದ ಗತಿಯೇ ದೊರೆಯುತ್ತದೆ.

**ಭಾವವಿಲಾಸಿನೀ–** ಅತೋ ನಿರ್ಗುಣತ್ವಶ್ರುತೇಃ ಸ್ವಾರ್ಥಾನಾಧಾಯಕತ್ವಾತ್ । ಸಾ ಅಂಧಂ-ತಮೋರೂಪಾ । ಧರ್ಮೈಃ ಪುಣ್ಯೈಃ ॥ ೭೭೮ ॥

**ವಿವರಣೆ–** ಬ್ರಹ್ಮನಲ್ಲಿ ಹಿಂದೆ ಹೇಳಿದ ನಿತ್ಯತ್ವ, ಸತ್ಯತ್ವ, ಪರಮೇಶ್ವರತ್ವಾದಿ ಮನೋಹರ ಗುಣಗಳಿವೆ. ಆ ಗುಣಗಳನ್ನು ಯಾವ ಕಾರಣವೂ ಇಲ್ಲದೆ ನೀನು ನಿಷೇಧಮಾಡುತ್ತಿದ್ದೀಯೆ. ಬ್ರಹ್ಮನ ಗುಣಗಳನ್ನು ನಿಷೇಧ ಮಾಡಿದರೆ ಅದು ಬ್ರಹ್ಮನ ಸ್ವರೂಪವನ್ನೇ ನಾಶಮಾಡಿದಂತಾಗುವುದರಿಂದ ಮಹಾಪಾಪ. ಆದ್ದರಿಂದ ಆ ಪಾಪದ ಫಲವು ದುರ್ಗತಿಯೇ ಆಗಿದೆ. ಧರ್ಮವನ್ನು ಆಚರಿಸುವವರಿಗೆ ಮತ್ತು ಬ್ರಹ್ಮನ ಧರ್ಮಗಳನ್ನು ಉಪಾಸನೆ ಮಾಡುವವರಿಗೆ ಅಂತಹ ದುರ್ಗತಿಯು ಎಂದೂ ಆಗುವುದಿಲ್ಲ. ಅಂತಹ ದುರ್ಗತಿಯೆಂದರೆ ಅಂಧಂತಮಸ್ಸು ಎಂದು ಅಭಿಪ್ರಾಯ.

**ಸುಖರೂಪಮಿತೀಯಂ ವಾಕ್ ಸುಖರೂಪತ್ವವಾದಿನೀ ।**
**ತದ್ಯೋಗಾದ್ ರೂಪಮಪ್ಯಾಹ ನ ಹಿ ಸಾ ಸ್ವಾಗ್ರಹಾನುಗಾ ॥ ೭೭೯ ॥**

**ಅರ್ಥ–** ಸುಖರೂಪಮಿತಿ=ಬ್ರಹ್ಮನು ಸುಖರೂಪನೆಂಬ, ಸುಖರೂಪತ್ವವಾದಿನೀ= ಬ್ರಹ್ಮನಿಗೆ ಸುಖರೂಪತ್ವವನ್ನು ಪ್ರತಿಪಾದಿಸುವ, ಇಯಂ=ಈ, ವಾಕ್=ವೇದವಾಣಿಯು, ತದ್ಯೋಗಾತ್=ಮೋಕ್ಷದಲ್ಲಿ ಜೀವನಿಗೆ ಬ್ರಹ್ಮನ ಉಪಸಂಕ್ರಮಣದಿಂದಾಗಿ,

ರೂಪಮಪಿ=ರೂಪವನ್ನು ಸಹ, ಆಹ=ಹೇಳಿತು. ಸಾ=ಆ ವೇದವಾಣಿಯು, ಸ್ವಾಗ್ರಹಾನುಗಾ ನ=ನಿನ್ನ ಅಖಂಡಾರ್ಥತ್ವದ ಅಭಿಪ್ರಾಯದಲ್ಲಿ ಆಗ್ರಹವುಳ್ಳದ್ದು ಅಲ್ಲ.

**ಅನುವಾದ–** 'ಆನಂದರೂಪಮಮೃತಂ' ಎಂಬ ವೇದವಾಕ್ಯವು ಬ್ರಹ್ಮನಲ್ಲಿ ಸುಖರೂಪತ್ವವನ್ನು ಹೇಳುತ್ತದೆ. ಮುಕ್ತನಿಗೆ ವೇದವು ಬ್ರಹ್ಮನ ಉಪಸಂಕ್ರಮಣವನ್ನು ಹೇಳುತ್ತದೆಯಷ್ಟೇ? ಎಂದರೆ ಮೋಕ್ಷದಲ್ಲಿ ಬ್ರಹ್ಮನೂ; ಬ್ರಹ್ಮನಂತೆ ಜೀವನೂ ಸುಖರೂಪವನ್ನು ಹೊಂದುತ್ತಾನೆಂದು ಅರ್ಥ. ಸುಖರೂಪತ್ವವನ್ನು ಹೇಳುವ ಆ ವಾಕ್ಯವು ನಿನ್ನನ್ನು ಅನುಸರಿಸಿ ಅಖಂಡಾರ್ಥವನ್ನು ಹೇಳುವುದಿಲ್ಲ.

**ಭಾವವಿಲಾಸಿನೀ–** ಅಧುನಾ ಭಾವರೂಪಧರ್ಮಧರ್ಮಿತ್ವಲಕ್ಷಣಸಾಧ್ಯಾಭಾವೇ ಮುಕ್ತತ್ವರೂಪ ಹೇತೂಚ್ಛಿತ್ತಿಮೇವ ಬಾಧಕಂ ವಕ್ತುಮುಪಕ್ರಮತೇ– **ಸುಖರೂಪಮಿತಿ** ॥ ತದ್ಯೋಗಾತ್ ಸುಖರೂಪತ್ವಾಖ್ಯ ಧರ್ಮಯೋಗಾದ್ ರೂಪಮ್ । ಸುಖರೂಪವ್ಯಕ್ತಿಮ್ ॥ ೭೭೯ ॥

**ವಿವರಣೆ–** ಈಶ್ವರಃ ಭಾವಧರ್ಮವಾನ್ ಮುಕ್ತತ್ವಾತ್. ಈ ಅನುಮಾನಕ್ಕೆ ಅಪ್ರಯೋಜಕತಾಶಂಕೆಗೆ ಅವಕಾಶವಿಲ್ಲ. ಅನುಕೂಲತರ್ಕವಿದೆ. ಭಾವಧರ್ಮ-ರೂಪಸಾಧ್ಯವಿಲ್ಲದಿದ್ದರೆ ಮುಕ್ತತ್ವರೂಪಹೇತುವೂ ಇರಲು ಸಾಧ್ಯವಿಲ್ಲ. ಆನಂದರೂಪ-ಮಮೃತಂ ಯದ್ ವಿಭಾತಿ ಮುಂತಾದ ಶ್ರುತಿಗಳು ಬ್ರಹ್ಮನನ್ನು ಸುಖಸ್ವರೂಪ ಎನ್ನುತ್ತಿವೆ. ಸುಖರೂಪಬ್ರಹ್ಮಭಾವಪ್ರಾಪ್ತಿಯೇ ಮುಕ್ತಿ. ಎಂದರೆ ಸುಖರೂಪತ್ವ ಪ್ರಾಪ್ತಿಯೇ ಮುಕ್ತಿ. ಆದ್ದರಿಂದ ಮುಕ್ತನಿಗೆ ಸುಖರೂಪತ್ವ ಎಂಬ ಭಾವಧರ್ಮವನ್ನು ಒಪ್ಪಬೇಕು. ಇಲ್ಲದಿದ್ದರೆ ಮುಕ್ತತ್ವವೇ ಕೂಡುವುದಿಲ್ಲ. ಶ್ರುತಿಯು ನಿನ್ನನ್ನು ಅನುಸರಿಸಿ ಆಗ್ರಹದಿಂದ ಅಖಂಡಾರ್ಥತ್ವವನ್ನು ಪ್ರತಿಪಾದಿಸುವುದಿಲ್ಲ.

**ವಿಪ್ರರೂಪತ್ವಶೂನ್ಯೋ ಹಿ ನ ಶೂದ್ರೋ ವಿಪ್ರರೂಪಕಃ ।**
**ಸುಖರೂಪತ್ವಶೂನ್ಯಂ ಯತ್ ಸುಖರೂಪಂ ಚ ನೈವ ತತ್ ॥ ೭೮೦ ॥**

**ಅರ್ಥ–** ವಿಪ್ರರೂಪತ್ವಶೂನ್ಯಃ= ವಿಪ್ರರೂಪತ್ವವಿಲ್ಲದ, ಶೂದ್ರಃ= ಶೂದ್ರನು, ವಿಪ್ರರೂಪಕಃ= ವಿಪ್ರರೂಪನು, ನಹಿ=ಅಲ್ಲವಷ್ಟೇ! ಯತ್= ಯಾವುದು, ಸುಖರೂಪತ್ವಶೂನ್ಯಂ= ಸುಖರೂಪತ್ವರಹಿತವಾದುದೊ, ತತ್=ಅದು, ಸುಖರೂಪಂ ಚ= ಸುಖರೂಪವೂ ಸಹ, ನೈವ= ಅಲ್ಲವೇ ಅಲ್ಲ.

**ಅನುವಾದ–** ವಿಪ್ರರೂಪತ್ವಶೂನ್ಯನಾದ ಶೂದ್ರನು, ವಿಪ್ರರೂಪನಾಗುವುದಿಲ್ಲವಷ್ಟೇ. ಸುಖರೂಪತ್ವದಿಂದ ಶೂನ್ಯನಾದ ಬ್ರಹ್ಮನೂ ಸಹ ಸುಖರೂಪನಾಗುವುದಿಲ್ಲ.

**ಭಾವವಿಲಾಸಿನೀ–** ಉಕ್ತೇಽರ್ಥೇ ದೃಷ್ಟಾಂತಮಾಹ– **ವಿಪ್ರರೂಪತ್ವೇತಿ** ॥ ದಾರ್ಷ್ಟಾಂತಿಕಂ ಯೋಜಯತಿ– **ಸುಖರೂಪತ್ವೇತಿ** ॥ ತತ್ ತಸ್ಮಾದ್ ಅಸ್ಯಾರ್ಥಸ್ಯ ಲೋಕೇ ದೃಷ್ಟತ್ವಾತ್ ॥೭೮೦॥

**ವಿವರಣೆ–** ಬ್ರಾಹ್ಮಣ ಎನಿಸಲು ಬ್ರಾಹ್ಮಣ್ಯವು ಅವನಲ್ಲಿರಬೇಕು. ಬ್ರಾಹ್ಮಣ್ಯ-ವಿಲ್ಲದಿದ್ದವನು ಬ್ರಾಹ್ಮಣನಾಗಲು ಸಾಧ್ಯವಿಲ್ಲ. ಆದರಂತೆ ಮುಕ್ತನಲ್ಲಿ ಸುಖ-ರೂಪತ್ವವಿಲ್ಲದಿದ್ದರೆ ಸುಖರೂಪನಾದ ಮುಕ್ತನಾಗಲು ಸಾಧ್ಯವಿಲ್ಲ.

**ಸುಖರೂಪಾರ್ಥಸದ್ಭಾವೇ ಕಥಂ ತಚ್ಛಬ್ದಲಕ್ಷಣಾ ।**
**ಜಲಪ್ರವಾಹರೂಪೇಽರ್ಥೇ ಕಿಂ ಗಂಗಾಪದಲಕ್ಷ್ಯತಾ ॥ ೭೮೧ ॥**

**ಅರ್ಥ–** ಸುಖರೂಪಾರ್ಥಸದ್ಭಾವೇ=ಸುಖರೂಪವಾದ ಅರ್ಥವು ಇರುವುದಾದರೆ, ತಚ್ಛಬ್ದಲಕ್ಷಣಾ=ಆ ಶಬ್ದಕ್ಕೆ ಲಕ್ಷಣವಾದರೂ, ಕಥಂ=ಹೇಗೆ ಸಂಗತ? ಜಲಪ್ರವಾಹರೂಪೇ= ಜಲಪ್ರವಾಹರೂಪವಾದ, ಅರ್ಥೇ=ವಸ್ತುವಿನಲ್ಲಿ, ಗಂಗಾಪದಲಕ್ಷ್ಯತಾ=ಗಂಗಾಪದದ ಲಕ್ಷ್ಯತ್ವವು, ಕಿಂ?=ಇದೆಯೇನು?

**ಅನುವಾದ–** ಸುಖರೂಪವಾದ ಅರ್ಥವು ಇರುವಾಗ ಸುಖಶಬ್ದಕ್ಕೆ ಹೇಗೆ ಲಕ್ಷಣಾವನ್ನು ಮಾಡುತ್ತೀರಿ? ಜಲಪ್ರವಾಹ ರೂಪವಾದ ಅರ್ಥದಲ್ಲಿ ಗಂಗಾ ಪದಕ್ಕೆ ಯಾರಾದರೂ ಲಕ್ಷಣಾವೃತ್ತಿಯನ್ನು ಸ್ವೀಕರಿಸುತ್ತಾರೆಯೇ?

**ಭಾವವಿಲಾಸಿನೀ–** ಸುಖರೂಪತ್ವಾಭಾವೇ ಸುಖರೂಪಮಪಿ ನೇತ್ಯತ್ರ ಜ್ಞಾಪಕಮಾಹ– **ಸುಖರೂಪಾರ್ಥೇತಿ** ॥ ತತ್ರ ದೃಷ್ಟಾಂತಮಾಹ– **ಜಲೇತಿ** ॥ ೭೮೧ ॥

**ವಿವರಣೆ–** ಕಾರಣವಿಲ್ಲದೇ ಲಕ್ಷಣಾವನ್ನು ಮಾಡುವುದಾದರೆ ಇದು ಘಟ, ಇದು ಪಟ ಎಂಬ ವಾಕ್ಯಗಳಲ್ಲೂ ಲಕ್ಷಣಾವನ್ನು ಏಕೆ ಮಾಡಬಾರದು ಎಂಬ ಅತಿಪ್ರಸಂಗ ಬರುತ್ತದೆ. ವಾಚ್ಯಾರ್ಥಕ್ಕೆ ಅನುಪಪತ್ತಿ ಇದ್ದಾಗ ಲಕ್ಷಣಾವನ್ನು ಆಶ್ರಯಿಸಬೇಕು. ಬ್ರಹ್ಮನು ಸುಖರೂಪನಾದ್ದರಿಂದ ಸುಖರೂಪತ್ವಧರ್ಮವಿದೆ ಎಂದರೆ ವಾಚ್ಯಾರ್ಥವಿದೆ. ಆದ್ದರಿಂದ ಲಕ್ಷಣಾವನ್ನು ಆಶ್ರಯಿಸಲು ಅವಕಾಶವಿಲ್ಲ. 'ಗಂಗಾಯಾಂ ಮೀನಃ' ಎಂಬಲ್ಲಿ ಗಂಗಾಪದಕ್ಕೆ ಜಲಪ್ರವಾಹ ಎಂಬ ಅರ್ಥವಿರುವಾಗ ಲಕ್ಷಣಾವೃತ್ತಿಯನ್ನು ಯಾರಾದರೂ ಆಶ್ರಯಿಸುತ್ತಾರೆಯೇ? ಆದರಂತೆ 'ಆನಂದರೂಪಂ' ಇತ್ಯಾದಿ ವಾಕ್ಯಗಳಿಗೆ ಬ್ರಹ್ಮನಲ್ಲಿ ಆನಂದರೂಪತ್ವವಿದೆ ಎಂದೇ ಅರ್ಥಮಾಡಬೇಕೇ ಹೊರತು ಅಖಂಡಾರ್ಥದಲ್ಲಿ ಲಕ್ಷಣಾ ಮಾಡಬಾರದು.

**ಅತೋ ಮುಕ್ತಿರಮುಕ್ತಿಃ ಸ್ಯಾದಿಯಂ ತಾರ್ಕಿಕಮುಕ್ತಿವತ್ ।**
**ಮುಕ್ತತ್ವಹೇತೋರುಚ್ಛಿತ್ತಿಃ ಸಾಧ್ಯಾಭಾವೇ ತತೋ ಧ್ರುವಾ ॥ ೭೮೨ ॥**

**ಅರ್ಥ–** ಅತಃ=ಸುಖರೂಪವಸ್ತುವೇ ಇಲ್ಲದಿರುವುದರಿಂದ, ಇಯಂ ಮುಕ್ತಿಃ=ಈ ಮೋಕ್ಷವು, ತಾರ್ಕಿಕಮುಕ್ತಿವತ್=ನೈಯಾಯಿಕರ ಮೋಕ್ಷದಂತೆ, ಅಮುಕ್ತಿಃ =ಅಮುಕ್ತಿಯೇ, ಸ್ಯಾತ್=ಆಗುತ್ತದೆ. ತತಃ= ಆದ್ದರಿಂದ, ಸಾಧ್ಯಾಭಾವೇ= ಭಾವಧರ್ಮರೂಪವಾದ

ಸಾಧ್ಯವಿಲ್ಲವಾದರೆ, ಮುಕ್ತತ್ವಹೇತೋಃ= ಮುಕ್ತತ್ವಹೇತುವಿಗೆ, ಉಚ್ಛಿತ್ತಿಃ= ಉಚ್ಚಾಟನೆಯು, ಧ್ರುವಾ=ನಿಶ್ಚಯವು.

**ಅನುವಾದ–** ಆದ್ದರಿಂದ ತಾರ್ಕಿಕರ ಮುಕ್ತಿಯಂತೆ ನಿನ್ನ ಈ ಮುಕ್ತಿಯೂ ಸಹ ಮುಕ್ತಿಯೇ ಆಗುವುದಿಲ್ಲ. ಆದ್ದರಿಂದ ಭಾವಧರ್ಮರೂಪಸಾಧ್ಯವನ್ನು ಅಂಗೀಕರಿಸದಿದ್ದರೆ, ನಿಶ್ಚಯವಾಗಿ ಮುಕ್ತತ್ವಹೇತುವಿಗೆ ಹೇತೂಚ್ಛಿತ್ತಿರೂಪವಾದ ದೋಷವು ಬರುತ್ತದೆ.

**ಭಾವವಿಲಾಸಿನೀ–** ಅಸ್ತು ಸುಖರೂಪತ್ವಾಭಾವೇ ಸುಖರೂಪಸ್ಯಾಭಾವಃ ಪ್ರಕೃತೇ ಕಿಮ್? ಇತ್ಯತ **ಆಹ– ಅತ ಇತಿ** ॥ ಅತಃ ಮೋಕ್ಷೇ ಸುಖರೂಪವಸ್ತ್ವನಂಗೀಕಾರಾತ್ । ತತಃ ಸುಖರೂಪತ್ವಸುಖ-ರೂಪಯೋರವಿನಾಭಾವಾತ್ ಸಾಧ್ಯಾಭಾವೇ ಭಾವಧರ್ಮಧರ್ಮಿತ್ವರೂಪಸಾಧ್ಯಾಭಾವೇ ಸುಖರೂಪತ್ವರೂಪಧರ್ಮಸ್ಯಾಭಾವ ಪ್ರಸಂಗೇನ ತದವಿನಾಭೂತಸುಖರೂಪಮಪಿ ಬ್ರಹ್ಮ ನ ಸ್ಯಾದಿತಿ ಮುಕ್ತತ್ವಹೇತೋರುಚ್ಛಿತ್ತಿಃ ಸ್ಯಾತ್ । ತ್ವದಭಿಲಷಿತಾ ಮುಕ್ತಿರೇವ ನಾಭೂದಿತಿ ಭಾವಃ ॥ ೭೮೨ ॥

**ವಿವರಣೆ–** ಸುಖರೂಪತ್ವವಿಲ್ಲದಿದ್ದರೆ ಸುಖಸ್ವರೂಪವೂ ಇಲ್ಲ. ಇದರಿಂದ ಉಂಟಾಗುವ ಅನರ್ಥವನ್ನು ಹೇಳುತ್ತಿದ್ದಾರೆ. ಎಲ್ಲ ಜೀವರಾಶಿಯೂ ಅಪೇಕ್ಷಿಸುವ ಸುಖ ಅಲ್ಲಿದೆ ಎಂಬ ಕಾರಣದಿಂದ ಮುಕ್ತಿಯನ್ನು ಪುರುಷಾರ್ಥವೆನ್ನುತ್ತಾರೆ. ನೈಯಾಯಿಕರು ನಿರೂಪಿಸುವ ಮುಕ್ತಿಯು ಸುಖರೂಪವಲ್ಲ. ಆದ್ದರಿಂದ ಅದು ಪುರುಷಾರ್ಥವೇ ಅಲ್ಲ. ಅದರಂತೆ ಸುಖರೂಪತ್ವವಿಲ್ಲದಿರುವುದರಿಂದ ನಿಮ್ಮ ರೀತಿಯಿಂದಲೂ ಮುಕ್ತಿ ಇಲ್ಲದೇ ಇರಬೇಕಾದೀತು. ಸುಖರೂಪತ್ವ ಮತ್ತು ಸುಖ ಇವೆರಡೂ ಪರಸ್ಪರ ಅವಿನಾಭೂತ. ಭಾವಧರ್ಮರೂಪಸಾಧ್ಯವಿಲ್ಲದಿದ್ದರೆ ಸುಖರೂಪತ್ವವೆಂಬ ಧರ್ಮವಿಲ್ಲ. ಆಗ ಅದರಿಂದ ಅವಿನಾಭೂತವಾದ ಸುಖವೂ ಇಲ್ಲ. ಸುಖರೂಪತ್ವವೇ ಮೊದಲಾದ ಭಾವಧರ್ಮಗಳಿಗೆ ಮುಕ್ತನು ಆಶ್ರಯನಲ್ಲವಾದರೆ ಮುಕ್ತತ್ವಹೇತುವೂ ಇಲ್ಲದಂತಾಗುತ್ತದೆ. ಈ ರೀತಿ ಅನುಕೂಲತರ್ಕವಿರುವುದರಿಂದ ಅಪ್ರಯೋಜಕತಾಶಂಕೆಯನ್ನು ಮಾಡಲು ಸಾಧ್ಯವಿಲ್ಲ.

ಸರ್ವಶ್ರುತಿಪುರಾಣೇಷು ಸುಖಭಾವೋಕ್ತಿತಸ್ತಥಾ ।
ಮುಕ್ತೌ ನ ಗ್ರಾಹ್ಯಮೇವೈತತ್ ಸುಖಾಭಾವಮತಂ ಬುಧೈಃ ॥
ಸೋಽನಾನಂದಾದ್ ವಿಮುಕ್ತಃ ಸನ್ನಾನಂದೀ ಭವತಿ ಸ್ಫುಟಮ್ ।
ನಿರ್ಗುಣೇ ಬ್ರಹ್ಮಣಿ ಮಯಿ ಧಾರಯನ್ ವಿಶದಂ ಮನಃ ॥
ಪರಮಾನಂದಮಾಪ್ನೋತಿ ಯತ್ರ ಕಾಮೋಽವಸೀಯತೇ ।
ನ ವಿಷ್ಣುಸದೃಶಂ ದೈವಂ ನ ಮೋಕ್ಷಸದೃಶಂ ಸುಖಮ್ ॥
ನ ವೇದಸದೃಶಂ ವಾಕ್ಯಂ ನ ವರ್ಣೋಂಕಾರಸಂಮಿತಃ ।
ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ॥

**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧಿ ।**
**ಅತೋ ಮೋಕ್ಷೇ ಸುಖಾಭಾವ ಇತಿ ಯತ್ಕಿಂಚಿದೇವ ಹಿ ॥**

**-ಅನುವ್ಯಾಖ್ಯಾನ - ಅಧ್ಯಾಯ ೪/ಪಾದ ೨**

ಮುಕ್ತಿಯಲ್ಲಿ ಸುಖವಿದೆ ಎಂದು ನೂರಾರು ಶ್ರುತಿಪುರಾಣವಾಕ್ಯಗಳು ಪ್ರತಿಪಾದಿಸುತ್ತಿವೆ. ಮುಕ್ತಿಯಲ್ಲಿ ದುಃಖದಿಂದ ಬಿಡುಗಡೆಯನ್ನು ಹೊಂದಿ ಆನಂದಸ್ವರೂಪನೇ ಆಗುತ್ತಾನೆ. ಮುಕ್ತನಾದ ಜೀವನು ಪರಮಾತ್ಮನ ಅಖಂಡ-ಧ್ಯಾನದಿಂದ ಉತ್ತಮವಾದ ಆನಂದವನ್ನು ಹೊಂದುತ್ತಾನೆ. ಅಲ್ಲಿ ಅವನ ಅಭೀಷ್ಟಗಳೆಲ್ಲವೂ ಪೂರ್ಣವಾಗುತ್ತವೆ. ವಿಷ್ಣುವಿಗೆ ಸದೃಶನಾದ ದೇವನಿಲ್ಲ, ಮೋಕ್ಷಕ್ಕೆ ಸದೃಶವಾದ ಸುಖವಿಲ್ಲ, ಹೀಗೆ ಶ್ರುತಿಗಳು ನಿರೂಪಿಸುತ್ತಿವೆ. ಆದ್ದರಿಂದ ಮುಕ್ತನಿಗೆ ಆನಂದರೂಪತ್ವಧರ್ಮವನ್ನು ಒಪ್ಪಬೇಕು.

**ಏವಂ ಚ ನಿರ್ಗುಣಂ ಬ್ರಹ್ಮ ನಿರ್ಗುಣಾದಿಶ್ರುತೇರಪಿ ।**
**ಉಕ್ತರೀತ್ಯಾ ಬಹಿರ್ಭೂತಮಶ್ರೌತಮಭವದ್ ಧ್ರುವಮ್ ॥ ೭೮೩ ॥**

**ಅರ್ಥ–** ಏವಂ ಚ=ಈ ರೀತಿಯಾಗಿ, ನಿರ್ಗುಣಂ ಬ್ರಹ್ಮ=ಗುಣರಹಿತನಾದ ಬ್ರಹ್ಮನು, ನಿರ್ಗುಣಾದಿಶ್ರುತೇರಪಿ=ಕೇವಲೋ ನಿರ್ಗುಣಶ್ಚ ಮುಂತಾದ ಶ್ರುತಿಗಳಿಂದಲೂ ಸಹ, ಉಕ್ತರೀತ್ಯಾ=ಹಿಂದೆ ಹೇಳಿದಂತೆ, ಬಹಿರ್ಭೂತಂ=ಬಹಿರ್ಭೂತನು, ಅಶ್ರೌತಂ= ಶ್ರುತಿಪ್ರತಿಪಾದ್ಯನಲ್ಲವೆಂದು, ಧ್ರುವಂ =ನಿಶ್ಚಯವಾಗಿ, ಅಭವತ್=ಆಯಿತು.

**ಅನುವಾದ– ಈ ರೀತಿಯಲ್ಲಿ ನಿರ್ಗುಣಬ್ರಹ್ಮನು ನಿರ್ಗುಣಶ್ರುತಿಯಲ್ಲಿಯೂ ಪ್ರತಿಪಾದ್ಯನಲ್ಲವಾದುದರಿಂದ ನಾನು ಹೇಳಿದ ರೀತಿಯಲ್ಲಿ ನಿಶ್ಚಯವಾಗಿ ಶ್ರುತಿಯಿಂದ ಬರ್ಹಿಭೂತನಾದನು.**

**ಭಾವವಿಲಾಸಿನೀ– ಪರಮಪ್ರಕೃತಮುಪಸಂಹರತಿ– ಏವಂಚೇತಿ ॥ ನಞಾ ಪರಶುನಾ ಶೈವಂ ಬ್ರಾಹ್ಮಂ ವೈಷ್ಣವಂ ಚೇತ್ಯಾದ್ಯುಕ್ತರೀತ್ಯಾ ಚ ॥ ೭೮೩ ॥**

**ವಿವರಣೆ–** ಬ್ರಹ್ಮನ ವಿಷಯದಲ್ಲಿ ಶ್ರುತಿಗಳು ಮಾತ್ರ ಪ್ರಮಾಣ. ಪರರಿಗೆ ಅಭಿಪ್ರೇತನಾದ ಧರ್ಮರಹಿತನಾದ ಬ್ರಹ್ಮನನ್ನು ಯಾವ ಶ್ರುತಿಯೂ ಪ್ರತಿಪಾದಿಸುತ್ತಿಲ್ಲ. ಎಲ್ಲ ಶ್ರುತಿಗಳೂ ಬ್ರಹ್ಮನ ಸಾವಿರಾರು ಮಹಿಮೆಗಳನ್ನು ಪ್ರತಿಪಾದಿಸುತ್ತಿವೆ. 'ಕೇವಲೋ ನಿರ್ಗುಣಶ್ಚ' ಶ್ರುತಿಯು ಬ್ರಹ್ಮನಲ್ಲಿ ಪ್ರಾಕೃತಧರ್ಮಗಳನ್ನು ನಿಷೇಧಿಸುತ್ತದೆ, ಹೊರತಾಗಿ ಸರ್ವಾತ್ಮನಾ ಧರ್ಮಗಳನ್ನು ನಿಷೇಧಿಸುವುದಿಲ್ಲ. ಅನಿರ್ಗುಣ ಎಂದು ಪದಚ್ಛೇದ ಮಾಡಬಹುದು ಎಂದು ಹಿಂದೆ ಹೇಳಲಾಗಿದೆ. ಆ ಪಕ್ಷದಲ್ಲಿ ಧರ್ಮರಾಹಿತ್ಯವನ್ನು ಪ್ರತಿಪಾದಿಸುವ ವಾಕ್ಯವೇ ಇಲ್ಲ ಎಂದಾಗುತ್ತದೆ. ಹೀಗೆ ನಿರ್ಗುಣಶ್ರುತಿಯೂ

ನಿರ್ಗುಣಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲ. ಬೇರೆ ಶ್ರುತಿಗಳಂತೂ ಸಗುಣನನ್ನೇ ಪ್ರತಿಪಾದಿಸುತ್ತವೆ ಎಂದು ನೀನೇ ಒಪ್ಪುತ್ತೀಯೆ. ಆದ್ದರಿಂದ ನಿರ್ಗುಣಬ್ರಹ್ಮನು ಅಪ್ರಾಮಾಣಿಕ ಹಾಗೂ ಪ್ರಮಾಣವಿರುದ್ಧನೂ ಆಗಿದ್ದಾನೆ.

**ಶ್ರುತಿಸ್ತ್ರೀಸಂಗಶೂನ್ಯಂ ತದ್ ಬ್ರಹ್ಮ ಭಿಕ್ಷುರಭೂತ್ ತವ ॥ ೭೮೪ ॥**

**ಅರ್ಥ–** ತತ್=ಆದ್ದರಿಂದ, ಶ್ರುತಿಸ್ತ್ರೀಸಂಗಶೂನ್ಯಂ=ಶ್ರುತಿಸ್ತ್ರೀಯ ಸಂಬಂಧವಿಲ್ಲದಿರುವ, ತವ=ನಿನ್ನ ಬ್ರಹ್ಮ=ಬ್ರಹ್ಮನು, ಭಿಕ್ಷುಃ=ಭಿಕ್ಷುಕನು, ಅಭೂತ್=ಆದನು.

**ಅನುವಾದ– ಶ್ರುತಿಪ್ರತಿಪಾದ್ಯನಲ್ಲವಾದಕಾರಣ ಶ್ರುತಿಯೆಂಬ ಹೆಂಡತಿಯ ಸಂಗದಿಂದ ಶೂನ್ಯನಾದ ನಿನ್ನ ಬ್ರಹ್ಮನು ಭಿಕ್ಷುವಾದನು.**

**ಭಾವವಿಲಾಸಿನೀ–** ತತ್ ತಸ್ಮಾದ್ ವಿವಾಹವತ್ ಸ್ವಾಭಾವಿಕಸಂಬಂಧರೂಪಮುಖ್ಯವೃತ್ತ್ಯಾ ಪ್ರತಿಪಾದಕಶ್ರುತ್ಯಭಾವಾತ್ ಸರ್ವಥಾಽವಾಚ್ಯಸ್ಯ ಲಕ್ಷಣಾಯಾಮಪ್ಯಯೋಗ್ಯ ತಯಾಽಮುಖ್ಯ-ವೃತ್ತ್ಯಾ ಪ್ರತಿಪಾದಕಶ್ರುತ್ಯಭಾವಾಚ್ಚ ಶ್ರುತಿಸ್ತ್ರೀಸಂಗಶೂನ್ಯಂ ಶ್ರುತಿಸ್ತ್ರೀಸಂಬಂಧಮಾತ್ರರಹಿತಂ ತವ ಬ್ರಹ್ಮ ಭಿಕ್ಷುರಭೂತ್ ಸ್ವಸ್ವರೂಪಸಿದ್ಧ್ಯೈ ಪ್ರಮಾಣಾಂತರಗವೇಷಣಾಖ್ಯ-ಭಿಕ್ಷಾಟನಪರೋಽಭೂತ್ ॥ ೭೮೪ ॥

**ವಿವರಣೆ–** ವಿವಾಹಿತನಿಗೆ ಹೆಣ್ಣಿನ ಸಂಬಂಧ ಸಹಜವಾದುದು. ವಿವಾಹಿತನಲ್ಲದವನಿಗೆ ಹೆಣ್ಣಿನ ಸಂಬಂಧವೇ ಇಲ್ಲ. ಪ್ರಕೃತ ಮುಖ್ಯವೃತ್ತಿಯಿಂದ ಬ್ರಹ್ಮನನ್ನು ಪ್ರತಿಪಾದಿಸುವ ಶ್ರುತಿಗಳಿಲ್ಲ. ಬ್ರಹ್ಮನಿಗೆ ನಿಮ್ಮ ಮತದಲ್ಲಿ ವಾಚ್ಯತ್ವವನ್ನೇ ಅಂಗೀಕರಿಸಿಲ್ಲ. ಆದ್ದರಿಂದ ಲಕ್ಷಣಾವೃತ್ತಿಯಿಂದಲೂ ಬ್ರಹ್ಮನನ್ನು ಪ್ರತಿಪಾದಿಸುವ ಶ್ರುತಿ ಇಲ್ಲ. ಹೀಗೆ ನಿಮ್ಮ ಬ್ರಹ್ಮನು ಶ್ರುತಿಯ ಸಂಬಂಧವೇ ಇಲ್ಲದವನು. ಅನಾಥನಾದ ಭಿಕ್ಷುಕನು ಹೇಗೆ ತನ್ನ ಜೀವರಕ್ಷಣೆಗಾಗಿ ಆಹಾರಕ್ಕಾಗಿ ಪರದಾಡುವನೋ ಅದರಂತೆ ನಿನ್ನ ಬ್ರಹ್ಮನೂ ಸಹ ತನ್ನ ಅಸ್ತಿತ್ವವನ್ನು ಸಾಧಿಸಲು ಯಾವ ಪ್ರಮಾಣಗಳೂ ಇಲ್ಲದೇ ಪ್ರಮಾಣಭಿಕ್ಷೆ ಬೇಡುವ ದುರವಸ್ಥೆಗೆ ಒಳಗಾಗಿದ್ದಾನೆ.

**ಅನ್ಯಾಪೋಹೇನ ತತ್ಸಂಗೇ ಛದ್ಮಸ್ತ್ರೀಸಂಗದೋಷತಃ ।**
**ಭ್ರಷ್ಟಸ್ವಧರ್ಮಮಿತ್ಯಾರ್ಯೈಸ್ತ್ಯಕ್ತಂ ಬಾಹ್ಯಾನುಪಾಶ್ರಯತ್ ॥ ೭೮೫ ॥**

**ಅರ್ಥ–** ಅನ್ಯಾಪೋಹೇನ=ಮುಖ್ಯನಾದ ಪತಿಯ ತ್ಯಾಗದಿಂದ, ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗದೆ ಅಸತ್ಯತ್ವ ಮೊದಲಾದ ಅರ್ಥದ ತ್ಯಾಗದಿಂದ, ತತ್ಸಂಗೇ=ಶ್ರುತಿಸ್ತ್ರೀಯ ಸಹವಾಸವು ಆಗುತ್ತಿರಲು, ಛದ್ಮಸ್ತ್ರೀಸಂಗದೋಷತಃ=ಮೋಸದಿಂದ ಸ್ತ್ರೀಸಂಗ ಮಾಡಿದ ದೋಷದಿಂದ ಭ್ರಷ್ಟವಾದ ಗಾರ್ಹಸ್ಥ್ಯಧರ್ಮವುಳ್ಳವನು, ತ್ಯಜಿಸಲ್ಪಟ್ಟ ಸತ್ಯತ್ವವೇ ಮೊದಲಾದ

ಧರ್ಮವುಳ್ಳವನು, ಇತಿ=ಈ ಕಾರಣದಿಂದ, ಆರ್ಯ್ಯೈಃ=ಸದಾಚಾರಸಂಪನ್ನರಿಂದ,ತ್ಯಕ್ತಂ ಪರಿತ್ಯಜಿಸಲ್ಪಟ್ಟವನಾಗಿ, ಬಾಹ್ಯಾನ್=ಶೂನ್ಯವಾದಿಗನ್ನು ಉಪಾಶ್ರಯತ್=ಆಶ್ರಯಿಸಿದನು.

**ಅನುವಾದ–** ವಿರುದ್ಧ ಧರ್ಮರಾಹಿತ್ಯಮುಖದಿಂದ ಶ್ರುತಿಯ ಸಂಗವನ್ನು ಮಾಡಿದರೆ (ಶ್ರುತಿಪ್ರತಿಪಾದ್ಯನಾದರೆ) ಮೋಸದಿಂದ ಸ್ತ್ರೀಸಂಗ ಮಾಡಿದ ದೋಷದಿಂದ ಭಿಕ್ಷುವಾದ ನಿಮ್ಮ ಬ್ರಹ್ಮನು ಧರ್ಮಭ್ರಷ್ಟನಾಗಿ, ಶ್ರೌತಾಚಾರಸಂಪನ್ನರಾದ ಆರ್ಯರಿಂದ ಪರಿತ್ಯಜಿಸಲ್ಪಟ್ಟವನಾಗಿ ವೇದಭ್ರಷ್ಟರನ್ನು ಆಶ್ರಯಿಸಿದನು.

**ಭಾವವಿಲಾಸಿನೀ–** ನನು ಸ್ವರೂಪಮಾತ್ರಲಕ್ಷಣಯಾಽತದ್ವ್ಯಾವೃತ್ತ್ಯಾ ವಾ ಬ್ರಹ್ಮಣೋಽಪಿ ಶ್ರುತಿಬೋಧ್ಯತ್ವಾಂಗೀಕಾರಾತ್ ಕಥಂ ಪ್ರಾಗುಕ್ತಭಿಕ್ಷುತ್ವಮಿತ್ಯತ ಆಹ– **ಅನ್ಯಾಪೋಹೇನೇತಿ ॥** ಅನ್ಯಸ್ಯಾಃ ಸರ್ವಥಾ ಮುಖ್ಯವೃತ್ತೇಃ ತ್ರಿಗುಣರಾಹಿತ್ಯರೂಪಸಂಭವನ್ಮುಖ್ಯವೃತ್ತೇಃ ಅನ್ಯಸ್ಯ ಪ್ರತಿಪಾದ್ಯಾರ್ಥಾದನ್ಯಸ್ಯಾಸತ್ಯತ್ವಾದೇಶ್ಚಾಪೋಹೇನ ತ್ಯಾಗೇನ । ಅನ್ಯಸ್ಯ ಮುಖ್ಯಭರ್ತುರ-ಪೋಹೇನೇತಿ ಧ್ವನಿಃ । ತತ್ಸಂಗೇ ಶ್ರುತಿಸ್ತ್ರೀಸಂಗೇ ವ್ಯಭಿಚಾರವತ್ ಅಯೋಗ್ಯಸಂಬನ್ಧೇನ ಸಂಗ ಇತಿ ಯಾವತ್ । ಛದ್ಮಸ್ತ್ರೀಸಂಗದೋಷತಃ ಛದ್ಮನಾ ಸ್ವಘಟಕಮುಖ್ಯವೃತ್ತಿಚ್ಛಾದನೇನ ಸಂಭವನ್ಮುಖ್ಯವೃತ್ತಿಚ್ಛಾದನೇನ ಭಾವತಯಾ ಲಘುಭೂತಸಾರ್ವಜನೀನಸತ್ಯತ್ವಾದಿ-ಧರ್ಮಚ್ಛಾದನೇನ ಚ ಸ್ತ್ರೀಸಂಗಾತ್ ಶ್ರುತ್ಯಾಖ್ಯ ಸ್ತ್ರೀಸಂಗಾತ್ ಪ್ರಾಪ್ತದೋಷತಃ ಆವಶ್ಯಕಮುಖ್ಯವೃತ್ತಿತ್ಯಾಗಾಖ್ಯದೋಷಾತ್ ಸಂಭವನ್ಮುಖ್ಯವೃತ್ತಿತ್ಯಾಗಾಖ್ಯದೋಷಾತ್ ಬಾಹ್ಯಮತಪ್ರವೇಶಾಖ್ಯದೋಷಾಚ್ಚ । ಭಿಕ್ಷೋಸ್ತು ವೇಷಾಂತರೇಣ ಸ್ತ್ರೀಸಂಗಜಾತಾನೃತಾ ಬ್ರಹ್ಮ-ಚರ್ಯದೋಷತ ಇತಿ ಧ್ವನಿಃ । ಭ್ರಷ್ಟಸ್ವಧರ್ಮಂ ಅಪಗತಸತ್ಯತ್ವಾದಿಸ್ವಾಪೇಕ್ಷಿತಧರ್ಮಮ್ । ಅಯೋಗ್ಯಸಂಬನ್ಧೇನ ಚ ಬ್ರಹ್ಮಣಃ ಶ್ರುತಿಸ್ತ್ರೀಸಂಗೋ ಭಿಕ್ಷೋರ್ಗಾರ್ಹಸ್ಥ್ಯವನ್ನ ಸಭಾಯೋಗ್ಯೋ ನಾಪಿ ಭಿಕ್ಷುತ್ವಾಪಾದಕಃ । ಸ್ವರೂಪಮಾತ್ರಲಕ್ಷಣಾಯಾಮತದ್ವ್ಯಾವೃತ್ತೌ ಚ ಸತ್ಯತ್ವಾದಿಬ್ರಹ್ಮಧರ್ಮಾಣಾಂ ತವಬ್ರಹ್ಮಣೋಪೇಕ್ಷಿತನಿರ್ಗುಣತತ್ತ್ವೈಕ್ಯಾದಿಧರ್ಮಾಣಾಂ ಚ ಅಲಾಭಾತ್ ತ್ವಯೈವ ತ್ಯಾಗೇನ ಮಾನಾಂತರೇಣಾಪಿ ಸಾಧನಾಯೋಗಾತ್ । ಇಯಾಂಸ್ತು ವಿಶೇಷಃ । ಪ್ರಾಗ್ ಭಿಕ್ಷುರೇವ । ಇದಾನೀಮಯೋಗ್ಯಸಂಬನ್ಧೇನ ತ್ವದುಷ್ಟಕ್ರಿಯಾಖ್ಯದೂತ್ಯಾ ಪುನಸ್ಸ್ತ್ರೀಸಂಗಾದ್ ದುರ್ಭಿಕ್ಷುರಿತಿ । ಆರ್ಯೈಃ ಶಬ್ದಾರ್ಥಕುಶಲೈರ್ವಿವೇಕಿಭಿಸ್ತ್ಯಕ್ತಮ್ । ಅಪ್ರಾಮಾಣಿಕತ್ವಾದುಪೇಕ್ಷಿತಮ್ । ಸ್ವೋಕ್ತನಿರ್ಗುಣತ್ವೈಕ್ಯಸತ್ಯತ್ವಾದಿಧರ್ಮಾಣಾ-ಮಪ್ಯಪಲಾಪಿನಾಮುನ್ಮತ್ತಾನಾಮೇವ ಯೋಗ್ಯಂ ಸದ್ ಬಾಹ್ಯಾನ್ ಶೂನ್ಯವಾದಿನಃ ಸರ್ವಧರ್ಮರಹಿತಶೂನ್ಯೇನ ಜೀವೈಕ್ಯವಾದಿನ ಉಪಾಶ್ರಯದಿತ್ಯರ್ಥಃ । ಶಶಶೃಂಗಂ ವಾ ಶೂನ್ಯಂ ವಾ ತೇ ಬ್ರಹ್ಮ ಸ್ಯಾತ್ ನ ಶ್ರೌತಮತಯೋಗ್ಯಮಿತಿ ಭಾವಃ । ದುರ್ಭಿಕ್ಷುರಪಿ ಆರ್ಯೈಸ್ತ್ಯಕ್ತಃ ಕಾಪಾಲಿಕಾದೀನುಪಾಶ್ರಯತ ಇತಿ ಧ್ವನಿಃ ॥ ೭೮೫ ॥

**ವಿವರಣೆ–** ನಿರ್ಗುಣಬ್ರಹ್ಮನು ಶ್ರುತಿಪ್ರತಿಪಾದ್ಯನಲ್ಲ ಎಂದು ಹೇಳಬಾರದು. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಮುಂತಾದ ವಾಕ್ಯಗಳು ಬ್ರಹ್ಮನನ್ನು ಪ್ರತಿಪಾದಿಸುತ್ತಿವೆ. ಆದರೆ

ಆ ಪದಗಳು ಸತ್ಯತ್ವಾದಿಧರ್ಮಗಳನ್ನು ಹೇಳುತ್ತಿಲ್ಲ. ಅಸತ್ಯತ್ವದ ನಿಷೇಧವನ್ನು ಮಾಡಿ ಬ್ರಹ್ಮಸ್ವರೂಪವನ್ನು ಮಾತ್ರ ಹೇಳುತ್ತವೆ. ಹೀಗೆ ಶ್ರುತಿಸ್ತ್ರೀಯ ಸಂಬಂಧವಿರುವುದರಿಂದ ನಮ್ಮ ಬ್ರಹ್ಮ ಭಿಕ್ಷುವಲ್ಲ. ಶ್ರುತಿಗಳು ಬ್ರಹ್ಮನಲ್ಲಿ ಸುಖಾದಿಧರ್ಮಗಳಿವೆ ಎಂದು ಮುಖ್ಯಾರ್ಥವನ್ನು ಪ್ರತಿಪಾದಿಸದೆ, ಅಸುಖಾದಿಧರ್ಮಗಳ ನಿಷೇಧವನ್ನು ಮಾಡುತ್ತಿವೆ ಎಂದು ಶಂಕಿಸಿದರೆ ಉತ್ತರವನ್ನು ಹೇಳುತ್ತಾರೆ.

ಹಾಗಾದರೆ ಶ್ರುತಿಯು ಮುಖ್ಯಾರ್ಥರೂಪವಾದ ಪತಿಯನ್ನು ಬಿಟ್ಟು ಬೇರೊಬ್ಬನ ಸಂಬಂಧವನ್ನು ಮಾಡಿದಂತಾಗಿ ವ್ಯಭಿಚಾರಿಣಿಯಾಗುತ್ತದೆ. ವಿವಾಹಿತನಾಗಿ ತನ್ನ ಸ್ತ್ರೀಯೊಂದಿಗೆ ರಮಿಸುವುದನ್ನು ಬಿಟ್ಟು ಸಂನ್ಯಾಸಿಯ ವೇಷವನ್ನು ಧರಿಸಿದ ಮೇಲ್ನೋಟಕ್ಕೆ ಸಂನ್ಯಾಸಿಯಂತೆ ವರ್ತಿಸುತ್ತಾ ಚಾಪಲ್ಯದಿಂದ ವ್ಯಭಿಚಾರಿಣಿಯಾದ ಸ್ತ್ರೀಯ ಸಂಪರ್ಕವನ್ನು ಮಾಡುವವನು ಧರ್ಮಭ್ರಷ್ಟ ಅವನನ್ನು ಯಾರೂ ಆದರಿಸುವುದಿಲ್ಲ. ಅದರಂತೆ ನಿಮ್ಮ ಬ್ರಹ್ಮನಿಗೂ ಸಹ ಶ್ರುತಿಸ್ತ್ರೀಸಂಗವು ಸಮಂಜಸವಲ್ಲ.

ಸತ್ಯಜ್ಞಾನಾದಿವಾಕ್ಯಗಳಿಗೆ ಕೇವಲ ಬ್ರಹ್ಮಸ್ವರೂಪದಲ್ಲಿ ಲಕ್ಷಣಾ ಎಂದು ಹೇಳಿದಾಗ ಅಥವಾ ಅಸತ್ಯತ್ವಾದಿಧರ್ಮಗಳ ನಿಷೇಧದಲ್ಲಿ ಲಕ್ಷಣಾ ಎಂದಾಗಲೂ ಸಹ ನಿನಗೆ ಅಪೇಕ್ಷಿತವಾದ ನಿರ್ಗುಣತ್ವ, ಐಕ್ಯ ಮುಂತಾದ ಯಾವ ಧರ್ಮಗಳ ಲಾಭವೂ ಆಗುವುದಿಲ್ಲ. ಸತ್ಯತ್ವಾದಿಧರ್ಮರಹಿತನಾದ ಇಂತಹ ಬ್ರಹ್ಮನನ್ನು ಪೂಜಿಸುವುದಿಲ್ಲ. ಹಿಂದಿನ ಶ್ಲೋಕದಲ್ಲಿ ಬ್ರಹ್ಮನನ್ನು ಕೇವಲ ಭಿಕ್ಷು ಎಂದಿದ್ದರು. ಈ ಶ್ಲೋಕದಲ್ಲಿ ಬ್ರಹ್ಮನನ್ನು ದುರ್ಭಿಕ್ಷುವಿಗೆ ಹೋಲಿಸಿದ್ದಾರೆ. ಸ್ವಧರ್ಮಭ್ರಷ್ಟನನ್ನು ಆರ್ಯರು ಎಂದಿಗೂ ಸ್ವೀಕರಿಸುವುದಿಲ್ಲ. ಧರ್ಮರಹಿತನಾದ ಬ್ರಹ್ಮನು ಬೌದ್ಧರ ಶೂನ್ಯಸದೃಶನಾಗಿ ಧರ್ಮಬಾಹಿರನಾದವನು. ಅಥವಾ ನಿಮ್ಮ ಬ್ರಹ್ಮನು ಅಪ್ರಾಮಾಣಿಕವಾದ ಶಶಶೃಂಗದಂತಾದ. ಆದ್ದರಿಂದ ವೈದಿಕಮತಗಳಿಗೆ ಯೋಗ್ಯನಲ್ಲ ಎಂದು ನಮ್ಮ ಉತ್ತರ.

**ಅಸ್ಮದ್‌ಬ್ರಹ್ಮಾಪ್ರತಿದ್ವಂದ್ವಂ ಸರ್ವಮಾನಮನೋರಮಮ್ ।**
**ಅನಂತಸುಗುಣಸ್ತೋಮಮುಖೇನ ಪರಿತೋ ದಿಶಮ್ ।**
**ಅಪಾರೋಪನಿಷನ್ನಾರೀಮುಖಾನ್ಯಾಚುಂಬ್ಯ ಜೃಂಭತೇ ॥ ೭೮೬ ॥**

**ಅರ್ಥ–** ಅಸ್ಮದ್‌ಬ್ರಹ್ಮ=ನಾವು ಅಂಗೀಕರಿಸಿರುವ ಬ್ರಹ್ಮನು, ಸರ್ವಮಾನ ಮನೋರಮಂ= ಸಮಸ್ತಪ್ರಮಾಣಗಳಿಂದಲೂ ಭೂಷಿತನಾಗಿ ಸುಂದರನಾಗಿರುವನು. ಅನಂತಸುಗುಣಸ್ತೋಮಮುಖೇನ=ಅನಂತವಾದಜ್ಞಾನಾನಂದಾದಿ ಗುಣಗಳ ಗುಂಪಿನ ಮುಖದಿಂದ, ದಿಶಂ=ದಿಕ್ಕನ್ನು ಪರಿತಃ=ವ್ಯಾಪಿಸಿ, ಅಪಾರೋಪನಿಷನ್ನಾರೀಮುಖಾನಿ= ಅಪಾರವಾದ ಉಪನಿಷತ್ತೆಂಬ ಹೆಣ್ಣಿನ ಮುಖವನ್ನು ಆಚುಂಬ್ಯ= ಚೆನ್ನಾಗಿ ಚುಂಬಿಸುತ್ತಾ, ಜೃಂಭತೇ=ವಿಹರಿಸುತ್ತಾನೆ.

**ಅನುವಾದ–** ನಮ್ಮ ಬ್ರಹ್ಮನಾದರೂ ಅಸದೃಶನಾದವನು. ಎಲ್ಲ ಪ್ರಮಾಣಗಳಿಂದ ಗುಣಗಳನ್ನು ಅರ್ಪಿಸಲ್ಪಟ್ಟು ಸುಂದರನಾದವನು. ಅಂತಹ ಅನಂತ ಗುಣಸ್ತೋಮ ಎಂಬ ಮುಖದಿಂದ ಸರ್ವತ್ರ ವ್ಯಾಪ್ತವಾದ ಲಕ್ಷ್ಮೀದೇವಿಯಿಂದ ಅಭಿಮನ್ಯವಾದ ಅನಂತ ಉಪನಿಷತ್ತುಗಳೆಂಬ ಸಾಧ್ವಿಸುಂದರನಾರಿಯರ ಮುಖಗಳನ್ನು ಚೆನ್ನಾಗಿ ಚುಂಬಿಸಿ ಶೋಭಿಸುತ್ತಿದ್ದಾನೆ.

**ಭಾವವಿಲಾಸಿನೀ–** ಅನುಮಾನಫಲಮಾಹ– **ಅಸ್ಮದ್ಬ್ರಹ್ಮೇತಿ** ॥ ನಿರ್ಗುಣನಿರಾಕರಣಾದಪ್ರತಿದ್ವನ್ದ್ವಮ್। ಮಹತ್ತ್ವೇ ಸತ್ಯಲೌಕಿಕದಿವ್ಯರೂಪವತ್ತ್ವಾದ್ ಅವ್ಯಭಿಚರಿತಸ್ವಾತನ್ತ್ರ್ಯಾದಿಲಿಂಗವತ್ತ್ವಾತ್ ಸಕಲಶಬ್ದಪ್ರವೃತ್ತಿನಿಮಿತ್ತವತ್ತ್ವಾಚ್ಚ ಸರ್ವಮಾನಮನೋರಮಮ್ । ಲಕ್ಷ್ಮ್ಯಾಃ ವೇದಾಭಿಮಾನಿತ್ವಾತ್ ಶೃಂಗಾರಮುದ್ರಯಾ ವರ್ಣಯತಿ– **ಅಪಾರೇತಿ** ॥ ವೇದಸ್ಯ ವೇದಾಭಿಮಾನಿನ್ಯಾಃ ಶ್ರಿಯೋ ವೇದ್ಯಸ್ಯ ಹರೇಶ್ಚ ವ್ಯಾಪ್ತತ್ವಾತ್ಸರ್ವತೋದಿಶಮಿತ್ಯುಕ್ತಮ್ । ವೈದಿಕಪದಾನಾಮನಂತತ್ವಾತ್ ಅಪಾರಾಣಿ ಉಪನಿಷನ್ನಾರೀಮುಖಾನೀತ್ಯುಕ್ತಮ್ । ಪ್ರತಿಪಾದಕತನ್ಮುಖಯೋಗ್ಯಮುಖಾನಿ ಪ್ರತಿಪಾದ್ಯಗುಣಾ ಏವೇತ್ಯಾಶಯೇನೋಕ್ತಮ್– **ಅನಂತೇತಿ**। ಅನೇನ ಶ್ರೀಶ್ರೀಶಯೋರಪಿ ವಿಶ್ವರೂಪತಯಾ ವಿಶ್ವತೋಮುಖತ್ವಂ ಚ ಧ್ವನಿತಮ್ ॥ ೭೮೬ ॥

**ವಿವರಣೆ–** ಭಾವಧರ್ಮವನ್ನು ಬ್ರಹ್ಮನಲ್ಲಿ ಸಾಧಿಸುವ ಅನುಮಾನದ ಫಲವನ್ನು ಹೇಳುತ್ತಿದ್ದಾರೆ. ನಮ್ಮ ಬ್ರಹ್ಮನು ಅಸದೃಶನಾದವನು. ನಿರ್ಗುಣತ್ವವನ್ನು ನಿರಾಕರಿಸಿರುವುದರಿಂದ ಬ್ರಹ್ಮನಲ್ಲಿ ಅನಂತಗುಣಪೂರ್ಣತ್ವವು ಸಿದ್ಧವಾಗುತ್ತದೆ. ಗುಣಪರಿಪೂರ್ಣನಾದ ಮತ್ತೊಬ್ಬ ವ್ಯಕ್ತಿ ಇಲ್ಲ. ಬ್ರಹ್ಮನು ಎಲ್ಲ ಪ್ರಮಾಣಗಳಿಂದ ಅಲಂಕೃತನಾಗಿ ಸುಂದರನಾಗಿರುವನು. ಸಮಸ್ತ ಶಬ್ದರಾಶಿಯೂ ಅವನನ್ನು ಶಕ್ತಿವೃತ್ತಿಯಿಂದಲೇ ಪ್ರತಿಪಾದಿಸುತ್ತಿದೆ. ಅಲೌಕಿಕವಾದ ದಿವ್ಯರೂಪವು ಅವನದ್ದಾಗಿದೆ. ಅವನಲ್ಲಿರುವ ಸ್ವಾತಂತ್ರ್ಯವೇ ಮೊದಲಾದ ಗುಣಗಳಿಗೆ ಭಂಗವಿಲ್ಲ. ವೇದಾಭಿಮಾನಿಯಾದ ಲಕ್ಷ್ಮೀದೇವಿಯು ಎಲ್ಲ ದಿಕ್ಕುಗಳಲ್ಲೂ ವ್ಯಾಪ್ತಳಾಗಿದ್ದಾಳೆ. ಪರಮಾತ್ಮನೂ ವ್ಯಾಪ್ತನಾಗಿದ್ದಾನೆ. ಪರಮಾತ್ಮನು ಅನಂತಮುಖಗಳನ್ನು ಹೊಂದಿದ್ದಾನೆ. ಸಹಸ್ರಶೀರ್ಷಾ ಪುರುಷಃ ಎಂದು ಪುರುಷಸೂಕ್ತವು ಅವನನ್ನು ಬಣ್ಣಿಸುತ್ತಿದೆ. ವೈದಿಕಪದಗಳೂ ಅನಂತವಾಗಿವೆ. ಅದರ ಅಭಿಮಾನಿಯಾದ ಲಕ್ಷ್ಮೀದೇವಿಯ ಮುಖಗಳೂ ಅನಂತವಾಗಿವೆ. ಶ್ರೀಹರಿಯು ಉಪನಿಷತ್ತೆಂಬ ನಾರಿಯ ಮುಖಗಳನ್ನು ಚುಂಬಿಸುತ್ತಾ ವಿಹರಿಸುತ್ತಾನೆ.

**ಅತೋಽನುಕೂಲತರ್ಕಾಖ್ಯಮಂತ್ರಿಣಾ ಸರ್ವತೋದಿಶಮ್ ।**
**ಪಾಲಿತಾ ಮೇಽನುಮಾನಾಖ್ಯರಾಜಾಜ್ಞಾ ರಾಜತೇತರಾಮ್ ॥ ೭೮೭ ॥**

**ಅರ್ಥ–** ಅತಃ=ಅಸಿದ್ಧಿ-ಅವ್ಯಾಪ್ತಿದೋಷಗಳು ಇಲ್ಲದಿರುವುದರಿಂದ, ಮೇ=ನನ್ನ ಅನುಮಾನಾಖ್ಯಾ ರಾಜಾಜ್ಞಾ=ಅನುಮಾನರೂಪವಾದ ರಾಜನ ಆಜ್ಞೆಯು,

ಅನುಕೂಲತರ್ಕಾಖ್ಯಮಂತ್ರಿಣಾ=ಅನುಕೂಲತರ್ಕವೆಂಬ ಮಂತ್ರಿಯಿಂದ, ಸರ್ವತಃ=ಎಲ್ಲ ದಿಶಂ= ದಿಕ್ಕುಗಳಲ್ಲೂ ಪಾಲಿತಾ=ರಕ್ಷಿಸಲ್ಪಟ್ಟದ್ದಾಗಿ, ರಾಜತೇತರಾಂ=ಅತಿಶಯವಾಗಿ ಶೋಭಿಸುತ್ತದೆ.

**ಅನುವಾದ–** ಆದ್ದರಿಂದ ನನ್ನ ಅನುಮಾನವೆಂಬ ರಾಜನು ಎಲ್ಲ ಕಡೆಗಳಲ್ಲಿಯೂ ಅನುಕೂಲತರ್ಕ ಎಂಬ ಮಂತ್ರಿಯಿಂದ ರಕ್ಷಿಸಲ್ಪಡುವುದರಿಂದ; ನನ್ನ ಅನುಮಾನವೆಂಬ ರಾಜನ ಆಜ್ಞೆಯೇ ಚೆನ್ನಾಗಿ ಶೋಭಿಸುತ್ತದೆ.

**ಭಾವವಿಲಾಸಿನೀ–** ಅನುಮಾನಕಥನಮುಪಸಂಹರತಿ– ಅತ ಇತಿ ॥ ಅತಃ ಅಸಿದ್ಧ್ಯವ್ಯಾಪ್ತ್ಯಾಖ್ಯ-ದೋಷರಹಿತತ್ವಾತ್ । ಪ್ರಾಗುಕ್ತಾ ವ್ಯಾಹತಿರೇವಾನುಕೂಲತರ್ಕಃ । ವೇದಮನ್ತ್ರಾನುಕೂಲತ್ವಾತ್ ಸ ಏವ ಮನ್ತ್ರೀ । ಸಕಲಮನೋನುರಂಜಕತ್ವಾದನುಮೈವ ರಾಜಾ । ತಸ್ಯಾಜ್ಞಾ ಭಗವತೋ ಭಾವಧರ್ಮಧರ್ಮಿತ್ವರೂಪಾ ॥ ೭೮೭ ॥

**ವಿವರಣೆ–** ಭಾವಧರ್ಮಗಳನ್ನು ಪರಮಾತ್ಮನಲ್ಲಿ ಸಾಧಿಸುವ ಮುಕ್ತತ್ವಹೇತುವಿಗೆ ಅಸಿದ್ಧಿ ಅವ್ಯಾಪ್ತಿದೋಷಗಳಿಲ್ಲ. ಆದ್ದರಿಂದ ಹೇತುವು ನಿರ್ದುಷ್ಟವಾಗಿ ಭಾವಧರ್ಮ-ಸಾಧಕವಾಗಿದೆ. ಅನುಕೂಲತರ್ಕವೂ ಸಹಕಾರಿಯಾಗಿದೆ. ಭಾವಧರ್ಮಗಳು ಪರಮಾತ್ಮನಲ್ಲಿ ಇಲ್ಲವೆಂದರೆ ಮುಕ್ತತ್ವವೂ ಇಲ್ಲವೆಂದಾಗುತ್ತದೆ. ಮುಕ್ತತ್ವವು ಇಲ್ಲವಾದರೆ ಪರಮಾತ್ಮನು ಸಂಸಾರಿಯಾಗಬೇಕಾಗುತ್ತದೆ. ಪ್ರಕೃತ ಅನುಮಾನವೇ ರಾಜಾ. ರಂಜನಾದ್ ರಾಜಾ, ಪ್ರಜೆಗಳನ್ನು ಸಂತೋಷಪಡಿಸುವುದರಿಂದಲೇ ರಾಜ ಎಂದು ಕರೆಯುವುದು. ಅನುಮಾನವು ಎಲ್ಲರ ಮನಸ್ಸಿಗೂ ಸಂತೋಷವನ್ನು ನೀಡುತ್ತಿದೆ. ಭಾವಧರ್ಮವುಳ್ಳವನು ಪರಮಾತ್ಮಾ ಎಂಬ ಸಾಧ್ಯವೇ ರಾಜಾಜ್ಞೆ. ಇದಕ್ಕೆ ಅನುಕೂಲತರ್ಕವೆಂಬ ಮಂತ್ರಿಯ ಸಹಕಾರವಿದೆ. ಈ ರಾಜಾಜ್ಞೆಯನ್ನು ತಿರಸ್ಕರಿಸುವ ಶತ್ರುಗಳ ಬಾಧೆ ಇಲ್ಲ. ಈ ರಾಜಾಜ್ಞೆಯನ್ನು ಯಾರಿಂದಲೂ ಉಲ್ಲಂಘಿಸಲು ಸಾಧ್ಯವಿಲ್ಲ. ಸಮಸ್ತದೇಶದಲ್ಲೂ ಈ ಆಜ್ಞೆಯು ಎಲ್ಲರಿಂದಲೂ ಪಾಲಿತವಾಗಿದೆ. ಬ್ರಹ್ಮನಲ್ಲಿ ಜಗತ್‌ಕರ್ತೃತ್ವಾದಿಭಾವಧರ್ಮಗಳ ಧ್ಯಾನವನ್ನು ಎಲ್ಲರೂ ಮಾಡುತ್ತಾರೆ. ಹೀಗೆ ಭಾವಧರ್ಮಧರ್ಮಿತ್ವವು ಎಲ್ಲರಿಂದಲೂ ಮಾನ್ಯವಾಗಿ ಸ್ವೀಕೃತವಾಗಿದೆ.

ಅತಃ ಶ್ರುತಿಪುರಾಣಸ್ಥನಿರ್ಗುಣಾಖ್ಯಾ ಹರಿಂ ಪ್ರಭುಮ್ ।
ನಿರ್ಗುಣಬ್ರಹ್ಮ ಮದ್ದಾಸೀಸಂಗ್ಯೇವಾಸೀನ್ನ ಮತ್ಪ್ರಿಯಂ ॥ ೭೮೮ ॥

ಅಹಂ ಪತಿವ್ರತೈವಾಸಂ ತತ್ರೋಪಕ್ರಮವಾಗಿಯಮ್ ।
ಉಪಸಂಹಾರವಾಕ್ ಚೇಯಂ ಸದಾ ತ್ವತ್ಪಕ್ಷಪಾತಿನೀ ।
ಸಾಕ್ಷಿಣೇತಿ ನಿಗದ್ಯಾತ್ಮಮನಶ್ಶೌದ್ಧ್ಯಂ ಪ್ರಬೋಧ್ಯ ಚ ॥ ೭೮೯ ॥

**ಅನ್ಯಾರ್ಥಶೂನ್ಯಾ ಮಾನ್ಯಾರ್ಥಮುಕ್ತ್ವಾ ಶರಣಮೀಯುಷೀ ।**
**ಸ್ವಸ್ವಾಮಿನೋ ಗುಣಾನ್ ಹಿತ್ವಾ ಜಗ್ರಾಸ ಪ್ರಾಕೃತಾನ್ ಗುಣಾನ್ ॥ ೭೯೦ ॥**

**ಅರ್ಥ–** ಅತಃ=ಯುಕ್ತಿಯುಕ್ತವಾದ್ದರಿಂದ, ಶ್ರುತಿಪುರಾಣಸ್ಥನಿರ್ಗುಣಾಖ್ಯಾ= ಶ್ರುತಿ ಪುರಾಣಗಳಲ್ಲಿ ಹೇಳಲ್ಪಟ್ಟ ನಿರ್ಗುಣನೆಂಬ ಪದವು, ಪ್ರಭುಂ=ಸಮರ್ಥನಾದ, ಹರಿಂ=ಪರಮಾತ್ಮನನ್ನು ಹೇಳುತ್ತಿದೆ. ನಿರ್ಗುಣಬ್ರಹ್ಮ=ಸರ್ವಧರ್ಮಶೂನ್ಯನಾದ ಪರರಿಂದ ಸ್ವೀಕೃತನಾದ ಬ್ರಹ್ಮನು, ಮದ್ದಾಸೀಸಂಗ್ಯೇವ=ನನ್ನ ದಾಸಿಯರಾದ ಆಪಾತ ಹಿ ಪ್ರತೀತಿ ಮತ್ತು ಭ್ರಾಂತಿಯ ಸಂಪರ್ಕವುಳ್ಳವನು, ಆಸೀತ್=ಆದನು. ಮತ್ಪ್ರಿಯಂ=ನನಗೆ ಪ್ರೀತಿಪಾತ್ರನು, ನ=ಆಗಲಿಲ್ಲ.

ಅಹಂ=ನಾನು, ಪತಿವ್ರತಾ ಏವ=ಪತವ್ರತೆಯೇ, ಆಸಂ=ಆಗಿರುವೆನು. ತತ್ರ=ಆ ವಿಷಯದಲ್ಲಿ ಇಯಂ=ಈ, ಉಪಕ್ರಮವಾಕ್=ಉಪಕ್ರಮವಾಕ್ಯವು, ಚ=ಮತ್ತು, ಉಪಸಂಹಾರವಾಕ್=ಉಪಸಂಹಾರವಾಕ್ಯವು, ಸದಾ=ಯಾವಾಗಲೂ, ತ್ವತ್ಪಕ್ಷಪಾತಿನೀ= ಸಗುಣಬ್ರಹ್ಮನನ್ನೇ ಸ್ಪಷ್ಟವಾಗಿ ಪ್ರತಿಪಾದಿಸುತ್ತಾ, ಸಾಕ್ಷಿಣೀ=ಸಾಕ್ಷಿಗಳಾಗಿವೆ, ಇತಿ= ಹೀಗೆಂದು, ನಿಗದ್ಯ=ಹೇಳಿ, ಆತ್ಮಮನಶ್ಶೌದ್ಧ್ಯಂ=ತನ್ನ ಮನಸ್ಸಿನ ಶುದ್ಧತೆಯನ್ನು ಪ್ರಬೋಧ್ಯ ಚ=ತಿಳಿಸಿ, ಅನ್ಯಾರ್ಥಶೂನ್ಯಾ= ಸರ್ವಧರ್ಮರಾಹಿತ್ಯರೂಪ ಅರ್ಥವನ್ನು ಹೇಳದೆ, ಮಾನ್ಯಾರ್ಥಂ= ಪ್ರಮಾಣಗಳಿಂದ ಮಾನ್ಯವಾದ ಅರ್ಥವನ್ನೇ, ಉಕ್ತ್ವಾ=ಹೇಳಿ, ಶರಣಮೀಯುಷೀ= ಶ್ರೀಹರಿಯನ್ನು ರಕ್ಷಕನನ್ನಾಗಿ ಹೊಂದಿ ನಿರ್ಗುಣಶ್ರುತಿಯು, ಸ್ವಸ್ವಾಮಿನಃ= ತನ್ನ ಪತಿಯಾದ ಪರಮಾತ್ಮನ, ಗುಣಾನ್= ಜ್ಞಾನಾನಂದಾದಿಗುಣಗಳನ್ನು, ಹಿತ್ವಾ= ಪರಿತ್ಯಾಗಮಾಡಿ, ಪ್ರಾಕೃತಾನ್= ಪ್ರಾಕೃತವಾದ, ಗುಣಾನ್=ಗುಣಗಳನ್ನು, ಜಗ್ರಾಸ= ನುಂಗಿತು.

**ಅನುವಾದ–** ಆದ್ದರಿಂದ ಶ್ರುತಿಪುರಾಣಗಳಲ್ಲಿರುವ ನಿರ್ಗುಣವೆಂಬ ಶಬ್ದವು ನನ್ನ ಪ್ರಭುವಾದ ಹರಿಯನ್ನೇ ಹೇಳುತ್ತದೆ. ನಿನಗೆ ಅಭಿಮತವಾದ ನಿರ್ಗುಣಬ್ರಹ್ಮನು ನನ್ನ ದಾಸಿಯರಾದ ಆಪಾತಪ್ರತೀತಿ ಮತ್ತು ಸಜ್ಜನರ ಭ್ರಾಂತಿ ಇವುಗಳ ಸಂಬಂಧವನ್ನೇ ಹೊಂದಿದವನಾದನು. ಅವನು ನನಗೆ ಪ್ರಿಯನಾದವನಲ್ಲ. ನಾನು ಮಾತ್ರ ಪತಿವ್ರತೆಯೇ ಆಗಿದ್ದೇನೆ. ಆ ವಿಷಯದಲ್ಲಿ ನಿನ್ನ ಪಕ್ಷದಲ್ಲೇ ಇರುವ (ನಿನ್ನ ಗುಣಗಳನ್ನೇ ಸದಾ ಪ್ರತಿಪಾದಿಸುವ) ಈ ಉಪಕ್ರಮವಾಕ್ಯವು, ಈ ಉಪಸಂಹಾರವಾಕ್ಯವು ಸಾಕ್ಷಿಗಳು ಎಂದು ಹೇಳಿ ತನ್ನ ಮನಃಶುದ್ಧಿಯನ್ನು ತಿಳಿಸಿ ಬೇರೆ ಅರ್ಥವನ್ನು ಹೇಳದೆ ಮಾನ್ಯವಾದ ಅರ್ಥವನ್ನು ಹೇಳಿ ಹರಿಗೆ ಶರಣಾಗತರಾಗಿ ತನ್ನ ಸ್ವಾಮಿಯ ಜ್ಞಾನಾನಂದಾದಿ ಗುಣಗಳನ್ನೂ, ಜಗತ್ಕರ್ತೃತ್ವಾದಿ ಗುಣಗಳನ್ನು ಬಿಟ್ಟು, ಪ್ರಾಕೃತವಾದ ಗುಣಗಳನ್ನು ಮಾತ್ರ ನುಂಗಿಹಾಕಿತು.

**ಭಾವವಿಲಾಸಿನೀ–** ಯುಕ್ತಿಯುಕ್ತತ್ವಾದಿಮಮೇವಾರ್ಥಂ ಶ್ರುತಿಪುರಾಣಸ್ಥಾ ನಿರ್ಗುಣವಾಗಪಿ ವಕ್ತೀತಿ ಸಾಹಿತ್ಯಮುದ್ರಯಾಹ– ಅತ ಇತಿ ॥ ಯೌಕ್ತಿಕತ್ವಾದಿತ್ಯರ್ಥಃ । ನಿರ್ಗುಣಬ್ರಹ್ಮ

ಸರ್ವಧರ್ಮಶೂನ್ಯಂ ಪರೋದೀರಿತಂ ಬ್ರಹ್ಮ ಮದ್ದಾಸೀಸಂಗಿ ಮಮ ದಾಸ್ಯೋಃ ದುರ್ಜನಾನಾಮಂಧಂತಮೋದಾನಾಖ್ಯಮದಭಿಮತಕರ್ಮಕತ್ರ್ಯೋರಾಪಾತಪ್ರತೀತ್ಯಸಜ್ಜನಭ್ರಾನ್ತ್ಯೋರೇವ ಸಂಬಂಧವದಾಸೀತ್ ಮತ್ಪ್ರಿಯಂ ಮಮ ಸ್ವಾರಸಿಕಾರ್ಥಭೂತಂ ನ । ಪತಿವ್ರತಾ ಪತ್ಯೌ ತ್ವಯ್ಯೇವ ವ್ರತವತೀ ತತ್ರ ಮದೀಯಪಾತಿವ್ರತ್ಯೇ ಉಪಕ್ರಮವಾಕ್ 'ಏಕೋ ದೇವಃ' ಇತ್ಯಾದಿಕಾ ಶ್ರುತಾವುಪಸಂಹಾರವಾಕ್ ಸ ಸರ್ವದೃಗುಪದ್ರಷ್ಟೇತ್ಯಾದಿಕಾ । ತ್ವತ್ಪಕ್ಷಪಾತಿನೀ ಸಗುಣಂ ತ್ವಾಮೇವ ಸ್ಪಷ್ಟಂ ವದಂತೀ ಸಾಕ್ಷಿಣೀ ಸಾಕ್ಷಿಭೂತಾ । ತದನನುಗುಣಮರ್ಥಂ ಮಧ್ಯಸ್ಥಾ ನಿರ್ಗುಣವಾಕ್ ನ ವಕ್ತೀತಿ ಸುಪ್ರಸಿದ್ಧಮೇವೇತಿ ಭಾವಃ । ಉಪಲಕ್ಷಣಂ ಚೈತತ್ । ಸಮಾಖ್ಯಾಸ್ಮೃತ್ಯಾ ತದನುಸಾರಿಣ್ಯಾ ನಿರ್ಗುಣಶ್ಚೇತಿ ಶ್ರುತ್ಯಾ ಚ ಸಾಕ್ಷಾದ್ಧರಿವದೇನ ಸಗುಣಸ್ಯ ತವೈವಾಭಿಧಾನಾಚ್ಚ । ಮನಶ್ಶೌದ್ಧ್ಯಂ ಜಾರೋಪಪಮನಿರ್ಗುಣಬ್ರಹ್ಮಾದ್ಯವಿಷಯತ್ವರೂಪಶುದ್ಧತಾಮ್ । ಸರ್ವಧರ್ಮವೈಧುರ್ಯಾಖ್ಯಾನ್ಯಾರ್ಥಶೂನ್ಯಾ । ಮಾನ್ಯಾರ್ಥಂ ದೋಷ ರೂಪಹೀನಗುಣಾಭಾವಮ್ । ಅರ್ಥಮಿತ್ಯನೇನ ಭರ್ತುರ್ಮನಶ್ಶಂಕಾಪರಿಹಾರಾಯ ತನ್ಮನಃಪ್ರಿಯದ್ರವ್ಯದಾನಮಿವೇತಿ ಧ್ವನಿತಮ್ । ಉಕ್ತ್ವಾ ಪ್ರಭುಂ ಹರಿಂ ಶರಣಮೀಯುಷೀತಿ ಸಂಬಂಧಃ । ಸ್ವಪತ್ನ್ಯಾಂ ವ್ಯಭಿಚಾರಶಂಕಿನಂ ಪತಿಂ ಪ್ರತಿ ಪತಿವ್ರತಾಯಾಸ್ತಸ್ಯಾಃ ವಚನಮಿವೇದಂ ವಚನಮ್ । ಸ್ವಸ್ವಾಮಿನಃ ಭರ್ತುರ್ನಾರಾಯಣಸ್ಯ ಗುಣಾನ್ ಸೌನ್ದರ್ಯಾದೀನ್ । ಜಗ್ರಾಸ । ಪ್ರಾಕೃತಾನ್ ಗುಣಾನಿತ್ಯನೇನ ಸ್ವಭರ್ತುಃ ಪ್ರೀತ್ಯೈ ತದ್ಭೋಜನಪಾತ್ರಸ್ಥತದುಪೇಕ್ಷಿತಾಲ್ಪಾನ್ನೇನೈವ ಗ್ರಾಸಂ ಕುರ್ವತೀವೇತಿ ಧ್ವನಿತಮ್ ॥ ೭೮೮-೭೯೦ ॥

**ವಿವರಣೆ—** ಶ್ರೀಹರಿಯು ಅನಂತಗುಣಗಳಿಂದ ಪರಿಪೂರ್ಣನು ಎಂಬುದು ಯುಕ್ತಿಯುಕ್ತವಾಗಿದೆ. ಆದ್ದರಿಂದ ಶ್ರುತಿಪುರಾಣಗಳಲ್ಲಿರುವ ನಿರ್ಗುಣಪದವು ಸರ್ವಸಮರ್ಥನಾದ ಶ್ರೀಹರಿಯನ್ನು ಪ್ರತಿಪಾದಿಸುತ್ತಿದೆ. ಪರರಿಂದ ಸ್ವೀಕೃತನಾದ ನಿರ್ಗುಣಬ್ರಹ್ಮನು ನನ್ನ ದಾಸಿಯರಾದ ಆಪಾತಪ್ರತೀತಿ ಮತ್ತು ಸಜ್ಜನಭ್ರಾಂತಿಗೆ ವಿಷಯನಾದುದರಿಂದ ಅವರ ಸಂಬಂಧವುಳ್ಳವನಾದನು. ಪ್ರಕೃತ ನಿಮ್ಮ ಬ್ರಹ್ಮನು ಅನ್ಯಥಾಜ್ಞಾನದಿಂದ ನರಕವನ್ನು ಹೊಂದುವ ದುರ್ಜನರ ಆಪಾತಪ್ರತೀತಿಗೆ ಮತ್ತು ಸಜ್ಜನರ ಭ್ರಾಂತಿಜ್ಞಾನಕ್ಕೆ ವಿಷಯನಾಗಿರುವನು ಹೊರತಾಗಿ ಯಥಾರ್ಥಜ್ಞಾನಕ್ಕೆ ವಿಷಯನಲ್ಲ.

ವೇದಾಭಿಮಾನಿನಿಯಾದ ಲಕ್ಷ್ಮೀದೇವಿಯು ಪರಮಾತ್ಮನನ್ನು ಬಿಟ್ಟು ಯಾರನ್ನೂ ಎಂದಿಗೂ ವರಿಸುವುದಿಲ್ಲ. ಪತಿವ್ರತೆಯಾಗಿದ್ದಾಳೆ. ವೇದವಾಣಿಯು ಮುಖ್ಯಾರ್ಥವನ್ನು ಬಿಟ್ಟು ಅನ್ಯಾರ್ಥವನ್ನು ಎಂದಿಗೂ ಹೇಳುವುದಿಲ್ಲ. ವಾದಿರಾಜರು ಲಕ್ಷ್ಮೀದೇವಿಯ ಬಾಯಲ್ಲೇ ಮಾತನ್ನು ಹೇಳಿಸಿ ಸಮರ್ಥಿಸುತ್ತಿದ್ದಾರೆ. ಉಪಕ್ರಮ-ಉಪಸಂಹಾರಗಳು ವೇದಾರ್ಥನಿರ್ಣಾಯಕ. ಅವುಗಳಲ್ಲೂ ಉಪಸಂಹಾರವು ಪ್ರಬಲ.

ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।
ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥

ಇದು ಉಪಕ್ರಮವಾಕ್ಯ. 'ಸ ಸರ್ವದೃಗುಪದ್ರಷ್ಟಾ' ಎಂಬುದು ಉಪಸಂಹಾರವಾಕ್ಯ (ಶ್ವೇತಾಶ್ವತರ 6-11)

ಈ ಉಪಕ್ರಮ ಹಾಗೂ ಉಪಸಂಹಾರದಲ್ಲಿರುವ ಎರಡು ವಾಕ್ಯಗಳೂ ಬ್ರಹ್ಮನು ಗುಣಪರಿಪೂರ್ಣ ಎಂಬ ವಿಷಯದಲ್ಲಿ ಸಾಕ್ಷಿಗಳಾಗಿವೆ. ಉಪಕ್ರಮ - ಉಪಸಂಹಾರವಾಕ್ಯಗಳ ಮಧ್ಯದಲ್ಲಿರುವ ನಿರ್ಗುಣವಾಕ್ಯವಾದರೂ ಅವೆರಡರ ವಿರುದ್ಧವಾಗಿ ನಿರ್ಗುಣತ್ವವನ್ನು ಹೇಗೆ ಹೇಳಲು ಸಾಧ್ಯ? ಹೀಗೆ ವೇದಾಭಿಮಾನಿನಿಯು ಸಾಕ್ಷಿಯನ್ನು ಹೇಳಿ ಜಾರನಂತಿರುವ ನಿರ್ಧರ್ಮಕಬ್ರಹ್ಮನನ್ನು ಪ್ರತಿಪಾದಿಸದೆ ತನ್ನ ಶುದ್ಧತೆಯನ್ನು ಕಾಪಾಡಿಕೊಂಡಿರುವವಳು. ಶಕ್ತಿವೃತ್ತಿಯಿಂದ ಬ್ರಹ್ಮನ ಗುಣಪೂರ್ಣತೆಯನ್ನು ಪ್ರತಿಪಾದಿಸುತ್ತಾ ಅವನಲ್ಲಿಯೇ ತನ್ನನ್ನು ಸಮರ್ಪಿಸಿ ಕೊಂಡಿರುವವಳು. ಪತಿವ್ರತೆಯು ತನ್ನ ಪತಿಯ ಊಟವಾದ ನಂತರ ಅವನ ಎಲೆಯಲ್ಲಿ ಉಳಿದಿರುವ ಅಲ್ಪವಾದ ಅನ್ನದಿಂದಲೇ ತೃಪ್ತಿಪಡುವಂತೆ ಪ್ರಕೃತ್ಯಭಿಮಾನಿನಿಯಾದ ಲಕ್ಷ್ಮೀದೇವಿಯು ಪ್ರಾಕೃತವಾದ ಗುಣಗಳನ್ನು ಮಾತ್ರ ನುಂಗಿದ್ದಾಳೆ.

**ನೈರ್ಗುಣ್ಯೇನೈವ ಗುಣಿತಾ ನೈರ್ಗುಣ್ಯಂ ಚ ನ ಚೇನ್ನಞೌ ।**
**ಸಗುಣತ್ವಂ ಸ್ಥಿರೀಕೃತ್ಯ ವಿರುದ್ಧಾರ್ಥತ್ವಕಾರಕೌ ॥ ೭೯೧ ॥**

**ಅರ್ಥ–** ನೈರ್ಗುಣ್ಯೇನೈವ= ನಿರ್ಗುಣತ್ವದಿಂದಲೇ, ಗುಣಿತಾ=ಗುಣವುಳ್ಳದ್ದಾಗಿ ಆಗುತ್ತದೆ, ನೈರ್ಗುಣ್ಯಂ ಚ=ನಿರ್ಗುಣತ್ವವಾದರೂ, ನ ಚೇತ್=ಇಲ್ಲವಾದರೆ, ನಞಾ= ಎರಡು ನಞ್‌ಗಳು, ಸಗುಣತ್ವಂ=ಧರ್ಮವುಳ್ಳವನು ಎಂಬುದನ್ನು ಸ್ಥಿರೀಕೃತ್ಯ= ದೃಢಗೊಳಿಸಿ, ವಿರುದ್ಧಾರ್ಥಕಾರಕೌ=ವ್ಯಾಹತವಾದ ಅರ್ಥವನ್ನು ಉಂಟುಮಾಡುತ್ತವೆ.

**ಅನುವಾದ–** ಬ್ರಹ್ಮನಿಗೆ ನಿರ್ಗುಣತ್ವವನ್ನು ಹೇಳಿದರೆ, ನಿರ್ಗುಣತ್ವ ಎಂಬ ಗುಣವೇ ಉಂಟಾಗುತ್ತದೆ. ನಿರ್ಗುಣತ್ವವೆಂಬ ಗುಣವು ಇಲ್ಲವೆಂದು ಹೇಳಿದರೆ, ಎರಡು ನಿಷೇಧಗಳು ಒಟ್ಟಿಗೆ ಸೇರಿ ಸಗುಣತ್ವವನ್ನು ಸ್ವೀಕರಿಸಿ ನಿರ್ಗುಣತ್ವ ರೂಪವಾದ ಅರ್ಥಕ್ಕೆ ವಿರುದ್ಧವಾದ ಅರ್ಥವನ್ನು ಹೇಳುತ್ತವೆ.

**ಭಾವವಿಲಾಸಿನೀ–** ಇದಾನೀಂ ನಿರ್ಗುಣಶ್ರುತೇರಾಪಾತರಮಣೀಯಾರ್ಥಕಥನೇ ಮಹಾನನರ್ಥಃ ಸ್ಯಾದಿತ್ಯಾಹ– **ನೈರ್ಗುಣ್ಯೇನೈವೇತಿ** ॥ ನೈರ್ಗುಣ್ಯೇನ ನಿರ್ಗುಣತ್ವಾಖ್ಯಗುಣೇನ ಗುಣಿತಾ ಗುಣವತ್ತೋ। ಅಂತತಾಗುಣಸ್ಯೈವ ಕಥನಾದ್ ವ್ಯಾಹತಿರಿತಿ ಭಾವಃ । ನಞೌ ನೈರ್ಗುಣ್ಯಂ ನೇತ್ಯತ್ರ ವಿದ್ಯಮಾನೌ ನಿಷೇಧಾರ್ಥಕೌ ದ್ವೌ ಶಬ್ದೌ ಸ್ಥಿರೀಕೃತ್ಯ ದ್ವೌ ನಞೌ ಪ್ರಕೃತಮರ್ಥಂ ಸಾತಿಶಯಂ ಗಮಯತಃ ಇತಿ ವಚನಾತ್ ಸಗುಣತಾಮೇವ ದೃಢೀಕೃತ್ಯ ಪುನರ್ವ್ಯಾಹತಾರ್ಥತ್ವಕಾರಕೌ ॥ ೭೯೧ ॥

**ವಿವರಣೆ–** ಶ್ರುತಿಯಲ್ಲಿರುವ ನಿರ್ಗುಣಶಬ್ದಕ್ಕೆ ಮೇಲ್ನೋಟಕ್ಕೆ ತೋರುವ ಅರ್ಥವನ್ನು ಹೇಳಿದರೆ ಬಹು ಅನರ್ಥವು ಉಂಟಾಗುತ್ತದೆಂದು ತೋರಿಸುತ್ತಿದ್ದಾರೆ. ಬ್ರಹ್ಮನನ್ನು ನಿರ್ಗುಣ ಎಂದಾಗ ಅವನಲ್ಲಿ ನಿರ್ಗುಣತ್ವರೂಪವಾದ ಧರ್ಮವು ಬರುತ್ತದೆ. ಗುಣರಹಿತನಲ್ಲಿ ಗುಣ ಇದೆ ಎಂದು ಹೇಳಿದಂತಾಗಿ ವ್ಯಾಹತಿದೋಷವು ಬರುತ್ತದೆ. ನಿರ್ಗುಣತ್ವವು ಇಲ್ಲ ಎಂದು ಹೇಳಿದಾಗ ಸಗುಣತ್ವವು ದೃಢವಾಗುತ್ತದೆ. ದ್ವೌ ನಞೌ ಪ್ರಕೃತಮರ್ಥಂ ಸಾತಿಶಯಂ ಗಮಯತಃ ಎಂದು ನ್ಯಾಯ. ಎರಡು ನಿಷೇಧಗಳು ಒಟ್ಟುಗೂಡಿ ಪ್ರಕೃತಾರ್ಥದಲ್ಲಿ ಅತಿಶಯವನ್ನು ತಂದುಕೊಡುತ್ತವೆ. ಪ್ರಕೃತ ನಿರ್ಗುಣತ್ವದ ನಿಷೇಧವನ್ನು ಮಾಡಿದಾಗ ಸಗುಣತ್ವವನ್ನು ಎರಡು ನಞ್‌ಗಳು ದೃಢಗೊಳಿಸುತ್ತವೆ. ಎರಡು ನಞ್‌ಗಳು ಸೇರಿ ನಿರ್ಗುಣತ್ವಕ್ಕೆ ವಿರುದ್ಧವಾದ ಸಗುಣತ್ವರೂಪವಾದ ಅರ್ಥವನ್ನು ಬೋಧಿಸುತ್ತವೆ.

**ಬದ್ಧಸೇತುನಿರುದ್ಧಾಂಭಃ ಸೇತುಭಂಗೇ ಸ್ರವೇದ್ ಧ್ರುವಮ್ ।**
**ಯಥಾಹಿ ನಿರ್ಗುಣತ್ವಸ್ಯ ಛೇದೇ ಸರ್ವಗುಣಾಗಮಃ ।**
**ಘಟಾಭಾವಕ್ಷಯೋ ನಾಮ ಘಟಸ್ಯಾಗತಿರೇವ ಹಿ ॥ ೭೯೨ ॥**

**ಅರ್ಥ–** ಯಥಾ=ಹೇಗೆ, ಬದ್ಧಸೇತುನಿರುದ್ಧಾಂಭಃ=ಕಟ್ಟಿದ ಸೇತುವೆಯಿಂದ ತಡೆಯಲ್ಪಟ್ಟ ನೀರು, ಸೇತುಭಂಗೇ=ಸೇತುವೆಯು ಭಗ್ನವಾಗುತ್ತಿರಲು, ಧ್ರುವಂ= ನಿಶ್ಚಯವಾಗಿ, ಸ್ರವೇತ್= ಸೋರಿಹೋಗುವುದೋ, ಅದರಂತೆ, ಘಟಾಭಾವಕ್ಷಯೋ ನಾಮ= ಘಟಾಭಾವದ ನಾಶ ಎಂದರೆ, ಘಟಸ್ಯ=ಘಟದ, ಆಗತಿರೇವ= ಇರುವಿಕೆಯೇ, ಹಿ= ನಿಶ್ಚಯವು, ಅದರಂತೆ, ನಿರ್ಗುಣತ್ವಸ್ಯ= ನಿರ್ಗುಣತ್ವದ, ತ್ಯಾಗೇ=ಪರಿತ್ಯಾಗ ಮಾಡಿದರೆ, ಸರ್ವಗುಣಾಗಮಃ= ಸರ್ವಗುಣಗಳೂ ಬಂದು ಸೇರುತ್ತವೆ.

**ಅನುವಾದ– ಸೇತುವೆ (ಕಟ್ಟೆ)ಯನ್ನು ಕಟ್ಟಿ ತಡೆಹಿಡಿಯಲ್ಪಟ್ಟ ನೀರು, ಕಟ್ಟೆಯು ಒಡೆದುಹೋದರೆ ನಿಶ್ಚಿತವಾಗಿ ಹರಿದುಹೋಗುತ್ತದೆ. ಹೇಗೆ, ನಿರ್ಗುಣತ್ವವನ್ನು ಪರಿತ್ಯಾಗ ಮಾಡಿದರೆ ಎಲ್ಲಾ ಗುಣಗಳು ಬಂದು ಸೇರುತ್ತವೆಯೋ ಅದರಂತೆ. ಘಟಾಭಾವದ ಅಭಾವವೆಂದು ಹೇಳಿದರೆ, ಅದು ಘಟದ ಆಗಮನವೇ ಅಲ್ಲವೇ?**

**ಭಾವವಿಲಾಸಿನೀ– ಅಲೌಕಿಕಮಪೀಮಮರ್ಥಮ್ ಅತಿಸ್ಪಷ್ಟತ್ವಾಲ್ಲೌಕಿಕೇ ದೃಷ್ಟಾಂತೀಕರೋತಿ– ಬದ್ಧಸೇತ್ವಿತಿ ॥ ಯಥಾ ನಿರ್ಗುಣತ್ವಸ್ಯ ಗುಣನಿವಾರಕಗುಣಾಭಾವಸ್ಯ ಛೇದೇ ನಞಂತರೇಣ ನಿಷೇಧೇ ಸರ್ವಗುಣಾಗಮಃ ಅತಿಶಯೇನ ಗುಣಪ್ರಾಪ್ತಿಃ। ಗುಣಾಭಾವೋ ನೇತ್ಯುಕ್ತೇ ಸುತರಾಂ ಗುಣಪ್ರಾಪ್ತಿರಿತಿ ಯಾವತ್ । ತಥಾ ಜಲನಿರೋಧಕಸೇತುಭಂಗೇ ಸರ್ವಜಲಂ ಸ್ರವೇದ್ ಇತ್ಯರ್ಥಃ। ದೃಷ್ಟಾಂತಾಂತರಂ ಚಾಹ– ಘಟಾಭಾವೇತಿ ॥ ೭೯೨ ॥**

**ವಿವರಣೆ–** ಅಲೌಕಿಕವಾದ ಈ ವಿಷಯವನ್ನು ಲೌಕಿಕದೃಷ್ಟಾಂತದಿಂದ ಸಮರ್ಥಿಸುತ್ತಿದ್ದಾರೆ. ನೀರನ್ನು ತಡೆಹಿಡಿದಿರುವ ಸೇತುವೆಯು ಭಗ್ನವಾದಾಗ ನೀರು

ನಿಲ್ಲದೇ ಹರಿದು ಹೋಗುತ್ತದೆ. ನಿರ್ಗುಣತ್ವವು ಇಲ್ಲ ಎಂದರೆ ಸಗುಣತ್ವವೇ ಪ್ರಾಪ್ತವಾಗುತ್ತದೆ. ಘಟಾಭಾವವು ನಾಶವಾಯಿತೆಂದರೆ ಪುನಃ ಘಟದ ಪ್ರಾಪ್ತಿ ಹೇಗೋ ಹಾಗೆ. ನಿರ್ಗುಣತ್ವವು ಗುಣಾಭಾವವನ್ನು ಹೇಳುತ್ತಿದೆ. ಆದರೆ ಗುಣಾಭಾವವನ್ನು ನಿಷೇಧಮಾಡಿದರೆ ಅತಿಶಯವಾದ ಗುಣಗಳ ಪ್ರಾಪ್ತಿಯೇ ಆಗುತ್ತದೆ.

**ಸಂಕೋಚೇ ಪರಸಂಕೋಚಃ ಶ್ರೇಯಾನ್ ಮುಖ್ಯಾರ್ಥಲಾಭತಃ ॥ ೭೯೩ ॥**

**ಅರ್ಥ–** ಸಂಕೋಚೇ=ನಿರ್ಗುಣಶಬ್ದಕ್ಕೆ ಅರ್ಥಸಂಕೋಚವನ್ನು ಮಾಡುವುದಾದರೆ, ಮುಖ್ಯಾರ್ಥಲಾಭತಃ= ಮುಖ್ಯಾರ್ಥಲಾಭವಾಗುವುದರಿಂದ, ಪರಸಂಕೋಚಃ= ದ್ವೈತವಾದಿಗಳ ಅರ್ಥಸಂಕೋಚವು, ಶ್ರೇಯಾನ್= ಉತ್ತಮವಾದದ್ದು.

**ಅನುವಾದ– ನಿರ್ಗುಣಶ್ರುತಿಗೆ ಸಂಕೋಚವನ್ನು ಮಾಡುವುದಾದರೆ, ದ್ವೈತಿಗಳು ಹೇಳುವ ಸಂಕೋಚವೇ ಶ್ರೇಷ್ಠವಾದುದು. ಏಕೆಂದರೆ ಆ ಅರ್ಥದಲ್ಲಿ ಮುಖ್ಯಾರ್ಥದ ಲಾಭವಿದೆ.**

**ಭಾವವಿಲಾಸಿನೀ– ಸಂಕೋಚೇ ಭಾವಗುಣಮಾತ್ರನಿಷೇಧರೂಪೇ । ಪರಸಙ್ಕೋಚಃ ತತ್ತ್ವವಾದ್ಯುಕ್ತಗುಣತ್ರಯನಿಷೇಧರೂಪಃ । ಮುಖ್ಯಾರ್ಥಲಾಭತಃ ಮುಖ್ಯವೃತ್ತಿ ಲಭ್ಯಾರ್ಥಲಾಭತಃ । ಅಖಂಡಾರ್ಥವಾದಿನಾ ಪರೇಣ ಲಾಕ್ಷಣಿಕಾರ್ಥತ್ವಕಥನಾತ್ ತದಲಾಭ ಇತಿ ಭಾವಃ ॥೭೯೩॥**

**ವಿವರಣೆ–** ನಿರ್ಗುಣಶಬ್ದವು ಭಾವಧರ್ಮಗಳನ್ನು ಮಾತ್ರ ನಿಷೇಧಿಸುತ್ತಿದೆ, ಅಭಾವಧರ್ಮಗಳನ್ನು ನಿಷೇಧಿಸುವುದಿಲ್ಲ ಎಂದು ಅರ್ಥಸಂಕೋಚವನ್ನು ಮಾಡುವುದಾದರೆ ದ್ವೈತಿಗಳು ಹೇಳುವಂತೆ ಅರ್ಥಸಂಕೋಚವನ್ನು ಮಾಡುವುದೇ ಸಮಂಜಸ. ವೈದಿಕ ಶಬ್ದಗಳೆಲ್ಲವೂ ಧರ್ಮರಹಿತನಾದ ಬ್ರಹ್ಮನ ಸ್ವರೂಪವನ್ನು ಮಾತ್ರ ಪ್ರತಿಪಾದಿಸುತ್ತಿದೆ ಎಂದು ಪರರು ಹೇಳುತ್ತಾರೆ. ಆದರೆ ಈ ಅರ್ಥವು ಶಕ್ತಿವೃತ್ತಿಯಿಂದ ದೊರೆಯುವುದಿಲ್ಲ. ಲಕ್ಷಣಾವೃತ್ತಿಯನ್ನು ಅನುಸರಿಸಿ ಈ ಅರ್ಥವನ್ನು ಹೇಳಬೇಕು. ಲಕ್ಷಣಾವು ಅಮುಖ್ಯವೃತ್ತಿ, ಶಕ್ತಿಯು ಮುಖ್ಯವೃತ್ತಿ. ಗುಣಶಬ್ದವು ಎಲ್ಲಾ ಗುಣಗಳನ್ನು ಹೇಳಿದರು ಹೇಯಪ್ರಾಕೃತಗುಣ ಎಂದು ಸಂಕೋಚ ಮಾಡಿದರೆ ವ್ಯಾಹತಿಯು ಬರುವುದಿಲ್ಲ. ದ್ವೈತಿಗಳು ಹೇಳುವ ಪ್ರಾಕೃತಗುಣನಿಷೇಧರೂಪಅರ್ಥವು ಶಕ್ತಿವೃತ್ತಿಯಿಂದಲೇ ದೊರೆಯುವುದರಿಂದ ತತ್ತ್ವವಾದಿಗಳ ಅರ್ಥವೇ ಶ್ರೇಷ್ಠವಾಗಿದೆ.

**ಕಪಿಂಜಲಾಧಿಕರಣನ್ಯಾಯಾನುಸರಣಾದಪಿ ।**
**ಅನಂತಸುಗುಣಚ್ಛೇದಾತ್ ತ್ರಿಗುಣಚ್ಛೇದನಂ ವರಮ್ ॥ ೭೯೪ ॥**

**ಅರ್ಥ–** ಕಪಿಂಜಲಾಧಿಕರಣನಾಯಾನುಸರಣಾದಪಿ=ಕಪಿಂಜಲಾಧಿಕರಣದಲ್ಲಿ ಹೇಳಿದ ನ್ಯಾಯವನ್ನು ಅನುಸರಿಸುವುದರಿಂದಲೂ ಸಹ, ಅನಂತಗುಣಚ್ಛೇದಾತ್=ಅನಂತವಾದ

ಸದ್ಗುಣಗಳನ್ನು ನಿಷೇಧಿಸುವುದಕ್ಕಿಂತಲೂ, ತ್ರಿಗುಣಚ್ಛೇದನಂ=ಮೂರುಗುಣಗಳನ್ನು ಮಾತ್ರ ನಿಷೇಧಿಸುವುದು, ವರಂ=ಉತ್ತಮವಾದದ್ದು.

**ಅನುವಾದ–** **ಕಪಿಂಜಲಾಧಿಕರಣನ್ಯಾಯವನ್ನು ಅನುಸರಿಸುವುದರಿಂದಲೂ ಅನಂತ-ಗುಣಗಳನ್ನು ನಿಷೇಧ ಮಾಡುವುದಕ್ಕಿಂತ ಮೂರು ಗುಣಗಳನ್ನು ನಿಷೇಧ ಮಾಡುವುದೇ ಶ್ರೇಷ್ಠವೆಂದು ತಿಳಿಯುತ್ತದೆ.**

**ಭಾವವಿಲಾಸಿನೀ– ಕಪಿಂಜಲಾಧಿಕರಣನ್ಯಾಯಾನುಸರಣಾತ್ ಕಪಿಂಜಲಾನಾಲಭೇತೇತ್ಯತ್ರ ಬಹುತ್ವಾರ್ಥಕವಿಭಕ್ತ್ಯಂತಕಪಿಂಜಲಪದಸ್ಯ ಶತಸಙ್ಖ್ಯಾಕಕಪಿಂಜಲಪಕ್ಷಿಪರತ್ವ ಸಂಭವೇಽಪಿ ಬಹುಹಿಂಸಾಭಯೇನ ತ್ರಿತ್ವೇ ಪರ್ಯವಸಾನಕರಣನ್ಯಾಯಾನುಸರಣಾದಿತ್ಯರ್ಥಃ ॥ ೭೯೪॥**

**ವಿವರಣೆ–** ತತ್ಕೈಕತ್ವಮಯಜ್ಞಾಂಗಮರ್ಥಸ್ಯ ಗುಣಭೂತತ್ವಾತ್-ಜೈಮಿನಿ ಸೂತ್ರ ಅಧ್ಯಾಯ 4/11.

ಕಪಿಂಜಲಾನಾಲಭೇತ ಎಂಬ ಶ್ರುತಿವಾಕ್ಯವು ಕಪಿಂಜಲಪಕ್ಷಿಗಳನ್ನು ಯಜ್ಞಾಂಗವಾಗಿ ಬಳಸಬೇಕು ಎಂದು ವಿಧಾನಮಾಡುತ್ತಿದೆ. ಇಲ್ಲಿ ಕಪಿಂಜಲಾನ್ ಎಂದು ಬಹುವಚನ-ಪ್ರಯೋಗವಿದೆ. ಆದ್ದರಿಂದ ನೂರಾರು ಕಪಿಂಜಲಪಕ್ಷಿಗಳ ಹಿಂಸೆಯು ಅನುಚಿತವಾದ್ದರಿಂದ ಬಹುವಚನವು ಮೂರು ಸಂಖ್ಯೆಯಲ್ಲಿ ಮಾತ್ರ ಪರ್ಯವಸಾನ-ವಾಗುತ್ತದೆ. ಅದೇ ನ್ಯಾಯದಿಂದ ಎಷ್ಟುಗುಣಗಳ ನಿಷೇಧದಿಂದ ನಿರ್ಗುಣಶಬ್ದಾರ್ಥವು ಉಪಪನ್ನವಾಗುತ್ತದೋ ಅಷ್ಟೇ ನಿಷೇಧವು ಸಮಂಜಸ. ಪ್ರಾಕೃತವಾದ ಮೂರುಗುಣಗಳ ನಿಷೇಧದಿಂದಲೇ ನಿರ್ಗುಣಶಬ್ದಾರ್ಥವು ಯುಕ್ತವಾಗುವಾಗ ಅನಂತಗುಣಗಳ ನಿಷೇಧವನ್ನು ಮಾಡುವುದು ಸಮಂಜಸವಲ್ಲ.

**ಕಿಂಚ ನಿರ್ಗುಣತಾಂ ಸ್ವಾರ್ಥಂ ಕ್ಷಿಪಂತೀಂ ಸಗುಣಶ್ರುತಿಃ ।**
**ಅಬಾಧ್ಯಸ್ವಾರ್ಥವರ್ಗೇಣ ಕಪೋಲೇ ತಾಡಯಿಷ್ಯತಿ ॥ ೭೯೫ ॥**

**ಅರ್ಥ–** ಕಿಂಚ=ಅಷ್ಟಲ್ಲದೇ, ಸ್ವಾರ್ಥಂ=ತನ್ನ ಅರ್ಥವಾದ, ನಿರ್ಗುಣತಾಂ= ಗುಣರಾಹಿತ್ಯ ರೂಪಅರ್ಥವನ್ನು, ಕ್ಷಿಪಂತೀಂ= ನಿಷೇಧಿಸುವ ನಿರ್ಗುಣಶ್ರುತಿಯನ್ನು, ಅಬಾಧ್ಯ ಸ್ವಾರ್ಥವರ್ಗೇಣ= ಬಲಿಷ್ಠವಾದ ತನ್ನ ಅರ್ಥಸಮೂಹದಿಂದ ಸಹಿತವಾಗಿ, ಸಗುಣಶ್ರುತಿಃ= ಸಗುಣಶ್ರುತಿಯು, ಕಪೋಲೇ=ಕೆನ್ನೆಗೆ, ತಾಡಯಿಷ್ಯತಿ= ಹೊಡೆಯುತ್ತದೆ.

**ಅನುವಾದ– ನಿರ್ಗುಣತ್ವ ಶ್ರುತಿಯು ತನ್ನ ಅರ್ಥವಾದ ಗುಣಾಭಾವವನ್ನು ನಿಷೇಧ ಮಾಡುತ್ತದೆ ಎಂದಾದರೆ ಪ್ರಬಲವಾದ ಸಗುಣಶ್ರುತಿಯು ಅಬಾಧ್ಯವಾದ ತನ್ನ ಅರ್ಥಗಳ ಜೊತೆಯಲ್ಲಿ ನಿರ್ಗುಣಶ್ರುತಿಯ ಕೆನ್ನೆಗೆ ಹೊಡೆಯುತ್ತದೆ.**

**ಭಾವವಿಲಾಸಿನೀ–** ಯದಿಚ ನಿರ್ಗುಣಶ್ರುತಿಃ ಸ್ವಾರ್ಥನಿರ್ಗುಣತ್ವಮಪಿ ನಿಷೇಧತಿ ತದಾಽತತ್ತ್ವಾವೇದಕತ್ವೇನ ದುರ್ಬಲಾತತ್ತ್ವಾವೇದಕತಯಾ ಪ್ರಬಲಸಗುಣಶ್ರುತ್ಯೈವ ಬಾಧ್ಯಾ ಸ್ಯಾದಿತ್ಯಾಹ– **ಕಿಂಚೇತಿ** ॥ ೭೯೫ ॥

**ವಿವರಣೆ–** ನಿರ್ಗುಣ ಶ್ರುತಿಯು ಸ್ವಾರ್ಥವಾದ ನಿರ್ಗುಣತ್ವವನ್ನು ನಿಷೇಧ ಮಾಡಿದರೆ ಆಗ ನಿರ್ಗುಣ ಶ್ರುತಿಯು ಅತತ್ತ್ವಾವೇದಕವೆಂದಾಗುತ್ತದೆ. ಸಗುಣಶ್ರುತಿಯಾದರೂ ಎಂದೂ ತನ್ನ ಅರ್ಥವನ್ನು ನಿಷೇಧ ಮಾಡುವುದಿಲ್ಲ, ಆ ಅರ್ಥಗಳೆಲ್ಲವೂ ಅಬಾಧ್ಯವಾದುವೇ. ಆದ್ದರಿಂದ ಸಗುಣಶ್ರುತಿಯು ಪ್ರಬಲವಾಗಿದೆ ಮತ್ತು ನಿಷೇಧಕ್ಕೆ ಒಳಗಾಗದ ಆ ಶ್ರುತಿಯ ಗುಣಗಳು ಜಾಗ್ರತವಾಗಿದೆ. ಅವೆರಡೂ ಸೇರಿ ನಿರ್ಗುಣಶ್ರುತಿಯನ್ನು ಬಾಧಿಸುತ್ತವೆ ಎಂದು ತಾತ್ಪರ್ಯ.

**ಯದ್ಯಭಾವೋಽಸ್ತಿ ಭಾವಸ್ಯಾಪ್ಯಭಾವಾಭಾವತಾ ನ ಕಿಮ್ ।**
**ಸರ್ವಂ ನಾಸ್ತೀತಿ ವದತಾ ಕಿಮಭಾವೋಽಪಿ ರಕ್ಷ್ಯತೇ ॥ ೭೯೬ ॥**

**ಅರ್ಥ–** ಯದಿ=ಒಂದು ಪಕ್ಷ ಅಭಾವಃ ಅಸ್ತಿ=ಅಭಾವರೂಪಧರ್ಮವು ಇರುವುದಾದರೆ, ಭಾವಸ್ಯಾಪಿ=ಭಾವಪದಾರ್ಥಕ್ಕೂ ಸಹ, ಅಭಾವಾಭಾವತಾ= ಅಭಾವಾಭಾವತ್ವವು, ನ ಕಿಂ=ಇಲ್ಲವೇನು? ಸರ್ವಂ=ಸಮಸ್ತವನ್ನು, ನಾಸ್ತೀತಿ=ಇಲ್ಲವೆಂದು, ವದತಾ= ಹೇಳುವ ನಿನ್ನಿಂದ, ಅಭಾವೋ ಅಪಿ=ಅಭಾವವಾದರೂ ಸಹ, ಕಿಂ=ಏಕೆ, ರಕ್ಷ್ಯತೇ= ರಕ್ಷಿಸಲ್ಪಡುತ್ತದೆ?

**ಅನುವಾದ–** ಬ್ರಹ್ಮನಲ್ಲಿ ಅಭಾವವನ್ನು ಅಂಗೀಕಾರ ಮಾಡುವುದಾದರೆ ಭಾವವನ್ನು ಏಕೆ ಅಂಗೀಕಾರ ಮಾಡಬಾರದು? ಭಾವವು ಅಭಾವಾಭಾವವಷ್ಟೇ? ಅದೂ ಅಲ್ಲದೆ, ನೇಹನಾನಾಸ್ತಿ ಕಿಂಚನ ಮೊದಲಾದ ಶ್ರುತಿಗಳು ಎಲ್ಲವನ್ನೂ ನಿಷೇಧಮಾಡುತ್ತವೆ ಎಂದಾಗ ಅಭಾವವನ್ನೇ ಏಕೆ ರಕ್ಷಣೆ ಮಾಡುತ್ತೀಯೆ?

**ಭಾವವಿಲಾಸಿನೀ–** ನಿರ್ಗುಣಶ್ರುತೇರಭಾವರೂಪನಿರ್ಗುಣತ್ವಾನಿಷೇಧಕತ್ವೇ ದೂಷಣಾಂತರಂ ಚಾಹ–**ಯದ್ಯಭಾವೋಽಸ್ತೀತಿ** ॥ ತರ್ಹೀತಿ ಶೇಷಃ । ಅಭಾವಾಭಾವೋ ಭಾವ ಏವೇತ್ಯಾ-ರ್ಯಾಣಾಂ ವಾಗುಕ್ತವಿಧಯಾ ಭಾವಸ್ಯಾಪ್ಯಭಾವಾಭಾವತಯಾ ಸೋಽಪ್ಯಂಗೀಕಾರ್ಯ ಇತಿ ಭಾವಃ । ಪ್ರಕಾರಾಂತರೇಣಾಪಿ ಭಾವಸ್ಯಾಂಗೀಕಾರ್ಯತ್ವಮುಪಪಾದಯತಿ–**ಸರ್ವಮಿತಿ** ॥ ಸರ್ವಶಬ್ದಸಂಕೋಚೇ ಕಾರಣಾಭಾವಾದಿತ್ಯರ್ಥಃ ॥ ೭೯೬ ॥

**ವಿವರಣೆ–** ನಿರ್ಗುಣಶ್ರುತಿಯು ಭಾವಧರ್ಮಗಳನ್ನು ಮಾತ್ರ ನಿಷೇಧಿಸುತ್ತದೆ. ಅಭಾವಧರ್ಮಗಳನ್ನು ನಿಷೇಧಿಸುವುದಿಲ್ಲ, ನಿರ್ಗುಣತ್ವವು ಅಭಾವರೂಪವಾದದ್ದು ಅದನ್ನು ಬ್ರಹ್ಮನಲ್ಲಿ ಅಂಗೀಕರಿಸುತ್ತೇವೆ ಎಂಬ ವಾದಕ್ಕೆ ಬೇರೊಂದು ದೋಷವನ್ನು ಹೇಳುತ್ತಿದ್ದಾರೆ. ಭಾವಪದಾರ್ಥವೂ ಅಭಾವಾಭಾವರೂಪವಾದದ್ದು. ಘಟ ಇದೆ ಎಂದರೆ

ಘಟಾಭಾವಾಭಾವ ಇದೆ ಎಂದೇ ಅರ್ಥ. ಆದ್ದರಿಂದ ಭಾವಧರ್ಮಗಳನ್ನು ಸಹ ಬ್ರಹ್ಮನಲ್ಲಿ ಅಂಗೀಕರಿಸಿದರೆ ಅನೌಚಿತ್ಯವೇನಿದೆ? ಸರ್ವಂ ಖಲ್ವಿದಂ ಬ್ರಹ್ಮ - ಬ್ರಹ್ಮನ ಹೊರತಾಗಿ ಯಾವುದೂ ಇಲ್ಲ, ನೇಹ ನಾನಾಸ್ತಿ ಕಿಂಚನ - ಬ್ರಹ್ಮನಲ್ಲಿ ಯಾವುದೂ ಇಲ್ಲ - ಈ ರೀತಿ ವ್ಯಾಖ್ಯಾನಿಸುವ ನೀನು ಅಭಾವರೂಪಧರ್ಮವನ್ನಾದರೂ ಏಕೆ ಅಂಗೀಕರಿಸುತ್ತೀಯೆ? ಎಲ್ಲವನ್ನೂ ನಿಷೇಧಿಸಿದಾಗ ಅಭಾವವನ್ನೂ ನಿಷೇಧಿಸಿದಂತೆ ಆಯಿತಲ್ಲವೇ? ಅಭಾವವನ್ನು ಅಂಗೀಕರಿಸಿ ಸರ್ವ, ಕಿಂಚನ ಶಬ್ದಗಳಿಗೆ ಅರ್ಥಸಂಕೋಚವನ್ನಾದರೂ ಏಕೆ ಮಾಡುತ್ತೀಯೆ?

**ನೇಹ ನಾನೇತಿವಾಕ್ಯಾರ್ಥರೂಪತ್ವಾಚ್ಚೇತ್ ತತೋಽಪಿ ಕಿಮ್ ।**
**ಅರ್ಥತ್ಯಾಗೇ ಶ್ರುತೇರಪ್ರಾಮಾಣ್ಯಂ ಸ್ಯಾದಿತಿ ಧೀರ್ಯದಿ ।**
**ಗುಣಶ್ರುತೀನಾಂ ಬಹ್ವೀನಾಂ ನಾಪ್ರಾಮಾಣ್ಯಾದ್ ಬೀಭೇಷಿ ಕಿಮ್**
**॥ ೭೯೭ ॥**

**ಅರ್ಥ–** ನೇಹ ನಾನಾಸ್ತಿ ಕಿಂಚನ=ಅಭಾವರೂಪಧರ್ಮವು ನೇಹ ನಾನಾಸ್ತಿ ಕಿಂಚನ ಎಂಬ ವಾಕ್ಯದ ಅರ್ಥವೇ ಆಗಿದೆ ಎಂದರೆ, ತತೋಽಪಿ ಕಿಂ=ಅದರಿಂದಲಾದರೂ ಏನು ಪ್ರಯೋಜನ? ಅರ್ಥತ್ಯಾಗೇ=ಆ ಅಭಾವರೂಪಅರ್ಥವನ್ನು ಪರಿತ್ಯಜಿಸಿದರೆ, ಶ್ರುತೇಃ= ಶ್ರುತಿಗೆ, ಅಪ್ರಾಮಾಣ್ಯಂ=ಅಪ್ರಾಮಾಣ್ಯವು, ಸ್ಯಾತ್=ಉಂಟಾಗುತ್ತದೆ. ಇತಿ= ಹೀಗೆಂದು, ಯದಿ ಧೀಃ=ತಿಳಿಯುವುದಾದರೆ, ಬಹ್ವೀನಾಂ=ಬಹಳವಾದ, ಗುಣಶ್ರುತೀನಾಂ= ಗುಣಪ್ರತಿಪಾದಕಶ್ರುತಿಗಳಿಗೆ, ಅಪ್ರಾಮಾಣ್ಯಾತ್=ಅಪ್ರಾಮಾಣ್ಯ ಉಂಟಾಗುವುದರಿಂದ, ನ ಬಿಭೇಷಿ ಕಿಂ=ಭಯಪಡುವುದಿಲ್ಲವೇನು?

**ಅನುವಾದ–** ಅಭಾವವು ನೇಹ ನಾನಾಸ್ತಿ ಕಿಂಚನ ಎಂಬ ವಾಕ್ಯದ ಅರ್ಥರೂಪವಾದುದು ಎಂದು ಹೇಳಿದರೆ, ಅದರಿಂದಾದರೂ ಏನು? ಎಂದು ನಮ್ಮ ಪ್ರಶ್ನೆ. ಅಭಾವವನ್ನು ನಿಷೇಧ ಮಾಡಿದರೆ ಶ್ರುತಿಗೆ ಅಪ್ರಾಮಾಣ್ಯ ಬರುತ್ತದೆ ಎಂದು ಹೇಳಿದರೆ ಅನೇಕ ಗುಣಶ್ರುತಿಗಳ ಅರ್ಥವನ್ನು ನೀನು ನಿಷೇಧ ಮಾಡುವಾಗ ಬರುವ ಅಪ್ರಾಮಾಣ್ಯಪ್ರಸಂಗಕ್ಕೆ ಏಕೆ ಹೆದರುವುದಿಲ್ಲ ಎಂದು ನಮ್ಮ ಪ್ರಶ್ನೆ.

**ಭಾವವಿಲಾಸಿನೀ–** ಸಂಕೋಚೇ ಕಾರಣಮಾಶಂಕತೇ– **ನೇಹ ನಾನೇತಿ** ॥ ವಾಕ್ಯಾರ್ಥತ್ವೇಽಪಿ ಕುತೋ ನ ತದಭಾವ ಇತಿ ಪೃಚ್ಛತಿ– **ತತೋಽಪಿ ಕಿಮಿತಿ** ॥ ತತೋಽಪಿ ವಾಕ್ಯಾರ್ಥತ್ವೇಽಪಿ । ಪರಮುಖೇನೈವ ಸ್ವಾಪೇಕ್ಷಿತಂ ನ್ಯಾಯಮುದ್ಘಾಟಯತಿ– **ಅರ್ಥತ್ಯಾಗ ಇತಿ** ॥ ಶ್ರುತೇಃ ನೇಹ ನಾನೇತಿ ಶ್ರುತೇಃ । ಉತ್ತರಮಾಹ– **ಗುಣಶ್ರುತೀನಾಮಿತಿ** ॥ ಶ್ರುತ್ಯಪ್ರಾಮಾಣ್ಯಾದ್ ಭೀತೇನ ಸಕಲಶ್ರುತ್ಯಪ್ರಾಮಾಣ್ಯಾದ್ ಭೇತವ್ಯಮ್ । ಶ್ರುತಿತ್ವಾವಿಶೇಷಾದಿತಿ ಭಾವಃ ॥ ೭೯೭॥

**ವಿವರಣೆ–** ಈ ಶ್ರುತಿವಾಕ್ಯವು ಭಾವಧರ್ಮಗಳನ್ನು ನಿಷೇಧಿಸುತ್ತಿದೆ. ಯಾವ ಪದಾರ್ಥಗಳೂ ಇಲ್ಲ ಎಂದು ಅಭಾವನ್ನು ಹೇಳುತ್ತಿದೆ. ಆದ್ದರಿಂದ

ಅಭಾವಪದಾರ್ಥವನ್ನು ಒಪ್ಪುತ್ತೇನೆ. ಅದನ್ನು ಒಪ್ಪುವುದಿಂದಲಾದರೂ ಏನು ಪ್ರಯೋಜನ ಎಂದರೆ ಆ ಅರ್ಥವನ್ನು ಪರಿತ್ಯಜಿಸಿದರೆ ಶ್ರುತಿಗೆ ಅಪ್ರಾಮಾಣ್ಯ ಬರುತ್ತದೆ ಅಪ್ರಾಮಾಣ್ಯವನ್ನು ಪರಿಹರಿಸುವುದು ಪ್ರಯೋಜನ ಎಂದು ಹೇಳಿದರೆ ನಾವು ಹೀಗೆ ಕೇಳುತ್ತೇವೆ, ಭಾವಧರ್ಮವನ್ನು ನಿಷೇಧಿಸಿದರೆ ಬ್ರಹ್ಮನ ಗುಣಗಳನ್ನು ಪ್ರತಿಪಾದಿಸುವ ಶ್ರುತಿಗಳಿಗೆ ಅಪ್ರಾಮಾಣ್ಯವು ಬರುವುದು ಸಮಾನ. ಶ್ರುತಿಯ ಬಗ್ಗೆ ಅಪಾರ ಗೌರವವನ್ನು ಹೊಂದಿರುವ ನೀನು ನಿರವಕಾಶವಾದ ಗುಣಪ್ರತಿಪಾದಕವಾದ ನೂರಾರು ಶ್ರುತಿವಾಕ್ಯಗಳ ಅಪ್ರಾಮಾಣ್ಯಕ್ಕೆ ಹೆದರುವುದಿಲ್ಲವೇ?

**ಏವಂ ಸಗುಣವಾದ್ಯುಕ್ತಯುಕ್ತಿತ್ಯಾಗೋ ನ ಮೇ ಗುಣಃ ।**
**ಇತಿ ಮತ್ವಾ ನಿರ್ಗುಣಾಖ್ಯಾ ಭೇಜೇ ಹರಿಪದಾಂಬುಜಮ್ ॥ ೭೯೮ ॥**

**ಅರ್ಥ–** ಏವಂ=ಹೀಗೆ, ಸಗುಣವಾದ್ಯುಕ್ತಯುಕ್ತಿತ್ಯಾಗಃ=ಸಗುಣವಾದಿಗಳು ಹೇಳಿದ ಯುಕ್ತಿಯ ತ್ಯಾಗವು, ಮೇ=ನನಗೆ, ನ ಗುಣಃ=ಭೂಷಣವಲ್ಲ, ಇತಿ=ಹೀಗೆ, ಮತ್ವಾ=ತಿಳಿದು, ನಿರ್ಗುಣಾಖ್ಯಾ=ನಿರ್ಗುಣಶ್ರುತಿಯು, ಹರಿಪದಾಂಬುಜಂ= ಶ್ರೀಹರಿಯ ಪಾದಕಮಲವನ್ನು, ಭೇಜೇ=ಸೇರಿದಳು.

**ಅನುವಾದ– ಈ ರೀತಿಯಲ್ಲಿ ಸಗುಣವಾದಿಗಳು ಹೇಳಿದ ಈ ಯುಕ್ತಿಯನ್ನು ಪರಿತ್ಯಾಗ ಮಾಡುವುದು ನನಗೆ ಶೋಭಿಸುವುದಿಲ್ಲ ಎಂದು ತಿಳಿದು ನಿರ್ಗುಣ ಎಂಬ ಶಬ್ದವು ಹರಿಯ ಪಾದಕಮಲವನ್ನೇ ಸೇರಿತು.**

**ಭಾವವಿಲಾಸಿನೀ– ನಿರ್ಗುಣಶ್ರುತಿರಪಿ ಯುಕ್ತಿಪ್ರಿಯಾ ಇಮಾಮೇವ ಯುಕ್ತಿಮನುಸಂಧಾಯ ಸಕಲಶ್ರುತಿಪ್ರಾಮಾಣ್ಯರಕ್ಷಾಯೈ ತ್ರೈಗುಣ್ಯವರ್ಜಿತಮಿತ್ಯಾದಿಸ್ಮೃತಿಸಮಾಖ್ಯಯಾ ದುರ್ಗುಣಾನೇವ ನಿಷೇಧತೀತ್ಯಾಹ– ಏವಮಿತಿ ॥ ೭೯೮ ॥**

**ವಿವರಣೆ–** ನಿರ್ಗುಣಶ್ರುತಿಯು ಯುಕ್ತಿಪ್ರಿಯಳು. ನಿರ್ಗುಣಶ್ರುತಿಯು ಕೇವಲ ಪ್ರಾಕೃತಗುಣಗಳನ್ನು ನಿಷೇಧಿಸುತ್ತದೆ ಎಂದಾಗ ಸಮಸ್ತ ಶ್ರುತಿಗಳ ಪ್ರಾಮಾಣ್ಯವು ರಕ್ಷಿತವಾಗುತ್ತದೆ. ತ್ರೈಗುಣ್ಯವರ್ಜಿತಂ - ಎನ್ನುವ ಸ್ಮೃತಿಯ ಸಮಾಖ್ಯೆಯು ಅದಕ್ಕಿದೆ. 'ಸರ್ವಧರ್ಮೋಪಪತ್ತೇಶ್ಚ'ಸೂತ್ರವೂ ಅನಂತ ಗುಣಗಳಿರುವ ವಿಷಯದಲ್ಲಿ ಯುಕ್ತಿಯನ್ನು ಹೇಳಿದೆ. ಆ ಯುಕ್ತಿಯನ್ನು ಪರಿತ್ಯಜಿಸುವುದು ಶ್ರುತಿಯ ಮಹಾತಾತ್ಪರ್ಯಕ್ಕೆ ವಿರುದ್ಧವಾದದ್ದು. ಇದು ನನಗೆ ಭೂಷಣವಲ್ಲ. ಸದ್ಗುಣಭೂಯಿಷ್ಠನೂ, ದೋಷರಹಿತನೂ ಆದವನು ಶ್ರೀಹರಿ. ಅವನನ್ನು ಆಶ್ರಯಿಸುವುದೇ ಸೂಕ್ತವೆಂದು ಶ್ರುತಿಗಳ ಅಭಿಮಾನಿಯಾದ ಲಕ್ಷ್ಮೀದೇವಿಯು ಶ್ರೀಹರಿಯ ಪಾದಕಮಲವನ್ನು ಸೇರಿದಳು. ನಿರ್ಗುಣಶಬ್ದದಿಂದಲೂ ತ್ರಿಗುಣರಹಿತನಾದ ಹರಿಯನ್ನೇ ಹೇಳಿ ಅವನನ್ನೇ ಆಶ್ರಯಿಸಿದಳು.

**ಕಿಂಚ ನಿರ್ಗುಣಶಬ್ದೇನ ಲಕ್ಷ್ಯಂ ಚೇನ್ನಿರ್ಗುಣಂ ಕಥಮ್ ।**
**ಮುಖ್ಯಾರ್ಥಬಾಧಮೂಲೈವ ಲಕ್ಷಣೇತಿ ಸತಾಂ ಮತಮ್ ॥ ೭೯೯ ॥**

**ಅರ್ಥ–** ಕಿಂಚ=ಅಷ್ಟಲ್ಲದೇ, ಲಕ್ಷಣಾ=ಲಕ್ಷಣಾವೃತ್ತಿಯು, ಮುಖ್ಯಾರ್ಥಬಾಧಮೂಲಾ ಏವ=ವಾಚ್ಯಾರ್ಥಕ್ಕೆ ಬಾಧವೇ ಕಾರಣವಾಗಿವುಳ್ಳದ್ದು ಇತಿ=ಹೀಗೆಂದು, ಸತಾಂ=ಸಜ್ಜನರ, ಮತಂ=ಅಭಿಪ್ರಾಯವು. ನಿರ್ಗುಣಶಬ್ದೇನ =ನಿರ್ಗುಣ ಶಬ್ದದಿಂದ, ಲಕ್ಷ್ಯಂ ಚೇತ್=ಬ್ರಹ್ಮನು ಲಕ್ಷ್ಯ ಎಂದರೆ, ನಿರ್ಗುಣಂ=ಗುಣರಹಿತನು, ಕಥಂ=ಹೇಗೆ ಆಗುತ್ತಾನೆ?

**ಅನುವಾದ–** ಮತ್ತು ನಿರ್ಗುಣಶಬ್ದದಿಂದ ನಿರ್ಗುಣಬ್ರಹ್ಮನು ಲಕ್ಷ್ಯನಾದರೆ ಅವನಲ್ಲಿ ನಿರ್ಗುಣತ್ವವು ಇಲ್ಲವೆಂದಾಯಿತು. ನಿರ್ಗುಣಶಬ್ದದ ಮುಖ್ಯಾರ್ಥವು ನಿರ್ಗುಣತ್ವವೇ. ಮುಖ್ಯಾರ್ಥಕ್ಕೆ ಬಾಧ ಉಂಟಾದಾಗಲೇ ಲಕ್ಷಣಾವೃತ್ತಿಯನ್ನು ಅಂಗೀಕರಿಸುವುದು ಎಂದು ಸಜ್ಜನರ ಅಭಿಪ್ರಾಯ. ಆದ್ದರಿಂದ ನಿರ್ಗುಣಶಬ್ದಕ್ಕೆ ಬ್ರಹ್ಮನಲ್ಲಿ ಲಕ್ಷಣಾವನ್ನು ಮಾಡಿದರೆ ಬ್ರಹ್ಮನಲ್ಲಿ ನಿರ್ಗುಣತ್ವವು ಇಲ್ಲವೆಂದಾಯಿತು.

**ಭಾವವಿಲಾಸಿನೀ–** ಪ್ರಕಾರಾಂತರೇಣ ಶ್ರುತೇಃ ಪರಮತೇ ನಿರ್ಗುಣಾರ್ಥಕತ್ವಂ ನಾಯಾತೀತ್ಯಾಹ– **ಕಿಂಚೇತಿ** ॥ ಮುಖ್ಯಾರ್ಥಬಾಧಮೂಲೈವ ಮುಖ್ಯಾರ್ಥಬಾಧೇ ತದ್ಯೋಗೇ ರೂಢಿತೋಽಥ ಪ್ರಯೋಜನಾದಿತಿ ವಚನಾನ್ನಿರ್ಗುಣತ್ವರೂಪಮುಖ್ಯಾರ್ಥಬಾಧಮೂಲೈವ । ಏವಂಚ ಲಕ್ಷಣಾವಾದೀ ಮಾಯಾವಾದ್ಯೇವ ಮಮಾರ್ಥಂ ಬಾಧಿತವಾನ್ ॥ ೭೯೯ ॥

**ವಿವರಣೆ–** 'ಮುಖ್ಯಾರ್ಥಬಾಧೇ ತದ್ಯೋಗೇ ರೂಢಿತೋಽಥ ಪ್ರಯೋಜನಾತ್' ಎಂದು ಅಭಿಯುಕ್ತರ ವಾಕ್ಯ. ವಾಚ್ಯಾರ್ಥಕ್ಕೆ ಬಾಧ ಇದ್ದಾಗ ಮಾತ್ರ ಲಕ್ಷಣಾವನ್ನು ಆಶ್ರಯಿಸಬೇಕು. ನಿರ್ಗುಣಶಬ್ದವು ಲಕ್ಷಣಾವೃತ್ತಿಯಿಂದ ಬ್ರಹ್ಮನನ್ನು ಪ್ರತಿಪಾದಿಸುತ್ತದೆ ಎಂದು ಪರರ ಸಿದ್ಧಾಂತ. ವಾಚ್ಯತ್ವವನ್ನೇ ಪರರು ಬ್ರಹ್ಮನಿಗೆ ಒಪ್ಪಿಲ್ಲ. ನಿರ್ಗುಣಶಬ್ದದ ಗುಣರಹಿತ ಎಂಬ ವಾಚ್ಯಾರ್ಥಕ್ಕೆ ಬ್ರಹ್ಮನಲ್ಲಿ ಬಾಧ ಇದೆ ಎಂದು ಹೇಳಿದಂತಾಯಿತು. ಇಲ್ಲದಿದ್ದರೆ ಲಕ್ಷಣಾ ಯುಕ್ತವಾಗುವುದಿಲ್ಲ. ಹೀಗಿರುವಾಗ ಬ್ರಹ್ಮನು ಧರ್ಮರಹಿತನಾಗವುದಾದರೂ ಹೇಗೆ ಸಾಧ್ಯ? ಗಂಗಾಶಬ್ದಲಕ್ಷ್ಯವಾದ ತೀರದಲ್ಲಿ ಗಂಗಾತ್ವವು ಇಲ್ಲವಷ್ಟೆ? ಹಾಗೆ ನಿರ್ಗುಣಶಬ್ದ ಲಕ್ಷ್ಯನಾದ ಬ್ರಹ್ಮನಲ್ಲಿ ನಿರ್ಗುಣತ್ವವು ಇರಲು ಸಾಧ್ಯವಿಲ್ಲ.

**ವಾಚ್ಯತ್ವಂ ನ ಪರೋ ವಕ್ತಿ ತೇನ ಸ್ಯಾನ್ಮೇ ಗತಿರ್ವೃಥಾ ।**
**ಇತ್ಯಾದ್ಯಾಲೋಚ್ಯ ಸಾ ವಾಣೀ ಪ್ರಾಣೇಶಮತಮನ್ವಗಾತ್ ॥ ೮೦೦ ॥**

**ಅರ್ಥ–** ಪರಃ=ಪರನು, ವಾಚ್ಯತ್ವಂ=ಬ್ರಹ್ಮನಿಗೆ ವಾಚ್ಯತ್ವವನ್ನು, ನ ವಕ್ತಿ=ಹೇಳುವುದಿಲ್ಲ. ತೇನ=ಆದ್ದರಿಂದ, ಮೇ=ನನ್ನ, ಗತಿಃ=ಜೀವನವು, ವೃಥಾ=ವ್ಯರ್ಥವು. ಇತ್ಯಾದ್ಯಾಲೋಚ್ಯ=

ಇದೇ ಮೊದಲಾದ ರೀತಿಯಿಂದ ಆಲೋಚಿಸಿ, ಸಾ ವಾಣೀ=ಆ ವೇದವಾಣಿಯು, ಪ್ರಾಣೇಶಮತಂ=ಮಧ್ವಾಚಾರ್ಯರ ಸಿದ್ಧಾಂತವನ್ನು, ಅನ್ವಗಾತ್=ಅನುಸರಿಸಿತು.

**ಅನುವಾದ–** ಅದ್ವೈತವಾದಿಗಳು ನನಗೆ ಬ್ರಹ್ಮವಾಚಕತ್ವವನ್ನೇ ಅಂಗೀಕರಿಸುವುದಿಲ್ಲ. ಬ್ರಹ್ಮನು ನನ್ನಿಂದ ವಾಚ್ಯನಾಗದಿದ್ದರೆ, ನನಗೆ ಬ್ರಹ್ಮನ ಸಂಬಂಧವೇ ಇಲ್ಲವಾದ್ದರಿಂದ ನನ್ನ ಜೀವನವೇ ವ್ಯರ್ಥವಾಗುತ್ತದೆ ಇತ್ಯಾದಿಯಾಗಿ ಆಲೋಚಿಸಿ ಆ ನಿರ್ಗುಣ ಎಂಬ ವಾಣಿಯು ಮಧ್ವಾಚಾರ್ಯರ ಮತವನ್ನು ಅನುಸರಿಸಿತು.

**ಭಾವವಿಲಾಸಿನೀ–** ವಾಚ್ಯತ್ವಂ ಮುಖ್ಯತೋ ನಿರ್ಗುಣಶಬ್ದವಾಚ್ಯತ್ವಮ್ । ಪರೋ ಮಾಯಾವಾದೀ । ತೇನ ಮುಖ್ಯಪಕ್ಷಸ್ಯ ಪರೈರನಂಗೀಕಾರಾತ್ ಲಕ್ಷಣಾಪಕ್ಷೇ ಚ ಮದರ್ಥಸ್ಯೈವ ಬಾಧೇನ । ಸಾ ವಾಣೀ ನಿರ್ಗುಣತಾವಾಣೀ । ಪ್ರಾಣೇಶಮತಂ ಮುಖ್ಯವೃತ್ತ್ಯಾ ತ್ರಿಗುಣವರ್ಜಿತತ್ವರೂಪಾಬಾಧಿತಾರ್ಥಪ್ರತಿಪಾದಕಮುಖ್ಯಪ್ರಾಣಮತಮ್ ॥ ೮೦೦॥

**ವಿವರಣೆ–** ಅದ್ವೈತವೇದಾಂತದಲ್ಲಿ ಬ್ರಹ್ಮನಿಗೆ ವಾಚ್ಯತ್ವವನ್ನು ಅಂಗೀಕರಿಸಿಲ್ಲ, ಎಲ್ಲ ಶಬ್ದಗಳಿಗೂ ಬ್ರಹ್ಮನು ಲಕ್ಷ್ಯ ಎನ್ನುವರು. ಲಕ್ಷಣಾವನ್ನು ಆಶ್ರಯಿಸಿದರೆ ನನ್ನ ಅರ್ಥಕ್ಕೆ ಬಾಧೆ ಬರುತ್ತದೆ. ನನ್ನ ಜೀವನಕ್ಕೆ ಅಸ್ತಿತ್ವವಿಲ್ಲ, ನನ್ನ ಜೀವನವೇ ಇಲ್ಲಿ ವ್ಯರ್ಥ ಎಂದು ಆಲೋಚಿಸಿ ನಿರ್ಗುಣತಾವಾಣಿಯು ಶಾಂಕರಸಿದ್ಧಾಂತವನ್ನು ಪರಿತ್ಯಜಿಸಿ ಮಧ್ವಾಚಾರ್ಯರ ಮತವನ್ನು ಆಶ್ರಯಿಸಿತು. ಮಧ್ವಾಚಾರ್ಯರ ಸಿದ್ಧಾಂತದಲ್ಲಿ ಬ್ರಹ್ಮನಿಗೆ ವಾಚ್ಯತ್ವವನ್ನು ಅಂಗೀಕರಿಸಲಾಗಿದೆ. ನಿರ್ಗುಣಶ್ರುತಿಯು ಶಕ್ತಿವೃತ್ತಿಯಿಂದ ಪ್ರಾಕೃತಗುಣರಹಿತ ಎಂಬ ಅರ್ಥವನ್ನು ಹೇಳುತ್ತಿದೆ. ಈ ಅರ್ಥಕ್ಕೆ ಬಾಧವೇ ಇಲ್ಲ ಆದ್ದರಿಂದ ಮುಖ್ಯಪ್ರಾಣಮತದಲ್ಲಿ ನಿರ್ಗುಣವಾಣಿಗೆ ಜೀವನವಿದೆ.

**ವಾಚ್ಯತ್ವೇ ನೈವ ಗುಣಿತಾ ವಾಚ್ಯತ್ವೇ ನಿರ್ಗುಣೋಕ್ತಿತಃ ।**
**ಲಕ್ಷ್ಯತ್ವೇ ನೈವ ಗುಣಿತಾ ಲಕ್ಷ್ಯತ್ವೇ ನಿರ್ಗುಣೋಕ್ತಿತಃ ।**
**ನೋಭಯಂ ಚೇದಶಾಬ್ದತ್ವಧರ್ಮೇಣ ಸ್ಯಾದ್ಧಿ ಧರ್ಮಿತಾ ॥ ೮೦೧ ॥**

**ಅರ್ಥ–** ನಿರ್ಗುಣೋಕ್ತಿತಃ=ನಿರ್ಗುಣಪದದಿಂದ, ವಾಚ್ಯತ್ವೇ=ಬ್ರಹ್ಮನು ವಾಚ್ಯನಾದರೆ, ವಾಚ್ಯತ್ವೇನೈವ = ವಾಚ್ಯತ್ವರೂಪಧರ್ಮದಿಂದಲೇ, ಗುಣಿತಾ= ಗುಣವುಳ್ಳವನಾದನು. ನಿರ್ಗುಣೋಕ್ತಿತಃ = ನಿರ್ಗುಣಪದದಿಂದ, ಲಕ್ಷ್ಯತ್ವೇ=ಬ್ರಹ್ಮನು ಲಕ್ಷ್ಯನಾದರೆ, ಲಕ್ಷ್ಯತ್ವೇನೈವ= ಲಕ್ಷ್ಯತ್ವರೂಪಧರ್ಮದಿಂದಲೇ, ಗುಣಿತಾ=ಗುಣವುಳ್ಳವನಾದನು. ನೋಭಯಂ ಚೇತ್= ವಾಚ್ಯನೂ ಅಲ್ಲ, ಲಕ್ಷ್ಯನೂ ಅಲ್ಲ ಎಂದರೆ, ಅಶಾಬ್ದತ್ವಧರ್ಮೇಣ= ಅಶಾಬ್ದತ್ವರೂಪ ಧರ್ಮದಿಂದ, ಧರ್ಮಿತಾ= ಧರ್ಮವುಳ್ಳವನು, ಸ್ಯಾತ್ ಹಿ=ಆದನಷ್ಟೇ.

**ಅನುವಾದ–** ಬ್ರಹ್ಮನು ನಿರ್ಗುಣಶಬ್ದದಿಂದ ವಾಚ್ಯನಾದರೆ, ವಾಚ್ಯತ್ವರೂಪವಾದ ಗುಣದಿಂದಲೇ ಸಗುಣತ್ವವು ಉಂಟಾಗುತ್ತದೆ. ನಿರ್ಗುಣಶಬ್ದದಿಂದ ಲಕ್ಷ್ಯನಾದರೆ,

ಲಕ್ಷ್ಯತ್ವರೂಪವಾದ ಧರ್ಮದಿಂದಲೇ ಸಗುಣತ್ವವು ಉಂಟಾಗುತ್ತದೆ. ಬ್ರಹ್ಮನಲ್ಲಿ ವಾಚ್ಯತ್ವವೂ ಇಲ್ಲ, ಲಕ್ಷ್ಯತ್ವವೂ ಇಲ್ಲವೆಂದು ಹೇಳಿದರೆ, ಅಶಾಬ್ದತ್ವರೂಪಧರ್ಮವು ಬರುವುದರಿಂದ, ಬ್ರಹ್ಮನು ಆ ಧರ್ಮಕ್ಕೆ ಧರ್ಮಿಯಾಗುತ್ತಾನಷ್ಟೇ.

**ಭಾವವಿಲಾಸಿನೀ–** ಶ್ರುತೇರಾಲೋಚನಾಂತರಮಾಹ– **ವಾಚ್ಯತ್ವೇನೇತಿ ।।** ವಾಚ್ಯತ್ವೇನೈವ ವಾಚ್ಯತ್ವಾಖ್ಯಧರ್ಮೇಣೈವ। ಏವಂ ಲಕ್ಷ್ಯತ್ವೇಽಪಿ ದ್ರಷ್ಟವ್ಯಮ್ । ಲಕ್ಷ್ಯತ್ವೇಽಪೀತ್ಯುಪಲಕ್ಷಣಮ್ । ಗೌಣತ್ವೇಽಪೀತಿ ದ್ರಷ್ಟವ್ಯಮ್ । ನೋಭಯಂ ಚೇತ್ ಸಗುಣತ್ವಭೀತ್ಯಾ ಉಕ್ತಧರ್ಮದ್ವಯಂ ತ್ಯಜ್ಯತೇ ಚೇತ್ । ಅಶಾಬ್ದತ್ವಧರ್ಮೇಣ ಶಬ್ದಾಬೋಧ್ಯತ್ವರೂಪಧರ್ಮೇಣ । ಮುಖ್ಯಾಮುಖ್ಯ-ವೃತ್ತ್ಯೋರಭಾವೇ ಶಬ್ದಾಬೋಧ್ಯತ್ವರೂಪಧರ್ಮಸ್ಯ ಬಲಾತ್ ಪ್ರಾಪ್ತೇರಿತಿ ಭಾವಃ । ಏವಂಚ ಧರ್ಮಮುಪಜೀವ್ಯೈವ ಮಮ ಪ್ರವೃತ್ತಿರ್ನಿವೃತ್ತಿರ್ವಾ ಸ್ಯಾತ್ । ಅತಃ ಕಥಮುಪಜೀವ್ಯಂ ಧರ್ಮಂ ರುಣಧ್ಮಿ ।। ೮೦೧ ।।

**ವಿವರಣೆ–** ಶ್ರುತಿಕನ್ಯೆಯ ಮತ್ತೊಂದು ಆಲೋಚನೆಯನ್ನು ಹೇಳುತ್ತಿದ್ದಾರೆ. ನಿರ್ಗುಣಪದದಿಂದ ಬ್ರಹ್ಮನು ವಾಚ್ಯನೆಂದಾಗ ವಾಚ್ಯತ್ವರೂಪಧರ್ಮವು ಅವನಲ್ಲಿ ಬಂದು ಅವನು ಧರ್ಮವುಳ್ಳವನಾಗುತ್ತಾನೆ. ನಿರ್ಗುಣಪದಕ್ಕೆ ಅವನು ಲಕ್ಷ್ಯ ಎಂದಾಗಲೂ ಬ್ರಹ್ಮನಲ್ಲಿ ಲಕ್ಷ್ಯತ್ವರೂಪಧರ್ಮವು ಬಂದು ಸಧರ್ಮಕನಾಗುತ್ತಾನೆ. ಸಗುಣತ್ವದ ಭೀತಿಯಿಂದ ಬ್ರಹ್ಮನು ವಾಚ್ಯನೂ ಅಲ್ಲ, ಲಕ್ಷ್ಯನೂ ಅಲ್ಲ ಎಂದರೆ ಆಗ ಅವನು ಶಬ್ದದಿಂದ ತಿಳಿಯಲ್ಪಡುವವನಲ್ಲ ಎಂದಾಗುತ್ತದೆ. ಆಗ ಬ್ರಹ್ಮನಲ್ಲಿ ಅಶಾಬ್ದತ್ವರೂಪಧರ್ಮವು ಬಂದು ಆಗಲೂ ಬ್ರಹ್ಮನು ಸಗುಣನೇ ಆಗುತ್ತಾನೆ. ನನ್ನ ಪ್ರವೃತ್ತಿನಿವೃತ್ತಿಗಳೆಲ್ಲವೂ ಧರ್ಮವನ್ನು ಉಪಜೀವಿಸಿವೆ. ಹೀಗೆ ನನಗೆ ಉಪಜೀವ್ಯವಾದ ಧರ್ಮವನ್ನಾದರೂ ಹೇಗೆ ನಾನು ಪರಿತ್ಯಜಿಸಲಿ ಎಂದು ಶ್ರುತಿಕನ್ಯೆಯು ಚಿಂತಾಕ್ರಾಂತಳಾಗುತ್ತಾಳೆ. ಮೂರು ಪಕ್ಷಗಳಲ್ಲಿಯೂ ಬ್ರಹ್ಮನಲ್ಲಿ ಧರ್ಮಗಳ ಪ್ರಾಪ್ತಿ ಅನಿವಾರ್ಯವೆಂದು ಇಲ್ಲಿ ನಿರೂಪಿಸಿದ್ದಾರೆ.

**ವ್ಯಾವಹಾರಿಕತಾಯಾಂ ಚ ಬಾಧಾದ್ ಧರ್ಮೋ ನ ಸೋಽರ್ಥಕೃತ್ ।**
**ಗುಂಜಾಪುಂಜಾಗ್ನಿನಾ ಕುಂಜೇ ಕಿಂ ಜಾಯೇತ ಹಿಮೌಷಧಮ್ ।। ೮೦೨ ।।**

**ಅರ್ಥ–** ವ್ಯಾವಹಾರಿಕತಾಯಾಂ=ಧರ್ಮಗಳು ವ್ಯಾವಹಾರಿಕ ಎಂಬ ಪಕ್ಷದಲ್ಲಿ, ಬಾಧಾತ್=ಆ ಧರ್ಮಗಳಿಗೆ ಬಾಧ ಇರುವುದರಿಂದ, ಸಃ ಧರ್ಮಃ=ಆ ಧರ್ಮವು, ನ ಅರ್ಥಕೃತ್=ಅರ್ಥಕ್ರಿಯಾಕಾರಿಯಲ್ಲ, ಕುಂಜೇ=ಲತಾಗೃಹದಲ್ಲಿ, ಗುಂಜಾಪುಂಜಾಗ್ನಿನಾ= ಗುಂಜಾಪುಂಜದ ಬೆಂಕಿಯಿಂದ, ಹಿಮೌಷಧಂ=ಶೀತನಿವೃತ್ತಿಯು, ಜಾಯೇತ ಕಿಂ= ಉಂಟಾಗುತ್ತದೆಯೇನು?

**ಅನುವಾದ–** ಧರ್ಮವು ವ್ಯಾವಹಾರಿಕವೆಂದು ಅಂಗೀಕರಿಸಿದರೆ, ವ್ಯಾವಹಾರಿಕವೆಲ್ಲವೂ ಬಾಧ್ಯವಾಗುವುದರಿಂದ ಆ ಆರೋಪಿತ ಧರ್ಮಗಳಿಗೆ ಅರ್ಥಕ್ರಿಯಾಕಾರಿತ್ವವು

**ಬರುವುದಿಲ್ಲ. ಗುಂಜಾಪುಂಜದಲ್ಲಿ ಆರೋಪಿತವಾದ ಅಗ್ನಿಯಿಂದ ಲತಾಗೃಹದಲ್ಲಿ ಶೀತ ನಿವೃತ್ತಿಯಾಗುತ್ತದೆಯೇನು?**

**ಭಾವವಿಲಾಸಿನೀ– ಧರ್ಮಾಣಾಂ ವ್ಯಾವಹಾರಿಕತಾಯಾಮ್ ಉಕ್ತಧರ್ಮಾಣಾಂ ಬಾಧಾದ್ ವ್ಯಾವಹಾರಿಕಪಕ್ಷೇಽಪಿ ಬಾಧಾವಶ್ಯಮ್ಭಾವಾತ್ ಸಃ ಬಾಧಿತೋ ಧರ್ಮಃ ಅರ್ಥಕೃತ್ ಮಮೋಪಜೀವನಾಖ್ಯಕಾರ್ಯಕಾರೀ । ಬಾಧಿತಾದರ್ಥಕ್ರಿಯಾಭಾವೇ ದೃಷ್ಟಾಂತಮಾಹ– ಗುಂಜಾಪುಂಜೇತಿ ॥ ಗುಂಜಾಪುಂಜಾಗ್ನಿಃ ಗುಂಜಾಪುಂಜಾ ಆರೋಪಿತಾಗ್ನಿಃ । ಹಿಮೌಷಧಂ ಶೀತನಿವೃತ್ತಿಃ ॥ ೮೦೨ ॥**

**ವಿವರಣೆ–** ಶ್ರುತಿಯು ಬ್ರಹ್ಮನಲ್ಲಿ ಧರ್ಮಗಳು ಇವೆ ಎಂದು ಹೇಳುತ್ತಿದೆ. ಆದ್ದರಿಂದ ಶ್ರುತಿಯು ಅರ್ಥಹೀನವಲ್ಲ. ಆದರೆ ಆ ಧರ್ಮಗಳು ಪಾರಮಾರ್ಥಿಕವಲ್ಲ. ಅವು ವ್ಯಾವಹಾರಿಕ ಎಂದು ಪರರ ವಾದ. ಅದಕ್ಕೆ ಇಲ್ಲಿ ದೋಷವನ್ನು ಹೇಳುತ್ತಿದ್ದಾರೆ. ವ್ಯಾವಹಾರಿಕವಾದದ್ದು ಬಾಧಿತವಾಗುತ್ತದೆ. ಕಪ್ಪೆಚಿಪ್ಪಿನಲ್ಲಿ ಕಂಡ ರಜತವು ಬಾಧಿತವಾಗಿದೆ. ಹತ್ತಿರ ಹೋಗಿ ಪರೀಕ್ಷಿಸಿದಾಗ ಇದು ರಜತವಲ್ಲ, ಶುಕ್ತಿ ಎಂದು ಜ್ಞಾನ ಉಂಟಾಗುತ್ತದೆ. ಅಲ್ಲಿ ಕಂಡ ರಜತವು ಅರ್ಥಕ್ರಿಯಾಕಾರಿಯಲ್ಲ. ಆದರಿಂದ ಆಭರಣಾದಿಗಳನ್ನು ಮಾಡಲು ಅಸಾಧ್ಯ. ಅದರಂತೆ ಬ್ರಹ್ಮನ ಧರ್ಮಗಳು ಬಾಧಿತ. ಅವುಗಳು ಅರ್ಥಕ್ರಿಯಾಕಾರಿಯಲ್ಲ ಎಂದಾಗುತ್ತದೆ. ಇದನ್ನು ದೃಷ್ಟಾಂತದಿಂದ ಸಮರ್ಥಿಸುತ್ತಿದ್ದಾರೆ. ಗುಂಜಾಪುಂಜವು ಬೆಂಕಿಯಂತೆ ಹೊಳೆಯುತ್ತಿರುತ್ತದೆ. ದೂರದಿಂದ ನೋಡಿದಾಗ ಬೆಂಕಿಯಂತೆ ಕಾಣುತ್ತದೆ. ಅಲ್ಲಿ ಕಾಣುವುದು ಆರೋಪಿತವಾದ ಬೆಂಕಿ, ಅದು ಅರ್ಥಕ್ರಿಯಾಕಾರಿಯಲ್ಲ. ಆದರಿಂದ ಶೀತನಿವೃತ್ತಿಯಾಗುವುದಿಲ್ಲ. ಅದರಂತೆ ವ್ಯಾವಹಾರಿಕವಾದ ಧರ್ಮಗಳು ಅರ್ಥಕ್ರಿಯಾಕಾರಿಯಲ್ಲ. ಅವು ಅಪ್ರಯೋಜಕ. ನನ್ನ ಜೀವನಕ್ಕೆ ಅದು ಪ್ರಯೋಜಕವಲ್ಲ ಎಂದು ಶ್ರುತಿಕನ್ಯೆಯು ಯೋಚಿಸುತ್ತಾಳೆ.

**ಇತಿ ಸರ್ವಂ ಸಮಾಲೋಚ್ಯ ಶ್ರುತಿಃ ಸಾ ವ್ಯಾಹತೇರ್ಭಯಾತ್ ।**
**ಅವ್ಯಾಹತಗತಿಂ ವಿಷ್ಣುಮವ್ಯಾಜಸ್ನೇಹತೋಽಭಜತ್ ॥ ೮೦೩ ॥**

**ಅರ್ಥ–** ಇತಿ=ಹಿಂದೆ ಹೇಳಿದಂತೆ, ಸರ್ವಂ=ಎಲ್ಲವನ್ನೂ, ಸಮಾಲೋಚ್ಯ=ಚೆನ್ನಾಗಿ ವಿಮರ್ಶಿಸಿ, ಸಾ=ಆಯಾವ, ಶ್ರುತಿಃ=ನಿರ್ಗುಣಶ್ರುತಿಯು, ವ್ಯಾಹತೇಃ=ವ್ಯಾಹತಿಯ, ಭಯಾತ್=ಭಯದಿಂದ, ಅವ್ಯಾಹತಗತಿಂ=ಯಾರಿಂದಲೂ ತಡೆಯಲ್ಪಡದ ಗಮನವುಳ್ಳ, ವಿಷ್ಣುಂ=ವಿಷ್ಣುವನ್ನು, ಅವ್ಯಾಜಸ್ನೇಹತಃ=ನಿರ್ನಿಮಿತ್ತವಾದ ಭಕ್ತಿಯಿಂದ, ಅಭಜತ್=ಸೇವಿಸಿತು.

**ಅನುವಾದ– ಶ್ರುತಿಕನ್ಯೆಯು ಹೀಗೆಲ್ಲಾ ಆಲೋಚನೆ ಮಾಡಿ, ವ್ಯಾಹತಿಗೆ ಹೆದರಿ ಅಪ್ರತಿಹತಗತಿಯುಳ್ಳ ವಿಷ್ಣುವನ್ನು ನಿರ್ವ್ಯಾಜಸ್ನೇಹದಿಂದ ಸೇರಿದಳು.**

**ಭಾವವಿಲಾಸಿನೀ**—ಸಾ ಶ್ರುತಿಃ ನಿರ್ಗುಣಶ್ರುತಿಃ। ವ್ಯಾಹತೇರಿತಿ ಜಾತ್ಯೇಕವಚನಮ್ । ಅವ್ಯಾಹತ-ಗತಿಂ ಬ್ರಹ್ಮಾಂಡಖರ್ಪರನಿರೋಧೇಽಪಿ ತದ್ಭೇದಸ್ಯೈವ ಕೃತತ್ವಾದವ್ಯಾಹತಗತಿಮ್ । ಅಪೌರುಷೇಯತಯಾ ಪ್ರಾಮಾಣ್ಯನಿಯಮಾದ್ ಅಹಮಪ್ಯವ್ಯಾಹತಗತಿಃ । ಅತೋಽ-ಯಮೇವ ಮತ್ಸಂಬಂಧಯೋಗ್ಯ ಇತಿ ಅವ್ಯಾಜಸ್ನೇಹತ ಇತ್ಯನೇನ ತನ್ಮನಃಪ್ರಿಯಸಾರ್ವಜ್ಞಾದಿ-ಗುಣಾನಾಮಾಚ್ಛೇದಿಕಾ । ತದನಪೇಕ್ಷಿತದೋಷರೂಪ ಸತ್ತ್ವಾದಿಗುಣಾನಾಮೇವ ಚ್ಛೇದಿಕೇತಿ ಧ್ವನಿತಮ್ । ಅವ್ಯಾಹತಗತಿಮಿತ್ಯನೇನಾಪಿ ಅತಿದ್ರಢೀಯಸಾ ಖರ್ಪರೇಣಾಪಿ ಯಸ್ಯ ಗತಿರೂಪಗುಣೋ ನ ವ್ಯಾಹತಃ ನಿರ್ಗುಣ ಇತಿ ಕೋಮಲವರ್ಣಪದಾತ್ಮಿಕಾಽಹಂ ಕಥಂ ಶ್ರೌತತಯಾ ದೃಢತರಸಾರ್ವಜ್ಞಾದಿಗುಣಾನ್ ವ್ಯಾಹನ್ಮೀತ್ಯಪಿ ಧ್ವನಿತಮ್ ॥ ೮೦೩ ॥

**ವಿವರಣೆ**— ಹಿಂದಿನ ಶ್ಲೋಕಗಳಲ್ಲಿ ಹೇಳಿದಂತೆ ನಿರ್ಗುಣಶ್ರುತಿಯು ಯುಕ್ತಿಗಳಿಂದ ವಿಮರ್ಶಿಸಿದಳು. ಪರರು ಹೇಳುವ ಎಲ್ಲ ಪಕ್ಷವೂ ವ್ಯಾಹತವಾಗಿದೆ. ಈ ಕಾರಣದಿಂದ ನಿರ್ಗುಣಬ್ರಹ್ಮನ ಸಂಬಂಧವನ್ನೇ ಪರಿತ್ಯಜಿಸಿದಳು. ಜ್ಞಾನಾನಂದಸೌಂದರ್ಯಾದಿ ಗುಣಗಳಿಂದ ಭೂಷಿತನಾದ ಶ್ರೀಹರಿಯ ಗತಿಯು ತಡೆರಹಿತವಾದದ್ದು. ತ್ರಿವಿಕ್ರಮನಾಗಿ ಬೆಳೆದಾಗ ಶ್ರೀಹರಿಯ ಪಾದಾಂಗುಷ್ಠದ ಉಗುರಿನ ತುದಿಯ ಬ್ರಹ್ಮಾಂಡದ ಕಟಾಹಕ್ಕೆ ತಾಕಿತು. ಆ ಗಟ್ಟಿಯಾದ ಕಟಾಹವೇ ಬಿರುಕುಬಿಟ್ಟಿತೇ ಹೊರತಾಗಿ ಅವನ ಗತಿಗೆ ಪ್ರತಿರೋಧ ಉಂಟಾಗಲಿಲ್ಲ. ಗಟ್ಟಿಯಾದ ಕಟಾಹದಿಂದ ಗತಿಗೆ ವಿರೋಧ ಬಾರದಿರುವಾಗ ಕೋಮಲವಾದ ನಿರ್ಗುಣಪದದಿಂದ ಸಾರ್ವಜ್ಞಾದಿ ಗುಣಗಳಿಗೆ ಪ್ರತಿರೋಧವಾದರೂ ಹೇಗೆ ಸಾಧ್ಯ? ಹೀಗೆ ಅವನ ಮಹಿಮೆಗಳು ಅಬಾಧ್ಯಗಳಾಗಿವೆ. ನಾನೂ ಅಪೌರುಷೇಯ, ಪ್ರಾಮಾಣ್ಯವು ನಿಶ್ಚಿತವಾಗಿರುವುದರಿಂದ ಅರ್ಥಕ್ಕೆ ವ್ಯಭಿಚಾರವಿಲ್ಲ, ನಾನೂ ಅವ್ಯಾಹತಗತಿ ಶ್ರೀಹರಿಯೂ ಅವ್ಯಾಹತಿಗತಿ ಎಂದು ಯೋಚಿಸಿದ ಶ್ರುತಿಕನ್ಯೆಯು ನಿರ್ನಿಮಿತ್ತವಾದ ಪರಿಶುದ್ಧಭಕ್ತಿಯಿಂದ ಶ್ರೀಹರಿಯನ್ನು ಸೇವಿಸಿದಳು. ಅಂದರೆ ಪರಮಮುಖ್ಯವೃತ್ತಿಯಿಂದ ಶ್ರೀಹರಿಯ ಮಹಿಮೆಯನ್ನು ಪ್ರತಿಪಾದಿಸಿದಳು.

ಅವ್ಯಾಜಸ್ನೇಹತಃ ಎಂಬುದರಿಂದ ನಿರ್ಗುಣಶ್ರುತಿಯು ಅವಳ ಮನಸ್ಸಿಗೆ ಪ್ರಿಯವಾದ ಸಾರ್ವಜ್ಞಸೌಂದರ್ಯಾದಿಗುಣಗಳನ್ನು ನಿಷೇಧಿಸದೇ ಅನಪೇಕ್ಷಿತವಾದ ದೋಷರೂಪಸತ್ವಾದಿಗುಣಗಳನ್ನೇ ನಿಷೇಧಿಸುತ್ತಾಳೆ ಎಂದು ಸೂಚಿತವಾಗಿದೆ.

ಮೃಷಾ ಚೇನ್ನಿರ್ಗುಣತ್ವಂ ಸ್ಯಾತ್ ಸಗುಣತ್ವಶ್ರುತೇರ್ಬಲಾತ್ ।
ಸತ್ಯಾ ಸಗುಣತಾ ತರ್ಹಿ ಸಿಧ್ಯೇದದ್ವೈತವತ್ ತವ ॥ ೮೦೪ ॥

**ಅರ್ಥ**— ನಿರ್ಗುಣತ್ವಂ=ನಿರ್ಗುಣತ್ವವು, ಮೃಷಾ ಚೇತ್=ಮಿಥ್ಯಾ ಆದರೆ, ಸಗುಣತ್ವಶ್ರುತೇಃ= ಸಗುಣತ್ವಶ್ರುತಿಯ, ಬಲಾತ್=ಬಲದಿಂದ, ಸಗುಣತಾ=ಸಗುಣತ್ವವು,

ಸತ್ಯಾ ಸ್ಯಾತ್=ಸತ್ಯವಾಗುತ್ತದೆ. ತರ್ಹಿ=ಆ ಪಕ್ಷದಲ್ಲಿ ತವ=ನಿನ್ನ ಅದ್ವೈತವತ್= ಅದ್ವೈತದಂತೆ, ಸಿಧ್ಯೇತ್=ಸಿದ್ಧವಾಗುತ್ತದೆ.

**ಅನುವಾದ–** ನಿರ್ಗುಣತ್ವವು ಮಿಥ್ಯಾ ಎಂದು ಹೇಳಿದರೆ, ಸಗುಣತ್ವಶ್ರುತಿಯ ಸಾಮರ್ಥ್ಯದಿಂದ ಸಗುಣತ್ವವು ಭೇದವು ಮಿಥ್ಯೆಯಾದಾಗ ಅದ್ವೈತವು ಹೇಗೆ ಸತ್ಯವಾಗಿ ಸಿದ್ಧಿಸುತ್ತದೆಯೋ, ಹಾಗೆಯೇ ಸತ್ಯವಾಗಿ ಸಿದ್ಧಿಸುತ್ತದೆ.

**ಭಾವವಿಲಾಸಿನೀ–** ಅಧುನಾ ನಿರ್ಗುಣತ್ವಂ ಮಿಥ್ಯಾ ಸತ್ಯಂ ವೇತಿ ವಿಕಲ್ಪಂ ಮನಸಿ ನಿಧಾಯಾದ್ಯಂ ದೂಷಯತಿ– **ವೃಷಾ ಚೇದಿತಿ** ॥ ವೃಷಾ ಮಿಥ್ಯಾ । ಅದ್ವೈತವತ್ ತವಾದ್ವೈತವದ್ ಭೇದಮಿಥ್ಯಾತ್ವೇ ಐಕ್ಯಶ್ರುತ್ಯಾ ಪ್ರತಿಪಾದಿತಭೇದವಿರುದ್ಧೈಕ್ಯಸ್ಯ ಸತ್ಯತ್ವವತ್ । ಅನ್ಯಥಾ ತದಪಿ ನ ಸ್ಯಾದಿತ್ಯಾತ್ಮೀಯ ಏವ ಬಾಣೋ ಭವಂತಂ ಪ್ರಹರತೀತಿ ಭಾವಃ ॥ ೮೦೪ ॥

**ವಿವರಣೆ–** ನಿರ್ಗುಣತ್ವವು ಮಿಥ್ಯೆಯೋ ಅಥವಾ ಸತ್ಯವೋ ಎಂದು ವಿಕಲ್ಪಿಸಿ ದೋಷವನ್ನು ಹೇಳುತ್ತಿದ್ದಾರೆ. ಭೇದವು ಮಿಥ್ಯಾ ಆದಾಗ ಭೇದಪ್ರತಿಪಾದಕಶ್ರುತಿಗಳು ಅತತ್ವಾವೇದಕವಾಗುತ್ತವೆ. ಇದರಿಂದ ದುರ್ಬಲವಾದ ಭೇದಶ್ರುತಿಗಳಿಂದ ಬಾಧವು ತತ್ತ್ವಮಸಿ ಎಂಬ ಐಕ್ಯಶ್ರುತಿಗೆ ಇಲ್ಲ. ಹೀಗೆ ಅದ್ವೈತವು ಶ್ರುತಿಪ್ರಮಾಣದಿಂದ ಸತ್ಯವಾಗಿ ಸಿದ್ಧವಾಗುತ್ತದೆ ಎಂದು ಪರರ ವಾದ. ಪ್ರಕೃತ ನಿರ್ಗುಣತ್ವವು ಮಿಥ್ಯಾ ಎಂದರೆ 'ಕೇವಲೋ ನಿರ್ಗುಣಶ್ಚ' ಶ್ರುತಿಯು ಅತತ್ವಾವೇದಕವಾಗಿ ದುರ್ಬಲವಾಗುತ್ತದೆ. ಆಗ ನಿರ್ಗುಣಶ್ರುತಿಯಿಂದ ಸಗುಣಶ್ರುತಿಗೆ ಬಾಧವಿಲ್ಲ. ಹೀಗೆ ಶ್ರುತಿಯಿಂದ ಸಗುಣತ್ವಕ್ಕೆ ಸತ್ಯತ್ವವು ಸಿದ್ಧವಾಗುತ್ತದೆ. ಹೀಗೆ ನೀವು ಅದ್ವೈತಸಿದ್ಧಿಗೆ ಅನುಸರಿಸಿದ ಮಾರ್ಗವೇ ನಿಮಗೆ ಮಾರಕವಾಗಿ ಗುಣಗಳು ಸತ್ಯವೆಂದಾಗುತ್ತದೆ.

**ಅತತ್ವಾವೇದಕಂ ವಾಕ್ಯಂ ನಹಿ ತತ್ವಸ್ಯ ಬಾಧಕಮ್ ।**
**ಅತತ್ವತತ್ವಯೋಶ್ಚೈವ ನ ವಿರೋಧೋಽಸ್ತಿ ಕಶ್ಚನ ॥ ೮೦೫ ॥**

**ಅರ್ಥ–** ಅತತ್ವಾವೇದಕಂ=ತತ್ವಾವೇದಕವಲ್ಲದ, ವಾಕ್ಯಂ=ವಾಕ್ಯವು, ತತ್ವಸ್ಯ=ತತ್ವಕ್ಕೆ, ನಹಿ ಬಾಧಕಂ=ಬಾಧಕವಾಗುವುದಿಲ್ಲ. ಅತತ್ವತತ್ವಯೋಃ=ಅತತ್ವ ಹಾಗೂ ತತ್ವಗಳಿಗೆ ಕಶ್ಚನ= ಯಾವ ರೀತಿಯ, ವಿರೋಧಃ=ವಿರೋಧವೂ, ನಾಸ್ತಿ=ಇಲ್ಲ.

**ಅನುವಾದ–** ಅತತ್ವಾವೇದಕ ವಾಕ್ಯವು ಎಂದೂ ತತ್ವಕ್ಕೆ ಬಾಧಕವಾಗುವುದಿಲ್ಲವಷ್ಟೇ? ಮತ್ತು ತತ್ತ್ವ ಮತ್ತು ಅತತ್ತ್ವಗಳಿಗೆ ಯಾವ ವಿರೋಧವೂ ಇರುವುದಿಲ್ಲ.

**ಭಾವವಿಲಾಸಿನೀ–** ತತ್ರ ಯುಕ್ತಿಮಾಹ– **ಅತತ್ವಾವೇದಕಮಿತಿ** ॥ ಹೀತ್ಯನೇನ ನಾಸ್ತೀತಿ ವಿಪ್ರಲಂಭಕವಾಕ್ಯಾದ್ ಘಟಾಸ್ತಿತಾಯಾ ಅಪಾಯಾದರ್ಶನಾದಿತಿ ಪ್ರಸಿದ್ಧಿಮಾಹ– ಅತ್ರಾಪಿ ಮೂಲೀಭೂತಯುಕ್ತಿಮಾಹ– ಅತತ್ತ್ವತತ್ತ್ವಯೋರಿತಿ ॥ ಆರೋಪಿತರಜತತ್ವಸ್ಯಾನಾರೋಪಿತ ಶುಕ್ತಿತ್ವಸ್ಯ ಚ ವಿರೋಧಾದರ್ಶನಾದಿತಿ ಭಾವಃ ॥ ೮೦೫ ॥

**ವಿವರಣೆ–** ಪ್ರಬಲವಾದದ್ದು ದುರ್ಬಲವಾದದ್ದನ್ನು ಬಾಧಿಸುತ್ತದೆ. ಆದರೆ ಬಾಧ್ಯಬಾಧಕಭಾವವು ಬರಲು ಕೇವಲ ಪ್ರಾಬಲ್ಯದೌರ್ಬಲ್ಯಗಳು ನಿಯಾಮಕವಲ್ಲ. ಅವೆರಡರಲ್ಲೂ ಪರಸ್ಪರವಿರೋಧವೂ ಇರಬೇಕು. ಆರೋಪಿತವಾದ ರಜತತ್ವಕ್ಕೂ ಅನಾರೋಪಿತ ಶುಕ್ತಿತ್ವಕ್ಕೂ ಪರಸ್ಪರ ವಿರೋಧವಿಲ್ಲ. ಪ್ರಕೃತ ಮಿಥ್ಯಾಭೂತವಾದ ನಿರ್ಗುಣತ್ವವನ್ನು ಹೇಳುತ್ತಿರುವುದರಿಂದ ನಿರ್ಗುಣಶ್ರುತಿಯು ಅತತ್ವಾವೇದಕ. ಸತ್ಯವಾದ ಸಗುಣತ್ವವನ್ನು ಹೇಳುತ್ತಿರುವುದರಿಂದ ಸಗುಣಶ್ರುತಿಯು ತತ್ವಾವೇದಕ. ಈ ಎರಡಕ್ಕೂ ಪರಸ್ಪರ ವಿರೋಧವಿಲ್ಲ. ಆದ್ದರಿಂದ ನಿರ್ಗುಣಶ್ರುತಿಯಿಂದ ಬಾಧವು ಸಗುಣಶ್ರುತಿಗೆ ಬರುವುದಿಲ್ಲ.

**ನ ಮೃಷಾ ನಿರ್ಗುಣತ್ವಂ ಚೇನ್ನಿರ್ಗುಣತ್ವಶ್ರುತಿರ್ಗತಾ ।**
**ತೇನೈವ ಸಗುಣತ್ವಾಪ್ತೇರ್ಭಾವಮಾತ್ರನಿಷೇಧನೇ ।**
**ಅನ್ಯೋನ್ಯಾಭಾವಭೇದಸ್ಯ ಪಟ್ಟಬಂಧೋ ಭವಿಷ್ಯತಿ ॥ ೮೦೬ ॥**

**ಅರ್ಥ–** ನಿರ್ಗುಣತ್ವಂ=ನಿರ್ಗುಣತ್ವವು, ನ ಮೃಷಾ ಚೇತ್=ಸತ್ಯವಾದರೆ, ತೇನೈವ= ನಿರ್ಗುಣತ್ವರೂಪಗುಣದಿಂದಲೇ, ಸಗುಣತ್ವಾಪ್ತೇಃ= ಸಗುಣತ್ವವು ಪ್ರಾಪ್ತವಾಗುವುದರಿಂದ, ನಿರ್ಗುಣತ್ವಶ್ರುತಿಃ=ನಿರ್ಗುಣತ್ವಶ್ರುತಿಯು, ಗತಾ=ಹೋಯಿತು. ಭಾವಮಾತ್ರ ನಿಷೇಧನೇ= ಭಾವಧರ್ಮವನ್ನು ಮಾತ್ರ ನಿಷೇಧಿಸುತ್ತದೆ ಎಂದರೆ, ಅನ್ಯೋನ್ಯಾಭಾವ ಭೇದಸ್ಯ=ಅನ್ಯೋನ್ಯಾಭಾವರೂಪವಾದ ಭೇದಕ್ಕೆ ಪಟ್ಟಬಂಧಃ=ಪಟ್ಟಾಭಿಷೇಕವು, ಭವಿಷ್ಯತಿ=ಆಗುತ್ತದೆ.

**ಅನುವಾದ–** ನಿರ್ಗುಣತ್ವವು ಮಿಥ್ಯೆ ಅಲ್ಲವೆಂದು ಹೇಳಿದರೆ, ನಿರ್ಗುಣತ್ವರೂಪಗುಣದಿಂದಲೇ, ಸಗುಣತ್ವವು ಪ್ರಾಪ್ತವಾಗುವುದರಿಂದ, ನಿರ್ಗುಣತ್ವ ಶ್ರುತಿಯು ಹೊರಟು ಹೋಯಿತು. ನಿರ್ಗುಣತ್ವ ಶ್ರುತಿಯು ಭಾವಮಾತ್ರವನ್ನು ನಿಷೇಧ ಮಾಡಿದರೆ, ಭೇದವು ಅನ್ಯೋನ್ಯಾಭಾವರೂಪವಾದುದರಿಂದ ಭೇದಕ್ಕೆ ಪಟ್ಟಾಭಿಷೇಕವಾಗುವುದು.

**ಭಾವವಿಲಾಸಿನೀ–** ದ್ವಿತೀಯಪಕ್ಷಂ ದೂಷಯತಿ– ನ ಮೃಷೇತಿ ॥ ತೇನೈವ ನಿರ್ಗುಣತ್ವರೂಪಗುಣೇನೈವ । ಭಾವಮಾತ್ರನಿಷೇಧನೇ ನಿರ್ಗುಣಪದೇನ ಸ್ವಾರ್ಥಭೂತಮಭಾವಮನಿಷಿಧ್ಯ ಭಾವಮಾತ್ರನಿಷೇಧನೇ ಅನ್ಯೋನ್ಯಾಭಾವಭೇದಸ್ಯ ಅನ್ಯೋನ್ಯಾಭಾವಾಖ್ಯಭೇದಸ್ಯ ಪಟ್ಟಬನ್ಧೋ ಭವಿಷ್ಯತಿ । ಅಭಾವರೂಪತಯಾ ತಸ್ಯಾಪ್ಯವಶ್ಯಮಂಗೀಕಾರ್ಯತ್ವಂ ಸ್ಯಾದಿತಿ ಭಾವಃ ॥೮೦೬॥

**ವಿವರಣೆ–** ನಿರ್ಗುಣತ್ವವು ಸತ್ಯ ಎಂದರೆ ಸತ್ಯವಾದ ನಿರ್ಗುಣತ್ವರೂಪಧರ್ಮವು ಬ್ರಹ್ಮನಲ್ಲಿ ಪ್ರಾಪ್ತವಾಗುತ್ತದೆ. ಇದರಿಂದ ಗುಣರಾಹಿತ್ಯವನ್ನು ಹೇಳುವ ನಿರ್ಗುಣಶ್ರುತಿಗೆ ಅಪ್ರಾಮಾಣ್ಯವು ಬರುತ್ತದೆ. ನಿರ್ಗುಣಶ್ರುತಿಯು ಭಾವಧರ್ಮವನ್ನು ಮಾತ್ರ

ನಿಷೇಧಿಸುತ್ತದೆ, ಅಭಾವಧರ್ಮವನ್ನು ನಿಷೇಧಿಸುವುದಿಲ್ಲ ಎಂದರೆ ಅನ್ಯೋನ್ಯಾ-ಭಾವವನ್ನು ಒಪ್ಪಿದಂತಾಗುತ್ತದೆ. ಅನ್ಯೋನ್ಯಾಭಾವವೆಂದರೆ ಭೇದ. ನ್ಯಾಯಸಿದ್ಧಾಂತದಲ್ಲಿ ಅನ್ಯೋನ್ಯಾಭಾವವು ಅಭಾವಪದಾರ್ಥ. ಅನ್ಯೋನ್ಯಾಭಾವವು ಸತ್ಯಪದಾರ್ಥವಾಗಿ ರಾಜನಂತೆ ಸಿಂಹಾಸನದಲ್ಲಿ ಅಲಂಕೃತವಾಗುತ್ತದೆ.

**ಬಂಧಧ್ವಂಸಸದಾಭಾವೌ ವಿರುದ್ಧೌ ಯತ್ ಸದಾತನೌ ।**
**ಮಂತ್ರಿಣೌ ಮಂತ್ರಶಕ್ತ್ಯಾ ತಂ ಸದಾ ಬೋಧಯತೋ ನೃಪಮ್॥ ೮೦೭ ॥**

**ಅರ್ಥ–** ಬಂಧಧ್ವಂಸಸದಾಭಾವೌ=ಸಂಸಾರಬಂಧದ ಧ್ವಂಸ ಹಾಗೂ ಅತ್ಯಂತಾ-ಭಾವಗಳು, ವಿರುದ್ಧೌ= ವಿರುದ್ಧವಾದವುಗಳು, ಸದಾತನೌ=ಯಾವಾಗಲೂ ಇರುವವುಗಳು. ಮಂತ್ರಿಣೌ= ಮಂತ್ರಿಗಳು, ತಂ ನೃಪಂ= ಆ ರಾಜನನ್ನು, ಸದಾ= ನಿತ್ಯದಲ್ಲೂ, ಮಂತ್ರಶಕ್ತ್ಯಾ= ಮಂತ್ರಬಲದಿಂದ, ಬೋಧಯತಃ=ಬೋಧಿಸುತ್ತಿವೆ.

**ಅನುವಾದ–** ನಿತ್ಯವಾದ ಬಂಧಧ್ವಂಸ ಮತ್ತು ಬಂಧದ ಅತ್ಯಂತಾಭಾವಗಳು ಪರಸ್ಪರ ವಿರುದ್ಧವಾದವು. ಮಂತ್ರಿ ಸ್ಥಾನದಲ್ಲಿರುವ ಅವೆರಡೂ ತಮ್ಮ ಮಂತ್ರಶಕ್ತಿಯಿಂದ ರಾಜನ ಸ್ಥಾನದಲ್ಲಿರುವ ಅನ್ಯೋನ್ಯಾಭಾವವನ್ನು ಯಾವಾಗಲೂ ಬೋಧಿಸುತ್ತವೆ.

**ಭಾವವಿಲಾಸಿನೀ– ಅಭಾವಾಂತರಾಪತ್ತ್ಯಾಽಪ್ಯನಿಷ್ಟಮಾಹ– ಬಂಧಧ್ವಂಸೇತಿ ॥** ಬಂಧಸ್ಯ ಧ್ವಂಸಾತ್ಯಂತಾಭಾವೌ ಸದಾತನೌ ನಿತ್ಯೌ ಮುಕ್ತ್ಯನಂತರಮಪಿ ಸದಾ ವಿದ್ಯಮಾನಾವಿತ್ಯರ್ಥಃ । ವಿರುದ್ಧೌ ಸಾರ್ವಜ್ಞಾಸಾರ್ವಜ್ಞವದೇಕತ್ರಾನವಸ್ಥಿತೌ । ಸದಾ ಭೇದಸಾಧಕೌ । ಧ್ವಸ್ತಬಂಧಸ್ಯ ನಿತ್ಯಮುಕ್ತಸ್ಯ ಚೈಕ್ಯಾಯೋಗಾದಿತಿ ಭಾವಃ । ಮನ್ತ್ರಿಣೌ ಯತಸ್ತ್ವಸೌ ನಿತ್ಯಮುಕ್ತೋಽಯಂ ಚ ಬಂಧಾನ್ಮೋಕ್ಷಂ ತತ ಏವಾಭಿವಾಂಛೇದಿತಿ ಮಂತ್ರವಂತೌ । ವಿರುದ್ಧಾವಿತ್ಯನೇನ ಅವಿರುದ್ಧೌ ರಾಜಪುರುಷಾವೇಕೀಭೂಯ ಕದಾಚಿದ್ ರಾಜಾನಮೇವ ನಾಶಯತಃ । ತಯೋರ್ವಿರೋಧೇ ತು ರಾಜ್ಞ ಏವ ಸ್ಥೈರ್ಯಮಿತಿ ಲೋಕೇ ದೃಷ್ಟಮ್ । ತದ್ವದಿಹಾಪಿ ಸಹಾವಸ್ಥಿತ್ಯಾಽವಿರುದ್ಧಧರ್ಮೌ ನ ಭೇದಪ್ರಾಪಕೌ । ಪ್ರತ್ಯುತೈಕ್ಯಸ್ಯೈವ ಸಾಧಕೌ । ಗೋತ್ವಾಶ್ವತ್ವವತ್ ಸಹಾನವಸ್ಥಿತಾನ್ಯೆತು ಸ್ವಧರ್ಮಿಣೋರ್ಭೇದಸ್ಯೈವ ಸಾಧಕಾವಿತಿ ಧ್ವನಯತಿ । ಮಂತ್ರಶಕ್ತ್ಯಾ 'ದ್ವಾ ಸುಪರ್ಣಾ' ಇತ್ಯಾದಿಮಂತ್ರಶಕ್ತ್ಯಾ ನೃಪಂ ಭೇದಂ ಬೋಧಯತಃ ಪ್ರತಿಪಾದಯತಃ । ಮುಕ್ತೌ ಸದಾ ವಿದ್ಯಮಾನವಿರುದ್ಧಧರ್ಮಾಭ್ಯಾಂ ಮುಕ್ತಾವಪಿ ಸರ್ವದಾ ಜೀವಪರಯೋರ್ಭೇದ ಇತಿ ಭಾವಃ ॥ ೮೦೭ ॥

**ವಿವರಣೆ–** ಭೇದವು ಚಕ್ರವರ್ತಿಯಂತೆ ಶೋಭಿಸುತ್ತಿದೆ. ಚಕ್ರವರ್ತಿಗೆ ಬೇಕಾದ ಇಬ್ಬರು ಮಂತ್ರಿಗಳಿರುವರು. ಒಂದು ಬಂಧಧ್ವಂಸ, ಎರಡನೆಯದು ಬಂಧಾತ್ಯಂತಾಭಾವ. ಜೀವನಿಗೆ ಸಂಸಾರಬಂಧನವಿದ್ದು ಸಾಧನೆಯಿಂದ ಅದರ ನಾಶವಾಗುವುದು. ಅದನ್ನೇ ಬಂಧಧ್ವಂಸ ಎನ್ನುವರು. ರಮಾನಾರಾಯಣರಿಗೆ ಪ್ರಕೃತಿಬಂಧನ ಎಂದಿಗೂ ಇಲ್ಲ. ಅದೇ

ಬಂಧಾತ್ಯಂತಾಭಾವ, ಲಕ್ಷ್ಮೀಪರಮಾತ್ಮರಿಬ್ಬರೂ ನಿತ್ಯಮುಕ್ತರು. ಈ ಬಂಧಧ್ವಂಸ ಮತ್ತು ಬಂಧಾತ್ಯಂತಾಭಾವಗಳು ನಿತ್ಯ ಹಾಗೂ ವಿರುದ್ಧವಾದವುಗಳು. ಪ್ರಕೃತಿಯ ಬಂಧನದಿಂದ ಒಮ್ಮೆ ಕಳಚಿದವನು ಮತ್ತೆ ಎಂದಿಗೂ ಬಂಧನಕ್ಕೆ ಒಳಗಾಗುವುದಿಲ್ಲ. ಮಂತ್ರಿಗಳಲ್ಲಿ ಪರಸ್ಪರ ಐಕ್ಯಮತ್ಯವಿದ್ದಲ್ಲಿ ಇಬ್ಬರೂ ಒಂದಾಗಿ ರಾಜನನ್ನೇ ಹೊರದೂಡಬಹುದು. ಅವರಿಬ್ಬರಲ್ಲಿ ವಿರೋಧವಿದ್ದಷ್ಟು ರಾಜನಿಗೆ ಕ್ಷೇಮ. ಅವಿರುದ್ಧಧರ್ಮಗಳು ಭೇದವನ್ನು ಸಾಧಿಸುವುದಿಲ್ಲ. ರಸ ಮತ್ತು ರೂಪಗಳು ಅವಿರುದ್ಧಧರ್ಮಗಳು. ಅವು ಒಂದೇ ಹಣ್ಣಿನಲ್ಲಿ , ಒಂದೇ ಕಾಲದಲ್ಲಿ ಇರುತ್ತವೆ. ಕಾರ್ಶ್ಯ ಮತ್ತು ಸ್ಥೌಲ್ಯ ವಿರುದ್ಧಧರ್ಮಗಳು. ಇವು ಭೇದವನ್ನು ಸಾಧಿಸುತ್ತವೆ. ಚೈತ್ರನು ಸ್ಥೂಲ, ಮೈತ್ರನು ಕೃಶ, ಅವರಿಬ್ಬರೂ ಭಿನ್ನರು. ಸರ್ವಜ್ಞತ್ವ-ಅಸರ್ವಜ್ಞತ್ವಗಳು ವಿರುದ್ಧಧರ್ಮಗಳು, ಭೇದವನ್ನು ಸಾಧಿಸುತ್ತವೆ. ಅದರಂತೆ ಬಂಧಧ್ವಂಸ ಬಂಧಾತ್ಯಂತಾಭಾವಗಳು ವಿರುದ್ಧಧರ್ಮಗಳು. ಇವುಗಳು ಜೀವೇಶ್ವರರಿಗೆ ಭೇದವನ್ನು ಸಾಧಿಸಿಕೊಡುತ್ತವೆ. 'ದ್ವಾ ಸುಪರ್ಣಾ ಸಯುಜಾ ಸಖಾಯೌ ಸಮಾನಂ ವೃಕ್ಷಂ ಪರಿಷಸ್ವಜಾತೇ' ಮುಂತಾದ ಮಂತ್ರಗಳು ಶಕ್ತಿವೃತ್ತಿಯಿಂದಲೇ ಭೇದವನ್ನು ಪ್ರತಿಪಾದಿಸುತ್ತಿವೆ.

ಮುಕ್ತಿಯಲ್ಲೂ ವಿರುದ್ಧಧರ್ಮಗಳಿರುವುದರಿಂದ ಮುಕ್ತಿಯಲ್ಲೂ ಭೇದವಿದೆ ಎಂದು ಸಿದ್ಧವಾಗುತ್ತದೆ.

**ಭಟೌ ಚಾಗ್ರೇಸರೌ ತಸ್ಯ ರಿಪುಸೇನಾಮುಖಾಗತೌ ।**
**ಅಲ್ಪಜ್ಞತ್ವಬಹುಜ್ಞತ್ವಾಭಾವೌ ಚೋಭಯಪಾರ್ಶ್ವಗೌ ॥ ೮೦೮ ॥**

**ಅರ್ಥ–** ತಸ್ಯ=ಆ ಭೇದವೆಂಬ ರಾಜನಿಗೆ, ರಿಪುಸೇನಾಮುಖಾಗತೌ=ಶತ್ರುವಿನ ಸೇನೆಯಿಂದಲೇ ಹೊರಬಂದಿರುವ, (ಮಾಯಾವಾದಿಗಳಿಂದಲೇ ಅಂಗೀಕೃತವಾಗಿರುವ) ಅಗ್ರೇಸರೌ= ಅಗ್ರಗಣ್ಯರಾದ, ಅಲ್ಪಜ್ಞತ್ವಬಹುಜ್ಞತ್ವಾಭಾವೌ= ಅಲ್ಪಜ್ಞತ್ವಾಭಾವ, ಸರ್ವಜ್ಞತ್ವಾಭಾವರೆಂಬ, ಭಟೌ= ಸೇವಕರು, ಉಭಯಪಾರ್ಶ್ವಗೌ= ಎರಡು ಪಾರ್ಶ್ವದಲ್ಲಿರುವರು.

**ಅನುವಾದ–** ಆ ಭೇದವೆಂಬ ರಾಜನಿಗೆ ಶತ್ರುಸೇನೆಯ ಮುಂಭಾಗದಿಂದ ಬಂದ ಅಲ್ಪಜ್ಞತ್ವಾಭಾವ ಮತ್ತು ಸರ್ವಜ್ಞತ್ವಾಭಾವ ಎಂಬ ಇಬ್ಬರು ಭಟರು ಅವನ ಉಭಯ ಪಾರ್ಶ್ವಗಳಲ್ಲಿಯೂ ಅವನ ಮುಂದೆಯೇ ನಡೆಯುವವರು.

**ಭಾವವಿಲಾಸಿನೀ– ಭೃತ್ಯಾವಪ್ಯಾಹ– ಭಟೌ ಚೇತಿ ॥** ರಿಪುಸೇನಾಮುಖಾಗತೌ ಅಭಾವದ್ವೈತ-ವಾದಿನೋ ಭೇದರಿಪೋರ್ಮಾಯಾವಾದಿನೋ ಮುಖಾದಾಗತೌ ಸ್ವಾಂಗೀಕೃತಾಭಾವ-ರೂಪತಯಾ ಮಾಯಾವಾದಿನಾಽಪ್ಯನಿವಾರ್ಯಾವಿತಿ । ಸ್ವಸೇನಾತೋ ಬಲಾದ್ ಗೃಹೀತಂ ಭಟಂ ಸೈವ ಸೇನಾ ಪುನರ್ನ ನಿಹಂತೀತಿ ಲೌಕಿಕಮ್ । ಅಲ್ಪಜ್ಞತ್ವಬಹುಜ್ಞತ್ವಾಭಾವೌ ಕಿಂಚಿಜ್ಜ್ಞತ್ವಸ್ಯ

ಬಹುಜ್ಞತ್ವಸ್ಯ ಚ ಅಭಾವೌ ದ್ವೌ ಮಾಯಿಮತೇ ಸಂಸಾರಕಾಲೀನಯೋರ್ಜೀವೇಶ್ವರನಿಷ್ಠಯೋಃ ಕಿಂಚಿಜ್ಞತ್ವ ಸರ್ವಜ್ಞತ್ವಯೋರ್ಭಾವಧರ್ಮಯೋರ್ಮುಕ್ತೌ ನಿವೃತ್ತಾವಪಿ ಸಂಸಾರಕಾಲೀನ ಯೋರಭಾವರೂಪಯೋರ್ಮುಕ್ತಾವಪ್ಯನುವೃತ್ತ್ಯಾ ಜೀವೇಶ್ವರಭೇದಸಾಧಕತ್ವಾತ್ ತದೈಕ್ಯ ಬಾಧಕತ್ವಾಚ್ಚ ಭಟಾವಿತ್ಯುಕ್ತಮ್ । ನಹಿ ಸಂಸಾರೇಽಪೀಶ್ವರೇಽಲ್ಪಜ್ಞತ್ವಾಭಾವಃ ಜೀವೇ ಸರ್ವಜ್ಞತ್ವಾಭಾವಶ್ಚ ನಾಸ್ತೀತಿ ಪರೋ ವಕ್ತಿ ॥ ೮೦೮ ॥

**ವಿವರಣೆ–** ರಾಜನಿಗೆ ಅವಶ್ಯವಿರಬೇಕಾದ ಭೃತ್ಯರನ್ನು ಇಲ್ಲಿ ಹೇಳುತ್ತಿದ್ದಾರೆ. ಶತ್ರುಸೇನೆಯಿಂದಲೇ ಈ ಇಬ್ಬರು ಭಟರು ಬಂದು ಸೇವಕರಾಗಿರುವರು. ಅಭೇದ ಎಂಬ ಶತ್ರುವನ್ನು ಸದೆಬಡಿಯಲು ಸಮರ್ಥರಾಗಿರುವರು ಇವರಿಬ್ಬರು. 1. ಅಲ್ಪಜ್ಞತ್ವಾಭಾವ, 2. ಸರ್ವಜ್ಞತ್ವಾಭಾವರೇ ಈ ಭೃತ್ಯರು. ಭಾವಧರ್ಮಗಳನ್ನು ಒಪ್ಪದೇ ಅಭಾವರೂಪ-ಧರ್ಮಗಳನ್ನು ಅದ್ವೈತವೇದಾಂತದಲ್ಲಿ ಒಪ್ಪಿರುವರು. ತನ್ನ ಸೇನೆಯಿಂದಲೇ ಹೊರಬಂದ ಭಟರನ್ನು ಅದೇ ಸೇನೆ ಕೊಲ್ಲುವುದಿಲ್ಲವೆಂಬುದು ಲೌಕಿಕನೀತಿ. ಜೀವನಲ್ಲಿರುವ ಅಲ್ಪಜ್ಞತ್ವ, ಬ್ರಹ್ಮನಲ್ಲಿರುವ ಅಲ್ಪಜ್ಞತ್ವಾಭಾವ. ಬ್ರಹ್ಮನಲ್ಲಿರುವ ಸರ್ವಜ್ಞತ್ವ, ಜೀವನಲ್ಲಿರುವ ಸರ್ವಜ್ಞತ್ವಾಭಾವ. ಈ ಸರ್ವಜ್ಞತ್ವ ಅಲ್ಪಜ್ಞತ್ವರೂಪ ಭಾವಧರ್ಮಗಳು ಪರಮತ ರೀತ್ಯಾ ಈಶ್ವರನಲ್ಲಿ ಹಾಗೂ ಜೀವನಲ್ಲಿ ಸಂಸಾರಕಾಲದಲ್ಲಿ ಇರುತ್ತವೆ. ಮುಕ್ತಿಕಾಲದಲ್ಲಿ ಈ ಧರ್ಮಗಳಿರುವುದಿಲ್ಲ. ಆದರೆ ಆದರ ಅಭಾವಗಳು ಎಂದರೆ ಸರ್ವಜ್ಞತ್ವಾಭಾವ, ಅಲ್ಪಜ್ಞತ್ವಾಭಾವಗಳು ಸಂಸಾರಕಾಲದಲ್ಲಿ ಮಾತ್ರ ಮುಕ್ತಿಕಾಲದಲ್ಲೂ ಇರುತ್ತವೆ. ಈ ವಿರುದ್ಧವಾದ ಧರ್ಮಗಳು ಭೇದಸಾಧಕವಾಗಿವೆ. ಅಭೇದಕ್ಕೆ ಬಾಧಕವಾಗಿವೆ. ರಾಜನನ್ನು ರಕ್ಷಿಸುವುದು ಮತ್ತು ಶತ್ರುವನ್ನು ಸದೆಬಡಿಯುವುದೇ ಭಟರ ಧರ್ಮ. ಅವೆರಡರನ್ನೂ ಮಾಡುವ ದಕ್ಷತೆ, ಸಾಮರ್ಥ್ಯ ಈ ಸರ್ವಜ್ಞತ್ವಾಭಾವ ಅಲ್ಪಜ್ಞತ್ವಾಭಾವಗಳಿಗಿವೆ. ಸಂಸಾರದಲ್ಲಿಯೂ ಈ ಧರ್ಮಗಳು ಜೀವೇಶ್ವರರಲ್ಲಿವೆ ಎಂದು ಪರರು ಅಂಗೀಕರಿಸಿದ್ದಾರೆ. ಈಶ್ವರನಿಂದ ಜೀವನಿಗೆ ಭೇದ ಎಂದಾಗ ಈಶ್ವರನು ಪ್ರತಿಯೋಗಿ, ಜೀವನು ಅನುಯೋಗಿ. ಆದ್ದರಿಂದ ಭೇದದ ಎರಡು ಪಾರ್ಶ್ವಗಳಲ್ಲಿರುವವರು ಜೀವೇಶ್ವರರು. ಅವರಲ್ಲಿರುವುದು ಸರ್ವಜ್ಞತ್ವಾಭಾವ ಅಲ್ಪಜ್ಞತ್ವಾಭಾವಗಳು.

**ಪೃಥಕ್ತ್ವಂ ತು ಗುಣಂ ಭಾವಭೇದಂ ಹಂತ್ವೈಕ್ಯವಾಕ್ ತವ ।**
**ಅಭಾವಧರ್ಮವದ್ ಭೇದೋಽಪ್ಯಭಾವಾತ್ಮಾಽಸ್ತು ನಿರ್ಭಯಃ ॥ ೮೦೯ ॥**

**ಅರ್ಥ–** ತವ=ನಿನ್ನ, ಐಕ್ಯವಾಕ್=ಅಭೇದಪ್ರತಿಪಾದಕವಾದ ವೇದವಾಕ್ಯವು, ಪೃಥಕ್ತ್ವಂ=ಪೃಥಕ್ತ್ವವೆಂಬ, ಗುಣಂ=ಗುಣವಾದ, ಭಾವಭೇದಂ=ಭಾವರೂಪವಾದ ಭೇದವನ್ನು ಹಂತು=ನಾಶಪಡಿಸಲಿ, ಅಭಾವಧರ್ಮವತ್=ಅಭಾವಧರ್ಮದಂತೆ, ಅಭಾವಾತ್ಮಾ=ಅನ್ಯೋನ್ಯಾಭಾವರೂಪವಾದ, ಭೇದೋಽಪಿ=ಭೇದವೂ ಸಹ, ನಿರ್ಭಯಃ=ಭಯರಹಿತವಾಗಿ, ಅಸ್ತು=ಇರಲಿ.

**ಅನುವಾದ–** ನಿನ್ನ ಐಕ್ಯವಾಕ್ಯವು ಭಾವರೂಪವಾದ ಭೇದವಾದ ಪೃಥಕ್ತ್ವಗುಣವನ್ನು ನಿಷೇಧಿಸಲಿ. ಅಭಾವಾತ್ಮಕವಾದ ಭೇದವು ನಿನ್ನ ಅಭಾವಧರ್ಮಗಳಂತೆ ನಿರ್ಭಯವಾಗಿರಲಿ.

**ಭಾವವಿಲಾಸಿನೀ–** ತರ್ಹ್ಯೈಕ್ಯವಾಕ್ಯಸ್ಯ ಕಾ ಗತಿರಿತ್ಯತಃ ಪರೋದೀರಿತನ್ಯಾಯೇನೈವ ಗತಿಮಾಹ– ಪೃಥಕ್ತ್ವಂ ತ್ವಿತಿ ॥ ತವೈಕ್ಯವಾಗ್ 'ಏಕಮೇವಾದ್ವಿತೀಯಮ್' ಇತ್ಯೈಕ್ಯವಾಕ್ । ಭಾವಭೇದಂ ಭಾವರೂಪಭೇದಂ ಹಂತು । ಅಭಾವಧರ್ಮವತ್ ನಿರ್ಗುಣವಾಕ್ಯೇನ ಬೋಧಿತಾಭಾವಧರ್ಮವದ್ ಅಭಾವಾತ್ಮಾ ಅನ್ಯೋನ್ಯಾಭಾವಾತ್ಮಾ । ಅಸ್ತ್ವಿತಿ ನ ಕೇವಲಂ ಮಮಾಜ್ಞಾ ಅದ್ವಿತೀಯಪದೇನಾಭಾವರಕ್ಷಣಾರ್ಥಂ ಭಾವರೂಪಂ ದ್ವಿತೀಯಂ ತ್ವಮೇವ ಹಂಸೀತ್ಯಪಿ ದ್ರಷ್ಟವ್ಯಮ್ । ಪೃಥಕ್ತ್ವಮಿತಿ ತಾರ್ಕಿಕಮರ್ಯಾದಯೋಕ್ತಮ್ । ಅಸ್ಮನ್ಮತೇ ತು ವಿಭಾಗಂ ಭಾವಭೇದಮ್ ॥ ೮೦೯ ॥

**ವಿವರಣೆ–** ಜೀವೇಶ್ವರರಲ್ಲಿ ಭೇದವು ಪ್ರಮಾಣಸಿದ್ಧವಾಗಿದೆ ಎಂದಾಗ 'ಏಕಮೇವಾದ್ವೀತಿಯಂ ಬ್ರಹ್ಮ' ಮುಂತಾದ ಐಕ್ಯವಾಕ್ಯದ ಗತಿ ಏನು? ಅರ್ಥಹೀನವೇ? ಈ ಆಕ್ಷೇಪವನ್ನು ಅವರು ಒಪ್ಪಿರುವ ನ್ಯಾಯದಿಂದಲೇ ಈ ಶ್ಲೋಕದಲ್ಲಿ ಪರಿಹರಿಸುತ್ತಿದ್ದಾರೆ. ಪೃಥಕ್ತ್ವವೆಂದರೆ ಭೇದ. ಪೃಥಕ್ತ್ವವನ್ನು ನೈಯಾಯಿಕರು ಅನ್ಯೋನ್ಯಾಭಾವಕ್ಕಿಂತ ಭಿನ್ನವಾದ ಗುಣವೆಂದು ಪರಿಗಣಿಸಿದ್ದಾರೆ. ಇದು ಭಾವಪದಾರ್ಥ. 'ಏಕಮೇವಾದ್ವಿತೀಯಂ ಬ್ರಹ್ಮ' ಶ್ರುತಿಯು ಪೃಥಕ್ತ್ವವೆಂಬ ಗುಣವನ್ನು ನಿಷೇಧಿಸಲಿ, ವಿಭಾಗವೆಂಬ ಗುಣವನ್ನೂ ನಿಷೇಧಿಸಲಿ. ಆದರೆ ಬ್ರಹ್ಮನಲ್ಲಿ ಅಭಾವರೂಪಧರ್ಮವನ್ನು ಒಪ್ಪಿರುವುದರಿಂದ; ಅನ್ಯೋನ್ಯಾಭಾವರೂಪವಾದ ಅಭಾವರೂಪವಾದ ಧರ್ಮವು ಬರಲು ನಿಮ್ಮ ಮತದಲ್ಲಿ ಯಾವುದೇ ತೊಂದರೆ ಇಲ್ಲ. ಅದ್ವಿತೀಯಪದದಿಂದ ಅಭಾವಪದಾರ್ಥವನ್ನು ರಕ್ಷಿಸಲು ದ್ವಿತೀಯವಾದ ಭಾವಧರ್ಮವನ್ನು ನೀನೇ ಸಂಹರಿಸಿದ್ದೀಯೆ. 'ಏಕಮೇವಾದ್ವಿತೀಯಂ ಬ್ರಹ್ಮ' ಎಂಬ ಶ್ರುತಿಯಲ್ಲಿರುವ ಏಕಶಬ್ದವು ಭೇದವನ್ನು ನಿಷೇಧಿಸುತ್ತಿಲ್ಲ. ಬ್ರಹ್ಮನ ಪ್ರಾಧಾನ್ಯರೂಪಗುಣವನ್ನು ಹೇಳುತ್ತಿದೆ. ಅನ್ಯೋನ್ಯಾಭಾವರೂಪಭೇದವನ್ನು ನೀನೂ ಸಮ್ಮತಿಸಿದಂತಾಗಿ ಜೀವಬ್ರಹ್ಮರ ಭೇದವೇ ಸಿದ್ಧವಾಗುತ್ತದೆ.

**ಅನ್ಯೋನ್ಯಾಭಾವಾತಿರಿಕ್ತಂ ಪೃಥಕ್ತ್ವಂ ತತ್ತ್ವವಾದಿನಾ ।**
**ನಿಷೇದ್ಧುಂ ಶಕ್ಯತೇ ಜೀವೇ ವಿಭಾಗಾಖ್ಯಾ ಭಿದಾ ತಥಾ ॥ ೮೧೦ ॥**

**ಅರ್ಥ–** ಅನ್ಯೋನ್ಯಾಭಾವಾತಿರಿಕ್ತಂ=ಅನ್ಯೋನ್ಯಾಭಾವಕ್ಕಿಂತ ಭಿನ್ನವಾದ, ಪೃಥಕ್ತ್ವಂ= ಪೃಥಕ್ತ್ವರೂಪವಾದ ಭೇದವನ್ನು, ನಿಷೇದ್ಧುಂ=ನಿಷೇಧಿಸಲು, ತತ್ತ್ವವಾದಿನಾ= ತತ್ತ್ವವಾದಿಯಿಂದ, ಶಕ್ಯತೇ=ಸಾಧ್ಯವಾಗುತ್ತದೆ. ತಥಾ=ಹಾಗೆಯೇ, ವಿಭಾಗಾಖ್ಯಾ= ವಿಭಾಗವೆಂಬ, ಭಿದಾ=ಭೇದವೂ, ನಿಷೇದ್ಧುಂ=ನಿಷೇಧಿಸಲು, ಶಕ್ಯತೇ= ಸಾಧ್ಯವಾಗುತ್ತದೆ.

**ಅನುವಾದ–** ತತ್ತ್ವವಾದಿಗಳು ಜೀವನಲ್ಲಿ ಪರಮಾತ್ಮನಿಂದ ಅನ್ಯೋನ್ಯಾ-ಭಾವಾತಿರಿಕ್ತವಾದ ಪೃಥಕ್ತ್ವರೂಪವಾದ ಭೇದವನ್ನೂ ವಿಭಾಗರೂಪವಾದ ಭೇದವನ್ನೂ ನಿಷೇಧ ಮಾಡಲು ಸಾಧ್ಯವಾಗುತ್ತದೆ.

**ಭಾವವಿಲಾಸಿನೀ–** ನನು ಭವನ್ಮತೇ ಪೃಥಕ್ತ್ವಸ್ಯಾಂಗೀಕಾರಾತ್ ಕಥಂ ತನ್ನಿಷೇಧ ಇತ್ಯತ ಆಹ– **ಅನ್ಯೋನ್ಯಾಭಾವೇತಿ** ॥ ಅನ್ಯೋನ್ಯಾಭಾವಾತಿರಿಕ್ತಂ ತಾರ್ಕಿಕೇಣ ಭಾವರೂಪಗುಣ-ತಯಾಽಂಗೀಕೃತಮಿತಿ ಯಾವತ್ । ತತ್ತ್ವವಾದಿನಾ ಅನ್ಯೋನ್ಯಾಭಾವ ಏವ ಪೃಥಕ್ತ್ವಮಿತಿ ವದತಾ ನಿಷೇದ್ದುಂ ಶಕ್ಯತೇ । ಯುಕ್ತಿಹೀನತಯಾಽಸ್ಮಾಭಿಂಸ್ತ್ಯಕ್ತ ತತ್‌ಪೃಥಕ್ತ್ವಮ್ ಅಸ್ಮನ್ಮತಸ್ಯ ಶ್ರೌತತ್ವಸಂಪಾದನಾಯ ತದೈಕ್ಯಶ್ರುತಿರಪಿ ನಿಷೇಧತ್ವಿತಿ ಭಾವಃ । ವಿಭಾಗಾಖ್ಯಾ ಭಿದಾ ಚ ನಿಷೇದ್ಧುಂ ಶಕ್ಯತ ಇತ್ಯಾವೃತ್ಯಾ ಯೋಜ್ಯಮ್ । ಬಿಂಬಪ್ರತಿಬಿಂಬತಯಾ ಸದಾಽವಿಭಕ್ತಯೋಃ ತನ್ನಿಷೇಧಸ್ಯ ನ್ಯಾಯ್ಯತ್ವಾತ್ ॥ ೮೧೦ ॥

**ವಿವರಣೆ–** ಭೇದವನ್ನು ತತ್ವವಾದಿಗಳು ಅಂಗೀಕರಿಸಿದ್ದಾರೆ. ಪುನಃ ಪೃಥಕ್ತ್ವವನ್ನು ನಿಷೇಧಿಸಿದರೆ ವ್ಯಾಹತಿದೋಷಬರುತ್ತದೆ ಎಂಬ ಶಂಕೆಯನ್ನು ಇಲ್ಲಿ ಪರಿಹರಿಸುತ್ತಿದ್ದಾರೆ. ಅನ್ಯೋನ್ಯಾಭಾವರೂಪಭೇದವನ್ನು ತತ್ವವಾದಿಗಳು ಸಮ್ಮತಿಸಿದ್ದಾರೆ. ಅನ್ಯೋನ್ಯಾಭಾವವೇ ಪೃಥಕ್ತ್ವ. ಆದರೆ ನ್ಯಾಯದರ್ಶನದಲ್ಲಿ ಅನ್ಯೋನ್ಯಾಭಾವಕ್ಕಿಂತ ಅತಿರಿಕ್ತವಾದ ಪೃಥಕ್ತ್ವವೆಂಬ ಭಾವಗುಣವನ್ನು ಒಪ್ಪಿದ್ದಾರೆ. ಅದು ಯುಕ್ತಿರಹಿತವೆಂದು ತತ್ವವಾದಿಗಳು ತಿರಸ್ಕರಿಸಿದ್ದಾರೆ. ಐಕ್ಯಶ್ರುತಿಯೂ ಸಹ ಈ ಪೃಥಕ್ತ್ವವನ್ನು ನಿಷೇಧಿಸುತ್ತಿದೆ. ವಿಭಾಗರೂಪವಾದ ಭೇದವನ್ನು ತತ್ವವಾದಿಗಳು ಒಪ್ಪಿಲ್ಲ. ಸಯುಜೌ ಸಖಾಯೌ ಎಂಬ ಶ್ರುತಿಯು ಸಯುಜೌ ಎಂಬುದಾಗಿ ಸ್ಥಾನೈಕ್ಯವನ್ನು ಹೇಳಿ ವಿಭಾಗವನ್ನು ನಿಷೇಧಿಸಿದೆ. ಜೀವಬ್ರಹ್ಮರಲ್ಲಿ ತತ್ವವಾದಿಗಳು ಬಿಂಬಪ್ರತಿಬಿಂಬಭಾವವನ್ನು ಅಂಗೀಕರಿಸಿದ್ದಾರೆ. ಆದ್ದರಿಂದ ಜೀವಬ್ರಹ್ಮರು ಸದಾ ಅವಿಭಕ್ತರೇ ಆಗಿರುವರು. ರೂಪಂ ರೂಪಂ ಪ್ರತಿರೂಪೋ ಬಭೂವ ಎಂಬ ಶ್ರುತಿಯು ಬಿಂಬಪ್ರತಿಬಿಂಬಭಾವವನ್ನು ಹೇಳಿದೆ. ಇದರಿಂದ ಪೃಥಕ್ತ್ವ ಹಾಗೂ ವಿಭಾಗವನ್ನು ನಿಷೇಧಿಸಿದಾಗ ವ್ಯಾಹತಿದೋಷವೂ ಬರುವುದಿಲ್ಲ. ತತ್ತ್ವವಾದವು ಶ್ರೌತವೆಂದೂ ಸಿದ್ಧವಾಗುವುದು.

ನ್ಯಾಯದರ್ಶನದಲ್ಲಿ ಮೂರುವಿಧ ಭೇದವನ್ನು ಅಂಗೀಕರಿಸಿದ್ದಾರೆ. 1.ಪೃಥಕ್ತ್ವ, 2. ಅನ್ಯೋನ್ಯಾಭಾವ, 3. ಭೇದ. ದ್ರವ್ಯಗಳಲ್ಲಿ ಈ ಮೂರು ಭೇದವೂ ಇದೆ. ಗುಣ, ಕರ್ಮ, ಸಾಮಾನ್ಯ, ವಿಶೇಷ ಸಮವಾಯಗಳಲ್ಲಿ ಗುಣವನ್ನು ಒಪ್ಪಿಲ್ಲವಾದ್ದರಿಂದ ಪೃಥಕ್ತ್ವವಿಲ್ಲ ಉಳಿದ ಎರಡು ಮಾತ್ರ. ಅಭಾವದಲ್ಲಿ ಅನ್ಯೋನ್ಯಾಭಾವವನ್ನು ಒಪ್ಪಿದರೆ ಅನವಸ್ಥಾದೋಷವು ಬರುತ್ತದೆ. ಆದ್ದರಿಂದ ಅಭಾವದಲ್ಲಿ ಭೇದವು ಮಾತ್ರ ಇರುವುದು. ಈ ವಾದವನ್ನು ಅನುವ್ಯಾಖ್ಯಾನದಲ್ಲಿ ಆಚಾರ್ಯರು ನಿರಾಕರಿಸಿದ್ದಾರೆ.

ಪೃಥಕ್ತ್ವಾಭಾವತದ್ರೂಪಾನ್ ಭೇದಾಂಸ್ತ್ರೀನ್ ಕಲ್ಪಯಂತಿ ಚೇತ್ ।
ಕಲ್ಪನಾಗೌರವಾದ್ಯಾಸ್ತು ದೋಷಾಸ್ತತ್ರ ವಿರೋಧಿನಃ ॥

**ಪೃಥಕ್ತ್ವಾನ್ಯತ್ವಭೇದಾಸ್ತು ಪರ್ಯಾಯೇಣೈವ ಲೌಕಿಕೈಃ ।**
**ವ್ಯವಹ್ರಿಯಂತೇ ಸತತಂ ವೈದಿಕೈರಪಿ ಸರ್ವಶಃ ॥**

ಘಟ, ಕಲಶ, ಕುಂಭ ಇವೆಲ್ಲವೂ ಪರ್ಯಾಯಶಬ್ದಗಳು. ಈ ಶಬ್ದಗಳ ಪ್ರವೃತ್ತಿಗೆ ನಿಮಿತ್ತವೂ ಒಂದೇ ಆಗಿದೆ. ಆದ್ದರಿಂದ ಅರ್ಥಭೇದವನ್ನು ಕಲ್ಪಿಸಿದರೆ ಕಲ್ಪನಾಗೌರವದೋಷವು ಬರುತ್ತದೆ. ಮೂರು ಭಿನ್ನಪದಾರ್ಥಗಳು ಒಂದು ಎಂದು ಒಪ್ಪಿದರೆ ದೃಷ್ಟಹಾನಿ, ಅದೃಷ್ಟಕಲ್ಪನಾದೋಷಗಳು ಬರುತ್ತದೆ. ಅದರಂತೆ, ಪೃಥಕ್ತ್ವ, ಅನ್ಯೋನ್ಯಾಭಾವ, ಭೇದಗಳೂ ಭಿನ್ನಪದಾರ್ಥವೆಂದು ಒಪ್ಪಿದರೆ ದೃಷ್ಟಹಾನಿ ಅದೃಷ್ಟಕಲ್ಪನಾ ದೋಷವು ಬರುತ್ತದೆ. ಘಟಕ್ಕಿಂತ ಪೃಥಕ್ಕಾಗಿದೆ ಪಟ, ಪಟವು ಘಟವಲ್ಲ, ಘಟಭೇದವು ಪಟದಲ್ಲಿದೆ - ಈ ವ್ಯವಹಾರಗಳಲ್ಲಿ ಅರ್ಥಭೇದವಿಲ್ಲ. ಹೀಗೆ ಪೃಥಕ್ತ್ವಾದಿಗಳಿಗೆ ಅಭೇದವೇ ಕಂಡಿದೆ. ಸ್ವರೂಪಭೇದದಿಂದಲೇ ಈ ಎಲ್ಲ ವ್ಯವಹಾರಗಳನ್ನು ಸಂಘಟಿಸಲು ಸಾಧ್ಯವಿರುವಾಗ ಮೂರನ್ನೂ ಪ್ರತ್ಯೇಕ ಪ್ರತ್ಯೇಕವೆಂದು ಒಪ್ಪಿದರೆ ಕಲ್ಪನಾಗೌರವದೋಷವು ಬರುತ್ತದೆ - (ನ್ಯಾಯಸುಧಾ - 1-2-6)

**ತಯೋರನ್ಯ ಇತಿ ಪ್ರೋಕ್ತಸ್ತ್ವನ್ಯೋನ್ಯಾಭಾವ ಇಷ್ಯತೇ ।**
**ಶ್ರುತಿಪ್ರಾಮಾಣ್ಯರಕ್ಷಾಯೈ ನೈರ್ಗುಣ್ಯೇ ತ್ವದ್ವಿವೇಕವತ್ ॥ ೮೧೧ ॥**

**ಅರ್ಥ–** ನೈರ್ಗುಣ್ಯೇ=ನಿರ್ಗುಣತ್ವದ ವಿಷಯದಲ್ಲಿ ತ್ವದ್ವಿವೇಕವತ್=ಶ್ರುತಿಯು ಕೇವಲ ಭಾವಧರ್ಮವನ್ನು ನಿಷೇಧಿಸುತ್ತಿದೆ ಎಂಬ ವಿವೇಕದಂತೆ ಪೃಥಕ್ಕರಣದಂತೆ, ಶ್ರುತಿಪ್ರಾಮಾಣ್ಯರಕ್ಷಾಯೈ= ವೇದಪ್ರಾಮಾಣ್ಯದ ರಕ್ಷಣೆಗಾಗಿ, ತಯೋರನ್ಯಃ ಇತಿ= ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಎಂಬ ಶ್ರುತಿಯಲ್ಲಿ, ಪ್ರೋಕ್ತಸ್ತು=ಹೇಳಲ್ಪಟ್ಟಿರುವ ಅನ್ಯತ್ವವು, ಅನ್ಯೋನ್ಯಾಭಾವಃ= ಅನ್ಯೋನ್ಯಾಭಾವವೆಂದು, ಇಷ್ಯತೇ= ಅಂಗೀಕರಿಸಲ್ಪಡುತ್ತದೆ.

**ಅನುವಾದ–** ನಿರ್ಗುಣ ಶ್ರುತಿಯ ಪ್ರಾಮಾಣ್ಯವನ್ನು ರಕ್ಷಣೆ ಮಾಡಲು ನೀನು ಭಾವಗುಣವನ್ನು ನಿಷೇಧ ಮಾಡಿ, ಅಭಾವಗುಣವನ್ನು ಅಂಗೀಕಾರ ಮಾಡಿದಂತೆ 'ತಯೋರನ್ಯಃ' ಎಂಬ ಶ್ರುತಿಯಲ್ಲಿ ಹೇಳಿದ ಅನ್ಯತ್ವವು ಅನ್ಯೋನ್ಯಾಭಾವ-ರೂಪವಾಗಿದೆ ಎಂದು ನಾವು ಅಂಗೀಕರಿಸುತ್ತೇವೆ.

**ಭಾವವಿಲಾಸಿನೀ–** ಪ್ರಾಮಾಣಿಕತ್ವಾಚ್ಚ ನಾಭಾವಸ್ಯ ನಿಷೇಧ ಇತ್ಯಾಹ– **ತಯೋರಿತಿ ॥** ಶ್ರುತಿಪ್ರಾಮಾಣ್ಯರಕ್ಷಾಯೈ ಅನ್ಯೋನ್ಯಾಭಾವ ಇಷ್ಯತ ಇತಿ ಸಂಬಂಧಃ। ನೈರ್ಗುಣ್ಯೇ ತ್ವದ್ವಿವೇಕವತ್ ಶ್ರುತಿಪ್ರಾಮಾಣ್ಯರಕ್ಷಾಯೈ ಅಭಾವಂ ವಿನಾ ಭಾವಮಾತ್ರನಿಷೇಧಾಖ್ಯವಿವೇಕವತ್ ॥ ೮೧೧ ॥

**ವಿವರಣೆ–** ಪೃಥಕ್ತ್ವ ಮತ್ತು ವಿಭಾಗಗಳ ನಿಷೇಧವು ಸಾಧ್ಯವಾಗುವುದಾದರೆ ಅನ್ಯೋನ್ಯಾಭಾವದ ನಿಷೇಧವು ಏಕೆ ಸಾಧ್ಯವಿಲ್ಲ ಎಂಬ ಆಕ್ಷೇಪಕ್ಕೆ ಈ ಶ್ಲೋಕದಲ್ಲಿ ಪರಿಹಾರವನ್ನು ನೀಡಿದ್ದಾರೆ.

ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ... ಈ ಶ್ರುತಿಯು ಜೀವಬ್ರಹ್ಮರ ಭೇದವನ್ನು ಹೇಳುತ್ತಿದೆ. ಶ್ರುತಿಯಲ್ಲಿರುವ ಅನ್ಯಶಬ್ದವು ಅನ್ಯೋನ್ಯಾಭಾವ ಎಂಬ ಅರ್ಥವನ್ನು ಹೇಳುತ್ತಿದೆ. ಹೀಗೆ ಅನ್ಯೋನ್ಯಾಭಾವವು ಶ್ರುತಿಸಿದ್ಧವಾಗಿದೆ. 'ಕೇವಲೋ ನಿರ್ಗುಣಶ್ಚ' ಶ್ರುತಿಯಲ್ಲಿ ನಿರ್ಗುಣಶಬ್ದವು ಸಮಸ್ತಧರ್ಮಗಳನ್ನು ನಿಷೇಧಿಸುತ್ತದೆ ಎಂದು ಅರ್ಥವನ್ನು ಹೇಳಿದರೆ ವ್ಯಾಹತಿದೋಷದಿಂದ ಶ್ರುತಿಗೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. ಆದ್ದರಿಂದ ಶಾಂಕರದರ್ಶನದಲ್ಲಿ ನಿರ್ಗುಣಶಬ್ದವು ಅಭಾವಧರ್ಮಗಳನ್ನು ನಿಷೇಧಿಸದೆ ಕೇವಲ ಭಾವಧರ್ಮಗಳನ್ನು ನಿಷೇಧಿಸುತ್ತದೆ ಎಂದು ಅರ್ಥವನ್ನು ಶ್ರುತಿಪ್ರಾಮಾಣ್ಯದ ರಕ್ಷಣೆಗಾಗಿ ಹೇಗೆ ಮಾಡಿದ್ದಾರೋ ಅದರಂತೆ ಅನ್ಯೋನ್ಯಾಭಾವವನ್ನು ಶ್ರುತಿ ಹೇಳಿರುವುದರಿಂದ ಅದನ್ನು ಮಾತ್ರ ನಾವು ಒಪ್ಪುತ್ತೇವೆ. ಹೀಗೆ ಅನ್ಯೋನ್ಯಾಭಾವವು ಪ್ರಮಾಣಸಿದ್ಧವಾದ್ದರಿಂದ ಅದರ ನಿಷೇಧವನ್ನು ಮಾಡಲಾಗುವುದಿಲ್ಲ.

**ಆತ್ಮಹತ್ಯೇವ ಯಲ್ಲೋಕೇ ಪರಹತ್ಯಾಪಿ ದೂಷಣಮ್ ।**
**ಅತಃ ಸ್ವವ್ಯಾಹತೇರ್ಭೀತೌ ಭಯಂ ಭೇದಶ್ರುತೇರ್ನ ಕಿಮ್ ॥ ೮೧೨ ॥**

**ಅರ್ಥ–** ಯತ್=ಯಾವ ಕಾರಣದಿಂದ, ಲೋಕೇ=ಲೋಕದಲ್ಲಿ, ಆತ್ಮಹತ್ಯೇವ= ಆತ್ಮಹತ್ಯೆಯಂತೆ, ಪರಹತ್ಯಾಪಿ=ಪರಹತ್ಯೆಯೂ ಸಹ, ದೂಷಣಂ= ದೂಷಣವಾಗಿದೆಯೋ, ಅತಃ=ಆ ಕಾರಣದಿಂದ, ಸ್ವವ್ಯಾಹತೇಃ= ಸ್ವವ್ಯಾಹತಿದೋಷದಿಂದ, ಭೀತೌ= ಏಕಮೇವಾದ್ವಿತೀಯಂ ಬ್ರಹ್ಮ ಎಂಬ ಶ್ರುತಿಯು ಹೆದರುವುದಾದರೆ, ಭೇದಶ್ರುತೇಃ= ದ್ವಾಸುಪರ್ಣಾ ಎಂಬ ಭೇದಪ್ರತಿಪಾದಕಶ್ರುತಿಗೆ, ಭಯಂ ನ ಕಿಂ= ಹೆದರುವುದಿಲ್ಲವೇನು?

**ಅನುವಾದ– ಲೋಕದಲ್ಲಿ ಆತ್ಮಹತ್ಯೆಯಂತೆ ಪರಹತ್ಯೆಯೂ ದೂಷಣವಾಗುತ್ತದೆ. ಆದ್ದರಿಂದ ನಿನಗೆ (ನಿರ್ಗುಣಶ್ರುತಿಗೆ) ಸ್ವವ್ಯಾಹತಿಯ ಹೆದರಿಕೆ ಇದ್ದರೆ, ಭೇದಶ್ರುತಿಯ ಹೆದರಿಕೆಯು ಏಕೆ ಇಲ್ಲ?**

**ಭಾವವಿಲಾಸಿನೀ–** ಸ್ವಾಪ್ರಾಮಾಣ್ಯಮಿವ ಪರಾಪ್ರಾಮಾಣ್ಯಮಪಿ ದೋಷಾಯೇತ್ಯತ್ರ ದೃಷ್ಟಾಂತಮಾಹ– **ಆತ್ಮಹತ್ಯೇತಿ** ॥ ೮೧೨ ॥

**ವಿವರಣೆ–** 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯು ಅಭಾವಧರ್ಮವನ್ನೂ ನಿಷೇಧಿಸುತ್ತದೆ ಎಂದಾಗ ಸ್ವವ್ಯಾಹತಿದೋಷವು ಬರುತ್ತದೆ. ಅದರಿಂದ ತನಗೆ ಅಪ್ರಾಮಾಣ್ಯದೋಷವು ಬರುತ್ತದೆ. 'ಏಕಮೇವಾದ್ವಿತೀಯಂ ಬ್ರಹ್ಮ' ಎಂಬ ಶ್ರುತಿಯು ಭೇದವನ್ನು ನಿಷೇಧಿಸಿದರೆ ಎಲ್ಲಾ ಭೇದಪ್ರತಿಪಾದಕಶ್ರುತಿಗಳಿಗೆ ಅಪ್ರಾಮಾಣ್ಯದೋಷವು ಬರುತ್ತದೆ. ಆತ್ಮಹತ್ಯೆಯು ಹೇಗೆ ಪಾತಕವೋ ಹಾಗೆ ಪರಹಿಂಸೆಯೂ ಮಹಾಪಾತಕವಾಗಿದೆ.

**ಜ್ಞಾತತ್ವಾಭಾವಧರ್ಮಿತ್ವಪೂರ್ವಾತ್ ಸಾ ನ ಬಿಭೇತಿ ಕಿಮ್ ॥ ೮೧೩ ॥**

**ಅರ್ಥ–** ಜ್ಞಾತತ್ವಾಭಾವಧರ್ಮಿತ್ವಪೂರ್ವಾತ್=ಪ್ರಮೇಯತ್ವ, ಅಭಾವಧರ್ಮಿತ್ವ ಇವೇ ಮೊದಲಾದ ಧರ್ಮಗಳಿಂದ, ಸಾ=ಆ ನಿರ್ಗುಣಶ್ರುತಿಯು, ನ ಬಿಭೇತಿ ಕಿಂ=ಭಯಪಡುವುದಿಲ್ಲವೇನು?

**ಅನುವಾದ–** ಜ್ಞಾತತ್ವ ಅಭಾವಧರ್ಮಿತ್ವ ಮೊದಲಾದ ಧರ್ಮಗಳಿಗೆ ಆ ನಿರ್ಗುಣಶ್ರುತಿಯು ಹೆದರುವುದಿಲ್ಲವೇನು?

**ಭಾವವಿಲಾಸಿನೀ–** ಅಭಾವಮಂಗೀಕುರ್ವತೈವ ತನ್ನಿಷ್ಠಜ್ಞಾತತ್ವಪ್ರಮೇಯತ್ವಾದಿಭಾವ-ಧರ್ಮಾಣಾಂ ಬ್ರಹ್ಮನಿಷ್ಠಾಭಾವಾಧಿಕರಣತ್ವಾದಿಭಾವಧರ್ಮಾಣಾಂ ಚಾವಶ್ಯಮಂಗೀ-ಕಾರ್ಯತ್ವೇನ ಭಾವಮಾತ್ರನಿಷೇಧೋಽಪಿ ನ ಯುಕ್ತ ಇತ್ಯಾಹ– ಜ್ಞಾತತ್ವೇತಿ ॥ ೮೧೩ ॥

**ವಿವರಣೆ–** ಬ್ರಹ್ಮನಲ್ಲಿ ಅಭಾವಧರ್ಮಗಳನ್ನು ಅಂಗೀಕರಿಸಿದಾಗ ಅನಿವಾರ್ಯವಾಗಿ ಭಾವಧರ್ಮಗಳೂ ಪ್ರಾಪ್ತವಾಗುತ್ತವೆ ಎಂದು ಇಲ್ಲಿ ಆಪಾದಿಸುತ್ತಿದ್ದಾರೆ. ಅಭಾವಜ್ಞಾನ ಉಂಟಾಗಲು ಅಧಿಕರಣ ಮತ್ತು ಪ್ರತಿಯೋಗಿ ಇವುಗಳ ಜ್ಞಾನವು ಅತ್ಯವಶ್ಯ 'ಸದ್ಭ್ಯಾಮಧಿಕರಣಪ್ರತಿಯೋಗಿಭ್ಯಾಮಭಾವೋ ನಿರೂಪ್ಯತೇ' ಎಂದು ನಿಯಮವಿದೆ. ಆದ್ದರಿಂದ ಅಧಿಕರಣನಾದ ಬ್ರಹ್ಮನ ಜ್ಞಾನಬೇಕು. ಆಗ ಬ್ರಹ್ಮನಲ್ಲಿ ಜ್ಞಾತತ್ವ,ಪ್ರಮೇಯತ್ವ ಮುಂತಾದ ಭಾವಧರ್ಮಗಳೂ ಸಂಭವಿಸುತ್ತವೆ. ಹಾಗೆಯೇ ಅಭಾವದಲ್ಲಿ ಅಭಾವತ್ವ, ಪ್ರಮೇಯತ್ವ, ಆಶ್ರಿತತ್ವ ಮುಂತಾದ ಭಾವಧರ್ಮಗಳೂ ಪ್ರಾಪ್ತವಾಗುತ್ತವೆ. ಆದ್ದರಿಂದ ಬ್ರಹ್ಮನಲ್ಲಿ ಭಾವಧರ್ಮಗಳ ನಿಷೇಧವು ಅಸಾಧ್ಯವೇ ಆಗಿದೆ.

ವ್ಯವಸ್ಥಿತಾದಿಯಂ ತತ್ತ್ವಂಪದಾರ್ಥತ್ವಾಚ್ಚ ತೇ ಶ್ರುತಿಃ ।
ಕಥಂ ನ ಭೀತಾ ಭೇದಂ ವಾ ವಿಶೇಷಂ ವಾ ವಿನಾ ವದ ॥
ವಿಶೇಷೋ ನಾಸ್ತಿ ಭಾವಸ್ತೇ ಭೇದೋಽಭಾವೋ ಗತಿರ್ಧ್ರುವಾ ॥ ೮೧೪ ॥

**ಅರ್ಥ–** ಇಯಂ ತೇ ಶ್ರುತಿಃ= ಈ ನಿನ್ನ ಐಕ್ಯಶ್ರುತಿಯು, ಭೇದಂ ವಾ ವಿಶೇಷಂ ವಾ ವಿನಾ= ಭೇದವನ್ನಾಗಲೀ ಅಥವಾ ವಿಶೇಷವನ್ನಾಗಲೀ ಒಪ್ಪದಿದ್ದರೆ, ವ್ಯವಸ್ಥಿತಾತ್ ತತ್ತ್ವಂ ಪದಾರ್ಥತ್ವಾತ್= ತತ್ಪದವು ಬ್ರಹ್ಮನನ್ನೇ ಹೇಳುತ್ತದೆ, ತ್ವಂ ಪದವು ಜೀವನನ್ನೇ ಹೇಳುತ್ತದೆ ಬ್ರಹ್ಮನನ್ನಲ್ಲ ಎಂಬ ಶ್ರುತಿಮಾತಿನಿಂದ, ಕಥಂ ನ ಭೀತಾ= ಹೇಗೆ ಹೆದರುವುದಿಲ್ಲ? ತೇ= ನಿನಗೆ, ಭಾವಃ= ಭಾವರೂಪವಾದುದರಿಂದ, ವಿಶೇಷಃ= ವಿಶೇಷವು, ನಾಸ್ತಿ= ಇಲ್ಲ, ಅಭಾವಃ= ಅಭಾವ ರೂಪವಾದ, ಭೇದಃ= ಭೇದವೇ, ಧ್ರುವಾ= ಖಂಡಿತವಾಗಿ, ಗತಿಃ= ನಿನಗೆ ಗತಿಯಾಗುತ್ತದೆ.

**ಅನುವಾದ–** ನಿನ್ನ ತತ್ತ್ವಮಸಿ ಶ್ರುತಿಯು ಭೇದವನ್ನಾಗಲೀ ಅಥವಾ ವಿಶೇಷವನ್ನಾಗಲೀ ಅವಲಂಬಿಸದೆ ವ್ಯವಸ್ಥಿತವಾದ ತತ್ ಪದ ಮತ್ತು ತ್ವಂ ಪದ ಅರ್ಥಗಳಿಗೆ ಹೇಗೆ

ಹೆದರುವುದಿಲ್ಲ ಎಂದು ಹೇಳು. ಭಾವರೂಪವಾದುದರಿಂದ ನೀನು ವಿಶೇಷವನ್ನಂತೂ ಒಪ್ಪುವುದಿಲ್ಲ. ಆದ್ದರಿಂದ ಅಭಾವರೂಪವಾದ ಭೇದವೇ ನಿನಗೆ ಗತಿಯಾಗುತ್ತದೆ.

**ಭಾವವಿಲಾಸಿನೀ–** ತತ್ ತ್ವಮಸೀತ್ಯೈಕ್ಯಶ್ರುತಿರಪಿ ಜೀವಾವಾಚಕತತ್ಪದೇನ ಬ್ರಹ್ಮೈವ ವ್ಯಪದಿಶಂತೀ ಬ್ರಹ್ಮಾವಾಚಕತ್ವಂ ಪದೇನ ಚ ಜೀವಮೇವ ವ್ಯಪದಿಶಂತೀ ಕಥಂ ತಯೋರ್ಭೇದಮಾತ್ರಂ ನಿವಾರಯೇತ್ । ಅನ್ಯೋನ್ಯಾವಾಚಕಪದಬೋಧ್ಯಯೋರ್ಘಟಪಟಯೋರ್ಭೇದಾವಿನಾಭೂತತ್ವದರ್ಶನಾದಿತ್ಯಾಹ– **ವ್ಯವಸ್ಥಿತಾದಿತಿ** ॥ ಇಯಂ ತೇ ಶ್ರುತಿರಿತಿ ಸಂಬಂಧಃ । ವಿಶೇಷಂ ವೇತಿ ಸ್ವಮತರೀತ್ಯೋಕ್ತಮ್ ಅಹಮಪಿ ವಿಶೇಷಮಂಗೀಕರೋಮೀತಿ ವದಂತಂ ಪ್ರತ್ಯಾಹ– **ವಿಶೇಷ ಇತಿ** ॥ ಭಾವಃ ಭಾವರೂಪೋ ವಿಶೇಷೋ ನಾಸ್ತಿ । ತೇನಾಭಾವಃ ಅನ್ಯೋನ್ಯಾಭಾವರೂಪೋ ಭೇದ ಏವ ಗತಿರಿತಿ ಸಂಬಂಧಃ ॥ ೮೧೪ ॥

**ವಿವರಣೆ–** ತತ್ತ್ವಮಸಿ ಎಂಬಲ್ಲಿ ತತ್ ಪದ ಮತ್ತು ತ್ವಂ ಪದದ ಅರ್ಥಗಳು ವ್ಯವಸ್ಥಿತವಾಗಿವೆ. ತತ್ ಪದವು ಬ್ರಹ್ಮನನ್ನೇ ಹೇಳುತ್ತದೆಯೇ ಹೊರತು ಜೀವನನ್ನು ಹೇಳುವುದಿಲ್ಲ. ತ್ವಂ ಪದವು ಜೀವನನ್ನೇ ಹೇಳುತ್ತದೆಯ? ಹೊರತು ಬ್ರಹ್ಮನನ್ನು ಹೇಳುವುದಿಲ್ಲ. ಈ ವ್ಯವಸ್ಥೆಯನ್ನು ನೀನು ಹೇಗೆ ಕೂಡಿಸುತ್ತೀಯೇ. ನಮ್ಮಂತೆ ವಿಶೇಷವನ್ನಾದರೂ ಒಪ್ಪಬೇಕು. ಇಲ್ಲದಿದ್ದರೆ ಭೇದವನ್ನಾದರೂ ಒಪ್ಪಬೇಕು. ಆದರೆ ವಿಶೇಷವು ಭಾವರೂಪವಾದುದರಿಂದ ನೀನು ಅದನ್ನು ಒಪ್ಪುವುದಿಲ್ಲ. ಆದರೆ ನಿನಗೆ ಅಭಾವವು ಸಮ್ಮತವಾದುದರಿಂದ ಭೇದವು ಅನ್ಯೋನ್ಯಾಭಾವರೂಪವಾದುದರಿಂದ ಭೇದವನ್ನೇ ಅಂಗೀಕರಿಸಿ ತತ್ ತ್ವಂ ಪದಗಳ ಅರ್ಥದ ವ್ಯವಸ್ಥೆಯನ್ನು ಮಾಡಬೇಕು. ಆದ್ದರಿಂದ ಪರಸ್ಪರ ಅವಾಚಕಗಳಾದ ಘಟಪಟ ಶಬ್ದಗಳು ಹೇಗೆ ಘಟಪಟಗಳಲ್ಲಿ ಭೇದವನ್ನು ಸಮರ್ಥಿಸಿಕೊಡುತ್ತದೆಯೋ, ಅದರಂತೆ ವ್ಯವಸ್ಥಿತವಾದ ತತ್ ತ್ವಂ ಪದಗಳೂ ಸಹ ತತ್ ತ್ವಂ ಪದಾರ್ಥಗಳಲ್ಲಿ ಭೇದವನ್ನೇ ಸಮರ್ಥಿಸಿಕೊಡುತ್ತವೆ ಎಂದು ಅಭಿಪ್ರಾಯ.

ವ್ಯಾವಹಾರಿಕಭೇದಾಚ್ಚ ನಾತ್ರ ತತ್ತ್ವಂಪದಾರ್ಥತಾ ।
ಯತ್ಸತ್ಯಯೋರೈಕ್ಯಯೋಗ್ಯಚಿತೋರೇವ ಕಥಾ ತವ ॥ ೮೧೫ ॥

**ಅರ್ಥ–** ಅತ್ರ= ತತ್ತ್ವಮಸಿವಾಕ್ಯದಲ್ಲಿ, ವ್ಯಾವಹಾರಿಕಭೇದಾತ್= ವ್ಯಾವಹಾರಿಕ ಭೇದದಿಂದ, ತತ್ತ್ವಂ ಪದಾರ್ಥತಾ= ತತ್ ಪದಾರ್ಥ ಮತ್ತು ತ್ವಂ ಪದಾರ್ಥದ ವ್ಯವಸ್ಥೆಯು, ನ= ಇಲ್ಲ, ಯತ್= ಏಕೆಂದರೆ, ಸತ್ಯಯೋಃ= ಸತ್ಯವಾದಂತಹ, ಐಕ್ಯಸ್ಯ= ಐಕ್ಯಕ್ಕೆ, ಯೋಗ್ಯಚಿತೋಃ= ಯೋಗ್ಯರಾದ ಜೀವರುಗಳಿಗೆ, ತವ ಕಥಾ= ನಿನ್ನ ಈ ವಾದವು ಹೊರಟಿದೆಯಷ್ಟೇ.

**ಅನುವಾದ**– ವ್ಯಾವಹಾರಿಕ ಭೇದದಿಂದ ಈ ತತ್ ತ್ವಂ ಪದಗಳ ಅರ್ಥದ ವ್ಯವಸ್ಥೆಯನ್ನು ಕೂಡಿಸಲು ಬರುವುದಿಲ್ಲ. ಏಕೆಂದರೆ ಇಲ್ಲಿ ಐಕ್ಯಕ್ಕೆ ಯೋಗ್ಯವಾದ ಸತ್ಯವಾದ ಚಿತ್‌ಗಳೇ ನಿನ್ನಂತೆ ಪ್ರಸಕ್ತವಾಗಿವೆಯಷ್ಟೇ.

**ಭಾವವಿಲಾಸಿನೀ**– ವ್ಯಾವಹಾರಿಕಭೇದಾದ್ ವ್ಯವಸ್ಥೋಪಪತ್ತಿರಿತ್ಯಾಶಂಕ್ಯ ಪಾರಮಾರ್ಥಿಕೈಕ್ಯ-ಬೋಧ ಸಮಸಮಯವರ್ತಿನ್ಯಾಃ ವ್ಯವಸ್ಥಾಯಾ ಅಪಿ ಪಾರಮಾರ್ಥಿಕತ್ವಾವಶ್ಯಂಭಾವಾ-ದಿತ್ಯಾಹ– **ವ್ಯಾವಹಾರಿಕಭೇದಾದಿತಿ** ॥ ಚಿತೋರೈಕ್ಯಯೋಗ್ಯಚಿನ್ಮಾತ್ರಯೋಃ ಕಥಾ ವ್ಯಪದೇಶಃ ತತ್ತ್ವಂ ಪದಾಭ್ಯಾಮ್ ॥ ೮೧೫ ॥

**ವಿವರಣೆ**– ಈ ವಾಕ್ಯವು ನಿನ್ನ ರೀತಿಯಲ್ಲಿ ಪಾರಮಾರ್ಥಿಕವಾದ ಐಕ್ಯವನ್ನು ಹೇಳುತ್ತದೆ. ಪಾರಮಾರ್ಥಿಕವಾದ ಐಕ್ಯವನ್ನು ಹೇಳುವ ವಾಕ್ಯಕ್ಕೆ ಸಮಾನಕಾಲೀನವಾದ ಒಂದು ವ್ಯವಸ್ಥೆಯು ಇರಬೇಕು. ವ್ಯಾವಹಾರಿಕ ಭೇದದಿಂದ ಉಂಟಾಗುವ ವ್ಯವಸ್ಥೆಯು ಪಾರಮಾರ್ಥಿಕ ಐಕ್ಯಬೋಧಕ್ಕೆ ಸಮಾನಕಾಲೀನವಾಗಲು ಸಾಧ್ಯವಿಲ್ಲ. ಆದ್ದರಿಂದ ವ್ಯಾವಹಾರಿಕ ಭೇದವನ್ನು ಒಪ್ಪಿ ತತ್ ತ್ವಂ ಪದಗಳ ಅರ್ಥ ವ್ಯವಸ್ಥೆಯನ್ನು ಕೂಡಿಸಲು ಬರುವುದಿಲ್ಲ ಎಂದು ಅಭಿಪ್ರಾಯ.

ಯದ್ವಾ ಬ್ರಹ್ಮಸ್ಥಿತೈಕ್ಯಸ್ಯ ಭಾವರೂಪಸ್ಯ ತದ್ರಿಪೋಃ ।
ನಿರ್ಗುಣೋಕ್ತಿಃ ಶಿರಶ್ಛಿನ್ದ್ಯಾತ್ ತೇನೈವಾಸ್ಯಾಃ ಪರಾಭವೇ ॥ ೮೧೬ ॥

ಸರ್ವಜ್ಞಶರ್ವಶಕ್ತಿತ್ವಶ್ರುತಿರರ್ಥಬಲೋರ್ಜಿತಾ ।
ಪಟ್ಟಂ ಬಧ್ನಾತಿ ಭೇದಸ್ಯ ಹಂತಿ ಚಾಸ್ಯ ವಿರೋಧಿನಮ್ ॥ ೮೧೭ ॥

**ಅರ್ಥ**– ಯದ್ವಾ= ಅಥವಾ, ನಿರ್ಗುಣೋಕ್ತಿಃ= ನಿರ್ಗುಣೋಕ್ತಿಯು, ತದ್ ರಿಪೋಃ= ಅದರ ವಿರೋಧಿಯಾದ, ಭಾವರೂಪಸ್ಯ= ಭಾವರೂಪವಾದ, ಬ್ರಹ್ಮಸ್ಥಿತೈಕ್ಯಸ್ಯ= ಬ್ರಹ್ಮನಲ್ಲಿರುವ ಐಕ್ಯದ, ಶಿರಃ= ಶಿರಸ್ಸನ್ನು, ಛಿಂದ್ಯಾತ್= ಕತ್ತರಿಸುತ್ತದೆ, ತೇನೈವ= ಐಕ್ಯದಿಂದಲೇ, ಅಸ್ಯಾಃ= ಈ ಐಕ್ಯಶ್ರುತಿಯ, ಪರಾಭವೇ= ಪರಾಭವ ಉಂಟಾದರೆ, ಅರ್ಥಬಲೋರ್ಜಿತಾ= ಅರ್ಥದ ಬಲದಿಂದ ಉನ್ನದ್ಧವಾದಂತಹ, ಸರ್ವಜ್ಞ-ಸರ್ವಶಕ್ತಿತ್ವಶ್ರುತಿಃ= ಸರ್ವಜ್ಞತ್ವ ಮತ್ತು ಸರ್ವಶಕ್ತಿತ್ವವನ್ನು ಹೇಳುವ ಶ್ರುತಿಯು, ಭೇದಸ್ಯ= ಭೇದಕ್ಕೆ, ಪಟ್ಟಂ ಬಧ್ನಾತಿ= ಪಟ್ಟವನ್ನು ಕಟ್ಟುತ್ತದೆ, ಅಸ್ಯ= ಈ ಭೇದದ, ವಿರೋಧಿನಂ= ವಿರೋಧಿಯಾದ ಐಕ್ಯವನ್ನು, ಹಂತಿ ಚ= ಕೊಲ್ಲುತ್ತದೆ ಕೂಡ.

**ಅನುವಾದ**– ಅಥವಾ ನಿರ್ಗುಣೋಕ್ತಿಯು ಭೇದವಿರೋಧಿಯಾದ ಭಾವರೂಪವಾದ ಬ್ರಹ್ಮನಿಷ್ಠವಾದ ಐಕ್ಯದ ತಲೆಯನ್ನು ಕತ್ತರಿಸುತ್ತದೆ. ಐಕ್ಯೋಕ್ತಿಯಿಂದಲೇ ನಿರ್ಗುಣೋಕ್ತಿಯು ಬಾಧಿತವಾದರೆ ಸರ್ವಜ್ಞತ್ವ, ಸರ್ವಶಕ್ತಿತ್ವ ಮೊದಲಾದ

ಧರ್ಮಿಗಳ ಬಲದಿಂದ ಕೂಡಿದ ಐಕ್ಯವಾಕ್ಯವೇ ಭೇದಕ್ಕೆ ವಿರೋಧಿಯಾದ ಧರ್ಮಗಳನ್ನು ನಾಶಮಾಡಿ ಭೇದಕ್ಕೆ ಪಟ್ಟಾಭಿಷೇಕವನ್ನು ಮಾಡುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪ್ಯೈಕ್ಯಶ್ರುತೇರ್ಭೇದಶ್ರುತಿಬಾಧಕತಾ ನಾಸ್ತೀತ್ಯಾಹ– ಯದ್ವೇತಿ ॥ ನಿರ್ಗುಣೋಕ್ತಿಃ ತ್ವದ್ರೀತ್ಯಾ ಬ್ರಹ್ಮನಿಷ್ಠಭಾವಧರ್ಮನಿಷೇಧಿಕಾ ನಿರ್ಗುಣೋಕ್ತಿರಿತಿ ಯಾವತ್ । ತದ್ರಿಪೋರ್ಭೇದರಿಪೋಃ ಭಾವರೂಪಸ್ಯ ಬ್ರಹ್ಮಸ್ಥೈಕ್ಯಸ್ಯ ಬ್ರಹ್ಮಧರ್ಮಭೂತೈಕ್ಯಸ್ಯ ಶಿರಶ್ಛಿನ್ನ್ಯಾತ್ ನಿರ್ಗುಣಶ್ರುತಿರೇವೈಕ್ಯಶ್ರುತಿಬಾಧಿಕೇತಿ ಯಾವತ್ । ಏವಮಪಿ ನ ಭೇದಸ್ಯ ಹಾನಿಃ । ತೇನ ಭಾವರೂಪೈಕ್ಯೇನೈವಾಸ್ಯಾಃ ನಿರ್ಗುಣಶ್ರುತೇಃ ಪರಾಭವೇ ಐಕ್ಯಶ್ರುತ್ಯಾ ನಿರ್ಗುಣ- ಶ್ರುತಿಬಾಧನೇ । ಸರ್ವಜ್ಞತ್ವಾದಿಶ್ರುತಿಃ ಅಬಾಧಿತಾರ್ಥಾ ಸತೀ ಭೇದಸ್ಯ ಪಟ್ಟಂ ಬಧ್ನಾತಿ । ಅಸ್ಯ ಭೇದಸ್ಯ ವಿರೋಧಿನಮ್ ಐಕ್ಯಂ ಹನ್ತಿ ಚ । ಸರ್ವಜ್ಞಾಸರ್ವಜ್ಞಯೋರೈಕ್ಯಾಯೋಗಾತ್ । ಏವಂ ತ್ವದೈಕ್ಯಶ್ರುತೇಃ ಪ್ರಾಮಾಣ್ಯೇಽಪಿ ಭೇದಶ್ರುತೇರೇವ ಜಯಃ । ನಿರ್ಗುಣಶ್ರುತೇಃ ಪ್ರಾಮಾಣ್ಯೇಽಪಿ ಭೇದಶ್ರುತೇರೇವ ಜಯ ಇತಿ ಭಾವಃ ॥ ೮೧೬-೮೧೭ ॥

**ವಿವರಣೆ–** ತತ್ತ್ವಮಸಿ ಎಂದು ಐಕ್ಯವನ್ನು ಹೇಳುವ ಶ್ರುತಿಯು ಒಂದು ಕಡೆ ಮತ್ತು ಕೇವಲೋ ನಿರ್ಗುಣಶ್ಚ ಎಂದು ಬ್ರಹ್ಮನಿಗೆ ನಿರ್ಗುಣತ್ವವನ್ನು ಹೇಳುವ ಶ್ರುತಿಯು ಇನ್ನೊಂದು ಕಡೆ. ಈಗ ಯಾವುದರಿಂದ ಯಾವುದಕ್ಕೆ ಬಾಧವು ಉಂಟಾಗುತ್ತದೆ ಎಂದು ವಿಚಾರ ಮಾಡಬೇಕು. ನಿರ್ಗುಣಶ್ರುತಿಯು ಐಕ್ಯವು ಭಾವರೂಪವಾದುದರಿಂದ ಐಕ್ಯಶ್ರುತಿಯನ್ನು ಬಾಧಿಸಿದರೆ ಐಕ್ಯವು ಬಾಧಿತವಾಗುವುದರಿಂದ ಭೇದವೇ ಸಿದ್ಧವಾಗುತ್ತದೆ. ಐಕ್ಯಶ್ರುತಿಯೇ ನಿರ್ಗುಣಶ್ರುತಿಯನ್ನು ಬಾಧಿಸಿದರೆ ಆಗ ಸರ್ವಜ್ಞತ್ವಾದಿ ಗುಣಗಳಿಗೆ ಯಾವ ವಿರೋಧವೂ ಇಲ್ಲದಿರುವುದರಿಂದ ವಿರುದ್ಧಧರ್ಮಾದಿ ಕಾರಣತ್ವದಿಂದ ಭೇದವೇ ಸಿದ್ಧವಾಗುತ್ತದೆ. ಆಗ ಸರ್ವಜ್ಞತ್ವಾದಿಗುಣಗಳನ್ನು ಹೇಳುವ ಶ್ರುತಿಯು ಭೇದಕ್ಕೆ ವಿರೋಧಿಗಳಾದ ಐಕ್ಯಶ್ರುತಿಯನ್ನೇ ನಾಶಮಾಡಿ ಭೇದಕ್ಕೇ ಪಟ್ಟಾಭಿಷೇಕವನ್ನು ಮಾಡುತ್ತವೆ. ಹೀಗೆ ಐಕ್ಯಶ್ರುತಿಯು ಬಾಧಿತವಾದರೂ ಭೇದವು ಸಿದ್ಧವಾಗುತ್ತದೆ. ನಿರ್ಗುಣಶ್ರುತಿಯು ಬಾಧಿತವಾದರೂ ಭೇದವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಕಿಂಚ ಸಂಕೋಚಮಾರ್ಗೇಣ ಪಲಾಯನಪರಾಂ ಶ್ರುತಿಮ್ ।**
**ಪ್ರಬಲಾನಂತಸಗುಣಶ್ರುತಿಃ ಕೋಣೇ ಕ್ವಚಿತ್ ಕ್ಷಿಪೇತ್ ॥ ೮೧೮ ॥**

**ಅರ್ಥ–** ಕಿಂಚ= ಮತ್ತು, ಸಂಕೋಚಮಾರ್ಗೇಣ= ಅಭಾವವನ್ನು ನಿಷೇಧ ಮಾಡದೆ ಕೇವಲ ಭಾವವನ್ನು ನಿಷೇಧ ಮಾಡಿ ಸಂಕೋಚ ಮಾರ್ಗದಿಂದ, ಪಲಾಯನಪರಾಂ= ಓಡಿ ಹೋಗುವುದರಲ್ಲಿ ತಾತ್ಪರ್ಯವುಳ್ಳ, ಶ್ರುತಿಂ= ನಿರ್ಗುಣಶ್ರುತಿಯನ್ನು, ಪ್ರಬಲಾ= ಪ್ರಬಲವಾದಂತಹ, ಅನಂತಸಗುಣಶ್ರುತಿಃ= ಅನಂತ ಗುಣಪ್ರತಿಪಾದಕವಾದ ಶ್ರುತಿಯು,

ಕ್ವಚಿತ್ ಕೋಣೆ = ಯಾವುದೋ ಒಂದು ಮೂಲೆಯಲ್ಲಿ ಎಂದರೆ ಗುಣತ್ರಯ ಎಂಬ ಮೂಲೆಯಲ್ಲಿ ಕ್ಷಿಪೇತ್= ಎಸೆಯುತ್ತದೆ.

**ಅನುವಾದ–** ಮತ್ತು ಸಂಕೋಚ ಮಾರ್ಗದಿಂದ ಓಡಿ ಹೋಗಲು ಪ್ರಯತ್ನಿಸುವ ನಿರ್ಗುಣ ಶ್ರುತಿಯನ್ನು ಪ್ರಬಲವಾದ ಸಗುಣಶ್ರುತಿಯು ಹಿಡಿದು ಒಂದು ಮೂಲೆಯಲ್ಲಿ ಎಸೆಯುತ್ತದೆ.

**ಭಾವವಿಲಾಸಿನೀ–** ಪೂರ್ವನಿರ್ಗುಣಶ್ರುತೇರ್ಭಾವಮಾತ್ರಪರತ್ವೇನ ಸಙ್ಕೋಚೇ ಗುಣತ್ರಯಪರತ್ವೇನ ಸಂಕೋಚ ಏವ ಶ್ರೇಯಾನಿತ್ಯುಕ್ತಮ್ । ಅಧುನಾ ಪ್ರಕಾರಾಂತರೇಣ ದೂಷಯತಿ– **ಕಿಂಚೇತಿ** ।। ಶ್ರುತಿಂ ನಿರ್ಗುಣಶ್ರುತಿಮ್ । ಪ್ರಬಲಾ ಅಸಂಕುಚಿತ-ಸ್ವಸ್ವಗುಣಾಭಿಧಾನಾತ್ ಪ್ರಬಲಾ । ಅನಂತೇತ್ಯನೇನ ಬಹುತ್ವೇನಾಪಿ ಪ್ರಾಬಲ್ಯಂ ಸೂಚಯತಿ । ಕ್ವಚಿತ್ ಕೋಣೇ ಗುಣತ್ರಯಾಖ್ಯಕೋಣೇ । ಸ್ವಬೋಧ್ಯಸಾರ್ವಜ್ಞಾದಿಗುಣಾನ್ ವಿಹಾಯ ಗುಣತ್ರಯನಿಷೇಧಪರಾಮೇವ ಕುರ್ಯಾದಿತಿ ಭಾವಃ ।। ೮೧೮ ।।

**ವಿವರಣೆ–** ಹಿಂದೆ ನಿರ್ಗುಣ ಶ್ರುತಿಗೆ ಭಾವಮಾತ್ರಸಂಕೋಚಪರತ್ವೇನ ಅರ್ಥ ಮಾಡುವುದಕ್ಕಿಂತಲೂ ಗುಣತ್ರಯಪರತ್ವೇನ ಸಂಕೋಚ ಮಾಡುವುದು ಒಳ್ಳೆಯದು ಎಂದು ಹೇಳಲ್ಪಟ್ಟಿತು. ಈಗ ಬೇರೆ ರೀತಿಯಿಂದ ಅದನ್ನು ಉಪಪಾದನೆ ಮಾಡುತ್ತಾರೆ. ಧರ್ಮಪ್ರತಿಪಾದಕ ಶ್ರುತಿಯು ಮುಖ್ಯಾರ್ಥದಿಂದ ಎಂದರೆ ಅಸಂಕುಚಿತ ವೃತ್ತಿಯಿಂದ ಆಯಾ ಗುಣಗಳನ್ನು ಪ್ರತಿಪಾದನೆ ಮಾಡುವುದರಿಂದ ಪ್ರಬಲವಾಗಿದೆ ಮತ್ತು ಅಂತಹ ಅನಂತ ವಾಕ್ಯಗಳಿಂದ ಅನಂತ ಗುಣಗಳು ಹೇಳಲ್ಪಡುವುದರಿಂದ ಬಹುತ್ವದಿಂದಲೂ ಪ್ರಬಲವಾಗಿದೆ. ಆದ್ದರಿಂದ ಪ್ರಬಲವಾದ ಗುಣಶ್ರುತಿಯು ದುರ್ಬಲವಾದ ನಿರ್ಗುಣ ಶ್ರುತಿಯನ್ನು ಹಿಡಿದು ಆ ನಿರ್ಗುಣಶ್ರುತಿಯು ಸರ್ವಜ್ಞತ್ವಾದಿ ಗುಣಗಳ ಗೋಜಿಗೆ ಹೋಗದೆ ಸತ್ವಾದಿಗುಣಗಳನ್ನು ಹೇಳುವಂತೆ ಮಾಡುತ್ತದೆ. ಆದ್ದರಿಂದ ನಿರ್ಗುಣ ಶ್ರುತಿಯಿಂದ ಸತ್ವಾದಿಗುಣಗಳ ನಿಷೇಧವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ವ್ಯಾವಹಾರಿಕತಾ ಚಾತ್ಮಧರ್ಮಾಣಾಂ ಸ್ಯಾತ್ ತದ್ಯೈವ ಹಿ ।**
**ಯದ್ಯಹಂ ಪ್ರತಿಷೇಧಾಮಿ ನೋ ಚೇತ್ ತೇ ಸ್ಯುರಬಾಧಿತಾಃ ।। ೮೧೯ ।।**

**ಅರ್ಥ–** ಆತ್ಮಧರ್ಮಾಣಾಂ= ಆತ್ಮಧರ್ಮಗಳಿಗೆ, ಯದಿ= ಒಂದು ಪಕ್ಷ, ಅಹಂ ಪ್ರತಿಷೇದಾಮಿ = ನಾನು ಪ್ರತಿಷೇದ ಮಾಡಿದರೆ, ತದ್ಯೈವ ಹಿ= ಆಗ ಮಾತ್ರ, ವ್ಯಾವಹಾರಿಕತಾಸ್ಯಾತ್= ವ್ಯಾವಹಾರಿಕತ್ವ ಉಂಟಾಗುತ್ತದೆ, ನೋ ಚೇತ್= ಇಲ್ಲದಿದ್ದರೆ, ಅಬಾಧಿತಾಃ ಸ್ಯುಃ= ಅಬಾಧಿತವೇ ಆಗುತ್ತವೆ.

**ಅನುವಾದ–** ನಾನು ಮುಖ್ಯವೃತ್ತಿಯಿಂದ ಧರ್ಮಗಳನ್ನು ನಿಷೇಧ ಮಾಡಿದರೆ ಮಾತ್ರ ಧರ್ಮಗಳು ವ್ಯಾವಹಾರಿಕವಾಗುತ್ತವೆ. ಇಲ್ಲದಿದ್ದರೆ ಧರ್ಮಗಳು ಅಬಾಧಿತವೇ ಆಗುತ್ತವೆ.

**ಭಾವವಿಲಾಸಿನೀ–** ನನು ಭಗವತಿ ಸಾರ್ವಜ್ಞಾದಿಭಾವರೂಪಗುಣಪ್ರತಿಪಾದಕಾನಾಂ ಶ್ರುತೀನಾಂ ವ್ಯಾವಹಾರಿಕಗುಣಪರತ್ವೇನ ಶತಮಪ್ಯಂಧಾನಾಂ ನ ಪಶ್ಯತೀತಿ ನ್ಯಾಯೇನ ದುರ್ಬಲತ್ವಾನ್ನಿರ್ಗುಣಶ್ರುತಿರೇವ ಸಂಕುಚಿತವೃತ್ತಿರಪಿ ಅಬಾಧ್ಯಾರ್ಥತ್ವಾದ್ ಬಾಧಿಕಾ ಸ್ಯಾದಿತ್ಯಾಶಂಕಾಂ ನಿರ್ಗುಣಶ್ರುತೇರಭಿಪ್ರಾಯಮುದ್ ಘಟಯನ್ ಪರಿಹರತಿ– **ವ್ಯಾವಹಾರಿಕತಾ ಚೇತಿ** ॥ ಅಹಂ ನಿರ್ಗುಣ ಇತ್ಯಾಕಾರಾ । ಪ್ರತಿಷೇಧಾಮಿ ಭಗವದ್ಗುಣಾನ್ ನಿರಾಕುರ್ಯಾಂ ತರ್ಹ್ಯೆವಾತ್ಮಧರ್ಮಾಣಾಂ ವ್ಯಾವಹಾರಿಕತಾ ಸ್ಯಾದಿತಿ ಸಂಬಂಧಃ । ನೋ ಚೇನ್ನ ಪ್ರತಿಷೇಧಾಮಿ ಚೇತ್ ತೇ ಶ್ರೌತಾ ಗುಣಾಃ ಅಬಾಧಿತಾಃ ಸ್ಯುಃ ॥ ೮೧೯ ॥

**ವಿವರಣೆ–** ಈ ಶ್ಲೋಕದಿಂದ ಪ್ರಾರಂಭಿಸಿ ಇನ್ನೂ ಏಳು ಶ್ಲೋಕಗಳಲ್ಲಿ ನಿರ್ಗುಣ ಶ್ರುತಿಯು ತಾನು ಮಾಡುವ ಚಿಂತನೆಯನ್ನು ವಿವರಿಸಿ ಗುಣತ್ರಯನಿಷೇಧವನ್ನು ವ್ಯವಸ್ಥಾಪನೆ ಮಾಡುವ ಸಂಗತಿಯನ್ನು ಆಲಂಕಾರಿಕವಾಗಿ ತಿಳಿಸುತ್ತಾರೆ. ಬ್ರಹ್ಮನಲ್ಲಿ ಪ್ರತಿಪಾದಿತವಾಗುವ ಸಾರ್ವಜ್ಞತ್ವಾದಿಗುಣಗಳು ವ್ಯಾವಹಾರಿಕವಾದ್ದರಿಂದ ಅವು ಎಷ್ಟಿದ್ದರೂ ದುರ್ಬಲವಾದವುಗಳು. ನಿರ್ಗುಣ ಶ್ರುತಿಯೇ ಪ್ರಬಲವಾದುದು. ಏಕೆಂದರೆ ಅದರ ಅರ್ಥವು ಬಾಧಿತವಾಗುವುದಿಲ್ಲ. ಆದ್ದರಿಂದ ಸಗುಣಶ್ರುತಿಗೆ ನಿರ್ಗುಣ ಶ್ರುತಿಯೇ ಬಾಧಕವಾಗುತ್ತದೆ ಎಂಬ ಶಂಕೆಯನ್ನು ನಿರ್ಗುಣ ಶ್ರುತಿಯ ಚಿಂತನೆಯ ರೀತಿಯನ್ನು ವ್ಯಕ್ತಪಡಿಸಿ ಪರಿಹರಿಸುತ್ತಾರೆ. ನಿರ್ಗುಣಶ್ರುತಿಯು ಮುಖ್ಯವೃತ್ತಿಯಿಂದ ಗುಣಸಾಮಾನ್ಯವನ್ನು ನಿಷೇಧಮಾಡಿದರೆ ಮಾತ್ರ ಆಗ ಸರ್ವಜ್ಞತ್ವಾದಿಗಳು ವ್ಯಾವಹಾರಿಕವೆಂದು ಸಿದ್ಧವಾಗುತ್ತದೆ, ಇಲ್ಲದಿದ್ದರೆ ಇಲ್ಲ ಎಂದು ಅಭಿಪ್ರಾಯ.

**ಅಹಂ ಚ ಮುಖ್ಯತಃ ಸ್ವಾರ್ಥಪರೈವಾನ್ಯವಿರೋಧಿನೀ ।**
**ನ ಹಿ ಗಂಗಾಪದಂ ಲಕ್ಷ್ಯೇ ತೀರೇ ಸ್ವಾರ್ಥವಿರೋಧ್ಯಪಿ ।**
**ತೀರತ್ವಘೋಷಾವಾಸತ್ವಪಾರ್ಥಿವತ್ವಾದಿಕಂ ಕ್ಷಿಪೇತ್ ॥ ೮೨೦ ॥**

**ಅರ್ಥ–** ಅಹಂ ಚ= ನಾನಾದರೂ, ಮುಖ್ಯತಃ= ಮುಖ್ಯವಾಗಿ, ಸ್ವಾರ್ಥಪರೈವ= ನನ್ನ ಅರ್ಥವನ್ನು ಪ್ರತಿಪಾದನೆ ಮಾಡಿದರೆ ಮಾತ್ರ, ಅನ್ಯವಿರೋಧಿನೀ= ಇನ್ನೊಂದಕ್ಕೆ ವಿರೋಧಿಯಾಗುತ್ತೇನೆ, ಗಂಗಾಪದಂ= ಗಂಗಾಪದವು, ಲಕ್ಷ್ಯೇತೀರೇ= ಲಕ್ಷ್ಯವಾದ ತೀರದಲ್ಲಿ, ಸ್ವಾರ್ಥವಿರೋಧ್ಯಪಿ= ಪ್ರವಾಹರೂಪವಾದ ತನ್ನ ಶಕ್ಯಾರ್ಥಕ್ಕೆ ವಿರುದ್ಧವಾದರೂ ಕೂಡ, ತೀರತ್ವ ಘೋಷಾವಾಸತ್ವಪಾರ್ಥಿವತ್ವಾದಿಕಂ = ತೀರತ್ವ, ಘೋಷಾಧಾರತ್ವ, ಪಾರ್ಥಿವತ್ವ ಮೊದಲಾದ ಗುಣಗಳನ್ನು, ಕ್ಷಿಪೇತ್= ನಿರಾಸೆ ಮಾಡುತ್ತದೆ ಎಂದು, ನಹಿ= ಇಲ್ಲವಷ್ಟೇ.

**ಅನುವಾದ–** ನಾನು ಮುಖ್ಯವೃತ್ತಿಯಿಂದ ನನ್ನ ಅರ್ಥವನ್ನು ಹೇಳಿದರೆ ಮಾತ್ರ ಅನ್ಯ ವಿರೋಧಿನಿಯಾಗುತ್ತೇನೆ. ಗಂಗಾಪದವು ತೀರವು ಲಕ್ಷ್ಯವಾದಾಗಲೂ ಪ್ರವಾಹರೂಪವಾದ ತನ್ನ ಮುಖ್ಯಾರ್ಥಕ್ಕೆ ವಿರೋಧಿಗಳಾದಂತಹ ತೀರತ್ವ

ಘೋಷಾಧಾರತ್ವ, ಪಾರ್ಥಿವತ್ವ ಮೊದಲಾದ ಧರ್ಮಗಳನ್ನು ತೀರದಲ್ಲಿ ನಿಷೇಧ ಮಾಡುವುದಿಲ್ಲವಷ್ಟೇ?

**ಭಾವವಿಲಾಸಿನೀ–** ಅಹಂ ಚ ಲೋಕಮರ್ಯಾದಯಾ ಮುಖ್ಯವೃತ್ತ್ಯಾ ಸ್ವಾರ್ಥಪರಾ ಧರ್ಮಾನ್ ನಿಷೇಧಾಮಿ ವಾ ಉತ ಮಾಯಿಮತರೀತ್ಯಾ ಲಕ್ಷಣವೃತ್ತ್ಯಾ ಸ್ವಾರ್ಥಪರಾ ನಿಷೇಧಾಮಿ ವೇತಿ ವಿಕಲ್ಪ್ಯ ದ್ವಿತೀಯಪಕ್ಷೇ ದೋಷಂ ವದಂತೀ ಆದ್ಯಮೇವ ಪಕ್ಷಂ ಸ್ಥಿರೀಕರೋತಿ– **ಅಹಂ ಚೇತಿ** ॥ ಹಿ ಯಸ್ಮಾದ್ ಗಂಗಾಪದಂ ತೀರೇ ಲಕ್ಷಣಯಾ ಪ್ರವೃತ್ತಮ್, ಲಕ್ಷ್ಯೇ ಸ್ವಲಕ್ಷ್ಯೇ ತೀರೇ ಸ್ವಾರ್ಥವಿರೋಧಿ ಸ್ವಾರ್ಥಸ್ಯಪ್ರವಾಹಸ್ಯ ವಿರೋಧ್ಯಪಿ ತತ್ರಾವಿದ್ಯಮಾನಮಪಿ ತೀರತ್ವಪಾರ್ಥಿವತ್ವಾದಿಕಂ ನ ಕ್ಷಿಪೇತ್ ನ ನಿರಾಕುರ್ಯಾತ್ । ತಸ್ಮಾನ್ಮಾಯಾವಾದ್ಯುಕ್ತರೀತ್ಯಾ ಸ್ವರೂಪಮಾತ್ರಲಕ್ಷಣಯಾ ಬ್ರಹ್ಮಸ್ವರೂಪಮಾತ್ರಪ್ರತಿಪಾದಿಕಾಽಹಂ ವಸ್ತುಗತ್ಯಾ ಮಮ ಮುಖ್ಯಾರ್ಥಭೂತನೈರ್ಗುಣ್ಯ ವಿರೋಧಿನೋಽಪಿ ಭಗವದ್ಗುಣಾನ್ ನ ನಿಷೇದ್ಧುಂ ಶಕ್ತಾ । ತೇನ ಮುಖ್ಯತಃ ಸ್ವಾರ್ಥಪರೈವಾನ್ಯವಿರೋಧಿನೀ ಮದರ್ಥನೈರ್ಗುಣ್ಯವಿರೋಧಿ-ಭೂತಗುಣವಿರೋಧಿನೀ । ಧಿಜ್ ಮಾಯಿಮತಂ ಲೋಕಮರ್ಯಾದೈವಾಶ್ರಯಣೀಯೇತಿ ಯಾವತ್ ॥ ೮೨೦ ॥

**ವಿವರಣೆ–** ನಾನು ಲೋಕಮರ್ಯಾದೆಯನ್ನು ಅನುಸರಿಸಿ ಮುಖ್ಯವೃತ್ತಿಯಿಂದ ನನ್ನ ಅರ್ಥವನ್ನು ಹೇಳಿ ಧರ್ಮಗಳನ್ನು ನಿಷೇಧ ಮಾಡಲೋ ಅಥವಾ ಮಾಯಾವಾದಿ ಮತದಂತೆ ಲಕ್ಷಣಾವೃತ್ತಿಯಿಂದ ನನ್ನ ಅರ್ಥವನ್ನು ಹೇಳಿ ಧರ್ಮಗಳನ್ನು ನಿಷೇಧ ಮಾಡಲೋ ಎಂದು ಚಿಂತಿಸುವ ನಿರ್ಗುಣ ಶ್ರುತಿಯು ಎರಡನೇ ಪಕ್ಷದಲ್ಲಿ ದೋಷವನ್ನು ಹೇಳುತ್ತಾ ಮೊದಲನೇ ಪಕ್ಷವನ್ನೇ ಅಂಗೀಕರಿಸುತ್ತದೆ. ಎರಡನೇ ಪಕ್ಷಕ್ಕೆ ದೋಷವನ್ನು ಅನುಸಂಧಾನ ಮಾಡುವ ರೀತಿಯು ಹೀಗಿದೆ :- ಗಂಗಾಯಾಂ ಘೋಷಃ ಎಂಬಲ್ಲಿ ಗಂಗಾಪದಕ್ಕೆ ತೀರದಲ್ಲಿ ಲಕ್ಷಣಾ ಇದೆ. ಪ್ರವಾಹವು ಗಂಗಾಪದದ ಮುಖ್ಯಾರ್ಥ. ಗಂಗಾಪದದ ಮುಖ್ಯಾರ್ಥವಾದ ಪ್ರವಾಹ ಎಂಬ ಅರ್ಥವನ್ನು ಸ್ವೀಕರಿಸಿದರೆ ಮಾತ್ರ ಆ ಅರ್ಥದಲ್ಲಿ ಎಂದರೆ ಗಂಗಾನದಿಯಲ್ಲಿ ತೀರತ್ವ, ಘೋಷಾಧಾರತ್ವ, ಪಾರ್ಥಿವತ್ವ ಮೊದಲಾದ ಧರ್ಮಗಳು ನಿರಾಕೃತವಾಗುತ್ತವೆ. ಆದರೆ ಗಂಗಾಪದವು ತೀರಕ್ಕೆ ಲಕ್ಷಕವಾದಾಗ ಆ ಪದವು ಲಕ್ಷ್ಯವಾದ ತೀರದಲ್ಲಿ ತೀರತ್ವ, ಘೋಷಾಧಾರತ್ವ ಮತ್ತು ಪಾರ್ಥಿವತ್ವಗಳನ್ನು ನಿರಾಕರಣೆ ಮಾಡುವುದಿಲ್ಲ. ಆದ್ದರಿಂದ ತೀರತ್ವಾದಿ ಗುಣಗಳನ್ನು ನಿರಾಕರಣೆ ಮಾಡಬೇಕಾದರೆ ಮುಖ್ಯವೃತ್ತಿಯಿಂದ ಪ್ರವಾಹವನ್ನೇ ಹೇಳಬೇಕು. ಇದು ಲೋಕನೀತಿ. ಹೀಗಿರುವಾಗ ನಿರ್ಗುಣಶ್ರುತಿಯು ಗುಣಗಳನ್ನು ನಿಷೇಧಮಾಡಬೇಕಾದರೆ ಮುಖ್ಯವೃತ್ತಿಯಿಂದ ಗುಣಾಭಾವವನ್ನು ಹೇಳಿದರೆ ಮಾತ್ರ ಅದು ಸಾಧ್ಯ. ಲಕ್ಷಣಾವೃತ್ತಿಯಿಂದ ಈ ವಾಕ್ಯವು ಪ್ರವೃತ್ತವಾದರೆ ಆಗ ತನಗೆ ವಿರೋಧಿಯಾದ ಗುಣಗಳನ್ನು ನಿಷೇಧ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಮಾಯಮತಕ್ಕೆ ಧಿಕ್ಕಾರವಿರಲಿ.

ನಾನು ಮುಖ್ಯವೃತ್ತಿಯಿಂದಲೇ ಗುಣಾಭಾವವನ್ನು ಪ್ರತಿಪಾದನೆ ಮಾಡುತ್ತೇನೆ ಎಂದು ನಿರ್ಗುಣ ಶ್ರುತಿಯು ನಿರ್ಧರಿಸುತ್ತದೆ ಎಂದು ಅಭಿಪ್ರಾಯ.

**ಅತಃ ಶಾಬ್ದತ್ವಾದಿಧರ್ಮಬಲಾದನ್ಯನಿಷೇಧಿಕಾ ।**
**ಕಥಂ ತಾನೇವ ಬಾಧೇಽಹಂ ಹಸಿಷ್ಯತಿ ಸಹೋದರೀ ॥**
**ಕೃತಘ್ನಂ ದೂಷಯಂತೀ ವಾಗುಪಜೀವ್ಯವಿರೋಧಿನೀಮ್ ॥ ೮೨೧ ॥**

**ಅರ್ಥ–** ಅತಃ= ಆ ಕಾರಣದಿಂದ, ಶಾಬ್ದತ್ವಾದಿಧರ್ಮಬಲಾತ್= ಶಾಬ್ದತ್ವ, ಬೋಧ್ಯತ್ವ ಮೊದಲಾದ ಧರ್ಮಬಲದಿಂದ, ಅನ್ಯನಿಷೇಧಿಕಾ= ಇನ್ನೊಂದು ಧರ್ಮವನ್ನು ನಿಷೇಧ ಮಾಡುವ ನಾನು, ತಾನೇವ= ಆ ಶಾಬ್ದತ್ವಾದಿ ಧರ್ಮಗಳನ್ನೇ, ಕಥಂ ಬಾಧೇ= ಹೇಗೆ ಬಾಧಿಸುತ್ತೇನೆ? ಕೃತಘ್ನಂ= ಕೃತಘ್ನನನ್ನು, ದೂಷಯಂತೀ= ದೂಷಣೆ ಮಾಡುವ, ಸಹೋದರೀ= ಸಹೋದರಿಯು (ನನ್ನ ಜೊತೆಯಲ್ಲಿಯೇ ಬ್ರಹ್ಮನಿಂದ ಹೊರಬಂದ ಕೃತಘ್ನ ದೂಷಕವಾದ ವಾಕ್ಯವು), ಉಪಜೀವ್ಯವಿರೋಧಿನೀಂ= ಉಪಜೀವ್ಯ ವಿರೋಧವನ್ನು ಮಾಡುವ ನನ್ನನ್ನು, ಹಸಿಷ್ಯತಿ= ನೋಡಿ ನಗುತ್ತಾಳೆ.

**ಅನುವಾದ–** ಶಾಬ್ದತ್ವ ಬೋಧ್ಯತ್ವ ಮೊದಲಾದ ಧರ್ಮಗಳನ್ನು ಅಂಗೀಕರಿಸಬೇಕಾದುದು ಅವಶ್ಯಕವಾದುದರಿಂದ ಅದೇ ಧರ್ಮಗಳ ಬಲದಿಂದ ಬೇರೆ ಧರ್ಮಗಳನ್ನು ನಿಷೇಧಿಸುವ ನಾನು ಆ ಶಾಬ್ದತ್ವಾದಿ ಧರ್ಮಗಳನ್ನು ಹೇಗೆ ನಿಷೇಧಿಸಲಿ? ಹಾಗೆ ಮಾಡಿದರೆ ಕೃತಘ್ನನೆಂದು ದೂಷಿಸುವ ನನ್ನ ಸಹೋದರಿಯಾದ ಶ್ರುತಿಯು ಉಪಜೀವ ವಿರೋಧಿನಿಯಾದ ನನ್ನನ್ನು ನೋಡಿ ಹಾಸ್ಯವನ್ನು ಮಾಡುತ್ತಾಳೆ.

**ಭಾವವಿಲಾಸಿನೀ–** ಅತೋ ಮುಖ್ಯವೃತ್ತೇರಾವಶ್ಯಕತ್ವಾತ್ । ಶಾಬ್ದತ್ವಂ ಶಬ್ದಾಭಿಧೇಯತ್ವಂ ಆದಿಪದೇನ ಬೋಧ್ಯತ್ವಾದಿಕಂ ಗ್ರಾಹ್ಯಮ್ । ಅನ್ಯನಿಷೇಧಿಕಾ ಭಾವಧರ್ಮನಿಷೇಧಿಕಾ ಅಹಂ ತಾನೇವ ಮದುಪಜೀವ್ಯಶಾಬ್ದತ್ವಾದಿಭಾವರೂಪಧರ್ಮಾನೇವ ಕಥಂ ಬಾಧೇ ಕಥಂ ನಿವಾರಯಾಮಿ? ಯದಿ ನಿಷೇಧಾಮಿ ತರ್ಹ್ಯುಪಜೀವ್ಯವಿರೋಧಿನೀಂ ಮಾಂ ಸಹೋದರೀ ಮಯಾ ಸಹ ಭಗವದುದರನಿಃ ಸೃತಾ ಕೃತಘ್ನಂ ದೂಷಯಂತೀ ಕೃತಘ್ನೇ ನಾಸ್ತಿ ನಿಷ್ಕೃತಿರಿತ್ಯಾದಿಕಾ ವಾಕ್ ಹಸಿಷ್ಯತಿ । ನನೂಪಜೀವ್ಯಮಪಿ ಶಾಬ್ದತ್ವಾದಿಕಂ ಬಾಧ್ಯತ್ವಾನ್ನಿಷೇದ್ಧುಂ ಶಕ್ಯತೇ ಇತಿ ಚೇತ್, ತತ್ರ ವಕ್ತವ್ಯಂ ಕಿಂ ಬಲಾತ್ ತೇಷಾಂ ಬಾಧ ಇತಿ । ನಿರ್ಗುಣೋಕ್ತಿಬಲಾದೇವೇತಿ ಚೇತ್ ನ । ಸಾರ್ವಜ್ಞಾದಿಗುಣ ನಿಷೇಧಾರ್ಥಂ ಮುಖ್ಯವೃತ್ತ್ಯಾ ಪ್ರವೃತ್ತಯಾ ನಿರ್ಗುಣೋಕ್ತ್ಯಾ ಸಾರ್ವಜ್ಞಾದಿಗುಣನಿಷೇಧಕಾಲ ಏವ ನ ಶಾಬ್ದತ್ವಾದಿಕಮಪಿ ನಿಷೇದ್ಧುಂ ಶಕ್ಯಮ್ । ಸ್ವದಂತಭಂಗಸ್ಯೈವ ಪ್ರಸಂಗೇನ ಪರದಂಶನಾಸಾಮರ್ಥ್ಯಾತ್ । ತದ್ಬಾಧಾನಂತರಂ ಚ ನಹಿ ತದ್ಬಾಧಿಕಾ । ವಿರಮ್ಯ ವ್ಯಾಪಾರಾಯೋಗಾತ್ । ಶಾಬ್ದತ್ವಾದೇಸ್ತದಾಪ್ಯಾವಶ್ಯಕತ್ವಾಚ್ಚ ಬಾಧಕಾಂತರಂ ಚ ನಾಸ್ತೀತ್ಯಬಾಧ್ಯಮೇವ ಶಾಬ್ದತ್ವಾದಿಕಮ್ ॥ ೮೨೧ ॥

**ವಿವರಣೆ–** ಬ್ರಹ್ಮನಲ್ಲಿ ಭಾವ ಧರ್ಮಗಳನ್ನು ನಿಷೇಧ ಮಾಡಬೇಕಾದರೆ ಶಬ್ದದಿಂದ ಬ್ರಹ್ಮನ ಜ್ಞಾನವನ್ನು ಪಡೆದು ಅಲ್ಲಿ ಭಾವಧರ್ಮಗಳನ್ನು ನಿಷೇಧಿಸಬೇಕು. ಶಬ್ದದಿಂದ ಬ್ರಹ್ಮನ ಜ್ಞಾನವು ಬರುವಾಗ ಅವನಲ್ಲಿ ಶಾಬ್ದತ್ವ, ಬೋಧ್ಯತ್ವ ಮೊದಲಾದ ಧರ್ಮಗಳು ಇವೆ ಎಂದು ಒಪ್ಪಬೇಕು. ಅನಂತರ ನಿರ್ಗುಣಶಬ್ದದಿಂದ ಎಲ್ಲವನ್ನೂ ನಿಷೇಧ ಮಾಡುವುದಾದರೆ ಸರ್ವಜ್ಞತ್ವಾದಿ ಗುಣಗಳಿಗೆ ಹೇಗೆ ನಿಷೇಧ ಉಂಟಾಗುತ್ತದೆಯೋ ಅದರಂತೆಯೇ ಶಾಬ್ದತ್ವಾದಿಗುಣಗಳಿಗೂ ನಿಸೆಧ ಉಂಟಾಗುತ್ತದೆ. ಶಾಬ್ದತ್ವವನ್ನು ಉಪಜೀವಿಸಿಕೊಂಡೇ ಸರ್ವಜ್ಞತ್ವವನ್ನು ನಿಷೇಧಿಸುವ ನಾನು ಉಪಜೀವ್ಯವಾದ ಸಾರ್ವಜ್ಞವನ್ನೇ ಹೇಗೆ ನಿಷೇಧಿಸಲಿ. ಇನ್ನು ಸಾರ್ವಜ್ಞಾದಿ ಗುಣಗಳನ್ನು ನಿಷೇಧ ಮಾಡುವಾಗಲೂ ಅಧಿಕರಣವಾದ ಬ್ರಹ್ಮನ ಜ್ಞಾನವು ಶಬ್ದದಿಂದಲೇ ಬರಬೇಕಾದುದರಿಂದ ನಿಷೇಧ ಮಾಡುವಾಗಲೂ ಬ್ರಹ್ಮನಲ್ಲಿ ಶಾಬ್ದತ್ವವು ಬೇಕೇ ಬೇಕು. ಹೀಗಿರುವಾಗ ಶಾಬ್ದತ್ವವನ್ನು ನಿಷೇಧ ಮಾಡುವುದು ಹೇಗೆ? ಶಾಬ್ದತ್ವವನ್ನು ನಿಷೇಧ ಮಾಡಿದರೆ ನನಗೆ ದಂತಭಂಗವೇ ಆಗುವುದರಿಂದ ಅದರಿಂದ ಸಾರ್ವಜ್ಞಾದಿ ಧರ್ಮಗಳನ್ನು ಕಚ್ಚಿ ಅವುಗಳನ್ನು ನಾಶ ಮಾಡಲು ಸಾಧ್ಯವಿಲ್ಲವಷ್ಟೇ? ಇನ್ನು ಮೊದಲು ಶಾಬ್ದತ್ವವನ್ನು ಉಪಜೀವಿಸಿಕೊಂಡೇ ಸರ್ವಜ್ಞತ್ವಾದಿಧರ್ಮಗಳನ್ನು ನಿಷೇಧ ಮಾಡಿ ಅನಂತರ ಶಾಬ್ದತ್ವವನ್ನು ನಿಷೇಧ ಮಾಡಬೇಕು. ಇದು ಸರಿಯಾಗುವುದಿಲ್ಲ. ಏಕೆಂದರೆ ಶಬ್ದರೂಪಕರಣವಾದ ನನಗೆ ವಿರಮ್ಯ ವ್ಯಾಪಾರ ಎಂಬ ದೋಷವು ಉಂಟಾಗುತ್ತದೆ. ಇನ್ನು ಶಬ್ದತ್ವಾದಿಗಳನ್ನು ನಿಷೇಧಿಸಿದರೆ 'ಕೃತಘ್ನೇ ನಾಸ್ತಿ ನಿಷ್ಕೃತಿಃ' ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ ಎಂದು ಹೇಳಿರುವ ಬ್ರಹ್ಮನ ಉದರದಿಂದಲೇ ನನ್ನ ಜೊತೆಯಲ್ಲಿ ಹೊರಗೆ ಬಂದ ನನ್ನ ಸಹೋದರಿಯಾದ ಈ ವಾಕ್ಯವು ನನ್ನನ್ನು ನೋಡಿ ಅಪಹಾಸವನ್ನು ಮಾಡುತ್ತದೆ ಎಂದು ನಿರ್ಗುಣ ಶ್ರುತಿಯು ಚಿಂತಿಸುತ್ತದೆ ಎಂದು ಅಭಿಪ್ರಾಯ.

ಬಾಧ್ಯಸ್ಯ ಚೋಪಜೀವ್ಯತ್ವಮಬಾಧ್ಯಂ ಚೋಪಜೀವಕಮ್ ।
ನ ಶ್ರುತಂ ನಹಿ ಸತ್ಸರ್ಪೋ ರಜ್ಜುಸರ್ಪೋಪಜೀವಕಃ ॥ ೮೨ ॥

**ಅರ್ಥ–** ಚ= ಮತ್ತು, ಬಾಧ್ಯಸ್ಯ= ಬಾಧ್ಯವಾದುದಕ್ಕೆ, ಉಪಜೀವ್ಯತ್ವಂ= ಉಪಜೀವ್ಯತ್ವವು, ಚ= ಮತ್ತು, ಉಪಜೀವಕಂ= ಉಪಜೀವಕವು, ಅಬಾಧ್ಯಂ= ಅಬಾಧ್ಯವು ಎಂದು, ನ ಶ್ರುತಮ್= ಎಲ್ಲಿಯೂ ಕೇಳಿಬಂದಿಲ್ಲ, ಸತ್ಸರ್ಪಃ= ನಿಜವಾದ ಸರ್ಪವು, ರಜ್ಜುಸರ್ಪ ಉಪಜೀವಕಃ ನ ಹಿ= ರಜ್ಜುಸರ್ಪವನ್ನು ಉಪಜೀವಿಸುವುದಿಲ್ಲವಷ್ಟೇ.

**ಅನುವಾದ–** ಉಪಜೀವ್ಯವಾದ ಶಾಬ್ದತ್ವಾದಿಗಳು ಬಾಧ್ಯವಾಗುವುವು ಮತ್ತು ಉಪಜೀವಕವಾದ ನಿರ್ಗುಣತ್ವವು ಅಬಾಧ್ಯವಾಗುವುದು ಎಂಬುದು ಎಲ್ಲಿಯೂ ಕೇಳಿ ಬಂದಿಲ್ಲ. ನಿಜವಾದ ಸರ್ಪವು ಬಾಧ್ಯವಾದ ರಜ್ಜುಸರ್ಪವನ್ನು ಉಪಜೀವಿಸುವುದಿಲ್ಲವಷ್ಟೇ?

**ಭಾವವಿಲಾಸಿನೀ–** ಏವಂ ದೂಷಣೇ ವಿದ್ಯಮಾನೇಽಪಿ ತುಷ್ಯತು ದುರ್ಜನ ಇತಿ ನ್ಯಾಯೇನ ದೂಷಣಾಂತರಮಾಹ– **ಬಾಧ್ಯಸ್ಯೇತಿ** ॥ ರಜ್ಜುಸ್ಸರ್ಪೋಪಜೀವಕಃ ರಜ್ಜುಸ್ಸರ್ಪಸ್ಯೋಪ-ಜೀವಕಃ ॥ ೮೨೨ ॥

**ವಿವರಣೆ–** ಹಿಂದೆ ಹೇಳಿದ ದೋಷದ ಚಿಂತನೆಯೇ ಇದ್ದರೂ ಪ್ರಕಾರಾಂತರದಿಂದ ಇಲ್ಲಿ ಬೇರೆ ದೋಷವನ್ನು ಹೇಳುತ್ತಾರೆ. ಉಪಜೀವ್ಯ ಮತ್ತು ಉಪಜೀವಕಗಳಲ್ಲಿ ಉಪಜೀವ್ಯವು ಎಂದೂ ಬಾಧಿತವಾಗುವುದಿಲ್ಲ. ಈಗ ಶಾಬ್ದತ್ವಾದಿಗಳಿಗೆ ಬಾಧವನ್ನು ಅಂಗೀಕರಿಸಿದರೆ ಉಪಜೀವಕವಾದ ನಿರ್ಗುಣತ್ವವು ಉಪಜೀವ್ಯವಾದ ಶಾಬ್ದತ್ವವನ್ನು ಬಾಧಿಸುತ್ತದೆ ಎಂದು ಅಂಗೀಕರಿಸಿದಂತಾಯಿತು. ಇದೊಂದು ಅದೃಷ್ಟವಾದ ಕಲ್ಪನೆ ಎಂದು ಅಭಿಪ್ರಾಯ.

ತತೋಽಪಿ ನಿರ್ಗುಣತ್ವಂ ನ ಸ್ವೋಪಜೀವ್ಯಸ್ಯ ಬಾಧಕಮ್ ॥ ೮೨೩ ॥

ತಸ್ಮಾಚ್ಛಾಬ್ದತ್ವಬೋಧ್ಯತ್ವಧರ್ಮಿತ್ವಾದಿಗುಣಾನುಗಾ ।
ಏಕತ್ರ ಛಿನ್ನಧಾರೇಣ ಕುಠಾರೇಣಾಪರಂ ವನೇ ॥ ೮೨೪ ॥

ತಜ್ಜಾತೀಯಂ ಕಥಂ ಛಿಂದ್ಯಾಂ ಮಂದಾಶಂಕಿತದುರ್ಗುಣಾನ್ ।
ಛಿನದ್ಮಿ ಮಂದಧಾರಾಪೀತ್ಯಗಾನ್ನಿರ್ಗುಣವಾಗ್ ಬಹಿಃ ॥ ೮೨೫ ॥

**ಅರ್ಥ–** ತತೋಽಪಿ= ಆ ಕಾರಣದಿಂದಲೂ ಕೂಡ, ನಿರ್ಗುಣತ್ವಂ= ನಿರ್ಗುಣತ್ವವು, ಸ್ವೋಪಜೀವ್ಯಸ್ಯ= ನನಗೆ ಉಪಜೀವ್ಯವಾದ ಗುಣಗಳಿಗೆ, ಬಾಧಕಂ ನ= ಬಾಧಕವಾಗುವುದಿಲ್ಲ.

ತಸ್ಮಾತ್= ಆ ಕಾರಣದಿಂದ, ಶಾಬ್ದತ್ವಬೋಧ್ಯತ್ವಧರ್ಮಿತ್ವಾದಿ ಗುಣಾನುಗಾ = ಶಾಬ್ದತ್ವ, ಬೋಧ್ಯತ್ವ, ಧರ್ಮಿತ್ವ ಮೊದಲಾದ ಗುಣಗಳನ್ನು ಉಪಜೀವಿಸಬೇಕಾದ ನಾನು, ಏಕತ್ರ= ಒಂದು ಕಡೆ, ಎಂದರೆ ಈ ಧರ್ಮಗಳ ವಿಷಯದಲ್ಲಿ, ಛಿನ್ನಧಾರೇಣ= ನನ್ನ ಮುರಿದುಹೋಗಿ ಮೊಂಡಾದ, ಕುಠಾರೇಣ= ಕೊಡಲಿಯಿಂದ, ತಜ್ಜಾಯತೀಯಮ್= ಅದೇ ಜಾತಿಗೆ ಸೇರಿದ, ಅಪರಂ= ಇನ್ನೊಂದು (ವೃಕ್ಷವನ್ನು) ಧರ್ಮವನ್ನು ವನೇ= ಕಾಡಿನಲ್ಲಿ (ಬ್ರಹ್ಮನಲ್ಲಿ), ಕಥಂ ಛಿಂದ್ಯಾಂ= ಹೇಗೆ ಕತ್ತರಿಸುತ್ತೇನೆ (ಹೇಗೆ ನಿಷೇಧಿಸುತ್ತೇನೆ). ಆದ್ದರಿಂದ, ಮಂದಧಾರಾಽಪಿ= ಮೊಂಡಾದ ತುದಿಯಿದ್ದರೂ, ಮಂದಾಶಂಕಿತ ದುರ್ಗುಣಾನ್= ಮಂದರು ಆಶಂಕಿಸುವ ದುರ್ಗುಣಗಳನ್ನು, ಛಿನದ್ಮಿ= ಕತ್ತರಿಸುತ್ತೇನೆ, ಇತಿ= ಎಂದು, ನಿರ್ಗುಣವಾಕ್= ನಿರ್ಗುಣವಾಕ್ಯವು, ಬಹಿಃ ಅಗಾತ್= ಸಾರ್ವಜ್ಞಾದಿ ಗುಣಗಳನ್ನು ಬಿಟ್ಟು ಹೊರಗೆ ಹೋಯಿತು.

**ವಿವರಣೆ**– ಬ್ರಹ್ಮನಲ್ಲಿ ಭಾವ ಧರ್ಮಗಳನ್ನು ನಿಷೇಧ ಮಾಡಬೇಕಾದರೆ ಶಬ್ದದಿಂದ ಬ್ರಹ್ಮನ ಜ್ಞಾನವನ್ನು ಪಡೆದು ಅಲ್ಲಿ ಭಾವಧರ್ಮಗಳನ್ನು ನಿಷೇಧಿಸಬೇಕು. ಶಬ್ದದಿಂದ ಬ್ರಹ್ಮನ ಜ್ಞಾನವು ಬರುವಾಗ ಅವನಲ್ಲಿ ಶಾಬ್ದತ್ವ, ಬೋಧ್ಯತ್ವ ಮೊದಲಾದ ಧರ್ಮಗಳು ಇವೆ ಎಂದು ಒಪ್ಪಬೇಕು. ಅನಂತರ ನಿರ್ಗುಣಶಬ್ದದಿಂದ ಎಲ್ಲವನ್ನೂ ನಿಷೇಧ ಮಾಡುವುದಾದರೆ ಸರ್ವಜ್ಞತ್ವಾದಿ ಗುಣಗಳಿಗೆ ಹೇಗೆ ನಿಷೇಧ ಉಂಟಾಗುತ್ತದೆಯೋ ಅದರಂತೆಯೇ ಶಾಬ್ದತ್ವಾದಿಗುಣಗಳಿಗೂ ನಿಸೆಧ ಉಂಟಾಗುತ್ತದೆ. ಶಾಬ್ದತ್ವವನ್ನು ಉಪಜೀವಿಸಿಕೊಂಡೇ ಸರ್ವಜ್ಞತ್ವವನ್ನು ನಿಷೇಧಿಸುವ ನಾನು ಉಪಜೀವ್ಯವಾದ ಸಾರ್ವಜ್ಞವನ್ನೇ ಹೇಗೆ ನಿಷೇಧಿಸಲಿ. ಇನ್ನು ಸಾರ್ವಜ್ಞಾದಿ ಗುಣಗಳನ್ನು ನಿಷೇಧ ಮಾಡುವಾಗಲೂ ಅಧಿಕರಣವಾದ ಬ್ರಹ್ಮನ ಜ್ಞಾನವು ಶಬ್ದದಿಂದಲೇ ಬರಬೇಕಾದುದರಿಂದ ನಿಷೇಧ ಮಾಡುವಾಗಲೂ ಬ್ರಹ್ಮನಲ್ಲಿ ಶಾಬ್ದತ್ವವು ಬೇಕೇ ಬೇಕು. ಹೀಗಿರುವಾಗ ಶಾಬ್ದತ್ವವನ್ನು ನಿಷೇಧ ಮಾಡುವುದು ಹೇಗೆ? ಶಾಬ್ದತ್ವವನ್ನು ನಿಷೇಧ ಮಾಡಿದರೆ ನನಗೆ ದಂತಭಂಗವೇ ಆಗುವುದರಿಂದ ಅದರಿಂದ ಸಾರ್ವಜ್ಞಾದಿ ಧರ್ಮಗಳನ್ನು ಕಚ್ಚಿ ಅವುಗಳನ್ನು ನಾಶ ಮಾಡಲು ಸಾಧ್ಯವಿಲ್ಲವಷ್ಟೇ? ಇನ್ನು ಮೊದಲು ಶಾಬ್ದತ್ವವನ್ನು ಉಪಜೀವಿಸಿಕೊಂಡೇ ಸರ್ವಜ್ಞತ್ವಾದಿಧರ್ಮಗಳನ್ನು ನಿಷೇಧ ಮಾಡಿ ಅನಂತರ ಶಾಬ್ದತ್ವವನ್ನು ನಿಷೇಧ ಮಾಡಬೇಕು. ಇದು ಸರಿಯಾಗುವುದಿಲ್ಲ. ಏಕೆಂದರೆ ಶಬ್ದರೂಪಕರಣವಾದ ನನಗೆ ವಿರಮ್ಯ ವ್ಯಾಪಾರ ಎಂಬ ದೋಷವು ಉಂಟಾಗುತ್ತದೆ. ಇನ್ನು ಶಬ್ದತ್ವಾದಿಗಳನ್ನು ನಿಷೇಧಿಸಿದರೆ 'ಕೃತಘ್ನೇ ನಾಸ್ತಿ ನಿಷ್ಕೃತಿಃ' ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ ಎಂದು ಹೇಳಿರುವ ಬ್ರಹ್ಮನ ಉದರದಿಂದಲೇ ನನ್ನ ಜೊತೆಯಲ್ಲಿ ಹೊರಗೆ ಬಂದ ನನ್ನ ಸಹೋದರಿಯಾದ ಈ ವಾಕ್ಯವು ನನ್ನನ್ನು ನೋಡಿ ಅಪಹಾಸವನ್ನು ಮಾಡುತ್ತದೆ ಎಂದು ನಿರ್ಗುಣ ಶ್ರುತಿಯು ಚಿಂತಿಸುತ್ತದೆ ಎಂದು ಅಭಿಪ್ರಾಯ.

**ಬಾಧ್ಯಸ್ಯ ಚೋಪಜೀವ್ಯತ್ವಮಬಾಧ್ಯಂ ಚೋಪಜೀವಕಮ್ ।**
**ನ ಶ್ರುತಂ ನಹಿ ಸತ್ಸರ್ಪೋ ರಜ್ಜುಸರ್ಪೋಪಜೀವಕಃ ॥ ೮೨೨ ॥**

**ಅರ್ಥ**– ಚ= ಮತ್ತು, ಬಾಧ್ಯಸ್ಯ= ಬಾಧ್ಯವಾದುದಕ್ಕೆ, ಉಪಜೀವ್ಯತ್ವಂ= ಉಪಜೀವ್ಯತ್ವವು, ಚ= ಮತ್ತು, ಉಪಜೀವಕಂ= ಉಪಜೀವಕವು, ಅಬಾಧ್ಯಂ= ಅಬಾಧ್ಯವು ಎಂದು, ನ ಶ್ರುತಮ್= ಎಲ್ಲಿಯೂ ಕೇಳಿಬಂದಿಲ್ಲ, ಸತ್ಸರ್ಪಃ= ನಿಜವಾದ ಸರ್ಪವು, ರಜ್ಜುಸರ್ಪ ಉಪಜೀವಕಃ ನ ಹಿ= ರಜ್ಜುಸರ್ಪವನ್ನು ಉಪಜೀವಿಸುವುದಿಲ್ಲವಷ್ಟೇ.

**ಅನುವಾದ**– ಉಪಜೀವ್ಯವಾದ ಶಾಬ್ದತ್ವಾದಿಗಳು ಬಾಧ್ಯವಾಗುವುವು ಮತ್ತು ಉಪಜೀವಕವಾದ ನಿರ್ಗುಣತ್ವವು ಅಬಾಧ್ಯವಾಗುವುದು ಎಂಬುದು ಎಲ್ಲಿಯೂ ಕೇಳಿ ಬಂದಿಲ್ಲ. ನಿಜವಾದ ಸರ್ಪವು ಬಾಧ್ಯವಾದ ರಜ್ಜುಸರ್ಪವನ್ನು ಉಪಜೀವಿಸುವುದಿಲ್ಲವಷ್ಟೇ?

**ಭಾವವಿಲಾಸಿನೀ–** ಏವಂ ದೂಷಣೇ ವಿದ್ಯಮಾನೇऽಪಿ ತುಷ್ಯತು ದುರ್ಜನ ಇತಿ ನ್ಯಾಯೇನ ದೂಷಣಾಂತರಮಾಹ– **ಬಾಧ್ಯಸ್ಯೇತಿ** ॥ ರಜ್ಜುಸರ್ಪೋಪಜೀವಕಃ ರಜ್ಜುಸರ್ಪಸ್ಯೋಪ-ಜೀವಕಃ ॥ ೮೨೨ ॥

**ವಿವರಣೆ–** ಹಿಂದೆ ಹೇಳಿದ ದೋಷದ ಚಿಂತನೆಯೇ ಇದ್ದರೂ ಪ್ರಕಾರಾಂತರದಿಂದ ಇಲ್ಲಿ ಬೇರೆ ದೋಷವನ್ನು ಹೇಳುತ್ತಾರೆ. ಉಪಜೀವ್ಯ ಮತ್ತು ಉಪಜೀವಕಗಳಲ್ಲಿ ಉಪಜೀವ್ಯವು ಎಂದೂ ಬಾಧಿತವಾಗುವುದಿಲ್ಲ. ಈಗ ಶಾಬ್ದತ್ವಾದಿಗಳಿಗೆ ಬಾಧವನ್ನು ಅಂಗೀಕರಿಸಿದರೆ ಉಪಜೀವಕವಾದ ನಿರ್ಗುಣತ್ವವು ಉಪಜೀವ್ಯವಾದ ಶಾಬ್ದತ್ವವನ್ನು ಬಾಧಿಸುತ್ತದೆ ಎಂದು ಅಂಗೀಕರಿಸಿದಂತಾಯಿತು. ಇದೊಂದು ಅದೃಷ್ಟವಾದ ಕಲ್ಪನೆ ಎಂದು ಅಭಿಪ್ರಾಯ.

ತತೋऽಪಿ ನಿರ್ಗುಣತ್ವಂ ನ ಸ್ವೋಪಜೀವ್ಯಸ್ಯ ಬಾಧಕಮ್ ॥ ೮೨೩ ॥

ತಸ್ಮಾಚ್ಛಾಬ್ದತ್ವಬೋಧ್ಯತ್ವಧರ್ಮಿತ್ವಾದಿಗುಣಾನುಗಾ ।
ಏಕತ್ರ ಛಿನ್ನಧಾರೇಣ ಕುಠಾರೇಣಾಪರಂ ವನೇ ॥ ೮೨೪ ॥

ತಜ್ಜಾತೀಯಂ ಕಥಂ ಛಿನ್ದ್ಯಾಂ ಮಂದಾಶಂಕಿತದುರ್ಗುಣಾನ್ ।
ಛಿನದ್ಮಿ ಮಂದಧಾರಾಪೀತ್ಯಗಾನ್ನಿರ್ಗುಣವಾಗ್ ಬಹಿಃ ॥ ೮೨೫ ॥

**ಅರ್ಥ–** ತತೋऽಪಿ= ಆ ಕಾರಣದಿಂದಲೂ ಕೂಡ, ನಿರ್ಗುಣತ್ವಂ= ನಿರ್ಗುಣತ್ವವು, ಸ್ವೋಪಜೀವ್ಯಸ್ಯ= ನನಗೆ ಉಪಜೀವ್ಯವಾದ ಗುಣಗಳಿಗೆ, ಬಾಧಕಂ ನ= ಬಾಧಕವಾಗುವುದಿಲ್ಲ.

ತಸ್ಮಾತ್= ಆ ಕಾರಣದಿಂದ, ಶಾಬ್ದತ್ವಬೋಧ್ಯತ್ವಧರ್ಮಿತ್ವಾದಿ ಗುಣಾನುಗಾ = ಶಾಬ್ದತ್ವ, ಬೋಧ್ಯತ್ವ, ಧರ್ಮಿತ್ವ ಮೊದಲಾದ ಗುಣಗಳನ್ನು ಉಪಜೀವಿಸಬೇಕಾದ ನಾನು, ಏಕತ್ರ= ಒಂದು ಕಡೆ, ಎಂದರೆ ಈ ಧರ್ಮಗಳ ವಿಷಯದಲ್ಲಿ, ಛಿನ್ನಧಾರೇಣ= ನನ್ನ ಮುರಿದುಹೋಗಿ ಮೊಂಡಾದ, ಕುಠಾರೇಣ= ಕೊಡಲಿಯಿಂದ, ತಜ್ಜಾಯತೀಯಮ್= ಅದೇ ಜಾತಿಗೆ ಸೇರಿದ, ಅಪರಂ= ಇನ್ನೊಂದು (ವೃಕ್ಷವನ್ನು) ಧರ್ಮವನ್ನು, ವನೇ= ಕಾಡಿನಲ್ಲಿ (ಬ್ರಹ್ಮನಲ್ಲಿ), ಕಥಂ ಛಿಂದ್ಯಾಂ= ಹೇಗೆ ಕತ್ತರಿಸುತ್ತೇನೆ (ಹೇಗೆ ನಿಷೇಧಿಸುತ್ತೇನೆ). ಆದ್ದರಿಂದ, ಮಂದಧಾರಾऽಪಿ= ಮೊಂಡಾದ ತುದಿಯಿದ್ದರೂ, ಮಂದಾಶಂಕಿತ ದುರ್ಗುಣಾನ್= ಮಂದರು ಆಶಂಕಿಸುವ ದುರ್ಗುಣಗಳನ್ನು, ಛಿನದ್ಮಿ= ಕತ್ತರಿಸುತ್ತೇನೆ, ಇತಿ= ಎಂದು, ನಿರ್ಗುಣವಾಕ್= ನಿರ್ಗುಣವಾಕ್ಯವು, ಬಹಿಃ ಅಗಾತ್= ಸಾರ್ವಜ್ಞಾದಿ ಗುಣಗಳನ್ನು ಬಿಟ್ಟು ಹೊರಗೆ ಹೋಯಿತು.

**ಅನುವಾದ–** ಆದ್ದರಿಂದಲೂ ಸಹ ನಿರ್ಗುಣತ್ವವು ತನಗೆ ಉಪಜೀವ್ಯವಾದ ಶಾಬ್ದತ್ವಾದಿ ಧರ್ಮಗಳಿಗೆ ಬಾಧಕವಾಗುವುದಿಲ್ಲ. ಆದ್ದರಿಂದ ಶಾಬ್ದತ್ವ, ಬೋಧ್ಯತ್ವ, ಧರ್ಮಿತ್ವ ಮೊದಲಾದ ಗುಣಗಳನ್ನು ಅನುಸರಿಸುವ ನಾನು ನನ್ನ ಕುಠಾರದ ಅಲುಗು ಆ ಕಾರಣದಿಂದ ಮೊಂಡಾಗಿರುವಾಗ ಆ ಕುಠಾರದಿಂದ ಅದೇ ಜಾತಿಗೆ ಸೇರಿದ ಬೇರೆಯ ಧರ್ಮಗಳನ್ನು ಹೇಗೆ ಕಡಿಯಲಿ? ಆದ್ದರಿಂದ ಮೊಂಡಾದ ಅಲುಗಿದ್ದರೂ ಅಲ್ಪಜ್ಞರು ಶಂಕಿಸುವ ಸತ್ವಾದಿದುರ್ಗುಣಗಳನ್ನೇ ಛೇದಿಸುತ್ತೇನೆ ಎಂದು ತಿಳಿದು ನಿರ್ಗುಣ ಶ್ರುತಿಯು ಹೊರಗೆ ಹೊರಟು ಹೋಯಿತು.

**ಭಾವವಿಲಾಸಿನೀ–** ತತಃ ಲೋಕೇಽಪ್ಯುಪಜೀವ್ಯಸ್ಯ ಬಾಧ್ಯತ್ವಾದರ್ಶನಾತ್ । ತಸ್ಮಾದುಪಜೀವ್ಯ-ಬಾಧಾಯೋಗಾತ್ । ಏಕತ್ರ ಶಾಬ್ದತ್ವಾದೌ ಭಾವಧರ್ಮೇ ಭಿನ್ನಧಾರೇಣ ತನ್ನಿಷೇದ್ಧುಮಶಕ್ತೇನ ಕುಠಾರೇಣ ನಙಾ । ವನೇ ಆರಣ್ಯಕೇ । ಅಪರಂ ಸಾರ್ವಜ್ಞಾದಿಕಂ ತಜ್ಜಾತೀಯಂ ಭಾವತ್ವೇನ ಜಾತೀಯಂ ಕಥಂ ಭಿನ್ದ್ಯಾಮ್? ಪ್ರಾಮಾಣಿಕೇ ಕಸ್ಮಿಂಶ್ಚಿದ್ ಭಾವಧರ್ಮೇ ಕುಂಠಿತಶಕ್ತಿನಾ ನಙಾ ಕಥಂ ಪ್ರಾಮಾಣಿಕಂ ಭಾವಾಂತರಂ ನಿಷೇದ್ಧುಂ ಶಕ್ಯಮ್? ಇತಿ ಭಾವಃ । ಮನ್ದಧಾರಾಪಿ ಪ್ರಾಮಾಣಿಕಭಾವಧರ್ಮೇಽಲ್ಪೀಭೂತಧಾರಾಪಿ ಮನ್ದಾಶಂಕಿತದುರ್ಗುಣಾನ್ ಮಂದೈ-ರಾಶಂಕಿತದುರ್ಗುಣಾನ್ ಭಗವತ್ಯಪ್ರಾಮಾಣಿಕಾನ್ ಸತ್ವಾದಿಭಾವಗುಣಾನ್ ವಾ ಸಾರ್ವಜ್ಞಾದ್ಯಭಾವರೂಪಗುಣಾನ್ ವಾ ನಿಷೇಧಾಮೀತಿ ಪ್ರಾಮಾಣಿಕೇಭ್ಯೋ ಬಹಿರಗಾದಿತಿ ಸಂಬಂಧಃ ॥ ೮೨೩-೮೨೫ ॥

**ವಿವರಣೆ–** ನಿರ್ಗುಣ ಶ್ರುತಿಯು ಶಾಬ್ದತ್ವ, ಬೋಧ್ಯತ್ವ, ಧರ್ಮಿತ್ವ ಮೊದಲಾದ ಭಾವ ಧರ್ಮಗಳನ್ನು ನಿಷೇಧಿಸಲು ಸಾಧ್ಯವಿಲ್ಲ. ಈ ವಿಷಯವನ್ನು ಉಪಪಾದಿಸಿದ್ದಾಗಿದೆ. ಆದ್ದರಿಂದ ನಿರ್ಗುಣಶ್ರುತಿಯ ಕುಠಾರದ ಅಲುಗು ಈ ಭಾವ ಧರ್ಮಗಳ ವಿಷಯದಲ್ಲಿ ಮೊಂಡಾಗಿ ಹೋಗಿದೆ. ಸರ್ವಜ್ಞತ್ವಾದಿಗಳೂ ಸಹ ಭಾವಧರ್ಮಗಳೇ. ಮೊಂಡಾದ ಕೊಡಲಿಯಿಂದ ಶಾಬ್ದತ್ವವನ್ನು ಹೇಗೆ ಛೇದಿಸಲು ಸಾಧ್ಯವಿಲ್ಲವೋ, ಅದರಂತೆಯೇ ಸರ್ವಜ್ಞತ್ವಾದಿಗಳನ್ನೂ ಛೇದಿಸಲು ಸಾಧ್ಯವಿಲ್ಲ. ಏಕೆಂದರೆ ಆ ಧರ್ಮಗಳು ಪ್ರಬಲವಾದವು (ಗಟ್ಟಿಯಾದವುಗಳು). ಆದ್ದರಿಂದ ನಾನು ಮಂದರು ಆಶಂಕಿಸುವ ದುರ್ಗುಣಗಳನ್ನೇ ನಿಷೇಧ ಮಾಡುತ್ತೇನೆ. ಮಂದರು ಆಶಂಕಿಸುವ ದುರ್ಗುಣಗಳು ಶ್ರುತಿಪ್ರಾಪ್ತವಲ್ಲವಾದ್ದರಿಂದ ದುರ್ಬಲಗಳಾಗಿವೆ. ನನ್ನ ಕುಠಾರದ ಅಲುಗು ಮೊಂಡಾಗಿದ್ದರೂ ಸಹ ಇಂತಹ ದುರ್ಗುಣಗಳನ್ನು ಛೇದಿಸಬಹುದು ಎಂದು ಚಿಂತಿಸಿ ನಿರ್ಗುಣಶ್ರುತಿಯು ಸರ್ವಜ್ಞತ್ವಾದಿ ಗುಣಗಳನ್ನು ನಿಷೇಧ ಮಾಡದೆ ಸತ್ವಾದಿಗುಣಗಳನ್ನು ನಿಷೇಧ ಮಾಡಿತು ಎಂದು ಅಭಿಪ್ರಾಯ.

ಉಪಜೀವ್ಯಸಜಾತೀಯಾಃ ಸರ್ವೇಽಪಿ ಹ್ಯುಪಜೀವ್ಯವತ್ ।
ಭರ್ತುಃ ಸಹೋದರಾಃ ಸರ್ವೇ ಕಿಂ ನ ಪೋಷ್ಯಾಃ ಸ್ವಭರ್ತೃವತ್॥ ೮೨೬ ॥

**ಅರ್ಥ–** ಉಪಜೀವ್ಯಸಜಾತೀಯಾಃ= ಉಪಜೀವ್ಯ ಜಾತಿಗೆ ಸೇರಿದಂತಹ, ಸರ್ವೇಽಪಿ= ಎಲ್ಲವೂ ಕೂಡ, ಉಪಜೀವ್ಯವತ್= ಉಪಜೀವ್ಯದಂತೆ (ಪ್ರಬಲವಾಗಿರುತ್ತವೆ), ಭರ್ತುಃ= ಗಂಡನ, ಸರ್ವೇ ಸಹೋದರಾಃ= ಎಲ್ಲ ಸಹೋದರರೂ, ಭರ್ತೃವತ್= ಗಂಡನಂತೆ, ಕಿಂ ನ ಪೋಷ್ಯಾಃ= ಪೋಷ್ಯರಲ್ಲವೇ?

**ಅನುವಾದ–** ಉಪಜೀವ್ಯಕ್ಕೆ ಸಜಾತೀಯವಾದುದೆಲ್ಲವೂ ಉಪಜೀವ್ಯದಂತೆಯೇ ಪ್ರಬಲವಾಗಿರುತ್ತವೆ. ಪತಿಯ ಸಹೋದರರೆಲ್ಲರೂ ಪತಿಯಂತೆಯೇ ಪೋಷಿಸಲ್ಪಡಬೇಕಾದವರಷ್ಟೇ?

**ಭಾವವಿಲಾಸಿನೀ–** ಭಾವತ್ವಾದಿನಾ ಸಜಾತೀಯತ್ವೇಽಪಿ ಉಪಜೀವ್ಯೇನ ಸಾಜಾತ್ಯಂ ನಾಸ್ತೀತಿ ಮನ್ದಾಶಂಕಾ ಮಾ ಭೂದಿತಿ ಸದೃಷ್ಟಾಂತಮಾಹ– **ಉಪಜೀವ್ಯಸಜಾತೀಯಾ ಇತಿ** ॥ ೮೨೬ ॥

**ವಿವರಣೆ–** ಶಾಬ್ದತ್ವಾದಿಗಳು ನಿರ್ಗುಣಶ್ರುತಿಗೆ ಉಪಜೀವ್ಯವಾದ ಧರ್ಮಗಳು. ಸರ್ವಜ್ಞತ್ವಾದಿಗಳು ಉಪಜೀವ್ಯವಾದ ಧರ್ಮವಲ್ಲ. ಆದ್ದರಿಂದ ಶಾಬ್ದತ್ವವನ್ನು ಹೇಗೆ ನಿಷೇಧಿಸುವುದಿಲ್ಲವೋ ಹಾಗೆಯೇ ಸರ್ವಜ್ಞತ್ವಾದಿಗಳನ್ನು ನಿಷೇಧಿಸುವುದಿಲ್ಲ ಎಂದು ಹೇಳಲು ಹೇಗೆ ಸಾಧ್ಯ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಉಪಜೀವ್ಯತ್ವೇನ ಸಾಜಾತ್ಯವು ಅನಾವಶ್ಯಕವಾದುದು. ಶಾಬ್ದತ್ವವು ಮತ್ತು ಸರ್ವಜ್ಞತ್ವವು ಭಾವಧರ್ಮಗಳಾಗಿರುವುದರಿಂದ ಭಾವತ್ವೇನ ' ಸಜಾತೀಯತ್ವವೂ ಇದೆ. ಆದ್ದರಿಂದ ಸರ್ವಜ್ಞತ್ವಾದಿಗಳನ್ನು ನಿಷೇಧ ಮಾಡಲು ಸಾಧ್ಯವಿಲ್ಲ. ಉಪಜೀವ್ಯಸಜಾತೀಯವು ಉಪಜೀವ್ಯದಂತೆಯೇ ಪ್ರಬಲವೆಂದು ನ್ಯಾಯಾಮೃತಾದಿ ಗ್ರಂಥಗಳಲ್ಲಿ ನಿರೂಪಿಸಲ್ಪಟ್ಟಿದೆ.

**ಕಿಂಚ ಸರ್ವಜ್ಞತ್ವಪೂರ್ವಾಪೂರ್ವಸರ್ವಗುಣಾ ಹರೌ ।**
**ತತ್ತಚ್ಛ್ರುತಿಪ್ರಸಕ್ತಾಶ್ಚೇನ್ನಿಷೇಧ್ಯಾಃ ಸ್ಯುರ್ನ ಚಾನ್ಯಥಾ ॥ ೮೨೭ ॥**

**ತತ್ತಚ್ಛ್ರೌತಪದಾನ್ಯೇಷಾಂ ಪ್ರಸಕ್ತ್ಯೈ ಸ್ಯುಸ್ತದೈವ ಹಿ ।**
**ಯದಿ ಮುಖ್ಯತಯೈವೈತಾನಭಿದಧ್ಯುರ್ಗುಣಾನಪಿ ॥ ೮೨೮ ॥**

**ಅರ್ಥ–** ಕಿಂಚ = ಮತ್ತು, ಸರ್ವಜ್ಞತ್ವಪೂರ್ವಾಃ= ಸರ್ವಜ್ಞತ್ವವೇ ಮೊದಲಾದ, ಅಪೂರ್ವ ಸರ್ವಗುಣಾಃ= ಎಲ್ಲ ಅಪೂರ್ವಗುಣಗಳು, ಹರೌ= ಹರಿಯಲ್ಲಿ, ತತ್ತಚ್ಛ್ರುತಿ ಪ್ರಸಕ್ತಾಶ್ಚೇತ್= ಆಯಾ ಶ್ರುತಿಗಳಿಂದ ಪ್ರಸಕ್ತವಾದರೆ ಮಾತ್ರ, ನಿಷೇಧ್ಯಾಃ ಸ್ಯುಃ= ನಿಷೇಧ ಮಾಡಲು ಸಾಧ್ಯವಾಗುತ್ತದೆ. ಅನ್ಯಥಾ ನ ಚ= ಇಲ್ಲದಿದ್ದರೆ ಸಾಧ್ಯವಿಲ್ಲ. ತತ್ತಚ್ಛ್ರೌತಪದಾನಿ= ಆಯಾ ಶ್ರುತಿಯ ಪದಗಳು, ಏಷಾಂ ಪ್ರಸಕ್ತ್ಯೈ= ಈ ಗುಣಗಳ ಪ್ರಸಕ್ತಿಗೆ ಸಮರ್ಥಗಳಾಗಿ, ತದೈವಸ್ಯುಃ= ಆಗಲೇ ಉಪಪನ್ನವಾಗುತ್ತವೆ. ಯದಿ= ಒಂದು ಪಕ್ಷ, ಮುಖ್ಯತಯೈವ= ಮುಖ್ಯವಾದ ಗುಣಗಳಿಂದ, ಏಷಾಂ ಗುಣಾನ್= ಈ ಗುಣಗಳನ್ನು, ಅಭಿದಧ್ಯುಃ= ಹೇಳಿದರೆ ಆಗ ಮಾತ್ರ.

**ಅನುವಾದ–** ಮತ್ತು ಸರ್ವಜ್ಞತ್ವಾದಿ ಗುಣಗಳೆಲ್ಲವೂ ಅಪೂರ್ವವಾದವು. ಆ ಗುಣಗಳು ಹರಿಯಲ್ಲಿ ಶ್ರುತಿಯಿಂದ ಪ್ರಸಕ್ತವಾದರೆ ಮಾತ್ರ ಅದನ್ನು ನಿಷೇಧ ಮಾಡಬಹುದು. ಇಲ್ಲದಿದ್ದರೆ ನಿಷೇಧ ಮಾಡುವುದಕ್ಕೆ ಸಾಧ್ಯವಿಲ್ಲ. ಆಯಾ ಶ್ರುತಿಯಲ್ಲಿರುವ ಪದಗಳು ಮುಖ್ಯವೃತ್ತಿಯಿಂದ ಆಯಾ ಗುಣಗಳನ್ನು ಹೇಳಿದರೆ ಮಾತ್ರ ಆ ಗುಣಗಳಿಗೆ ಪ್ರಸಕ್ತಿ ಉಂಟಾಗುತ್ತದೆ.

**ಭಾವವಿಲಾಸಿನೀ–** ಅಧುನಾ ಸರ್ವಜ್ಞತ್ವಾದೀನಾಮೇವ ಸಾಕ್ಷಾದುಪಜೀವ್ಯತ್ವಂ ವಕ್ತುಮುಪಕ್ರಮತೇ– **ಕಿಂಚೇತಿ** ॥ ಸರ್ವಜ್ಞತ್ವಪೂರ್ವಾಃ ಸರ್ವಜ್ಞತ್ವಸರ್ವೇಶ್ವರತ್ವಾದಯಃ । ಅಪೂರ್ವಾಃ ಭಗವತ್ಯೇವ ವಿದ್ಯಮಾನಾಃ ಸರ್ವಗುಣಾಃ ತತ್ತಚ್ಛ್ರುತಿಭಿಃ ಸಾರ್ವಜ್ಞಾದಿಶ್ರುತಿಭಿಃ ಪ್ರಸಕ್ತಾಶ್ಚೇತ್ । ಅನ್ಯಥಾ ಪ್ರಸಕ್ತ್ಯಭಾವೇ ॥ ೮೨೭ ॥

ತತ್ತಚ್ಛ್ರೌತತ್ವದಾನಿ ಸರ್ವಜ್ಞಾದಿಪದಾನಿ ಏಷಾಂ ಸಾರ್ವಜ್ಞಾದೀನಾಂ ಮುಖ್ಯತಯಾ ಮುಖ್ಯವೃತ್ತ್ಯಾ ಅಭಿದಧ್ಯುಃ ಬ್ರೂಯುಃ ॥ ೮೨೮ ॥

**ವಿವರಣೆ–** ಹರಿಯ ಸರ್ವಜ್ಞತ್ವಾದಿ ಗುಣಗಳು ಪ್ರತ್ಯಕ್ಷಾನುಮಾನಗಳಿಂದ ಪ್ರಾಪ್ತವಾಗುವುದಿಲ್ಲ. ಶ್ರುತಿಯಿಂದಲೇ ಪ್ರಾಪ್ತವಾಗಬೇಕು. ಪ್ರಸಕ್ತಿ ಇದ್ದರೆ ಮಾತ್ರ ನಿಷೇಧ ಮಾಡಬಹುದು. ಪ್ರಸಕ್ತಿ ಇಲ್ಲದಿದ್ದರೆ ನಿಷೇಧ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಸದ್ಯದಲ್ಲಿ ಅಂತಹ ಪ್ರಸಕ್ತಿಯನ್ನು ಶ್ರುತಿಯಿಂದಲೇ ಹೇಳಬೇಕು. ಶ್ರುತಿಯಿಂದ ಪ್ರಸಕ್ತಿ ಉಂಟಾಗಬೇಕಾದರೆ ಆಯಾ ಪದಗಳು ಮುಖ್ಯವೃತ್ತಿಯಿಂದ ಆಯಾ ಧರ್ಮವನ್ನು ಹೇಳಬೇಕು. ಅಮುಖ್ಯವೃತ್ತಿಯಿಂದ ಆಯಾ ಪದಗಳು ಪ್ರವೃತ್ತವಾದರೆ ಯಾವ ಧರ್ಮಗಳೂ ಸಿದ್ಧಿಸುವುದಿಲ್ಲ. ಆದ್ದರಿಂದ ಶ್ರುತಿಯ ಪದಗಳಿಂದ ಮುಖ್ಯವೃತ್ತಿಯಿಂದ ಹೇಳಲ್ಪಟ್ಟ ಅರ್ಥವು ಪ್ರಬಲವಾಗಿರುವುದರಿಂದ ಅದು ಬಾಧಿತವಾಗುವುದಿಲ್ಲವೆಂಬ ಪ್ರಮೇಯವನ್ನು ಮುಂದಿನ ಶ್ಲೋಕಗಳಲ್ಲಿ ಉಪಪಾದನೆ ಮಾಡುತ್ತಾರೆ.

ಮುಖ್ಯಾ ವೃತ್ತಿಶ್ಚ ಗುಣಿನಿ ತತ್ತತ್ಸತ್ತಾಮಪೇಕ್ಷತೇ ।
ಕಥಂ ತತ್ರೈವ ತದ್ಧರ್ಮಸತ್ತಾಪೇಕ್ಷಾವತೀ ಪುನಃ ॥ ೮೨೯ ॥

ತಾಂಸ್ತತ್ರೈವ ನಿಷೇಧಾಮಿ ಯಾಽಹಂ ತದುಪಜೀವಿನೀ ।
ಯದಾ ಯತ್ರ ಘಟಸ್ತತ್ರ ತದಾ ಕಿಂ ತನ್ನಿಷೇಧನಮ್ ॥ ೮೩೦ ॥

**ಅರ್ಥ–** ಮುಖ್ಯಾವೃತ್ತಿಶ್ಚ= ಮುಖ್ಯವೃತ್ತಿಯಾದರೂ, ಗುಣಿನಿ= ಗುಣಾಶ್ರಯದಲ್ಲಿ, ತತ್ತತ್ಸತ್ತಾಂ= ಆಯಾ ಗುಣಗಳ ಇರುವಿಕೆಯನ್ನು, ಅಪೇಕ್ಷತೇ= ಅಪೇಕ್ಷಿಸುತ್ತದೆ, ಯಾಽಹಂ= ಯಾವ ನಾನು, ತದುಪಜೀವಿನೀ= ಆ ಸಗುಣಶ್ರುತಿಯನ್ನು ಉಪಜೀವಿಸುವುದರಿಂದ, ತತ್ರೈವ= ಅಲ್ಲಿಯೇ, ತದ್ಧರ್ಮಸತ್ತಾಪೇಕ್ಷಾವತೀ= ಆ ಧರ್ಮಗಳ ಸತ್ತ್ವವನ್ನು

ಅಪೇಕ್ಷಿಸುವಳೋ, ತತ್ರೈವ= ಅಲ್ಲಿಯೇ, ತಾನ್= ಆ ಧರ್ಮಗಳನ್ನು, ಪುನಃ= ಮತ್ತೆ, ಕಥಂ= ಹೇಗೆ, ನಿಷೇಧಾಮಿ= ನಿಷೇಧಿಸುತ್ತೇನೆ?

ಯದಾ= ಯಾವಾಗ, ಯತ್ರ= ಎಲ್ಲಿ, ಘಟಃ= ಘಟವಿದೆಯೋ, ತದಾ= ಆಗ, ತತ್ರ= ಅಲ್ಲಿ, ತನ್ನಿಷೇಧನಂ= ಘಟದ ನಿಷೇಧವು, ಕಿಂ= ಉಂಟಾಗುವುದೇನು?

**ಅನುವಾದ–** **ನಾನು ಆ ಗುಣಗಳನ್ನು ಉಪಜೀವಿಸಿಕೊಂಡಿರುವುದರಿಂದ ಆ ಗುಣಗಳನ್ನು ಅಲ್ಲಿಯೇ ಹೇಗೆ ನಿಷೇಧಿಸಲಿ? ಎಲ್ಲಿ ಘಟವಿದೆಯೋ ಅಲ್ಲಿಯೇ ಆಗಲೇ ಅದರ ನಿಷೇಧವು ಸಾಧ್ಯವಿಲ್ಲವಷ್ಟೇ?**

**ಭಾವವಿಲಾಸಿನೀ–** ಗುಣಿನಿ ಬ್ರಹ್ಮಣಿ ತತ್ತತ್ಸತ್ತಾಂ ಸಾರ್ವಜ್ಞಾದಿಸತ್ತಾಮ್ । ಸರ್ವಜ್ಞತ್ವಸಹಿತೇ ಸ ಶಬ್ದೋ ಮುಖ್ಯಃ । ತದ್ರಹಿತೇ ಸರ್ವಜ್ಞಶಬ್ದಃ ತೀರೇ ಗಂಗಾಶಬ್ದವದ್ ಅಮುಖ್ಯ ಏವ । ಏವಂಚ ತತ್ರೈವ ಬ್ರಹ್ಮಣ್ಯೇವ ತದ್ಧರ್ಮಸತ್ತಾಪೇಕ್ಷಾವತೀ । ಅಪೂರ್ವಾಣಾಮನ್ಯತ್ರ ಸತ್ತಾಯೋಗಾತ್ । ತಾನ್ ಸಾರ್ವಜ್ಞಾದೀನ್ । ತದುಪಜೀವಿನೀ ಬ್ರಹ್ಮಣಿ ಸರ್ವಜ್ಞತ್ವಾದಿ-ಸತ್ತ್ವೋಪಜೀವಿನೀ ॥ ೮೨೯-೮೩೦॥

**ವಿವರಣೆ–** ನಿರ್ಗುಣಶ್ರುತಿಯ ಅರ್ಥವನ್ನು ವಿಚಾರ ಮಾಡುತ್ತಿದ್ದಾರೆ. ನಿರ್ಗುಣಶ್ರುತಿಯು ಗುಣಗಳನ್ನು ನಿಷೇಧಮಾಡಬೇಕಾದರೆ ಬ್ರಹ್ಮನಲ್ಲಿ ಗುಣಗಳ ಪ್ರಸಕ್ತಿಬೇಕು. ಬ್ರಹ್ಮನಲ್ಲಿ ವೇದವನ್ನು ಬಿಟ್ಟು ಬೇರೆ ಯಾವ ಪ್ರಮಾಣವೂ ಇಲ್ಲ. ಆದ್ದರಿಂದ ವೇದದಿಂದಲೇ ಬ್ರಹ್ಮನ ಗುಣಗಳು ದೊರೆಯಬೇಕು. 'ಯಃ ಸರ್ವಜ್ಞ' ಮೊದಲಾದ ಶ್ರುತಿಗಳು ಮುಖ್ಯವೃತ್ತಿಯಿಂದ ಅಖಂಡಬ್ರಹ್ಮನನ್ನು ಪ್ರತಿಪಾದಿಸುತ್ತವೆ ಎಂದು ಅದ್ವೈತಿಗಳ ಅಭಿಪ್ರಾಯ. ಅಮುಖ್ಯವೃತ್ತಿಯು ಬೇಕಾದರೆ ಅರ್ಥಸತ್ವವು ಇರಬೇಕು. ಆದ್ದರಿಂದ ಬ್ರಹ್ಮನಲ್ಲಿ ಸರ್ವಜ್ಞತ್ವಾದಿಧರ್ಮಗಳಿಗೆ ಸತ್ವವೇ ಇದೆ. ನಿರ್ಗುಣಶ್ರುತಿಯು ಇಂತಹ ಸರ್ವಜ್ಞತ್ವವನ್ನು ನಿಷೇಧ ಮಾಡಬೇಕಾದರೆ, ಸರ್ವಜ್ಞತ್ವಶ್ರುತಿಯು ಅದಕ್ಕೆ ಉಪಜೀವ್ಯವಾಗುತ್ತದೆ. ಆದ್ದರಿಂದ ನನಗೆ ಉಪಜೀವ್ಯವಾದ ಶ್ರುತಿಯು ಹೇಳಿದ ಸರ್ವಜ್ಞತ್ವವನ್ನು ನಾನು ಹೇಗೆ ನಿಷೇಧಿಸಲಿ ಎಂದು ನಿರ್ಗುಣಶ್ರುತಿಯು ಚಿಂತಿಸುತ್ತದೆ ಎಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ.

**ಇತ್ಥಂ ಪ್ರಸಂಜಕಂ ವಾಕ್ಯಂ ಯಸ್ಮಾದಾಸೀತ್ ಪ್ರಸಾಧಕಮ್ ।**
**ಅತೋಽಪಿ ಸಾ ಶ್ರುತಿಃ ಸರ್ವಾ ಹ್ಯುಪಜೀವ್ಯೈವ ಮೇಽಭವತ್ ॥ ೮೩೧ ॥**

**ಅರ್ಥ–** ಇತ್ಥಂ= ಈ ರೀತಿಯಲ್ಲಿ, ಪ್ರಸಂಜಕಂ= ನಿರ್ಗುಣತ್ವವನ್ನು ಪ್ರತಿಪಾದಿಸಿಕೊಡಲು ಹೊರಟ, ವಾಕ್ಯಂ= ನಿರ್ಗುಣಶ್ರುತಿ ವಾಕ್ಯವು, ಯಸ್ಮಾತ್= ಯಾವ ಕಾರಣದಿಂದ, ಪ್ರಸಾಧಕಂ= ಗುಣಸಾಧಕವೇ, ಆಸೀತ್= ಆಯಿತೋ, ಅತೋಽಪಿ= ಆ ಕಾರಣದಿಂದಲೂ

ಕೂಡ, ಸಾ ಸರ್ವಾಶ್ರುತಿಃ= ಗುಣವನ್ನು ಪ್ರತಿಪಾದನೆ ಮಾಡುವ ಎಲ್ಲಾ ಶ್ರುತಿಯು, ಮೇ= ನನಗೆ, ಉಪಜೀವ್ಯೈವ= ಉಪಜೀವ್ಯವಾಗಿಯೇ, ಅಭವತ್= ಆಯಿತು.

**ಅನುವಾದ–** ಹೀಗೆ ನಿರ್ಗುಣತ್ವವನ್ನು ಪ್ರತಿಪಾದಿಸಿಕೊಡಲು ಹೊರಟ ವಾಕ್ಯವು ಸರ್ವಜ್ಞತ್ವಾದಿಗುಣಗಳಿಗೇ ಸಾಧಕವಾಯಿತು. ಆದ್ದರಿಂದ ಸರ್ವಜ್ಞತ್ವಾದಿ ಧರ್ಮಗಳನ್ನು ಹೇಳುವ ಎಲ್ಲಾ ಶ್ರುತಿಗಳೂ ನನಗೆ ಉಪಜೀವ್ಯವೇ ಆಗಿವೆ.

**ಭಾವವಿಲಾಸಿನೀ– ಫಲಿತಮಾಹ– ಇತ್ಥಮಿತಿ ॥ ೮೩೧ ॥**

**ವಿವರಣೆ–** ಹಿಂದೆ ಹೇಳಿದಂತೆ ನಿರ್ಗುಣಶ್ರುತಿಗೆ ಗುಣದ ಪ್ರಸಕ್ತಿಯನ್ನು ಉಂಟು ಮಾಡಲು ಸಗುಣಶ್ರುತಿಯ ಅವಶ್ಯಕತೆಯಿದೆ. ಆದ್ದರಿಂದ ಯಾವ ಯಾವ ಶ್ರುತಿಗಳು ಬ್ರಹ್ಮನಿಗೆ ಧರ್ಮವನ್ನು ಹೇಳುತ್ತವೆಯೋ ಅವೆಲ್ಲವೂ ನನಗೆ ಉಪಜೀವ್ಯವೇ ಆಗಿರುವುದರಿಂದ ನಾನು ಹೇಗೆ ಬ್ರಹ್ಮನ ಗುಣವನ್ನು ನಿಷೇಧಮಾಡಲಿ ಎಂದು ನಿರ್ಗುಣಶ್ರುತಿಯು ಚಿಂತಿಸುತ್ತದೆ ಎಂದು ಅಭಿಪ್ರಾಯ.

**ಬಿಭೇಮಿ ತದ್ವಿರೋಧಾಯ ತ್ರಿಗುಣಾಸ್ತು ಜಡಾತ್ಮಕಾಃ ।**
**ಜೀವೇಷು ಪ್ರಮಿತಾ ಭ್ರಾಂತ್ಯಾ ಪ್ರಾಪ್ತಾ ಬ್ರಹ್ಮಣಿ ನಿರ್ಮಲೇ ॥**
**ನಿರವದ್ಯಶ್ರುತಿಸ್ಥೇಮ್ನೇ ನಿಷೇಧ್ಯಾ ಇತ್ಯಗಾದ್ ಬಹಿಃ ॥ ೮೩೨ ॥**

**ಅರ್ಥ–** ತದ್ವಿರೋಧಾಯ= ಉಪಜೀವ್ಯಶ್ರುತಿಯ ವಿರೋಧಕ್ಕೆ, ಬಿಭೇಮಿ= ನಾನು ಹೆದರುತ್ತೇನೆ, ತ್ರಿಗುಣಾಸ್ತು= ತ್ರಿಗುಣಗಳಾದರೂ, ಜಡಾತ್ಮಕಾಃ= ಜಡರೂಪವಾದವು, ಜೀವೇಷು= ಜೀವರಲ್ಲಿ, ಪ್ರಮಿತಾಃ= ಪ್ರಮಿತವಾಗಿವೆ, ನಿರ್ಮಲೇ= ದೋಷದೂರನಾದ, ಬ್ರಹ್ಮಣಿ= ಬ್ರಹ್ಮನಲ್ಲಿ, ಭ್ರಾಂತ್ಯಾ= ಭ್ರಾಂತಿಯಿಂದ, ಪ್ರಾಪ್ತಾಃ= ಪ್ರಸಕ್ತವಾಗಿವೆ, ನಿರವದ್ಯಶ್ರುತಿಸ್ಥೇಮ್ನೇ= ಬ್ರಹ್ಮನು ದೋಷದೂರ ಎಂಬ ಶ್ರುತಿಯ ಸ್ಥೈರ್ಯಕ್ಕಾಗಿ, ನಿಷೇಧ್ಯಾಃ= ಜಡಗುಣಗಳೇ ನಿಷೇಧಕ್ಕೆ ಯೋಗ್ಯವಾದವು, ಇತಿ= ಎಂದು ಆಲೋಚಿಸಿ, ಬಹಿಃ= ಸರ್ವಜ್ಞತ್ವಾದಿ ಗುಣಗಳನ್ನು ಬಿಟ್ಟು ಹೊರಗೆ, ಅಗಾತ್= ಹೋಯಿತು.

**ಅನುವಾದ–** ನಾನು ಉಪಜೀವ್ಯಶ್ರುತಿಯ ವಿರೋಧಕ್ಕೆ ಹೆದರುತ್ತೇನೆ. ತ್ರಿಗುಣ-ಗಳಾದರೋ ಜಡವಾದವು. ಅವು ಜೀವನಲ್ಲಿ ಪ್ರಮಿತವಾಗಿವೆ ಮತ್ತು ಭ್ರಾಂತಿಯಿಂದ ನಿರ್ಮಲನಾದ ಬ್ರಹ್ಮನಲ್ಲಿ ಪ್ರಸಕ್ತವಾಗಿವೆ. ಬ್ರಹ್ಮನು ದೋಷದೂರ ಎಂಬ ಶ್ರುತಿಯು ಇರುವುದರಿಂದ ಆ ಶ್ರುತಿಯ ಸ್ಥೈರ್ಯಕ್ಕಾಗಿ ಜಡಗುಣಗಳನ್ನೇ ನಿಷೇಧಮಾಡಬೇಕು ಎಂದು ತಿಳಿದು ನಿರ್ಗುಣಶ್ರುತಿಯು ಬ್ರಹ್ಮನ ಸರ್ವಜ್ಞತ್ವಾದಿ ಗುಣಗಳನ್ನು ಬಿಟ್ಟು ಹೊರಗೆ ಹೋಯಿತು.

**ಭಾವವಿಲಾಸಿನೀ–** ತದ್ವಿರೋಧಾಯ ಉಪಜೀವ್ಯಸಾರ್ವಜ್ಞಾದಿಶ್ರುತಿವಿರೋಧಾಯ । ತರ್ಹಿ ಕಸ್ಯ ನಿಷೇಧೋ ಮಮಾರ್ಥಃ ಸ್ಯಾದಿತ್ಯತ ಆಹ– **ತ್ರಿಗುಣಾಸ್ತ್ವಿತಿ** ॥ ನಿರ್ಮಲೇ ಬ್ರಹ್ಮಣಿ ಭ್ರಾನ್ತ್ಯಾ ಪ್ರಾಪ್ತಾ ಇತ್ಯನೇನ ತತ್ರೈವ ತತ್ಸತ್ತಾ ನೋಪಜೀವ್ಯೇತಿ ಸೂಚಯತಿ ॥ ೮೩೨ ॥

**ವಿವರಣೆ–** ಈ ಶ್ಲೋಕದಲ್ಲಿಯೂ ನಿರ್ಗುಣಶ್ರುತಿಯ ಚಿಂತನೆಯನ್ನೇ ಹೇಳುತ್ತಾರೆ. ಉಪಜೀವ್ಯವಿರೋಧವು ಎಂದೂ ಅಂಗೀಕಾರಾರ್ಹವಲ್ಲ. ಬ್ರಹ್ಮನ ಸರ್ವಜ್ಞತ್ವಾದಿ-ಗುಣಗಳು ಬ್ರಹ್ಮನಿಂದ ಅಭಿನ್ನವಾದವು. ಆದ್ದರಿಂದಲೇ ಚೇತನಾತ್ಮಕವಾದವು. 'ನಿರನಿಷ್ಟೋ ನಿರವದ್ಯಃ' ಎಂಬ ಶ್ರುತಿಯು ಬ್ರಹ್ಮನು ದೋಷದೂರನೆಂದು ಹೇಳುತ್ತದೆ. ಆದ್ದರಿಂದ ದೋಷರೂಪವಾದ ಗುಣಗಳು ಇಲ್ಲವೆಂದು ಹೇಳಬೇಕು. ಪ್ರಕೃತಿಯ ಗುಣಗಳು ದೋಷರೂಪವಾದವು. ಆದ್ದರಿಂದ ಉತ್ಕರ್ಷಪ್ರಾಪಕವಾದ ಸರ್ವಜ್ಞತ್ವಾದಿ-ಗಳನ್ನು ಬಿಟ್ಟು ನಿರ್ಗುಣಶ್ರುತಿಯು ತನ್ನ ಅರ್ಥವನ್ನು ಪ್ರತಿಪಾದನೆ ಮಾಡುವುದಕ್ಕೆ ಪ್ರಕೃತಿಯ ದೋಷರೂಪವಾದ ಗುಣಗಳನ್ನು ಎಂದರೆ ದೋಷಗಳನ್ನು ಪರಾಮರ್ಶೆ ಮಾಡಿ ಅವುಗಳನ್ನು ನಿಷೇಧಿಸುತ್ತದೆ ಎಂದು ಹೇಳಬೇಕು.

**ಅಭಾವಶೇಷೇ ಯಾಽಪ್ಯಾಶಾ ಸುಗುಣದ್ರೋಹಿಣಾಂ ಹರೇಃ ।**
**ತಸ್ಯಾಶ್ಚೋಕ್ತಾತ್ಮಧರ್ಮಾಣಾಂ ಪಕ್ಷಪಾತೋ ಭಯಂಕರಃ ॥ ೮೩೩ ॥**

**ಅರ್ಥ–** ಹರೇಃ= ಹರಿಯ, ಸುಗುಣದ್ರೋಹಿಣಾಂ= ಸುಗುಣಗಳಿಗೆ ದ್ರೋಹವನ್ನು ಬಗೆದಿರುವ ಅದ್ವೈತಿಗಳಿಗೆ, ಅಭಾವಶೇಷೇ= ಅಭಾವವನ್ನು ಉಳಿಸಿಕೊಳ್ಳುವುದರಲ್ಲಿ, ಯಾಽಪಿ ಆಶಾ= ಯಾವ ಆಸೆಯು ಇದೆಯೋ, ತಸ್ಯಾಃ= ಆ ಆಸೆಗೆ, ಉಕ್ತಾತ್ಮಧರ್ಮಾಣಾಂ= ಹೇಳಲ್ಪಟ್ಟ ಆತ್ಮಧರ್ಮವಾದ ಸರ್ವಜ್ಞತ್ವಾದಿ ಗುಣಗಳ ಬಗ್ಗೆ ಪಕ್ಷಪಾತಃ= ಶ್ರುತಿಯ ತಾತ್ಪರ್ಯವು (ರೆಕ್ಕೆಯ ಹೊಡೆತವು), ಭಯಂಕರಃ= ಭಯವನ್ನು ಉಂಟು ಮಾಡುವುದಾಗಿರುತ್ತದೆ.

**ಅನುವಾದ–** ಹರಿಯ ಸದ್ಗುಣಗಳಿಗೆ ದ್ರೋಹವನ್ನು ಬಗೆಯುವವರಿಗೆ ಅಭಾವವನ್ನು ಉಳಿಸಿಕೊಳ್ಳುವುದರಲ್ಲಿ ಯಾವ ಆಸೆ ಇದೆಯೋ ಅದು ನಿರ್ಗುಣಶ್ರುತಿಯು ಆತ್ಮಧರ್ಮವಾದ ಸರ್ವಜ್ಞತ್ವಾದಿ ಸುಗುಣಗಳನ್ನೇ ಪ್ರತಿಪಾದನೆ ಮಾಡುವುದರಿಂದ ವಿನಾಶವನ್ನು ಹೊಂದುತ್ತದೆ.

**ಭಾವವಿಲಾಸಿನೀ–** ಅಭಾವಶೇಷೇ ಅಭಾವಾವಶೇಷೇ । ಸರ್ಪ ಇತಿ ಧ್ವನಿಃ । ಹರೇಸ್ಸುಗುಣ-ದ್ರೋಹಿಣಾಂ ಮಾಯಿನಾಮ್ । ತಸ್ಯಾಃ ಶೇಷಾಶಾಯಾಃ ಉಕ್ತಾತ್ಮಧರ್ಮಾಣಾಂ ವಿಷಯೇ ಪಕ್ಷಪಾತಃ ಉಕ್ತವಿಧಯಾ ನಿರ್ಗುಣಶ್ರುತೇರಾಗ್ರಹಃ । ಗರುಡ ಇತಿ ಧ್ವನಿಃ ॥ ೮೩೩ ॥

**ವಿವರಣೆ–** ಅದ್ವೈತಿಗಳು ಭಾವಾದ್ವೈತವನ್ನು ಅಂಗೀಕಾರ ಮಾಡಿ ಅಭಾವಗಳು ಅನೇಕವಿರಬಹುದೆಂದು ಒಪ್ಪುತ್ತಾರೆ. ಆದ್ದರಿಂದ ಬ್ರಹ್ಮನಲ್ಲಿ ಭಾವರೂಪವಾದ

ಗುಣಗಳನ್ನು ಒಪ್ಪದೆ ಅಭಾವರೂಪಗುಣಗಳನ್ನು ಒಪ್ಪುತ್ತಾರೆ. ಅಭಾವದಲ್ಲಿ ಅವರಿಗೆ ತಾತ್ಪರ್ಯವಿದೆ. ಅದಕ್ಕೆ ಅಭಾವವನ್ನು ಶೇಷ ಎಂದು ಕರೆದಿದ್ದಾರೆ. ಆದರೆ ಸಗುಣಶ್ರುತಿಯು ಸರ್ವಜ್ಞತ್ವಾದಿಗುಣಗಳಲ್ಲಿ ತಾತ್ಪರ್ಯವನ್ನೇ ಹೊಂದಿದೆ. ಆದ್ದರಿಂದ ಭಾವಧರ್ಮಗಳನ್ನು ನಿಷೇಧಿಸುವವರಿಗೆ ಸಗುಣಶ್ರುತಿಯ ವಿರೋಧವು ಬರುತ್ತದೆ. ಸಗುಣಶ್ರುತಿಯು ಗರುಡನಿದ್ದಂತೆ. ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವಗಳು ಅದರ ಎರಡು ರೆಕ್ಕೆಗಳು. ದ್ವಿತೀಯಭಾವವನ್ನು ನಿಷೇಧಮಾಡಲು ಹೊರಟರೆ ಶ್ರುತಿ ತಾತ್ಪರ್ಯ ವಿಷಯವಾದ ಅಲ್ಪಜ್ಞತ್ವಾದಿ ವಿರುದ್ಧಧರ್ಮಗಳ ವಿರೋಧವು ಬರುತ್ತದೆ ಎಂದು ಅಭಿಪ್ರಾಯ.

**ಅಭಾವೇ ಗೌರವಂ ಪ್ರಾಹುರ್ಭಾವೇ ಚ ಲಘುತಾಂ ಬುಧಾಃ ।**
**ಚಿತ್ರಂ ಶ್ರುತ್ಯಂಗನಾ ಧತ್ತೇ ಶಿಲಾಂ ನ ಕಿಲ ಮಾಲಿಕಾಮ್ ॥ ೮೩೪ ॥**

**ಅರ್ಥ–** ಬುಧಾಃ= ವಿವೇಕಿಗಳಾದವರು, ಅಭಾವೇ= ಅಭಾವವನ್ನು ಅಂಗೀಕರಿಸಿದರೆ, ಗೌರವಂ= ಕಲ್ಪನಾಗೌರವವನ್ನು, ಭಾವೇ ಚ= ಮತ್ತು ಭಾವವನ್ನು ಅಂಗೀಕರಿಸಿದರೆ, ಲಘುತಾಂ = ಲಘುತ್ವವನ್ನು, ಪ್ರಾಹುಃ= ಹೇಳುತ್ತಾರೆ, ಶ್ರುತ್ಯಂಗನಾ= ಶ್ರುತಿ ಕನ್ಯೆಯು, ಶಿಲಾಂ= ಶಿಲೆಯನ್ನು, ಧತ್ತೇ= ಧರಿಸಿದ್ದಾಳೆ, ಮಾಲಿಕಾಂ= ಹೂಮಾಲೆಯನ್ನು ನ ಧತ್ತೇ ಕಿಲ= ಧರಿಸಿಲ್ಲವಷ್ಟೇ, ಚಿತ್ರಂ= ಇದು ವಿಚಿತ್ರವಾದುದು!

**ಅನುವಾದ–** ವಿವೇಕಿಗಳಾದವರು ಅಭಾವವು ಗುರುಭೂತವಾದುದು ಎಂದೂ ಭಾವವು ಲಘುಭೂತವಾದುದೂ ಎಂದು ಹೇಳುತ್ತಾರೆ. ಶ್ರುತಿಸುಂದರಿಯು ಶಿಲೆಯನ್ನು ಧರಿಸುತ್ತಾಳೆ, ಪುಷ್ಪಮಾಲೆಯನ್ನು ಧರಿಸುವುದಿಲ್ಲ ಎಂದು ಹೇಳಿದರೆ ವಿಚಿತ್ರವಾಗಿ ತೋರುತ್ತದೆ.

**ಭಾವವಿಲಾಸಿನೀ–** ಭಾವಾಭಾವಯೋಃ ಭಾವ ಏವಾವಶೇಷಾರ್ಹಃ ಲಘುತ್ವಾತ್ । ನತ್ವಭಾವೋ ಗುರುತ್ವಾದಿತ್ಯೇತತ್ ಸಾಹಿತ್ಯಮುದ್ರಯಾऽऽಹ– **ಅಭಾವ ಇತಿ** ॥ ೮೩೪ ॥

**ವಿವರಣೆ–** ಅಭಾವವು ಪ್ರತಿಯೋಗಿ ಅಧಿಕರಣ ಮೊದಲಾದವುಗಳ ಅಪೇಕ್ಷೆ ಇರುವುದರಿಂದ ಗುರುಭೂತವಾದುದು. ಭಾವಕ್ಕೆ ಇತರಅಪೇಕ್ಷೆ ಇಲ್ಲದಿರುವುದರಿಂದ ಅದು ಲಘುಭೂತವಾದುದು ಎಂದು ಶಾಸ್ತ್ರಕಾರರ ಅಭಿಪ್ರಾಯ. ಶ್ರುತಿಯು ಭಾವವನ್ನು ನಿಷೇಧಮಾಡಿ ಅಭಾವವನ್ನು ಮಾತ್ರ ಉಳಿಸಿಕೊಂಡರೆ, ಅಭಾವವು ಗುರುಭೂತ-ವಾದುದರಿಂದ ಭಾರವಾದುದು. ಭಾವವು ಲಘುಭೂತವಾದುದರಿಂದ ಹಗುರವಾಗಿ ಪುಷ್ಪಮಾಲೆಯ ಸ್ಥಾನದಲ್ಲಿ ಇದೆ. ಸುಂದರಿಯಾದವಳು ಕಲ್ಲನ್ನು ಧರಿಸುತ್ತಾಳೆ, ಮಾಲೆಯನ್ನು ಧರಿಸುವುದಿಲ್ಲ ಎಂದು ಹೇಳಿದರೆ ಎಷ್ಟು ಹಾಸ್ಯಾಸ್ಪದವೋ, ಹಾಗೆ ಶ್ರುತಿಸುಂದರಿಯು ತನ್ನ ತಾತ್ಪರ್ಯಗರ್ಭದಲ್ಲಿ ಅಭಾವವನ್ನು ಧರಿಸಿದ್ದಾಳೆ, ಭಾವವನ್ನು ಧರಿಸಿಲ್ಲ ಎಂದರೆ, ಅಷ್ಟೇ ಹಾಸ್ಯಾಸ್ಪದ.

**ಭಾವೋ ಹಿ ಯೋಷಿತಾಂ ಭೂಷಾ ಭಾವೋ ವಾಚಾಂ ಚ ಭೂಷಣಮ್।**
**ತಂ ಭಾವಂ ವಾಗ್ವಧೂರೇಷಾ ದೂಷಯೇತ್ ಕೇನ ಹೇತುನಾ ॥ ೮೩೫ ॥**

**ಅರ್ಥ–** ಯೋಷಿತಾಂ= ಸ್ತ್ರೀಯರಿಗೆ, ಭಾವಃ= ಭಾವವು (ಶೃಂಗಾರ ಭಾವವು), ಭೂಷಣಂ ಹಿ= ಭೂಷಣವಷ್ಟೇ, ಚ= ಮತ್ತು, ವಾಚಾಂ= ಮಾತುಗಳಿಗೂ, ಭಾವಃ= ಒಳ್ಳೆಯ ಅಭಿಪ್ರಾಯವು, ಭೂಷಣಂ= ಭೂಷಣವಷ್ಟೇ, ಏಷಾ ವಾಗ್‌ವಧೂಃ= ಈ ವಾಗ್ ವನಿತೆಯು, ತಂ ಭಾವಂ= ಅಂತಹ ಭಾವವನ್ನು (ಭಾವರೂಪವಾದ ಧರ್ಮಗಳನ್ನು) ಕೇನ ಹೇತುನಾ= ಯಾವ ಕಾರಣದಿಂದ, ದೂಷಯೇತ್= ದೂಷಿಸುತ್ತಾಳೆ?

**ಅನುವಾದ–** ಭಾವವು ಸ್ತ್ರೀಯರಿಗೆ ಭೂಷಣ. ಭಾವವು ವಾಕ್ಯಗಳಿಗೂ ಭೂಷಣ. ಅಂತಹ ಭಾವವನ್ನು ಈ ವಾಗ್ವಧುವು ಯಾವ ಕಾರಣದಿಂದ ದೂಷಿಸುತ್ತಾಳೆ?

**ಭಾವವಿಲಾಸಿನೀ–** ಪ್ರಕಾರಾಂತರೇಣ ಭಾವ ಏವ ಶ್ರುತೇರಪೇಕ್ಷಿತ ಇತ್ಯಾಹ– **ಭಾವೋ ಹೀತಿ** ॥ ಭಾವಃ ಶೃಂಗಾರಚೇಷ್ಟಾ। ವಾಚಾಂ ಚ ಭಾವಃ ಅಭಿಪ್ರಾಯಃ। ವಾಗ್ವಧೂಃ ವಾಗ್ರೂಪಾ ವಧೂಃ। ತಂ ಭಾವಂ ದ್ವಿವಿಧಂ ಭಾವಮ್ ॥ ೮೩೫ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ವಿಷಯವನ್ನೇ ಸಾಹಿತ್ಯಮುದ್ರೆಯಿಂದ ವಿವರಿಸುತ್ತಾರೆ. ಭಾವಶಬ್ದದ ಅನೇಕಾರ್ಥಗಳನ್ನಿಟ್ಟುಕೊಂಡು ಭಾವವು ಎಲ್ಲಾ ಕಡೆಯಲ್ಲಿಯೂ ಮಾನ್ಯ ಎಂದು ಹೇಳುತ್ತಾರೆ. ವನಿತೆಯರಿಗೆ ಭಾವ ಎಂದರೆ ಶೃಂಗಾರಚೇಷ್ಟೆಯು ಭೂಷಣವಾದುದು. ವಾಕ್ಯಗಳಿಗೆ ಭಾವ ಎಂದರೆ ಅಭಿಪ್ರಾಯವು ಭೂಷಣವಾದುದು. ಹಾಗೆಯೇ ಶ್ರುತಿಗಳಿಗೆ ಭಾವ ಎಂದರೆ ಭಾವಧರ್ಮಗಳು ಭೂಷಣವಾಗಬೇಕು. ಹೀಗಿರುವಾಗ ಭಾವಧರ್ಮಗಳನ್ನು ತಿರಸ್ಕರಿಸಿ ಶ್ರುತಿಯು ಹೇಗೆ ಅಭಾವವನ್ನು ಹೇಳಲು ಸಾಧ್ಯ ಎಂದು ತಾತ್ಪರ್ಯ.

**ಕಿಂಚ ಕಿಂಚನಶಬ್ದಸ್ಯ ಭಾವಂ ಯೋ ವೇತ್ತಿ ಕಂಚನ ।**
**ಅಭಾವಶೇಷಂ ಸ ಕಥಂ ದೋಷಂ ನ ಮನುತೇ ಬುಧಃ ॥ ೮೩೬ ॥**

**ಅರ್ಥ–** ಕಿಂಚ= ಮತ್ತು, ಯಃ= ಯಾವನು, ಕಿಂಚನಶಬ್ದಸ್ಯ= ಕಿಂಚನಶಬ್ದದ, ಕಂಚನ ಭಾವಂ= ಸ್ವಲ್ಪ ಅರ್ಥವನ್ನಾದರೂ, ವೇತ್ತಿ= ತಿಳಿಯುತ್ತಾನೆಯೋ, ಸಬುಧಃ= ಅಂತಹ ಬುಧನು, ಅಭಾವಶೇಷಂ= ಅಭಾವವನ್ನು ಉಳಿಸಿಕೊಳ್ಳುವುದನ್ನು, ದೋಷಂ= ದೋಷವನ್ನಾಗಿ, ಕಥಂ ನ ಮನುತೇ= ಹೇಗೆ ತಿಳಿಯುವುದಿಲ್ಲ?

**ಅನುವಾದ–** ಅದೂ ಅಲ್ಲದೇ ಯಾವ ಬುಧನು 'ಕಿಂಚನ' ಶಬ್ದದ ಅಭಿಪ್ರಾಯವನ್ನು ತಿಳಿದಿದ್ದಾನೆಯೋ ಅವನು ಕೇವಲ ಅಭಾವವನ್ನು ಉಳಿಸಿಕೊಂಡರೆ ಅದು ದೋಷಾವಹವಾಗುತ್ತದೆಂದು ಏಕೆ ತಿಳಿಯುವುದಿಲ್ಲ?

**ಭಾವವಿಲಾಸಿನೀ–** ಅಭಾವಶೇಷವಾದಿನೋ ದೂಷಣಾಂತರಮಾಹ– **ಕಿಂಚೇತಿ** ॥ ಭಾವಂ ಕಿಮಪಿ ನಾಸ್ತೀತಿ ಭಾವಮ್ ॥ ೮೩೬ ॥

**ವಿವರಣೆ–** 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯಿದೆ. ಇದು ದ್ವಿತೀಯವನ್ನು ನಿಷೇಧ ಮಾಡುವ ಶ್ರುತಿ ಎಂದು ಅದ್ವೈತಿಗಳ ಅಭಿಪ್ರಾಯ. ಇಲ್ಲಿ 'ಕಿಂಚನ' ಶಬ್ದದಿಂದ ದ್ವಿತೀಯವನ್ನು ಹೇಳಿ 'ನ' ಎಂದು ನಿಷೇಧವನ್ನು ಮಾಡಬೇಕು. 'ಕಿಂಚನ' ಶಬ್ದಕ್ಕೆ ಯಾವುದೂ ಎಂದು ಅರ್ಥ. ಆದ್ದರಿಂದ 'ಕಿಂಚನ ನ' ಎಂದರೆ ಯಾವುದೂ ಇಲ್ಲ ಎಂದು ಅರ್ಥ. ಅದನ್ನು ಬಿಟ್ಟು 'ಕಿಂಚನ' ಶಬ್ದಕ್ಕೆ ಭಾವಗಳು ಯಾವುವೂ ಇಲ್ಲ ಎಂದು ಅರ್ಥಮಾಡಿದರೆ ಅದು ಕಿಂಚನಶಬ್ದದ ಸ್ವಾರಸಿಕವಾದ ಅರ್ಥವಲ್ಲ. ಇದು ದೋಷಾವಹ ಎಂದು ಅದ್ವೈತಿಗಳಿಗೆ ಏಕೆ ತಿಳಿಯುವುದಿಲ್ಲ? ಇಲ್ಲಿ 'ಬುಧ' ಎಂದು ಹೇಳಿ ಇಷ್ಟು ಸ್ಪಷ್ಟವಾದ ದೋಷವನ್ನು ತಿಳಿಯದಿದ್ದವರು ಹೇಗೆ ಜ್ಞಾನಿಗಳು ಎಂದು ಪರಿಹಾಸವನ್ನು ಮಾಡಿದ್ದಾರೆ.

**ಸ್ವವ್ಯಾಹತಿಭಯಾತ್ ಸ್ವಾರ್ಥಂ ನಾಭಾವಂ ಯರ್ಹಿ ವಾರಯೇತ್ ।**
**ನ ಮಾರಯೇತ್ ತರ್ಹಿ ನಿತ್ಯಾಂ ಸ್ವಾಂ ಚ ಭಾವಸ್ವಭಾವಿನೀಮ್ ॥ ೮೩೭ ॥**

**ಅರ್ಥ–** ಸ್ವವ್ಯಾಹತಿ ಭಯಾತ್= ಸ್ವವ್ಯಾಹತಿ ದೋಷದ ಭಯದಿಂದ ಅದ್ವೈತ ಶ್ರುತಿಯು, ಸ್ವಾರ್ಥಂ= ತನ್ನ ಅರ್ಥವಾದ, ಅಭಾವಂ= ಅಭಾವವನ್ನು, ಯದಿ ನ ವಾರಯೇತ್= ಒಂದು ಪಕ್ಷ ನಿಷೇಧ ಮಾಡದಿದ್ದರೆ, ತರ್ಹಿ= ಆಗ, ನಿತ್ಯಾಂ= ನಿತ್ಯವಾಗಿರುವ, ಭಾವಸ್ವಭಾವಿನೀಮ್= ಭಾವಸ್ವರೂಪವಾದ, ಸ್ವಾಂ ಚ= ತನ್ನನ್ನೂ ಕೂಡ, ನ ಮಾರಯೇತ್= ನಿಷೇಧ ಮಾಡಲಾರದು.

**ಅನುವಾದ–** ಸ್ವವ್ಯಾಹತಿ ದೋಷ ಬರುವುದರಿಂದ ಸ್ವಾರ್ಥವಾದ ಅಭಾವವನ್ನು ನಿಷೇಧ ಮಾಡುವುದಿಲ್ಲವೆಂದು ಹೇಳಿದರೆ, ಹಾಗಾದರೆ, ಭಾವರೂಪವಾದ ಮತ್ತು ನಿತ್ಯವಾದ ತನ್ನನ್ನೂ ಸಹ ಅದು ನಾಶಮಾಡುವುದಿಲ್ಲ ಎಂದು ಅಂಗೀಕಾರ ಮಾಡಬೇಕು.

**ಭಾವವಿಲಾಸಿನೀ–** ಅಭಾವಶೇಷಪಕ್ಷೇ ಪುನರಪಿ ದೂಷಣಮಾಹ– **ಸ್ವವ್ಯಾಹತಿಭಯಾದಿತಿ** ॥ ತರ್ಹಿ ಭಾವಸ್ವಭಾವಿನೀಂ ಭಾವರೂಪಾಮ್ । ನಿತ್ಯಾಂ 'ಯಾವದ್ ಬ್ರಹ್ಮವಿಷ್ಠಿತಂ ತಾವತೀ ವಾಗ್' ಇತಿ ಬ್ರಹ್ಮಸಮಾನಯೋಗಕ್ಷೇಮತಯಾ ಸದಾತನಾಂ ಸ್ವಾಂ 'ನೇಹ ನಾನಾ' ಇತಿ ಶ್ರುತಿಂ ಚ ನ ಮಾರಯೇತ್ ನ ಬಾಧೇತ । ಬೋಧ್ಯಾರ್ಥ ಇವ ಬಾಧಕಶ್ರುತಿರಪ್ಯಬಾಧ್ಯೈವ ಭವೇತ್ । ನಹ್ಯಾಲೋಕಾಭಾವೇ ಘಟಬೋಧೋ ದೃಷ್ಟಃ । ಅತೋ ಭಾವೋಽಪ್ಯವಶೇಷಣೀಯ ಇತ್ಯರ್ಥಃ । ಸ್ವಾರ್ಥೇ ಸ್ವತ್ವಾಭಿಮಾನಾದ್ಧಿ ತವ ಸ್ವವ್ಯಾಹತಿರಿತ್ಯುಪಚಾರಃ । ಅಸ್ಮದುಕ್ತಸ್ವಾತ್ಮಬಾಧನಂ ತು ಮುಖ್ಯತಃ ಸ್ವವ್ಯಾಹತಿರಿತ್ಯವಶ್ಯಂ ವರ್ಜನೀಯೇತಿ ಭಾವಃ ॥ ೮೩೭ ॥

**ವಿವರಣೆ–** 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು ದ್ವಿತೀಯಾಭಾವವನ್ನು ಹೇಳುತ್ತದೆ. ಆ ಅಭಾವವನ್ನು ನಿಷೇಧಮಾಡಿದರೆ, ಶ್ರುತಿಗೆ ವ್ಯಾಹತಿದೋಷ ಉಂಟಾಗುತ್ತದೆ. ವ್ಯಾಹತಿದೋಷ ಬರದೇ ಇರುವುದಕ್ಕೋಸ್ಕರ ತನ್ನ ಅರ್ಥವಾದ ದ್ವಿತೀಯಾಭಾವವನ್ನು ಬಿಟ್ಟು ಬೇರೆ ಎಲ್ಲವನ್ನೂ ನಿಷೇಧ ಮಾಡುತ್ತದೆ ಎಂದು ಹೇಳಬೇಕು, ಎಂದು ಹೀಗೆ ಹೇಳಿದರೆ ಅಭಾವವನ್ನು ಬೋಧನೆ ಮಾಡಲು ತಾನು ಇರಬೇಕಷ್ಟೇ? ತಾನು ಎಂದರೆ 'ನೇಹ ನಾನಾಽಸ್ತಿ' ಎಂಬ ಶ್ರುತಿವಾಕ್ಯ. ಇದೊಂದು ವಾಕ್ಯವಾದುದರಿಂದ ಭಾವರೂಪವಾದುದು. ಆದ್ದರಿಂದ ತನ್ನನ್ನೂ ನಿಷೇಧ ಮಾಡಿದರೆ, ದ್ವಿತೀಯಾಭಾವವು ಎಲ್ಲಿ ಸಿದ್ಧವಾಗುತ್ತದೆ? ದ್ವಿತೀಯಾಭಾವವನ್ನು ಪ್ರತಿಪಾದನೆ ಮಾಡುವುದಕ್ಕೋಸ್ಕರ ತಾನು ಉಳಿದರೆ ಒಂದು ಭಾವಪದಾರ್ಥವೇ ಉಳಿದಂತೆ ಆಯಿತು. ಹೀಗಿರುವಾಗ ಭಾವವನ್ನು ನಿಷೇಧ ಮಾಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಮಾನತ್ವಧರ್ಮನಾಶಃ ಸ್ಯಾದಭಾವಪ್ರತಿಷೇಧನೇ ।**
**ಧರ್ಮಿನಾಶೋ ಭವೇದ್ಧಂತ ಭಾವಾರ್ಥಪ್ರತಿಷೇಧನೇ ॥ ೮೩೮ ॥**

**ಅರ್ಥ–** ಅಭಾವತ್ವ ನಿಷೇಧನೇ= ತನ್ನ ಅರ್ಥವಾದ ನಿತ್ಯಾಭಾವವನ್ನು ನಿಷೇಧ ಮಾಡಿದರೆ, ಮಾನತ್ವ ಧರ್ಮನಾಶಃ= ಪ್ರಾಮಾಣ್ಯ ಎಂಬ ಧರ್ಮದ ನಾಶವು, ಸ್ಯಾತ್= ಆದೀತು, ಹಂತ= ಆಶ್ಚರ್ಯವು, ಭಾವಾರ್ಥಪ್ರತಿಷೇಧನೇ= ಭಾವವನ್ನು ನಿಷೇಧ ಮಾಡಿದರೆ, ಧರ್ಮಿನಾಶಃ= ಧರ್ಮಿಯ ನಾಶವೇ, ಭವೇತ್= ಉಂಟಾಗುತ್ತದೆ.

**ಅನುವಾದ–** ಅಭಾವಪ್ರತಿಷೇಧವನ್ನು ಮಾಡಿದರೆ ತನ್ನ ಪ್ರಾಮಾಣ್ಯವೇ ನಾಶವಾಗುವುದರಿಂದ ಅಭಾವಪ್ರತಿಷೇಧವನ್ನು ಮಾಡುವುದಿಲ್ಲ ಎಂದು ಹೇಳಿದರೆ, ಭಾವವನ್ನು ಪ್ರತಿಷೇಧ ಮಾಡಿದರೆ ತಾನೇ ನಾಶವಾಗುವುದರಿಂದ ಭಾವಪ್ರತಿಷೇಧವನ್ನು ಮಾಡಲು ಬರುವುದಿಲ್ಲ ಎಂದು ಉತ್ತರ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಅಭಾವಶೇಷಣಾತ್ ಭಾವಶೇಷಣಮೇವ ನ್ಯಾಯ್ಯಮಿತ್ಯಾಹ– **ಮಾನತ್ವೇತಿ** ॥ ಭಾವಾರ್ಥಪ್ರತಿಷೇಧನೇ ಶ್ರುತಿರೂಪಧರ್ಮಿನಾಶಃ ॥೮೩೮॥

**ವಿವರಣೆ–** 'ನೇಹ ನಾನಾ' ಇತ್ಯಾದಿ ಅದ್ವೈತಶ್ರುತಿಗಳು ಅಭಾವವನ್ನು ಹೇಳುತ್ತವೆ. ಆ ಅಭಾವವನ್ನು ನಿಷೇಧ ಮಾಡಿದರೆ ಶ್ರುತಿಪ್ರತಿಪಾದ್ಯವಾದ ಅರ್ಥವು ನಿಷೇಧಪ್ರತಿಯೋಗಿಯಾದ್ದರಿಂದ ಶ್ರುತಿಗೆ ಅಪ್ರಮಾಣ್ಯದೋಷವು ಬರುತ್ತದೆ. ಆ ಕಾರಣದಿಂದ ಶ್ರುತಿಯು ಅಭಾವವನ್ನು ನಿಷೇಧ ಮಾಡುವುದಿಲ್ಲ ಎಂಬ ವಾದವೂ ಸರಿಯಲ್ಲ. ಹಾಗೆ ಅಂಗೀಕರಿಸಿದರೆ, ಭಾವವನ್ನು ನಿಷೇಧ ಮಾಡಿದರೆ, ಶ್ರುತಿಯ ಸ್ವರೂಪವೇ ನಿಷಿದ್ಧವಾಗುತ್ತದೆ. ಶ್ರುತಿಯು ಧರ್ಮಿ. ಪ್ರಾಮಾಣ್ಯವು ಅದರ ಧರ್ಮ.

ಧರ್ಮ ಮತ್ತು ಧರ್ಮಿಗಳಲ್ಲಿ ಧರ್ಮಿಯೇ ಪ್ರಬಲವಾದುದು. ಧರ್ಮಿಯನ್ನು ಉಳಿಸಲು ಶ್ರುತಿಗೆ ಅಪ್ರಾಮಾಣ್ಯವನ್ನು ಬೇಕಾದರೂ ಹೇಳಿ, ಧರ್ಮಿಯಾದ ಶ್ರುತಿಯ ಸ್ವರೂಪವನ್ನೇ ನಾಶಮಾಡಬೇಡಿ ಎಂದು ತಾತ್ಪರ್ಯ.

**ಸತಿ ಧರ್ಮಿಣಿ ಧರ್ಮಸ್ಯ ಚಿಂತಾಮಾಹುರ್ವಿಪಶ್ಚಿತಃ ।**
**ಧರ್ಮಿನಾಶಾದ್ ಭಯಂ ನೋ ಚೇದ್ ಧರ್ಮನಾಶೇನ ಕಿಂ ಭಯಮ್ ॥**
**॥ ೮೩೯ ॥**

**ಅರ್ಥ–** ವಿಪಶ್ಚಿತಃ= ಜ್ಞಾನಿಗಳು, ಧರ್ಮಿಣಿ ಸತಿ= ಧರ್ಮಿಯು ಇರುತ್ತಿರಲು ಮಾತ್ರ, ಧರ್ಮಸ್ಯ= ಧರ್ಮಗಳ, ಚಿಂತಾಂ= ವಿಚಾರವನ್ನು, ಆಹುಃ= ಹೇಳುತ್ತಾರೆ, ಧರ್ಮಿನಾಶಾತ್= ಧರ್ಮಿನಾಶದಿಂದ, ಭಯಂ ನೋ ಚೇತ್= ನಿನಗೆ ಭಯವಿಲ್ಲದಿದ್ದರೆ, ಧರ್ಮನಾಶೇನ= ಧರ್ಮನಾಶದಿಂದ, ಕಿಂ ಭಯಂ= ಏನು ಭಯ?

**ಅನುವಾದ–** ಧರ್ಮಿ ಇದ್ದರೆ ಅದರಲ್ಲಿ ಧರ್ಮದ ವಿಚಾರವನ್ನು ಮಾಡಬಹುದು ಎಂದು ವಿವೇಕಿಗಳು ಹೇಳುತ್ತಾರೆ. ಧರ್ಮಿನಾಶಕ್ಕೆ ಹೆದರದೇ ಇದ್ದ ಮೇಲೆ ಧರ್ಮನಾಶಕ್ಕೆ ಏಕೆ ಹೆದರಬೇಕು?

**ಭಾವವಿಲಾಸಿನೀ–** ಉಕ್ತಾರ್ಥೇ ಪೂರ್ವೇಷಾಂ ಸಮ್ಮತಿಮಾಹ– **ಸತಿ ಧರ್ಮಿಣೀತಿ** ॥ ೮೩೯ ॥

**ವಿವರಣೆ–** ಧರ್ಮಿಯು ಆಶ್ರಯ. ಅದರಲ್ಲಿ ಅನೇಕ ಧರ್ಮಗಳು ಇರುತ್ತವೆ. ಆದ್ದರಿಂದ ಧರ್ಮಿಯು ಪ್ರಬಲ. ಪ್ರಬಲ ದುರ್ಬಲಗಳ ನಡುವೆ ದುರ್ಬಲವನ್ನು ಕಳೆದುಕೊಳ್ಳಬಹುದೇ ಹೊರತಾಗಿ ಪ್ರಬಲವನ್ನು ಕಳೆದುಕೊಳ್ಳಬಾರದು. ಭಾವನಿಷೇಧ ಮಾಡಿದರೆ ಪ್ರಬಲವಾದ ಧರ್ಮಿಯು ಹೊರಟುಹೋಗುತ್ತದೆ. ಅದ್ವೈತಶ್ರುತಿಗೆ ಪ್ರಾಮಾಣ್ಯವನ್ನುಳಿಸಲು ಹೀಗೆ ಪ್ರಬಲವಾದ ಧರ್ಮಿಯ ನಾಶವನ್ನು ಅಂಗೀಕರಿಸುವುದು ಸರಿಯಲ್ಲ. ಏಕೆಂದರೆ, ಪ್ರಾಮಾಣ್ಯವು ಧರ್ಮ ಮಾತ್ರ. ಧರ್ಮಿ ಹೋದಾಗಲೇ ಹೆದರದಿದ್ದವರು ಧರ್ಮ ಹೋಗುತ್ತದೆ ಎಂದು ಏಕೆ ಹೆದರಬೇಕು?

**ಯದಿ ತತ್ವಜ್ಞಾನತಾಯ್ಯೆ ನ ಬೋಧ್ಯಸ್ಯ ನಿಷೇಧನಮ್ ।**
**ತದರ್ಥಮೇವ ತರ್ಹ್ಯಜ್ಞ ಬೋಧಕಂ ಚ ನ ಬಾಧ್ಯತಾಮ್ ॥ ೮೪೦ ॥**

**ಅರ್ಥ–** ಯದಿ= ಒಂದು ಪಕ್ಷ, ತತ್ವಜ್ಞಾನರತಾಯ್ಯೆ= ಶ್ರುತಿಜನ್ಯಜ್ಞಾನವು ತತ್ವಜ್ಞಾನವಾಗಬೇಕಾದ ಕಾರಣದಿಂದ, ಬೋಧ್ಯಸ್ಯ= ಶ್ರುತಿಬೋಧ್ಯವಾದ ಅಭಾವದ, ನಿಷೇಧನಂ ನ= ನಿಷೇಧ ಇಲ್ಲವೆಂದು ಹೇಳುವುದಾದರೆ, ಅಜ್ಞ= ಎಲೈ ಮೂರ್ಖನೇ, ತರ್ಹಿ= ಆಗ, ತದರ್ಥಮೇವ= ಶ್ರುತಿಜನ್ಯವಾದ ಜ್ಞಾನಕ್ಕೆ ತತ್ವಜ್ಞಾನತ್ವವನ್ನು ಸಮರ್ಥಿಸುವುದಕ್ಕಾಗಿಯೇ, ಬೋಧಕಂ ಚ = ಬೋಧಕವಾದ ಶ್ರುತಿಯೂ ಸಹ, ನ ಬಾಧ್ಯತಾಮ್= ಬಾಧಿಸಲ್ಪಡದಿರಲಿ.

**ಅನುವಾದ–** ನಿರ್ಗುಣಶ್ರುತಿಯು ತತ್ವಜ್ಞಾನವನ್ನುಂಟುಮಾಡಿಕೊಡುತ್ತದೆ. ಶ್ರುತಿಜನ್ಯವಾದುದು ತತ್ವಜ್ಞಾನವಾಗಬೇಕಾದರೆ, ಶ್ರುತಿಯಿಂದ ಬೋಧ್ಯವಾದುದನ್ನು ನಿಷೇಧ ಮಾಡಬಾರದು. ಆದ್ದರಿಂದ ಅಭಾವವನ್ನು ಉಳಿಸಿಕೊಳ್ಳುತ್ತೇವೆ ಎಂದು ಹೇಳಿದರೆ, ಬೋಧ್ಯವಾದುದನ್ನು ಉಳಿಸಿಕೊಳ್ಳಲು ಬೋಧಕವಾದುದು ಒಂದು ಇರಬೇಕಷ್ಟೇ? ಆದ್ದರಿಂದ ಮೂರ್ಖನೇ, ನಿನ್ನ ಬೋಧ್ಯವನ್ನು ಉಳಿಸಿಕೊಳ್ಳುವುದಕ್ಕಾದರೂ ಬೋಧಕವಾದ ಶ್ರುತಿಯನ್ನು ಉಳಿಸಿಕೋ.

**ಭಾವವಿಲಾಸಿನೀ–** ಪ್ರಕಾರಾಂತರೇಣ ಪರಶಂಕಾಮನೂದ್ಯ ದೂಷಯತಿ– **ಯದೀತಿ** ॥ ತತ್ತ್ವಜ್ಞಾನತಾಯ್ಯೈ ತದ್ವತಿ ತತ್ಪ್ರಕಾರಕಜ್ಞಾನತ್ವಾರ್ಥಮ್ । ತದರ್ಥಂ ತತ್ತ್ವಜ್ಞಾನೋತ್ಪತ್ತ್ಯರ್ಥಮ್ । (ಬಾಷ್ಪಾರೋಪಿತಧೂಮಾದ್ ವಹ್ನಿಪ್ರಮಿತೇರದರ್ಶನಾತ್ । ಸದ್ಧೂಮಾದೇವ ತತ್ಪ್ರಮಿತಿದರ್ಶನಾಚ್ಚ । ಅತ್ರಾಪಿ ತ್ವದುಕ್ತಾ ಧರ್ಮಚಿನ್ತಾ । ಅಸ್ಮದುಕ್ತಾ ತು ಧರ್ಮಿಚಿಂತೇತಿ ಪ್ರಬಲಾ) (ಪ್ರಕ್ಷಿಪ್ತೋಯಂ ಗ್ರಂಥಃ) ॥ ೮೪೦ ॥

**ವಿವರಣೆ–** ಅಭಾವವು ಬೋಧ್ಯವಾದುದು. ಅದನ್ನು ಉಳಿಸಿಕೊಳ್ಳಲು ಅಭಾವಕ್ಕೆ ನಿಷೇಧವನ್ನು ಹೇಳುವುದಿಲ್ಲ ಎಂದು ಹೇಳಿದರೆ, ಆ ಬೋಧ್ಯವಸ್ತು ಸಿದ್ಧವಾಗಬೇಕಾದರೆ, ಬೋಧಕವಾದ ಶ್ರುತಿಯು ಇರಬೇಕಷ್ಟೇ? ಭಾವವನ್ನು ನಿಷೇಧ ಮಾಡಿದರೆ, ಬೋಧಕವಾದ ಶ್ರುತಿಯೂ ಹಾರಿಹೋಗುವುದರಿಂದ ನಿನ್ನ ಅರ್ಥವನ್ನು ಉಳಿಸಿಕೊಳ್ಳುವುದಕ್ಕಾದರೂ ಶ್ರುತಿಯ ಸತ್ವವನ್ನು ಒಪ್ಪು. ಭಾವವನ್ನು ನಿಷೇಧ ಮಾಡಬೇಡ ಎಂದು ಅಭಿಪ್ರಾಯ.

**ವಕ್ತೃತ್ವಗುಣಬಾಧೇ ಹಿ ಶ್ರುತೇರ್ಬಾಧೇ ನ ಬೋಧಕಮ್ ।**
**ನೇಹ ನಾನೇತಿ ವಾಕ್ಯೇ ತು ಸಾಕ್ಷಾದ್ ಬಾಧಾನ್ನ ಬೋಧಕಮ್॥ ೮೪೧ ॥**

**ಅರ್ಥ–** ವಕ್ತೃತ್ವಗುಣಬಾಧೇ ಹಿ= ಭಾವರೂಪವಾದ ವಕ್ತೃತ್ವರೂಪವಾದ ಗುಣವನ್ನು ಬಾಧಿಸಿದರೆ, ಶ್ರುತೇರ್ಬಾಧೇ= ಶ್ರುತಿಯ ಸ್ವರೂಪವೇ ಸಿದ್ಧವಾಗುವುದಿಲ್ಲವಾದ ಕಾರಣ, ನ ಬೋಧಕಂ ಹಿ= ಶ್ರುತಿಯು ಬೋಧಕವಾಗುವುದಿಲ್ಲವಷ್ಟೇ, ನೇಹನಾನೇತಿವಾಕ್ಯೇ ತು= ನೇಹನಾನೇತಿ ಎಂಬ ವಾಕ್ಯವು, ಸಾಕ್ಷಾತ್ ಬಾಧಾತ್= ಭಾವವನ್ನು ನಿಷೇಧ ಮಾಡುವುದರಿಂದ ನೇರವಾಗಿ ಬಾಧಿತವಾದರೆ ಶ್ರುತಿಯ ಸ್ವರೂಪವೇ ಸಿದ್ಧವಾಗುವುದಿಲ್ಲವಾದುದರಿಂದ, ನ ಬೋಧಕಮ್= ಬೋಧಕವಾಗುವುದಿಲ್ಲ (ವಕ್ತೃತ್ವ ಗುಣವನ್ನು ಬಾಧಿಸಿದರೆ ಶ್ರುತಿಯಿದ್ದರೂ ಉಪದೇಶಕನು ಇಲ್ಲದಿರುವುದರಿಂದ ಬೋಧಕವಾಗುವುದಿಲ್ಲ, ಭಾವಮಾತ್ರವನ್ನು ನಿಷೇಧ ಮಾಡಿದರೆ ನೇಹನಾನಾ ಎಂಬ ಶ್ರುತಿ ಸ್ವರೂಪವೇ ಇಲ್ಲವಾಗುವುದರಿಂದ ಆಗಲೂ ಶ್ರುತಿಯು ಬೋಧಕವಾಗುವುದಿಲ್ಲ).

**ಅನುವಾದ–** ನಿರ್ಗುಣಶ್ರುತಿಯು ಭಾವರೂಪಗುಣಗಳನ್ನು ನಿಷೇಧ ಮಾಡಿದರೆ ಹರಿಯ ವಕ್ತೃತ್ವರೂಪವಾದ ಭಾವಗುಣವೇ ನಿಷಿದ್ಧವಾಗುತ್ತದೆ. ಆದ್ದರಿಂದ

ಶ್ರುತಿಯು ಬೋಧಕವಾಗುವುದಿಲ್ಲ. 'ನೇಹ ನಾನಾ' ವಾಕ್ಯವಾದರೂ ಸಾಕ್ಷಾತ್ ಶ್ರುತಿಯನ್ನೇ ನಿಷೇಧಿಸುವುದರಿಂದ ಶ್ರುತಿಯು ಬೋಧಕವಾಗುವುದಿಲ್ಲ.

**ಭಾವವಿಲಾಸಿನೀ–** ನನು ನಿರ್ಗುಣಶ್ರುತೌ ಭಾವರೂಪಭಗವದ್ಗುಣಬಾಧ ಏವ । ನತು ಶ್ರುತಿಸ್ವರೂಪಬಾಧಃ। ಅತೋಽನುಕ್ತೋಪಾಲಂಭ ಇತ್ಯತ ಆಹ– **ವಕೃತ್ವೇತಿ** ॥ ವಕೃತ್ವಗುಣಬಾಧೇ ಹರೇರ್ಭಾವರೂಪವಕೃತ್ವಗುಣಬಾಧೇ ಉಚ್ಚಾರಕಾಭಾವೇನ ಶ್ರುತೇರೇವಾಭಾವೇ ಸತಿ ನ ಬೋಧಕಮ್ । ಸಾಕ್ಷಾದ್ ಬಾಧಾದ್ ಭಗವತೋಽನ್ಯಸ್ಯ ಸಾಕ್ಷಾನ್ನಿಷೇಧಾತ್ । ಸಾಕ್ಷಾತ್ ಪರಂಪರಯಾ ವಾ ಶ್ರುತಿಬಾಧಸ್ತೂಭಯತ್ರಾಪಿ ಸಮ ಇತಿ ನೋಕ್ತದೋಷ ಇತಿ ಭಾವಃ ॥ ೮೪೧ ॥

**ವಿವರಣೆ–** 'ನೇಹ ನಾನಾ' ಶ್ರುತಿಯು ಭಾವಧರ್ಮವನ್ನು ನಿಷೇಧ ಮಾಡಿದರೆ, ಹರಿಯ ವಕೃತ್ವವು ಒಂದು ಭಾವಧರ್ಮ. ಅದನ್ನೂ ನಿಷೇಧ ಮಾಡಬೇಕಾಗುವುದರಿಂದ ಶ್ರುತಿಯ ಸ್ವರೂಪವೇ ಸಿದ್ಧವಾಗದಿರುವ ಕಾರಣ ಶ್ರುತಿಗೇ ಬಾಧವು ಬರುತ್ತದೆ. ಹರಿಯಿಂದಲೇ ಸರ್ಗಾದಿಯಲ್ಲಿ ಉಚ್ಚರಿಸಲ್ಪಟ್ಟು ವೇದವು ಪ್ರವೃತ್ತಿಯನ್ನು ಪಡೆಯಬೇಕು. ಹರಿಗೆ ವಕೃತ್ವಗುಣವೇ ಇಲ್ಲದಿದ್ದರೆ, ಅವನು ವೇದವನ್ನು ಉಚ್ಚರಿಸುವುದೇ ಇಲ್ಲವಾದ್ದರಿಂದ ಜಗತ್ತಿನಲ್ಲಿ ವೇದವೇ ಇಲ್ಲ. ಆದ್ದರಿಂದ 'ನೇಹ ನಾನಾ' ಎಂಬ ಶ್ರುತಿಯೂ ಇಲ್ಲ. ಆದ್ದರಿಂದ ಅದು ಬೋಧಕವಾಗುವುದಿಲ್ಲ. ಹೀಗೆ ಪರಂಪರೆಯಿಂದ ಬೋಧಕವಾಗುವುದಿಲ್ಲ ಎಂದು ತಿಳಿಯಬೇಕು. 'ನೇಹ ನಾನಾ' ಎಂಬ ಶ್ರುತಿಯಾದರೂ ಎಲ್ಲಾ ಭಾವಗಳನ್ನೂ ಸಾಕ್ಷಾತ್ ನಿಷೇಧ ಮಾಡುವುದಾದರೆ, ತನ್ನನ್ನೂ ನಿಷೇಧ ಮಾಡಿಕೊಳ್ಳುವುದರಿಂದ ತನ್ನ ಸ್ವರೂಪವೇ ಇಲ್ಲದಂತಾಗುವುದರಿಂದ, ಆಗಲೂ ಶ್ರುತಿಯು ಬೋಧಕವಾಗುವುದಿಲ್ಲ.

**ಸತೋಽಪಿ ದೋಷತೋ ದೋಷಃ ಸ್ವಾಸತ್ತ್ವೇ ಕಿಂ ನ ದುಷ್ಟತಾ ॥ ೮೪೨ ॥**

**ಅರ್ಥ–** ಸತೋಽಪಿ= ವಸ್ತುವಿದ್ದರೂ ಕೂಡ, ದೋಷತಃ= ಅದರಲ್ಲಿ ದೋಷವಿದ್ದರೆ, ದೋಷಃ= ವಸ್ತುವಿಗೆ ದುಷ್ಟತ್ವವುಂಟಾಗುತ್ತದೆ, ಸ್ವಾಸತ್ತ್ವೇ= ತಾನೇ ಇಲ್ಲದಿದ್ದರೆ, ದುಷ್ಟತಾ= ದುಷ್ಟತ್ವವು, ಕಿಂ ನ= ಉಂಟಾಗುವುದಿಲ್ಲವೇ?

**ಅನುವಾದ–** ವಿದ್ಯಮಾನಪದಾರ್ಥವೂ ಕೂಡ ದೋಷದ ದೆಸೆಯಿಂದ ತಾನು ತನಗೆ ಯೋಗ್ಯವಾದ ಅರ್ಥಕ್ರಿಯೆಯನ್ನು ಉಂಟುಮಾಡಲಾರದು. ಆದ್ದರಿಂದ ಅದು ದುಷ್ಟವಾಗುತ್ತದೆ. ಇನ್ನು ತಾನೇ ಇಲ್ಲದಿದ್ದರೆ, ಸ್ವಯೋಗ್ಯವಾದ ಅರ್ಥಕ್ರಿಯೆಯನ್ನು ಮಾಡುವ ಸಾಧ್ಯತೆಯೇ ಇಲ್ಲವಾದ್ದರಿಂದ ದುಷ್ಟವಾಗುತ್ತದೆ ಎಂದು ಇನ್ನೊಮ್ಮೆ ಹೇಳಬೇಕಾಗಿಲ್ಲ.

**ಭಾವವಿಲಾಸಿನೀ–** ಸ್ವಸ್ವರೂಪಹಾನಿರ್ಮಹಾದೋಷ ಇತ್ಯತ್ರ ಲೌಕಿಕದೃಷ್ಟಾಂತಮಾಹ– **ಸತೋಽಪೀತಿ** ॥ ಸತೋಽಪಿ ಚಕ್ಷುರಾದೇರ್ದೋಷತಃ ಕಾಚಾದಿದೋಷಾದ್ ದೋಷಃ

ಪ್ರಮಾಜನಕತ್ವಾಭಾವಃ । ಸ್ವಾಸತ್ತ್ವೇ ಚಕ್ಷುಷ ಏವಾಭಾವೇ ದುಷ್ಟತಾ ಪ್ರಮಾಜನಕತ್ವಾಭಾವೋ ನ ಕಿಂ ಭವೇದೇವೇತ್ಯರ್ಥಃ । ನ ಕಿಮಿತ್ಯಾಕ್ಷೇಪೇಣ ಪೂರ್ವತ್ರ ಧರ್ಮ್ಯಂಶ-ಪ್ರಮಾಜನಕತ್ವಮಾತ್ರಮಸ್ತಿ । ಅತ್ರತು ತದಪಿ ನಾಸ್ತೀತಿ ಸೂಚಿತಮ್ ॥ ೮೪೨ ॥

**ವಿವರಣೆ–** ಚಕ್ಷುರಾದಿಇಂದ್ರಿಯಗಳಿಗೆ ಕಾಚಾದಿದೋಷದಿಂದ ಪ್ರಮಾಜನಕತ್ವಾಭಾವ ರೂಪವಾದ ದೋಷವು ಉಂಟಾಗುತ್ತದೆ. ಚಕ್ಷುಸ್ಸು ಇದ್ದಾಗಲೂ ದೋಷದಿಂದ ಈ ಪರಿಸ್ಥಿತಿ. ಚಕ್ಷುಸ್ಸೇ ಇಲ್ಲದಿದ್ದರೆ, ಪ್ರಮಾಜನಕತ್ವಾಭಾವರೂಪವಾದದೋಷವು ಸ್ವತ ಏವ ಉಂಟಾಗುತ್ತದೆ. ಮೊದಲನೆಯ ಕಲ್ಪದಲ್ಲಿ ಎಂದರೆ ಚಕ್ಷುಸ್ಸು ಇದ್ದಾಗ ದೋಷದಿಂದ ಪ್ರಮಾಜನಕತ್ವವಿಲ್ಲದಿದ್ದರೂ ಅದು ಧರ್ಮ್ಯಂಶದಲ್ಲಿ ಪ್ರಮಾರೂಪವಾದ ಜ್ಞಾನವನ್ನು ಮಾಡಿಕೊಡುತ್ತದೆ. ಆದರೆ ಚಕ್ಷುಸ್ಸೇ ಇಲ್ಲದಿದ್ದರೆ, ಆ ಅಂಶವೂ ಇಲ್ಲ ಎಂದು ಬಹಳ ದೋಷಾಸ್ಪದವಾಗುತ್ತದೆ. ಹಾಗೆ ಶ್ರುತಿಗೆ ಸ್ವರೂಪವೇ ಇಲ್ಲದಿದ್ದರೆ, ಅದು ಧರ್ಮಾ-ಭಾವರೂಪವಾದ ಯಾವ ಪ್ರಮೇಯದ ಜ್ಞಾನವನ್ನೂ ಉಂಟು ಮಾಡಿಕೊಡಲು ಸಾಧ್ಯವಿಲ್ಲ.

ಧರ್ಮೀ ಸರ್ವಾತ್ಮನಾ ರಕ್ಷ್ಯೋ ನ ಚೇದ್ ಬ್ರಹ್ಮೈವ ಶಾಮ್ಯತಿ ।
ತದಿಹೇತಿ ಪದಾತ್ ಸಚ್ಚೇತ್ ತತ್ಪದಂ ಚಾತ ಏವ ಸತ್ ॥ ೮೪೩ ॥

**ಅರ್ಥ–** ಧರ್ಮೀ= ಧರ್ಮಿಯಾದ ಭಾವ ವಸ್ತುವು, ಸರ್ವಾತ್ಮನಾ= ಎಲ್ಲ ರೀತಿಯಿಂದಲೂ, ರಕ್ಷ್ಯಃ= ರಕ್ಷಿಸಲ್ಪಡಬೇಕು, ನ ಚೇತ್= ಇಲ್ಲದಿದ್ದರೆ, ಬ್ರಹ್ಮೈವ= ಬ್ರಹ್ಮನೇ, ಶಾಮ್ಯತಿ= ವಿನಾಶವನ್ನು ಹೊಂದುತ್ತಾನೆ, ಇಹೇತಿ ಪದಾತ್= ಇಹ ಎಂಬ ಪದವಿರುವುದರಿಂದ, ತತ್= ಆ ಬ್ರಹ್ಮನು, ಸಚ್ಚೇತ್= ಸತ್ಯವಾದವನೆಂದು ಹೇಳಿದರೆ, ಅತ ಏವ= ಆ ಕಾರಣದಿಂದಲೇ, ತತ್ಪದಂ ಚ = ಇಹ ಎಂಬ ಪದವು, ಸತ್= ಸತ್ಯವಾಗುತ್ತದೆ.

**ಅನುವಾದ–** ಧರ್ಮಿಯನ್ನು ಸರ್ವರೀತಿಯಿಂದಲೂ ಉಳಿಸಿಕೊಳ್ಳಬೇಕು. ಇಹ ಎಂಬ ಪದದಿಂದ ಧರ್ಮಿಯ ಬೋಧವು ಬರುವುದರಿಂದ ಧರ್ಮಿಯನ್ನು ಉಳಿಸಿಕೊಳ್ಳುತ್ತೇವೆ ಎಂದರೆ ಹಾಗಾದರೆ, ಇಹ ಎಂಬ ಪದವನ್ನು ಉಳಿಸಿಕೊಂಡು ಆ ಪದವು ಸತ್ಯವೆಂದು ಹೇಳಬೇಕು.

**ಭಾವವಿಲಾಸಿನೀ–** ಉಕ್ತಮರ್ಥಮುಪಸಂಹರನ್ನೇವ ಬಾಧಕಂ ಚಾಹ– **ಧರ್ಮೀತಿ** ॥ ಬ್ರಹ್ಮ ಐಕ್ಯಸ್ಯ ತ್ವದಭಿಲಷಿತನಿಷೇಧಸ್ಯ ಚ ಧರ್ಮಿಭೂತಂ ಬ್ರಹ್ಮ । ತದ್ಬ್ರಹ್ಮ । ಇಹೇತಿ ಪದಾತ್ 'ನೇಹ ನಾನಾ' ಇತ್ಯತ್ರ ವಿದ್ಯಮಾನಾತ್ । ತತ್ಪದಂ ಇಹೇತಿ ಪದಮ್ । ಅತ ಏವ ಬ್ರಹ್ಮಸ್ಥಾಪಕತ್ವಾದೇವ । ಸದ್ ಅಬಾಧ್ಯಮ್ ॥ ೮೪೩ ॥

**ವಿವರಣೆ–** ಹಿಂದೆ ಹೇಳಿದ ಅರ್ಥವನ್ನು ಉಪಸಂಹಾರ ಮಾಡುತ್ತಾ ಈ ಶ್ಲೋಕದಲ್ಲಿ ಇನ್ನೊಂದು ಬಾಧಕವನ್ನು ಹೇಳುತ್ತಾರೆ. ಅದ್ವೈತಿಗಳಿಗೆ ಅಭಿಮತವಾದ ಐಕ್ಯಕ್ಕೆ ಬ್ರಹ್ಮನು

ಧರ್ಮಿಯಾದವನು. ಎಲ್ಲಾ ಭಾವವನ್ನೂ ನಿಷೇಧ ಮಾಡುತ್ತೇವೆ ಎಂದು ಧರ್ಮಿರೂಪವಾದ ಭಾವವನ್ನು ನಿಷೇಧ ಮಾಡಲು ಸಾಧ್ಯವಿಲ್ಲ. ಹಾಗೆ ನಿಷೇಧ ಮಾಡಿದರೆ ಬೇರೆ ದೋಷಗಳು ಬರುತ್ತವೆ. ಆದ್ದರಿಂದ ಇಹ ಎಂಬ ಪದದಿಂದ ಧರ್ಮಿಸತ್ವವನ್ನು ಅಂಗೀಕರಿಸುತ್ತೇವೆ ಎಂದು ಹೇಳಿದರೆ, ಧರ್ಮಿಯಾದ ಬ್ರಹ್ಮನ ಸತ್ವವನ್ನು ಹೇಳುವ ಇಹ ಎಂಬ ಪದವಾದರೂ ಸತ್ಯವಾದುದು ಎಂದು ಅಂಗೀಕರಿಸಬೇಕು. ಇಹ ಎಂಬ ಪದವು ಭಾವರೂಪವಾದುದರಿಂದ ಎಲ್ಲಾ ಭಾವವನ್ನೂ ನಿಷೇಧ ಮಾಡಲು ಬರುವುದಿಲ್ಲ.

**ವ್ಯಾವಹಾರಿಕಸತ್ತ್ವೇನ ಬೋಧಕಂ ಯದಿ ಬೋಧಕಮ್ ।**
**ವ್ಯಾವಹಾರಿಕಸತ್ತ್ವೇನ ಬೋಧ್ಯಸ್ಯಾಪ್ಯಸ್ತು ಬೋಧ್ಯತಾ ॥ ೮೪೪ ॥**

**ಅರ್ಥ–** ಬೋಧಕಂ= ಬೋಧಕವಾದ ಶ್ರುತಿಯು (ಇಹ ಎಂಬ ಪದವು), ವ್ಯಾವಹಾರಿಕಸತ್ತ್ವೇನ= ವ್ಯಾವಹಾರಿಕ ಸತ್ವವು ಇರುವುದರಿಂದ, ಬೋಧಕಂ = ಬೋಧಕವಾಗುವುದಾದರೆ, ಬೋಧ್ಯಸ್ಯಾಪಿ= ಬೋಧ್ಯನಾದ ಬ್ರಹ್ಮನಿಗೂ ಸಹ, ವ್ಯಾವಹಾರಿಕಸತ್ತ್ವೇನ= ವ್ಯಾವಹಾರಿಕ ಸತ್ವದಿಂದಲೇ, ಬೋಧ್ಯತಾ= ಬೋಧ್ಯತ್ವವು ಉಂಟಾಗಲಿ.

**ಅನುವಾದ–** ಇಹ ಎಂಬ ಪದವು ವ್ಯಾವಹಾರಿಕ ಸತ್ವವನ್ನು ಹೊಂದಿರುವುದರಿಂದ ಬೋಧಕವಾಗುತ್ತದೆ ಎಂದು ಹೇಳಿದರೆ ಬೋಧ್ಯವಾದ ಬ್ರಹ್ಮನಿಗೂ ಸಹ ವ್ಯಾವಹಾರಿಕಸತ್ವವೇ ಇರಲಿ.

**ಭಾವವಿಲಾಸಿನೀ– ಶಂಕತೇ– ವ್ಯಾವಹಾರಿಕಸತ್ತ್ವೇನೇತಿ ॥ ಉತ್ತರಮಾಹ– ವ್ಯಾವಹಾರಿಕೇತಿ ॥ ಬೋಧ್ಯಸ್ಯ ಬ್ರಹ್ಮಣ ಐಕ್ಯಸ್ಯ ಚ ॥ ೮೪೪ ॥**

**ವಿವರಣೆ–** ವ್ಯಾವಹಾರಿಕಸತ್ತ್ವಮಾತ್ರದಿಂದ ಶ್ರುತಿಯ ಸ್ವರೂಪವು ಸಿದ್ಧವಾಗಿ ಅರ್ಥಕ್ರಿಯಾಕಾರಿತ್ವವು ಉಂಟಾಗುವುದಾದರೆ, ಶ್ರುತಿಬೋಧ್ಯವಾದ ಬ್ರಹ್ಮನಿಗೂ ಹಾಗೆಯೇ ಐಕ್ಯಕ್ಕೂ ವ್ಯಾವಹಾರಿಕ ಸತ್ತ್ವವೇ ಇರಲಿ. ಆದುದರಿಂದಲೇ, ಶ್ರುತಿಯ ಪ್ರಾಮಾಣ್ಯವು ಕೂಡುತ್ತದೆ. ಅವುಗಳಿಗೆ ಪಾರಮಾರ್ಥಿಕಸತ್ತ್ವವನ್ನು ಏಕೆ ಅಂಗೀಕರಿಸಬೇಕು?

**ಘಟಧೀರಿವ ತದ್ಧೀಶ್ಚ ಸ್ಯಾದವಿದ್ಯಾನಿವರ್ತಿಕಾ ॥ ೮೪೫ ॥**

**ಅರ್ಥ–** ಘಟಧೀರಿವ= ವ್ಯಾವಹಾರಿಕವಾದ ಘಟದ ಜ್ಞಾನದಂತೆ, ತದ್ಧೀಶ್ಚ= ವ್ಯಾವಹಾರಿಕ ಸತ್ತ್ವವುಳ್ಳ ಬ್ರಹ್ಮನ ಜ್ಞಾನವೂ ಸಹ, ಅವಿದ್ಯಾನಿವರ್ತಿಕಾ ಸ್ಯಾತ್= ಅವಿದ್ಯಾನಿವರ್ತಕವಾಗಲಿ.

**ಅನುವಾದ–** ಘಟಜ್ಞಾನದಂತೆ ಆ ಬ್ರಹ್ಮನ ಜ್ಞಾನವೂ ಸಹ ಅಜ್ಞಾನನಿವರ್ತಕವಾಗಲಿ.

**ಭಾವವಿಲಾಸಿನೀ–** ನನು ಬೋಧ್ಯಸ್ಯ ವ್ಯಾವಹಾರಿಕತ್ವೇ ಅತತ್ತ್ವಾವೇದಕಂ ಜ್ಞಾನಂ ಕಥಮವಿದ್ಯಾನಿವರ್ತಕಮಿತ್ಯತ ಆಹ– **ಘಟಧೀರಿತಿ** ॥ ಘಟಧೀಃ ವ್ಯಾವಹಾರಿಕಘಟಜ್ಞಾನಮ್ । ಘಟಾಧಿಷ್ಠಾನಚೈತನ್ಯಾವರಕಾಜ್ಞಾನಸ್ಯೈವ । ತದ್ಧೀಃ ವ್ಯಾವಹಾರಿಕಬ್ರಹ್ಮಧೀಃ ॥ ೮೪೫ ॥

**ವಿವರಣೆ–** ಘಟಜ್ಞಾನವೆಂದರೆ ವ್ಯಾವಹಾರಿಕವಾದ ಘಟದ ಜ್ಞಾನ. ಅದು ಘಟಾಧಿಷ್ಠಾನ ಚೈತನ್ಯಾವರಣವಾದ ಅಜ್ಞಾನವನ್ನು ನಾಶಮಾಡುತ್ತದೆ. ಹಾಗೆಯೇ ಬೋಧ್ಯವಾದ ಬ್ರಹ್ಮನು ವ್ಯಾವಹಾರಿಕ ಸತ್ತ್ವೋಪೇತನಾದರೂ, ಆ ಬ್ರಹ್ಮನ ಜ್ಞಾನವು, ಆ ವ್ಯಾವಹಾರಿಕ ಸತ್ತ್ವೋಪೇತಬ್ರಹ್ಮಾಧಿಷ್ಠಾನವಾದ ಶುದ್ಧಚೈತನ್ಯಾವರಕವಾದ ಅಜ್ಞಾನವನ್ನು ನಾಶ ಮಾಡುತ್ತದೆ ಎಂದು ಒಪ್ಪಿದರೆ ನಿನಗೆ ಯಾವ ಅನುಪಪತ್ತಿಯೂ ಇರುವುದಿಲ್ಲ.

ಏವಂ ಚ ಯದಿ ಬೋಧ್ಯಸ್ಯ ತತ್ತ್ವತಾಯಾಂ ಭರೋ ಮಮ ।
ಬೋಧಕಸ್ಯಾಪಿ ತದ್ಭಾವೇ ಭರೋಽವಶ್ಯಮಪೇಕ್ಷಿತಃ ॥ ೮೪೬ ॥

**ಅರ್ಥ–** ಏವಂ ಚ= ಈ ರೀತಿಯಾಗಿ ಬೇರೆ ಪ್ರಯೋಜನವಿಲ್ಲದಿದ್ದರೂ, ಯದಿ= ಒಂದು ಪಕ್ಷ, ಬೋಧ್ಯಸ್ಯ= ಬೋಧ್ಯನಾದ ಬ್ರಹ್ಮನ, ತತ್ತ್ವತಾಯಾಂ= ಸತ್ಯತ್ವದಲ್ಲಿ, ಭರಃ= ನಿನಗೆ ಆಗ್ರಹವಿದ್ದರೆ, ಮಮ= ನನಗೆ, ಬೋಧಕಸ್ಯಾಪಿ= ಬೋಧಕವಾದ ಶ್ರುತಿಗೂ ಕೂಡ, ತದ್ಭಾವೇ= ಸತ್ಯತ್ವವು ಇರುವ ವಿಷಯದಲ್ಲಿ, ಭರಃ= ಆಗ್ರಹವು, ಅವಶ್ಯಂ= ಖಂಡಿತವಾಗಿ, ಅಪೇಕ್ಷಿತಃ= ಅಪೇಕ್ಷಿತವಾಗಿದೆ (ಇದೆ).

**ಅನುವಾದ–** ಹೀಗೆ ಬೇರೆ ಪ್ರಯೋಜನವಿಲ್ಲದಿದ್ದರೂ ಬೋಧ್ಯವಾದ ಬ್ರಹ್ಮನು ಪಾರಮಾರ್ಥಿಕನೇ ಆಗಬೇಕೆಂದು ನಿನಗೆ ಆಗ್ರಹವಿದ್ದರೆ, ಬೋಧಕವಾದ ವೇದವಾಕ್ಯವು ಪಾರಮಾರ್ಥಿಕವೇ ಆಗಬೇಕೆಂದು ನನಗೂ ಆಗ್ರಹವಿದೆ.

**ಭಾವವಿಲಾಸಿನೀ–**ಏವಂಚ ಪ್ರಯೋಜನಾಭಾವೇಽಪಿ ಬೋಧ್ಯಸ್ಯ ಬ್ರಹ್ಮಣಃ। ಭರಸ್ತವಾಗ್ರಹಃ । ಮಮೇತ್ಯುತ್ತರಾರ್ಧೇನ ಸಂಬಧ್ಯತೇ ॥ ೮೪೬ ॥

ನಹಿ ವಂಧ್ಯಾ ಸುತಂ ಸೂತೇ ನಾಪ್ಯಾತ್ಮಾನಂ ಜಿಘಾಂಸತಿ ।
ಅತೋ ಭಾವಾಭಾವತಯಾ ನ ವಿಭಾಗೋ ಮಮೋಚಿತಃ ॥ ೮೪೭ ॥

ತದ್ಯತ್ರ ನಾಸ್ತಿ ತತ್ತತ್ರ ನಿಷೇಧಾಮೀತಿ ವಾಗಿಯಮ್ ।
ತ್ರೈಗುಣ್ಯವರ್ಜಿತೇ ವಿಷ್ಣೌ ಗುಣತ್ರಯಮದೂಷಯತ್ ॥ ೮೪೮ ॥

**ಅರ್ಥ–** ವಂಧ್ಯಾ= ವಂಧ್ಯೆಯಾದ ಸ್ತ್ರೀಯು (ಮರಳು ಗೊಂಬೆಯು), ಸುತಂ= ಪುತ್ರನನ್ನು, ನ ಹಿ ಸೂತೇ= ಪ್ರಸವಿಸುವುದಿಲ್ಲ, ಅಪಿ= ಮತ್ತು, ಆತ್ಮಾನಂ= ತನ್ನನ್ನು, ನ ಜಿಘಾಂಸತಿ= ಕೊಂದುಕೊಳ್ಳುವುದಿಲ್ಲ, ಅತಃ= ಭಾವವನ್ನು ಅವಶ್ಯವಾಗಿ

ಒಪ್ಪಬೇಕಾಗಿರುವುದರಿಂದ, ಭಾವಾಭಾವತಯಾ ವಿಭಾಗಃ= ಭಾವ ಮತ್ತು ಅಭಾವಗಳನ್ನು ವಿಭಾಗಿಸುವುದು, ಮಮ ನ ಉಚಿತಃ= ನನಗೆ ಯೋಗ್ಯವಲ್ಲ, ತತ್= ಆದ್ದರಿಂದ, ಯತ್= ಯಾವುದು, ಯತ್ರ= ಎಲ್ಲಿ, ನಾಸ್ತಿ= ಇಲ್ಲವೋ, ತತ್= ಅದನ್ನು, ತತ್ರ= ಅಲ್ಲಿ, ನಿಷೇಧಾಮಿ= ನಿಷೇಧಿಸುತ್ತೇನೆ, ಇತಿ= ಎಂದು, ಇಯಂ ವಾಕ್= ಈ ನಿರ್ಗುಣಶ್ರುತಿಯು, ತ್ರೈಗುಣ್ಯವರ್ಜಿತೇ= ಗುಣತ್ರಯವರ್ಜಿತನಾದ, ವಿಷ್ಣೌ= ವಿಷ್ಣುವಿನಲ್ಲಿ, ಗುಣತ್ರಯಂ= ಗುಣತ್ರಯವನ್ನು, ಅದೂಷಯತ್= ದೂಷಣೆ ಮಾಡಿತು (ನಿಷೇಧ ಮಾಡಿತು).

**ಅನುವಾದ–** ವಂಧ್ಯೆಯಾದ ವನಿತೆಯು ಸುತನನ್ನು ಪ್ರಸವಿಸುವುದಿಲ್ಲ ಅಥವಾ ತನ್ನನ್ನು ತಾನು ಕೊಂದುಕೊಳ್ಳುವುದಿಲ್ಲ. ಆದ್ದರಿಂದ ಭಾವಾಭಾವರೂಪವಾದ ಈ ವಿಭಾಗವು ನನಗೆ ಸಮ್ಮತವಾದುದಲ್ಲ. ಆದ್ದರಿಂದ ಯಾವುದು ಎಲ್ಲಿ ಇಲ್ಲವೋ ಅಲ್ಲಿ ಅದನ್ನು ನಿಷೇಧ ಮಾಡುತ್ತೇನೆ ಎಂದು ಚಿಂತಿಸಿದ ನಿರ್ಗುಣವಾಕ್ಯವು ಗುಣತ್ರಯ-ವರ್ಜಿತನಾದ ವಿಷ್ಣುವಿನಲ್ಲಿ ಪ್ರಕೃತಿಯ ಗುಣತ್ರಯಗಳನ್ನು ನಿಷೇಧ ಮಾಡುತ್ತದೆ.

**ಭಾವವಿಲಾಸಿನೀ–** ಅಧುನಾ ಬೋಧಕಶ್ರುತೇರೇವ ಬಾಧ್ಯತ್ವಮಾವಶ್ಯಕಮಿತ್ಯನ್ಯಾಪದೇಶೇನಾಹ- **ನಹೀತಿ ॥** ವಂಧ್ಯಾ ಆರೋಪಿತಸ್ತ್ರೀತ್ವವತೀ ದಾರುಮಯೀ ಯೋಷಾ । ಏವಮಾರೋಪಿತಾ ಶ್ರುತಿಃ ಸುತಸ್ಥಾನೀಯಂ ತತ್ತ್ವಜ್ಞಾನಂ ನ ಜನಯೇತ್ । ಯದ್ವಾ ವಂಧ್ಯಾ ಸ್ತ್ರೀ ಸ್ವಯಂ ವಿದ್ಯಮಾನಾಪಿ ಅದೃಷ್ಟಾಖ್ಯಸಹಕಾರಿಮಾತ್ರವಿರಹಾತ್ ಸುತಂ ನ ಜನಯತಿ । ಕಿಂ ವಾಚ್ಯಂ ತದಾ ಸ್ವರೂಪತ ಏವಾವಿದ್ಯಮಾನಾ ಕಾರ್ಯಂ ನ ಕುರ್ಯಾದಿತಿ । ನಾಪಿ ಲೋಕೇ ಆತ್ಮಾನಂ ಕೋಽಪಿ ಜಿಘಾಂಸತಿ । ಅತಃ ಶ್ರುತಿರಪಿ ನ ಸ್ವಾತ್ಮನಾಶಾಯ ಪ್ರಯತತೇ । ಅತೋಽಪಿ ಬೋಧಕಮಬಾಧ್ಯ-ಮೇವೇತಿ ಭಾವಃ । ಶ್ರುತಿಃ ಸ್ವಾಭಿಪ್ರಾಯಮುಪಸಂಹರತಿ– **ಅತ ಇತಿ ॥** ಅತೋ ಭಾವಸ್ಯಾ-ಪ್ಯಾವಶ್ಯಕತ್ವಾತ್ ॥ ೮೪೭ ॥

ಇಯಂ ವಾಕ್ ನಿರ್ಗುಣ ಇತಿ ವಾಕ್ ॥ ೮೪೮ ॥

**ವಿವರಣೆ–** ಬೋಧ್ಯವಾದ ಬ್ರಹ್ಮನಿಗೆ ವ್ಯಾವಹಾರಿಕಸತ್ತ್ವವನ್ನು ಅಂಗೀಕಾರ ಮಾಡಿದರೂ ಅಜ್ಞಾನನಿವೃತ್ತಿರೂಪವಾದ ಪ್ರಯೋಜನವು ಕೂಡುವುದರಿಂದ ಯಾವ ಅನುಪಪತ್ತಿಯೂ ಇಲ್ಲ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ್ದಾರೆ. ಆದ್ದರಿಂದ ಬ್ರಹ್ಮನಿಗೆ ಪಾರಮಾರ್ಥಿಕತ್ವವನ್ನು ಅಂಗೀಕಾರ ಮಾಡುವುದಕ್ಕೆ ಯಾವ ಪ್ರಯೋಜನವೂ ಇಲ್ಲ. ಹೀಗಿದ್ದೂ ನೀನು ಆಗ್ರಹವನ್ನು ಮಾಡುವುದಾದರೆ, ನಾನೂ ನನ್ನ ವಿಷಯದಲ್ಲಿ ಆಗ್ರಹವನ್ನು ಮಾಡುತ್ತೇನೆ ಎಂದು ತಾತ್ಪರ್ಯ.

ಬೋಧಕವಾದ ಶ್ರುತಿಯು ಅವಶ್ಯವಾಗಿ ಅಬಾಧ್ಯವೆಂದು ಅಂಗೀಕರಿಸಬೇಕೆಂದು ಈ ಶ್ಲೋಕಗಳಲ್ಲಿ ಹೇಳುತ್ತಾರೆ. ವಂಧ್ಯೆ ಎಂದರೆ ಆರೋಪಿತ ಸ್ತ್ರೀತ್ವವುಳ್ಳ ಮರದ ಗೊಂಬೆ. ಅದು ಹೇಗೆ ಮಗನನ್ನು ಪ್ರಸವಿಸುವುದಿಲ್ಲವೋ ಹಾಗೆಯೇ ಆರೋಪಿತವಾದ ಶ್ರುತಿಯೂ

ಸಹ ಮಗನ ಸ್ಥಾನದಲ್ಲಿರುವ ತತ್ವಜ್ಞಾನವನ್ನು ಉಂಟುಮಾಡಿಕೊಡುವುದಿಲ್ಲ ಎಂದು ಅರ್ಥ. ಅಥವಾ ವಂಧ್ಯಾ ಸ್ತ್ರೀ ಎಂದರೆ ಮಕ್ಕಳಿಲ್ಲದ ಹೆಂಗಸು ಎಂದೂ ಅರ್ಥ. ಅಂತಹ ಹೆಂಗಸು ತಾನು ಬದುಕಿದ್ದರೂ ಅದೃಷ್ಟರೂಪವಾದ ಸಹಕಾರಿ ಇಲ್ಲದಿರುವ ಕಾರಣ ಮಗನನ್ನು ಪ್ರಸವಿಸುವುದಿಲ್ಲ. ಹೀಗಿರುವಾಗ ತಾನೇ ಇಲ್ಲದಿದ್ದರೆ ಅವಳು ಹೇಗೆ ಪ್ರಸವಿಸುತ್ತಾಳೆ. ಅದೂ ಅಲ್ಲದೆ, ಲೋಕದಲ್ಲಿ ಯಾರೂ ತನ್ನನ್ನು ತಾನೇ ಕೊಂದುಕೊಳ್ಳುವುದಿಲ್ಲ. ಆದ್ದರಿಂದ ಶ್ರುತಿಯೂ ತನ್ನನ್ನು ತಾನು ನಿಷೇಧ ಮಾಡುವುದಿಲ್ಲ. ಈ ಎರಡು ಕಾರಣಗಳಿಂದಲೂ ಬೋಧಕವಾದ ಶ್ರುತಿಯು ಅವಶ್ಯವಾಗಿ ಸತ್ಯವೆಂದೇ ಒಪ್ಪಬೇಕು. ಆದ್ದರಿಂದ ಬ್ರಹ್ಮಧರ್ಮವನ್ನು ಭಾವ ಮತ್ತು ಅಭಾವ ಎಂದು ವಿಭಾಗಮಾಡಿ ಅದರಲ್ಲಿ ಅಭಾವವನ್ನು ಉಳಿಸಿಕೊಂಡು ಭಾವವನ್ನು ಮಾತ್ರ ನಿಷೇಧ ಮಾಡುವುದು ಎಂದಿಗೂ ಸರಿಯಾಗುವುದಿಲ್ಲ ಎಂದು ಚಿಂತಿಸಿ ಯಾವುದನ್ನು ನಿಷೇಧ ಮಾಡಬೇಕೋ ಅದು ಅಲ್ಲಿ ಇರಬಾರದು. ಬ್ರಹ್ಮನಲ್ಲಿ ಪ್ರಕೃತಿಯ ತ್ರಿಗುಣಗಳು ಇಲ್ಲ. ಆದ್ದರಿಂದ ಅದನ್ನೇ ನಿಷೇಧ ಮಾಡುತ್ತೇನೆಂದು ನಿರ್ಗುಣಶ್ರುತಿಯು ಬ್ರಹ್ಮನಲ್ಲಿ ಪ್ರಕೃತಿಯ ಮೂರು ಗುಣಗಳನ್ನು ನಿಷೇಧ ಮಾಡುತ್ತದೆ.

**ಹ್ರೀಮತ್ಯಾ ಮಮ ಸಂಕೋಚಗಮನಂ ನೈವ ದೂಷಣಮ್ ।**
**ಗುಣಿನಾಂ ಗುಣನಿಂದಾ ತು ಮಹಾದೋಷಪ್ರದಾ ಕಿಲ ॥ ೮೪೯ ॥**

**ಅರ್ಥ–** ಹ್ರೀಮತ್ಯಾ ಮಮ= ನಾಚಿಕೆವುಳ್ಳ ನನಗೆ, ಸಂಕೋಚ ಗಮನಂ= ಸಣ್ಣ ಮಾರ್ಗದಲ್ಲಿ ಹೋಗುವುದು, ದೂಷಣಂ ನೈವ= ದೂಷಣವಲ್ಲ, ತು= ಆದರೆ, ಗುಣಿನಾಂ= ಗುಣವಂತರ, ಗುಣನಿಂದಾ= ಗುಣವನ್ನು ನಿಂದಿಸುವುದು ಮಾತ್ರ, ಮಹಾದೋಷಪ್ರದಾ ಕಿಲ= ಬಹಳವಾದ ಪಾಪರೂಪವಾದ ದೋಷವನ್ನು ಉಂಟು ಮಾಡುವುದಷ್ಟೇ.

**ಅನುವಾದ–** ನಾಚಿಕೆಯುಳ್ಳ ನನಗೆ ಕಿರಿದಾದ ಮಾರ್ಗದಲ್ಲಿ ಹೋಗುವುದೇ ಭೂಷಣ. ಅದು ದೂಷಣವಲ್ಲ. ಆದರೆ ಗುಣವಂತರ ಗುಣನಿಂದೆಯನ್ನು ಮಾಡುವುದು ಮಾತ್ರ ಮಹಾದೋಷವಷ್ಟೇ?

**ಭಾವವಿಲಾಸಿನೀ–** ಶ್ರುತಿಃ ಗುಣತ್ರಯೇ ಸಙ್ಕೋಚಂ ಶೃಂಗಾರಮುದ್ರಯಾ ಘಟಯತಿ– ಹ್ರೀಮತ್ಯಾ ಇತಿ ।। ಅಭಿಮಾನಿಶ್ರೀದೇವೀಮಾದಾಯ ಹ್ರೀಮತ್ಯಾ ಇತ್ಯುಕ್ತಮ್ । ಸಂಕೋಚಗಮನಂ ಕುಲಸ್ತ್ರೀಣಾಂ ತು ಲಜ್ಜಾವಶಾದ್ ರಾಜಮಾರ್ಗಂ ವಿಹಾಯ ಸಂಕುಚಿತಮಾರ್ಗೇಣ ಗಮನಂ ಯುಕ್ತಮಿತಿ ಧ್ವನಿಃ । ಗುಣಿನಾಂ ಪುಂಸಾಂ ಗುಣನಿನ್ದಾ ಗುಣಾಪಲಾಪಃ ।। ೮೪೯ ।।

**ಇತಿ ನಿರ್ಗುಣವಾಗ್ ಧರ್ಮವಶೀಕೃತಮತಿಃ ಪ್ರಭೋಃ ।**
**ಧರ್ಮನಿರ್ಮೂಲನಂ ಧರ್ಮಂ ನ ಮೇನ ಇತಿ ಮೇ ಮತಿಃ ॥ ೮೫೦ ॥**

**ಅರ್ಥ–** ಇತಿ= ಈ ರೀತಿಯಲ್ಲಿ, ನಿರ್ಗುಣವಾಕ್= ನಿರ್ಗುಣ ಶ್ರುತಿಯು, ಪ್ರಭೋಃ= ಪ್ರಭುವಾದ ಹರಿಯ, ಧರ್ಮವಶೀಕೃತಮತಿಃ= ಧರ್ಮದಿಂದ ವಶೀಕೃತವಾದ ಮನಸ್ಸುಳ್ಳವಳಾಗಿ, ಧರ್ಮನಿರ್ಮೂಲನಂ= ಪ್ರಭುವಿನ ಧರ್ಮವನ್ನು ನಿಷೇಧ ಮಾಡುವುದು, ಧರ್ಮಂ ನ= ಧರ್ಮವಲ್ಲ ಎಂದು, ಮೇನೇ= ತಿಳಿದಳು, ಇತಿ= ಎಂದು, ಮೇ ಮತಿಃ= ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಇತಿ ನಿಶ್ಚಿತ್ಯ ಧರ್ಮವಶೀಕೃತಮತಿಃ ಧರ್ಮೈಃ ಸಾರ್ವಜ್ಞ್ಯಾದಿಧರ್ಮೈಃ ವಶೀಕೃತಮತಿಃ । ಧರ್ಮೇಣ ಪುಣ್ಯೇನ ವಶೀಕೃತಮತಿರಿತಿ ಧ್ವನಿಃ ॥ ೮೫೦ ॥

**ವಿವರಣೆ–** ಹೀಗೆ ಚಿಂತಿಸಿ ನಿರ್ಗುಣವಾಕ್ಯವು ಪ್ರಭುವಿನ ಸರ್ವಜ್ಞತ್ವಾದಿ ಧರ್ಮಗಳಿಂದ ವಶೀಕೃತವಾದ ಮನಸ್ಸುಳ್ಳವಳಾಗಿ ಸರ್ವಜ್ಞತ್ವಾದಿ ಧರ್ಮಗಳನ್ನು ನಿಷೇಧಿಸುವುದು ಎಂದೂ ಧರ್ಮವಲ್ಲ ಎಂದು ಚಿಂತಿಸಿದಳು ಎಂದು ನನ್ನ ಅಭಿಪ್ರಾಯ. ನಿರ್ಗುಣಶ್ರುತಿಗೆ ಗುಣತ್ರಯನಿಷೇಧರೂಪವಾದ ಅರ್ಥದಲ್ಲಿ ಸಂಕೋಚವನ್ನು ಈ ಶ್ಲೋಕಗಳಲ್ಲಿ ಶೃಂಗಾರಮುದ್ರೆಯಿಂದ ತಿಳಿಸುತ್ತಾರೆ. ಶ್ರುತಿಗಳಿಗೆ ಅಭಿಮಾನಿಯು ಲಕ್ಷ್ಮೀದೇವಿಯು ಆಗಿರುವುದರಿಂದಲೂ ಈ ಎಲ್ಲಾ ಚಿಂತನೆಗಳೂ ಉಪಪನ್ನವಾಗುತ್ತವೆ. ಕುಲೀನ ಸ್ತ್ರೀಯಾದವಳು ರಾಜಮಾರ್ಗದಲ್ಲಿ ನಡೆದು ಎಲ್ಲರ ದೃಷ್ಟಿಯನ್ನು ಆಕರ್ಷಿಸದೆ, ಸಂಕುಚಿತಮಾರ್ಗದಲ್ಲಿ ನಡೆಯುತ್ತಾಳೆ. ಹಾಗೆ ನಿರ್ಗುಣಶ್ರುತಿಯು ಎಲ್ಲಾ ಗುಣಗಳನ್ನು ನಿಷೇಧಿಸದೆ, ಕೇವಲ ಮೂರು ದುಷ್ಟಗುಣಗಳನ್ನು ಮಾತ್ರ ನಿಷೇಧಿಸುತ್ತದೆ. ಎಲ್ಲಾ ಗುಣಗಳನ್ನೂ ನಿಷೇಧಮಾಡಿದರೆ ಎಲ್ಲಾ ಗುಣವಂತರಿಗೆ ನಿಂದೆಯನ್ನು ಮಾಡಿದಂತೆ. ಅದು ಮಹಾದೋಷಕರವಾದುದು. ಹೀಗೆಲ್ಲಾ ಯೋಚಿಸಿ ನಿರ್ಗುಣಶ್ರುತಿಯು ಮತ್ತು ಅದಕ್ಕೆ ಅಭಿಮಾನಿಯಾದ ಲಕ್ಷ್ಮೀದೇವಿಯು ದೇವರ ಗುಣಗಳಿಂದ ಆಕೃಷ್ಟವಾದ ಮನಸ್ಸುಳ್ಳವರಾಗಿ ವಿಷ್ಣುವಿನ ಭಾವರೂಪವಾದ ಸರ್ವಜ್ಞತ್ವಾದಿಧರ್ಮಗಳನ್ನು ನಿಷೇಧಿಸುವುದೆಂದೂ ಸರಿಯಲ್ಲ ಎಂದು ತಿಳಿದಳೆಂದು ನಮ್ಮ ಅಭಿಪ್ರಾಯವೆಂದು ವಾದಿರಾಜರು ಹೇಳುತ್ತಾರೆ.

**ಅಪಿ ಚೈಕತ್ವಧರ್ಮಸ್ಯ ಸತ್ತ್ವೇ ಭಾವಗುಣೋಽಸ್ತಿ ತೇ ।**
**ತದಭಾವೇ ಗತಂ ಶಾಸ್ತ್ರಮೈಕ್ಯಮೇಕತ್ವಮೇವ ಯತ್ ॥ ೮೫೧ ॥**

**ಅರ್ಥ–** ಅಪಿ ಚ = ಇಷ್ಟೇಅಲ್ಲದೆ, ತೇ = ನಿನ್ನ ಮತದ ಪ್ರಕಾರ, ಏಕತ್ವಧರ್ಮಸ್ಯ ಸತ್ತ್ವೇ = ಏಕತ್ವರೂಪವಾದ ಧರ್ಮವು ಇದೆಯೆಂದಾದರೆ, ಭಾವಗುಣೋಽಸ್ತಿ = ಭಾವರೂಪವಾದ ಗುಣವನ್ನು ಅಂಗೀಕರಿಸಿದಂತಾಯಿತು. ತದಭಾವೇ = ಏಕತ್ವವು ಇಲ್ಲವೆಂದಾದರೆ, ಶಾಸ್ತ್ರಂ ಗತಂ = ನಿನ್ನ ಶಾಸ್ತ್ರವು ಅಪ್ರಾಮಾಣಿಕವಾಯಿತು, ಯತ್ = ಏಕೆಂದರೆ, ಏಕತ್ವಂ = ಏಕತ್ವವು, ಐಕ್ಯಮೇವ = ಐಕ್ಯವೇ ಆಗಿರುವುದಷ್ಟೇ?

**ಅನುವಾದ–** ಅದೂ ಅಲ್ಲದೆ, ಬ್ರಹ್ಮನಲ್ಲಿ ಏಕತ್ವರೂಪವಾದ ಧರ್ಮವು ಇದೆಯೋ ಇಲ್ಲವೋ? ಏಕತ್ವವು ಇದೆ ಎಂದು ಹೇಳಿದರೆ ಅದು ಭಾವರೂಪವಾದುದರಿಂದ ಭಾವಧರ್ಮವನ್ನು ಒಪ್ಪಿದಂತಾಯಿತು. ಏಕತ್ವವು ಇಲ್ಲ ಎಂದು ಹೇಳಿದರೆ, ನಿನ್ನ ಶಾಸ್ತ್ರವು ಅಪ್ರಮಾಣವಾಗಬೇಕಾಗುತ್ತದೆ. ಏಕೆಂದರೆ, ಏಕತ್ವವೆಂದರೂ ಐಕ್ಯವೆಂದರೂ ಒಂದೇ.

**ಭಾವವಿಲಾಸಿನೀ–** ಅಧುನಾ ಮಾಯಾವಾದ್ಯುಕ್ತಾರ್ಥಕಥನೇ ನಿರ್ಗುಣ್ಯೈಕ್ಯಶ್ರುತ್ಯೋಃ ಪರಸ್ಪರ-ವಿರೋಧೇನಾಪ್ರಾಮಾಣ್ಯಂ ಸ್ಯಾದಿತಿ ಭೀತಾ ಸ್ವಪ್ರಾಮಾಣ್ಯಸಂಪಾದಕಮೇವ ಮತ-ಮನುಸಸಾರೇತ್ಯಾಹ– **ಅಪಿಚೇತಿ** ॥ ಬ್ರಹ್ಮಣ್ಯೇಕತ್ವಾಖ್ಯಗುಣಸ್ಯ ಸತ್ತ್ವೇ ಐಕ್ಯವಾಕ್ಯಾರ್ಥತಯಾ ಸದ್ಭಾವೇ । ತ ಇತಿ ಮಾಯಿನಂ ಪ್ರತಿ ಶ್ರುತೇರುಕ್ತಿಃ । ತಥಾಚ ನಿರ್ಗುಣಶ್ರುತೇರರ್ಥಶೂನ್ಯತ್ವೇ-ನಾಪ್ರಾಮಾಣ್ಯಂ ಸ್ಯಾದಿತಿ ಭಾವಃ । ತದಭಾವೇ ತಸ್ಯ ಏಕತ್ವಗುಣಸ್ಯಾಭಾವೇ ಮಾಯಾವಾದಿ-ಮತೇ ಭಾವಗುಣನಿಷೇಧಕನಿರ್ಗುಣಶ್ರುತ್ಯಾ ಸಂಪಾದಿತೇ ಸತಿ ಶಾಸ್ತ್ರಮೈಕ್ಯಪ್ರತಿಪಾದಕತಯಾ ಅಭಿಮತವಾಕ್ಯಂ ಗತಮರ್ಥಶೂನ್ಯಮಭೂದಿತ್ಯರ್ಥಃ । ತತ್ರ ನಿಮಿತ್ತಮಾಹ– **ಐಕ್ಯಮಿತಿ** ॥ ಯದ್ ಯಸ್ಮಾದೇಕತ್ವಮೈಕ್ಯಮಿತಿ ಪರ್ಯಾಯಸ್ತಸ್ಮಾದ್ ಗತಮಿತಿ ಪೂರ್ವೇಣಾನ್ವಯಃ ॥೮೫೧॥

**ವಿವರಣೆ–** ಐಕ್ಯವು ಇಲ್ಲವೆಂದಾದರೆ, ಐಕ್ಯವನ್ನು ಪ್ರತಿಪಾದಿಸುವ ಶಾಸ್ತ್ರ ಅಪ್ರಮಾಣವಾಗುತ್ತದೆ ಎಂಬುದು ಸ್ಪಷ್ಟ. ಇನ್ನು, ನಿರ್ಗುಣಶ್ರುತಿ ಮತ್ತು ಐಕ್ಯಶ್ರುತಿಗಳು ಮಾಯಾವಾದಿಗಳು ಹೇಳುವ ಅರ್ಥವನ್ನು ಅಂಗೀಕರಿಸಿದರೆ ತಮ್ಮ ಸ್ವರೂಪಕ್ಕೇ ಹಾನಿಯಾಗುವುದು ಎಂದು ಹೆದರಿ ತಮ್ಮ ಸ್ವರೂಪವನ್ನೂ ಮತ್ತು ಪ್ರಾಮಾಣ್ಯವನ್ನೂ ಉಳಿಸುವ ಶ್ರೀ ಮಧ್ವಾಚಾರ್ಯರ ಮತವನ್ನೇ ಅವಲಂಬಿಸಿವೆ ಎಂದು ಹೇಳುತ್ತಾರೆ.

**ಸುಂದೋಪಸುಂದನ್ಯಾಯೇನ ನಿರ್ಗುಣ್ಯೈಕ್ಯಶ್ರುತೀ ಮಿಥಃ ।**
**ವಿರೋಧೇನ ಹತೇ ಕುರ್ಯಾನ್ಮಾಯಾಮತತಿಲೋತ್ತಮಾ ॥ ೮೫೨ ॥**

**ಅರ್ಥ–** ಮಾಯಾಮತತಿಲೋತ್ತಮಾ = ಮಾಯಾಮತವೆಂಬ ತಿಲೋತ್ತಮೆಯು, ನಿರ್ಗುಣ್ಯೈಕ್ಯಶ್ರುತೀ = ನಿರ್ಗುಣಶ್ರುತಿ ಮತ್ತು ಐಕ್ಯಶ್ರುತಿಗಳಿಗೆ, ಮಿಥಃ = ಪರಸ್ಪರ, ವಿರೋಧೇನ = ವಿರೋಧವನ್ನುಂಟುಮಾಡಿ, ಸುಂದೋಪಸುಂದನ್ಯಾಯೇನ = ಸುಂದೋಪಸುಂದನ್ಯಾಯದಿಂದ, ಹತೇ ಕುರ್ಯಾತ್ = ಅವುಗಳನ್ನು ಪರಸ್ಪರವಾಗಿ ಕೊಲ್ಲಿಸುತ್ತಾಳೆ.

**ಅನುವಾದ–** ಮಾಯಾಮತವೆಂಬ ತಿಲೋತ್ತಮೆಯು ನಿರ್ಗುಣಶ್ರುತಿ ಮತ್ತು ಐಕ್ಯಶ್ರುತಿಗಳಿಗೆ ಪರಸ್ಪರವಿರೋಧವನ್ನುಂಟುಮಾಡಿ ಸುಂದೋಪಸುಂದ-ನ್ಯಾಯದಿಂದ ಅವುಗಳನ್ನು ಪರಸ್ಪರವಾಗಿ ಕೊಲ್ಲಿಸುತ್ತಾಳೆ.

**ವಿವರಣೆ–** ತಿಲೋತ್ತಮೆಯ ಸಲುವಾಗಿ ಅಣ್ಣತಮ್ಮಂದಿರಾದ ಸುಂದೋಪಸುಂದರು ಪರಸ್ಪರವಾಗಿ ಯುದ್ಧಮಾಡಿ ಸತ್ತರೆಂದು ಪುರಾಣಪ್ರಸಿದ್ಧಿ ಇದೆ. ನಿರ್ಗುಣಶ್ರುತಿಯು

ಗುಣಸಾಮಾನ್ಯವನ್ನು ನಿಷೇಧ ಮಾಡಿದರೆ, ಐಕ್ಯವು ಒಂದು ಗುಣವಾದ್ದರಿಂದ ಐಕ್ಯಶ್ರುತಿಗೆ ವಿರೋಧವು ಬರುತ್ತದೆ. ಐಕ್ಯಶ್ರುತಿಯು ಏಕತ್ವರೂಪವಾದ ಗುಣವನ್ನು ಹೇಳಿದರೆ ಗುಣಸಾಮಾನ್ಯಾಭಾವವನ್ನು ಹೇಳುವ ನಿರ್ಗುಣಶ್ರುತಿಗೆ ವಿರೋಧವು ಬರುತ್ತದೆ. ಹೀಗೆ ಅದ್ವೈತಿಗಳು ಆ ಶಬ್ದಗಳಿಗೆ ಹೇಳುವ ಅರ್ಥಗಳಲ್ಲಿ ಪರಸ್ಪರ ವಿರೋಧವು ಬರುವುದರಿಂದ ಅವು ಒಂದನ್ನೊಂದು ನಾಶಮಾಡಿಕೊಳ್ಳುತ್ತವೆ. ಎರಡೂ ಅಪ್ರಮಾಣವಾಗುತ್ತವೆ ಎಂದು ತಾತ್ಪರ್ಯ.

**ಇತ್ಯಾದ್ಯಾಲೋಚ್ಯ ನೈರ್ಗುಣ್ಯಶ್ರುತಿರೈಕ್ಯಶ್ರುತಿಃ ಸಖೀಮ್ ।**
**ಆದಾಯ ಭಾರತೀಪ್ರಾಣನಾಥಂ ಶರಣಮೀಯುಷೀ ।**
**ಸ್ವಮಿಥ್ಯಾತ್ವಭಯಾಭಾವಾತ್ ತದುಕ್ತಾರ್ಥೇಷ್ವವರ್ತತ ॥ ೮೫೩ ॥**

**ಅರ್ಥ–** ಇತ್ಯಾದ್ಯಾಲೋಚ್ಯ = ಹೀಗೆಲ್ಲಾ ಆಲೋಚನೆಯನ್ನು ಮಾಡಿ, ನೈರ್ಗುಣ್ಯಶ್ರುತಿಃ= ನಿರ್ಗುಣಶ್ರುತಿಯು,ಸಖೀಮ್= ತನ್ನ ಸಖಿಯಾದ, ಐಕ್ಯಶ್ರುತಿಂ= ಐಕ್ಯಶ್ರುತಿಯನ್ನು, ಆದಾಯ = ಕರೆದುಕೊಂಡು, ಭಾರತೀಪ್ರಾಣನಾಥಂ = ಭಾರತೀ ರಮಣನಾದ ಪ್ರಾಣನಾಥನನ್ನು, ಶರಣಂ = ರಕ್ಷಕನನ್ನಾಗಿ, ಈಯುಷೀ = ಹೊಂದಿದವಳಾಗಿ, ಸ್ವಮಿಥ್ಯಾತ್ವಭಯಾಭಾವಾತ್ = ತನಗೆ ಮಿಥ್ಯಾತ್ವದಿಂದ ಉಂಟಾಗುವ ಭಯವಿಲ್ಲವೆಂಬ ಕಾರಣದಿಂದ, ತದುಕ್ತಾರ್ಥೇಷು = ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಹೇಳಿದ ಅರ್ಥದಲ್ಲೇ, ಅವರ್ತತ = ವಿಹರಿಸಿತು.

**ಅನುವಾದ– ಹೀಗೆಲ್ಲಾ ಆಲೋಚನೆಯನ್ನು ಮಾಡಿ ನಿರ್ಗುಣಶ್ರುತಿಯು ತನ್ನ ಸಖಿಯಾದ ಐಕ್ಯಶ್ರುತಿಯನ್ನು ಕರೆದುಕೊಂಡು ಭಾರತೀರಮಣನಾದ ಪ್ರಾಣನಾಥನಿಗೆ ಶರಣಾಗತಳಾಗಿ ತನಗೆ ಮಿಥ್ಯಾತ್ವ ಉಂಟಾಗುವ ಭಯವಿಲ್ಲದ ಕಾರಣ ಅವರು ಹೇಳಿದ ಅರ್ಥವನ್ನೇ ಸ್ವೀಕರಿಸಿತು.**

**ಭಾವವಿಲಾಸಿನೀ– ಇದಾನೀಂ ಸಾಹಿತ್ಯಮುದ್ರಯಾ ಫಲಿತಮಾಹ– ಸುನ್ದೋಪಸುನ್ದೇತಿ ॥ ಮಾಯಾಮತತಿಲೋತ್ತಮಾ ಮಾಯಾವಾದಿಮತಾಖ್ಯತಿಲೋತ್ತಮಾ ತಿಲೋತ್ತಮಾಖ್ಯಾ-ಪ್ಸರಃಸ್ತ್ರೀ ಸ್ವಾರ್ಥೇ ಪರಸ್ಪರವಿರೋಧಮುತ್ಪಾದ್ಯ ಸುದೋಪಸುಂದೌ ಘಾತಯಾಮಾಸೇತಿ ಪೌರಾಣಿಕೀ ಕಥಾ । ತದುಕ್ತಾರ್ಥೇಷು ತೇನ ಮಧ್ವಮುನಿನಾ ಉಕ್ತಾರ್ಥೇಷು ತ್ರಿಗುಣವರ್ಜಿತ-ತ್ವರೂಪಸಾದೃಶ್ಯಾದ್ಯರ್ಥೇಷು ಅವರ್ತತೇತಿ ಸಂಬಂಧಃ । ಅವಿರುದ್ಧಾರ್ಥಾಂತರಕಥನೇಽಪಿ ಜಗತ್ಸತ್ಯತ್ವವಾದಿನಃ ತಸ್ಯ ಮತೇ ಸ್ವಮಿಥ್ಯಾತ್ವಾಭಾವಾತ್ 'ಜೀವನ್ ಭದ್ರಾಣಿ ಪಶ್ಯತಿ' ಇತಿ ನ್ಯಾಯೇನ ತಮೇವಾನುಸಸಾರೇತಿ ಭಾವಃ ॥ ೮೫೨-೮೫೩ ॥**

**ವಿವರಣೆ–** ಅದ್ವೈತಿಗಳು ಹೇಳುವ ಅರ್ಥದಲ್ಲಿ ಈ ಎರಡು ಶ್ರುತಿಗಳಿಗೆ ಪರಸ್ಪರ ವಿರೋಧವಿದೆ. ಮಧ್ವಾಚಾರ್ಯರು ನಿರ್ಗುಣಶ್ರುತಿಗೆ ಪ್ರಾಕೃತಗುಣರಹಿತನೆಂದೂ,

ಐಕ್ಯಶ್ರುತಿಗೆ ಸರ್ವೋತ್ತಮನೆಂದೂ ಅರ್ಥವನ್ನು ಹೇಳುತ್ತಾರೆ. ಹೀಗೆ ಅರ್ಥವನ್ನು ಹೇಳಿದರೆ ಈ ಎರಡೂ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ಶ್ರುತಿಯೂ ಉಳಿಯುತ್ತದೆ. ಶ್ರುತಿಯ ಪ್ರಾಮಾಣ್ಯವೂ ರಕ್ಷಿತವಾಗುತ್ತದೆ. ಆದ್ದರಿಂದ ಈ ಶ್ರುತಿಗಳು ಮಧ್ವಾಚಾರ್ಯರು ಸೂಚಿಸಿದ ಅರ್ಥವನ್ನೇ ಹೇಳುತ್ತವೆ ಎಂದು ತಾತ್ಪರ್ಯ.

**ವಿದ್ವತ್ಪ್ರಯೋಗಬಾಹುಲ್ಯಾಚ್ಛಬ್ದಸ್ಯಾರ್ಥೋಽಭಿಧೀಯತೇ ।**
**ಪದಲಭ್ಯತ್ವತೋ ನೈವ ಯದ್ವಾ ತದ್ವಾ ನಿಗದ್ಯತೇ ॥ ೮೫೪ ॥**

**ಅರ್ಥ–** ಶಬ್ದಸ್ಯ= ಶಬ್ದದ, ಅರ್ಥಃ = ಅರ್ಥವು, ವಿದ್ವತ್ಪ್ರಯೋಗಬಾಹುಲ್ಯಾತ್ = ವಿದ್ವತ್ಪ್ರಯೋಗಗಳು ಬಹಳವಾಗಿ ಇರುವ ದೆಸೆಯಿಂದ, ಅಭಿಧೀಯತೇ = ಅಂಗೀಕರಿಸಲ್ಪಡುತ್ತದೆ. ಪದಲಭ್ಯತ್ವತಃ = ಶಬ್ದಶಕ್ತಿಯಿಂದ ದೊರೆಯುತ್ತದೆ ಎಂಬ ಕಾರಣದಿಂದ, ಯದ್ವಾ ತದ್ವಾ = ಮನಸ್ಸಿಗೆ ಬಂದಂತೆ, ನೈವ ನಿಗದ್ಯತೇ = ಹೇಳಲ್ಪಡುವುದಿಲ್ಲ.

**ಅನುವಾದ–** ಒಂದು ಶಬ್ದಕ್ಕೆ ಒಂದು ಅರ್ಥವನ್ನು ಅಂಗೀಕರಿಸಬೇಕಾದರೆ, ಆ ಅರ್ಥದಲ್ಲಿ ಆ ಶಬ್ದಕ್ಕೆ ಬಹಳವಾದ ವಿದ್ವತ್‌ಪ್ರಯೋಗವಿದೆಯೇ ಎಂದು ನೋಡಿ ಅಂಗೀಕರಿಸಬೇಕು. ಶಬ್ದಶಕ್ತಿಯಿಂದ ಲಭ್ಯವಾಗುತ್ತದೆ ಎಂಬ ಕಾರಣದಿಂದ ಮನಸ್ಸಿಗೆ ಬಂದಂತೆ ಅರ್ಥವನ್ನು ಸ್ವೀಕರಿಸಬಾರದು.

**ಭಾವವಿಲಾಸಿನೀ–**ಪ್ರಕಾರಾಂತರೇಣಾಪಿ ನಿರ್ಗುಣಪದಸ್ಯ ಹರಿರೇವಾರ್ಥ ಇತ್ಯಾಹ–ವಿದ್ವದಿತಿ ॥ ಪದಲಭ್ಯತ್ವತಃ ಪದಸಮಾಸಲಭ್ಯತ್ವತಃ । ಯದ್ವಾ ತದ್ವಾ ಅಪ್ರಾಮಾಣಿಕಮಿತ್ಯರ್ಥಃ ॥ ೮೫೪ ॥

**ವಿವರಣೆ–** ಈ ಶ್ಲೋಕದಿಂದ ನಿರ್ಗುಣಶಬ್ದಕ್ಕೆ ಶ್ರುತಿಸ್ಮೃತಿಗಳ ಪ್ರಯೋಗಬಲದಿಂದ ಹರಿ ಎಂದೇ ಅರ್ಥಮಾಡಬೇಕೇ ಹೊರತು ಸರ್ವಧರ್ಮರಹಿತನಾದ ಅಖಂಡಚೈತನ್ಯ ಎಂದು ಅರ್ಥಮಾಡಬಾರದು ಎಂದು ಹೇಳಿ ಇದನ್ನು ಮುಂದಿನ ಶ್ಲೋಕದಲ್ಲಿ ದೃಷ್ಟಾಂತದಿಂದ ಉಪಪಾದನೆ ಮಾಡುತ್ತಾರೆ.

**ನಹಿ ಪಂಕಜಶಬ್ದೇನ ಭೇಕಂ ಲೋಕೋಽನುಮನ್ಯತೇ ।**
**ಕಿಂ ವಾ ಸುವರ್ಣಶಬ್ದೇನ ವಹ್ನಿಃ ಕೇನಾಪಿ ಕಥ್ಯತೇ ॥ ೮೫೫ ॥**

**ಅರ್ಥ–** ಲೋಕಃ = ಜನರು, ಪಂಕಜಶಬ್ದೇನ = ಪಂಕಜಶಬ್ದಕ್ಕೆ, ಭೇಕಂ = ಕಪ್ಪೆಯೆಂಬ ಅರ್ಥವನ್ನು, ನಹಿ ಅನುಮನ್ಯತೇ = ಸ್ವೀಕರಿಸುವುದಿಲ್ಲ. ಕಿಂ ವಾ = ಅಥವಾ, ಸುವರ್ಣಶಬ್ದೇನ = ಸುವರ್ಣಶಬ್ದದಿಂದ, ಕೇನಾಪಿ = ಯಾರಿಂದಲೂ, ವಹ್ನಿಃ = ಬೆಂಕಿಯು ಎಂಬ ಅರ್ಥವು, ನ ಕಥ್ಯತೇ = ಹೇಳಲ್ಪಡುವುದಿಲ್ಲ.

**ಅನುವಾದ–** ಪಂಕಜ ಶಬ್ದಕ್ಕೆ ಕಪ್ಪೆ ಎಂದು ಅರ್ಥ ಎಂದು ಯಾರೂ ಅಂಗೀಕರಿಸುವುದಿಲ್ಲ ಅಥವಾ ಸುವರ್ಣಶಬ್ದಕ್ಕೆ ವಹ್ನಿ ಎಂಬ ಅರ್ಥವನ್ನೂ ಯಾರೂ ಅಂಗೀಕರಿಸುವುದಿಲ್ಲ.

**ಭಾವವಿಲಾಸಿನೀ–** ತತ್ರ ದೃಷ್ಟಾಂತಮಾಹ– ನಹೀತಿ ॥ ಪಂಕಾಜ್ಜಾತಃ ಪಂಕಜ ಇತಿ ಯೋಗಸಂಭವೇಽಪಿ ಭೇಕಂ ಮಣ್ಡೂಕಮ್ । ದೃಷ್ಟಾನ್ತಾಂತರಮಾಹ– ಕಿಂಚೇತಿ ॥ ಸುಷ್ಠು ವರ್ಣೋ ಯಸ್ಯೇತಿ ವ್ಯುತ್ಪತ್ತಿಸಂಭವೇಽಪಿ ವಹ್ನಿಃ ಕಥ್ಯತೇ ಕಿಂವೇತಿ ಸಂಬಂಧಃ । ಪದಯೋಗ-ಸಂಭವೇಽಪಿ ಭೇಕಾದೌ ವಿದ್ವತ್ಪ್ರಯೋಗಾಭಾವಾತ್ ನ ತತ್ಪದಂ ಪ್ರಯೋಕ್ತುಂ ಶಕ್ಯತ ಇತಿ ಭಾವಃ ॥ ೮೫೫ ॥

**ವಿವರಣೆ–** ಪಂಕಜ ಎಂದರೆ ಕೆಸರಿನಲ್ಲಿ ಹುಟ್ಟಿದುದು ಎಂದು ಅರ್ಥ. ಕಮಲದಲ್ಲಿ ಆ ಧರ್ಮವಿರುವಂತೆ ಕಪ್ಪೆಯಲ್ಲಿಯೂ ಆ ಧರ್ಮವಿದೆ. ಆದರೆ ಕಮಲದಲ್ಲಿ ಆ ಶಬ್ದದ ಪ್ರಯೋಗವಿದ್ದಂತೆ ಕಪ್ಪೆಯಲ್ಲಿ ಆ ಶಬ್ದದ ವಿದ್ವತ್‌ಪ್ರಯೋಗವಿಲ್ಲ. ಹಾಗೆಯೇ, ಸುವರ್ಣ ಎಂಬ ಶಬ್ದಕ್ಕೆ ಒಳ್ಳೆಯ ಬಣ್ಣವುಳ್ಳದ್ದು ಎಂದು ಅರ್ಥ. ಅಗ್ನಿಯ ಬಣ್ಣವೂ ಚೆನ್ನಾಗಿಯೇ ಇರುತ್ತದೆ. ಆದ್ದರಿಂದ ಸುವರ್ಣಶಬ್ದಕ್ಕೆ ಅಗ್ನಿ ಎಂದು ಅರ್ಥ ಎಂದು ಯಾರೂ ಅಂಗೀಕರಿಸುವುದಿಲ್ಲ. ಏಕೆಂದರೆ ಸುವರ್ಣಶಬ್ದಕ್ಕೆ ಅಗ್ನಿಯಲ್ಲಿ ವಿದ್ವತ್‌ಪ್ರಯೋಗವಿಲ್ಲ. ಹಾಗೆಯೇ, ನಿರ್ಗುಣಶಬ್ದಕ್ಕೆ ಸರ್ವಗುಣರಹಿತವಾದುದು ಎಂದೂ ಅರ್ಥವಾಗಬಹುದು. ಹರಿ ಎಂದೂ ಅರ್ಥವಾಗಬಹುದು. ಹರಿ ಎಂಬ ಅರ್ಥದಲ್ಲಿಯೇ ಶ್ರೌತಸ್ಮಾರ್ತಪ್ರಯೋಗಗಳಿವೆಯೇ ಹೊರತು ಗುಣರಹಿತವಾದ ವಸ್ತು ಎಂಬ ಅರ್ಥದಲ್ಲಿ ಶ್ರೌತಸ್ಮಾರ್ತಪ್ರಯೋಗಗಳಿಲ್ಲ. ಆದ್ದರಿಂದ ನಿರ್ಗುಣ ಶಬ್ದಕ್ಕೆ ಹರಿ ಎಂದೇ ಅರ್ಥಮಾಡಬೇಕು. ಅವನು ಗುಣಪೂರ್ಣನಾದವನು ಎಂಬುದು ಸುಸ್ಪಷ್ಟವಾದುದು.

**ಅಶಬ್ದೇ ತೇ ಪ್ರಯೋಗೋ ನ ಪ್ರಯೋಗಬಹುತಾ ಕುತಃ ॥ ೮೫೬ ॥**

**ಅರ್ಥ–** ತೇ = ನಿನ್ನ ಮತದ ಪ್ರಕಾರ, ಅಶಬ್ದೇ = ಶಬ್ದದಿಂದ ಅವಾಚ್ಯವಾದ ವಸ್ತುವಿನಲ್ಲಿ, ಪ್ರಯೋಗೋ ನ = ಪ್ರಯೋಗವನ್ನೇ ಅಂಗೀಕರಿಸುವುದಿಲ್ಲ ಹೀಗಿರಲು, ಪ್ರಯೋಗ-ಬಹುತಾ = ಪ್ರಯೋಗಬಾಹುಲ್ಯವು, ಕುತಃ = ಎಲ್ಲಿಂದ ಬರಬೇಕು?

**ಅನುವಾದ–** ಶಬ್ದದಿಂದ ಅವಾಚ್ಯವಾದ ವಸ್ತುವಿನಲ್ಲಿ ನೀನು ಪ್ರಯೋಗವನ್ನೇ ಅಂಗೀಕರಿಸುವುದಿಲ್ಲ. ಇನ್ನು ಬಹುಳಪ್ರಯೋಗ ಎಲ್ಲಿಂದ ಬರಬೇಕು?

**ಭಾವವಿಲಾಸಿನೀ–** ಅಶಬ್ದೇ ತೇ ತವ ಶಬ್ದಾವಾಚ್ಯೇ ॥ ೮೫೬ ॥

**ವಿವರಣೆ–** ಅದ್ವೈತಿಗಳು ಅಖಂಡಚೈತನ್ಯವು ಅವಾಚ್ಯವೆಂದು ಹೇಳುತ್ತಾರೆ. ಅವಾಚ್ಯವೆಂದರೆ ಶಬ್ದಪ್ರಯೋಗಕ್ಕೆ ವಿಷಯವೇ ಆಗುವುದಿಲ್ಲ ಎಂದು ಅರ್ಥ. ಆದ್ದರಿಂದ

ಶಬ್ದಪ್ರಯೋಗಕ್ಕೆ ವಿಷಯವೇ ಆಗದಿದ್ದ ವಸ್ತುವು ನಿರ್ಗುಣ ಎಂಬ ಶಬ್ದದ ಪ್ರಯೋಗಕ್ಕೂ ವಿಷಯವಾಗುವುದಿಲ್ಲ. ಇನ್ನು ಒಂದು ಪ್ರಯೋಗಕ್ಕೂ ವಿಷಯವಾಗದಿದ್ದ ವಸ್ತುವು ಬಹು ಪ್ರಯೋಗಕ್ಕೆ ವಿಷಯವಾಗುವುದು ಹೇಗೆ?

**ಶ್ರೌತಸ್ಮಾರ್ತಪ್ರಯೋಗಶ್ಚ ಹರಾವೇವ ಪ್ರದರ್ಶಿತಃ ।**
**ಬಲಾತ್ ತ್ವಯಾ ಸ ನೀತಶ್ಚೇತ್ ಕೂರ್ಮರೋಮ್ಣ್ಯಪರೋ ನಯೇತ್ ॥**
**॥ ೮೫೭ ॥**

**ಅರ್ಥ–** ಶ್ರೌತಸ್ಮಾರ್ತಪ್ರಯೋಗಶ್ಚ = ಶ್ರುತಿ ಮತ್ತು ಸ್ಮೃತಿಯ ಪ್ರಯೋಗಗಳು, ಹರಾವೇವ = ಶ್ರೀಹರಿಯಲ್ಲಿಯೇ, ಪ್ರದರ್ಶಿತಃ = ತೋರಿಸಲ್ಪಟ್ಟಿವೆ. ತ್ವಯಾ = ನಿನ್ನಿಂದ, ಬಲಾತ್ = ಬಲಾತ್ಕಾರದಿಂದ, ಸಃ = ಆ ಶಬ್ದವು, ನೀತಶ್ಚೇತ್ = ಅಖಂಡ ಚೈತನ್ಯದಲ್ಲಿ ತೆಗೆದುಕೊಂಡು ಹೋಗಲ್ಪಟ್ಟರೆ, ಅಪರಃ = ಮತ್ತೊಬ್ಬನು, ಕೂರ್ಮರೋಮ್ಣಿ = ಕೂರ್ಮರೋಮದಲ್ಲಿಯೂ ಆ ಶಬ್ದವನ್ನು, ನಯೇತ್ = ತೆಗೆದುಕೊಂಡು ಹೋದಾನು.

**ಅನುವಾದ– ಶ್ರುತಿಯ ಮತ್ತು ಸ್ಮೃತಿಯ ಪ್ರಯೋಗಗಳು ಹರಿಯಲ್ಲಿಯೇ ಇವೆ ಎಂದು ನಾವು ತೋರಿಸಿದ್ದೇವೆ. ಇಂತಹ ಪ್ರೇಕ್ಷಾವಂತರ ಪ್ರಯೋಗವನ್ನು ವಿಮರ್ಶೆ ಮಾಡದೆ, ಕೇವಲ ಅವಯವಶಕ್ತಿಯ ಬಲದಿಂದ ಅಖಂಡಚೈತನ್ಯದಲ್ಲಿ ತೆಗೆದುಕೊಂಡು ಹೋಗಬಹುದಾದರೆ, ಇನ್ನೊಬ್ಬನು ಕೂರ್ಮರೋಮದಲ್ಲಿ ತೆಗೆದುಕೊಂಡು ಹೋಗಬಹುದು.**

**ಭಾವವಿಲಾಸಿನೀ–** ಪ್ರಯೋಗೋ ದರ್ಶಿತಃ । 'ಏಕೋ ದೇವಃ ಸರ್ವಭೂತೇಷು ಗೂಢಃ' ಇತಿ ಶ್ರುತ್ಯಾ ದೇವತ್ವಾದಿಗುಣವಿಶಿಷ್ಟೇ ಹರಾವೇವ ನಿರ್ಗುಣಪದಶ್ರವಣಾತ್ । 'ಹರಿಸ್ತು ನಿರ್ಗುಣ-ಸ್ಸಾಕ್ಷಾತ್ ಇತಿ ಸ್ಮೃತೌ ಸ್ಪಷ್ಟಂ ಹರಾವೇವ ನಿರ್ಗುಣಪದಪ್ರಯೋಗಾಚ್ಚ । ಸ ನಿರ್ಗುಣಶಬ್ದಃ ಬಲಾತ್ ಪ್ರಯೋಗಮನಪೇಕ್ಷ್ಯ ಕೇವಲಂ ನಿರ್ಗತಾ ಗುಣಾ ಯಸ್ಮಾದಿತಿ ಯೋಗಬಲಾತ್ ನೀತಶ್ಚೇತ್ ಸರ್ವಧರ್ಮಶೂನ್ಯೇ ತವ ಬ್ರಹ್ಮಣಿ ಪ್ರಯುಕ್ತಶ್ಚೇದ್ ಅಪರಃ ತ್ವತ್ಪ್ರತಿವಾದೀ ಕೂರ್ಮ-ರೋಮ್ಣ್ಯಪಿ ನಯೇತ್ ಸರ್ವಧರ್ಮಶೂನ್ಯೇ ತುಚ್ಛೇಽಪಿ ಸುವಚತ್ವಾತ್ । ವಿದ್ವತ್ಪ್ರಯೋಗಾ-ಭಾವಾತ್, ನ ತನ್ನಿರ್ಗುಣಪದಾರ್ಥ ಇತಿ ಚೇತ್ ಸಮಂ ಪ್ರಕೃತೇಽಪೀತಿ ಭಾವಃ ॥ ೮೫೭ ॥

**ವಿವರಣೆ–** 'ಏಕೋ ದೇವಃ ಸರ್ವಭೂತೇಷು ಗೂಢಃ' ಎಂಬುದು ಶ್ರುತಿ. 'ಹರಿಸ್ತು ನಿರ್ಗುಣಃ ಸಾಕ್ಷಾತ್' ಎಂಬುದು ಸ್ಮೃತಿ. ಇವುಗಳನ್ನು ಹಿಂದೆಯೇ ತೋರಿಸಿದ್ದಾರೆ. ಅಂತಹ ಹರಿಯನ್ನು ಬಿಟ್ಟು ನಿರ್ಗುಣಶಬ್ದಕ್ಕೆ ಗುಣಶೂನ್ಯನಾದವನು ಎಂಬ ಅರ್ಥವನ್ನು ಇಟ್ಟುಕೊಂಡು ಅಖಂಡಚೈತನ್ಯ ಎಂಬ ಅರ್ಥವನ್ನು ತೆಗೆದುಕೊಳ್ಳುವುದಾದರೆ, ಕೂರ್ಮರೋಮವು ಗುಣಶೂನ್ಯವಾದ ಕಾರಣದಿಂದ ಇನ್ನೊಬ್ಬನು ಕೂರ್ಮರೋಮವೇ ನಿರ್ಗುಣ ಶಬ್ದಾರ್ಥ ಎಂದು ಹೇಳಬಹುದು. ಎರಡೂ ಅಪ್ರಾಮಾಣಿಕ. ಎರಡೂ

ಗುಣಶೂನ್ಯ. ಕೂರ್ಮರೋಮದಲ್ಲಿ ವಿದ್ವತ್‌ಪ್ರಯೋಗವು ಇಲ್ಲವಾದ ಕಾರಣ ಕೂರ್ಮರೋಮವು ನಿರ್ಗುಣಶಬ್ದಾರ್ಥವಾಗುವುದಿಲ್ಲ ಎಂದು ಹೇಳಿದರೆ, ಅಖಂಡಚೈತನ್ಯದಲ್ಲಿಯೂ, ವಿದ್ವತ್‌ಪ್ರಯೋಗವಿಲ್ಲವಾದ ಕಾರಣ ಅದೂ ನಿರ್ಗುಣ ಶಬ್ದಾರ್ಥವಾಗುವುದಿಲ್ಲ ಎಂದು ನಮ್ಮ ಉತ್ತರ.

**ತತ್ತತ್ಪದಾರ್ಥಸಾಮರ್ಥ್ಯಾನುಪಮರ್ದೇನ ಶಬ್ದತಃ ।**
**ಅರ್ಥೋ ಬೋಧ್ಯೋ ನ ಶಬ್ದಸ್ಯ ಸತ್ತ್ವಾದರ್ಥೋಪಮರ್ದನಮ್ ॥೮೫೮॥**

**ಅರ್ಥ–** ತತ್ತತ್ಪದಾರ್ಥಸಾಮರ್ಥ್ಯಾನುಪಮರ್ದೇನ= ಆಯಾ ಪದಾರ್ಥಗಳ ಸಾಮರ್ಥ್ಯ, ಸ್ವರೂಪಗುಣ ಧರ್ಮಗಳನ್ನು ಹಾಳುಮಾಡದಂತೆ, ಶಬ್ದತಃ= ಶಬ್ದದಿಂದ, ಅರ್ಥಃ= ಅರ್ಥವು, ಬೋಧ್ಯಃ = ತಿಳಿಯಲ್ಪಡಬೇಕೇ ಹೊರತು, ಶಬ್ದಸ್ಯ ಸತ್ತ್ವಾತ್ = ಶಬ್ದ ಇದೆ ಎಂಬ ಕಾರಣದಿಂದ, ಅರ್ಥೋಪಮರ್ದನಂ= ಅರ್ಥದ ಅಪಲಾಪವನ್ನು, ನ= ಮಾಡಬಾರದು.

**ಅನುವಾದ–** ಆಯಾ ಪದಾರ್ಥಗಳ ಸಾಮರ್ಥ್ಯ, ಸ್ವರೂಪಗುಣಧರ್ಮಗಳನ್ನು ಹಾಳುಮಾಡದಂತೆ ಶಬ್ದದಿಂದ ಅರ್ಥವು ತಿಳಿಯಲ್ಪಡಬೇಕೇ ಹೊರತು, ಶಬ್ದ ಇದೆ ಎಂಬ ಕಾರಣದಿಂದ ಅರ್ಥದ ಅಪಲಾಪವನ್ನು ಮಾಡಬಾರದು.

**ಭಾವವಿಲಾಸಿನೀ–** ನನ್ವಸ್ತು ಹರೌ ನಿರ್ಗುಣಪದಪ್ರಯೋಗಃ, ತಥಾಪಿ ತೇನೈವ ತಸ್ಮಿನ್ ಸರ್ವ-ಧರ್ಮಶೂನ್ಯತ್ವರೂಪೋಽರ್ಥೋಽಪಿ ಸೇತ್ಸ್ಯತೀತ್ಯತ ಆಹ– **ತತ್ತತ್ಪದಾರ್ಥೇತಿ** ॥ ೮೫೮ ॥

**ಗುರೌ ಗುರುಪದಂ ಹಿ ಸ್ಯಾದುಪದೇಶಾದಿಕೈರ್ಗುಣೈಃ ।**
**ಭಾರೇಣ ತು ಶಿಲಾಯಾಂ ಸ್ಯಾತ್ ಕಲ್ಪನಾಯಾಂ ಬಹುತ್ವತಃ ॥ ೮೫೯ ॥**

**ಅರ್ಥ–** ಉಪದೇಶಾದಿಕೈಃ ಗುಣೈಃ= ಉಪದೇಶ ಮೊದಲಾದ ಗುಣಗಳಿಂದ, ಗುರೌ= ಗುರುವಿನಲ್ಲಿ, ಗುರುಪದಂ = ಗುರುವೆಂಬ ಪದವು, ಸ್ಯಾತ್ ಹಿ= ಸಾಧುವಾಗಿದೆಯಷ್ಟೆ. ಶಿಲಾಯಾಂ ತು= ಶಿಲೆಯಲ್ಲಿಯಾದರೂ, ಭಾರೇಣ= ಭಾರದಿಂದ, ಗುರುಪದಂ ಸ್ಯಾತ್= ಗುರು ಎಂಬ ಪದವು ಹೇಳಲ್ಪಡುತ್ತದೆ. ಕಲ್ಪನಾಯಾಂ ಬಹುತ್ವತಃ= ಕಲ್ಪನೆಯಲ್ಲಿ ಬಹುತ್ವದಿಂದ. (ಗುರುತ್ವಂ ಸ್ಯಾತ್)= ಗುರುಪದವು ಪ್ರಯೋಗಿಸಲ್ಪಡುತ್ತದೆ.

**ಅನುವಾದ–** ಗುರು ಎಂಬ ಶಬ್ದಪ್ರಯೋಗವು ಗುರುವಿನಲ್ಲೂ ಇದೆ, ಶಿಲೆಯಲ್ಲಿಯೂ ಇದೆ, ಕಲ್ಪನೆಯಲ್ಲಿಯೂ ಇದೆ. ಗುರುವಿನಲ್ಲಿ ಉಪದೇಶಾದಿಗುಣಗಳಿಂದ ಗುರುತ್ವವು ಹೇಳಲ್ಪಡುತ್ತದೆ. ಶಿಲೆಯಲ್ಲಿ ಭಾರದಿಂದ ಗುರುತ್ವವು ಹೇಳಲ್ಪಡುತ್ತದೆ. ಕಲ್ಪನೆಯಲ್ಲಿ ಬಹುತ್ವದಿಂದ ಗುರುತ್ವವು ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ತತ್ರ ದೃಷ್ಟಾಂತಮಾಹ– **ಗುರಾವಿತಿ** ॥ ಉಪದೇಷ್ಟರಿ ಗುರೌ ಪ್ರಯುಕ್ತಂ ಗುರುಪದಂ ತಸ್ಮಿನ್ ವಿದ್ಯಾಭಾವಾಖ್ಯಲಾಘವಮೇವ ಪ್ರತಿಷೇಧತಿ । ನತು ತದ್ಗತಭಾರಾಭಾವಾಖ್ಯಲಾಘವಮಪ್ಯುಪಮರ್ದಯತಿ । ನಾಪ್ಯೇಕತ್ವರೂಪಲಾಘವಮ್ । ಶಿಲಾಯಾಂ ಚ ಪ್ರವೃತ್ತಂ ಗುರುಪದಂ ತಸ್ಯಾಂ ಭಾರಾಭಾವಾಖ್ಯಲಾಘವಮೇವ ಪ್ರತಿಷೇಧತಿ । ನತು ತನ್ನಿಷ್ಠವಿದ್ಯಾಭಾವಾಖ್ಯಲಾಘವಮಪ್ಯುಪಮರ್ದಯತಿ । ನಾಪ್ಯೇಕತ್ವರೂಪಲಾಘವಮ್ । ಕಲ್ಪನಾಯಾಂ ಚ ಪ್ರಯುಕ್ತಂ ಗುರುಪದಂ ತಸ್ಯಾಮೇಕತ್ವರೂಪಲಾಘವಮೇವ ಪ್ರತಿಷೇಧತಿ । ನ ಪುನರ್ವಿದ್ಯಾಭಾವಾಖ್ಯಲಾಘವಂ ಭಾರಾಭಾವರೂಪಲಾಘವಂ ಚೋಪಮರ್ದಯತಿ । ಏವಂ ಹರೌ ಪ್ರಯುಕ್ತಂ ನಿರ್ಗುಣಪದಮಪಿ ಸಙ್ಕೋಚಮಾಶ್ರಿತ್ಯ ತಸ್ಯಾಯೋಗ್ಯಗುಣತ್ರಯಮೇವ ನಿಷೇಧತಿ । ನತು ತದ್ಗತಸಾರ್ವಜ್ಞಾದಿಗುಣಮಪ್ಯುಪಮರ್ದಯತೀತಿ ಭಾವಃ । ಕಥಮನ್ಯಥಾ ಅಪಶೂದ್ರಾಧಿಕರಣೇ ಕ್ಷತ್ರಿಯೇ ಪ್ರಯುಕ್ತಶೂದ್ರಶಬ್ದೇನ ನ ತದ್ಗತಕ್ಷತ್ರಿಯತ್ವೋಪಮರ್ದನಮ್ ॥ ೮೫ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ವಿಷಯವನ್ನು ಒಂದು ದೃಷ್ಟಾಂತದಿಂದ ಉಪಪಾದನೆ ಮಾಡುತ್ತಾರೆ. ಗುರುವಿನಲ್ಲಿ ಗುರುಶಬ್ದ ಪ್ರಯೋಗವಿದೆ. ಅದು ತುಂಬಾ ವಿದ್ಯೆಯುಳ್ಳವನು ಎಂಬ ಅರ್ಥವನ್ನು ಕೊಡುತ್ತದೆ. ಈ ಗುರುತ್ವವು ಲಾಘವವನ್ನು ವಿರೋಧಿಸುತ್ತದೆ. ಗುರುವಿನಲ್ಲಿ ವಿದ್ಯಾಭಾವಪ್ರಯುಕ್ತವಾದ ಲಾಘವ, ಭಾರ ಇಲ್ಲದ ಪ್ರಯುಕ್ತ ಲಾಘವ ಮತ್ತು ಏಕತ್ವಪ್ರಯುಕ್ತವಾದ ಲಾಘವ ಎಂದು ಮೂರು ಲಾಘವಗಳಿವೆ. ವಿದ್ಯಾಪ್ರಯುಕ್ತ ಗುರುತ್ವವು ವಿದ್ಯಾಭಾವಪ್ರಯುಕ್ತ ಲಾಘವವನ್ನು ಮಾತ್ರ ವಿರೋಧಿಸುತ್ತದೆಯೇ ಹೊರತು ಉಳಿದ ಎರಡು ಲಾಘವಗಳನ್ನು ವಿರೋಧಿಸುವುದಿಲ್ಲ. ಹಾಗೆಯೇ, ಶಿಲೆಯಲ್ಲಿ ಪ್ರಯೋಗಿಸುವ ಗುರುಪದವು ಅದರಲ್ಲಿ ಭಾರಾಭಾವರೂಪವಾದ ಲಾಘವವನ್ನು ಪ್ರತಿಷೇಧ ಮಾಡುತ್ತದೆಯೇ ಹೊರತು ಅದರಲ್ಲಿರುವ ವಿದ್ಯಾಭಾವರೂಪವಾದ ಲಾಘವವನ್ನಾಗಲೀ ಅಥವಾ ಏಕತ್ವರೂಪ ಲಾಘವವನ್ನಾಗಲೀ ಪ್ರತಿಷೇಧ ಮಾಡುವುದಿಲ್ಲ. ಕಲ್ಪನೆಯಲ್ಲಿ ಪ್ರಯೋಗಿಸಿದ ಗುರುಶಬ್ದವು ಅಲ್ಲಿ ಏಕತ್ವರೂಪವಾದ ಲಾಘವವನ್ನು ಮಾತ್ರ ಪ್ರತಿಷೇಧ ಮಾಡುತ್ತದೆ. ವಿದ್ಯಾಭಾವರೂಪವಾದ ಲಾಘವವನ್ನಾಗಲೀ, ಭಾರಾಭಾವರೂಪವಾದ ಲಾಘವವನ್ನಾಗಲೀ ಪ್ರತಿಷೇಧ ಮಾಡುವುದಿಲ್ಲ. ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ವಸ್ತುಗಳು ಗುರುತ್ವಕ್ಕೆ ವಿರೋಧಿಗಳಾದರೂ ಅಲ್ಲಿ ಸಂಕೋಚವನ್ನು ಮಾಡಿಕೊಂಡು ತನಗೆ ವಿರೋಧಿಯಾದ ಲಾಘವವನ್ನು ಮಾತ್ರ ನಿಷೇಧಿಸುತ್ತದೆ. ಉಳಿದ ಲಾಘವಗಳನ್ನು ನಿಷೇಧಿಸುವುದಿಲ್ಲ. ಹಾಗೆಯೇ, ನಿರ್ಗುಣಶಬ್ದವು ಹರಿಯಲ್ಲಿ ಪ್ರಯುಕ್ತವಾದಾಗ ಅಲ್ಲಿ ಪ್ರತಿಷೇಧಿಸಲು ಯೋಗ್ಯವಾದ ಗುಣತ್ರಯವನ್ನು ಮಾತ್ರ ನಿಷೇಧ ಮಾಡುತ್ತದೆಯೇ ಹೊರತು ಅಲ್ಲಿರುವ ಸಾರ್ವಜ್ಞಾದಿಗುಣಗಳನ್ನು ನಿಷೇಧಮಾಡುವುದಿಲ್ಲ. ಹಾಗಿಲ್ಲದಿದ್ದರೆ, ಅಪಶೂದ್ರಾಧಿಕರಣದಲ್ಲಿ ಕ್ಷತ್ರಿಯನಲ್ಲಿ ಪ್ರಯುಕ್ತವಾದ ಶೂದ್ರಶಬ್ದವು ಶೂದ್ರತ್ವ ವಿರೋಧಿಯಾದ ಕ್ಷತ್ರಿಯತ್ವವನ್ನು ಅವನಲ್ಲಿ ಏಕೆ ನಿಷೇಧ ಮಾಡುವುದಿಲ್ಲ?

**ಕನ್ಯಕಾಽನುದರೇತ್ಯುಕ್ತೇ ಕಾಷ್ಠಂ ಸಂಯೋಜಯಂತಿ ಕಿಮ್ ॥ ೮೬೦ ॥**

**ಅರ್ಥ–** ಕನ್ಯಕಾನುದರಾ ಇತ್ಯುಕ್ತೇ = ಕನ್ಯೆಯು ಅನುದರಾ ಎಂದರೆ, ಕಾಷ್ಠಂ = ಕಟ್ಟಿಗೆಯನ್ನು ಯಾರಾದರೂ, ಸಂಯೋಜಯಂತಿ ಕಿಮ್= ಜೋಡಿಸುತ್ತಾರೆಯೇ?

**ಅನುವಾದ– ಕನ್ಯೆಯು ಅನುದರಳು ಎಂದರೆ ಯಾರಾದರೂ ಕಟ್ಟಿಗೆಯನ್ನು ಜೋಡಿಸುತ್ತಾರೆಯೇ?**

**ಭಾವವಿಲಾಸಿನೀ–** ಸ್ಪಷ್ಟಂ ದೃಷ್ಟಾಂತಮಾಹ– **ಕನ್ಯಕೇತಿ** ॥ ಕನ್ಯಕಾಽನುದರೇತ್ಯುಕ್ತೇ ನಿರ್ಗುಣಪದಸತ್ತ್ವೇನ ಸರ್ವಥಾ ಗುಣಶೂನ್ಯತ್ವವತ್ ಅನುದರಪದಸಾಮರ್ಥ್ಯೇನ ಸರ್ವಥಾ ಉದರಾಭಾವಮರ್ಥಂ ಪರಿಕಲ್ಪ್ಯ ಮೃತೇತಿ ದಾಹಾರ್ಥಂ ಕಾಷ್ಠಂ ಸಂಯೋಜಯನ್ತಿ ಕಿಮಿತ್ಯುಪಹಾಸಃ । ಕಿಂತೂದರಶಬ್ದಸ್ಯ ಸಂಕೋಚಮಾಶ್ರಿತ್ಯ ಪ್ರತೀತೋದರಾನುಪಮರ್ದೇನ ಸ್ಥೂಲೋದರಾಭಾವಮೇವಾರ್ಥಂ ಕಲ್ಪಯಂತಿ । ತಥಾ ನಿರ್ಗುಣಪದಸ್ಯಾಪಿ ಸಂಕೋಚಮಾಶ್ರಿತ್ಯ ಶ್ರೌತಸಾರ್ವಜ್ಞಾದಿಗುಣಾನುಪಮರ್ದನೇನ ಗುಣತ್ರಯಶೂನ್ಯತ್ವ-ಮೇವಾರ್ಥೋ ವಕ್ತವ್ಯ ಇತಿ ಭಾವಃ ॥ ೮೬೦ ॥

**ವಿವರಣೆ–** ಈ ಶ್ಲೋಕದಲ್ಲಿ ಸ್ಪಷ್ಟವಾದ ಇನ್ನೊಂದು ದೃಷ್ಟಾಂತವನ್ನು ಹೇಳುತ್ತಾರೆ. ಅನುದರಾ ಎಂಬ ಶಬ್ದಕ್ಕೆ ಉದರಾಭಾವ ಎಂದು ಅರ್ಥ. ಅದು ಬದುಕಿರುವವರೆಗೆ ಸಾಧ್ಯವಿಲ್ಲ. ಆದ್ದರಿಂದ ಕನ್ಯಾ ಅನುದರಾ ಎಂದರೆ ಪ್ರತೀತವಾದ ಉದರವನ್ನೇ ನಿಷೇಧಿಸದೆ, ಉದರದಸ್ಥೌಲ್ಯವನ್ನು ಮಾತ್ರ ನಿಷೇಧಿಸುತ್ತಾರೆ. ಹೊರತಾಗಿ, ಅನುದರಾ ಎಂದ ತಕ್ಷಣ ಯಾರೂ ಮೃತಳೆಂದು ತಿಳಿದು ಚಿತೆಯನ್ನು ನಿರ್ಮಾಣ ಮಾಡುವುದಿಲ್ಲ. ಹಾಗೆಯೇ, ನಿರ್ಗುಣಶಬ್ದವೂ ಸಹ ಪ್ರತೀತವಾದ ಸಾರ್ವಜ್ಞಾದಿ ಗುಣಗಳನ್ನು ಬಿಟ್ಟು ಪ್ರಕೃತಿಯ ಗುಣತ್ರಯಗಳನ್ನು ಮಾತ್ರ ಸ್ವೀಕರಿಸಿ ಅದನ್ನು ನಿಷೇಧ ಮಾಡುತ್ತದೆ.

**ಅಶೋಭನಗುಣೈಃ ಪೂರ್ಣೇ ಪ್ರಯುಕ್ತಾ ನಿರ್ಗುಣಾಭಿಧಾ ।**
**ಸುಶೋಭನಗುಣಾನೇವ ನಿಷೇಧತಿ ನ ತಾನ್ ಗುಣಾನ್ ॥ ೮೬೧ ॥**

**ಸುಶೋಭನಗುಣೈಃ ಪೂರ್ಣೇ ಪ್ರಯುಕ್ತಂ ತತ್ಪದಂ ಹರೌ ।**
**ಅಶೋಭನಗುಣಾನೇವ ನಿಷೇಧತಿ ನ ಶೋಭನಾನ್ ॥ ೮೬೨ ॥**

**ಅರ್ಥ–** ಅಶೋಭನಗುಣೈಃ ಪೂರ್ಣೇ= ದುರ್ಗುಣಗಳಿಂದ ಪೂರ್ಣನಾದ ವ್ಯಕ್ತಿಯಲ್ಲಿ, ಪ್ರಯುಕ್ತಾ ನಿರ್ಗುಣಾಭಿಧಾ= ಪ್ರಯೋಗಿಸಲ್ಪಡುವ ನಿರ್ಗುಣ ಎಂಬ ಶಬ್ದವು, ಸುಶೋಭನಗುಣಾನೇವ = ಶುಭಗುಣಗಳನ್ನೇ, ನಿಷೇಧತಿ= ನಿರಾಕರಿಸುತ್ತದೆ. ತಾನ್ ಗುಣಾನ್= ಆ ದುರ್ಗುಣಗಳನ್ನು, ನ ನಿಷೇಧತಿ= ನಿಷೇಧಿಸುವುದಿಲ್ಲ. ಆದರಂತೆ, ಸುಶೋಭನಗುಣೈಃ ಪೂರ್ಣೇ = ಶುಭಗುಣಪೂರ್ಣನಾದ, ಹರೌ = ಶ್ರೀಹರಿಯಲ್ಲಿ,

ಪ್ರಯುಕ್ತಂ = ಪ್ರಯೋಗಿಸಲ್ಪಟ್ಟ ತತ್ಪದಂ= ನಿರ್ಗುಣ ಎಂಬ ಪದವು ಅಲ್ಲಿ ಅಶೋಭನಗುಣಾನೇವ= ಅಶೋಭನವಾದ ಗುಣಗಳನ್ನೇ, ನಿಷೇಧತಿ = ನಿಷೇಧಿಸುತ್ತದೆಯೇ ಹೊರತು, ಶೋಭನಾನ್ ನ= ಶುಭಗುಣಗಳನ್ನು ನಿಷೇಧಿಸುವುದಿಲ್ಲ.

**ಅನುವಾದ–** **ದುರ್ಗುಣಗಳಿಂದ ಪೂರ್ಣನಾದವನನ್ನು ಅವನು ನಿರ್ಗುಣ ಎಂದು ಹೇಳಿದರೆ ಅವನಲ್ಲಿ ಶುಭಗುಣಗಳು ಇಲ್ಲ ಎಂದು ಅರ್ಥ. ಅಲ್ಲಿ ನಿರ್ಗುಣ ಶಬ್ದವು ಶುಭಗುಣಗಳನ್ನೇ ನಿಷೇಧ ಮಾಡುತ್ತದೆಯೇ ಹೊರತಾಗಿ ಅಲ್ಲಿರುವ ದುರ್ಗುಣ-ಗಳನ್ನು ನಿಷೇಧ ಮಾಡುವುದಿಲ್ಲ. ಶುಭಗುಣಪೂರ್ಣನಾದವನಲ್ಲಿ ಪ್ರಯೋಗಿಸಲ್ಪಟ್ಟ ನಿರ್ಗುಣ ಶಬ್ದವು ಅಲ್ಲಿ ದುರ್ಗುಣಗಳನ್ನೇ ನಿಷೇಧ ಮಾಡುತ್ತದೆಯೇ ಹೊರತಾಗಿ ಶುಭಗುಣವನ್ನು ನಿಷೇಧ ಮಾಡುವುದಿಲ್ಲ.**

**ಭಾವವಿಲಾಸಿನೀ–** ಅಧುನಾ ನಿರ್ಗುಣಪದಸ್ಯೈವ ಗುಣಿನಿಷ್ಠಗುಣಾನುಪಮರ್ದಕತಾಂ ತತ್ರಾ-ವಿದ್ಯಮಾನಗುಣನಿಷೇಧಕತ್ವಂ ಚ ಸಾರ್ವಜನೀನಪ್ರಯೋಗೇನ ಲೋಕೇ ಪ್ರದರ್ಶ್ಯ ಹರಾ-ವಪಿ ಯೋಜಯತಿ– **ಅಶೋಭನೇತಿ** ॥ ಅಶೋಭನಗುಣೈಃ ಪೂರ್ಣೇ ದುರ್ಜನ-ಬಾಲಕಾದೌ ॥ ೮೬೧-೮೬೨ ॥

**ವಿವರಣೆ–** ಇನ್ನು ನಿರ್ಗುಣಪದದಿಂದಲೇ ಧರ್ಮಿಯಲ್ಲಿರುವ ಗುಣಗಳನ್ನು ನಿಷೇಧ ಮಾಡದೆ, ಅಲ್ಲಿ ಇಲ್ಲದಿರುವ ಗುಣದ ನಿಷೇಧವೇ ಸಿದ್ಧವಾಗುತ್ತದೆ ಎಂಬುದು ಎಲ್ಲಾ ಲೌಕಿಕ ಪ್ರಯೋಗಗಳಿಂದಲೂ ಸಿದ್ಧವಾಗುತ್ತದೆ ಎಂದು ತಿಳಿಸಿ ಅದನ್ನು ಹರಿಯಲ್ಲಿಯೂ ಯೋಜಿಸುತ್ತಾರೆ.

ದುರ್ಜನರನ್ನಾಗಲೀ ಅಥವಾ ಬಾಲಕನನ್ನಾಗಲೀ, ಅವನು ನಿರ್ಗುಣನೆಂದು ಹೇಳಿದರೆ, ದುರ್ಜನರಲ್ಲಿ ಯಾವ ಗುಣವೂ ಇಲ್ಲವೆಂದು ಅರ್ಥವಲ್ಲ. ದುರ್ಗುಣಗಳು ಇದ್ದೇ ಇವೆ. ಸದ್ಗುಣಗಳನ್ನು ಮಾತ್ರ ನಿಷೇಧಮಾಡುತ್ತೇವೆ. ಹಾಗೆಯೇ, ಸದ್ಗುಣನಾದ ಹರಿಯಲ್ಲಿ ಶ್ರುತಿಸ್ಮೃತಿಗಳಲ್ಲಿ ಪ್ರಯೋಗಿಸಲ್ಪಟ್ಟ ನಿರ್ಗುಣಶಬ್ದವು ಅವನಲ್ಲಿ ಇಲ್ಲದಿರುವ ದುರ್ಗುಣಗಳನ್ನು ಮಾತ್ರವೇ ನಿಷೇಧ ಮಾಡುತ್ತದೆಯೇ, ಹೊರತಾಗಿ ಸದ್ಗುಣಗಳನ್ನು ನಿಷೇಧ ಮಾಡುವುದಿಲ್ಲ.

**ಯಸ್ಮಾತ್ ತತ್ಪುರುಷಃ ಶ್ರೇಷ್ಠಃ ತಸ್ಮಾದಗುಣಸಂಜ್ಞಯಾ ।**
**ಗುಣೋಽಪ್ರಧಾನೋ ನೇತೀಶೇ ಪ್ರೋಕ್ತಾ ಸರ್ವಪ್ರಧಾನತಾ ॥ ೮೬೩ ॥**

**ಅರ್ಥ–** ಯಸ್ಮಾತ್= ಯಾವ ಕಾರಣದಿಂದ, ತತ್ಪುರುಷಃ= ತತ್ಪುರುಷ ಸಮಾಸವು, ಶ್ರೇಷ್ಠಃ= ಬಹುವ್ರೀಹಿಗಿಂತಲೂ ಶ್ರೇಷ್ಠವಾಗಿದೆಯೋ, ತಸ್ಮಾತ್= ಆ ಕಾರಣದಿಂದ, ಅಗುಣಸಂಜ್ಞಯಾ= ಅಗುಣಃ ಎಂಬ ಶಬ್ದದಿಂದ, ಗುಣಃ= ಅಪ್ರಧಾನೋ ನ=

ಅಪ್ರಧಾನನಲ್ಲ ಇತಿ= ಎಂದು, ಈಶೇ= ಈಶನಲ್ಲಿ, ಸರ್ವಪ್ರಧಾನತಾ= ಸರ್ವಪ್ರಾಧಾನ್ಯವೇ, ಉಕ್ತಾ= ಹೇಳಲ್ಪಟ್ಟಿದೆ.

**ಅನುವಾದ–** **ಬಹುವ್ರೀಹಿ ಸಮಾಸಕ್ಕಿಂತಲೂ ತತ್ಪುರುಷ ಸಮಾಸವು ಶ್ರೇಷ್ಠವಾದುದರಿಂದ 'ಗುಣೋ ನ' - 'ಅಪ್ರಧಾನನಲ್ಲ' ಎಂದು ಹೇಳಿ ಹರಿಯಲ್ಲಿ ಸರ್ವಪ್ರಾಧಾನ್ಯವೇ ಸಿದ್ಧವಾಗುತ್ತದೆ.**

**ಭಾವವಿಲಾಸಿನೀ– ಕಿಂಚ ನ ವಿದ್ಯಂತೇ ಗುಣಾ ಯಸ್ಯೇತಿ ಸಮಾಸಾದಪಿ ಗುಣೋ ನ ಭವತೀತಿ ತತ್ಪುರುಷಸ್ಯ ಪ್ರಬಲತ್ವಾತ್ ಗುಣಶಬ್ದಸ್ಯಾಪ್ರಧಾನಾರ್ಥಕತ್ವಾಚ್ಚ ಅಗುಣನಿರ್ಗುಣಾದಿಶಬ್ದೈಃ ಸರ್ವೋತ್ತಮೋ ಹರಿರಿತಿ ಸೇತ್ಸ್ಯತೀತ್ಯಾಹ– ಯಸ್ಮಾದಿತಿ ॥ ೮೬೩ ॥**

**ವಿವರಣೆ–** ಹರಿಯಲ್ಲಿ ಗುಣಾಭಾವವನ್ನು ಹೇಳುವ ಅಗುಣಶಬ್ದಕ್ಕೆ ಎರಡು ರೀತಿಯಲ್ಲಿ ವಿಗ್ರಹವನ್ನು ತೋರಿಸಬಹುದು. 'ನ ಗುಣಃ ಅಗುಣಃ' ಎಂದು ತತ್ಪುರುಷ ಸಮಾಸದ ವಿಗ್ರಹ. 'ನ ವಿದ್ಯತೇ ಗುಣಃ ಯಸ್ಮಿನ್' ಎಂದು ಬಹುವ್ರೀಹಿ ಸಮಾಸದ ವಿಗ್ರಹ. ಬಹುವ್ರೀಹಿ ಸಮಾಸವನ್ನು ಮಾಡಿದರೆ ಮಾತ್ರ ಗುಣಾಭಾವವು ಸಿದ್ಧವಾಗುತ್ತದೆ. ತತ್ಪುರುಷ ಸಮಾಸವನ್ನು ಮಾಡಿದರೆ, ಗುಣನಲ್ಲ ಎಂದು ಇಷ್ಟೇ ಸಿದ್ಧವಾಗುತ್ತದೆ. ಗುಣ ಎಂದರೆ ಅಪ್ರಧಾನ ಎಂಬ ಅರ್ಥವಿದೆ. ಅಪ್ರಧಾನನಲ್ಲ ಎಂದು ಹೇಳಿದರೆ, ಸರ್ವಪ್ರಾಧಾನ್ಯವೇ ಸಿದ್ಧವಾಗುತ್ತದೆ. ಬಹುವ್ರೀಹಿಸಮಾಸವು ಅನ್ಯಪದಾರ್ಥಪ್ರಧಾನವಾದುದರಿಂದ ಸ್ವಪದಾರ್ಥಪ್ರಧಾನವಾದ ತತ್ಪುರುಷ ಸಮಾಸಕ್ಕಿಂತಲೂ ಜಘನ್ಯವಾದುದು ಎಂದು ಗ್ರಾಂಥಿಕರು ಹೇಳುವುದರಿಂದ ನೀಚವಾದ ಬಹುವ್ರೀಹಿಯನ್ನು ಬಿಟ್ಟು ಉತ್ತಮವಾದ ತತ್ಪುರುಷವನ್ನೇ ಆಶ್ರಯಿಸಿ ಹರಿಯ ಸರ್ವಪ್ರಾಧಾನ್ಯವನ್ನೇ ಅಗುಣಶಬ್ದವು ಹೇಳುತ್ತದೆ.

**ಅಪ್ರಧಾನಂ ಜಗದಿದಂ ಸೃಷ್ಟೌ ಯಸ್ಮಾದ್ ವಿನಿರ್ಗತಮ್ ।**
**ಸ ನಿರ್ಗುಣೋ ಹರಿಃ ಸರ್ವಸ್ರಷ್ಟೃತ್ವಾಖ್ಯಮಹಾಗುಣಃ ॥ ೮೬೪ ॥**

**ಅರ್ಥ–** ಅಥವಾ, ಯಸ್ಮಾತ್= ಯಾವ ಪರಮಾತ್ಮನಿಂದ, ಸೃಷ್ಟೌ = ಸೃಷ್ಟಿಯಲ್ಲಿ, ಅಪ್ರಧಾನಂ= ಅಪ್ರಧಾನವಾದ, ಇದಂ= ಈ, ಜಗತ್= ಜಗತ್ತು, ವಿನಿರ್ಗತಮ್= ಹೊರಹೊಮ್ಮಿತೋ, ಸಃ= ಆ, ಹರಿಃ= ಹರಿಯು, ನಿರ್ಗುಣಃ= ನಿರ್ಗುಣನು, ಅರ್ಥಾತ್, ಸರ್ವಸ್ರಷ್ಟೃತ್ವಾಖ್ಯಮಹಾಗುಣಃ= ಜಗಜ್ಜನ್ಮಕರ್ತೃತ್ವರೂಪವಾದ ಮಹಾಗುಣವುಳ್ಳವನು.

**ಅನುವಾದ–** **ನಿರ್ಗುಣ ಎಂಬ ಶಬ್ದಕ್ಕೆ 'ನಿರ್ಗತಃ ಗುಣಃ ಯಸ್ಮಾತ್' ಎಂದು ವಿಗ್ರಹವನ್ನು ಮಾಡಿ, ಗುಣ ಎಂದರೆ ಅಪ್ರಧಾನವಾದ ಈ ವಿಶ್ವವು ಯಾವನಿಂದ ಹೊರಗೆ ಬಂದಿದೆಯೋ ಅವನು ನಿರ್ಗುಣ ಎಂದು ಅರ್ಥಮಾಡಿದರೂ, ಹರಿಯು ಜಗಜನ್ಮಕರ್ತೃತ್ವರೂಪವಾದ ಮಹಾಗುಣವುಳ್ಳವನು ಎಂದು ಸಿದ್ಧವಾಗುತ್ತದೆ.**

**ಭಾವವಿಲಾಸಿನೀ–** ಅಸ್ತು ವಾ ಬಹುವ್ರೀಹಿಃ । ತಥಾಪಿ ನಿರ್ಗತಾಃ ಸೃಷ್ಟಿಕಾಲೇ ಉದರಾದ್ ಬಹಿಷ್ಕೃತಾಃ ಗುಣಾಃ ಅಪ್ರಧಾನಭೂತಾಃ ಬ್ರಹ್ಮಾದ್ಯಾ ಯಸ್ಮಾದಿತಿ ವ್ಯುತ್ಪತ್ತ್ಯಾ ನಿರ್ಗುಣಪದೇನ್ಯೆವ ಗುಣಸಿದ್ಧಿರಿತ್ಯಾಹ– **ಅಪ್ರಧಾನಮಿತಿ** ॥ ೮೬೪ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಬಹುವ್ರೀಹಿಸಮಾಸಕ್ಕಿಂತ ತತ್ಪುರುಷವು ಶ್ರೇಷ್ಠವಾದ್ದರಿಂದ ತತ್ಪುರುಷವನ್ನು ಆಶ್ರಯಿಸಿ ಹರಿಯು ಸರ್ವಪ್ರಧಾನ ಎಂದು ಅರ್ಥಮಾಡಬೇಕು ಎಂದು ಹೇಳಿದರು. ಈ ಶ್ಲೋಕದಲ್ಲಿ ಬಹುವ್ರೀಹಿಯನ್ನು ಆಶ್ರಯಿಸಿದರೂ ಹರಿಗೆ ವಿಶ್ವಸ್ರಷ್ಟುತ್ವರೂಪವಾದ ಮಹಾಗುಣವೇ ದೊರೆಯುವುದರಿಂದ ಈ ಕಲ್ಪದಲ್ಲಿಯೂ ದೋಷವಿಲ್ಲವೆಂದು ಹೇಳುತ್ತಾರೆ. ಗುಣ ಎಂದರೆ ಅಪ್ರಧಾನರಾದ ಬ್ರಹ್ಮಾದಿಗಳು ಎಂದು ಅರ್ಥ. ಯಾವನಿಂದ ಅವರು ಹೊರಗೆ ಬಂದರೋ ಎಂದರೆ ತಂದೆಯಂತೆ ಅವನು ಅವರಿಗೆ ಕರ್ತೃ ಎಂದು ಅರ್ಥವಾಗುವುದರಿಂದ ಮಹಾಗುಣವೇ ಲಭ್ಯವಾಗುತ್ತದೆ.

**ಶಿವಃ ಶಕ್ತಿಯುತಃ ಶಶ್ವತ್ ತ್ರಿಲಿಂಗೋ ಗುಣಸಂವೃತಃ ।**
**ವೈಕಾರಿಕಸ್ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿಧಾ ॥ ೮೬೫ ॥**

**ತತೋ ವಿಕಾರಾ ಅಭವನ್ ಷೋಡಶಾಮೀಷು ವರ್ತ್ಮಸು ।**
**ಉಪಧಾವನ್ ವಿಭೂತೀನಾಂ ಸರ್ವಾಸಾಮಶ್ನುತೇ ಗತಿಮ್ ॥ ೮೬೬ ॥**

**ಅರ್ಥ–** ಶಿವಃ = ಶಿವನು, ಶಕ್ತಿಯುತಃ = ಶಕ್ತಿಯಿಂದ ಕೂಡಿದವನು, ಶಶ್ವತ್ = ಯಾವಾಗಲೂ, ತ್ರಿಲಿಂಗಃ = ಮೂರು ಸ್ವರೂಪಗಳುಳ್ಳವನು, ಗುಣಸಂವೃತಃ = ತ್ರಿಗುಣಗಳಿಂದ ಕೂಡಿದವನು, ಅಹಂ = ಅಹಂಕಾರ ತತ್ವವಾದರೂ, ವೈಕಾರಿಕಃ = ವೈಕಾರಿಕವೂ, ತೈಜಸಃ = ತೈಜಸ, ತಾಮಸಶ್ಚ = ಮತ್ತು ತಾಮಸ, ಎಂಬುದಾಗಿ ತ್ರಿಧಾ = ಮೂರು ಪ್ರಕಾರವುಳ್ಳದ್ದು. ತತಃ = ಅಂತಹ ಶಿವನ ದೆಸೆಯಿಂದ, ಷೋಡಶ = ಹದಿನಾರು ರೀತಿಯ, ವಿಕಾರಾಃ = ವಿಕಾರಗಳು, ಅಭವನ್ = ಹುಟ್ಟಿದವು, ಅಮೀಷು ವರ್ತ್ಮಸು= ಈ ಮಾರ್ಗದಲ್ಲಿ ಉಪಧಾವನ್ = ಯಾವನು ಉಪಾಸನೆಯನ್ನು ಮಾಡುತ್ತಾನೆಯೋ ಅವನು, ಸರ್ವಾಸಾಂ = ಹದಿನಾರು ವಿಕಾರಗಳ, ವಿಭೂತೀನಾಂ= ಸಮೃದ್ಧಿಗಳ, ಗತಿಮ್ = ಶ್ರೇಷ್ಠವಾದ ಗತಿಯನ್ನು, ಅಶ್ನುತೇ = ಹೊಂದುತ್ತಾನೆ.

**ಅನುವಾದ– ಶಿವನು ಶಕ್ತಿಯಿಂದ ಕೂಡಿದವನು. ಯಾವಾಗಲೂ ವೈಕಾರಿಕ, ತೈಜಸ, ತಾಮಸ ರೂಪವಾದ ಮೂರು ಅಹಂಕಾರ ಪ್ರಭೇದಗಳಿಂದ ಕೂಡಿದವನು ಮತ್ತು ತ್ರಿಗುಣಗಳಿಂದ ಕೂಡಿರುವವನು.**

**ಅಂತಹ ಶಿವನಿಂದ ಹಿಂದೆ ಹೇಳಿದ ರೀತಿಯಲ್ಲಿ ಹದಿನಾರು ವಿಕಾರಗಳು ಜನಿಸಿದವು. ಯಾವನು ಶಿವನನ್ನು ಉಪಾಸನೆ ಮಾಡುತ್ತಾನೆಯೋ ಅಂತಹವನು, ಆ ಶಿವನ ಸಂಪತ್ತಿನಲ್ಲಿ ಸೇರಿದ ಇಂತಹ ವಸ್ತುಗಳ ಸಮೃದ್ಧಿಯನ್ನು ಪಡೆಯುತ್ತಾನೆ.**

**ವಿವರಣೆ–** ಹದಿನಾರು ವಿಕಾರವು ಎಂದರೆ ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಪಂಚಭೂತಗಳು ಮತ್ತು ಮನಸ್ಸು. ಇದೆಲ್ಲಾ ಮೂರು ವಿಧದ ಅಹಂಕಾರದ ಕಾರ್ಯಗಳು. ರುದ್ರದೇವರು ಅಹಂಕಾರಕ್ಕೆ ಒಡೆಯರಾದವರು. ರುದ್ರದೇವರ ಆರಾಧನೆಯನ್ನು ಮಾಡಿದರೆ, ಅವರ ಅಧಿಕಾರವ್ಯಾಪ್ತಿಯಲ್ಲಿರುವ ಈ ಎಲ್ಲಾ ವಿಕಾರಗಳ ಸಮೃದ್ಧಿ ದೊರೆಯುತ್ತದೆ.

**ಹರಿಸ್ತು ನಿರ್ಗುಣಃ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ ।**
**ಸ ಸರ್ವದೃಗುಪದ್ರಷ್ಟಾ ತಂ ಭಜನ್ ನಿರ್ಗುಣೋ ಭವೇತ್ ॥ ೮೬೭ ॥**

**ಅರ್ಥ–** ಹರಿಸ್ತು= ಶ್ರೀಹರಿಯಾದರೂ, ನಿರ್ಗುಣಃ= ನಿರ್ಗುಣನಾದವನು, ಪ್ರಕೃತೇಃ= ಪ್ರಕೃತಿಯ ದೆಸೆಯಿಂದ, ಪರಃ= ಉತ್ತಮನಾದವನು, ಸಾಕ್ಷಾತ್ ಪುರುಷಃ= ಮುಖ್ಯಪುರುಷ ಶಬ್ದವಾಚ್ಯನು, ಸಃ= ಅವನು, ಸರ್ವದೃಕ್= ಸರ್ವಜ್ಞನು, ಉಪದ್ರಷ್ಟಾ= ಸರ್ವಸಾಕ್ಷಿಯಾದವನು, ತಂ = ಅವನನ್ನು, ಭಜನ್ = ಭಜಿಸಿದವನು, ನಿರ್ಗುಣೋ ಭವೇತ್= ನಿರ್ಗುಣನೇ ಆಗುತ್ತಾನೆ.

**ಅನುವಾದ– ಹರಿಯಾದರೂ, ನಿರ್ಗುಣನಾದವನು. ಅವನೇ ಪ್ರಕೃತಿಗಿಂತ ಅಂದರೆ ಲಕ್ಷ್ಮಿಗಿಂತ ಉತ್ತಮನಾದವನು. ಅವನೇ ಮುಖ್ಯನಾಗಿ ಪುರುಷಶಬ್ದ-ವಾಚ್ಯನಾದವನು. ಅವನು ಸರ್ವಜ್ಞನಾದವನು ಮತ್ತು ಸರ್ವಸಾಕ್ಷಿಯಾದವನು. ಅವನನ್ನು ಭಜನೆ ಮಾಡುವವನು ನಿರ್ಗುಣನೇ ಆಗುತ್ತಾನೆ.**

**ಇತಿ ಭಾಗವತೇ ಪ್ರೋಕ್ತೋ ಹರಿರೇವ ಹಿ ನಿರ್ಗುಣಃ ।**
**ಸಮಸ್ತಗುಣಸಂಪೂರ್ಣಃ ಶ್ರುತ್ಯಾ ಸ್ಮೃತಿಸಮಾರ್ಥಯಾ ।**
**ಕೇವಲೋ ನಿರ್ಗುಣಶ್ಚೇತಿ ವ್ಯಾಪೀ ದೇವಃ ಸ ಕಥ್ಯತೇ ॥ ೮೬೮ ॥**

**ಅರ್ಥ–** ಇತಿ= ಈ ರೀತಿಯಾಗಿ, ಭಾಗವತೇ= ಶ್ರೀಮದ್ಭಾಗವತದಲ್ಲಿ ,ಪ್ರೋಕ್ತಃ= ಹೇಳಲ್ಪಟ್ಟ, ಹರೇವ= ಶ್ರೀಹರಿಯೇ, ನಿರ್ಗುಣಃ ಹಿ= ನಿರ್ಗುಣನಷ್ಟೆ. ಸ್ಮೃತಿಸಮಾರ್ಥಯಾ= ಸ್ಮೃತಿಯಿಂದ ಸಮಾನಾರ್ಥವುಳ್ಳ, 'ಕೇವಲೋ ನಿರ್ಗುಣಶ್ಚ'= 'ಕೇವಲೋ ನಿರ್ಗುಣ' ಎಂಬ, ಶ್ರುತ್ಯಾ= ಶ್ರುತಿಯಿಂದಲೂ, ಸಮಸ್ತಗುಣಸಂಪೂರ್ಣಃ= ಸಮಸ್ತಗುಣ ಸಂಪೂರ್ಣನು, ಇತಿ= ಈ ರೀತಿಯಾಗಿ , ಸಃ= ಅವನು, ವ್ಯಾಪೀ= ವ್ಯಾಪ್ತನೂ, ದೇವಃ= ಕ್ರೀಡಾದಿಗುಣವಿಶಿಷ್ಟನು ಎಂಬುದಾಗಿ, ಕಥ್ಯತೇ= ಹೇಳಲ್ಪಟ್ಟಿದೆ.

**ಅನುವಾದ–** ಹೀಗೆ ಭಾಗವತದಲ್ಲಿ ಸಮಸ್ತಗುಣಸಂಪೂರ್ಣನಾದ ಹರಿಯನ್ನೇ ನಿರ್ಗುಣನೆಂದು ಹೇಳಿದೆ. ಇಂತಹ ಸ್ಮೃತಿಯಿಂದ ಸಮಾನಾರ್ಥವುಳ್ಳ ಶ್ರುತಿಯೂ ಸಹ ಅವನನ್ನೇ 'ಕೇವಲೋ ನಿರ್ಗುಣಶ್ಚ' ಎಂದು ಹೇಳಿ ನಿರ್ಗುಣನೆಂದು ಕರೆದಿದೆ. ಅವನನ್ನು ಅದೇ ವಾಕ್ಯದಲ್ಲಿ ಸರ್ವವ್ಯಾಪ್ತ ಮತ್ತು ಸ್ರಷ್ಟೃತ್ವಾದಿಗುಣವಿಶಿಷ್ಟನೆಂದೂ ಕರೆದಿದೆ.

**ಭಾವವಿಲಾಸಿನೀ–** ಅಧುನಾ ಭಾಗವತೇ ಹರೌ ಪ್ರಯುಕ್ತನಿರ್ಗುಣಪದಸ್ಯ ತ್ರಿಗುಣವರ್ಜಿತ-ತ್ವಮರ್ಥಂ ತತ್ರಸ್ಥಯುಕ್ತಿಭಿರೇವ ಸಮರ್ಥ್ಯ ತತ್ಸಮಾಖ್ಯಯಾಶ್ರುತೇರಪಿ ಸ ಏವಾರ್ಥ ಇತ್ಯಾಹ– **ಶಿವಶಕ್ತಿಯುತ ಇತ್ಯಾದಿನಾ** ॥ ಹಿ ಯಸ್ಮಾತ್ಸಮಸ್ತಗುಣಸಂಪೂರ್ಣೋ ಹರಿರೇವ ಭಾಗವತೇ ನಿರ್ಗುಣಃ ಪ್ರೋಕ್ತಃ ತಸ್ಮಾತ್ ಸ್ಮೃತಿಸಮಾರ್ಥಯಾ ಸಮಾನಾರ್ಥಯಾ ವ್ಯಾಪೀ ಸ ಏವ ದೇವಃ ಕೇವಲೋ ನಿರ್ಗುಣಶ್ಚೇತಿ ಕಥ್ಯತೇ ॥ ೮೬೫-೮೬೮ ॥

**ವಿವರಣೆ–** ಹರಿಯು ಸರ್ವಗುಣಸಂಪನ್ನನಾದವನೆಂದು ಶ್ರುತಿಸ್ಮೃತಿಗಳಲ್ಲಿ ಸಿದ್ಧವಾಗಿದೆ. ಭಾಗವತವು ಹರಿಯನ್ನೇ ನಿರ್ಗುಣನೆಂದು ಕರೆಯುತ್ತದೆ. ಇದಕ್ಕೆ ಶ್ರುತಿಸಮಾಖ್ಯೆ ಇದೆ. ಕಾಠಕಶ್ರುತಿಯಲ್ಲಿ 'ಕೇವಲೋ ನಿರ್ಗುಣಶ್ಚ' ಎಂದು ಅವನನ್ನೇ ನಿರ್ಗುಣನೆಂದು ಕರೆದಿದೆ. ಈ 'ನಿರ್ಗುಣನು ಅದ್ವೈತಿಗಳಿಗೆ ಅಭಿಮತನಾದ ಅಖಂಡಚೈತನ್ಯವಲ್ಲ ಎಂದು ಪ್ರತಿಪಾದನೆ ಮಾಡಲು ಅದೇ ಕಾಠಕವಾಕ್ಯವು ನಿರ್ಗುಣ-ನಾದವನು, ಕ್ರೀಡಾದಿಗುಣವಿಶಿಷ್ಟನಾದವನು, ಸರ್ವವ್ಯಾಪ್ತನಾದವನು, ಸಾಕ್ಷಿಯಾದವನು, ಸರ್ವಜ್ಞನಾದವನು ಎಂದು ಹೇಳಿ ಅವನ ಗುಣಗಳ ಮಾಲೆಯನ್ನೇ ಹೇಳುವುದರಿಂದ ಅವನು ಹರಿಯೇ ಹೊರತು ಅಖಂಡಚೈತನ್ಯವಲ್ಲ.

ಅತಸ್ತ್ರಿಗುಣಶೂನ್ಯತ್ವಾದ್ ಗುಣಸರ್ವಸ್ವಬೃಂಹಿತಃ ।
ಸ ಏವ ನಿರ್ಗುಣಂ ಬ್ರಹ್ಮ ಶುದ್ಧಂ ಬ್ರಹ್ಮ ಸ ಏವ ನಃ ॥ ೮೬೯ ॥

**ಅರ್ಥ–** ಅತಃ = ಆದ್ದರಿಂದ, ತ್ರಿಗುಣಶೂನ್ಯತ್ವಾತ್ = ಮೂರುಗುಣಗಳಿಂದ ಶೂನ್ಯನಾದುದರಿಂದ, ಗುಣಸರ್ವಸ್ವಬೃಂಹಿತಃ = ಸಕಲಗುಣಗಳಿಂದ ತುಂಬಿದವನಾದರೂ, ಸ ಏವ ಬ್ರಹ್ಮ = ಆ ಬ್ರಹ್ಮನೇ, ನಿರ್ಗುಣಂ = ನಿರ್ಗುಣ ಶಬ್ದ ವಾಚ್ಯನು, ನಃ = ನಮಗೆ, ಸ ಏವ = ಆ ಬ್ರಹ್ಮನೇ, ಶುದ್ಧಂ ಬ್ರಹ್ಮ = ಶುದ್ಧಬ್ರಹ್ಮನು.

**ಅನುವಾದ–** ಆದ್ದರಿಂದ ಗುಣಸರ್ವಸ್ವವನ್ನು ಹೊಂದಿದ ಹರಿಯೇ ತ್ರಿಗುಣರಹಿತನಾದ ಕಾರಣದಿಂದ ನಿರ್ಗುಣನೆಂದು ಸಿದ್ಧವಾಗುತ್ತದೆ. ನಿರ್ಗುಣಬ್ರಹ್ಮನೆಂದರೆ, ಅವನೇ ಶುದ್ಧಬ್ರಹ್ಮನೆಂದು ಹೇಳಿದರೂ ನನಗೆ ಆ ಅಪ್ರಾಕೃತ ಸುಗುಣ ಸರ್ವಸ್ವರೂಪಿಯಾದ ಶ್ರೀಹರಿಯೇ, ಪ್ರಾಕೃತತ್ರಿಗುಣರಹಿತನೆಂದು ಸಿದ್ಧನಾಗುತ್ತಾನೆ.

**ಭಾವವಿಲಾಸಿನೀ–** ಅತಃ ಶ್ರುತಿಸ್ಮೃತ್ಯೋರೇಕಾರ್ಥತ್ವನಿಯಮಾತ್ ಸ ಏವ ಹರಿರೇವ ನಿರ್ಗುಣಂ ಬ್ರಹ್ಮ ಕೇವಲ ಇತ್ಯಸ್ಯಾರ್ಥಃ– ಶುದ್ಧಮಿತಿ ॥ ನೋಽಸ್ಮಾಕಂ ತತ್ತ್ವವಾದಿನಾಮ್ ॥ ೮೬೯॥

**ವಿವರಣೆ–** ಶ್ರುತಿಸ್ಮೃತಿಗಳು ಸಮಾನಾರ್ಥವಾಗಬೇಕಾಗಿರುವುದರಿಂದ ಸ್ಮೃತಿಯು ವಿವರಣೆ ಮಾಡುವಂತೆ ಶ್ರುತಿಯಲ್ಲಿ ಹೇಳಲ್ಪಟ್ಟ ನಿರ್ಗುಣನು ಹರಿಯೇ ಆಗಬೇಕು. 'ನಿರ್ಗುಣ' ಎಂದರೆ ಗುಣತ್ರಯರಹಿತ ಮತ್ತು 'ಕೇವಲ' ಎಂದರೆ ಶುದ್ಧನಾದವನು ಎಂದು ಅರ್ಥವಾಗುತ್ತದೆ.

**ನೈರ್ಗುಣ್ಯಾಖ್ಯೋ ಮಹಾಮೋಕ್ಷೋ ಯತ್ಪಾದಭಜನಾದ್ ಭವೇತ್ ।**
**ಶಬಲಂ ಬ್ರಹ್ಮ ಸ ಕಿಲ ಗಂಗಾ ಯತ್ಪದಸಂಗತಃ ।**
**ಸದ್ಯಃ ಶುದ್ಧಿಕರೀ ನೃಣಾಂ ಸೋಽಶುದ್ಧಃ ಕಿಲ ದುರ್ಧಿಯಾಮ್ ॥೮೭೦॥**

**ಅರ್ಥ–** ಯತ್ಪಾದಭಜನಾತ್= ಯಾವನ ಪಾದಭಜನೆಯಿಂದ, ನೈರ್ಗುಣ್ಯಾಖ್ಯೋ= ನೈರ್ಗುಣ್ಯವೆಂಬ, ಮಹಾಮೋಕ್ಷಃ= ಮಹಾಮೋಕ್ಷವು, ಭವೇತ್= ಉಂಟಾಗುತ್ತದೋ, ಸಃ ಅಂತಹ, ಬ್ರಹ್ಮ= ಬ್ರಹ್ಮನು, ಶಬಲಂ ಕಿಲ= ಅಶುದ್ಧನಷ್ಟೇ.(ಇದು ಹಾಸ್ಯಾಸ್ಪದವು) ಯತ್ಪದಸಂಗತಃ= ಯಾವ ಭಗವತ್ ಪಾದದ ಸಂಗದಿಂದ, ಗಂಗಾ= ಗಂಗೆಯು, ನೃಣಾಂ= ಮನುಷ್ಯರಿಗೆ, ಸದ್ಯಃ= ತಕ್ಷಣದಲ್ಲಿಯೇ, ಶುದ್ಧಿಕರೀ= ಶುದ್ಧಿಯನ್ನು ಉಂಟು ಮಾಡುತ್ತಾಳೆಯೋ, ಸಃ= ಅಂತಹ ಬ್ರಹ್ಮನು, ದುರ್ಧಿಯಾಮ್= ದುಷ್ಟಬುದ್ಧಿಯುಳ್ಳವರಿಗೆ, ಅಶುದ್ಧಃ ಕಿಲ= ಅಶುದ್ಧನಷ್ಟೆ?(ಇದೂ ಹಾಸ್ಯಾಸ್ಪದವು)

**ಅನುವಾದ–** ನೈರ್ಗುಣ್ಯವೆಂದು ಕರೆಯಲ್ಪಡುವ ಮಹಾಮೋಕ್ಷವು ಯಾವನ ಪಾದಭಜನೆಯನ್ನು ಮಾಡುವುದರಿಂದ ಉಂಟಾಗುವುದೋ ಅವನನ್ನು ಶಬಲಬ್ರಹ್ಮ ಎಂದು ಕರೆಯುವುದು ಹಾಸ್ಯಾಸ್ಪದವಾದ ಮಾತು. ಯಾವನ ಪಾದಸಂಗತವಾದ ಗಂಗೆಯೂ ಮನುಷ್ಯರನ್ನು ತಕ್ಷಣದಲ್ಲಿಯೇ ಶುದ್ಧಿ ಮಾಡುತ್ತಾಳೆಯೋ ಅಂತಹ ಬ್ರಹ್ಮನು ಅಶುದ್ಧ ಎಂದು ಹೇಳುವುದಾದರೆ, ಅದನ್ನು ದುಷ್ಟಬುದ್ಧಿಯುಳ್ಳವರೇ ಹೇಳಬೇಕು.

**ಭಾವವಿಲಾಸಿನೀ–** ನಿರ್ಗುಣೋ ಭವೇದಿತ್ಯುಕ್ತೋ ಮಹಾಮೋಕ್ಷೋ ಯತ್ಪಾದಭಜನಾತ್ ತಂ ಭಜನ್ನಿತ್ಯತ್ರೋಕ್ತಾತ್ । ಸ ಹರಿಃ ಕಿಲೇತ್ಯುಪಹಾಸಃ । ಗಂಗಾ ಯತ್ಪಾದಸಂಗತಃ ಸದ್ಯಃ ಶುದ್ಧಿಕರೀತಿ ತು 'ಆಪಸ್ತೇಽಙ್ಘ್ರ್ಯವನೇಜನ್ಯಸ್ತ್ರೀಂಲ್ಲೋಕಾನ್ ಶುಚಯೋಽಪುನನ್' ಇತ್ಯಾದಿ-ಭಾಗವತೋಕ್ತವಾಕ್ಯಾಂತರಾರ್ಥಸಂಗ್ರಹ ಇತಿ ದ್ರಷ್ಟವ್ಯಮ್ ॥ ೮೭೦ ॥

**ವಿವರಣೆ–** ಇನ್ನು, ಮೋಕ್ಷದಾತೃತ್ವ ಇರುವುದರಿಂದಲೂ ಹರಿಯೇ ನಿರ್ಗುಣ ಎಂದು ಸಮರ್ಥನೆ ಮಾಡುತ್ತಾರೆ. ಮೋಕ್ಷವನ್ನು ನಿರ್ಗುಣ ಎಂದು ಕರೆಯುತ್ತಾರೆ. ಏಕೆಂದರೆ,

ಅಲ್ಲಿ ಗುಣತ್ರಯಗಳು ಇಲ್ಲ ಎಂಬ ಕಾರಣದಿಂದ. ಅಂತಹ ಮೋಕ್ಷವನ್ನು ಕೊಡುವವನು ಗುಣತ್ರಯರಹಿತನಾದ ಶುದ್ಧಬ್ರಹ್ಮನೇ ಆಗಬೇಕು. ಅವನನ್ನು ಶಬಲಬ್ರಹ್ಮ ಎಂದು ಕರೆಯುವುದು ಅನ್ಯಾಯದ ಮಾತು. ಶಬಲಬ್ರಹ್ಮ ಎಂದರೆ ದೋಷಯುಕ್ತನಾದ ಬ್ರಹ್ಮ ಎಂದು ಅರ್ಥ. ಅವನ ಪಾದಸಂಗತವಾದ ಗಂಗೆಯೂ ಎಲ್ಲಾ ದೋಷಗಳನ್ನು ಕಳೆಯುವಾಗ ಅವನಲ್ಲಿ ದೋಷವಿರುವುದು ಹೇಗೆ?

**ಮೋಕ್ಷಸ್ಯ ನಿರ್ಗುಣತ್ವಂ ಚ ತ್ರೈಗುಣ್ಯೋಜ್ಝಿತತ್ವೈವ ಹಿ ।**
**ಸಮಸ್ತಧರ್ಮಶೂನ್ಯತ್ವೇ ಮೋಕ್ಷಾಯ ಪ್ರಯತೇತ ಕಃ ॥ ೮೭೧ ॥**

**ಧರ್ಮಾಯ ಯಶಸೇಽರ್ಥಾಯ ಜ್ಞಾನಾಯ ಯತತೇ ಜನಃ ।**
**ಲುಪ್ತ್ಯೈ ಸಮಸ್ತಭಾಗ್ಯಾನಾಂ ಕೋ ನೂನ್ಮತ್ತಃ ಪ್ರವರ್ತತೇ ॥ ೮೭೨ ॥**

**ಅರ್ಥ–** ಮೋಕ್ಷಸ್ಯ= ಮೋಕ್ಷದ, ನಿರ್ಗುಣತ್ವಂ ಚ= ನಿರ್ಗುಣತ್ವವಾದರೂ, ತ್ರೈಗುಣ್ಯೋಜ್ಝಿತತ್ವೈವ ಹಿ= ಮೂರುಗುಣಗಳಿಂದ ದೂರವಾಗಿರುವಿಕೆಯಷ್ಟೆ? ಸಮಸ್ತಧರ್ಮಶೂನ್ಯತ್ವೇ= ಮೋಕ್ಷವು ಸಮಸ್ತಧರ್ಮಶೂನ್ಯ ಎಂದಾದರೆ, ಕಃ= ಯಾರು, ಮೋಕ್ಷಾಯ= ಮೋಕ್ಷಕ್ಕಾಗಿ, ಪ್ರಯತೇತ= ಪ್ರಯತ್ನಪಟ್ಟಾರು.

ಜನಃ = ಲೋಕದ ಜನರು, ಧರ್ಮಾಯ = ಧರ್ಮಕ್ಕೋಸ್ಕರ, ಯಶಸೇ = ಕೀರ್ತಿಗೋಸ್ಕರ, ಅರ್ಥಾಯ = ಸಂಪತ್ತಿಗೋಸ್ಕರ, ಜ್ಞಾನಾಯ = ಜ್ಞಾನಕ್ಕೋಸ್ಕರ, ಯತತೇ= ಪ್ರಯತ್ನಪಡುತ್ತಾರೆ. ಸಮಸ್ತಭಾಗ್ಯಾನಾಂ = ಎಲ್ಲಾ ಭಾಗ್ಯಗಳ, ಲುಪ್ತ್ಯೈ= ನಾಶಕ್ಕಾಗಿ, ಕಃ = ಯಾವ, ಉನ್ಮತ್ತೋ ನು = ಹುಚ್ಚನು ತಾನೇ, ಪ್ರವರ್ತತೇ = ಪ್ರವೃತ್ತಿ ಮಾಡುತ್ತಾನೆ?

**ಅನುವಾದ–** ಮೂರೂ ಧರ್ಮಗಳಿಂದ ರಹಿತವಾದ ಕಾರಣದಿಂದಲೇ ಮೋಕ್ಷವನ್ನು ನಿರ್ಗುಣ ಎಂದು ಕರೆಯುತ್ತಾರೆ. ಅದನ್ನು ಬಿಟ್ಟು ಮೋಕ್ಷವು ಸಮಸ್ತಧರ್ಮಶೂನ್ಯ ಎಂದು ಹೇಳಿದರೆ, ಅಂತಹ ಮೋಕ್ಷಕ್ಕಾಗಿ ಯಾರು ಪ್ರಯತ್ನಪಡುತ್ತಾರೆ? ಎಲ್ಲರೂ ಧರ್ಮಕ್ಕಾಗಿ, ಕೀರ್ತಿಗಾಗಿ, ಧನಕ್ಕಾಗಿ, ಜ್ಞಾನಕ್ಕಾಗಿ ಪ್ರಯತ್ನಪಡುತ್ತಾರೆ. ಅವುಗಳೆಲ್ಲ ಭಾಗ್ಯಗಳು ಎಂದು ಪರಿಗಣಿಸಲ್ಪಡುತ್ತವೆ. ಅಂತಹ ಸಮಸ್ತಭಾಗ್ಯಗಳ ಲೋಪಕ್ಕಾಗಿ ಯಾವ ಹುಚ್ಚನು ತಾನೆ ಪ್ರಯತ್ನಪಡುತ್ತಾನೆ?

**ಭಾವವಿಲಾಸಿನೀ–** ನಿರ್ಗುಣೋ ಭವೇದಿತ್ಯತ್ರ ಫಲತ್ವೇನೋಕ್ತನಿರ್ಗುಣತ್ವಂ ಚ ತ್ರಿಗುಣವರ್ಜಿತ-ತ್ವಮೇವೇತಿ ಬಹಿರಂಗಾಂ ತರಂಗಯುಕ್ತಿಭ್ಯಾಂಸಾಧಯತಿ–**ಮೋಕ್ಷಸ್ಯೇತ್ಯಾದಿನಾ** ॥೮೭೧-೮೭೨॥

**ವಿವರಣೆ–** 'ತಂ ಭಜನ್ ನಿರ್ಗುಣೋ ಭವೇತ್' ಎಂಬ ಭಾಗವತವಾಕ್ಯವು ಹರಿಭಜನೆಗೆ ನಿರ್ಗುಣತ್ವರೂಪವಾದ ಮೋಕ್ಷವು ಫಲವೆಂದು ಹೇಳಿದೆ. ಈ ನಿರ್ಗುಣತ್ವವು

ತ್ರಿಗುಣವರ್ಜಿತತ್ವರೂಪವೇ ಆಗಿದೆಯೆಂದು ಬಹಿರಂಗ ಮತ್ತು ಅಂತರಂಗ ಪ್ರಮಾಣಗಳಿಂದ ಇಲ್ಲಿ ಸಮರ್ಥಿಸುತ್ತಾರೆ. ಮೋಕ್ಷವು ಸಮಸ್ತಸುಗುಣಶೂನ್ಯವೇ ಆದರೆ, ಅದರಲ್ಲಿ ಯಾರೂ ಪ್ರವೃತ್ತಿ ಮಾಡಲಾರರು ಎಂಬ ಯುಕ್ತಿಯು ಬಹಿರಂಗ ಪ್ರಮಾಣ. ಮುಂದಿನ ಶ್ಲೋಕದಲ್ಲಿ ಇದನ್ನು ಸ್ಪಷ್ಟಪಡಿಸುತ್ತಾರೆ.

**ಸಗುಣಪ್ರೀತಿಲಭ್ಯಸ್ಯ ನೈರ್ಗುಣ್ಯಂ ತದ್ವದೇವ ಹಿ ।**
**ಯಥೋಪಾಸ್ತೇ ತಥೈವಾಸೌ ಭವತೀತಿ ಹಿ ವೇದವಾಕ್ ॥ ೮೭೩ ॥**

**ಅರ್ಥ–** ಸಗುಣಪ್ರೀತಿಲಭ್ಯಸ್ಯ = ಸಗುಣನಾದ ಹರಿಯ ಪ್ರಸಾದದಿಂದ ಉಂಟಾಗುವ, ನೈರ್ಗುಣ್ಯಂ = ನೈರ್ಗುಣ್ಯವು, ತದ್ವದೇವ ಹಿ = ಸಗುಣತ್ವಕ್ಕೆ ಸದೃಶವಾಗಿರುತ್ತದೆಯಷ್ಟೆ, ವೇದವಾಕ್ = ವೇದದ ಮಾತು, ಯಥಾ = ಯಾವ ರೀತಿಯಾಗಿ, ಉಪಾಸ್ತೇ = ಉಪಾಸನೆ ಮಾಡುತ್ತಾನೋ, ತಥೈವ= ಅದೇ ರೀತಿಯಾಗಿ, ಅಸೌ = ಇವನು, ಭವತಿ= ಆಗುತ್ತಾನೆ, ಇತಿ ಹಿ = ಎಂಬುದಾಗಿ ಇದೆಯಷ್ಟೆ

**ಅನುವಾದ–** ಸಗುಣನಾದ ಅವನ ಪ್ರಸಾದದಿಂದ ಉಂಟಾಗುವ ನೈರ್ಗುಣ್ಯವು ಅವನ ಸಗುಣತ್ವಕ್ಕೆ ಸದೃಶವಾದುದೇ ಆಗಿರಬೇಕು. ಏಕೆಂದರೆ, ವೇದವಾಕ್ಯವು 'ಅವನನ್ನು ಹೇಗೆ ಉಪಾಸನೆ ಮಾಡುತ್ತಾರೆಯೋ ಜೀವರು ಹಾಗೆಯೇ ಆಗುತ್ತಾರೆ' ಎಂದು ಹೇಳುತ್ತದೆ.

**ಭಾವವಿಲಾಸಿನೀ–** ಸಗುಣಸ್ಯ ಸಾರ್ವಜ್ಞಾದಿಗುಣಯುಕ್ತಸ್ಯ ಹರೇಃ ಪ್ರೀತ್ಯಾ ಲಭ್ಯಮೋಕ್ಷಸ್ಯ । ತದ್ವದ್ ಹರಿವತ್ । ಯಥಾ ಹರಿಃ ಸಗುಣ ಏವ ತ್ರಿಗುಣಶೂನ್ಯತ್ವಾನ್ನಿರ್ಗುಣಃ ತದ್ವತ್ ಸ್ಯಾದಿತಿ ಭಾವಃ । ತತ್ರ ಶ್ರೌತಯುಕ್ತಿಮಾಹ– **ಯಥೇತಿ** ॥ ೮೭೩ ॥

**ವಿವರಣೆ–** 'ತಂ ಯಥಾಯಥಾ ಉಪಾಸತೇ ತಥೈವ ಭವತಿ' ಎಂದು ಉಪನಿಷತ್ತಿನ ವಾಕ್ಯ. ಅವನನ್ನು ಹೇಗೆ ಉಪಾಸನೆ ಮಾಡುತ್ತಾರೆಯೋ ಹಾಗೆಯೇ ಜೀವರು ಆಗುತ್ತಾರೆ ಎಂದು ಅದರ ಅರ್ಥ. ಅವನನ್ನು ವೇದವು ನಿರ್ಗುಣ ಎಂದು ಕರೆಯುತ್ತದೆ, ಮೋಕ್ಷವನ್ನೂ ನಿರ್ಗುಣವೆಂದು ಕರೆಯುತ್ತದೆ. ನಿರ್ಗುಣನ ಉಪಾಸನೆಯಿಂದ ಜೀವರಿಗೂ ನಿರ್ಗುಣತ್ವವು ಬರುತ್ತದೆ. ಅದು ಹರಿಯಲ್ಲಿರುವ ನಿರ್ಗುಣತ್ವಕ್ಕೆ ಸದೃಶವಾದ ನಿರ್ಗುಣತ್ವವೇ ಆಗಿರಬೇಕು. ಹರಿಯಲ್ಲಿರುವ ನಿರ್ಗುಣತ್ವವು ಗುಣತ್ರಯರಾಹಿತ್ಯ-ರೂಪವಾದದ್ದು. ಆದ್ದರಿಂದ ಮೋಕ್ಷದಲ್ಲಿರುವ ನಿರ್ಗುಣತ್ವವೂ ಸಹ ಗುಣತ್ರಯ-ರಾಹಿತ್ಯರೂಪವಾದದ್ದೇ. ಸರ್ವಧರ್ಮರಹಿತ್ವರೂಪವಾದದ್ದಲ್ಲ.

**ನಹಿ ನಿರ್ಗುಣಶಬ್ದೋಽಯಂ ಚಿನ್ಮಾತ್ರಸ್ಯ ವಿವಕ್ಷಯಾ ।**
**ಭಾವಿನ್ನೈರ್ಗುಣ್ಯದೃಷ್ಟ್ಯಾ ವಾ ಶಿವಸ್ಯಾಪಿ ಪ್ರಸಕ್ತಿತಃ ॥ ೮೭೪ ॥**

**ಅರ್ಥ–** ಅಯಂ = ಈ, ನಿರ್ಗುಣಶಬ್ದಃ = ನಿರ್ಗುಣಶಬ್ದವು, ಚಿನ್ಮಾತ್ರಸ್ಯ ವಿವಕ್ಷಯಾ= ಕೇವಲ ಚಿನ್ಮಾತ್ರವನ್ನು ವಿವಕ್ಷಿಸಿಕೊಂಡು, ವಾ = ಅಥವಾ, ಭಾವಿನೈರ್ಗುಣ್ಯದೃಷ್ಟ್ಯಾ= ಭವಿಷ್ಯತ್ಕಾಲದಲ್ಲಿ ನಿರ್ಗುಣತ್ವ ಉಂಟಾಗುತ್ತದೆ ಎಂಬ ದೃಷ್ಟಿಯಿಂದಲೂ, ನಹಿ = ಹೇಳಲ್ಪಟ್ಟಿಲ್ಲ. ಹೀಗೆ ಹೇಳಿದರೆ, ಶಿವಸ್ಯಾಪಿ = ಶಿವನಿಗೂ ಕೂಡ, ಪ್ರಸಕ್ತಿತಃ = ನಿರ್ಗುಣತ್ವವು ಉಂಟಾಗುವುದರಿಂದ,(ಹರಿಯೇ ನಿರ್ಗುಣ ಎಂದು ಹೇಳುವುದು ಅಯುಕ್ತವಾಗುತ್ತದೆ)

**ಅನುವಾದ– ಭಾಗವತದಲ್ಲಿರುವ ನಿರ್ಗುಣ ಶಬ್ದವು ಕೇವಲ ಚಿನ್ಮಾತ್ರವನ್ನು ಹೇಳುವುದಿಲ್ಲ. ಹಾಗೆ ಹೇಳುವುದಾದರೆ, ಈಗ ಗುಣಗಳಿದ್ದರೂ ಭವಿಷ್ಯತ್ಕಾಲದಲ್ಲಿ ನಿರ್ಗುಣತ್ವ ಉಂಟಾಗುತ್ತದೆ ಎಂಬ ದೃಷ್ಟಿಯಿಂದ ಹೇಳಬೇಕು. ಹಾಗೆ ಹೇಳಿದರೆ, ಶಿವನಿಗೂ ಭವಿಷ್ಯತ್ಕಾಲದಲ್ಲಿ ಅಂತಹ ನಿರ್ಗುಣತ್ವ ಉಂಟಾಗುವುದರಿಂದ ಹರಿಯೇ ನಿರ್ಗುಣ ಎಂದು ಹೇಳುವುದು ಅನುಪಪನ್ನವಾಗುತ್ತದೆ.**

**ಭಾವವಿಲಾಸಿನೀ– ಅಧುನಾ ಹರಿಸ್ತು ನಿರ್ಗುಣಃ ಪ್ರೋಕ್ತ ಇತ್ಯತ್ರೋಕ್ತನಿರ್ಗುಣಶಬ್ದಸ್ಯಾಪಿ ಗುಣತ್ರಯಶೂನ್ಯತ್ವಾರ್ಥಕತ್ವೇ ಯುಕ್ತಿಮಾಹ– ನಹೀತಿ ॥ ಚಿನ್ಮಾತ್ರಸ್ಯ ವಿಶಿಷ್ಟಾಂತರ್ಗತ-ವಿಶೇಷ್ಯಾಂಶಚಿನ್ಮಾತ್ರಸ್ಯ । ಭಾವಿನೈರ್ಗುಣ್ಯದೃಷ್ಟ್ಯಾ ಭವಿಷ್ಯನ್ಮುಕ್ತಿಕಾಲೀನನೈರ್ಗುಣ್ಯವಿವಕ್ಷಯಾ ವಾ ನಹೀತಿ ಯೋಜನಾ । ಕುತೋ ನೇತ್ಯತ ಆಹ– ಶಿವಸ್ಯಾಪೀತಿ ॥ ಏತಾದೃಶನಿರ್ಗುಣತ್ವಸ್ಯ ತತ್ರಾಪಿ ಸುವಚತ್ವೇನ ಹರೇರೇವ ವಿಶಿಷ್ಯ ನಿರ್ಗುಣತ್ವಕಥನೇ ಕಾರಣಾಭಾವಾತ್ ॥ ೮೭೪ ॥**

**ವಿವರಣೆ–** ಇಲ್ಲಿ ಅಂತರಂಗಪ್ರಮಾಣದಿಂದ ನಿರ್ಗುಣಶಬ್ದವು ಹರಿಯನ್ನೇ ಹೇಳುತ್ತದೆ. ಅಖಂಡಚೈತನ್ಯವನ್ನಲ್ಲ ಎಂದು ಸಮರ್ಥನೆ ಮಾಡುತ್ತಾರೆ. ನಿರ್ಗುಣಶಬ್ದವು ಸಮಸ್ತಧರ್ಮಶೂನ್ಯತ್ವವನ್ನು ಹೇಳುವುದಾದರೆ ಅದು ಈಗ ಹರಿಗೂ ಇಲ್ಲ ಶಿವನಿಗೂ ಇಲ್ಲ. ಮೋಕ್ಷಕಾಲದಲ್ಲಿ ಅಖಂಡಚೈತನ್ಯವು ಮಾತ್ರ ಉಳಿಯುವುದರಿಂದ ಅದು ಸಮಸ್ತಧರ್ಮಶೂನ್ಯವಾಗುವುದೆಂದು ಅವರು ಹೇಳುವುದರಿಂದ ಆಗ ಹರಿಗೂ ಮತ್ತು ಶಿವನಿಗೂ ಇಬ್ಬರಿಗೂ ನಿರ್ಗುಣತ್ವ ಉಂಟಾಗುತ್ತದೆ. ಹೀಗಿರುವಾಗ 'ಹರಿಸ್ತು ನಿರ್ಗುಣಃ ಸಾಕ್ಷಾತ್' ಎಂದರೆ ಹರಿಯೇ ಮುಖ್ಯನಾಗಿ ನಿರ್ಗುಣನಾದವನು ಎಂದು ಹೇಳುವ ಭಾಗವತವಾಕ್ಯವು ಉಪಪನ್ನವಾಗುವುದಿಲ್ಲ.

**ಅತೋ ನಿರ್ಗುಣಶಬ್ದೋಽಯಂ ಹರೌ ತ್ರಿಗುಣವರ್ಜನಾತ್ ।**
**ಮುಕ್ತೋಽಪಿ ತೇನ ತಚ್ಛಬ್ದೋ ಗುಣಬದ್ಧಾಃ ಶಿವಾದಯಃ ॥ ೮೭೫ ॥**

**ಅರ್ಥ–** ಅತಃ = ಆದ್ದರಿಂದ, ಅಯಂ ನಿರ್ಗುಣಶಬ್ದಃ = ಈ ನಿರ್ಗುಣಶಬ್ದವು, ಹರೌ= ಶ್ರೀಹರಿಯಲ್ಲಿ, ತ್ರಿಗುಣವರ್ಜನಾತ್ = ತ್ರಿಗುಣರಾಹಿತ್ಯವನ್ನೇ ಹೇಳುತ್ತದೆ, ಮುಕ್ತೋಽಪಿ= ಮುಕ್ತನಾದರೂ, ತೇನ = ತ್ರಿಗುಣವರ್ಜಿತನಾದುದರಿಂದ, ತಚ್ಛಬ್ದಃ= ನಿರ್ಗುಣ ಶಬ್ದವಾಚ್ಯನು. ಶಿವಾದಯಃ = ಶಿವಾದಿಗಳಾದರೂ, ಗುಣಬದ್ಧಾಃ= ತ್ರಿಗುಣಬದ್ಧರು.

**ಅನುವಾದ–** ಆದ್ದರಿಂದ ನಿರ್ಗುಣಶಬ್ದವು ಹರಿಯಲ್ಲಿ ತ್ರಿಗುಣರಾಹಿತ್ಯವನ್ನೇ ಹೇಳುತ್ತದೆ. ಮುಕ್ತನಲ್ಲಿಯೂ ನಿರ್ಗುಣಶಬ್ದವು ತ್ರಿಗುಣರಾಹಿತ್ಯವನ್ನೇ ಹೇಳುತ್ತದೆ. ಶಿವಾದಿಗಳು ತ್ರಿಗುಣಬದ್ಧರಾದವರು.

**ಭಾವವಿಲಾಸಿನೀ–** ಅತಃ ವಿಶಿಷ್ಯ ಹರೌ ಪ್ರಯೋಗೇ ಕಾರಣಾಂತರಸ್ಯ ವಕ್ತವ್ಯತ್ವಾತ್(ಅಯಂ ನಿರ್ಗುಣಶಬ್ದಃ । ತೇನ ತ್ರಿಗುಣವರ್ಜಿತತ್ವಾರ್ಥಕನಿರ್ಗುಣಶಬ್ದವಾಚ್ಯತ್ವೇನ) ಮುಕ್ತೋಽಪಿ ತೇನ ತ್ರಿಗುಣವರ್ಜಿತತ್ವೇನ ಪ್ರವೃತ್ತಿನಿಮಿತ್ತೇನ ಸಃ ನಿರ್ಗುಣ ಇತಿ ಶಬ್ದೋ ಯಸ್ಯಾಸೌ ತಚ್ಛಬ್ದಃ । ಗುಣಬದ್ಧಾಃ ಶಿವಾದಯಃ । ಅತ ಏವ ಸಗುಣಶಬ್ದವಾಚ್ಯಾಃ ॥ ೮೭೫ ॥

**ವಿವರಣೆ–** ಹರಿಯೇ ನಿರ್ಗುಣ ಎಂದು ವಿಶೇಷವಾಗಿ ಪ್ರಯೋಗ ಮಾಡಬೇಕಾದರೆ, ಕಾರಣಾಂತರವಿರಬೇಕು. ಮೋಕ್ಷದಲ್ಲಿ ಉಂಟಾಗುವ ನಿರ್ಗುಣತ್ವವು ಅಪ್ರಯೋಜಕ ಎಂದು ಹೇಳಿದ್ದಾಗಿದೆ. ನಿರ್ಗುಣಶಬ್ದಕ್ಕೆ ತ್ರಿಗುಣವರ್ಜಿತತ್ವವು ಪ್ರವೃತ್ತಿನಿಮಿತ್ತ. ಅದು ಹರಿಗೂ ಮತ್ತು ಮುಕ್ತರಿಗೂ ಸಮಾನವಾಗಿದೆ. ಆದ್ದರಿಂದ ಇಬ್ಬರೂ ನಿರ್ಗುಣಶಬ್ದದಿಂದ ವಾಚ್ಯರಾಗುತ್ತಾರೆ. ಶಿವನು ಗುಣಬದ್ಧನಾದವನು. ಆದ್ದರಿಂದ ಅವನು ಸಗುಣನೇ ಹೊರತು ನಿರ್ಗುಣನಲ್ಲ.

> ಪ್ರಕೃತೇಃ ಪಾರಗತ್ವೋಕ್ತ್ಯಾ ನಿರ್ಗುಣೋಽತದ್ಗುಣೋ ಹರಿಃ ।
> ಪ್ರಾಕೃತಾಹಂಕೃತೇರುಕ್ತ್ಯಾ ಸಗುಣಸ್ತದ್ಗುಣಃ ಶಿವಃ ॥ ೮೭೬ ॥

**ಅರ್ಥ–** ಪ್ರಕೃತೇಃ= ಪ್ರಕೃತಿಯ ದೆಸೆಯಿಂದ, ಪಾರಗತ್ವೋಕ್ತ್ಯಾ= ಪರತ್ವವನ್ನು ಹೇಳಿದುದರಿಂದ, ಅತದ್ಗುಣಃ= ಪ್ರಕೃತಿ ಗುಣರಹಿತನಾದ, ಹರಿಃ= ಶ್ರೀಹರಿಯು, ನಿರ್ಗುಣಃ= ನಿರ್ಗುಣನು, ಪ್ರಾಕೃತಾಹಂಕೃತೇಃ= ಪ್ರಾಕೃತವಾದ ಅಹಂಕಾರಗಳನ್ನು ಉಕ್ತ್ಯಾ= ಹೇಳಿರುವುದರಿಂದ, ತದ್ಗುಣಃ = ಪ್ರಕೃತಿಗುಣವುಳ್ಳ, ಶಿವಃ= ಶಿವನು, ಸಗುಣಃ= ಸಗುಣನು.

**ಅನುವಾದ–** ಪ್ರಕೃತಿಯನ್ನು ಮೀರಿದವನು ಎಂದು ಹೇಳಿರುವುದರಿಂದ ನಿರ್ಗುಣನಾದವನು, ಪ್ರಕೃತಿಯ ಗುಣಗಳಿಂದ ರಹಿತನಾದ ಹರಿ ಎಂದೇ ಅರ್ಥವಾಗುತ್ತದೆ. ರುದ್ರನು ಅಹಂಕಾರರೂಪನಾದವನು ಎಂದು ಹೇಳಿದ್ದರಿಂದ ಪ್ರಾಕೃತವಾದ ಗುಣದಿಂದ ಅವನು ಕೂಡಿದವನು ಎಂದೇ ಅರ್ಥವಾಗುತ್ತದೆ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ– **ಪ್ರಕೃತೇರಿತಿ** ॥ ಅತದ್ಗುಣಃ ಪ್ರಕೃತಿಗುಣರಹಿತಃ ಅತ ಏವ ನಿರ್ಗುಣ ಇತಿ ಯೋಜನಾ । ತಸ್ಯಾಃ ಪ್ರಾಕೃತಾಹಂಕೃತೇರ್ಗುಣಾಃ ಸತ್ತ್ವಾದಯೋ ಯಸ್ಯಾಸೌ ತದ್ಗುಣಃ ಶಿವಃ ಸಗುಣ ಇತಿ ಯೋಜನಾ ॥ ೮೭೬ ॥

**ವಿವರಣೆ–** ಹರಿಯನ್ನು 'ಪ್ರಕೃತೇಃ ಪರಃ' ಎಂದು ಹೇಳಿರುವುದರಿಂದ ಈ ಅಂತರಂಗಯುಕ್ತಿಯಿಂದಲೂ ಹರಿಯೇ ತ್ರಿಗುಣಶೂನ್ಯನಾದವನು ಎಂದು ಸಮರ್ಥನೆ

ಮಾಡುತ್ತಾರೆ. ಹರಿಯು ಪ್ರಕೃತಿಗಿಂತ ಉತ್ತಮನಾದವನು. ಆದ್ದರಿಂದ ಪ್ರಕೃತಿಯ ಗುಣಗಳು ಅವನಲ್ಲಿ ಇರಲು ಸಾಧ್ಯವಿಲ್ಲ. ಆ ಕಾರಣದಿಂದಲೇ ಅವನನ್ನು ನಿರ್ಗುಣ ಎಂದು ಹೇಳಬೇಕು. ಶಿವನಾದರೂ ಅಹಂಕಾರಕ್ಕೆ ಅಭಿಮಾನಿಯಾದವನು. ಆದ್ದರಿಂದ ಅಹಂಕಾರದಿಂದ ಸಂವೃತನಾದವನು. ಅಹಂಕಾರವು ಪ್ರಕೃತಿಯ ಒಂದು ಗುಣ. ಆದ್ದರಿಂದ ಶಿವನು ಗುಣಬದ್ಧನಾದವನು. ಈ ಪ್ರಕಾರವಾಗಿ ಶಿವನು ಎಂದೂ ನಿರ್ಗುಣಶಬ್ದವಾಚ್ಯನಾಗುವುದಿಲ್ಲ.

**ಇತ್ಯೇವ ಸರ್ವಥಾ ವಾಚ್ಯಂ ನ ಚೇದ್ ವ್ಯರ್ಥೇ ವಿಶೇಷಣೇ ।**
**ಗುಣಸಂವರಣಂ ಚೋಕ್ತಂ ಭವೇದಾವರಣೈರ್ಗುಣೈಃ ॥ ೮೭೭ ॥**

**ಅರ್ಥ–** ಇತ್ಯೇವ= ಈ ರೀತಿಯಾಗಿ, ಸರ್ವಥಾ= ಖಂಡಿತವಾಗಿಯೂ, ವಾಚ್ಯಂ= ಹೇಳಬೇಕು, ನ ಚೇತ್= ಹೇಳದಿದ್ದರೆ, ವಿಶೇಷಣೇ= ''ಪ್ರಕೃತೇಃ ಪರಃ ತ್ರಿಲಿಂಗಃ'' ಈ ವಿಶೇಷಣಗಳು, ವ್ಯರ್ಥೇ= ವ್ಯರ್ಥವಾಗುತ್ತವೆ.(ಶಿವನಿಗಾದರೂ) ಗುಣಸಂವರಣಂ= ಗುಣಗಳ ಆಚ್ಛಾದನೆಯು, ಆವರಣೈರ್ಗುಣೈಶ್ಚ= ಆಚ್ಛಾದನರೂಪವಾದ ಗುಣಗಳಿಂದಲೇ, ಭವೇತ್= ಉಂಟಾಗುತ್ತದೆ ಎಂದು, ಉಕ್ತಂ= ಹೇಳಲ್ಪಟ್ಟಿದೆ.

**ಅನುವಾದ–** ಎಲ್ಲ ರೀತಿಯಲ್ಲಿ ವಿಚಾರ ಮಾಡಿದರೂ ಹೀಗೆಯೇ ಅರ್ಥವನ್ನು ಹೇಳಬೇಕು ಇಲ್ಲದಿದ್ದರೆ 'ಪ್ರಕೃತೇಃ ಪರಃ' ಎಂಬ ವಿಶೇಷಣವೂ 'ತ್ರಿಲಿಂಗ' ಎಂಬ ವಿಶೇಷಣವೂ ವ್ಯರ್ಥವಾಗುತ್ತದೆ. 'ಗುಣಸಂವೃತಃ' ಎಂದು ಗುಣಗಳಿಂದ ಆಚ್ಛಾದನೆಯು ಆವರಣರೂಪವಾದ ಗುಣಗಳಿಂದಲೇ ಶಿವನಿಗೆ ಉಂಟಾಗುತ್ತದೆ ಎಂದು ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ವಿಶೇಷಣೇ ಪ್ರಕೃತೇಃ ಪರ ಇತಿ ತ್ರಿಲಿಂಗ ಇತಿ ವಿಶೇಷಣೇ ಉಕ್ತಂ ಗುಣಸಂವೃತ ಇತ್ಯತ್ರ ॥ ೮೭೭ ॥

**ವಿವರಣೆ–** ಹರಿಯನ್ನು 'ಪ್ರಕೃತೇಃ ಪರಃ' ಎಂದೂ, ಶಿವನನ್ನು 'ತ್ರಿಲಿಂಗ' ಎಂದೂ ಈ ಭಾಗವತವಾಕ್ಯವು ಹೇಳಿದೆ. ಅದಕ್ಕನುಗುಣವಾಗಿ ಹರಿಯು ಗುಣತ್ರಯರಹಿತ ಮತ್ತು ಶಿವನು ಗುಣತ್ರಯಬದ್ಧ ಎಂದೇ ಅರ್ಥವನ್ನು ತಿಳಿಯಬೇಕು. ಇಲ್ಲದಿದ್ದರೆ ವಿಶೇಷಣಗಳು ವ್ಯರ್ಥವಾಗುತ್ತವೆ. ಶಿವನನ್ನು 'ಗುಣಸಂವೃತಃ' ಎಂದು ಹೇಳಿ ಸ್ಪಷ್ಟವಾಗಿ ಗುಣದಿಂದ ಬದ್ಧ ಎಂದೇ ಈ ವಾಕ್ಯದಲ್ಲಿ ಹೇಳಿದೆ. ಅಹಂಕಾರತತ್ತ್ವವು ತ್ರಿಗುಣಮಯವಾದ್ದರಿಂದ ಅಹಂಕಾರತತ್ತ್ವಕ್ಕೆ ಅಭಿಮಾನಿಯಾದವನು ತ್ರಿಗುಣಗಳಿಂದ ಬದ್ಧನೇ ಆಗುತ್ತಾನೆ.

**ಸಂಪತ್ತೇಃ ಪ್ರಾಕೃತತ್ವೇನ ತದ್ಬದ್ಧೋಪಾಸನೇನ ಸಾ ।**
**ತದ್ದೀನಾ ತು ನ ಸೇತ್ಯಾಹ ಯಾ ವಾಕ್ ಸಾ ವಕ್ತಿ ಮನ್ಮತಮ್ ॥ ೮೭೮ ॥**

**ಉಪಕ್ರಮಾನುಗುಣ್ಯಾರ್ಥಮರ್ಥೋಽತ್ರಾವಶ್ಯಕೋ ಹ್ಯಯಮ್ ।**
**ನ ಚೇತ್ ಪ್ರಕ್ರಮರೋಧೇನ ವಾಕ್ಯಂ ಸ್ಯಾನ್ಮತ್ತಭಾಷಿತಮ್ ॥ ೮೭೯ ॥**

**ಅರ್ಥ–** ಸಂಪತ್ತೇಃ ಪ್ರಾಕೃತತ್ವೇನ = ಸಂಪತ್ತುಗಳು ಪ್ರಾಕೃತಗಳಾಗಿರುವುದರಿಂದ, ತದ್ಬದ್ಧೋಪಾಸನೇನ = ಪ್ರಕೃತಿಬದ್ಧನಾದ ವ್ಯಕ್ತಿಯನ್ನು ಉಪಾಸನೆ ಮಾಡುವುದರಿಂದ, ಸಾ = ಪ್ರಾಕೃತಿಕಸಂಪತ್ತೇ ದೊರೆಯುತ್ತದೆ. ತದ್ಧೀನಾ ತು = ಪ್ರಾಕೃತಿಕ ಸಂಪತ್ತಿನಿಂದ ರಹಿತನಾದ ಹರಿಯಲ್ಲಿಯಾದರೂ, ನ ಸಾ = ಪ್ರಕೃತಿರೂಪವಾದ ಸಂಪತ್ತು ದೊರೆಯುವುದಿಲ್ಲ. ಇತಿ = ಎಂಬುದಾಗಿ, ಯಾ ವಾಕ್ = ಯಾವ ಭಾಗವತದ ಮಾತು, ಆಹ = ಹೇಳಿತೋ, ಸಾ= ಆ ಮಾತು, ಮನ್ಮತಮ್ = ನನ್ನ ಮಧ್ವಮತವನ್ನೇ, ವಕ್ತಿ = ಹೇಳುತ್ತದೆ.

ಉಪಕ್ರಮಾನುಗುಣ್ಯಾರ್ಥಮ್= ಉಪಕ್ರಮಕ್ಕೆ ಅನುಗುಣವಾಗಿ, ಅತ್ರ= ಇಲ್ಲಿ ಅಯಮ್= ಇದೇ, ಅರ್ಥಃ= ಅರ್ಥವು, ಆವಶ್ಯಕಃ ಹಿ= ಆವಶ್ಯಕವಷ್ಟೆ ನ ಚೇತ್= ಇಲ್ಲದಿದ್ದರೆ, ಪ್ರಕ್ರಮರೋಧೇನ= ಉಪಕ್ರಮವಿರೋಧದಿಂದ, ವಾಕ್ಯಂ= ವಾಕ್ಯವು, ಮತಭಾಷಿತಮ್ ಸ್ಯಾತ್= ಉನ್ಮತ್ತನ ವಚನದಂತಾಗುತ್ತದೆ.

**ಅನುವಾದ–** ಸಂಪತ್ತು ಪ್ರಾಕೃತವಾದುದು. ಆದ್ದರಿಂದ ಪ್ರಕೃತಿಗುಣಬದ್ಧನಾದವನನ್ನು ಉಪಾಸನೆ ಮಾಡಿದರೆ, ಪ್ರಕೃತಿಗುಣವಾದ ಸಂಪತ್ತೇ ದೊರೆಯುತ್ತದೆ. ಪ್ರಕೃತಿಗುಣಹೀನನಾದ ಹರಿಯನ್ನು ಭಜಿಸಿದರೆ ಪ್ರಕೃತಿಗುಣರೂಪವಾದ ಸಂಪತ್ತು ದೊರೆಯುವುದಿಲ್ಲ ಎಂದು ಯಾವ ಭಾಗವತವಾಕ್ಯವು ಹೇಳುತ್ತದೆಯೋ ಅದು ನನ್ನ ಮತವನ್ನೇ ಹೇಳುತ್ತದೆ. ಇಲ್ಲಿರುವ ಉಪಕ್ರಮಕ್ಕೆ ಅನುಗುಣವಾಗಿ ಇದೇ ಅರ್ಥವನ್ನು ಅವಶ್ಯವಾಗಿ ಹೇಳಬೇಕು. ಇಲ್ಲದಿದ್ದರೆ, ಉಪಕ್ರಮವಿರೋಧವು ಬರುವುದರಿಂದ ಈ ವಾಕ್ಯವು ಉನ್ಮತ್ತಭಾಷಿತವಾಗುತ್ತದೆ.

**ಭಾವವಿಲಾಸಿನೀ–** 'ದೇವಾಸುರಮನುಷ್ಯೇಷು ಯೇ ಭಜನ್ತ್ಯಶಿವಂ ಶಿವಮ್ । ಪ್ರಾಯಸ್ತೇ ಧನಿನೋ ಬ್ರಹ್ಮನ್ನತು ಲಕ್ಷ್ಮೀಪತಿಂ ಹರಿಮ್ ॥' ಇತ್ಯುಕ್ತಪ್ರಶ್ನಪರಿಹಾರೋಪಯೋಗಿತ್ವೇನ ಚ ಶಿವಸ್ಯ ಪ್ರಾಕೃತಗುಣಸಂವೃತತ್ವೇನ ಸಗುಣತಾ ಹರೇಸ್ತದ್ರಹಿತತ್ವೇನ ನಿರ್ಗುಣತಾ ವಕ್ತವ್ಯಾ । ನಾನ್ಯಥೇತ್ಯಾಹ– **ಸಮ್ಪತ್ತೇರಿತಿ** ॥ ಸಾ ಸಮ್ಪತ್ತಿಃ । ಯಾ ವಾಗಾಹ ಸಾ ಮನ್ಮತಂ ವಕ್ತೀತಿ ಸಂಬಂಧಃ ॥೮೭೮॥

ಅಯಂ ಪ್ರಾಕೃತಗುಣಸಾಹಿತ್ಯರಾಹಿತ್ಯರೂಪಃ । ಪ್ರಕ್ರಮರೋಧೇನ ಉಪಕ್ರಮವಿರೋಧೇನ ॥ ೮೭೯ ॥

**ವಿವರಣೆ–** ಈ ಪ್ರಕರಣದಲ್ಲಿ ಭಾಗವತದಲ್ಲಿ ಮೊದಲು 'ದೇವಾಸುರಮನುಷ್ಯೇಸು ಯೇ ಭಜಂತ್ಯಶಿವಂ ಶಿವಮ್ಪ್ರಾಯಸ್ತೇ ಧನಿನೋ ಬ್ರಹ್ಮನ್ ನತು ಲಕ್ಷ್ಮೀಪತಿಂ ಹರಿಮ್' ಎಂಬ ಪ್ರಶ್ನೆಯಿದೆ. ದೇವಾಸುರಮನುಷ್ಯರಲ್ಲಿ ಯಾರು ಅಶಿವನಾದ ಶಿವನನ್ನು

ಭಜಿಸುತ್ತಾರೋ ಅವರು ಹೆಚ್ಚಾಗಿ ಸಂಪದ್ಭರಿತರಾಗಿರುತ್ತಾರೆ. ಲಕ್ಷ್ಮೀಪತಿಯಾದ ಹರಿಯನ್ನು ಭಜಿಸುವವರು ಸಂಪತ್ತಿನಿಂದ ಕೂಡಿರುವುದಿಲ್ಲ. ಇದಕ್ಕೆ ಕಾರಣವೇನು ಎಂಬ ಪ್ರಶ್ನೆಯಿದೆ. ಶಿವನು ಗುಣಬದ್ಧನಾದ್ದರಿಂದ ಅವನ ಆರಾಧನೆ ಮಾಡಿದರೆ, ಅವನು ಸಂಪತ್ತನ್ನೇ ಕೊಡುತ್ತಾನೆ. ಹರಿಯು ಗುಣಬದ್ಧನಾಗದಿರುವುದರಿಂದ ಅವನ ಆರಾಧನೆಯನ್ನು ಮಾಡಿದರೆ ಸಂಪತ್ತು ದೊರೆಯುವುದಿಲ್ಲ. ಶಿವನಲ್ಲಿ ಹದಿನಾರು ವಿಕಾರಗಳ ಸ್ವಾಮ್ಯವಿರುವುದರಿಂದ ಅವುಗಳನ್ನು ತನ್ನ ಸಂಪತ್ತೆಂದು ಎಣಿಸುತ್ತಾನೆ. ಹರಿಯು ಮಾತ್ರ ತ್ರಿಗುಣಗಳನ್ನು ತನ್ನ ಸಂಪತ್ತೆಂದು ತಿಳಿಯುವುದಿಲ್ಲ. ತನ್ನ ಜ್ಞಾನಾದಿಗುಣಗಳೇ ತನ್ನ ಸಂಪತ್ತೆಂದು ತಿಳಿಯುತ್ತಾನೆ. ಆದ್ದರಿಂದ ಶಿವನನ್ನು ಆರಾಧನೆ ಮಾಡಿದವನು ಶಿವನ ಅಧಿಕಾರವ್ಯಾಪ್ತಿಗೆ ಸೇರುವ ಸಂಪತ್ತನ್ನು ಪಡೆಯುತ್ತಾನೆ. ಹರಿಯನ್ನು ಆರಾಧಿಸುವವನು ಹರಿಯ ಸಂಪತ್ತಾದ ತ್ರಿಗುಣವರ್ಜಿತತ್ವ, ಜ್ಞಾನಾನಂದಾದಿಗಳನ್ನು ತನಗೆ ಯೋಗ್ಯವಾದಷ್ಟು ಪಡೆಯುತ್ತಾನೆ. ಈ ಅರ್ಥವನ್ನು ಹೇಳಬೇಕು. ಇಲ್ಲದಿದ್ದರೆ, ಪ್ರಶ್ನೆಗೂ ಮತ್ತು ಉತ್ತರಕ್ಕೂ ಸಂಬಂಧವೇ ಇಲ್ಲವೆಂದಾಗುತ್ತದೆ.

**ಕಿಂಚಾಪ್ರಾಕೃತಪುಂಸೋಽಸ್ಯ ಚಿನ್ಮಾತ್ರಾಕಾರತಾ ಧ್ರುವಾ ।**
**ಸ ಚ ಸಾರ್ವಜ್ಞಾದಿಧರ್ಮಾ ಸರ್ವಧರ್ಮಚ್ಯುತಿಃ ಕದಾ ॥ ೮೮೦ ॥**

**ಸ ಸರ್ವದೃಗಿತಿ ಪ್ರೋಕ್ತೋ ವಾಕ್ಯೇಽಸ್ಮಿನ್ನೇವ ಸದ್ಗುಣಃ ।**
**ಏಕಃ ಸಾಕ್ಷೀ ದೇವ ಇತಿ ಶ್ರುತಿವಾಕ್ಯೇಽಪಿ ಸದ್ಗುಣಃ ॥**
**ಅತಸ್ತ್ವದರ್ಥಕಥನೇ ಸ್ವವಿರುದ್ಧೈವ ವಾಗ್ ಭವೇತ್ ॥ ೮೮೧ ॥**

**ಅರ್ಥ–** ಕಿಂಚ= ಇಷ್ಟೇ ಅಲ್ಲದೆ, ಅಪ್ರಾಕೃತಪುಂಸಃ= ಅಪ್ರಾಕೃತಪುರುಷನಾದ, ಅಸ್ಯ= ಈ ಬ್ರಹ್ಮನಿಗೆ, ಚಿನ್ಮಾತ್ರಾಕಾರತಾ = ಚಿದ್ರೂಪವಾದ ಆಕಾರವು, ಧ್ರುವಾ= ನಿಶ್ಚಿತವಾಗಿದೆ. ಸ ಚ= ಆ ಚಿನ್ಮಾತ್ರಾಕಾರವಾದರೂ, ಸಾರ್ವಜ್ಞಾದಿಧರ್ಮಾ= ಸಾರ್ವಜ್ಞಾದಿಧರ್ಮಗಳುಳ್ಳದ್ದು, ಹೀಗಿರಲು, ಸರ್ವಧರ್ಮಚ್ಯುತಿಃ= ಸರ್ವಧರ್ಮಚ್ಯುತಿಯು, ಕದಾ= ಯಾವಾಗ ಉಂಟಾಗುವುದು ಹೇಳು.

ಸಃ= ಬ್ರಹ್ಮನು, ಸರ್ವದೃಕ್ ಇತಿ= ಸರ್ವದೃಕ್ ಎಂದು, ಅಸ್ಮಿನ್ನೇವ ವಾಕ್ಯೇ= ಇದೇ ವಾಕ್ಯದಲ್ಲಿ, ಪ್ರೋಕ್ತಃ= ಹೇಳಲ್ಪಟ್ಟಿದ್ದಾನೆ. ಶ್ರುತಿವಾಕ್ಯೇಽಪಿ= ಶ್ರುತಿವಾಕ್ಯದಲ್ಲಿಯೂ, ಏಕಃ ಸಾಕ್ಷೀ ದೇವಃ = ಏಕಃ ಸಾಕ್ಷೀ ದೇವಃ ಎಂದು, ಸದ್ಗುಣಃ = ಸದ್ಗುಣವೇ, ಪ್ರೋಕ್ತಃ= ಹೇಳಲ್ಪಟ್ಟಿದೆ. ಅತಃ = ಆದ್ದರಿಂದ, ತ್ವದರ್ಥಕಥನೇ = ನಿನ್ನ ಅರ್ಥವನ್ನು ಸ್ವೀಕರಿಸಿದರೆ, ವಾಕ್= ವಾಕ್ಯವು, ಸ್ವವಿರುದ್ಧೈವ = ಸ್ವವಚನವಿರುದ್ಧವೇ, ಭವೇತ್ = ಆಗುತ್ತದೆ.

**ಅನುವಾದ–** ಅದೂ ಅಲ್ಲದೆ, ಪ್ರಕೃತಿಗೆ ಪರನಾದವನು ಪ್ರಾಕೃತ ಆಕಾರವನ್ನು ಹೊಂದಿರದಿದ್ದರೂ ಅಪ್ರಾಕೃತವಾದ ಶುದ್ಧವಾದ, ಚಿದ್ರೂಪವಾದ ಆಕಾರವನ್ನು

ಹೊಂದಿರುತ್ತಾನೆ. ಅಂತಹ ಚಿನ್ಮಾತ್ರ ಆಕಾರವೇ ಸಾರ್ವಜ್ಞಾದಿ ಧರ್ಮಗಳುಳ್ಳದ್ದು. ಇನ್ನು ಸರ್ವಧರ್ಮಚ್ಯುತಿಯು ಯಾವಾಗ ಉಂಟಾಗುತ್ತದೆ? ಆ ಚಿನ್ಮಾತ್ರಾಕಾರವನ್ನೇ ಈ ವಾಕ್ಯದಲ್ಲಿ 'ಸರ್ವದೃಕ್ ಉಪದ್ರಷ್ಟಾ' ಎಂದೂ, 'ಏಕಃ ಸಾಕ್ಷೀ ದೇವಃ' ಎಂದೂ, ಅನೇಕ ಸದ್ಗುಣಪೂರ್ಣನಾಗಿಯೇ ಹೇಳಿದೆ. ಹೀಗಿರುವಾಗ ನಿನ್ನ ಅರ್ಥವನ್ನು ಅಂಗೀಕರಿಸಿದರೆ ಸ್ವವಚನವಿರೋಧವು ಬರುತ್ತದೆ.

**ಭಾವವಿಲಾಸಿನೀ–** ಅಪ್ರಾಕೃತಪುಂಸಃ ಪ್ರಕೃತೇಃ ಪರಃ ಪುರುಷ ಇತಿ ಚೋಕ್ತಸ್ಯಾಸ್ಯ ಹರೇಶ್ಚಿನ್ಮಾತ್ರಾಕಾರತಾ ಅಪ್ರಾಕೃತಶುದ್ಧಚಿದ್ರೂಪವಿಗ್ರಹತಾ । ಸಃ ಚಿನ್ಮಾತ್ರಾಕಾರಃ ಸರ್ವದೃಗುಪದ್ರಷ್ಟೇತ್ಯಾದ್ಯುಕ್ತಸಾರ್ವಜ್ಞಾದಿಧರ್ಮಾ ಚಿನ್ಮಾತ್ರಾಕಾರೇಽಪ್ಯವಿದ್ಯಮಾನಾ ಸರ್ವಧರ್ಮಚ್ಯುತಿಃ ಕದಾ ಸ್ಯಾತ್ । ನ ಕದಾಚಿದಿತ್ಯರ್ಥಃ ॥ ೮೮೦ ॥

ಇದಾನೀಂ ನಿರ್ಗುಣಶಬ್ದಸ್ಯ ಗುಣಮಾತ್ರವೈಧುರ್ಯಾರ್ಥಕತ್ವೇ ತದ್ವಾಕ್ಯಸ್ಥಪದಾನಾಮೇವ ಪರಸ್ಪರವಿರೋಧ ಇತ್ಯಾಹ– **ಸ ಸರ್ವದೃಗಿತಿ** ॥ ೮೮೧ ॥

**ವಿವರಣೆ–** ಈ ಅಂತರಂಗ ಪ್ರಮಾಣದಿಂದಲೂ ಗುಣಪೂರ್ಣನಾದ ಹರಿಯೇ ನಿರ್ಗುಣ ಎಂದು ಸಮರ್ಥನೆ ಮಾಡುತ್ತಾರೆ. 'ಪ್ರಕೃತೇಃ ಪರಃ' ಎಂದು ಹೇಳಿದ ಹರಿಯನ್ನು ಭಾಗವತವು 'ಸ ಸರ್ವದೃಕ್ ಉಪದ್ರಷ್ಟಾ' ಎಂದು ಹೇಳಿದೆ. ಆದರಿಂದ ಸರ್ವಜ್ಞತ್ವ ಮತ್ತು ಸಾಕ್ಷಿತ್ವರೂಪವಾದ ಧರ್ಮಗಳು ದೊರೆಯುತ್ತವೆ. ಕಾಠಕೋಪನಿಷತ್ತಿನಲ್ಲಿಯೂ, ನಿರ್ಗುಣಶಬ್ದವು ಇರುವ ವಾಕ್ಯದಲ್ಲೇ 'ಏಕಃ ಸಾಕ್ಷೀ ದೇವಃ' ಇತ್ಯಾದಿ ಶಬ್ದಗಳಿಂದ ನಿರ್ಗುಣನನ್ನು ಹೇಳಿದೆ. ಏಕಃ ಎಂದರೆ ಸರ್ವೋತ್ತಮನಾದವನು, ಸಾಕ್ಷೀ ಎಂದರೆ ಸರ್ವಜ್ಞನಾದವನು, ದೇವಃ ಎಂದರೆ ಕರ್ತೃತ್ವಾದಿಗುಣವುಳ್ಳವನು ಎಂದು ಅರ್ಥ. ಆದ್ದರಿಂದ ನಿರ್ಗುಣತ್ವವನ್ನು ಹೇಳುವ ಶ್ರುತಿ ಮತ್ತು ಸ್ಮೃತಿಗಳಲ್ಲಿ ಎರಡೂ ಕಡೆಗಳಲ್ಲಿಯೂ ಅನೇಕ ಗುಣಗಳನ್ನೇ ಹೇಳಿರುವುದರಿಂದ ನಿರ್ಗುಣಶಬ್ದಕ್ಕೆ ತ್ರಿಗುಣವರ್ಜಿತ ಎಂದೇ ಅರ್ಥವನ್ನು ಮಾಡಬೇಕು. ನೀನು ಹೇಳುವ ಅರ್ಥವನ್ನು ಅಂಗೀಕರಿಸಿದರೆ, ಈ ಎರಡು ಪ್ರಕರಣದ ವಾಕ್ಯಗಳಲ್ಲಿಯೂ ಸ್ವವಚನವಿರೋಧ ಉಂಟಾಗುತ್ತದೆ ಎಂದು ಅಭಿಪ್ರಾಯ.

ನಿಷೇದ್ಧುಮನುವಾದಶ್ಚೇತ್ ಸಿದ್ಧಂ ಮಮ ಸಮೀಹಿತಮ್ ।
ಅನೂದ್ಯತೇ ನಿರ್ಗುಣತ್ವಮೇಕ ಇತ್ಯಾದಿಕೋಕ್ತಿತಃ ॥
ನಿಷೇದ್ಧುಮಿತಿ ಯಚ್ಚಕ್ಯಂ ವಕ್ತುಂ ತದ್ವನ್ಮಯಾಽಪಿ ಹಿ ॥ ೮೮೨ ॥

**ಅರ್ಥ–** ನಿಷೇದ್ಧುಂ= ನಿಷೇಧವನ್ನು ಮಾಡುವುದಕ್ಕೋಸ್ಕರ, ಅನುವಾದಶ್ಚೇತ್= ಅನುವಾದ ಮಾಡಿದ್ದಾರೆ ಎಂದು ನೀನು ಹೇಳುವುದಾದರೆ, ಮಮ ಸಮೀಹಿತಮ್= ನನ್ನ ಇಷ್ಟವು, ಸಿದ್ಧಂ= ಸಿದ್ಧವಾಗುತ್ತದೆ. ಏಕ ಇತ್ಯಾದಿಕೋಕ್ತಿತಃ = ಏಕಃ, ಸಾಕ್ಷೀ, ದೇವಃ ಇತ್ಯಾದಿ

ಮಾತುಗಳಿಂದ, ಯತ್ = ಯಾವ (ನಿನ್ನ) ನಿರ್ಗುಣತ್ವವನ್ನು, ನಿಷೇದ್ಧುಂ = ನಿರಾಕರಿಸಲು, ನಿರ್ಗುಣತ್ವಮ್ = ನಿರ್ಗುಣತ್ವವು, ಅನೂದ್ಯತೇ = ಅನುವಾದಿಸಲ್ಪಟ್ಟಿದೆ. ಇತಿ = ಈ ರೀತಿಯಾಗಿ, ತದ್ವತ್ = ನಿನ್ನಂತೆಯೇ, ಮಯಾಽಪಿ= ನನ್ನಿಂದಲೂ, ವಕ್ತುಂ = ಹೇಳಲು, ಶಕ್ಯಂ ಹಿ = ಸಾಧ್ಯವಾಗುತ್ತದೆಯಷ್ಟೆ.

**ಅನುವಾದ–** ನಿಷೇಧವನ್ನು ಮಾಡುವುದಕ್ಕೋಸ್ಕರ ಅನುವಾದವನ್ನು ಮಾಡಿದ್ದಾರೆ ಎಂದು ಹೇಳುವುದಾದರೆ, ನನ್ನ ಇಷ್ಟವು ಸಿದ್ಧಿಯಾಗುತ್ತದೆ. ನಾನೂ ಸಹ 'ಏಕಃ ಸಾಕ್ಷಿ ದೇವಃ' ಇತ್ಯಾದಿಶಬ್ದಗಳಿಂದ ಸರ್ವೋತ್ತಮತ್ವಾದಿ ಗುಣಗಳನ್ನು ಹೇಳಲು ನಿರ್ಗುಣತ್ವವನ್ನು ಅನುವಾದವನ್ನು ಮಾಡಿ 'ಏಕಃ' ಇತ್ಯಾದಿ ಶಬ್ದಗಳಿಂದ ನಿಷೇಧ ಮಾಡುತ್ತಿದ್ದಾರೆ ಎಂದು ಹೇಳಲು ಸಾಧ್ಯವಾಗುತ್ತದೆ.

**ಭಾವವಿಲಾಸಿನೀ–** ನಿರ್ಗುಣ ಇತಿ ನಿಷೇದ್ಧುಂ 'ಏಕೋ ದೇವಃ' ಇತ್ಯಾದಿರನುವಾದ ಇತ್ಯತ ಆಹ– ನಿಷೇದ್ಧುಮಿತಿ ॥ ಯದ್ ಯಸ್ಮಾತ್ ತಸ್ಮಾತ್ ಸಿದ್ಧಮಿತಿ ಸಂಬಂಧಃ ॥ ೮೮೨ ॥

**ವಿವರಣೆ–** ನಿಷೇಧವನ್ನು ಮಾಡುವುದಕ್ಕೆ ಅನುವಾದ ಎಂದು ಹೇಳುವುದಾದರೆ, ಈ ಉಕ್ತಿಯು ನನಗೂ ಅನುಕೂಲವಾಗುತ್ತದೆ. 'ಏಕಃ ದೇವಃ' ಮುಂತಾದ ಶಬ್ದಗಳಿಂದ ಗುಣಗಳನ್ನು ಅನುವಾದ ಮಾಡಿ, ನಿರ್ಗುಣನೆಂಬ ಶಬ್ದದಿಂದ ಅವುಗಳನ್ನು ನಿಷೇಧ ಮಾಡುತ್ತದೆ ಎಂದು ನೀನು ಹೇಳುತ್ತೀಯೆ. ನಾನು 'ಕೇವಲೋ ನಿರ್ಗುಣಶ್ಚ' ಎಂಬಲ್ಲಿರುವ ನಿರ್ಗುಣಶಬ್ದವು ಗುಣಾಭಾವವನ್ನು ಅನುವಾದ ಮಾಡಿ 'ಏಕಃ' ಇತ್ಯಾದಿ ಶಬ್ದಗಳಿಂದ ಅವುಗಳನ್ನು ನಿಷೇಧ ಮಾಡುತ್ತದೆ ಎಂದು ಹೇಳುತ್ತೇನೆ. ಆದ್ದರಿಂದ ನಿಷೇಧಕ್ಕಾಗಿ ಅನುವಾದ ಎಂಬ ಕಲ್ಪನೆಯು ನನಗೂ ಅನುಕೂಲವಾಗಿದೆ.

**ಅಭಾವಸ್ಯ ನಿಷೇಧಾತ್ಮಾ ಭಾವೋಽಪಿ ಹಿ ವಿದಾಂ ಮತೇ ।**
**ಬಹುತ್ವಾನ್ಮನ್ನಿಷೇಧಾನಾಂ ಪ್ರಬಲತ್ವಂ ಚ ವಿದ್ಯತೇ ॥ ೮೮೩ ॥**

**ಅರ್ಥ–** ವಿದಾಂ ಮತೇ= ಜ್ಞಾನಿಗಳ ಮತದಲ್ಲಿ, ಅಭಾವಸ್ಯ ನಿಷೇಧಾತ್ಮಾ= ಅಭಾವದ ನಿಷೇಧರೂಪವು, ಭಾವೋಽಪಿ ಹಿ= ಭಾವರೂಪವಾಗಿಯೇ ಇದೆ. ನಿಷೇಧಾನಾಂ= ನಿಷೇಧವಾದವುಗಳು, ಬಹುತ್ವಾತ್= ಬಹುಸಂಖ್ಯಾಕವಾಗಿರುವುದರಿಂದ, ನನ್ನ ಮತದಲ್ಲಿ, ಪ್ರಬಲತ್ವಂ ಚ= ಪ್ರಬಲತ್ವವೂ, ವಿದ್ಯತೇ= ಇದೆ.

**ಅನುವಾದ–** ಜ್ಞಾನಿಗಳ ಪಕ್ಷದಲ್ಲಿ ಅಭಾವದ ನಿಷೇಧವು ಭಾವರೂಪವಾಗಿದೆ ಎಂಬುದು ಸಿದ್ಧವಾದ ವಿಷಯ. ಆದ್ದರಿಂದ ನನ್ನ ನಿಷೇಧಗಳು ಅನುವಾದಕ್ಕಿಂತ ಬಹುತ್ವಸಂಖ್ಯೆಯಿಂದ ಕೂಡಿವೆ. ಆದ್ದರಿಂದ ನಿಷೇಧಗಳು ಪ್ರಬಲವಾದ್ದರಿಂದ ಅವೇ ಅನುವಾದವನ್ನು ಬಾಧಿಸುತ್ತವೆ.

**ಭಾವವಿಲಾಸಿನೀ–** ನನು ನಞೋ ಭಾವಾದ್ ಭವತಾ ಕಥಂ ನಿಷೇಧಃ? ಇತ್ಯತ ಆಹ– **ಅಭಾವಸ್ಯೇತಿ** ॥ ಬಹುತ್ವಾದುಕ್ತರೀತ್ಯಾ ಏಕ ಇತ್ಯಾದಿಗುಣವಿಧಾಯಕವಿಶೇಷಣಾನಾಂ ಸರ್ವೇಷಾಮಪಿ ನಿರ್ಗುಣನಿಷೇಧರೂಪತ್ವಾತ್ ॥ ೮೮೩ ॥

**ವಿವರಣೆ–** ಅದ್ವೈತಿಗಳು 'ಏಕಃ ದೇವಃ ಸಾಕ್ಷೀ' ಮೊದಲಾದ ಅನೇಕ ಶಬ್ದಗಳಿಂದ ಅನೇಕ ಗುಣಗಳನ್ನು ಅನುವಾದವನ್ನು ಮಾಡಿ, ನಿರ್ಗುಣ ಎಂಬ ಶಬ್ದದಿಂದ ಅವುಗಳ ನಿಷೇಧವನ್ನು ಮಾಡುತ್ತದೆ ಎಂದು ಹೇಳುತ್ತಾರೆ. ಇಲ್ಲಿ ಗುಣಗಳನ್ನು ಹೇಳುವ ಶಬ್ದವು ಹೆಚ್ಚಾಗಿರುವುದರಿಂದ ಅನುವಾದಗಳ ಸಂಖ್ಯೆ ಜಾಸ್ತಿ, ನಿಷೇಧದ ಸಂಖ್ಯೆ ಕಡಿಮೆ. ನನ್ನ ಪಕ್ಷದಲ್ಲಾದರೆ ಅನುವಾದ ಮಾಡುವುದು ನಿರ್ಗುಣ ಎಂಬ ಒಂದೇ ಪದ. ಗುಣಗಳನ್ನು ಹೇಳುವ ಎಲ್ಲಾ ಪದಗಳೂ ನಿರ್ಗುಣಶಬ್ದದ ಅರ್ಥವಾದ ಗುಣಾಭಾವವನ್ನು ನಿಷೇಧಮಾಡುವುದರಿಂದ ನಿಷೇಧಗಳ ಸಂಖ್ಯೆ ಜಾಸ್ತಿ. ಬಹುತ್ವಪ್ರಯುಕ್ತ ಪ್ರಾಬಲ್ಯವಿರುವುದರಿಂದ ನಿಷೇಧಕ್ಕಾಗಿ ಅನುವಾದ ಎಂದು ಹೇಳಿದರೂ ನನ್ನ ಅರ್ಥವನ್ನೇ ಅಂಗೀಕರಿಸಬೇಕು.

ಸಮುಚ್ಚಿನೋತಿ ಕಿಂ ಶ್ರೌತಶ್ಚಶಬ್ದೋಽನ್ಯನಿಷೇಧನೇ ।
ಯದ್ಯೇಕತಾಪಕ್ಷಪಾತೀ ಮಧ್ಯಸ್ಥಾತಿಕ್ರಮಸ್ತದಾ ॥ ೮೮೪ ॥

**ಅರ್ಥ–** ಶ್ರೌತಃ = ಶ್ರುತ್ಯುಕ್ತವಾದ, ಚಶಬ್ದಃ = ಚಶಬ್ದವು, ಅನ್ಯನಿಷೇಧನೇ = ಬೇರೆಯ ಗುಣಗಳನ್ನು ನಿಷೇಧಮಾಡಿದಲ್ಲಿ, ಕಿಂ ಸಮುಚ್ಚಿನೋತಿ = ಯಾವುದನ್ನು ಸಮುಚ್ಚಯ ಮಾಡುತ್ತದೆ? ಯದಿ = ಒಂದು ವೇಳೆ, ಏಕತಾಪಕ್ಷಪಾತೀ = ಏಕತ್ವವನ್ನು ಸಮುಚ್ಚಯ ಮಾಡುವುದಾದರೆ, ತದಾ = ಆಗ, ಮಧ್ಯಸ್ಥ ಅತಿಕ್ರಮಃ = ಮಧ್ಯದಲ್ಲಿರುವ ದೇವತ್ವಾದಿಗಳನ್ನು ಅತಿಕ್ರಮಿಸಿದುದೇಕೆ?

**ಅನುವಾದ–** ಶ್ರುತಿಯಲ್ಲಿರುವ 'ಚ' ಶಬ್ದವು ಬೇರೆ ಯಾವುದನ್ನು ಸಮುಚ್ಚಯ ಮಾಡುತ್ತದೆ? ಏಕತ್ವವನ್ನು ಸಮುಚ್ಚಯಮಾಡುವುದಾದರೆ, ಮಧ್ಯದಲ್ಲಿರುವ ದೇವತ್ವಾದಿಗಳನ್ನು ಏಕೆ ಸಮುಚ್ಚಯ ಮಾಡುವುದಿಲ್ಲ?

**ಭಾವವಿಲಾಸಿನೀ–** ನಿರ್ಗುಣ ಇತ್ಯತ್ರ ದೂಷಣಾಂತರಂ ಚಾಹ– **ಸಮುಚ್ಚಿನೋತೀತಿ** ॥ ಶ್ರೌತಃ ನಿರ್ಗುಣಶ್ಚೇತ್ಯುಕ್ತಃ । ಅನ್ಯೇ ನಿಷೇಧನೇ ಏಕತ್ವಾದಿಕೈವಲ್ಯಾಂತಸಕಲನಿಷೇಧನೇ । ಚಶಬ್ದೇನೈಕ್ಯ-ವಾದಾನುಕೂಲತ್ವಾದೇಕತ್ವಗುಣಃ ಸಮುಚ್ಚೀಯತ ಇತಿ ಚೇತ್ ತರ್ಹಿ ಪರಸ್ಪರವಿರೋಧಃ ಸಂಕೋಚೋ ವಾ ದುಷ್ಪರಿಹರಃ । ದೂಷಣಾಂತರಮಾಹ– **ಯದೀತಿ** ॥ ಏಕತಾಪಕ್ಷಪಾತೀ ಏಕತ್ವಗುಣಸಮುಚ್ಚಾಯಕ ಇತಿ ಯಾವತ್ । ಮಧ್ಯಸ್ಥಾನಾಂ ಕೈವಲ್ಯಾದಿದೇವ-ತ್ವಾಂತತದುಭಯಮಧ್ಯಸ್ಥಗುಣಾನಾಮ್ ಅತಿಕ್ರಮಃ ಉಲ್ಲಂಘನಮ್ । ಸಮೀಪಸ್ಥಗುಣಾ-ನುಲ್ಲಂಘ್ಯಾತಿ ದೂರಸ್ಥಗುಣಸಮುಚ್ಚಯೋಽನುಚಿತ ಇತಿ ಭಾವಃ ॥ ೮೮೪ ॥

**ವಿವರಣೆ–** 'ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ಸರ್ವಾಧ್ಯಕ್ಷಃ ಸರ್ವಭೂತಾಧಿವಾಸೀ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂಬುದು ಕಠೋಪನಿಷತ್ತಿನ ಪೂರ್ಣವಾದ ವಾಕ್ಯ. ಇಲ್ಲಿ ನಿರ್ಗುಣಶ್ಚ ಎಂಬಲ್ಲಿ 'ಚ' ಶಬ್ದವಿದೆ. 'ಚ' ಶಬ್ದಕ್ಕೆ ಸಮುಚ್ಚಯವು ಅರ್ಥ ಎಂದು ಪ್ರಸಿದ್ಧವಾದುದು. ಹಿಂದೆ ಹೇಳಿದ ಗುಣಗಳನ್ನೆಲ್ಲಾ ನಿರ್ಗುಣಶಬ್ದವು ನಿಷೇಧವನ್ನೇ ಮಾಡುವುದಾದರೆ, 'ಚ' ಶಬ್ದದಿಂದ ಯಾವುದರ ಸಮುಚ್ಚಯವನ್ನು ಮಾಡಬೇಕು? ಇನ್ನು ಅವರಿಗೆ ಇಷ್ಟವಾದ ಐಕ್ಯವನ್ನು ಹೇಳುವ 'ಏಕ' ಶಬ್ದವು ಹೇಳಿದ ಏಕತ್ವವನ್ನು ಸಮುಚ್ಚಯ ಮಾಡುವುದಾದರೆ, ದೇವಃ, ಸಾಕ್ಷೀ, ಸರ್ವಾಧ್ಯಕ್ಷಃ ಮುಂತಾದ ಮಧ್ಯದಲ್ಲಿರುವ ಅನೇಕ ಪದಗಳು ಹೇಳಿದ ದೇವತ್ವಾದಿಗುಣಗಳನ್ನು ಏಕೆ ಸಮುಚ್ಚಯ ಮಾಡಬಾರದು? ಅವುಗಳನ್ನು ಉಲ್ಲಂಘಿಸಿ ಏಕತ್ವವನ್ನು ಮಾತ್ರ ಸಮುಚ್ಚಯ ಮಾಡಲು ಯಾವ ಕಾರಣವೂ ಇಲ್ಲ. ನಿರ್ಗುಣಶಬ್ದದಿಂದ ಹಿಂದೆ ಹಿಂದುಹಿಂದಾಗಿ ಹೋದರೆ ಕೊನೆಯಲ್ಲಿ 'ಏಕ' ಶಬ್ದವಿದೆ. ನಿರ್ಗುಣಶಬ್ದದ ಹತ್ತಿರದ ಶಬ್ದದಲ್ಲೇ ಇರುವ ಗುಣದ ಸಮುಚ್ಚಯವನ್ನು ಮಾಡುವುದನ್ನು ಬಿಟ್ಟು ಏಕೆ 'ಏಕ' ಶಬ್ದದವರೆಗೂ ಹೋಗಬೇಕು? ಆದ್ದರಿಂದ 'ಚ' ಶಬ್ದವು ನೀನು ಹೇಳಿದ ಅರ್ಥವುಳ್ಳ ನಿರ್ಗುಣಶಬ್ದದ ಜೊತೆಯಲ್ಲಿ ಏಕತ್ವಾದಿ ಯಾವ ಗುಣಗಳನ್ನೂ ಸಮುಚ್ಚಯ ಮಾಡಲು ಸಾಧ್ಯವಿಲ್ಲ. ನಾವು ಹೇಳಿದಂತೆ ತ್ರಿಗುಣವರ್ಜಿತತ್ವರೂಪವಾದ ಅರ್ಥವನ್ನು ತೆಗೆದುಕೊಂಡು ಅದರ ಜೊತೆಯಲ್ಲಿ 'ಏಕ' ಮೊದಲಾದ ಶಬ್ದವು ಹೇಳುವ ಸರ್ವೋತ್ತಮತ್ವಾದಿ ಸಕಲಸದ್ಧರ್ಮಗಳನ್ನೂ ಸಮುಚ್ಚಯ ಮಾಡುತ್ತದೆ ಎಂದು ಒಪ್ಪಬೇಕು.

**ಸಂಖ್ಯಾರೂಪೋ ಗುಣಃ ಸಾಹಿ ಧರ್ಮಮಾತ್ರಗುಣಾಃ ಪರೇ ।**
**ಪ್ರಬಲೇನ ಕೃತಸ್ನೇಹೋ ದುರ್ಬಲಾನ್ನ ಸ ಗಚ್ಛತಿ ॥**
**ಸ್ಥಾನಭ್ರಂಶಂ ಸ್ವಾರ್ಥನಾಶಂ ಸಹತೇ ನಹಿ ಸೋಽವ್ಯಯಃ ॥ ೮೮೫ ॥**

**ಅರ್ಥ–** ಸಾ= ಏಕತ್ವವು, ಸಂಖ್ಯಾರೂಪಃ= ಸಂಖ್ಯಾರೂಪವಾದ, ಗುಣಃ ಹಿ= ಗುಣವಷ್ಟೇ, ಪರೇ= ಉಳಿದ ದೇವತ್ವಾದಿಗಳು, ಧರ್ಮಮಾತ್ರಗುಣಾಃ= ಧರ್ಮವಾದ ಕಾರಣದಿಂದ ಗುಣಗಳಾಗಿವೆ, ಪ್ರಬಲೇನ ಕೃತಸ್ನೇಹಃ= ಪ್ರಬಲವಾದ ದೇವತ್ವಾದಿ ಗುಣಗಳಿಂದ ಸ್ನೇಹವನ್ನು ಪಡೆದ, ಸಃ= ಆ ಚ ಶಬ್ದವು, ದುರ್ಬಲಾತ್= ದುರ್ಬಲವಾದ ಏಕತ್ವ ಗುಣದಿಂದ, ನ ಗಚ್ಛತಿ= ಹೊರಗೆ ಬರುವುದಿಲ್ಲ, ಅವ್ಯಯಃ= ಅವ್ಯಯ ಸಂಜ್ಞೆಯುಳ್ಳ, ಸಃ= ಆ ಚ ಶಬ್ದವು, ಸ್ಥಾನಭ್ರಂಶಂ= ತನ್ನ ಸ್ಥಾನದ ವ್ಯತ್ಯಾಸವನ್ನಾಗಲೀ, ಸ್ವಾರ್ಥನಾಶಂ= ತನ್ನ ಸ್ವಾರಸಿಕ ಅರ್ಥದ ನಾಶವನ್ನಾಗಲೀ, ನ ಸಹತೇ= ಸಹಿಸುವುದಿಲ್ಲ.

**ಅನುವಾದ–** ಏಕತ್ವವು ಕೇವಲ ಸಂಖ್ಯಾರೂಪವಾದ ಗುಣ. ಆದರೆ ದೇವತ್ವಾದಿಗಳು ಧರ್ಮವಾದ ಕಾರಣದಿಂದ ಗುಣಗಳು. ನಿರ್ಗುಣತ್ವಕ್ಕೆ ದೇವತ್ವಾದಿಗಳು ವಿರೋಧಿ

ಗಳು. ಏಕತ್ವವು ಅಂತಹ ವಿರೋಧಯಲ್ಲ. ಅದು ದುರ್ಬಲವಾದುದು. ನಿರ್ಗುಣಶ್ಚ ಎಂಬಲ್ಲಿರುವ ಚಶಬ್ದವು ವಿರೋಧಿಯಾದ ಪ್ರಬಲವಾದ ದೇವತ್ವಾದಿಗುಣಗಳ ಜೊತೆಯಲ್ಲಿಯೇ ಸ್ನೇಹವನ್ನು ಮಾಡಿದ ಮೇಲೆ ದುರ್ಬಲವಾದ ಏಕತ್ವಗುಣವನ್ನು ಬಿಡುವುದಿಲ್ಲ. ನಿರ್ಗುಣಶ್ಚ ಎಂಬಲ್ಲಿರುವ ಚಶಬ್ದವು ಅವ್ಯಯವಾದ್ದರಿಂದ ಅದು ತನ್ನ ಸ್ವಾರಸಿಕ ಅರ್ಥದ ತ್ಯಾಗವನ್ನು ಮಾಡುವುದಿಲ್ಲ ಮತ್ತು ಇರುವ ಸ್ಥಳವನ್ನು ಬಿಟ್ಟು ಬೇರೆ ಸ್ಥಳಕ್ಕೂ ಹೋಗುವುದಿಲ್ಲ.

**ಭಾವವಿಲಾಸಿನೀ– ದೂಷಣಾಂತರಮಾಹ– ಸಂಖ್ಯಾರೂಪ ಇತಿ ।।** ಸಾ ಏಕತಾ । ಪರೇ ದೇವತ್ವಾದಯಃ ಧರ್ಮಮಾತ್ರಗುಣಾಃ ಪದಾರ್ಥಧರ್ಮತಾಮಾತ್ರೇಣ ಗುಣಶಬ್ದವಾಚ್ಯಾಃ । ಸ್ವನಿರ್ಗುಣಶಬ್ದಃ ಪ್ರಬಲೇನ ಮುಖ್ಯಗುಣೇನ ನಿರ್ಗುಣಪದಾದವಶ್ಯನಿಷೇಧ್ಯೇನ ಕೃತಸ್ನೇಹಃ ತಂ ಸಮುಚ್ಚಿನ್ವನ್ನಿತ್ಯರ್ಥಃ । ಸಃ ಚಶಬ್ದಃ । ದುರ್ಬಲಾದ್ ಗುಣಶಬ್ದಾರ್ಥತ್ವಸಾಮ್ಯೇನ ಧರ್ಮ-ಮಾತ್ರಾತ್ ಅತಿವಿರೋಧಂ ಕರ್ತುಮ್ ಅಸಮರ್ಥಾದಿತ್ಯರ್ಥಃ । ನ ಗಚ್ಛತಿ ನಾಪಯಾತಿ । ಅತಿವಿರೋಧಿನಮಪಿ ಸಮುಚ್ಚಿನ್ವನ್ನ ವಿರೋಧಿನಸ್ತು ಸರ್ವಥಾ ಸಮುಚ್ಚಿನುಯಾದಿತಿ ಭಾವಃ । ನಹ್ಯತ್ಯಂತವಿರೋಧಿನಂ ವ್ಯಾಘ್ರಂ ಸ್ವಗೋಷ್ಠೇ ಸಂಗೃಹ್ಣಂತೀ ಗೌಃ ಸ್ವವತ್ಸಾನೇವ ಮುಂಚತೀತಿ ಕ್ವಾಪಿ ದೃಷ್ಟಮ್ । ಕಿಂಚ ಅವ್ಯಯಃ ಅವ್ಯಯಸಂಜ್ಞಃ ಚಶಬ್ದಃ ಅತಿಸ್ಥಿರ ಇತಿ ಧ್ವನಿಃ । ಸ್ಥಾನಭ್ರಂಶಂ ಸ್ವಸ್ಥಾನಾದನ್ಯತ್ರಗಮನಂ ಸ್ವಾರ್ಥನಾಶಂ ಸಮುಚ್ಚಯಾಖ್ಯಸ್ವರಸಾರ್ಥಪರಿತ್ಯಾಗಂ ನ ಸಹತೇ । ವ್ಯಯಶೀಲಸ್ಯೈವ ಸ್ವಾರ್ಥನಾಶೋ ನಾವ್ಯಯಸ್ಯೇತಿ ಧ್ವನಿಃ । ಅತಃ ಸ್ವೇತರನಿಷೇಧೇ ಚ ಶಬ್ದವೈಯರ್ಥ್ಯಮಪರಿಹಾರ್ಯಮಿತಿ ಭಾವಃ ।। ೮೮೫ ।।

**ವಿವರಣೆ–** ನಿರ್ಗುಣ ಶಬ್ದವು ನಿರ್ಗುಣತ್ವಕ್ಕಿಂತ ಇತರವಾದ ಸಕಲ ಗುಣಗಳನ್ನು ನಿಷೇಧ ಮಾಡುತ್ತದೆ ಎಂದು ಹೇಳುವುದು ಯುಕ್ತವಾಗುವುದಿಲ್ಲ ಎಂದು ಇಲ್ಲಿ ಪ್ರತಿಪಾದನೆ ಮಾಡುತ್ತಾರೆ. ಏಕತ್ವವು ಸಂಖ್ಯಾರೂಪವಾದುದು. ಅದು ಯಾವುದಕ್ಕೂ ವಿರೋಧಿಯಲ್ಲ. ಆದರೆ ಧರ್ಮರೂಪವಾದ ದೇವತ್ವಾದಿಗಳು ಮಾತ್ರ ಧರ್ಮಾಭಾವರೂಪವಾದ ನಿರ್ಗುಣತ್ವಕ್ಕೆ ನೇರವಾಗಿ ವಿರೋಧವನ್ನು ಮಾಡುತ್ತವೆ. ನಿರ್ಗುಣಶ್ಚ ಎಂಬಲ್ಲಿರುವ ಚಶಬ್ದವು ಸಮುಚ್ಚಯಾರ್ಥಕವಾಗಿದೆ. ಅದು ಹಿಂದೆ ಹೇಳಿದ ದೇವತ್ವಾದಿಗುಣಗಳನ್ನೇ ಸಮುಚ್ಚಯ ಮಾಡುತ್ತದೆ. ನಿರ್ಗುಣ ಶಬ್ದದ ಜೊತೆಯಲ್ಲಿ ಸಂಬಂಧವನ್ನು ಹೊಂದಿದ ಚಶಬ್ದವು ನಿರ್ಗುಣತ್ವಕ್ಕೆ ವಿರೋಧಿಯಾದ ದೇವತ್ವಾದಿಗಳನ್ನೇ ತನ್ನ ಜೊತೆಯಲ್ಲಿ ತೆಗೆದುಕೊಂಡು ಸಮುಚ್ಚಯವನ್ನು ಮಾಡಿದ ಮೇಲೆ ದುರ್ಬಲವಾದ ಏಕತ್ವವನ್ನು ಸಮುಚ್ಚಯ ಮಾಡುತ್ತದೆ. ವಿರೋಧಿಯಾದ ವ್ಯಾಘ್ರವನ್ನು ಕೊಟ್ಟಿಗೆಯಲ್ಲಿ ತನ್ನ ಜೊತೆಯಲ್ಲಿ ಇಟ್ಟುಕೊಳ್ಳುವ ಗೋವು ತನ್ನ ಕರುವನ್ನೇ ಬಿಟ್ಟು ಬಿಡುವುದಿಲ್ಲವಷ್ಟೇ. ಆದ್ದರಿಂದ ಎಲ್ಲ ಗುಣಗಳನ್ನೂ ನಿಷೇಧಮಾಡಿದರೆ ಐಕ್ಯವು ಸಿದ್ಧವಾಗುವುದಿಲ್ಲ. ನಿರ್ಗುಣತ್ವೇತರ ಸಕಲಗುಣಗಳನ್ನು ನಿಷೇಧಮಾಡಿದರೆ ಸಮುಚ್ಚಯಾರ್ಥವಾದ ಚಶಬ್ದವು ಕೂಡುವುದಿಲ್ಲ. ಏಕೆಂದರೆ ನಿರ್ಗುಣ ಶಬ್ದವು ಗುಣದ ಅಭಾವವನ್ನು

ಹೇಳುತ್ತದೆ. ಏಕ ಮೊದಲಾದ ಶಬ್ದಗಳು ಏಕತ್ವಾದಿ ಗುಣಗಳನ್ನು ಹೇಳುತ್ತದೆ. ಆದ್ದರಿಂದ ವಿರುದ್ಧವಾದವುಗಳನ್ನು ಸಮುಚ್ಚಯ ಮಾಡಲು ಸಾಧ್ಯವಿಲ್ಲ. ಆದ್ದರಿಂದ ನಿರ್ಗುಣ ಶ್ರುತಿಯು ನಿರ್ಗುಣತ್ವೇತರ ಸಕಲಗುಣಗಳನ್ನು ನಿಷೇಧಮಾಡುತ್ತದೆ ಎಂಬುದನ್ನು ಯುಕ್ತವಾಗುವುದಿಲ್ಲ ಎಂದು ಅಭಿಪ್ರಾಯ.

**ಏಕತ್ವರೂಪಮೈಕ್ಯಂ ಚ ನಿಷೇಧ್ಯಂ ಸ್ಯಾತ್ ಕಥಂ ತವ ।**
**ಏಕಪಾತ್ರಸ್ಥಪಕ್ವಾನ್ನೇ ಪಾಕಶ್ಚೈಕವಿಧೋ ಭುವಿ ॥**
**ಅತಸ್ತತ್ತದ್ಗುಣೌಘೇಷು ತ್ಯಾಗೋತ್ಯಾಗಶ್ಚ ನೇಷ್ಯತೇ ॥ ೮೮೬ ॥**

**ಅರ್ಥ–** ತವ= ನಿನಗೆ, ಏಕತ್ವರೂಪಂ= ಏಕತ್ವರೂಪವಾದ, ಐಕ್ಯಂ ಚ= ಐಕ್ಯವಾದರೂ, ಕಥಂ= ಹೇಗೆ, ನಿಷೇಧ್ಯಂ ಸ್ಯಾತ್= ನಿಷೇಧ್ಯವಾಗುತ್ತದೆ? ಭುವಿ= ಭೂಮಿಯಲ್ಲಿ, ಏಕಪಾತ್ರಸ್ಥಪಕ್ವಾನ್ನೇ= ಒಂದೇ ಪಾತ್ರೆಯಲ್ಲಿರುವ ಪಕ್ವಾನ್ನದಲ್ಲಿ, ಪಾಕಃ= ಪಾಕವು, ಏಕವಿಧಶ್ಚ= ಒಂದೇ ರೀತಿಯಾಗಿರುತ್ತದೆಯಷ್ಟೇ, ಅತಃ= ಆದ್ದರಿಂದ, ತತ್ತದ್ಗುಣೌಘೇಷು= ಆಯಾ ಗುಣಗಳ ಸಮೂಹದಲ್ಲಿ, ತ್ಯಾಗಃ ಅತ್ಯಾಗಶ್ಚ= ಒಂದನ್ನು ಸ್ವೀಕರಿಸುವುದು ಮತ್ತು ಒಂದನ್ನು ಬಿಡುವುದು, ನೇಷ್ಯತೇ= ಒಪ್ಪಲ್ಪಡುವುದಿಲ್ಲ.

**ಅನುವಾದ–** ನಿನಗೆ ಅಭಿಮತವಾದ ಐಕ್ಯವು ಏಕತ್ವರೂಪವಾದುದು. ಆದೂ ಗುಣವೇ. ನೀನು ಅದನ್ನು ಹೇಗೆ ನಿಷೇಧ ಮಾಡಲು ಸಾಧ್ಯ? ಒಂದೇ ಪಾತ್ರೆಯಲ್ಲಿರುವ ಪಕ್ವಾನ್ನದಲ್ಲಿ ಇಂಟಾಗಿರುವ ಪಾಕವು ಒಂದೇ ವಿಧವಾಗಿರುತ್ತವೆಯಷ್ಟೇ? ಆದ್ದರಿಂದ ಆಯಾ ಪದಗಳು ಹೇಳುವ ಗುಣರಾಶಿಯಲ್ಲಿ ಒಂದರ ಸ್ವೀಕಾರ ಮತ್ತು ಇನ್ನೊಂದರ ಪರಿತ್ಯಾಗ ಎಂಬುದು ಅಂಗೀಕಾರಾರ್ಹವಲ್ಲ.

**ಭಾವವಿಲಾಸಿನೀ–** ಸ್ವೇತರಸಕಲನಿಷೇಧೇ ದೂಷಣಾಂತರಂ ಚಾಹ– **ಏಕತ್ವರೂಪಮಿತಿ** ॥ ತರ್ಹಿ ತನ್ಮಾತ್ರಾನಿಷೇಧೋಽಸ್ತ್ವಿತ್ಯಾಹ– **ಏಕಪಾತ್ರೇತಿ** ॥ ೮೮೬ ॥

**ವಿವರಣೆ–** ನಿರ್ಗುಣತ್ವಾತಿರಿಕ್ತವಾದ ಸಕಲ ಗುಣಗಳನ್ನು ನಿಷೇಧ ಮಾಡಿದರೆ ಇಲ್ಲಿ ದೂಷಣಾಂತರವನ್ನು ಹೇಳುತ್ತಾರೆ. ಏಕತ್ವವು ಒಂದು ನಿರ್ಗುಣತ್ವಾತಿರಿಕ್ತವಾದ ಗುಣವಾದ್ದರಿಂದ ಅದನ್ನೂ ನಿಷೇಧ ಮಾಡಿದರೆ ನಿನಗೆ ಅನಿಷ್ಟಪ್ರಾಪ್ತಿಯಾಗುತ್ತದೆ. ಏಕತ್ವ ಗುಣವನ್ನು ಬಿಟ್ಟು ಉಳಿದ ಗುಣಗಳನ್ನು ನಿಷೇಧ ಮಾಡುತ್ತೇನೆ ಎಂದು ಹೇಳುವಂತಿಲ್ಲ. ಒಂದೇ ಪಾತ್ರೆಯ ಪಕ್ವಾನ್ನದಂತೆ ಅದು ಇಲ್ಲವೇ ಸ್ವೀಕಾರಾರ್ಹವಾಗಬೇಕು ಅಥವಾ ಪರಿತ್ಯಾಗಾರ್ಹವಾಗಬೇಕು. ಆದರಂತೆ ಒಂದೇ ವಾಕ್ಯದ ಇಷ್ಟು ಗುಣಗಳನ್ನು ಹೇಳುವಾಗ ಎಲ್ಲ ಗುಣಗಳನ್ನೂ ಸ್ವೀಕರಿಸಬೇಕು ಅಥವಾ ಎಲ್ಲ ಗುಣಗಳನ್ನೂ ಪರಿತ್ಯಾಗ ಮಾಡಬೇಕು. ಅದನ್ನು ಬಿಟ್ಟು ಒಂದನ್ನು ಮಾತ್ರ ಸ್ವೀಕರಿಸಿ ಉಳಿದ ಎಲ್ಲಾ ಗುಣಗಳನ್ನು ಪರಿತ್ಯಾಗ ಮಾಡುತ್ತೇವೆ ಎಂದು ಹೇಳುವುದು ಎಲ್ಲ ಲೋಕ ಮತ್ತು ಶಾಸ್ತ್ರದ ನೀತಿಗೆ ವಿರುದ್ಧವಾದುದು ಎಂದು ಅಭಿಪ್ರಾಯ.

**ಆದಿರಂತ್ಯೇನ ಸಹಿತಸ್ತನ್ಮಧ್ಯಪತಿತಾನ್ ಗುಣಾನ್ ।**
**ಸಂಗೃಹ್ಣಾತ್ಯಂತತೋ ನಾಂತ್ಯಂ ಪ್ರತ್ಯಾಹಾರಮನುಸ್ಮರ ॥ ೮೮೭ ॥**

**ಅರ್ಥ–** ಅಂತ್ಯೇನ ಸಹಿತಃ= ಕೊನೆಯ ನಿರ್ಗುಣ ಶಬ್ದಾರ್ಥವಾದ ನಿರ್ಗುಣತ್ವದಿಂದ ಸಹಿತವಾದ, ಏಕ ಆದಿಃ= ಏಕ ಎಂಬ ಪದದಿಂದ ಉಕ್ತವಾದ ಐಕ್ಯವು, ತನ್ಮಧ್ಯಪತಿತಾನ್= ಇವೆರಡರ ಮಧ್ಯದಲ್ಲಿರುವ, ಗುಣಾನ್= ಎಲ್ಲ ಗುಣಗಳನ್ನು, ಸಂಗೃಹ್ಣಾತಿ= ಸಂಗ್ರಹ ಮಾಡುತ್ತದೆ, ಅಂತತಃ= ವಿಚಾರ ಮಾಡಿದರೆ, ಅಂತ್ಯಂ ನ= ಅಂತ್ಯವಾದ ನಿರ್ಗುಣತ್ವವನ್ನೇ ಸಂಗ್ರಹಿಸುವುದಿಲ್ಲ, ಪ್ರತ್ಯಾಹಾರಂ= ವ್ಯಾಕರಣಶಾಸ್ತ್ರದ ಪ್ರತ್ಯಾಹಾರ ಸಂಜ್ಞೆಯನ್ನು, ಅನುಸ್ಮರ= ಸ್ಮರಿಸಿಕೋ.

**ಅನುವಾದ– ಕೊನೆಯಲ್ಲಿ ಹೇಳಿದ ನಿರ್ಗುಣತ್ವ ಸಹಿತವಾದ ಆದಿಯಲ್ಲಿ ಹೇಳಿದ ಏಕತ್ವವು ಇವೆರಡರ ಮಧ್ಯದಲ್ಲಿರುವ ಎಲ್ಲಾ ಗುಣಗಳನ್ನೂ ಸಂಗ್ರಹಿಸುತ್ತದೆ. ವಿಚಾರ ಮಾಡಿದರೆ ಅಂತ್ಯವಾದ ನಿರ್ಗುಣತ್ವವನ್ನೇ ಸಂಗ್ರಹಿಸುವುದಿಲ್ಲ. ವ್ಯಾಕರಣಶಾಸ್ತ್ರದ ಪ್ರತ್ಯಾಹಾರವನ್ನು ಸ್ಮರಿಸಿಕೋ.**

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ– **ಆದಿರಿತಿ ॥** ಆದಿಃ ಏಕತ್ವಗುಣಃ ಅನ್ತ್ಯೇನ ನಿರ್ಗುಣತ್ವೇನ ಸಹಿತಃ ತೇನಾಽನಿಷಿದ್ಧ ಇತಿ ಯಾವತ್ । ತನ್ಮಧ್ಯಪತಿತಗುಣಾನ್ ದೇವತ್ವಾದೀನ್ ಸಂಗೃಹ್ಣಾತಿ ಆತ್ಮವದನಿಷಿದ್ಧಾನ್ ಕರೋತಿ । ಅಂತತೋ ವಿಚಾರ್ಯಮಾಣೇ ಅನ್ತ್ಯೋ ನಿರ್ಗುಣತ್ವರೂಪಧರ್ಮ ಏವ ನ । ಸಾವಕಾಶನಿರವಕಾಶಯೋರ್ಮಧ್ಯೇ ಸಾವಕಾಶಸ್ಯೈ-ವಾನ್ಯಥಾಕಾರ್ಯತ್ವಾದಿತಿ ಭಾವಃ । ತತ್ರ ದೃಷ್ಟಾಂತಮಾಹ– **ಪ್ರತ್ಯಾಹಾರಮಿತಿ ॥** ಸ ಹಿ ಆದಿಮಧ್ಯವರ್ಣಾನ್ ಸಂಗೃಹ್ಯಾನ್ತ್ಯಮೇವ ವರ್ಣಮಿತ್ಸಂಜ್ಞಯಾ ಲೋಪಯತಿ । ತದ್ವದಿತಿ ಭಾವಃ ॥ ೮೮೭ ॥

**ವಿವರಣೆ–** ವ್ಯಾಕರಣದಲ್ಲಿ ಅಚ್ ಹಲ್ ಮೊದಲಾದ ಪ್ರತ್ಯಾಹಾರಗಳಿವೆ. ಈ ಅಚ್ ಎಂಬ ಪ್ರತ್ಯಾಹಾರವು ಅವರ್ಣದಿಂದ ಹಿಡಿದು ಚ ಕಾರದವರೆಗೆ ಇರುವ ಎಲ್ಲಾ ವರ್ಣಗಳನ್ನೂ ಸಂಗ್ರಹಿಸುತ್ತದೆ. ಇದರಂತೆಯೇ ಹಲ್ ಎಂಬ ಪ್ರತ್ಯಾಹಾರವು ಹವರ್ಣದಿಂದ ಹಿಡಿದು ಮಹೇಶ್ವರ ಸೂತ್ರದಲ್ಲಿ ಲ ಕಾರದವರೆಗಿರುವ ಎಲ್ಲ ವರ್ಣಗಳನ್ನೂ ಸಂಗ್ರಹಿಸುತ್ತದೆ. ಅದರಂತೆ, ಆದಿಯಲ್ಲಿ ಹೇಳಲ್ಪಟ್ಟ ಏಕತ್ವವು ನಿರ್ಗುಣ ಶಬ್ದವರೆಗೆ ಹೇಳಲ್ಪಟ್ಟ ಎಲ್ಲ ಗುಣಗಳನ್ನೂ ಸಂಗ್ರಹಿಸುತ್ತದೆ. ಅಚ್, ಹಲ್ ಪ್ರತ್ಯಾಹಾರಗಳು ಚ ಕಾರವನ್ನು ಮತ್ತು ಲ ಕಾರವನ್ನು ಸಂಗ್ರಹಿಸುವುದಿಲ್ಲ. ಅದನ್ನು ಬಿಟ್ಟು ಅಲ್ಲಿರುವ ಉಳಿದ ವರ್ಣಗಳನ್ನು ಸಂಗ್ರಹಿಸುತ್ತವೆ. ಅದರಂತೆ, ನಿರ್ಗುಣತ್ವವು ಅದುವರೆಗೆ ಹೇಳಿದ ಎಲ್ಲ ಗುಣಗಳಿಗೂ ವಿರೋಧಿಯಾದುದರಿಂದ ಅದೊಂದು ಬಿಟ್ಟು ಉಳಿದ ಎಲ್ಲ ಗುಣಗಳು ಸಂಗೃಹೀತವಾಗುತ್ತವೆ ಎಂದು ಹೇಳುವುದು ಯೋಗ್ಯವಾದುದು ಎಂದು ಅಭಿಪ್ರಾಯ.

**ದೂರಸ್ಥಮರ್ತ್ಯಪಾನೀಯಪಾನಾರ್ಥಂ ಸೇತುಭೇದನೇ ।**
**ತೃಷಿತಾನೇಕಮಧ್ಯಸ್ಥತೃಪ್ತೇಃ ಪಶ್ಚಾತ್ ಸ ತೃಪ್ಯತಿ ॥ ೮೮೮ ॥**

**ತವ ಪ್ರಿಯೈಕ್ಯರಕ್ಷಾರ್ಥಂ ಸಂಕೋಚೇ ತು ನಞಃ ಕೃತೇ ।**
**ಮಮ ಪ್ರಿಯಗುಣೌಘಸ್ಯ ರಕ್ಷಾ ಪೂರ್ವಂ ಭವಿಷ್ಯತಿ ॥ ೮೮೯ ॥**

**ಅರ್ಥ–** ದೂರಸ್ಥಮರ್ತ್ಯಪಾನೀಯಪಾನಾರ್ಥಂ= ದೂರದಲ್ಲಿರುವ ಮನುಷ್ಯನ ಜಲಪಾನಕ್ಕೋಸ್ಕರವಾಗಿ, ಸೇತುಭೇದನೇ= ಸೇತುವೆಯನ್ನು ಒಡೆದರೆ, ತೃಷಿತಾನೇಕ ಮಧ್ಯಸ್ಥತೃಪ್ತೇಃ ಪಶ್ಚಾತ್= ಮಧ್ಯದಲ್ಲಿರುವ ಬಾಯಾರಿದ ಅನೇಕ ಮನುಷ್ಯರ ತೃಪ್ತಿಯಾದ ಮೇಲೆ, ಸಃ= ಅವನು, ತೃಪ್ಯತಿ= ತೃಪ್ತಿಯನ್ನು ಹೊಂದುತ್ತಾನೆ. ತವ= ನಿನಗೆ, ಪ್ರಿಯೈಕ್ಯರಕ್ಷಾರ್ಥಂ= ಪ್ರಿಯವಾದ ಐಕ್ಯವನ್ನು ರಕ್ಷಿಸುವುದಕ್ಕೋಸ್ಕರ, ನಞಃ= ನಞ ಅರ್ಥವಾದ ನಿಷೇಧಕ್ಕೆ, ಸಂಕೋಚೇ ಕೃತೇ ತು= ಸಂಕೋಚವನ್ನು ಮಾಡಿದರೆ, ಮಮ ಪ್ರಿಯಗುಣೌಘಸ್ಯ= ನನಗೆ ಪ್ರಿಯವಾದ ಗುಣಸಮೂಹದ, ರಕ್ಷಾ= ರಕ್ಷಣೆಯು, ಪೂರ್ವಂ= ಮೊದಲೇ, ಭವಿಷ್ಯತಿ= ಆಗುತ್ತದೆ.

**ಅನುವಾದ– ದೂರದಲ್ಲಿರುವ ಮನುಷ್ಯನ ಜಲಪಾನಕ್ಕೋಸ್ಕರವಾಗಿ ಸೇತುವೆಯನ್ನು ಒಡೆದರೆ ಮಧ್ಯದಲ್ಲಿರುವ ಬಾಯಾರಿದ ಅನೇಕ ಮನುಷ್ಯರು ತೃಪ್ತಿಯನ್ನು ಪಡೆದ ಮೇಲೆ ಆ ದೂರಸ್ಥ ಮನುಷ್ಯನು ತೃಪ್ತಿಯನ್ನು ಪಡೆಯುತ್ತಾನೆ. ನಿನಗೆ ಪ್ರಿಯವಾದ ಐಕ್ಯವನ್ನು ರಕ್ಷಿಸಲು ನಿರ್ಗುಣ ಎಂಬಲ್ಲಿರುವ ನಿಷೇಧಾರ್ಥಕವಾದ ನಿರ್ ಎಂಬ ಉಪಸರ್ಗದ ಅರ್ಥವಾದ ನಿಷೇಧಕ್ಕೆ ಸಂಕೋಚವನ್ನು ಮಾಡಿದರೆ ನನಗೆ ಪ್ರಿಯವಾದ ಗುಣಸಮೂಹದ ರಕ್ಷಣೆಯು ನಿನ್ನ ಐಕ್ಯದ ರಕ್ಷಣೆಗಿಂತ ಮೊದಲೇ ಉಂಟಾಗುತ್ತದೆ.**

**ಭಾವವಿಲಾಸಿನೀ–** ನಿರ್ಗುಣ ಇತ್ಯತ್ರ ನಞಃ ಸಙ್ಕೋಚೇನ ತ್ವದಭಿಲಷಿತೈಕತ್ವಗುಣರಕ್ಷಣೇ ಮದಭಿಲಷಿತಗುಣಾನಾಂ ಪ್ರಥಮತ ಏವ ರಕ್ಷಾ ಸ್ಯಾದಿತ್ಯತ್ರ ಲೌಕಿಕಂ ದೃಷ್ಟಾಂತಮುಕ್ತ್ವಾ ದಾರ್ಷ್ಟಾನ್ತಿಕಮಪಿ ಯೋಜಯತಿ– **ದೂರಸ್ಥೇತಿ** ॥ ೮೮೮-೮೮೯ ॥

**ವಿವರಣೆ–** ಏಕೋ ದೇವಃ ಎಂಬ ವಾಕ್ಯದಲ್ಲಿ ಏಕಶಬ್ದವು ಮೊದಲಿದೆ. ನಿರ್ಗುಣಶ್ಚ ಎಂಬುದು ವಾಕ್ಯದ ಕೊನೆಯಲ್ಲಿದೆ. ಅವರು ಐಕ್ಯವನ್ನು ರಕ್ಷಿಸಿಕೊಳ್ಳಲು ನಿರ್ಗುಣತ್ವ ಶಬ್ದದಲ್ಲಿರುವ ನಿರ್ ಎಂಬ ಉಪಸರ್ಗವು ಹೇಳುವ ನಿಷೇಧ ಎಂಬ ಅರ್ಥವನ್ನು ದುರ್ಬಲಗೊಳಿಸಿ ಅದನ್ನು ಏಕ ಎಂಬ ಶಬ್ದದವರೆಗೆ ತೆಗೆದುಕೊಂಡು ಹೋಗಿ ಐಕ್ಯವನ್ನು ಉಳಿಸಬೇಕು. ಹಾಗೆ ನಿಷೇಧವನ್ನು ಹಿಂದಕ್ಕೆ ತೆಗೆದುಕೊಂಡು ಹೊಗುವಾಗ ಹತ್ತಿರದಲ್ಲೇ ಇರುವ ಕೇವಲತ್ವ, ಚೇತೃತ್ವ, ಸಾಕ್ಷಿತ್ವ ಮೊದಲಾದ ಗುಣಗಳ ಮಾರ್ಗವಾಗಿಯೇ ಅದು

ಹೋಗಬೇಕು. ನಿಷೇಧವೂ ಈಗ ದುರ್ಬಲವಾಗಿ ಯಾವುದನ್ನೂ ನಿಷೇಧ ಮಾಡದೇ ಇರುವುದರಿಂದ ಕೇವಲತ್ವ, ಚೇತ್ರತ್ವ ಮೊದಲಾದ ಗುಣಗಳೆಲ್ಲವೂ ನಿನಗೆ ಅಭಿಪ್ರೇತವಾದ ಐಕ್ಯವು ಸಿದ್ಧವಾಗುವುದಕ್ಕಿಂತ ಮೊದಲೇ ಸಿದ್ಧವಾಗುತ್ತವೆ ಎಂದು ಅಭಿಪ್ರಾಯ.

**ಇಯಂ ರಾಜವಧೂಃ ಕಾಮಚಾರಾ ವಾರಾಂಗನಾ ನ ತೇ ।**
**ಸ್ವೇಚ್ಛಾನುಸಾರಸಂಚಾರೋ ಮಾನಚ್ಛೇದಾಯ ತೇ ಭವೇತ್ ॥ ೮೯೦ ॥**

**ಅರ್ಥ–** ಇಯಂ= ಏಕೋದೇವಃ ಎಂಬ ಈ ವಾಕ್ಯವು, ರಾಜವಧೂಃ= ರಾಣಿಯಂತೆ ಇದೆ, ಅದು, ತೇ= ನಿನ್ನ, ಕಾಮಚಾರಾ ವಾರಾಂಗನಾ= ಮನಸ್ಸು ಬಂದಂತೆ ಸಂಚರಿಸುವ ವೇಶ್ಯೆಯು, ನ= ಅಲ್ಲ, ಸ್ವೇಚ್ಛಾನುಸಾರಸಂಚಾರಃ= ಮನಸ್ಸಿಗೆ ಬಂದಂತೆ ಸಂಚರಿಸುವುದು, ತೇ= ನಿನ, ಮಾನಚ್ಛೇದಾಯ= ಮಾನಹಾನಿಗೆ ಕಾರಣವಾಗಿ, ಭವೇತ್= ಆಗುತ್ತದೆ.

**ಅನುವಾದ–** ಏಕೋ ದೇವಃ ಎಂಬ ವಾಕ್ಯವು ರಾಜಪತ್ನಿಯೇ ಹೊರತು ಮನಸ್ಸಿಗೆ ಬಂದಂತೆ ಸಂಚರಿಸುವ ನಿನ್ನ ವಾರಾಂಗನೆಯಲ್ಲ. ಮನಸ್ಸಿಗೆ ಬಂದಂತೆ ಸಂಚರಿಸಿದರೆ ಅದು ನಿನ್ನ ಮಾನಹಾನಿಗೆ ಕಾರಣವಾಗುತ್ತದೆ.

**ವಿವರಣೆ–** ಬ್ರಹ್ಮಸೂತ್ರಗಳಿಗೆ ಅನುಸಾರವಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕೇ ಹೊರತು ಸ್ವೇಚ್ಛೆಯಿಂದ ವ್ಯಾಖ್ಯಾನ ಮಾಡುವಂತಿಲ್ಲ. ಸೂತ್ರಗಳಾದರೂ ಭಗವಂತನ ಗುಣಗಳನ್ನು ಅಂಗೀಕರಿಸುತ್ತವೆಯೇ ಹೊರತು ನಿಷೇಧಿಸುವುದಿಲ್ಲ. ಆದ್ದರಿಂದ ಅದಕ್ಕೆ ಅನುಗುಣವಾಗಿ ಶ್ರುತಿಯನ್ನೂ ಸಹ ಗುಣಗಳ ಸಿದ್ಧಿಯಾಗುವಂತೆಯೇ ವ್ಯಾಖ್ಯಾನ ಮಾಡಬೇಕು ಎಂದು ಇಲ್ಲಿ ಸಾಹಿತ್ಯ ಮುದ್ರೆಯಿಂದ ಹೇಳುತ್ತಾರೆ. ಶ್ರುತಿಗೆ ಅರ್ಥವನ್ನು ಮಾಡಬೇಕಾದರೆ ಬ್ರಹ್ಮಸೂತ್ರಗಳಿಗೆ ಅನುಸಾರವಾಗಿಯೇ ಅರ್ಥವನ್ನು ಮಾಡಬೇಕು. ಮನಸ್ಸಿಗೆ ಬಂದಂತೆ ಅರ್ಥವನ್ನು ಮಾಡಿದರೆ ಮನಸ್ಸಿಗೆ ಬಂದಂತೆ ತಿರುಗುವ ವೇಶ್ಯೆಗೆ ಮಾನಹಾನಿಯಾದಂತೆ ನಿನಗೂ ಮಾನಹಾನಿಯಾಗುತ್ತದೆ. ಎಂದರೆ ಮನಸ್ಸಿಗೆ ಬಂದಂತೆ ವ್ಯಾಖ್ಯಾನವನ್ನು ಮಾಡಿ ಒಂದು ವಾಕ್ಯವು ಪ್ರಮಾಣ ಮತ್ತು ಇನ್ನೊಂದು ವಾಕ್ಯವು ಅಪ್ರಮಾಣವೆಂದು ಹೇಳಿದರೆ, ಅಪ್ರಮಾಣವಾದ ವಾಕ್ಯದ ದೃಷ್ಟಾಂತದಿಂದ ಪ್ರಮಾಣವಾದ ವಾಕ್ಯಕ್ಕೂ ಅಪ್ರಾಮಾಣ್ಯವನ್ನು ಸಾಧಿಸಲು ಬರುತ್ತದೆ. ಆದ್ದರಿಂದ ಎಲ್ಲ ಶ್ರುತಿಗೂ ಅಪ್ರಾಮಾಣ್ಯವೇ ಪ್ರಾಪ್ತವಾಗುತ್ತದೆ ಎಂದು ಅಭಿಪ್ರಾಯ.,

**ವ್ಯಾಸಃ ಶ್ರೌತಗುಣಾಂಭೋಧೌ ನೈಕತ್ಯಾಗಂ ಚ ಮನ್ಯತೇ ।**
**ಸರ್ವಧರ್ಮೋಪಪತ್ತೇಶ್ಚೇತ್ಯಾಹ ಯತ್ ಸ್ವಯಮಂಜಸಾ ॥ ೮೯೧ ॥**

**ಅರ್ಥ–** ಯತ್= ಯಾವ ಕಾರಣದಿಂದ, ವ್ಯಾಸಃ= ವೇದವ್ಯಾಸರು, ಸ್ವಯಂ= ತಾವೇ, ಅಂಜಸಾ= ಸ್ಪಷ್ಟವಾಗಿ, ಸರ್ವಧರ್ಮೋಪಪತ್ತೇಶ್ಚ ಇತಿ= ಎಲ್ಲ ಧರ್ಮಗಳಿಂದಲೂ

ಕೂಡಿದವನು ಎಂದು, ಆಹ= ಹೇಳಿದರೋ, ಆ ಕಾರಣದಿಂದ, ಶ್ರೌತಗುಣಾಮ್ಬೋಧೌ= ಶ್ರುತಿಯು ಹೇಳಿದ ಭಗವದ್ ಗುಣಗಳ ಸಮುದ್ರದಲ್ಲಿ, ಏಕತ್ಯಾಗಂ ಚ= ಒಂದು ಗುಣದ ತ್ಯಾಗವನ್ನೂ ಸಹ, ನ ಮನ್ಯತೇ= ಅಂಗೀಕರಿಸುವುದಿಲ್ಲ.

**ಅನುವಾದ–** **ಸೂತ್ರಕಾರರಾದ ವೇದವ್ಯಾಸರು ತಾವೇ ಸೂತ್ರಗಳನ್ನು ರಚಿಸಿ ಸರ್ವಧರ್ಮೋಪಪತ್ತೇಶ್ಚ ಎಂಬ ಸೂತ್ರದಲ್ಲಿ ಸ್ಪಷ್ಟವಾಗಿ ಎಲ್ಲ ಗುಣಗಳನ್ನೂ ಭಗವಂತನಲ್ಲಿ ಹೇಳಿರುವುದರಿಂದ ಅವರು ಶ್ರುತಿಯು ಹೇಳಿದ ಭಗವಂತನ ಗುಣಗಳ ಸಮುದ್ರದಲ್ಲಿ ಒಂದು ಗುಣದ ತ್ಯಾಗವನ್ನೂ ಸಹ ಅಂಗೀಕರಿಸುವುದಿಲ್ಲ.**

**ಭಾವವಿಲಾಸಿನೀ–** ಕಿಂಚ ಬ್ರಹ್ಮಸೂತ್ರಾನುಸಾರೇಣ ಶ್ರುತಿರ್ವ್ಯಾಖ್ಯೇಯಾ ನ ಸ್ವೇಚ್ಛಾನುಸಾರೇಣ । ಸೂತ್ರಂ ಚ ಭಗವದ್ಗುಣಾನೇವಾಂಗೀಕರೋತಿ ನ ಪ್ರತಿಷೇಧತಿ । ಅತಃ ಶ್ರುತಿರಪಿ ತಥೈವ ವ್ಯಾಖ್ಯೇಯೇತಿ ಸಾಹಿತ್ಯಮುದ್ರಯಾಽಽಹ– ಇಯಮಿತಿ ॥ ಇಯಂ ಶ್ರುತಿಃ । ರಾಜವಧೂಃ ರಾಜ್ಞೋ ವಧೂರಿವ ವಧೂಃ ತೇನೈವ ಭರ್ತುಃ ಪೋಷ್ಯೇತ್ಯರ್ಥಃ। ಕಾಮಚಾರೇವ ಕಾಮಚಾರಾ ಸ್ವಕಪೋಲಕಲ್ಪಿತೇತಿ ಯಾವತ್ । ತೇ ವಾರಾಂಗನೇವ ವಾರಾಂಗನಾ ಸ್ವಾರ್ಥವ್ಯಭಿಚಾರವತೀ । ಪೌರುಷೇಯವಿದ್ಯೇತಿ ಯಾವತ್ । ತೇ ಮಾನಚ್ಛೇದಾಯ ಅಭಿಮಾನಚ್ಛೇದಾಯ । ಶ್ರುತೇರೇಕದೇಶಸ್ಯಾಪ್ರಾಮಾಣ್ಯೇ ಶ್ರುತಿತ್ವಾವಿಶೇಷಾದಪರಭಾಗಸ್ಯಾಪ್ಯಪ್ರಾಮಾಣ್ಯಂ ಸ್ಯಾದಿತಿ ಪ್ರಮಾಣಚ್ಛೇದಾಯ ಚ ಯದ್ ಯಸ್ಮಾತ್ । ಏಕತ್ಯಾಗಂ ನ ಮನ್ಯತ ಇತಿ ಸಂಬಂಧಃ ॥ ೮೯೦-೮೯೧ ॥

**ವಿವರಣೆ–** ಸರ್ವಧರ್ಮೋಪಪತ್ತೇಶ್ಚ ಎಂಬುದು ಬ್ರಹ್ಮಸೂತ್ರ. ಈ ಸೂತ್ರದಲ್ಲಿ ವೇದವ್ಯಾಸರು ಬ್ರಹ್ಮನಲ್ಲಿ ಶ್ರುತಿಯಲ್ಲಿ ಹೇಳಲ್ಪಟ್ಟ ಎಲ್ಲ ಗುಣಗಳೂ ಮತ್ತು ಶ್ರುತಿಯಲ್ಲಿ ಹೇಳಲ್ಪಡದಿರುವ ಉತ್ಕರ್ಷಪ್ರಾಪಕವಾದ ಎಲ್ಲ ಗುಣಗಳೂ ಬ್ರಹ್ಮನಲ್ಲಿ ಇವೆ ಎಂದು ಹೇಳಿರುವುದರಿಂದ ಶ್ರುತಿಯು ಹೇಳಿದ ಒಂದು ಗುಣದ ತ್ಯಾಗವೂ ಅವರಿಗೆ ಸಮ್ಮತವಲ್ಲ. ಆದ್ದರಿಂದ ದೇವತ್ವಾದಿಗುಣಗಳನ್ನು ತ್ಯಾಗ ಮಾಡಿ, ಏಕತ್ವಗುಣವನ್ನು ಮಾತ್ರ ಅಂಗೀಕರಿಸುತ್ತೇವೆ ಎಂಬುದು ವೇದವ್ಯಾಸದೇವರಿಗೆ ಅಸಮ್ಮತವಾದುದು ಎಂದು ಅಭಿಪ್ರಾಯ.

**ವೇದ ವೇದಾರ್ಥಮಖಿಲಂ ವೇದವ್ಯಾಸಃ ಸತಾಂ ಪತಿಃ ।**
**ಸ ಹಿ ಶ್ರುತಿಸತೀಕಂಠಸೂತ್ರಸೂತ್ರಕೃದೀಶ್ವರಃ ॥ ೮೯೨ ॥**

**ಅರ್ಥ–** ಸತಾಂ ಪತಿಃ= ಸಜ್ಜನರ ಒಡೆಯರಾದ, ವೇದವ್ಯಾಸಃ= ವೇದವ್ಯಾಸರು, ಅಖಿಲಂ ವೇದಾರ್ಥಂ= ಎಲ್ಲ ವೇದಾರ್ಥವನ್ನು, ವೇದ= ತಿಳಿದಿದ್ದಾರೆ, ಸ = ಅವರೇ, ಶ್ರುತಿಸತೀ ಕಂಠಸೂತ್ರಸೂತ್ರಕೃತ್= ಶ್ರುತಿ ಎಂಬ ಸಾಧ್ವಿಗೆ ಕಂಠಸೂತ್ರದಂತಿರುವ ಬ್ರಹ್ಮಸೂತ್ರಗಳನ್ನು ರಚಿಸಿದ, ಈಶ್ವರಃ ಹಿ= ಪ್ರಭುಗಳಷ್ಟೇ.

**ಅನುವಾದ–** ಸಜ್ಜನರ ಒಡೆಯರಾದ ವೇದವ್ಯಾಸರೇ ಅಖಿಲವೇದಾರ್ಥಗಳನ್ನೂ ತಿಳಿದವರು. ಪ್ರಭುಗಳಾದ ಅವರೇ ಶ್ರುತಿ ಎಂಬ ಸಾಧ್ವಿಗೆ ಕಂಠದ ಮಂಗಲ-ಸೂತ್ರದಂತಿರುವ ಬ್ರಹ್ಮಸೂತ್ರಗಳನ್ನು ರಚಿಸಿದವರಷ್ಟೇ?

**ಭಾವವಿಲಾಸಿನೀ–** ವ್ಯಾಸೋ ನ ಮನ್ಯತೇ ಚೇದ್ ವೇದಸ್ಯ ಕಿಮಾಯಾತಮಿತ್ಯತ ಆಹ- **ವೇದೇತಿ** ॥ ವೇದಾರ್ಥಂ ವೇದೇತಿ ಸಂಬಂಧಃ । ತತ್ರ ಹೇತುಗರ್ಭಂ ವಿಶೇಷಣಮಾಹ- **ವೇದವ್ಯಾಸ ಇತಿ**॥ ವೇದಾನಾಂ ವ್ಯಾಸೋ ವಿಸ್ತಾರೋ ಯಸ್ಮಾತ್ ಸ ಇತ್ಯರ್ಥಃ । ಸ್ಪಷ್ಟಂ ಚ ನಿಮಿತ್ತಮಾಹ– **ಸ ಹೀತಿ** ॥ ಹಿ ಯಸ್ಮಾತ್ ಶ್ರುತಿಸತ್ಯಾಃ ಕಣ್ಠಸೂತ್ರಸ್ಥಾನೀಯಬ್ರಹ್ಮಸೂತ್ರಕೃತ್ ತಸ್ಮಾತ್ ವೇದಾರ್ಥಂ ವೇದೇತಿ ಪೂರ್ವೇಣ ಸಂಬಂಧಃ ॥ ೮೯೨ ॥

**ವಿವರಣೆ–** ವೇದಗಳನ್ನು ವಿಭಾಗ ಮಾಡಿದ ವೇದವ್ಯಾಸರು ವೇದಾರ್ಥ ನಿರ್ಣಯಕ್ಕಾಗಿಯೇ ಬ್ರಹ್ಮಸೂತ್ರಗಳನ್ನು ರಚಿಸಿರುವುದರಿಂದ ಬ್ರಹ್ಮಸೂತ್ರಗಳಿಗೆ ಅನುಗುಣವಾಗಿಯೇ ವೇದದ ಅರ್ಥವನ್ನು ಸ್ವೀಕರಿಸಬೇಕು ಎಂದು ಅಭಿಪ್ರಾಯ.

ನಞೋ ವಿಭಜ್ಯ ಯೋಗೇ ತು ಶ್ರೌತಂ ತತ್ತನ್ನಿಷೇಧನಮ್ ।
ಸಮಸ್ತನಞ್ವಿಭಾಗಸ್ಯಾಯೋಗಾದಾರ್ಥಂ ನಿಷೇಧನಮ್ ॥ ೮೯೩ ॥

**ಅರ್ಥ–** ನಞಃ= ನಞ್ ಪದವನ್ನು, ವಿಭಜ್ಯ= ನಿರ್ಗುಣಪದದಿಂದ ವಿಭಾಗಿಸಿ, ಯೋಗೇ= ಬೇರೆ ಪದಗಳಿಂದ ಸಂಬಂಧವನ್ನು ಹೇಳಿದರೆ, ತತ್ತನ್ನಿಷೇಧನಮ್= ಆಯಾ ನಿಷೇಧಗಳು, ಶ್ರೌತಂ= ಶ್ರುತಿಪ್ರಾಪ್ತವಾಗುತ್ತವೆ, ಆದರೆ, ಸಮಸ್ತನಞ್ವಿಭಾಗಸ್ಯ= ಸಮಸ್ತ ಪದದಲ್ಲಿರುವ ನಞ ಪದದ ವಿಭಾಗವು, ಅಯೋಗಾತ್= ಕೂಡುವುದಿಲ್ಲವಾದ ಕಾರಣ, ನಿಷೇಧನಮ್= ಆಯಾ ನಿಷೇಧಗಳು, ಆರ್ಥಂ= ಆರ್ಥಿಕವಾಗುತ್ತವೆ.

**ಅನುವಾದ–** ನಿರ್ಗುಣಃ ಎಂಬಲ್ಲಿರುವ ನಿಷೇಧಾರ್ಥಕವಾದ ನಿರ್ ಎಂಬ ಉಪಸರ್ಗವನ್ನು ಪ್ರತ್ಯೇಕ ಮಾಡಿ ಅದನ್ನು ದೇವಃ ಮೊದಲಾದ ಪದಗಳ ಜೊತೆಯಲ್ಲಿ ಅನ್ವಯ ಮಾಡಿ ದೇವತ್ವಾದಿಗಳನ್ನು ನಿಷೇಧ ಮಾಡಿದರೆ ದೇವತ್ವಾದಿ ಗುಣಗಳ ನಿಷೇಧವು ಶ್ರೌತವೆಂದಾಗಬಹುದು. ಆದರೆ ನಿರ್ಗುಣ ಎಂಬ ಶಬ್ದವು ಸಮಾಸವಾದುದರಿಂದ ಅದರಿಂದ ನಿಷೇಧಾರ್ಥಕ ಉಪಸರ್ಗವನ್ನು ವಿಭಾಗಿಸಲು ಸಾಧ್ಯವಿಲ್ಲ. ಆದ್ದರಿಂದ ನಿರ್ಗುಣ ಶಬ್ದದಿಂದಲೇ ಸಾಮಾನ್ಯರೂಪದಿಂದ ಎಲ್ಲಾ ಗುಣಗಳನ್ನೂ ನಿಷೇಧ ಮಾಡಬೇಕು. ಹೀಗೆ ಮಾಡಿದರೆ ದೇವತ್ವಾದಿಗುಣ ನಿಷೇಧವು ಆರ್ಥಿಕವೆಂದಾಗುತ್ತದೆ.

**ಭಾವವಿಲಾಸಿನೀ–** ಯುಕ್ತ್ಯಂತರೇಣಾಪಿ ಏಕ ಇತ್ಯಾದಿವಿಧೇರೇವ ಪ್ರಾಬಲ್ಯಮಿತ್ಯಾಹ– **ನಞ ಇತಿ** ॥ ಆರ್ಥಂ ನಿರ್ಗುಣ ಇತಿ ಸಾಮಾನ್ಯತೋ ಗುಣನಿಷೇಧೇ ಗುಣತ್ವಾಕ್ರಾಂತತ್ವಾ-ದೇಕತ್ವಾದಿ-ಗುಣಾನಾಂ ನಿಷೇಧಃ ಸ್ಯಾದಿತ್ಯರ್ಥಾತ್ ಸಿದ್ಧಮಿತ್ಯರ್ಥಃ ॥ ೮೯೩ ॥

**ವಿವರಣೆ–** ನಿರ್ಗುಣ ಎಂಬ ಶಬ್ದವು ನೇರವಾಗಿ ದೇವತ್ವರೂಪಗುಣಾಭಾವವನ್ನು ಹೇಳುವುದಿಲ್ಲ. ಆದರೆ ಗುಣಸಾಮಾನ್ಯವನ್ನು ನಿಷೇಧಮಾಡುವುದರಿಂದ ದೇವತ್ವಾದಿಗಳೂ ಗುಣವಾದ್ದರಿಂದ ದೇವತ್ವಾದಿಗುಣಗಳ ಅಭಾವವು ಸಿದ್ಧವಾಗುತ್ತದೆ. ಇದಕ್ಕೆ ಆರ್ಥಿಕವಾದ ಸಿದ್ಧಿ ಎಂದು ಹೆಸರು. ಶ್ರೌತಸಿದ್ಧಿಗಿಂತಲೂ ಆರ್ಥಿಕವಾದ ಸಿದ್ಧಿಯು ದುರ್ಬಲವಾದುದು ಮತ್ತು ಅದನ್ನು ಇಲ್ಲಿ ಅಂಗೀಕರಿಸಬೇಕಾದ ಅವಶ್ಯಕತೆಯೂ ಇಲ್ಲ. ಆದ್ದರಿಂದ ಅದು ವಾಕ್ಯಾರ್ಥವಲ್ಲ ಎಂದು ಅಭಿಪ್ರಾಯ.

**ಅತಸ್ತವಾರ್ಥಿಕಾದಸ್ಮಾನ್ನಿಷೇಧಾನ್ಮೇ ವಿಧಿಃ ಶ್ರುತಃ ।**
**ಬಲೀಯಾಂಸ್ತನ್ನಿಷೇಧಾಯ ದುರ್ಬಲೋಽಸೌ ನ ಶಕ್ನುತೇ ॥ ೮೯೪ ॥**

**ಅರ್ಥ–** ಅತಃ= ಆದ್ದರಿಂದ, ತವ= ನಿನ್ನ, ಆರ್ಥಿಕಾತ್= ಅರ್ಥಾತ್ ಪ್ರಾಪ್ತವಾದ, ಅಸ್ಮಾತ್ ನಿಷೇಧಾತ್= ಈ ನಿಷೇಧಕ್ಕಿಂತಲೂ, ಮೇ= ನನ್ನ, ಶ್ರುತಃ= ಶ್ರೌತವಾದ, ವಿಧಿಃ= ವಿಧಿಯು ಬಲೀಯಾನ್= ಪ್ರಬಲವಾದುದು, ದುರ್ಬಲಃ= ದುರ್ಬಲವಾದ, ಅಸೌ= ಈ ಆರ್ಥಿಕ ನಿಷೇಧವು, ತನ್ನಿಷೇಧಾಯ= ಶ್ರೌತಗುಣವಿಧಿಯನ್ನು ನಿಷೇಧಿಸಲು, ನ ಶಕ್ನುತೇ= ಸಮರ್ಥವಾಗುವುದಿಲ್ಲ.

**ಅನುವಾದ–** ಆದ್ದರಿಂದ ಆರ್ಥಿಕವಾದ ನಿನ್ನ ಈ ನಿಷೇಧಕ್ಕಿಂತಲೂ ಶ್ರೌತವಾದ ನನ್ನ ಗುಣವಿಧಿಯು ಪ್ರಬಲವಾದುದು. ದುರ್ಬಲವಾದ ಈ ಆರ್ಥಿಕನಿಷೇಧವು ಪ್ರಬಲವಾದ ಗುಣವಿಧಿಯನ್ನು ಬಾಧಿಸಲು ಸಮರ್ಥವಾಗುವುದಿಲ್ಲ.

**ಭಾವವಿಲಾಸಿನೀ–** ಮೇ ವಿಧಿಃ ಏಕೋ ಭವತಿ ದೇವೋ ಭವತೀತ್ಯಾದಿವಿಧಿಃ ಶ್ರುತಃ ಸಾಕ್ಷಾಚ್ಛ್ರುತಿಸಿದ್ಧೋ, ನತ್ವಾರ್ಥಿಕಃ । ಅಸೌ ನಿರ್ಗುಣಶಬ್ದಃ ॥ ೮೯೪ ॥

**ವಿವರಣೆ–** 'ಏಕೋ ದೇವಃ' ಎಂದು ಪ್ರಾರಂಭವಾಗುವ ವಾಕ್ಯದ ಪ್ರತಿಯೊಂದು ಪದವೂ ಏಕತ್ವ, ದೇವತ್ವ ಮೊದಲಾದ ಗುಣಗಳನ್ನೇ ವಿಧಾನ ಮಾಡುತ್ತದೆ. ಆದ್ದರಿಂದ ಈ ಗುಣವಿಧಾನ ಶ್ರೌತವಾದುದು. ಹಿಂದಿನ ಶ್ಲೋಕದಲ್ಲಿ ತಿಳಿಸಿದಂತೆ ಮಾಯಾವಾದಿಗಳು ಹೇಳುವ ಗುಣನಿಷೇಧವು ಆರ್ಥಿಕವಾದುದು. ಆರ್ಥಿಕವಾದ ನಿಷೇಧವು ಶ್ರೌತವಾದ ವಿಧಿಯನ್ನು ಬಾಧಿಸಲಾರದು. ಆದ್ದರಿಂದ ನಿರ್ಗುಣತ್ವವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಏಕ ಇತ್ಯಾದಿಶಬ್ದಾನಾಂ ನಞ್ಯೋಗಾದರ್ಶನಾಚ್ಛ್ರುತೌ ।**
**ಸಂಭಾವಿತಕ್ರಿಯಾಯೋಗಾದ್ ಭವತೀತ್ಯೇವ ಯೋಜನಾ ॥ ೮೯೫ ॥**

**ಅರ್ಥ–** ಶ್ರುತೌ= ಈ ವೇದವಾಕ್ಯದಲ್ಲಿ, ಏಕ ಇತ್ಯಾದಿಶಬ್ದಾನಾಂ= ಏಕ, ದೇವ ಮೊದಲಾದ ಶಬ್ದಗಳಿಗೆ, ನಞ್ಯೋಗಾದರ್ಶನಾತ್= ನಞ್ ಸಂಬಂಧವು

ಕಾಣದಿರುವುದರಿಂದ, ಸಂಭಾವಿತಕ್ರಿಯಾಯೋಗಾತ್= ಸಂಭಾವಿತವಾದ ಕ್ರಿಯಾಪದವನ್ನು ಅಧ್ಯಾಹಾರ ಮಾಡಬೇಕಾಗಿರುವುದರಿಂದ, ಭವತಿ ಇತ್ಯೇವ= ಭವತಿ ಎಂದೇ, ಯೋಜನಾ= ಯೋಜನೆಯನ್ನು ಮಾಡಬೇಕು.

**ಅನುವಾದ–** ಶ್ರುತಿಯಲ್ಲಿ ಏಕ ಮೊದಲಾದ ಶಬ್ದಗಳಿಗೆ ನಞ್‌ಸಂಬಂಧವು ಕಂಡುಬರುವುದಿಲ್ಲ. ಆದ್ದರಿಂದ ಸಂಭಾವಿತವಾದ ಕ್ರಿಯಾಪದವನ್ನು ಅಧ್ಯಾಹಾರ ಮಾಡಬೇಕಾಗುವುದರಿಂದ ಏಕಃ ಭವತಿ, ದೇವಃ ಭವತಿ ಎಂದೇ ಕ್ರಿಯಾಪದವನ್ನು ಇಟ್ಟುಕೊಂಡು ವಾಕ್ಯದ ಅನ್ವಯವನ್ನು ಮಾಡಬೇಕು.

**ವಿವರಣೆ–** ಏಕ ಇತ್ಯಾದಿ ಪದಗಳಿಗೆ ನಞ್ ಸಂಬಂಧವು ವಾಕ್ಯದಲ್ಲಿ ಇಲ್ಲ. ಕ್ರಿಯಾಪದವನ್ನು ಅಧ್ಯಾಹಾರ ಮಾಡದಿದ್ದರೆ ವಾಕ್ಯವು ಅಪೂರ್ಣವಾಗಿ ದುಷ್ಟವಾಗುತ್ತದೆ. ಆದ್ದರಿಂದ ಸರ್ವಶಾಸ್ತ್ರಪ್ರಾಪ್ತವಾದ ಭವತಿ ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಆಗ 'ಏಕೋ ಭವತಿ, ದೇವೋ ಭವತಿ, ಗೂಢೋ ಭವತಿ' ಎಂದು ಏಕತ್ವ, ಗೂಢತ್ವ, ದೇವತ್ವ ಮೊದಲಾದ ಗುಣಗಳ ವಿಧಿಯೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ನ ಚೇದ್ ವಾಕ್ಯಮಪೂರ್ಣಂ ಸ್ಯಾತ್ ಸಮಸ್ತಪದಸಂಸ್ಥಿತಃ ।
ನಿಷೇಧಾರ್ಥೋ ಯತಃ ಶಬ್ದೋ ಬುದ್ಧ್ಯೈರ್ಭೇತ್ತುಂ ನ ಶಕ್ಯತೇ ॥ ೮೬ ॥

**ಅರ್ಥ–** ನಚೇತ್= ಇಲ್ಲದಿದ್ದರೆ, ವಾಕ್ಯಂ= ವಾಕ್ಯವು, ಅಪೂರ್ಣಂ ಸ್ಯಾತ್= ಅಪೂರ್ಣವಾಗುತ್ತದೆ, ಯತಃ= ಏಕೆಂದರೆ, ಸಮಸ್ತಪದಸಂಸ್ಥಿತಃ= ಸಮಸ್ತ ಪದದಲ್ಲಿರುವ, ನಿಷೇಧಾರ್ಥಃ= ನಿಷೇಧಾರ್ಥಕವಾದ ನಿರ್ ಎಂಬ ಉಪಸರ್ಗವು, ಬುದ್ಧೈಃ= ವಿವೇಕಿಗಳಿಂದ, ಭೇತ್ತುಂ= ಭೇದಿಸಲು, ನ ಶಕ್ಯತೇ= ಸಾಧ್ಯವಾಗುವುದಿಲ್ಲ.

**ಅನುವಾದ–** ಸಮಸ್ತ ಪದದಲ್ಲಿರುವ ನಿಷೇಧಾರ್ಥಕವಾದ ನಿರ್ ಎಂಬ ಉಪಸರ್ಗವನ್ನು ಶಾಸ್ತ್ರಮರ್ಯಾದೆಯನ್ನು ತಿಳಿದವರು ಭೇದಿಸಲು ಸಾಧ್ಯವಿಲ್ಲ. ಆಗ ವಾಕ್ಯವು ಅಪೂರ್ಣವಾಗುತ್ತದೆ. ಆದ್ದರಿಂದ ಭವತಿ ಎಂಬ ಪದವನ್ನು ಅಧ್ಯಾಹಾರ ಮಾಡಬೇಕು.

**ಭಾವವಿಲಾಸಿನೀ–** ಏಕತ್ವಾನೇಕ ಇತ್ಯಾದಿನಾ ಏಕಾದಿಶಬ್ದೈರ್ನೈವ ವಿಧಿಲಾಭೇಽಪಿ ಯುಕ್ತ್ಯಂತರೇಣ ಚ ತಮಾಹ– ಏಕ ಇತಿ ॥ ಯತೋ ಯಸ್ಮಾತ್ । ನಿಷೇಧಾರ್ಥಃ ಶಬ್ದಃ ನಞ್ ಶಬ್ದಃ । ಅತಃ ವಾಕ್ಯಮಪೂರ್ಣಮ್ । ಕ್ರಿಯಾಭಾವಾದಿತ್ಯರ್ಥಃ ॥ ೮೫-೮೬ ॥

ಪುನಸ್ತೇಷಾಮೇವ ಬಾಧೇ ವಾಕ್ಯಂ ಸ್ಯಾನ್ನತ್ತಭಾಷಿತಮ್ ।
ಅತಸ್ತ್ರಿಗುಣಶೂನ್ಯತ್ವಾನ್ನಿರ್ಗುಣತ್ವಂ ಬಲಾದ್ ಭವೇತ್ ॥ ೮೭ ॥

**ಅರ್ಥ–** ಪುನಃ= ಪುನಃ, ತೇಷಾಮೇವ= ಆ ಏಕತ್ವಾದಿ ಗುಣಗಳನ್ನೇ, ಬಾಧೇ= ನಿಷೇಧ ಮಾಡಿದರೆ, ವಾಕ್ಯಂ= ವಾಕ್ಯವು, ಮತ್ತಭಾಷಿತಮ್= ಉನ್ಮತ್ತವಾಕ್ಯವಾಗಿ, ಸ್ಯಾತ್= ಆಗುತ್ತದೆ, ಅತಃ= ಆದ್ದರಿಂದ, ಬಲಾತ್= ಈ ಯುಕ್ತಿಯ ಬಲದಿಂದ, ತ್ರಿಗುಣಶೂನ್ಯತ್ವಾತ್= ಸತ್ವರಜಸ್ತಮಗುಣ ಶೂನ್ಯವಾದ ಕಾರಣದಿಂದಲೇ, ನಿರ್ಗುಣತ್ವಂ= ನಿರ್ಗುಣತ್ವವು, ಭವೇತ್= ಉಂಟಾಗುತ್ತದೆ.

**ಅನುವಾದ– ಮೊದಲು ವಿಧಾನವನ್ನು ಮಾಡಿ ಅನಂತರ ಅದೇ ಗುಣಗಳನ್ನು ನಿಷೇಧ ಮಾಡಿದರೆ ವಾಕ್ಯವು ಉನ್ಮತ್ತಭಾಷಿತವಾಗುತ್ತದೆ. ಆದ್ದರಿಂದ ತ್ರಿಗುಣರಹಿತತ್ವವು ಇರುವ ಕಾರಣದಿಂದಲೇ ಹರಿಗೆ ನಿರ್ಗುಣಶಬ್ದವಾಚ್ಯತ್ವವು ಇದೆ ಎಂದು ಅಂಗೀಕರಿಸಬೇಕು.**

**ಭಾವವಿಲಾಸಿನೀ– ಪುನಃ ವಿಧಾನಾನಂ ತರಂ ತೇಷಾಂ ಗುಣಾನಾಮ್ । ಅತಃ ವಿಹಿತಗುಣನಿಷೇಧಾಯೋಗಾತ್ ॥ ೮೯೭ ॥**

**ಅನುವಾದಕಲಿಂಗಂ ಚ ಯತ್ತದಿತ್ಯಾದಿಕಂ ನಹಿ ।**
**ಭಿನ್ನವಾಕ್ಯತಯಾ ಯತ್ರ ನಿಷೇಧಸ್ತತ್ರ ತದ್ ಧ್ರುವಮ್ ।**
**ಏಕವಾಕ್ಯೇ ನಿಷೇಧೇ ತು ನಞ್ಲಿಂಗಮಿತರತ್ರ ತತ್ ॥ ೮೯೮ ॥**

**ಅರ್ಥ–** ಅನುವಾದಕಲಿಂಗಂ ಚ= ಅನುವಾದ ಸೂಚಕವಾದ ಚಿನ್ಹೆಗಳಾದ, ಯತ್ತದಿತ್ಯಾದಿಕಂ= ಯತ್ ತತ್ ಮೊದಲಾದ ಪದಗಳು, ನಹಿ= ಈ ವಾಕ್ಯದಲ್ಲಿ ಇಲ್ಲ, ಭಿನ್ನವಾಕ್ಯತಯಾ= ಬೇರೆಯ ವಾಕ್ಯದಲ್ಲಿರುವ ಅರ್ಥಕ್ಕೆ, ಯತ್ರ= ಎಲ್ಲಿ, ನಿಷೇಧಃ= ನಿಷೇಧವಿರುತ್ತದೆಯೋ, ತತ್ರ= ಅಲ್ಲಿ, ತತ್= ಯತ್ ತತ್ ಮೊದಲಾದ ಪದಗಳು, ಧ್ರುವಮ್= ನಿಶ್ಚಯವಾಗಿ ಇರುತ್ತವೆ. ಏಕವಾಕ್ಯೇ= ಒಂದೇ ವಾಕ್ಯದಲ್ಲಿಯೇ, ನಿಷೇಧೇ ತು= ನಿಷೇಧವನ್ನು ಮಾಡಿದರೆ ಮಾತ್ರ, ನಞ್= ನಞ್ ಪದವು, ಲಿಂಗಂ= ಅನುವಾದ ಸೂಚಕವಾದುದು, ಇತರತ್ರ= ಬೇರೆ ವಾಕ್ಯಗಳಲ್ಲಾದರೆ, ತತ್= ಯತ್ ತತ್ ಮೊದಲಾದ ಪದಗಳು ಸೂಚಕವಾದವು.

**ಅನುವಾದ– ಅನುವಾದಕ ಚಿನ್ಹೆಗಳಾದ ಯತ್ ತತ್ ಮೊದಲಾದ ಪದಗಳು ಈ ವಾಕ್ಯದಲ್ಲಿ ಇಲ್ಲ. ಒಂದು ವಾಕ್ಯದಲ್ಲಿ ಹೇಳಿದ ಅರ್ಥವನ್ನು ಇನ್ನೊಂದು ವಾಕ್ಯವು ನಿಷೇಧ ಮಾಡುವುದಾದರೆ ಆ ಚಿನ್ಹೆಗಳು ಅವಶ್ಯಕವಾಗಿ ಬೇಕೇ ಬೇಕು. ಅದೇ ವಾಕ್ಯದಲ್ಲಿ ಹೇಳಿದ ಅರ್ಥವನ್ನು ನಿಷೇಧ ಮಾಡುವುದಾದರೆ ಮಾತ್ರ ಅದೇ ವಾಕ್ಯದಲ್ಲಿ ನಿಷೇಧಾರ್ಥಕವಾದ ನಞ್ ಪದವಿರಬೇಕು. ಅದು ಅಲ್ಲಿ ಅನುವಾದ ಸೂಚಕವಾಗುತ್ತದೆ. ಬೇರೆ ಕಡೆಯಲ್ಲಿ ಯತ್ ತತ್ ಮೊದಲಾದ ಪದಗಳು ಅನುವಾದಕತ್ವ ಸೂಚಕವಾಗುತ್ತವೆ.**

**ಭಾವವಿಲಾಸಿನೀ–** ಅನುವಾದಕಪಕ್ಷೇ ದೂಷಣಾಂತರಂ ಚಾಹ– ಅನುವಾದಕೇತಿ ॥ ಆದಿಪದೇನ ನಞೋ ಗ್ರಹಣಮ್ । ತತ್ ಯತ್ತದಿತಿ ಪದದ್ವಯಮ್ । ಏಕವಾಕ್ಯನಿಷೇಧೇ 'ನ ಸುರಾಂ ಪಿಬೇತ್' ಇತ್ಯಾದಿಕೇ ನಞ್ ನಞೇವ ಲಿಂಗಮ್ ಅನುವಾದಕಲಿಂಗಮ್ ॥ ೮೯೮ ॥

**ವಿವರಣೆ–** ಅನುವಾದಕತ್ವ ಪಕ್ಷದಲ್ಲಿ ಇನ್ನೊಂದು ದೋಷವನ್ನು ಹೇಳುತ್ತಾರೆ. ಅನುವಾದ ಎಂದು ಹೇಳಬೇಕಾದರೆ ಅನುವಾದ ಎಂದು ಸೂಚಿಸುವ ಚಿನ್ಹೆ ಇರಬೇಕು. ಆ ಚಿನ್ಹೆಯು ಎರಡು ರೀತಿ. ಒಂದು ವಾಕ್ಯದಲ್ಲಿ ಹೇಳಿದುದನ್ನು ಇನ್ನೊಂದು ವಾಕ್ಯವು ನಿಷೇಧ ಮಾಡುವುದಾದರೆ ಅಲ್ಲಿ ಯತ್ ತತ್ ಮೊದಲಾದ ಪದಗಳಿರಬೇಕು. ಏಕೋ ದೇವಃ ಎಂಬ ವಾಕ್ಯದಲ್ಲಿ ಅಂತಹ ಪದವಿಲ್ಲ. ಅದೇ ವಾಕ್ಯದಲ್ಲಿ ಹೇಳಿದ ಅರ್ಥವನ್ನು ನಿಷೇಧ ಮಾಡುವುದಾದರೆ ನಿಷೇಧವಾಚಕ ಪದವು ಸ್ವತಂತ್ರವಾಗಿ ಇರಬೇಕು. ಅದೂ ಈ ವಾಕ್ಯದಲ್ಲಿ ಇಲ್ಲ. ಆದ್ದರಿಂದ ಏಕತ್ವ, ದೇವತ್ವಾದಿ ಗುಣಗಳನ್ನು ನಿಷೇಧ ಮಾಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಮಾನಸಿದ್ಧಾನುವಾದೇ ತು ತೇನೈವ ಸ್ಯುರ್ಗುಣಾ ಹರೇಃ ।**
**ನಿಷೇಧಶ್ಚ ನ ತೇ ಮಾನಾಮಾನತಾದೂಷಣಂ ಶೃಣು ॥ ೮೯೯ ॥**

**ನಿರ್ಗುಣತ್ವೇ ಸ್ಥಿರೇ ತೇನ ಮಾನಾನಾಂ ಸ್ಯಾದಮಾನತಾ ।**
**ತತ್ಸತ್ವೇ ಚಾವಿರುದ್ಧಂ ತೇ ನಿರ್ಗುಣತ್ವಂ ಸ್ಥಿರಂ ಭವೇತ್ ॥ ೯೦೦ ॥**

**ಅರ್ಥ–** ಮಾನಸಿದ್ಧಾನುವಾದೇ= ಪ್ರಮಾಣಸಿದ್ಧವಾದುದನ್ನು ಅನುವಾದ ಮಾಡಿದರೆ, ತೇನೈವ= ಆ ಕಾರಣದಿಂದಲೇ, ಹರೇಃ= ಹರಿಗೆ, ಗುಣಾಃ= ಗುಣಗಳು, ಸ್ಯುಃ= ಉಂಟಾಗುತ್ತವೆ, ಚ= ಮತ್ತು, ನಿಷೇಧಶ್ಚ ನ= ನಿಷೇಧವೂ ಕೂಡುವುದಿಲ್ಲ, ಮಾನಾಮಾನತಾದೂಷಣಂ= ನಿನ್ನ ಪ್ರಮಾಣಕ್ಕೆ ಅಪ್ರಾಮಾಣ್ಯರೂಪವಾದ ದೋಷವನ್ನು ಶೃಣು= ಕೇಳು.

ನಿರ್ಗುಣತ್ವೇ= ನಿರ್ಗುಣತ್ವವು, ಸ್ಥಿರೇ= ಸಿದ್ಧವಾದರೆ ಅದರಿಂದ, ಮಾನಾನಾಂ= ಸಗುಣ ಪ್ರಮಾಣಗಳಿಗೆ, ಅಮಾನತಾಸ್ಯಾತ್= ಅಪ್ರಾಮಾಣ್ಯವು ಬಂದೀತು, ತತ್ಸತ್ವೇ= ಸಗುಣವಾಕ್ಯಗಳು ಅಪ್ರಮಾಣವೆಂದಾದರೆ, ಅವಿರುದ್ಧಂ= ಅವುಗಳ ವಿರೋಧವಿಲ್ಲದೆ, ತೇ ನಿರ್ಗುಣತ್ವಂ= ನಿನ್ನ ನಿರ್ಗುಣತ್ವವು, ಸ್ಥಿರಂ ಭವೇತ್= ಸಿದ್ಧಿಸೀತು.

**ಅನುವಾದ–** ಪ್ರಮಾಣಸಿದ್ಧವಾದ ಗುಣಗಳನ್ನು ಅನುವಾದ ಮಾಡಿದರೆ ಪ್ರಮಾಣಸಿದ್ಧವಾದ ಕಾರಣದಿಂದಲೇ ಗುಣಗಳು ಸತ್ಯ ಎಂದಾಗುತ್ತವೆ. ನೀನು ನಿಷೇಧ ಮಾಡಲು ಆಗುವುದಿಲ್ಲ ಜೊತೆಗೆ ನಿನ್ನ ನಿಷೇಧವಾಕ್ಯದ ಅಪ್ರಾಮಾಣ್ಯ ದೋಷವನ್ನೂ ಹೇಳುತ್ತೇನೆ. ಕೇಳು. ನಿರ್ಗುಣತ್ವವು ಸಿದ್ಧವಾದರೆ ಅದರಿಂದ

ಸರ್ವಜ್ಞತ್ವಾದಿಗುಣಗಳನ್ನು ಹೇಳುವ ಪ್ರಮಾಣಕ್ಕೆ ವಿರೋಧವುಂಟಾಗಿ ಸರ್ವಜ್ಞ-ತ್ವಾದಿಗಳನ್ನು ಹೇಳುವ ವಾಕ್ಯಗಳು ಅಪ್ರಮಾಣವಾಗುತ್ತವೆ. ಸರ್ವಜ್ಞತ್ವಾದಿಗಳನ್ನು ಹೇಳುವ ವಾಕ್ಯಗಳು ಅಪ್ರಮಾಣವೆಂದು ಸಿದ್ಧವಾದರೆ, ನಿರ್ಗುಣ ಶ್ರುತಿಯು ನಿರ್ಗುಣತ್ವವನ್ನು ಹೇಳುತ್ತದೆ.

**ಭಾವವಿಲಾಸಿನೀ–** ಅಧುನಾ ಮಾನಸಿದ್ಧಾನುವಾದೋ ವಾ ಅಮಾನಸಿದ್ಧಾನುವಾದೋ ವೇತಿ ವಿಕಲ್ಪ್ಯ ಆದ್ಯಂ ದೂಷಯತಿ– **ಮಾನಸಿದ್ಧೇತಿ** ॥ ತೇನೈವ ಪ್ರಾಚೀನಪ್ರಮಾಣೇನೈವ । ತೇ ನಿಷೇಧಶ್ಚ ನ । ಪ್ರಮಾಣಸಿದ್ಧಾನಾಂ ಬ್ರಹ್ಮವನ್ನಿಷೇಧಾಯೋಗಾತ್ । ದ್ವಿತೀಯಂ ದೂಷಯತಿ– ಮಾನಾಮಾನತೇತಿ ॥ ನಿರ್ಗುಣತ್ವೇ ಗುಣನಿಷೇಧರೂಪೇ ಸ್ಥಿರೇ ಪ್ರಾಮಾಣಿಕೇ ಸತಿ ಹಿ ತೇನ ಗುಣನಿಷೇಧೇನ । ಮಾನಾನಾಂ ಗುಣಪ್ರತಿಪಾದಕಪ್ರಮಾಣಾನಾಮ್ । ಅನ್ಯಥಾಽಬಾಧಿತಾ-ರ್ಥಕತ್ವೇ ನ ತೇಷಾಮಪ್ರಾಮಾಣ್ಯಾಯೋಗಾತ್ । ತತ್ತತ್ತ್ವೇ ಗುಣಪ್ರತಿಪಾದಕ ಪ್ರಮಾಣಾ-ನಾಮಪ್ರಾಮಾಣ್ಯಸತ್ತ್ವೇ । ಅನ್ಯಥಾ ಪ್ರಾಮಾಣಿಕನಿಷೇಧಾಯೋಗೇನ ತ್ವದಭಿಲಷಿತ-ನಿರ್ಗುಣತ್ವಮೇವ ನ ಸಿದ್ಧ್ಯೇತ್ । ತಥಾಚಾನ್ಯೋನ್ಯಾಶ್ರಯಃ ಸ್ಯಾದಿತಿ ಭಾವಃ ॥೯೯-೬೦೦॥

ನಿರ್ಗುಣೋಕ್ತೌ ಗುಣೋಕ್ತ್ಯೈವ ನಿಷೇಧ್ಯಸ್ಯಾನುವಾದನಾತ್ ।
ಏಕತ್ವಾದ್ಯನುವಾದತ್ವಕಥಾ ಚೇಯಂ ವೃಥಾ ತವ ॥ ೬೦೧ ॥

**ಅರ್ಥ–** ನಿರ್ಗುಣೋಕ್ತೌ= ನಿರ್ಗುಣ ಎಂಬ ಪದದಲ್ಲಿರುವ, ಗುಣೋಕ್ತ್ಯೈವ= ಗುಣ ಎಂಬ ಪದದಿಂದಲೇ, ನಿಷೇಧ್ಯಸ್ಯ= ನಿಷೇಧ ಮಾಡಬೇಕಾದ ಗುಣಗಳನ್ನು, ಅನುವಾದನಾತ್= ಅನುವಾದ ಮಾಡುವುದರಿಂದ, ತೇ= ನಿನ್ನ, ಇಯಂ ಏಕತ್ವಾದ್ಯನುವಾದತ್ವ ಕಥಾ= ಏಕ ಮೊದಲಾದ ಶಬ್ದಗಳು ಏಕತ್ವಾದಿಗಳನ್ನು ಅನುವಾದ ಮಾಡುತ್ತವೆ ಎಂಬ ಈ ಕಥೆಯು, ವೃಥಾ= ವ್ಯರ್ಥವೇ ಆಗುತ್ತದೆ.

**ಅನುವಾದ–** ನಿರ್ಗುಣ ಎಂಬ ಪದದಲ್ಲಿರುವ 'ಗುಣ' ಶಬ್ದದಿಂದಲೇ ಗುಣಗಳ ಅನುವಾದವು ಶಕ್ಯವಾದುದರಿಂದ ಏಕತ್ವಾದಿಗಳನ್ನು ನಿಷೇಧ ಮಾಡುವುದಕ್ಕೋಸ್ಕರ 'ಏಕ' ಮೊದಲಾದ ಶಬ್ದಗಳಿಂದ ಅನುವಾದ ಮಾಡುತ್ತದೆ ಎಂದು ಹೇಳುವ ನಿನ್ನ ವಿವರಣೆಯು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ಅಧುನಾ ನಿರ್ಗುಣ ಇತ್ಯತ್ರ ಗುಣಪದೇನೈವ ಗುಣಮನೂದ್ಯ ನಿಷೇಧಾತ್ ಪದಾಂತರೇಣಾನುವಾದೋ ವ್ಯರ್ಥ ಇತ್ಯಾಹ– **ನಿರ್ಗುಣೋಕ್ತಾವಿತಿ** ॥ ೬೦೧ ॥

**ವಿವರಣೆ–** 'ಕೇವಲೋ ನಿರ್ಗುಣಶ್ಚ' ಎಂಬಲ್ಲಿರುವ ನಿರ್ಗುಣ ಶಬ್ದದಲ್ಲಿಯೇ 'ನಿರ್' ಮತ್ತು 'ಗುಣ' ಎಂಬ ಎರಡು ಅಂಶವಿದೆ. ಅಲ್ಲಿ 'ಗುಣ' ಎಂಬ ಅಂಶದಿಂದ ಗುಣಗಳನ್ನು ಅನುವಾದ ಮಾಡಿ 'ನಿರ್' ಎಂಬ ಉಪಸರ್ಗದಿಂದ ಅವುಗಳನ್ನು ನಿಷೇಧ ಮಾಡಬಹುದು. ಆದ್ದರಿಂದ ನಿಷೇಧ ಮಾಡುವುದಕ್ಕೋಸ್ಕರ ಗುಣಗಳನ್ನು ಉಪಸಂಹಾರ

**ಭಾವವಿಲಾಸಿನೀ– ಅನುವಾದಕಪಕ್ಷೇ ದೂಷಣಾಂತರಂ ಚಾಹ– ಅನುವಾದಕೇತಿ ॥ ಆದಿಪದೇನ ನಞೋ ಗ್ರಹಣಮ್ । ತತ್ ಯತ್ತದಿತಿ ಪದದ್ವಯಮ್ । ಏಕವಾಕ್ಯನಿಷೇಧೇ 'ನ ಸುರಾಂ ಪಿಬೇತ್' ಇತ್ಯಾದಿಕೇ ನಞ್ ನಞೇವ ಲಿಂಗಮ್ ಅನುವಾದಕಲಿಂಗಮ್ ॥ ೪೯೮ ॥**

**ವಿವರಣೆ–** ಅನುವಾದಕತ್ವ ಪಕ್ಷದಲ್ಲಿ ಇನ್ನೊಂದು ದೋಷವನ್ನು ಹೇಳುತ್ತಾರೆ. ಅನುವಾದ ಎಂದು ಹೇಳಬೇಕಾದರೆ ಅನುವಾದ ಎಂದು ಸೂಚಿಸುವ ಚಿನ್ಹೆ ಇರಬೇಕು. ಆ ಚಿನ್ಹೆಯು ಎರಡು ರೀತಿ. ಒಂದು ವಾಕ್ಯದಲ್ಲಿ ಹೇಳಿದುದನ್ನು ಇನ್ನೊಂದು ವಾಕ್ಯವು ನಿಷೇಧ ಮಾಡುವುದಾದರೆ ಅಲ್ಲಿ ಯತ್ ತತ್ ಮೊದಲಾದ ಪದಗಳಿರಬೇಕು. ಏಕೋ ದೇವಃ' ಎಂಬ ವಾಕ್ಯದಲ್ಲಿ ಅಂತಹ ಪದವಿಲ್ಲ. ಅದೇ ವಾಕ್ಯದಲ್ಲಿ ಹೇಳಿದ ಅರ್ಥವನ್ನು ನಿಷೇಧ ಮಾಡುವುದಾದರೆ ನಿಷೇಧವಾಚಕ ಪದವು ಸ್ವತಂತ್ರವಾಗಿ ಇರಬೇಕು. ಅದೂ ಈ ವಾಕ್ಯದಲ್ಲಿ ಇಲ್ಲ. ಆದ್ದರಿಂದ ಏಕತ್ವ, ದೇವತ್ವಾದಿ ಗುಣಗಳನ್ನು ನಿಷೇಧ ಮಾಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಮಾನಸಿದ್ಧಾನುವಾದೇ ತು ತೇನೈವ ಸ್ಯುರ್ಗುಣಾ ಹರೇಃ ।**
**ನಿಷೇಧಶ್ಚ ನ ತೇ ಮಾನಾಮಾನತಾದೂಷಣಂ ಶೃಣು ॥ ೪೯೯ ॥**

**ನಿರ್ಗುಣತ್ವೇ ಸ್ಥಿರೇ ತೇನ ಮಾನಾನಾಂ ಸ್ಯಾದಮಾನತಾ ।**
**ತತ್ಸತ್ವೇ ಚಾವಿರುದ್ಧಂ ತೇ ನಿರ್ಗುಣತ್ವಂ ಸ್ಥಿರಂ ಭವೇತ್ ॥ ೫೦೦ ॥**

**ಅರ್ಥ–** ಮಾನಸಿದ್ಧಾನುವಾದೇ= ಪ್ರಮಾಣಸಿದ್ಧವಾದುದನ್ನು ಅನುವಾದ ಮಾಡಿದರೆ, ತೇನೈವ= ಆ ಕಾರಣದಿಂದಲೇ, ಹರೇಃ= ಹರಿಗೆ, ಗುಣಾಃ= ಗುಣಗಳು, ಸ್ಯುಃ= ಉಂಟಾಗುತ್ತವೆ, ಚ= ಮತ್ತು, ನಿಷೇಧಶ್ಚ ನ= ನಿಷೇಧವೂ ಕೂಡುವುದಿಲ್ಲ, ಮಾನಾಮಾನತಾದೂಷಣಂ= ನಿನ್ನ ಪ್ರಮಾಣಕ್ಕೆ ಅಪ್ರಾಮಾಣ್ಯರೂಪವಾದ ದೋಷವನ್ನು ಶೃಣು= ಕೇಳು.

ನಿರ್ಗುಣತ್ವೇ= ನಿರ್ಗುಣತ್ವವು, ಸ್ಥಿರೇ= ಸಿದ್ಧವಾದರೆ ಆದರಿಂದ, ಮಾನಾನಾಂ= ಸಗುಣ ಪ್ರಮಾಣಗಳಿಗೆ, ಅಮಾನತಾಸ್ಯಾತ್= ಅಪ್ರಾಮಾಣ್ಯವು ಬಂದೀತು, ತತ್ಸತ್ವೇ= ಸಗುಣವಾಕ್ಯಗಳು ಅಪ್ರಮಾಣವೆಂದಾದರೆ, ಅವಿರುದ್ಧಂ= ಅವುಗಳ ವಿರೋಧವಿಲ್ಲದೆ, ತೇ ನಿರ್ಗುಣತ್ವಂ= ನಿನ್ನ ನಿರ್ಗುಣತ್ವವು, ಸ್ಥಿರಂ ಭವೇತ್= ಸಿದ್ಧಿಸೀತು.

**ಅನುವಾದ– ಪ್ರಮಾಣಸಿದ್ಧವಾದ ಗುಣಗಳನ್ನು ಅನುವಾದ ಮಾಡಿದರೆ ಪ್ರಮಾಣಸಿದ್ಧವಾದ ಕಾರಣದಿಂದಲೇ ಗುಣಗಳು ಸತ್ಯ ಎಂದಾಗುತ್ತವೆ. ನೀನು ನಿಷೇಧ ಮಾಡಲು ಆಗುವುದಿಲ್ಲ ಜೊತೆಗೆ ನಿನ್ನ ನಿಷೇಧವಾಕ್ಯದ ಅಪ್ರಾಮಾಣ್ಯ ದೋಷವನ್ನೂ ಹೇಳುತ್ತೇನೆ. ಕೇಳು. ನಿರ್ಗುಣತ್ವವು ಸಿದ್ಧವಾದರೆ ಆದರಿಂದ**

ಸರ್ವಜ್ಞತ್ವಾದಿಗುಣಗಳನ್ನು ಹೇಳುವ ಪ್ರಮಾಣಕ್ಕೆ ವಿರೋಧವುಂಟಾಗಿ ಸರ್ವಜ್ಞ-ತ್ವಾದಿಗಳನ್ನು ಹೇಳುವ ವಾಕ್ಯಗಳು ಅಪ್ರಮಾಣವಾಗುತ್ತವೆ. ಸರ್ವಜ್ಞತ್ವಾದಿಗಳನ್ನು ಹೇಳುವ ವಾಕ್ಯಗಳು ಅಪ್ರಮಾಣವೆಂದು ಸಿದ್ಧವಾದರೆ, ನಿರ್ಗುಣ ಶ್ರುತಿಯು ನಿರ್ಗುಣತ್ವವನ್ನು ಹೇಳುತ್ತದೆ.

**ಭಾವವಿಲಾಸಿನೀ–** ಅಧುನಾ ಮಾನಸಿದ್ಧಾನುವಾದೋ ವಾ ಅಮಾನಸಿದ್ಧಾನುವಾದೋ ವೇತಿ ವಿಕಲ್ಪ್ಯ ಆದ್ಯಂ ದೂಷಯತಿ– **ಮಾನಸಿದ್ಧೇತಿ** ॥ ತೇನೈವ ಪ್ರಾಚೀನಪ್ರಮಾಣೇನೈವ। ತೇ ನಿಷೇಧಶ್ಚ ನ । ಪ್ರಮಾಣಸಿದ್ಧಾನಾಂ ಬ್ರಹ್ಮವನ್ನಿಷೇಧಾಯೋಗಾತ್ । ದ್ವಿತೀಯಂ ದೂಷಯತಿ– ಮಾನಾಮಾನತೇತಿ ॥ ನಿರ್ಗುಣತ್ವೇ ಗುಣನಿಷೇಧರೂಪೇ ಸ್ಥಿರೇ ಪ್ರಾಮಾಣಿಕೇ ಸತಿ ಹಿ ತೇನ ಗುಣನಿಷೇಧೇನ । ಮಾನಾನಾಂ ಗುಣಪ್ರತಿಪಾದಕಪ್ರಮಾಣಾನಾಮ್ । ಅನ್ಯಥಾಽಬಾಧಿತಾ-ರ್ಥಕತ್ವೇ ನ ತೇಷಾಮಪ್ರಾಮಾಣ್ಯಾಯೋಗಾತ್ । ತತಸ್ತ್ವೇ ಗುಣಪ್ರತಿಪಾದಕ ಪ್ರಮಾಣಾ-ನಾಮಪ್ರಾಮಾಣ್ಯಸತ್ತ್ವೇ । ಅನ್ಯಥಾ ಪ್ರಾಮಾಣಿಕನಿಷೇಧಾಯೋಗೇನ ತ್ವದಭಿಲಷಿತ-ನಿರ್ಗುಣತ್ವಮೇವ ನ ಸಿದ್ಧ್ಯೇತ್ । ತಥಾಚಾನ್ಯೋನ್ಯಾಶ್ರಯಃ ಸ್ಯಾದಿತಿ ಭಾವಃ ॥೪೯೯-೬೦೦॥

**ನಿರ್ಗುಣೋಕ್ತೌ ಗುಣೋಕ್ತ್ಯೈವ ನಿಷೇಧ್ಯಸ್ಯಾನುವಾದನಾತ್ ।**
**ಏಕತ್ವಾದ್ಯನುವಾದತ್ವಕಥಾ ತೇಽಯಂ ವೃಥಾ ತವ ॥ ೬೦೧ ॥**

**ಅರ್ಥ–** ನಿರ್ಗುಣೋಕ್ತೌ= ನಿರ್ಗುಣ ಎಂಬ ಪದದಲ್ಲಿರುವ, ಗುಣೋಕ್ತ್ಯೈವ= ಗುಣ ಎಂಬ ಪದದಿಂದಲೇ, ನಿಷೇಧ್ಯಸ್ಯ= ನಿಷೇಧ ಮಾಡಬೇಕಾದ ಗುಣಗಳನ್ನು, ಅನುವಾದನಾತ್= ಅನುವಾದ ಮಾಡುವುದರಿಂದ, ತೇ= ನಿನ್ನ, ಇಯಂ ಏಕತ್ವಾದ್ಯನುವಾದತ್ವ ಕಥಾ= ಏಕ ಮೊದಲಾದ ಶಬ್ದಗಳು ಏಕತ್ವಾದಿಗಳನ್ನು ಅನುವಾದ ಮಾಡುತ್ತವೆ ಎಂಬ ಈ ಕಥೆಯು, ವೃಥಾ= ವ್ಯರ್ಥವೇ ಆಗುತ್ತದೆ.

**ಅನುವಾದ–** ನಿರ್ಗುಣ ಎಂಬ ಪದದಲ್ಲಿರುವ 'ಗುಣ' ಶಬ್ದದಿಂದಲೇ ಗುಣಗಳ ಅನುವಾದವು ಶಕ್ಯವಾದುದರಿಂದ ಏಕತ್ವಾದಿಗಳನ್ನು ನಿಷೇಧ ಮಾಡುವುದಕ್ಕೋಸ್ಕರ 'ಏಕ' ಮೊದಲಾದ ಶಬ್ದಗಳಿಂದ ಅನುವಾದ ಮಾಡುತ್ತದೆ ಎಂದು ಹೇಳುವ ನಿನ್ನ ವಿವರಣೆಯು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ಅಧುನಾ ನಿರ್ಗುಣ ಇತ್ಯತ್ರ ಗುಣಪದೇನೈವ ಗುಣಮನೂದ್ಯ ನಿಷೇಧಾತ್ ಪದಾಂತರೇಣಾನುವಾದೋ ವ್ಯರ್ಥ ಇತ್ಯಾಹ– **ನಿರ್ಗುಣೋಕ್ತಾವಿತಿ** ॥ ೬೦೧ ॥

**ವಿವರಣೆ–** 'ಕೇವಲೋ ನಿರ್ಗುಣಶ್ಚ' ಎಂಬಲ್ಲಿರುವ ನಿರ್ಗುಣ ಶಬ್ದದಲ್ಲಿಯೇ 'ನಿರ್' ಮತ್ತು 'ಗುಣ' ಎಂಬ ಎರಡು ಅಂಶವಿದೆ. ಅಲ್ಲಿ 'ಗುಣ' ಎಂಬ ಅಂಶದಿಂದ ಗುಣಗಳನ್ನು ಅನುವಾದ ಮಾಡಿ 'ನಿರ್' ಎಂಬ ಉಪಸರ್ಗದಿಂದ ಅವುಗಳನ್ನು ನಿಷೇಧ ಮಾಡಬಹುದು. ಆದ್ದರಿಂದ ನಿಷೇಧ ಮಾಡುವುದಕ್ಕೋಸ್ಕರ ಗುಣಗಳನ್ನು ಉಪಸಂಹಾರ

ಮಾಡಲು 'ಏಕಃ' ಇತ್ಯಾದಿ ವಾಕ್ಯಶೇಷವು ಬೇಕಾಗಿಲ್ಲ. ಆದ್ದರಿಂದ 'ಏಕಃ' ಇತ್ಯಾದಿ ವಾಕ್ಯಶೇಷವು ಗುಣಾನುವಾದರೂಪವಾಗಿದೆ ಎಂದು ಹೇಳಬಾರದು.

**ವೇದೈಕಪ್ರಾಪ್ತಸಾರ್ವಜ್ಞಪೂರ್ವಸರ್ವಗುಣಾ ಹರೇಃ ।**
**ಅಮಾನತ್ವಾರ್ಹವೇದಾನ್ಯಮಾನಪ್ರಾಪ್ತೋ ನ ಕಶ್ಚನ ॥ ೯೦೨ ॥**

**ಅರ್ಥ–** ಹರೇಃ= ಹರಿಯ, ವೇದೈಕ್ಯಪ್ರಾಪ್ತಸಾರ್ವಜ್ಞಪೂರ್ವಸರ್ವಗುಣಾಃ= ಸಾರ್ವಜ್ಞ ಮೊದಲಾದ ಸರ್ವಗುಣಗಳೂ ವೇದದಿಂದಲೇ ಪ್ರಾಪ್ತವಾಗಿವೆ, ಕಶ್ಚನ= ಯಾವ ಗುಣವೂ, ಅಮಾನತ್ವಾರ್ಹವೇದಾನ್ಯಮಾನಪ್ರಾಪ್ತಃ= ಅಪ್ರಾಮಾಣ್ಯಸಂಭಾವನೆಯಿರುವ ವೇದವ್ಯತಿರಿಕ್ತವಾದ ಪ್ರಮಾಣದಿಂದ ಪ್ರಾಪ್ತವಾದದು, ನ= ಅಲ್ಲ.

**ಅನುವಾದ– ಹರಿಯ ಸಾರ್ವಜ್ಞಾದಿಗುಣಗಳು ಕೇವಲ ವೇದದಿಂದ ಮಾತ್ರ ಪ್ರಾಪ್ತವಾಗಿವೆ. ಸಂಭಾವಿತವಾದ ಅಪ್ರಮಾಣ್ಯವಿರುವ ಬೇರೆ ಪ್ರಮಾಣಗಳಿಂದ ಯಾವುದೂ ಪ್ರಾಪ್ತವಾಗಿಲ್ಲ.**

**ಭಾವವಿಲಾಸಿನೀ–** ಅಧುನಾ ವೇದೇತರಪ್ರಮಾಣಪ್ರಾಪ್ತಿಮಾದಾಯಾನುವಾದತ್ವಮುಚ್ಯತೇ ಉತ ಸಮಯಪ್ರಾಪ್ತಿಮಾದಾಯ ವಾ ಅಥವಾ ವೇದಪ್ರಾಪ್ತಿಮಾದಾಯ ವೇತಿ ವಿಕಲ್ಪ್ಯ ಪಕ್ಷತ್ರಯೇಽಪಿ ದೂಷಣಮಾಹ– **ವೇದೈಕಪ್ರಾಪ್ತೇತ್ಯಾದಿನಾ** ॥ ಅಮಾನತ್ವಾರ್ಹೇತ್ಯನೇನ ವೇದೇತರಪ್ರಮಾಣಾನಾಂ ಕದಾಚಿದಪ್ರಾಮಾಣ್ಯಮಪಿ ಸಂಭಾವಿತಂ ವೇದಸ್ಯ ತು ನ ಕಥಂಚಿದಿತಿ ಧ್ವನಯತಿ ॥ ೯೦೨ ॥

**ವಿವರಣೆ–** 'ಏಕ' ಇತ್ಯಾದಿವಾಕ್ಯವು ಅನುವಾದಕ ಎಂದು ಹೇಳಿದರೆ, ವೇದೇತರ ಪ್ರಮಾಣಪ್ರಾಪ್ತವಾದುದನ್ನು ಅನುವಾದ ಮಾಡುತ್ತದೆಯೋ, ಸಮಯ ಪ್ರಾಪ್ತವಾದುದನ್ನು ಅನುವಾದ ಮಾಡುತ್ತದೆಯೋ, ಅಥವಾ ವೇದಪ್ರಾಪ್ತವಾದುದನ್ನೇ ಅನುವಾದ ಮಾಡುತ್ತದೆಯೋ, ಎಂಬ ಮೂರು ಪಕ್ಷಗಳನ್ನು ಇಟ್ಟುಕೊಂಡು ಕ್ರಮವಾಗಿ ದೋಷವನ್ನು ಹೇಳುತ್ತಾರೆ. ವೇದೇತರಪ್ರಮಾಣಗಳಿಗೆ ಒಮ್ಮೊಮ್ಮೆ ಅಪ್ರಾಮಾಣ್ಯವು ಸಂಭಾವಿತ-ವಾದುದು. ವೇದಗಳಿಗೆ ಅಪ್ರಾಮಾಣ್ಯಸಂಭಾವನೆ ಎಂದೆಂದೂ ಇಲ್ಲ. ಆದ್ದರಿಂದ ಸಂಭಾವಿತ ಅಪ್ರಾಮಾಣ್ಯವುಳ್ಳ ವೇದೇತರ ಪ್ರಮಾಣಗಳಿಂದ ಪ್ರಾಪ್ತವಾದ ಸರ್ವಜ್ಞತ್ವಾದಿ-ಗುಣಗಳನ್ನು ವೇದವು ಅನುವಾದ ಮಾಡುವ ಅಗತ್ಯವಿಲ್ಲ.

**ವಾಕ್ಯಾರ್ಥೇ ತೇಽಪ್ಯಸಂದೇಹಾತ್ ಸಮಯಪ್ರಾಪ್ತತಾಽಪಿ ನ ।**
**ಕಥಮಿತ್ಥಮಪೂರ್ವಾರ್ಥಾ ಗುಣೋಕ್ತಿರನುವಾದಿಕಾ ॥ ೯೦೩ ॥**

**ಅರ್ಥ–** ವಾಕ್ಯಾರ್ಥೇ= ಯಃ, ಸರ್ವಜ್ಞಃ ಇತ್ಯಾದಿ ವಾಕ್ಯದ ಅರ್ಥದ ವಿಷಯದಲ್ಲಿ, ತೇ ಅಪಿ= ನಿನಗೂ ಸಹ, ಅಸಂದೇಹಾತ್= ಸಂದೇಹವಿಲ್ಲದಿರುವ ಕಾರಣ, ಸಮಯ-

ಪ್ರಾಪ್ತತಾऽಪಿ= ಸಮಯ ಪ್ರಾಪ್ತಿಯೂ ಸಹ, ನ= ಇಲ್ಲ, ಇತ್ಥಂ= ಈ ರೀತಿಯಲ್ಲಿ, ಅಪೂರ್ವಾರ್ಥಾ= ಪ್ರಮಾಣಾಂತರದಿಂದ ಅಪ್ರಾಪ್ತವಾದುದನ್ನು ಹೇಳುವ, ಗುಣೋಕ್ತಿಃ= ಸರ್ವಜ್ಞತ್ವಾದಿ ವಚನಗಳು, ಅನುವಾದಿಕಾ= ಅನುವಾದಕಗಳಾಗಿ, ಕಥಂ= ಹೇಗೆ ಆಗುತ್ತವೆ?

**ಅನುವಾದ–** 'ಏಷಃ ಸರ್ವಜ್ಞಃ' ಇತ್ಯಾದಿ ವಾಕ್ಯಗಳ ಅರ್ಥದ ವಿಷಯದಲ್ಲಿ ನಿನಗೂ ಸಹ ಯಾವ ಸಂದೇಹವೂ ಇಲ್ಲ. ಹೀಗಿರುವಾಗ ಸರ್ವಜ್ಞತ್ವಾದಿ ಗುಣಗಳು ಹೇಗೆ ಸಮಯಪ್ರಾಪ್ತವಾಗುತ್ತವೆ? ಹೀಗೆ ಬೇರೆ ಯಾವ ಪ್ರಮಾಣದಿಂದಲೂ ಪ್ರಾಪ್ತವಾಗದ ಸಾರ್ವಜ್ಞವನ್ನು ಹೊಸದಾಗಿ ಹೇಳುವ ವಾಕ್ಯವು ಹೇಗೆ ಅನುವಾದಕವಾಗುತ್ತದೆ.?

**ಭಾವವಿಲಾಸಿನೀ–** ತೇ ತವಾಪಿ 'ಏಷ ಸರ್ವಜ್ಞಃ' ಇತ್ಯಾದಿಸಾರ್ವಜ್ಞಾದಿಭಗವದ್ಧರ್ಮ ಪ್ರತಿಪಾದಕವಾಕ್ಯಾರ್ಥೇ ಅಸನ್ದೇಹಾದಯಂ ವಾ ವಾಕ್ಯಾರ್ಥಃ ಅನ್ಯೋ ವೇತಿ ಸಂದೇಹಾ-ಭಾವಾತ್ ಸಮಯಪ್ರಾಪ್ತತಾ ಕೇವಲಸಮಯೇನೈವ ಪ್ರಸಕ್ತತಾಪಿ ನ । ಸ್ಪಷ್ಟವಾಕ್ಯೇನೈವ ಪ್ರಸಕ್ತಿಸದ್ಭಾವಾದ್ ಅಗತಿಕಾ ಗತಿಃ ಕಿಮರ್ಥಮಾಶ್ರಯಣೀಯೇತಿ ಭಾವಃ । ಅಪೂರ್ವಾರ್ಥಾ ವೇದೇತರಪ್ರಮಾಣಾಸಿದ್ಧಾರ್ಥಾ ಕಥಮನುವಾದಿಕೇತಿ ಯೋಜನಾ । ಅನ್ಯಥಾ ನಿರ್ಗುಣ-ವಾಕ್ಯಸ್ಯಾಪ್ಯನುವಾದಕತ್ವಪ್ರಸಂಗಾತ್ ॥ ೯೦೩ ॥

**ವಿವರಣೆ–** ಸಮಯಪ್ರಾಪ್ತವಾದ ಸರ್ವಜ್ಞತ್ವವನ್ನು ನಿಷೇಧ ಮಾಡುತ್ತದೆ ಎಂಬ ಪಕ್ಷದಲ್ಲಿ ದೋಷವನ್ನು ಹೇಳುತ್ತಾರೆ. ಸಮಯಪ್ರಾಪ್ತವಾದರೆ, ಸಮಯಗಳಲ್ಲಿ ಪರಸ್ಪರ ವಿಪ್ರತಿಪತ್ತಿ ಇರುವುದರಿಂದ ಈ ವಿಷಯದಲ್ಲಿ ಸಂಶಯವಿರಬೇಕಾಗುತ್ತದೆ. ಆದರೆ, 'ಏಷ ಸರ್ವಜ್ಞಃ' ಇತ್ಯಾದಿ ವಾಕ್ಯಕ್ಕೆ ಬ್ರಹ್ಮನು ಸರ್ವಜ್ಞತ್ವವುಳ್ಳವನು ಎಂಬ ಅರ್ಥದಲ್ಲಿ ನಿನಗೂ ಸಹ ಯಾವ ವಿಪ್ರತಿಪತ್ತಿಯೂ ಇಲ್ಲ. ಹೀಗಿರುವಾಗ ಅದು ಹೇಗೆ ಅನುವಾದಕವಾಗುತ್ತದೆ.

ಶ್ರುತಿಪ್ರಾಪ್ತಸ್ಯ ಚ ಶ್ರುತ್ಯಾ ನಿಷೇಧೇ ಮಾನತಾ ಹತಾ ।
ಏತದ್ಬಾಧೇ ಸಾವಕಾಶೇ ನಿರ್ಗುಣೈಕ್ಯಾಗಮೇ ತವ ॥
ವಿಶ್ವಾಸಃ ಸ್ಯಾತ್ ಕಥಂ ನೃಣಾಂ ಗಜೇ ಮಗ್ನೇ ಕ್ವ ಗರ್ದಭಃ ॥ ೯೦೪॥

**ಅರ್ಥ–** ಶ್ರುತಿಪ್ರಾಪ್ತಸ್ಯ= ಶ್ರುತಿಯಿಂದ ಪ್ರಾಪ್ತವಾದುದಕ್ಕೂ, ಶ್ರುತ್ಯಾ= ಶ್ರುತಿಯಿಂದಲೇ, ನಿಷೇಧೇ= ನಿಷೇಧಮಾಡಿದರೆ, ಮಾನತಾ= ಶ್ರುತಿಯ ಪ್ರಾಮಾಣ್ಯವು, ಹತಾ= ನಾಶವಾಗುತ್ತದೆ, ಏತದ್ಬಾಧೇ= ಪ್ರಬಲವಾದ ಗುಣಶ್ರುತಿಗೂ ಬಾಧೆಯುಂಟಾದರೆ, ಸಾವಕಾಶೇ= ಸಾವಕಾಶವಾದ, ತವ= ನಿನ್ನ, ನಿರ್ಗುಣೈಕ್ಯಾಗಮೇ= ನಿರ್ಗುಣ ಶ್ರುತಿಯಲ್ಲಿ ಮತ್ತು ಐಕ್ಯಶ್ರುತಿಯಲ್ಲಿ, ನೃಣಾಂ= ಜನರಿಗೆ, ವಿಶ್ವಾಸಃ= ವಿಶ್ವಾಸವು, ಕಥಂ ಸ್ಯಾತ್= ಹೇಗೆ ಉಂಟಾಗುತ್ತದೆ, ಗಜೇ= ಆನೆಯೇ, ಮಗ್ನೇ= ಮುಳುಗುತ್ತಿರಲು, ಗರ್ದಭಃ= ಕತ್ತೆಯು, ಕ್ವ= ಎಲ್ಲಿರುತ್ತದೆ?

**ಅನುವಾದ–** ಶ್ರುತಿಪ್ರಾಪ್ತವಾದುದನ್ನು ಶ್ರುತಿಯೇ ನಿಷೇಧ ಮಾಡಿದರೆ ಶ್ರುತಿಗೆ ಅಪ್ರಾಮಾಣ್ಯವು ಬರುತ್ತದೆ. ಇಂತಹ ಸಾರ್ವಜ್ಞಾದಿಗಳನ್ನು ಹೇಳುವ ನಿರವಕಾಶ-ವಾಕ್ಯಗಳು ಬಾಧಕ್ಕೆ ಒಳಗಾಗುವುದಾದರೆ ಸಾವಕಾಶವಾದ ನಿರ್ಗುಣವಾಕ್ಯ ಮತ್ತು ಐಕ್ಯವಾಕ್ಯಗಳಲ್ಲಿ ನಿನಗೆ ಹೇಗೆ ಬಾಧ್ಯವಾಗುವುದಿಲ್ಲವೆಂದು ವಿಶ್ವಾಸ? ಆನೆಯೇ ಮುಳುಗುವಾಗ ಕತ್ತೆಯು ಎಲ್ಲಿರುತ್ತದೆ?

**ಭಾವವಿಲಾಸಿನೀ–** ದೂಷಣಾಂತರಮಾಹ– ಶ್ರುತಿಪ್ರಾಪ್ತಸ್ಯೇತಿ ॥ ಮಾನತಾ ನಿಷೇಧ್ಯಶ್ರುತೇಃ ಪ್ರಮಾಣತಾ । ಏತದ್ಬಾಧೇ ನಿರವಕಾಶಸಗುಣಶ್ರುತೇರಪ್ರಾಮಾಣ್ಯೇ ಸಾವಕಾಶೇ ತ್ರಿಗುಣವರ್ಜಿತತ್ವಸಾದೃಶ್ಯಾದಿನಾ ಸಾವಕಾಶೇ ನಿರ್ಗುಣೈಕ್ಯಯೋರಾಗಮೇ । ನಿರವಕಾಶತ್ವೇನ ಪ್ರಬಲಶ್ರುತೀನಾಮಪ್ರಾಮಾಣ್ಯೇ ದುರ್ಬಲತ್ವಶ್ರುತೇರಪ್ರಾಮಾಣ್ಯಂ ಕಿಂ ವಕ್ತವ್ಯಮಿತಿ ಭಾವಃ । ತತ್ರ ದೃಷ್ಟಾಂತಮಾಹ– ಗಜ ಇತಿ ॥ ೬೦೪ ॥

**ವಿವರಣೆ–** ಶ್ರುತಿಪ್ರಾಪ್ತವಾದುದನ್ನೇ ಶ್ರುತಿಯು ನಿಷೇಧ ಮಾಡುತ್ತದೆ ಎಂದರೆ ಬಾಧ್ಯಾರ್ಥವನ್ನು ಹೇಳುವ ಶ್ರುತಿಗೆ ಖಂಡಿತವಾಗಿ ಅಪ್ರಾಮಾಣ್ಯವು ಬರುತ್ತದೆ. 'ಏಷ ಸರ್ವಜ್ಞ' ಇತ್ಯಾದಿ ಶ್ರುತಿಗಳಿಗೆ ಬೇರೆ ಯಾವ ಅರ್ಥವನ್ನೂ ಮಾಡಲು ಬರುವುದಿಲ್ಲ. ಆದ್ದರಿಂದ ಅವು ಅನ್ಯತ್ರ ನಿರವಕಾಶವಾದವು. ನಿರ್ಗುಣಶ್ರುತಿಗೂ ಮತ್ತು ಐಕ್ಯಶ್ರುತಿಗೂ ಅನೇಕ ಅರ್ಥಗಳನ್ನು ಮಾಡಲು ಬರುವುದರಿಂದ ಅವು ಸಾವಕಾಶ. ನಿರವಕಾಶವಾದ ಸರ್ವಜ್ಞತ್ವಶ್ರುತಿಯೇ ಬಾಧಿತವಾಗುತ್ತದೆ ಎಂದು ನೀನು ಹೇಳಿದರೆ, ಸಾವಕಾಶವಾದ ನಿರ್ಗುಣಶ್ರುತಿ ಮತ್ತು ಐಕ್ಯಶ್ರುತಿಗಳ ಅವಸ್ಥೆ ಏನು? ನಿರವಕಾಶವಾದ ಸರ್ವಜ್ಞತ್ವ-ಶ್ರುತಿಯು ಆನೆಯಿದ್ದಂತೆ. ಸಾವಕಾಶವಾದ ನಿರ್ಗುಣೈಕ್ಯಶ್ರುತಿಗಳು ದುರ್ಬಲವಾದ ಕತ್ತೆಯಿದ್ದಂತೆ. ಪ್ರಬಲವಾದ ಆನೆಯೇ ಮುಳುಗಿ ಹೋಗುವಾಗ ದುರ್ಬಲವಾದ ಕತ್ತೆಯು ಎಲ್ಲಿ ಉಳಿಯುತ್ತದೆ? ಆದ್ದರಿಂದ ನಿರ್ಗುಣೈಕ್ಯಶ್ರುತಿಗಳಿಗೂ ನಿಶ್ಚಿತವಾಗಿ ಬಾಧವು ಬಂದೇ ಬರುತ್ತದೆ ಎಂದು ಅಭಿಪ್ರಾಯ.

ಹಿಮಸ್ಯ ಭೇಷಜಂ ಹ್ಯಗ್ನಿರಿತಿ ಶ್ರುತ್ಯಾಽಪ್ಯನೂದಿತೇ ।
ಕಿಮೇಕಾಮಾನತಾ ವಹ್ನೇಃ ಶೀತತಾ ವಾ ಭವೇದ್ ವದ ॥ ೬೦೫ ॥

ಅತೋಽನುವಾದಮಾತ್ರೇಣ ನಾರ್ಥಸ್ಯ ಸ್ಯಾದ್ಧಿ ದೂಷಣಮ್ ।
ಬಹುಪ್ರಮಾಣಸಂವಾದಾದ್ ದಾರ್ಢ್ಯಮೇವ ಭವಿಷ್ಯತಿ ॥ ೬೦೬ ॥

**ಅರ್ಥ–** ಅಗ್ನಿಃ= ಅಗ್ನಿಯು, ಹಿಮಸ್ಯ= ಶೈತ್ಯದ, ಭೇಷಜಂ= ನಿವಾರಕ, ಇತಿ= ಎಂದು, ಶ್ರುತ್ಯಾಽಪಿ= ಶ್ರುತಿಯಿಂದಲೂ ಸಹ, ಅನೂದಿತೇ= ಅನುವಾದ ಮಾಡಲ್ಪಟ್ಟರೆ, ಕಿಮೇಕಾಮಾನತಾ= ಪ್ರತ್ಯಕ್ಷ ಮತ್ತು ಆಗಮಗಳಲ್ಲಿ ಒಂದು ಅಪ್ರಮಾಣವಾಗುತ್ತದೆಯೇ? ವಾ= ಅಥವಾ, ವಹ್ನೇಃ= ಅಗ್ನಿಗೆ, ಶೀತತಾ= ಶೈತ್ಯವು, ಭವೇತ್= ಉಂಟಾಗುತ್ತದೆಯೇ, ವದ=

ಹೇಳು, ಅತಃ= ಆ ಕಾರಣದಿಂದ, ಅನುವಾದಮಾತ್ರೇಣ= ಕೇವಲ ಅನುವಾದ ಮಾತ್ರದಿಂದ, ಅರ್ಥಸ್ಯ= ವಿಷಯಕ್ಕೆ, ದೂಷಣಂ= ಬಾಧಿತತ್ವರೂಪದ ದೋಷವು, ನ ಸ್ಯಾದ್ಧಿ= ಆಗುವುದಿಲ್ಲವಷ್ಟೇ, ಬಹುಪ್ರಮಾಣಸಂವಾದಾತ್= ಅನೇಕ ಪ್ರಮಾಣಗಳ ಸಂವಾದವು ದೊರೆಯುವುದರಿಂದ, ದಾರ್ಢ್ಯಮೇವ= ದೃಢತೆಯೇ, ಭವಿಷ್ಯತಿ= ಉಂಟಾಗುವುದು.

**ಅನುವಾದ– ಅಗ್ನಿಯು ಹಿಮಕ್ಕೆ ಔಷಧಿ. ಎಂದರೆ ಹಿಮಕ್ಕೆ ನಾಶಕ ಎಂದು ಶ್ರುತಿಯು ಅನುವಾದಮಾಡಿದರೆ, ಅದರಲ್ಲಿ ಒಂದು ಅಪ್ರಮಾಣವಾಗುತ್ತದೆಯೇ ಅಥವಾ ವಹ್ನಿಯು ಶೀತವಾಗುತ್ತದೆಯೆ?**

**ಆದ್ದರಿಂದ ಕೇವಲ ಅನುವಾದದಿಂದ ಅರ್ಥಕ್ಕೆ ದೋಷವುಂಟಾಗುವುದಿಲ್ಲ. ಅದರ ಬದಲಾಗಿ ಹೇಳಿದ ಅರ್ಥದ ವಿಷಯದಲ್ಲಿ ಅನೇಕ ಪ್ರಮಾಣಗಳ ಸಂವಾದವು ದೊರೆಯುವುದರಿಂದ ದಾರ್ಢ್ಯವೇ ಉಂಟಾಗುತ್ತದೆ.**

**ಭಾವವಿಲಾಸಿನೀ–** ಇದಾನೀಮಸ್ತು ವಾ ಅನುವಾದಕತ್ವಮ್, ತಥಾಪಿ ಕಾ ಹಾನಿರಿತಿ ದೃಷ್ಟಾಂತಮುಖೇನಾಹ– **ಹಿಮಸ್ಯೇತಿ** ॥ 'ಅಗ್ನಿರ್ಹಿಮಸ್ಯ ಭೇಷಜಮ್' ಇತಿ ಶ್ರುತ್ಯೇತ್ಯರ್ಥಃ। ಏಕಾಮಾನತಾ ಉಭಯೋರನ್ಯತರಸ್ಯಾಪ್ರಮಾಣತಾ ಭವೇತ್ ಕಿಮಿತಿ ಸಂಬಂಧಃ। ಔದ್ಧತ್ಯಾದ್ ಭವೇದಿತಿ ವದಂತಂ ಪ್ರತ್ಯಾಹ– **ವಹ್ನೇಃ ಶೀತತಾ ವೇತಿ** ॥ ಅಪ್ರಾಮಾಣ್ಯಸ್ಯಾರ್ಥಾ-ಯಾಥಾರ್ಥ್ಯವ್ಯಾಪ್ತತ್ವೇನ ಅನುವಾದಕಶ್ರುತೇರಪ್ರಾಮಾಣ್ಯೇ ವಹ್ನೇಃ ಶೀತತಾಽವಶ್ಯಂ ಭವೇದಿತಿ ಭಾವಃ। ಅತಃ ಅನುವಾದೇಽಪ್ಯರ್ಥಾವಿಘಾತಾತ್। ಅನುವಾದಮಾತ್ರೇಣ ನಿಷೇಧ-ಶೂನ್ಯಾನುವಾದೇನ। ಬಹುಪ್ರಮಾಣಸಂವಾದಾತ್ ಪ್ರತ್ಯಕ್ಷ ಶ್ರುತಿ ರೂಪಾನೇಕಪ್ರಮಾಣ-ಸಂವಾದಾತ್॥ ೯೦೫-೯೦೬ ॥

**ವಿವರಣೆ–** 'ಅಗ್ನಿರ್ಹಿಮಸ್ಯ ಭೇಷಜಂ' ಎಂಬುದು ವೇದವಾಕ್ಯ. ಅಗ್ನಿಯು ಶೈತ್ಯವಿನಾಶಕ ಎಂದು ಅರ್ಥ. ಅಗ್ನಿಯು ಶೈತ್ಯವಿನಾಶಕ ಎಂಬುದು ಪ್ರತ್ಯಕ್ಷದಿಂದಲೇ ಪ್ರಾಪ್ತವಾಗಿದೆ. ಆದ್ದರಿಂದ ಈ ವಾಕ್ಯವು ಅನುವಾದಕ. ಅನುವಾದಕವಾದ ಮಾತ್ರಕ್ಕೇ ಇದು ಅಪ್ರಮಾಣವೆಂದಾಗಲಿ ಅಥವಾ ಇದು ಹೇಳುವ ಅರ್ಥವು ಬಾಧಿತವಾದುದರಿಂದ ಅಗ್ನಿಯೇ ಶೀತವಾಗಿದೆಯೆಂದಾಗಲೀ ಅರ್ಥವಲ್ಲ. ಈ ದೃಷ್ಟಾಂತಗಳಿಂದ 'ಏಷ ಸರ್ವಜ್ಞ' ಇತ್ಯಾದಿ ವಾಕ್ಯಗಳಿಗೆ ಅನುವಾದಕತ್ವವನ್ನು ಒಪ್ಪಿದರೂ ಸಹ ಸರ್ವಜ್ಞತ್ವಾದಿಗಳು ಬಾಧಿತವಾಗುವುದಿಲ್ಲ ಎಂದು ಉಪಪಾದನೆ ಮಾಡುತ್ತಾರೆ.

ನಿಷೇಧ ಮಾಡುವುದಕ್ಕಾಗಿ ಅನುವಾದ ಮಾಡಿ ಅನಂತರ ನಿಷೇಧಮಾಡಿದರೆ, ಯಾವ ಅರ್ಥವನ್ನು ಅನುವಾದ ಮಾಡಿದೆಯೋ ಆ ಅರ್ಥವು ಬಾಧಿತವೆಂದಾಗುತ್ತದೆ. ನಿಷೇಧವನ್ನು ಮಾಡದೆ ಹಾಗೆಯೇ ಆ ಅರ್ಥವನ್ನು ಹೇಳಿದರೆ, ಅದು ಬೇರೆ ಇನ್ನೊಂದು ಪ್ರಮಾಣದಿಂದ ಪ್ರಾಪ್ತವಾಗಿದ್ದರೂ ಆ ವಿಷಯದಲ್ಲಿ ಪ್ರಾಪಕವಾದ ಮೊದಲನೆಯ

ಪ್ರಮಾಣ ಮತ್ತು ಈ ವಾಕ್ಯರೂಪಪ್ರಮಾಣ ಎರಡೂ ಇರುವುದರಿಂದ ಮೊದಲಿನ ಪ್ರಮಾಣದಿಂದ ಪ್ರಾಪ್ತವಾದ ಅರ್ಥವು ಇನ್ನೂ ದೃಢತರವೇ ಆಗುತ್ತದೆ. ಯಾವ ದೋಷವೂ ಬರುವುದಿಲ್ಲ.

೬ ನಿಷೇದ್ಧುಮನುವಾದಶ್ಚ ಮಾನಸಿದ್ಧಸ್ಯ ನೇಷ್ಯತೇ ।
ನಿಷೇಧ ಏವಾನ್ಯಗಾಮೀ ಸ್ಯಾದಹಿಂಸಾಶ್ರುತೌ ಯಥಾ ॥ ೯೦೭ ॥

ದೃಢಪ್ರತ್ಯಕ್ಷಸಿದೌಷ್ಣ್ಯಂ ಯಾಽನುವಕ್ತಿ ಶ್ರುತಿಃ ಸತೀ ।
ನ ಮುಂಚತಿ ನಿಷೇದ್ಧುಂ ಸಾ ಯಥಾ ಯಾಗವಿಯೋಗಭೀಃ ॥ ೯೦೮ ॥

**ಅರ್ಥ–** ಮಾನಸಿದ್ಧಸ್ಯ= ಪ್ರಮಾಣ ಸಿದ್ಧವಾದ ವಸ್ತುವಿಗೆ, ನಿಷೇದ್ಧುಂ ಅನುವಾದಸ್ಯ= ನಿಷೇಧ ಮಾಡಲು ಅನುವಾದ ಎಂಬುದು, ನೇಷ್ಯತೇ= ಅಂಗೀಕರಿಸಲ್ಪಡುವುದಿಲ್ಲ, ಅಹಿಂಸಾಶ್ರುತೌ ಯಥಾ= ಅಹಿಂಸಾ ವಾಕ್ಯದಲ್ಲಿ ಹೇಳುವಂತೆ, ನಿಷೇಧ ಏವ= ನಿಷೇಧ ವಾಕ್ಯವೇ, ಅನ್ಯಗಾಮಿ= ಅನ್ಯಾರ್ಥವುಳ್ಳದ್ದಾಗುತ್ತದೆ, ಯಾ= ಯಾವ, ಸತೀ= ಸಾಧ್ವಿಯಾದ, ಶ್ರುತಿಃ= ವೇದವು, ದೃಢಪ್ರತ್ಯಕ್ಷಸಿದೌಷ್ಣ್ಯಂ= ಪ್ರಬಲ ಪ್ರತ್ಯಕ್ಷಸಿದ್ಧವಾದ ಅಗ್ನಿಯ ಉಷ್ಣತೆಯನ್ನು, ಅನುವಕ್ತಿ= ಅನುವಾದ ಮಾಡುತ್ತದೆಯೋ, ಸಾ= ಆ ಶ್ರುತಿಯು, ಯಾಗವಿಯೋಗಭೀಃ= ಅಗ್ನಿ ಇಲ್ಲದಿದ್ದರೆ ಯಾಗವೇ ಉಂಟಾಗುವುದಿಲ್ಲ ಎಂಬ ಭಯದಿಂದ, ನಿಷೇದ್ಧುಂ= ಉಷ್ಣತೆಯನ್ನು ನಿಷೇಧಿಸಲು, ನ ಮುಂಚತಿ= ಬಿಡುವುದಿಲ್ಲ.

**ಅನುವಾದ–** ಪ್ರಮಾಣಸಿದ್ಧವಾದುದನ್ನು ಅನುವಾದ ಮಾಡಿ ನಿಷೇಧಮಾಡಲು ಬರುವುದಿಲ್ಲ. ಅಂತಹ ಸಂದರ್ಭದಲ್ಲಿ ಅಹಿಂಸಾಶ್ರುತಿಯಂತೆ ನಿಷೇಧವಾಕ್ಯವೇ ಅರ್ಥಾಂತರವನ್ನು ಪಡೆಯುತ್ತದೆ.

ಪ್ರಬಲಪ್ರತ್ಯಕ್ಷದಿಂದ ಸಿದ್ಧವಾದ ಅಗ್ನಿಯ ಉಷ್ಣತೆಯನ್ನು ಅನುವಾದ ಮಾಡುವ ಸದ್ಗುಣವುಳ್ಳ ಶ್ರುತಿಯು ಅದನ್ನು ನಿಷೇಧಮಾಡಲು ಎಂದೂ ಬಿಡುವುದಿಲ್ಲ. ಹಾಗೆ ನಿಷೇಧವನ್ನು ಮಾಡಿದರೆ, ಅಗ್ನಿಯ ಔಷ್ಣ್ಯವು ಮಾಯವಾಗಿ ಶೈತ್ಯವೇ ಬರುವುದರಿಂದ ಅದರಲ್ಲಿ ಹೋಮ ಮಾಡಲು ಸಾಧ್ಯವಿಲ್ಲವಾದ ಕಾರಣದಿಂದ ತಾನೇ ವಿಧಾನ ಮಾಡುವ ಯಾಗದ ಲೋಪಕ್ಕೆ ಹೆದರಿ ಎಂದೂ ವೇದವು ಅಗ್ನಿಯ ಔಷ್ಣ್ಯವನ್ನು ನಿಷೇಧ ಮಾಡುವುದಿಲ್ಲ.

**ಭಾವವಿಲಾಸಿನೀ–** ನಿಷೇದ್ಧುಮನುವಾದ ಇತಿ ಪಕ್ಷಮಾಶಂಕ್ಯ ದೂಷಯತಿ– ನಿಷೇದ್ಧುಮಿತಿ ॥ ಮಾನಸಿದ್ಧಸ್ಯ । ನಿರವಕಾಶಮಾನಸಿದ್ಧಸ್ಯ । ಅನ್ಯಗಾಮೀ ಶ್ರುತಿವಿಹಿತಸಾರ್ವಜ್ಞಾದಿ ಗುಣೇಭ್ಯೋ-ಽನ್ಯಗುಣತ್ರಯವಿಷಯಃ । ತತ್ರ ದೃಷ್ಟಾಂತಮಾಹ– ಅಹಿಂಸಾಶ್ರುತೌ ಯಥೇತಿ ॥ ಯಥಾ ನ ಹಿಂಸ್ಯಾತ್ ಸರ್ವಾ ಭೂತಾನೀತಿ ಸಾಮಾನ್ಯಶ್ರುತಿವಿಶೇಷಶ್ರುತಿವಿಹಿತಯಾಜ್ಞೀಯ

**ಹಿಂಸಾತಿರಿಕ್ತವಿಷಯಾ ತಥೇತಿ ಭಾವಃ। ಯುಕ್ತ್ಯಂತರೇಣಾಪಿ ನಿಷೇದ್ಧುಮನುವಾದೋ ನ ಘಟತ ಇತಿ ಸದೃಷ್ಟಾಂತಮಾಹ– ದೃಢೇತಿ ॥ ಸಾ 'ಅಗ್ನಿರ್ಹಿಮಸ್ಯ ಭೇಷಜಮ್' ಇತಿ ಶ್ರುತಿಃ। ಯಾಗವಿಯೋಗಾದ್ ಭೀರ್ಯಸ್ಯಾಸ್ಸಾ ಸ್ವಾನೂದಿತಹಿಮಭೇಷಜತ್ವಸ್ಯ ನಿಷೇಧೇ ವಹ್ನೇಃ ಶೀತಲತಾಪತ್ತ್ಯಾ ತಸ್ಮಿನ್ ಹೋಮಾಖ್ಯಯಾಗೇ ವಿಯೋಗಃ ಸ್ಯಾದಿತಿ ಭೀತೇತಿ ಯಾವತ್ ॥ ೯೦೭-೯೦೮ ॥**

**ವಿವರಣೆ–** ಪ್ರಮಾಣದಿಂದ ಪ್ರಾಪ್ತವಾದ ಮೇಲೆ ಆ ವಿಷಯವು ಅಬಾಧಿತ ಎಂದಾಯಿತು. ಅಬಾಧಿತವಾದ ವಿಷಯವನ್ನು ಎಂದೂ ನಿಷೇಧಮಾಡಲು ಬರುವುದಿಲ್ಲ. ಅಬಾಧಿತವಿಷಯದಲ್ಲಿ ನಿಷೇಧವು ಪ್ರವೃತ್ತವಾಗುವುದಾದರೆ ನಿಷೇಧವಾಕ್ಯಕ್ಕೇ ಸಂಕೋಚದ ಅರ್ಥವನ್ನು ಮಾಡಬೇಕು. ಉದಾಹರಣೆಗೆ ಯಾಗದಲ್ಲಿ ಮಾಡುವ ಪಶುಹಿಂಸೆಯು ಅನಿಷ್ಟಸಾಧನವಲ್ಲ ಎಂದು ಸಿದ್ಧವಾಗಿದೆ. ಆದ್ದರಿಂದ ಹಿಂಸಾ-ಸಾಮಾನ್ಯವನ್ನು ನಿಷೇಧಿಸುವ 'ಮಾ ಹಿಂಸ್ಯಾತ್' ಎಂಬ ವಾಕ್ಯಕ್ಕೆ ಯಾಗಪಶುವನ್ನು ಬಿಟ್ಟು ಬೇರೆ ಪಶುವನ್ನು ಹಿಂಸೆಮಾಡಬಾರದು ಎಂದಿಷ್ಟೇ ಅರ್ಥವಾಗುತ್ತದೆ. ಆದ್ದರಿಂದ ಪ್ರಮಾಣಪ್ರಾಪ್ತವನ್ನು ನಿಷೇಧ ಮಾಡಿದರೆ ನಿಷೇಧವಾಕ್ಯಕ್ಕೆ ಸಂಕೋಚವುಂಟಾಗುತ್ತದೆಯೇ ಹೊರತು ಅನುವಾದ ಮಾಡಲ್ಪಟ್ಟ ಪ್ರಮಾಣಪ್ರಾಪ್ತವಾದ ವಿಷಯವು ಎಂದೂ ಬಾಧಿತವಾಗುವುದಿಲ್ಲ.

ಬೇರೆ ಯುಕ್ತಿಯಿಂದಲೂ ನಿಷೇಧ ಮಾಡುವುದಕ್ಕೋಸ್ಕರ ಅನುವಾದ ಎಂಬ ಕಲ್ಪನೆಯು ಕೂಡುವುದಿಲ್ಲ ಎಂದು ಹೇಳುತ್ತಾರೆ. ಅಗ್ನಿಯು ಶೀತವಾದರೆ ಅದು ಹೋಮಾಧಾರವಾಗುವುದಿಲ್ಲ. ಯಾವ ಹವಿಸ್ಸೂ ಪಚನವಾಗುವುದಿಲ್ಲವಷ್ಟೇ? ಆದ್ದರಿಂದ ತಾನು ಯಾಗವನ್ನೇ ವಿಧಾನಮಾಡಲು ಸಾಧ್ಯವಿಲ್ಲ. ಆ ಕಾರಣದಿಂದಲೂ 'ಅಗ್ನಿರ್ಹಿಮಸ್ಯ ಭೇಷಜಂ' ಎಂಬ ವಾಕ್ಯವು ಅನುವಾದಮಾಡಿದ ಔಷ್ಣ್ಯವನ್ನು ನಿಷೇಧ ಮಾಡುವುದಿಲ್ಲ.

**ಏವಂ ಹರೇರ್ಹಿ ಸಾರ್ವಜ್ಞಂ ಸಾ ಶ್ರೌತಂ ನ ನಿಷೇಧತಿ ।**
**ದಿವ್ಯೇಂದ್ರಿಯಶರೀರತ್ವಂ ದಿವ್ಯೇಚ್ಛಾಂ ಚ ಕೃಪಾಲುತಾಮ್ ॥**
**ನಿತ್ಯತ್ವಂ ಬ್ರಹ್ಮಗುರುತಾಂ ನಿತ್ಯಾನಂದತ್ವಮೇವ ಚ ॥ ೯೦೯ ॥**

**ಅರ್ಥ–** ಏವಂ= ಈ ರೀತಿಯಲ್ಲಿ, ಸಾ= ಆ ನಿರ್ಗುಣ ಶ್ರುತಿಯು, ಶ್ರೌತಂ= ಶ್ರುತಿಪ್ರಾಪ್ತವಾದ, ಹರೇಃ= ಹರಿಯ, ಸಾರ್ವಜ್ಞಂ= ಸರ್ವಜ್ಞತ್ವವನ್ನು, ನ ನಿಷೇಧತಿ ಹಿ= ನಿಷೇಧಿಸುವುದಿಲ್ಲವಷ್ಟೇ, ದಿವ್ಯೇಂದ್ರಿಯಶರೀರತ್ವಂ= ದಿವ್ಯವಾದ ಇಂದ್ರಿಯ ಮತ್ತು ಶರೀರದಿಂದ ಕೂಡಿರುವಿಕೆಯನ್ನು, ದಿವ್ಯೇಚ್ಛಾಂ= ದಿವ್ಯವಾದ ಇಚ್ಛೆಯನ್ನು, ಚ= ಮತ್ತು, ಕೃಪಾಲುತಾಂ= ದಯಾಳುತ್ವವನ್ನು, ನಿತ್ಯತ್ವಂ= ಶಾಶ್ವತತ್ವವನ್ನು, ಬ್ರಹ್ಮಗುರುತಾಂ= ಬ್ರಹ್ಮದೇವರಿಗೆ ಗುರುವಾಗಿರುವಿಕೆಯನ್ನು, ನಿತ್ಯಾನಂದತ್ವಮೇವ ಚ = ನಿತ್ಯಾನಂದ ಮೊದಲಾದ ಗುಣಗಳನ್ನು ನಿಷೇಧ ಮಾಡುವುದಿಲ್ಲ.

**ಅನುವಾದ–** ಈ ರೀತಿಯಲ್ಲಿ ನಿರ್ಗುಣಶ್ರುತಿಯೂ ಸಹ ಶ್ರುತಿಯಿಂದ ಪ್ರಾಪ್ತವಾದ ಹರಿಯ ಸರ್ವಜ್ಞತ್ವಗುಣವನ್ನು ನಿಷೇಧಮಾಡುವುದಿಲ್ಲ. ಹಾಗೆಯೇ ಹರಿಯ ದಿವ್ಯೇಂದ್ರಿಯವನ್ನೂ, ದಿವ್ಯಶರೀರವನ್ನೂ, ದಿವ್ಯೇಚ್ಛೆಯನ್ನೂ, ಕೃಪಾಲುತ್ವವನ್ನೂ, ನಿತ್ಯತ್ವವನ್ನೂ, ಚತುರ್ಮುಖಗುರುತ್ವವನ್ನೂ, ನಿತ್ಯಾನಂದತ್ವವನ್ನೂ ನಿಷೇಧ-ಮಾಡುವುದಿಲ್ಲ.

**ಭಾವವಿಲಾಸಿನೀ–** ದಾರ್ಷ್ಟಾನ್ತಿಕೇऽಪಿ ಯೋಜಯತಿ– **ಏವಮಿತಿ** ॥ ಏವಂ ಸಾರ್ವಜ್ಞ-ದಿವ್ಯೇಂದ್ರಿಯಶರೀರತ್ವಾದಿಗುಣನಿಷೇಧೇ ವಕ್ತುರೇವಾಭಾವಪ್ರಸಂಗೇನ ಸ್ವೋನ್ಮೂಲನಮೇವ ಸ್ಯಾದಿತಿ ಭೀತ್ಯಾ ಸಾ ನಿರ್ಗುಣತ್ವಶ್ರುತಿಃ ಶ್ರೌತಂ ಸಾರ್ವಜ್ಞಾದಿಕಂ ನ ನಿಷೇಧತಿ । ಶ್ರೌತಮಿತಿ ಯುಕ್ತ್ಯಂತರಸೂಚನಾಯೋಕ್ತಮ್ ॥ ೯೦೯ ॥

**ವಿವರಣೆ–** ಹಿಂದಿನ ಶ್ಲೋಕಗಳಲ್ಲಿ ದೃಷ್ಟಾಂತಗಳನ್ನು ಹೇಳಿ ಈ ಶ್ಲೋಕದಲ್ಲಿ ದಾರ್ಷ್ಟಾಂತಿಕದಲ್ಲಿ ಪ್ರಕೃತವಾದುದನ್ನು ಸಮನ್ವಯಮಾಡಿ ತೋರಿಸುತ್ತಾರೆ. ಸರ್ವಜ್ಞತ್ವಾದಿಗಳನ್ನು ಶ್ರುತಿಯು ನಿಷೇಧ ಮಾಡಿದರೆ, ಬ್ರಹ್ಮನಿಗೆ ದೇಹವಿಲ್ಲ, ಇಂದ್ರಿಯವಿಲ್ಲ, ವಕ್ತೃತ್ವವಿಲ್ಲ. ಈ ಎಲ್ಲಾ ಕಾರಣಗಳಿಂದ ವೇದಗಳ ಉಚ್ಚಾರಣೆ ಇಲ್ಲವಾದ್ದರಿಂದ ವೇದಸ್ವರೂಪವೇ ಸಿದ್ಧವಾಗುವುದಿಲ್ಲ. ಆ ಕಾರಣದಿಂದ ತನ್ನ ಸ್ವರೂಪವನ್ನು ಉಳಿಸಿಕೊಳ್ಳಲು ಬೇಕಾದ ದಿವ್ಯಶರೀರೇಂದ್ರಿಯತ್ವಾದಿ ಸಕಲಧರ್ಮಗಳನ್ನೂ ಬ್ರಹ್ಮನಲ್ಲಿ ಹೇಳುತ್ತದೆಯೇ ಹೊರತು ಎಂದೂ ನಿಷೇಧಮಾಡುವುದಿಲ್ಲ.

ವಂಶಸ್ಯ ಯದ್ ದಶಾರ್ಥಂ ತತ್ ಸ್ವಾತ್ಮನೋऽಪಿ ಭವೇದಿತಿ ।
ಶ್ರೌತಸ್ಯಾಸ್ಯ ತ್ಯಾಗಸಾಮ್ಯಾತ್ ಸ್ವಾರ್ಥತ್ಯಾಗಪ್ರಸಕ್ತಿತಃ ॥ ೯೧೦ ॥

**ಅರ್ಥ–** ವಂಶಸ್ಯ= ಸಮಗ್ರವಾದ ಕುಲಕ್ಕೆ, ಯದ್ ದಶಾರ್ಥಂ= ಯಾವ ದೆಶೆಯು ಉಂಟಾಗುತ್ತದೆಯೋ, ತತ್= ಅದು, ಸ್ವಾತ್ಮನೋऽಪಿ= ವಂಶದಲ್ಲಿ ಘಟಕನಾದ ತನಗೂ, ಭವೇದಿತಿ= ಉಂಟಾಗುತ್ತದೆ ಎಂದು, ಶ್ರೌತಸ್ಯ= ಶ್ರುತಿಪ್ರಾಪ್ತವಾದ, ಅಸ್ಯ= ಈ ಸರ್ವಜ್ಞತ್ವಾದಿ ಗುಣಗಳ, ತ್ಯಾಗಸಾಮ್ಯಾತ್= ತ್ಯಾಗ ಸಾಮ್ಯದಿಂದ, ಸ್ವಾರ್ಥತ್ಯಾಗಪ್ರಸಕ್ತಿತಃ= ತನ್ನ ಅರ್ಥವನ್ನೂ ತ್ಯಾಗಮಾಡಬೇಕಾದ ಪ್ರಸಂಗವು ಬರುವುದರಿಂದ (ನಿರ್ಗುಣ ಶ್ರುತಿಯು ಸರ್ವಜ್ಞತ್ವಾದಿ ಗುಣಗಳನ್ನು ನಿಷೇಧಿಸುವುದಿಲ್ಲ).

**ಅನುವಾದ–** ಸಮಗ್ರವಾದ ವಂಶಕ್ಕೆ ನಡೆದ ದೆಶೆಯೇ ವಂಶದಲ್ಲಿ ಘಟಕನಾದ ಒಬ್ಬ ವ್ಯಕ್ತಿಗೂ ನಡೆಯುತ್ತದೆ ಎಂಬುದು ಲೋಕಸಿದ್ಧವಾದ ಮಾತು. ವೇದವು ಹೇಳಿದ ಸರ್ವಜ್ಞತ್ವಾದಿ ಗುಣಗಳನ್ನು ತ್ಯಾಗಮಾಡುವುದಾದರೆ, ನಿರ್ಗುಣಶ್ರುತಿಯು ಹೇಳಿದ ನಿರ್ಗುಣತ್ವವನ್ನೂ ತ್ಯಾಗಮಾಡುವ ಪ್ರಸಂಗ ಬರುತ್ತದೆ.

**ಭಾವವಿಲಾಸಿನೀ–** ಶ್ರೌತಮಿತ್ಯನೇನ ಸೂಚಿತಾಂ ಯುಕ್ತಿಮಾಹ– **ವಂಶಸ್ಯೇತಿ** ॥ ವಂಶಸ್ಯ ಯದ್ ದಶಾರ್ಥವಮ್, ತತ್ ಸ್ವಾತ್ಮನೋಽಪಿ ಭವೇದಿತಿ ಲೋಕಸಿದ್ಧನ್ಯಾಯೇನೇತ್ಯರ್ಥಃ । ಅಸ್ಯ ಸಾರ್ವಜ್ಞಾದೇಃ । ಸ್ವಾರ್ಥನಿರ್ಗುಣತ್ವತ್ಯಾಗಪ್ರಸಕ್ತಿತಃ ॥ ೯೦೦ ॥

**ವಿವರಣೆ–** ವೇದವು ಒಂದು ಮಹಾವಂಶ. ಅಲ್ಲಿ ಅನೇಕ ಕಡೆಗಳಲ್ಲಿ ಸರ್ವಜ್ಞತ್ವಾದಿ-ಗುಣಗಳನ್ನು ಹೇಳಿದೆ. ಕೆಲವು ಕಡೆಗಳಲ್ಲಿ ನಿರ್ಗುಣ ಎಂಬ ಶಬ್ದವೂ ಇದೆ. ಈ ಎಲ್ಲವೂ ಬ್ರಹ್ಮನ ಧರ್ಮಗಳೇ. ಎಲ್ಲವೂ ವೇದದಿಂದಲೇ ಲಭ್ಯವಾದವು. ವೇದದಿಂದ ಲಭ್ಯವಾದ ಒಂದು ಧರ್ಮಕ್ಕೆ ಯಾವ ಅವಸ್ಥೆ ಉಂಟಾಗುತ್ತದೆಯೋ ಇನ್ನೊಂದು ಧರ್ಮಕ್ಕೂ ಅದೇ ಅವಸ್ಥೆ ಉಂಟಾಗುತ್ತದೆ. ವೇದಪ್ರಾಪ್ತವಾದ ಸರ್ವಜ್ಞತ್ವವು ಬಾಧಿತವಾಗುವುದಾದರೆ, ವೇದಪ್ರಾಪ್ತವಾದ ನಿರ್ಗುಣತ್ವವೂ ಬಾಧಿತವೇ ಆಗುತ್ತದೆ. ಆದ್ದರಿಂದ ನಿರ್ಗುಣತ್ವಶ್ರುತಿಯು ಬ್ರಹ್ಮನ ಗುಣಗಳನ್ನು ನಿಷೇಧಮಾಡುತ್ತದೆ ಎಂದು ಹೇಳಬಾರದು.

**ಉಪದೇಷ್ಟುರಭಾವೇನ ಸ್ವಾಪ್ರಚಾರಾಚ್ಚ ಶಂಕಿತಾ ।**
**ಜಗತ್ಕರ್ತುರಭಾವೇನ ಚಾಧ್ಯೇತ್ರೂಣಾಮಭಾವಭೀಃ ॥ ೯೧೧ ॥**

**ಸರ್ವಶಕ್ತೇರಭಾವೇ ಚ ದೈತ್ಯೋಪದ್ರವಶಂಕಿತಾ ।**
**ಸರ್ವೇಶ್ವರತ್ವಾಭಾವೇ ಚ ಬ್ರಹ್ಮಾಸಾಧ್ಯಾಕೃತೇರ್ಭಯಾತ್ ॥ ೯೧೨ ॥**

**ಅರ್ಥ–** ಉಪದೇಷ್ಟುಃ= ಉಪದೇಶ ಮಾಡುವ ಪುರುಷನು, ಅಭಾವೇನ= ಇಲ್ಲದಿರುವುದರಿಂದ, ಸ್ವಾಪ್ರಚಾರಾಚ್ಚ= ತನಗೆ ಪ್ರಚಾರವಾಗುವುದಿಲ್ಲವೆಂದು, ಶಂಕಿತಾ= ಶಂಕಿತಳಾಗಿ, ಜಗತ್ಕರ್ತುಃ= ಜಗತ್ ಸೃಷ್ಟಿಯನ್ನು ಮಾಡುವವನು, ಅಭಾವೇನ= ಇಲ್ಲದಿರುವುದರಿಂದ, ಅಧ್ಯೇತ್ರೂಣಾಮಭಾವಭೀಃ= ವೇದಾಧ್ಯಯನ ಮಾಡುವವರೇ ಇರುವುದಿಲ್ಲವೆಂಬ ಭಯದಿಂದ, ಸರ್ವಶಕ್ತೇರಭಾವೇ= ಪೂರ್ಣಶಕ್ತಿ ಇಲ್ಲದಿದ್ದರೆ, ದೈತ್ಯೋಪದ್ರವಶಂಕಿತಾ= ತನಗೆ ದೈತ್ಯರಿಂದ ಉಪದ್ರವ ಉಂಟಾಗುತ್ತದೆ ಎಂಬ ಶಂಕೆಯನ್ನು ಹೊಂದಿದವಳಾಗಿ, ಸರ್ವೇಶ್ವರತ್ವಾಭಾವೇಚ= ಮತ್ತು ಸರ್ವೇಶ್ವರತ್ವ ಇಲ್ಲದಿದ್ದರೆ, ಬ್ರಹ್ಮಾಸಾಧ್ಯಾಕೃತೇರ್ಭಯಾತ್= ಬ್ರಹ್ಮದೇವರಿಗೆ ಅಸಾಧ್ಯವಾದ ಹಯಗ್ರೀವಾಸುರ ಮಧುಕೈಟಭರ ವಧೆಗಳನ್ನು ಮಾಡುವವರು ಯಾರೂ ಇಲ್ಲವೆಂಬ ಭಯದಿಂದ (ಉಪದೇಷ್ಟೃತ್ವ, ಜಗತ್ಕರ್ತೃತ್ವ, ಸರ್ವಶಕ್ತಿ, ಸರ್ವೇಶ್ವರತ್ವ ಮೊದಲಾದ ಗುಣಗಳನ್ನು ನಿಷೇಧಿಸುವುದಿಲ್ಲ).

**ಅನುವಾದ–** ಬ್ರಹ್ಮನಿಗೆ ವಕ್ತೃತ್ವ ಇಲ್ಲದಿದ್ದರೆ, ಉಪದೇಶಕನೇ ಇಲ್ಲವಾದ್ದರಿಂದ ತನ್ನ ಪ್ರಚಾರವೇ ಉಳಿಯುವುದಿಲ್ಲ ಎಂಬ ಶಂಕೆಯಿಂದಲೂ, ಜಗತ್ಕರ್ತೃತ್ವ ಇಲ್ಲದಿರುವುದರಿಂದ ಕರ್ತೃ ಇಲ್ಲದಿರುವ ಕಾರಣ ಅವನಿಂದ ಸೃಷ್ಟರಾದ ಜೀವರು ಇಲ್ಲದಿರುವುದರಿಂದ ತನ್ನನ್ನು ಅಧ್ಯಯನ ಮಾಡುವವರೇ ಇಲ್ಲವೆಂಬ

ಭಯದಿಂದಲೂ, ಸರ್ವಶಕ್ತಿಯನ್ನು ನಿಷೇಧಮಾಡುವುದರಿಂದ ತನಗೆ ದೈತ್ಯೋಪದ್ರವವನ್ನು ಪರಿಹಾರಮಾಡಿಕೊಳ್ಳುವ ಶಕ್ತಿಯಿಲ್ಲವೆಂಬ ಶಂಕೆಯಿಂದಲೂ, ಸರ್ವೇಶ್ವರತ್ವ ಇಲ್ಲದ ಕಾರಣ ಬ್ರಹ್ಮದೇವರಿಗೆ ಅಸಾಧ್ಯವಾದ ಹಯಗ್ರೀವಾಸುರ ಮಧುಕೈಟಭಾದಿಗಳ ವಧೆಯನ್ನು ಮಾಡಲು ಸಾಮರ್ಥ್ಯವಿಲ್ಲವೆಂಬ ಭಯದಿಂದಲೂ, ಕೂಡಿದ ಶ್ರುತಿಯು ಇವು ಯಾವುದನ್ನೂ ನಿಷೇಧಮಾಡುವುದಿಲ್ಲ.

**ಭಾವವಿಲಾಸಿನೀ–** ಏವಮಿತಿ ಸಾರ್ಮ್ಯೇನೋಕ್ತಮರ್ಥಂ ಪ್ರಪಂಚಯತಿ– **ಉಪದೇಷ್ಟುರಿತಿ** ॥ ಪೂರ್ವೋಕ್ತಸಾರ್ವಜ್ಞಾದ್ಯಭಾವೇ ಉಪದೇಷ್ಟುರಭಾವೇನ ಜಗತ್ಕರ್ತುರಭಾವೇ ಜಗದಂತಃಪಾತಿನಾಮಧ್ಯೇತೄಣಾಮಭಾವಾದ್ ಭೀಃ ಯಸ್ಯಾಃ ಸಾ । ಭಗವತಃ ಸರ್ವಶಕ್ತೇರಭಾವೇ ದೈತ್ಯೋಪದ್ರವಶಂಕಿತಾ ಹಯಗ್ರೀವಮಧುಕೈಟಭಾದಿದೈತ್ಯೋಪದ್ರವಶಂಕಿತಾ । ಬ್ರಹ್ಮಾಸಾಧ್ಯಸ್ಯ ಕಾರ್ಯಸ್ಯ ಅಕೃತೇಃ ಕರಣಾಸಂಭವಾತ್ ॥ ೯೧೧-೯೧೨ ॥

**ವಿವರಣೆ–** ನಿರ್ಗುಣಶ್ರುತಿಯು ಹರಿಯ ಎಲ್ಲಾ ಗುಣಗಳನ್ನು ನಿಷೇಧಮಾಡಿದರೆ, ಅವನಲ್ಲಿ ಉಪದೇಷ್ಟೃತ್ವವಾಗಲೀ, ಜಗತ್ಕರ್ತೃತ್ವವಾಗಲೀ ಸರ್ವಶಕ್ತಿಯಾಗಲೀ ಸರ್ವೇಶ್ವರತ್ವವಾಗಲೀ ಇಲ್ಲವೆಂದಾಯಿತು. ಇವೆಲ್ಲವೂ ವೇದದ ಸ್ವರೂಪದ ಅಸ್ತಿತ್ವಕ್ಕೆ ಬೇಕಾದ ಧರ್ಮಗಳು. ಇಲ್ಲದಿದ್ದರೆ, ಗುರುವಿಲ್ಲ, ಅಧ್ಯಯನ ಮಾಡುವ ಶಿಷ್ಯರಿಲ್ಲ, ವೇದವನ್ನು ಅಪಹಾರ ಮಾಡುವ ತಮ ಆದಿದೈತ್ಯರನ್ನು ಸಂಹರಿಸುವ ಶಕ್ತಿಯಿಲ್ಲ ಎಂಬ ಕಾರಣದಿಂದಾಗಿ ವೇದದ ಸ್ವರೂಪಕ್ಕೇ ಲೋಪವು ಉಂಟಾಗುವ ಪ್ರಸಂಗವು ಬರುತ್ತದೆ. ಅದನ್ನು ತಿಳಿದ ವೇದವು 'ಜೀವನ್ ಭದ್ರಾಣಿ ಪಶ್ಯತಿ' ಎಂಬ ಗಾದೆಗನುಗುಣವಾಗಿ ತಾನು ಬದುಕಲು ಪ್ರಯತ್ನಿಸುವುದರಿಂದ ತನ್ನ ಜೀವನಕ್ಕೆ ವಿರೋಧಿಯಾದ ಇಂತಹ ಯಾವ ಧರ್ಮಗಳನ್ನೂ ನಿಷೇಧಮಾಡುವುದಿಲ್ಲ.

ಇತ್ಥಂ ಶ್ರೌತಗುಣೇಭ್ಯೋ ಯಚ್ಛ್ರುತ್ಯಾ ಏವ ಪ್ರಯೋಜನಮ್ ।
ಅತ (ಸ್ತೇ)ಏಷಾಮಭಾವಂ ಸಾ ಸ್ವಾಭಾವಂ ಮನುತೇ ಸತೀ ॥ ೯೧೩ ॥

**ಅರ್ಥ–** ಇತ್ಥಂ= ಈ ರೀತಿಯಲ್ಲಿ, ಶ್ರೌತಗುಣೇಭ್ಯೋ= ಶ್ರುತಿಪ್ರಾಪ್ತವಾದ ಗುಣಗಳಿಂದ, ಶ್ರುತ್ಯಾ ಏವ= ಶ್ರುತಿಗೇ, ಪ್ರಯೋಜನಂ= ಪ್ರಯೋಜನವು, ಯತ್= ಯಾವ ಕಾರಣದಿಂದ ಇದೆಯೋ, ಅತಃ= ಆ ಕಾರಣದಿಂದ, ಸತೀ= ಸಾಧ್ವಿಯಾದ, ಸಾ= ಆ ಶ್ರುತಿಯು, ಏಷಾಂ= ಈ ಗುಣಗಳ, ಅಭಾವಂ= ಅಭಾವವನ್ನು, ಸ್ವಾಭಾವಂ= ತನ್ನ ಸ್ವರೂಪದ ಅಭಾವವೆಂದೇ, ಮನುತೇ= ತಿಳಿಯುತ್ತದೆ.

**ಅನುವಾದ–** ಹೀಗೆ, ಶ್ರುತಿಯಿಂದ ಪ್ರಾಪ್ತವಾದ ಹರಿಯ ಗುಣಗಳಿಂದ ಶ್ರುತಿಗೇ ಪ್ರಯೋಜನವಿರುವ ಕಾರಣ, ಆ ಸಾಧ್ವಿಯಾದ ಶ್ರುತಿಯು ಇಂತಹ ಗುಣಗಳ ಅಭಾವವನ್ನು ತನ್ನ ಸ್ವರೂಪದ ನಾಶವೆಂದೇ ಚಿಂತಿಸುತ್ತದೆ.

**ಭಾವವಿಲಾಸಿನೀ**—ಇತ್ಥಂ ಪೂರ್ವೋಕ್ತಪ್ರಕಾರೇಣ। ಅತಃ ಸ್ವಸ್ಯೈವ ಪ್ರಯೋಜನಸದ್ಭಾವಾತ್। ಏಷಾಮುಕ್ತಭಗವದ್ಗುಣಾನಾಮ್ ॥ ೯೧೩ ॥

**ಪ್ರಾಕ್‌ಸೃಷ್ಟೇಶ್ಚ ಸತಸ್ತಸ್ಯ ಸೇಹೇ ನಾಜ್ಞಾನಕಾರ್ಯತಾಮ್ ।**
**ಬಾಧಾಂ ನ ಸೇಹೇ ನಿತ್ಯಾಂ ಸ್ವಾಂ ನಿತ್ಯಂ ಧರ್ತುಂ ಯದೀಪ್ಸಿತಮ್**
**॥ ೯೧೪ ॥**

**ಅರ್ಥ**— ಸೃಷ್ಟೇಃ ಪ್ರಾಕ್= ಸೃಷ್ಟಿಗಿಂತಲೂ ಮೊದಲು, ಸತಃ= ಇರುವ, ತಸ್ಯ= ಆ ಸರ್ವಜ್ಞತ್ವಕ್ಕೆ, ಅಜ್ಞಾನಕಾರ್ಯತಾಂ= ಅಜ್ಞಾನಕಾರ್ಯತ್ವವನ್ನು, ನ ಸೇಹೇ= ಶ್ರುತಿಯು ಸಹಿಸಲಿಲ್ಲ, ಯತ್= ಯಾವ ಕಾರಣದಿಂದ, ನಿತ್ಯಾಂ= ನಿತ್ಯವಾದ, ಸ್ವಾಂ= ನನ್ನನ್ನು, ನಿತ್ಯಂ= ನಿತ್ಯವೂ, ಧರ್ತುಂ= ಧರಿಸಲು, ಈಪ್ಸಿತಂ= ಅಪೇಕ್ಷಿತವಾಗಿದೆಯೋ, ಆ ಕಾರಣದಿಂದ, ಬಾಧಾಂ= ಬಾಧೆಯನ್ನೂ ಸಹ, ನ ಸೇಹೇ= ಸಹಿಸಲಿಲ್ಲ.

**ಅನುವಾದ**— ಹರಿಯು ಜಗತ್‌ಸೃಷ್ಟಿಯನ್ನು ಮಾಡುವಾಗ ಅವನಿಗೆ ಮೊದಲೇ ಸರ್ವಜ್ಞತ್ವವು ಇರಬೇಕು. ಆದ್ದರಿಂದ ಸೃಷ್ಟಿಗಿಂತ ಮೊದಲು ಇರುವ ಸರ್ವಜ್ಞತ್ವವು ಅಜ್ಞಾನಕಾರ್ಯವೆಂದು ಶ್ರುತಿಯು ಒಪ್ಪುವುದಿಲ್ಲ. ಆ ಸರ್ವಜ್ಞತ್ವಕ್ಕೆ ಅದು ಬಾಧವನ್ನೂ ಸಹಿಸುವುದಿಲ್ಲ. ಏಕೆಂದರೆ, ನಿತ್ಯವಾದ ತನ್ನನ್ನು ಧರಿಸುವುದಕ್ಕೆ ನಿತ್ಯವೂ ಸರ್ವಜ್ಞನಾದ ಒಬ್ಬ ವ್ಯಕ್ತಿಯ ಅಪೇಕ್ಷೆಯಿದೆಯಷ್ಟೇ?

**ಭಾವವಿಲಾಸಿನೀ**— ವ್ಯಾವಹಾರಿಕಗುಣಾಂಗೀಕಾರಾದ್ ವಕ್ತೃತ್ವಾದಿಕಂ ಸಂಭವತೀತಿ ಪರಸ್ಯಾಶಾಂ ನಿರಾಕರೋತಿ– **ಪ್ರಾಕ್ ಸೃಷ್ಟೇರಿತಿ** ॥ ಜಗತ್ಸೃಷ್ಟೇಃ ಪ್ರಾಕ್ ಸತೋ ವಿದ್ಯಮಾನಸ್ಯ ತಸ್ಯ ಸಾರ್ವಜ್ಞಾದಿಗುಣಸಮೂಹಸ್ಯ । ಜಗತ್ಸೃಷ್ಟ್ಯುಪಯೋಗಿಸಾರ್ವಜ್ಞಾದಿಗುಣಾನಾಂ ಸೃಷ್ಟೇಃ ಪೂರ್ವಂ ವಿದ್ಯಮಾನತ್ವಾದಿತಿ ಯಾವತ್ । ತಥಾ ಸತಿ ಬ್ರಹ್ಮಣೋಽಪ್ಯಜ್ಞಾನಕಾರ್ಯತ್ವಂ ಸ್ಯಾದಿತಿ ಭಾವಃ । ನಿತ್ಯಾಮನಾದ್ಯನಂತಕಾಲೀನಾಮ್ । ಯತ್ ಸಾರ್ವಜ್ಞಾದಿಕಂ ತಸ್ಯ ಬಾಧಾಂ ನ ಸೇಹ ಇತಿ ಯೋಜನಾ । ಸದಾ ಅನಂತವೇದಧಾರಣಸ್ಯ ಸದಾ ಸರ್ವಜ್ಞತ್ವಂ ವಿನಾ ಅಯೋಗಾದಿತಿ ಭಾವಃ ॥ ೯೧೪ ॥

**ವಿವರಣೆ**— ಕರ್ತೃವಿಗೆ ಉಪಾದಾನವಿಷಯಕವಾದ ಜ್ಞಾನೇಚ್ಛಾಕೃತಿಗಳು ಬೇಕೆಂದು ಎಲ್ಲರಿಗೂ ಸಮ್ಮತವಾದುದು. ಸರ್ವವನ್ನೂ ಸೃಷ್ಟಿಮಾಡುವ ಬ್ರಹ್ಮನಿಗೆ ಸೃಷ್ಟಿಗಿಂತ ಮುಂಚೆ ಸರ್ವವಿಷಯಕ ಜ್ಞಾನವೂ ಇರಬೇಕು. ಇದೇ ಸರ್ವಜ್ಞತ್ವ. ಇದು ಸೃಷ್ಟಿಗೆ ಮೊದಲೇ ಇರುವುದರಿಂದ ಇದು ಜನ್ಯವೇ ಅಲ್ಲ. ಆದ್ದರಿಂದ ಅಜ್ಞಾನಕಾರ್ಯವಲ್ಲ. ಅಜ್ಞಾನಕಾರ್ಯವಲ್ಲದುದು ಬಾಧ್ಯವಾಗುವುದಿಲ್ಲ ಎಂಬುದು ಒಂದು ಅಂಶ. ಹಾಗೆಯೇ, ಯಾವಾಗಲೂ ಹರಿಯೇ ಶ್ರುತಿಯನ್ನು ಧರಿಸಿರುವವನು. ಅನಂತವಾದ ಶ್ರುತಿಗಳನ್ನು ಅರ್ಥಜ್ಞಾನಪೂರ್ವಕವಾಗಿಯೇ ಅವನು ಧರಿಸಿದ್ದಾನೆ. ಆದ್ದರಿಂದಲೂ ಅವನಿಗೆ

ಸರ್ವಜ್ಞತ್ವವಿದೆ. ಸರ್ವಜ್ಞತ್ವವಿಲ್ಲದಿದ್ದರೆ ಅವನಿಗೆ ವೇದಧಾರಣೆಯೇ ಕೂಡುವುದಿಲ್ಲ. ಆ ಕಾರಣದಿಂದಲೂ ತಾನು ಹರಿಯನ್ನು ಆಶ್ರಯಿಸಿಕೊಂಡು ಇರಬೇಕೆಂಬ ಇಚ್ಛೆಯಿಂದ ಸಾಧ್ವಿಯಾದ ಶ್ರುತಿಯು ಅವನ ಸರ್ವಜ್ಞತ್ವವನ್ನು ಎಂದೂ ನಿಷೇಧಮಾಡುವುದಿಲ್ಲ.

ಅಮುಖ್ಯನಿತ್ಯತಾಯಾಂ ಚ ಬ್ರಹ್ಮ ತೇ ಸ್ಯಾತ್ ತಥೈವ ಹಿ ।
ವಿಷ್ಠಿತಂ ಬ್ರಹ್ಮ ಯಾವತ್ ತೇ ತಾವದ್ ವಾಕ್ ಕಿಲ ವಿಷ್ಠಿತಾ ॥ ೯೧೫ ॥

**ಅರ್ಥ–** ಚ= ಮತ್ತು, ಅಮುಖ್ಯನಿತ್ಯತಾಯಾಂ= ಶ್ರುತಿಗೆ ಇರುವ ನಿತ್ಯತ್ವವು ಅಮುಖ್ಯ ನಿತ್ಯತ್ವವಾದರೆ, ತೇ ಬ್ರಹ್ಮ= ನಿನ್ನ ಬ್ರಹ್ಮನೂ ಕೂಡ, ತಥೈವ= ಅಮುಖ್ಯವಾದ ನಿತ್ಯತ್ವವುಳ್ಳವನಾಗಿಯೇ, ಸ್ಯಾತ್= ಆಗುತ್ತಾನಷ್ಟೇ. ತೇ= ನಿನ್ನ, ಬ್ರಹ್ಮ= ಬ್ರಹ್ಮನು, ಯಾವತ್= ಎಷ್ಟು ಕಾಲದವರೆಗೆ, ವಿಷ್ಠಿತಂ= ಇರುತ್ತಾನೆಯೋ, ವಾಕ್= ವೇದವಾಕ್ಯವು, ತಾವತ್= ಅಲ್ಲಿಯವರೆಗೆ, ವಿಷ್ಠಿತಾ ಕಿಲ= ಇರುವುದಷ್ಟೇ.

**ಅನುವಾದ–** ಶ್ರುತಿಯು ನಿತ್ಯವೆಂದು ಹೇಳಿದರೆ ಅಮುಖ್ಯವಾದ ನಿತ್ಯತ್ವವನ್ನು ಅಂಗೀಕಾರ ಮಾಡೋಣ ಎಂದು ಹೇಳಿದರೆ, ಬ್ರಹ್ಮನಿಗೆ ನಿತ್ಯತ್ವವನ್ನು ಹೇಳುವ ಶ್ರುತಿಗೂ ಅಮುಖ್ಯವಾದ ನಿತ್ಯತ್ವವೇ ಅರ್ಥ ಎಂದು ಹೇಳಿದಂತೆ ಆಗುತ್ತದೆ. ಬ್ರಹ್ಮನು ಇರುವವರೆಗೂ ಶ್ರುತಿಯು ಇರುತ್ತದೆ ಎಂದು ವೇದವಾಕ್ಯವಿರುವುದರಿಂದ ಎರಡೂ ಸ್ಥಳಗಳಲ್ಲಿಯೂ ಅಮುಖ್ಯವಾದ ನಿತ್ಯತ್ವವನ್ನು ಹೇಳಲು ಬರುವುದಿಲ್ಲ.

**ಭಾವವಿಲಾಸಿನೀ–** ಬಹುಕಾಲೀನತ್ವಮೇವ ಶ್ರುತೇರ್ನಿತ್ಯತ್ವಮ್, ನತು ಸಾರ್ವಕಾಲೀನತ್ವ-ಮಿತ್ಯಾಶಂಕಾಂ ನಿರಾಕರೋತಿ– **ಅಮುಖ್ಯೇತಿ** ॥ ಕಿಲೇತ್ಯನೇನ 'ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಗ್' ಇತಿ ಶ್ರುತಿಂ ಸೂಚಯತಿ ॥ ೯೧೫ ॥

**ವಿವರಣೆ–** ಶ್ರುತಿಗಳಿಗೆ ನಿತ್ಯತ್ವವನ್ನು ಹೇಳುವ 'ನಿತ್ಯಯಾ ಅನಿತ್ಯಯಾಸ್ತೌಮಿ' ಮೊದಲಾದ ವೇದವಾಕ್ಯಗಳಿವೆ. ಇಲ್ಲಿ ನಿತ್ಯತ್ವ ಎಂದರೆ ನಿವೃತ್ತಿ ಇಲ್ಲ ಎಂದು ಅರ್ಥವಲ್ಲ. ಕೇವಲ ದೀರ್ಘಕಾಲಸ್ಥಿತಿ ಎಂದು ಅರ್ಥಮಾಡುವುದಾದರೆ, ಬ್ರಹ್ಮನಿಗೆ ನಿತ್ಯತ್ವವನ್ನು ಹೇಳುವ ಶ್ರುತಿಗೂ ಹಾಗೆಯೇ ಅರ್ಥಮಾಡಬೇಕಾದ್ದರಿಂದ ಬ್ರಹ್ಮನೂ ಅನಿತ್ಯನಾದಾನು. 'ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್' ಎಂಬ ವಾಕ್ಯವು ಬ್ರಹ್ಮನು ಯಾವ ದೇಶಕಾಲಗಳಲ್ಲಿ ಇರುತ್ತಾನೆಯೋ ಆ ದೇಶಕಾಲಗಳಲೆಲ್ಲಾ ಶ್ರುತಿಯು ಇದೆ ಎಂದು ಹೇಳಿ ಬ್ರಹ್ಮನಿಗೂ ಮತ್ತು ವೇದಕ್ಕೂ ಏಕವಿಧವಾದ ನಿತ್ಯತ್ವವನ್ನು ಹೇಳಿದೆ. ಆದ್ದರಿಂದ ದೀರ್ಘಕಾಲಸ್ಥಿತಿಯ ರೂಪವಾದ ನಿತ್ಯತ್ವವನ್ನು ಶ್ರುತಿಗಳಿಗೆ ಅಂಗೀಕಾರಮಾಡಲು ಬರುವುದಿಲ್ಲ.

ಉಪಸರ್ಗಸ್ತಯೋಃ ಸರ್ಗೋ ನೋತ್ಸರ್ಗಶ್ಚೇತಿ ಶಂಸತಿ ।
ತಸ್ಮಾಚ್ಛ್ರುತೇರ್ಹಿ ವಿಚ್ಛೇದೇ ಬಧಿರಂ ಬ್ರಹ್ಮ ತೇ ಭವೇತ್ ॥ ೯೧೬ ॥

**ಅರ್ಥ—** ಉಪಸರ್ಗಃ= 'ವಿ' ಎಂಬ ಉಪಸರ್ಗವು, ತಯೋಃ= ಬ್ರಹ್ಮ ಮತ್ತು ವೇದಗಳಿಗೆ, ಸರ್ಗಃ= ಸೃಷ್ಟಿಯು, ಉತ್ಸರ್ಗಶ್ಚ= ಮತ್ತು ನಾಶವು, ನೇತಿ= ಇಲ್ಲವೆಂದು, ಶಂಸತಿ= ಹೇಳುತ್ತಿದೆ, ತಸ್ಮಾತ್= ಆ ಕಾರಣದಿಂದ, ಶ್ರುತೇಃ= ಶ್ರುತಿಯ, ವಿಚ್ಛೇದೇ ಹಿ= ವಿಚ್ಛೇದ ಉಂಟಾದರೆ, ತೇ ಬ್ರಹ್ಮ= ನಿನ್ನ ಬ್ರಹ್ಮನು, ಬಧಿರಂ ಭವೇತ್= ಕಿವುಡನಾಗುತ್ತಾನೆ.

**ಅನುವಾದ—'ವಿ' ಎಂಬ ಉಪಸರ್ಗವು ಬ್ರಹ್ಮನಿಗೂ ಮತ್ತು ವೇದಕ್ಕೂ ಸೃಷ್ಟಿಯೂ ಇಲ್ಲ ಮತ್ತು ನಾಶವೂ ಇಲ್ಲ ಎಂದು ಹೇಳುತ್ತದೆ. ಆದ್ದರಿಂದ ಶ್ರುತಿಗೆ ನಾಶವನ್ನು ಒಪ್ಪಿದರೆ, ನಿನ್ನ ಬ್ರಹ್ಮ ಕಿವುಡನಾಗುತ್ತಾನೆ.**

**ಭಾವವಿಲಾಸಿನೀ—** ಉಪಸರ್ಗಃ ವೀತ್ಯುಪಸರ್ಗಃ । ತಯೋರ್ವಾಗ್ ಬ್ರಹ್ಮಣೋಃ ಸರ್ಗಃ ಸೃಷ್ಟಿರುತ್ಸರ್ಗೋ ನಾಶಃ । ಸೃಷ್ಟಿನಾಶೌ ವಿನಾ ಸರ್ವದಾ ಯಾ ಸ್ಥಿತಿಃ ಸೈವ ವಿಶೇಷಸ್ಥಿತಿಃ । ಉಪಸಂಹರತಿ– **ತಸ್ಮಾದಿತಿ** ॥ ವಿಚ್ಛೇದೇ ವಕ್ತೃಶ್ರೋತ್ರ್ಣಾಮಭಾವಾದಿನಾ ಅಭಾವೇ । ತೇ ಬ್ರಹ್ಮ ಬಧಿರಮಿವ ಬಧಿರವಮ್ । ಯಥಾ ಬಧಿರಃ ಶ್ರುತಿಶೂನ್ಯಃ ತಥಾ ಬ್ರಹ್ಮಾಪಿ ಸ್ವಪ್ರತಿಪಾದಕಶ್ರುತಿಶೂನ್ಯಮಿತ್ಯರ್ಥಃ ॥ ೯೧೬॥

**ವಿವರಣೆ—** 'ಯಾವದ್ ಬ್ರಹ್ಮ ವಿಷ್ಠಿತಂ' ಎಂಬಲ್ಲಿ ವಿಷ್ಠಿತ ಶಬ್ದದಲ್ಲಿ 'ವಿ' ಎಂಬ ಉಪಸರ್ಗವಿದೆ. ಅದಕ್ಕೆ ವಿಶೇಷವಾಗಿ ಎಂದು ಅರ್ಥ. ಬ್ರಹ್ಮನ ಸ್ಥಿತಿಯು ವಿಶೇಷವಾಗಿದೆ ಎಂದರೆ ಅದು ಸರ್ವಕಾಲದಲ್ಲಿಯೂ ಇದೆ ಎಂದು ಅರ್ಥ. ಆದ್ದರಿಂದ ವೇದದ ಸ್ಥಿತಿಯೂ ಸಾರ್ವಕಾಲಿಕವಾಗಿದೆ. ಶ್ರುತಿಗೆ ಅಂತಹ ನಿತ್ಯತ್ವವನ್ನು ಒಪ್ಪದೇ ನಿವೃತ್ತಿಯನ್ನು ಒಪ್ಪಿದರೆ ಶ್ರುತಿಯು ನಿವೃತ್ತವಾದಾಗ ಬ್ರಹ್ಮನು ಶ್ರವಣೇಂದ್ರಿಯವಿಲ್ಲದವನು ಬಧಿರನಾಗುವಂತೆ ಬಧಿರನಂತೆ ಇರುತ್ತಾನೆ, ಏಕೆಂದರೆ ಅವನನ್ನು ಪ್ರತಿಪಾದನೆ ಮಾಡುವ ಶ್ರುತಿ ಇಲ್ಲ ಎಂದಾಗುತ್ತದೆ.

**ಬಧಿರಂ ಚ ನ ತಜ್ಜೀವೇತ್ ಸಲಜ್ಜಮಿತಿ ಮೇ ಮತಿಃ ॥ ೯೧೭ ॥**

**ಅರ್ಥ—** ಬಧಿರಂ ತಚ್ಚ= ಕಿವುಡನಾದ ಆ ಬ್ರಹ್ಮನಾದರೂ, ಸಲಜ್ಜಂ= ನಾಚಿಕೆಯಿಂದ ಕೂಡಿದವನಾಗಿ, ನ ಜೀವೇತ್= ಬದುಕುವುದಿಲ್ಲ, ಇತಿ= ಎಂದು, ಮೇ ಮತಿಃ= ನನ್ನ ಅಭಿಪ್ರಾಯ.

**ಅನುವಾದ—ಬ್ರಹ್ಮನು ಬಧಿರನಾದರೆ, ನಾಚಿಕೆಯಿಂದ ಕೂಡಿದ ಅವನು ಬದುಕುವುದೇ ಇಲ್ಲ ಎಂದು ನನ್ನ ಅಭಿಪ್ರಾಯ.**

**ಭಾವವಿಲಾಸಿನೀ—** ಸಲಜ್ಜಂ ಶಶಶೃಂಗಸಾಮ್ಯೇನ ಲಜ್ಜಯಾ ಸಹಿತಂ ತದ್ ಬ್ರಹ್ಮ ನ ಜೀವೇದಿತಿ ಸಂಬಂಧಃ । ಪ್ರತಿಪಾದಕಶ್ರುತ್ಯಭಾವೇ ಬ್ರಹ್ಮಣ ಏವಾಭಾವಃ ಸ್ಯಾದಿತಿ ಪರಮಾರ್ಥಃ । ಸಲಜ್ಜಃ ಪುರುಷಃ ಸ್ವಬಾಧಿರ್ಯೇ ಸತಿ ನ ಜೀವೇದಿತಿ ಧ್ವನಿಃ ॥ ೯೧೭ ॥

**ವಿವರಣೆ–** ಶ್ರುತಿಯು ನಿವೃತ್ತವಾದರೆ, ಬ್ರಹ್ಮನನ್ನು ಪ್ರತಿಪಾದಿಸುವ ಪ್ರಮಾಣವೇ ಇಲ್ಲ. ಆದ್ದರಿಂದ ಬ್ರಹ್ಮನು ಶಶವಿಷಾಣಕ್ಕೆ ಸಮಾನವಾಗುತ್ತಾನೆ. ಆ ಕಾರಣದಿಂದ ಬ್ರಹ್ಮನಿಗೆ ಲಜ್ಜೆಯುಂಟಾಗುತ್ತದೆ. ಲಜ್ಜೆಯಿಂದ ಕೂಡಿದ ಮನುಷ್ಯನು ಹೇಗೆ ಬದುಕುವುದಿಲ್ಲವೋ ಹಾಗೆ ಬ್ರಹ್ಮನೂ ಬದುಕಲಾರ ಎಂದರೆ, ಬ್ರಹ್ಮಸ್ವರೂಪವನ್ನು ಪ್ರತಿಪಾದನೆ ಮಾಡುವ ವೇದವೇ ಇಲ್ಲದಿರುವಾಗ ಶಬ್ದೈಕಸಮಧಿಗಮ್ಯನಾದ ಬ್ರಹ್ಮನ ಸ್ವರೂಪವೇ ಸಿದ್ಧವಾಗುವುದಿಲ್ಲ ಎಂದು ಹೇಳುತ್ತಾರೆ.

ಅತಃ ಕರ್ತೃತ್ವಭೋಕ್ತೃತ್ವಫಲದಾತೃತ್ವಪೂರ್ವಕಾತ್ ।
ಶ್ರುತ್ಯುಕ್ತಸರ್ವಸರ್ವಸ್ವಾದನ್ಯತ್ ಕಿಂಚಿನ್ನಿಷೇಧತಿ ॥ ೯೧೮ ॥

**ಅರ್ಥ–** ಅತಃ= ಆ ಕಾರಣದಿಂದ, ಶ್ರುತಿಯು, ಕರ್ತೃತ್ವಭೋಕ್ತೃತ್ವಫಲದಾತೃತ್ವ ಪೂರ್ವಕಾತ್= ಕರ್ತೃತ್ವ, ಭೋಕ್ತೃತ್ವ, ಫಲದಾತೃತ್ವ ಮೊದಲಾದ, ಶ್ರುತ್ಯುಕ್ತಸರ್ವ-ಸರ್ವಸ್ವಾತ್= ಶ್ರುತ್ಯುಕ್ತವಾದ ಸರ್ವಗುಣಗಳಿಗಿಂತಲೂ, ಅನ್ಯತ್= ಭಿನ್ನವಾದ, ಕಿಂಚಿತ್= ಬೇರೆ ಯಾವುದನ್ನೋ, ನಿಷೇಧತಿ= ನಿಷೇಧಿಸುತ್ತದೆ.

**ಅನುವಾದ–** ಆದ್ದರಿಂದ ಶ್ರುತಿಯಲ್ಲಿ ಹೇಳಿದ ಕರ್ತೃತ್ವ, ಭೋಕ್ತೃತ್ವ, ಫಲದಾತೃತ್ವ ಮೊದಲಾದ ಧರ್ಮಗಳನ್ನು ಬಿಟ್ಟು ಬೇರೆ ಧರ್ಮಗಳನ್ನು ನಿಷೇಧಮಾಡುತ್ತದೆ ಎಂದೇ ಒಪ್ಪಬೇಕು.

**ಭಾವವಿಲಾಸಿನೀ–** ಅತಃ ಉಕ್ತವಿಧಯಾ ಬ್ರಹ್ಮಗುಣಾನಾಮಾವಶ್ಯಕತ್ವಾತ್ । ಭೋಕ್ತೃತ್ವ-ಮಾನನ್ದಭೋಕ್ತೃತ್ವಂ ಯಜ್ಞಭೋಕ್ತೃತ್ವಂ ವಾ । ಫಲದಾತೃತ್ವಂ ಸ್ವರ್ಗಾಪವರ್ಗಫಲದಾತೃತ್ವಮ್ । ಭಗವತಃ ಜ್ಞಾನಯಜ್ಞಕರ್ಮಯಜ್ಞಾಖ್ಯಯಜ್ಞಭೋಕ್ತೃತ್ವಾಭಾವೇ ತತ್ಫಲದಾತೃತ್ವಾಭಾವೇ ಚ ಬ್ರಹ್ಮಕಾಣ್ಡಕರ್ಮಕಾಣ್ಡಯೋರ್ವಿಫಲತ್ವೇನ ಅನುಪಾದೇಯತ್ವ-ಪ್ರಸಂಗಾದಿತಿ ಭಾವಃ । ಅನ್ಯತ್ ಪ್ರಾಕೃತಗುಣಾದಿಕಮ್ ॥ ೯೧೮ ॥

**ವಿವರಣೆ–** ಬ್ರಹ್ಮನಿಗೆ ಕರ್ತೃತ್ವವನ್ನು ಅವಶ್ಯವಾಗಿ ಒಪ್ಪಬೇಕು. ಇಲ್ಲದಿದ್ದರೆ, ಜಗತ್ತಿನ ಸ್ಥಿತಿಯೇ ಕೂಡುವುದಿಲ್ಲ. ಬ್ರಹ್ಮನಿಗೆ ಭೋಕ್ತೃತ್ವವನ್ನು ಒಪ್ಪಬೇಕು. ಇಲ್ಲದಿದ್ದರೆ, ಯಜ್ಞಭೋಕ್ತೃತ್ವವೇ ಕೂಡುವುದಿಲ್ಲ. ಬ್ರಹ್ಮನಿಗೆ ಯಜ್ಞಭೋಕ್ತೃತ್ವವಿಲ್ಲದಿದ್ದರೆ, ಬ್ರಹ್ಮಕಾಂಡದಲ್ಲಿ ಹೇಳಿದ ಬ್ರಹ್ಮನಿಗೂ, ಕರ್ಮಕಾಂಡದಲ್ಲಿ ಹೇಳಿದ ಕರ್ಮಕ್ಕೂ ಯಾವ ಸಂಬಂಧವೂ ಇಲ್ಲವೆಂದಾಗುವ ಕಾರಣ ಅದು ಅನುಪಾದೇಯವಾಗುತ್ತದೆ. ಆದ್ದರಿಂದ ಇಂತಹ ಗುಣಗಳನ್ನು ಬಿಟ್ಟು ಬೇರೆ ಗುಣಗಳು ಎಂದರೆ ಪ್ರಾಕೃತವಾದ ಗುಣಗಳು, ಅವುಗಳನ್ನಷ್ಟೇ ನಿಷೇಧಮಾಡಬೇಕು.

ಸ್ವಯಂ ಸಂಕುಚಿತಾನ್ಯೋಽಪಿ ಮಾನೀ ಜ್ಞಾತಿಸುಖಂ ದಿಶೇತ್ ।
ಅನೇಕಶ್ರುತಿರಕ್ಷಾರ್ಥಂ ಪದಮಲ್ಪನಿಷೇಧಿ ತತ್ ॥ ೯೧೯ ॥

**ಅರ್ಥ–** ಮಾನಂ= ಮರ್ಯಾದೆ ಉಳ್ಳವನು, ಸ್ವಯಂ= ತಾನು, ಸಂಕುಚಿತಾನ್ನೋಪಿ= ಅಲ್ಪಾಹಾರವನ್ನು ತೆಗೆದುಕೊಂಡಾದರೂ, ಜ್ಞಾತಿಸುಖಂ= ತನ್ನ ಬಂಧುಗಳಿಗೆ ಸುಖವನ್ನು, ದಿಶೇತ್= ಕೊಡುತ್ತಾನೆ, ಅನೇಕಶ್ರುತಿರಕ್ಷಾರ್ಥಂ= ಅನೇಕ ಶ್ರುತಿಗಳನ್ನು ರಕ್ಷಣೆ ಮಾಡುವುದಕ್ಕೋಸ್ಕರವಾಗಿ, ತತ್ಪದಂ= ಆ ನಿರ್ಗುಣ ಎಂಬ ಪದವು, ಅಲ್ಪ ನಿಷೇಧಿ= ಸ್ವಲ್ಪವನ್ನು ಮಾತ್ರ ನಿಷೇಧ ಮಾಡುತ್ತದೆ.

**ಅನುವಾದ– ಮರ್ಯಾದೆಯಿದ್ದ ಮನುಷ್ಯನು ತನ್ನ ಅನ್ನವನ್ನು ಕಡಿಮೆ ಮಾಡಿಕೊಂಡಾದರೂ ತನ್ನ ಬಂಧುಗಳಿಗೆ ಸುಖವನ್ನು ಕೊಡುತ್ತಾನೆ. ಆದ್ದರಿಂದ ಅನೇಕ ಶ್ರುತಿಗಳ ರಕ್ಷಣೆಯನ್ನು ಮಾಡುವುದಕ್ಕೋಸ್ಕರ ನಿರ್ಗುಣಶ್ರುತಿಯು ಅಲ್ಪವನ್ನು ಮಾತ್ರ ನಿಷೇಧಮಾಡುತ್ತದೆ.**

**ಭಾವವಿಲಾಸಿನೀ–ಶ್ರುತ್ಯಾ ಶ್ರುತ್ಯಂತರಪ್ರಾಮಾಣ್ಯಮೇವ ರಕ್ಷಣೀಯಮಿತ್ಯೇತಲ್ಲೌಕಿಕದೃಷ್ಟಾಂತೇನ ಪ್ರದರ್ಶಯತಿ– ಸ್ವಯಂ ಸಂಕುಚಿತೇತಿ ॥ ತತ್ ತಸ್ಮಾತ್ ಪದಂ ನಿರ್ಗುಣಪದಂ ಅಲ್ಪನಿಷೇಧಿ ತ್ರಿಗುಣಮಾತ್ರನಿಷೇಧಿ ॥ ೯೧೯ ॥**

**ವಿವರಣೆ–** ನಿರ್ಗುಣಶ್ರುತಿಗೆ ಅರ್ಥಸಂಕೋಚವನ್ನು ಮಾಡುವುದು ಸೂಕ್ತವೆಂದು ಒಂದು ದೃಷ್ಟಾಂತದಿಂದ ಹೇಳುತ್ತಾರೆ. ಮರ್ಯಾದೆಯಿದ್ದ ಮನುಷ್ಯನು ತನ್ನ ಬಂಧುಗಳನ್ನು ಅನ್ನವನ್ನು ಕೊಟ್ಟು ಉಳಿಸುವುದಕ್ಕಾಗಿ ತನ್ನ ಅನ್ನವನ್ನಾದರೂ ಕಡಿಮೆ ಮಾಡಿಕೊಳ್ಳುತ್ತಾನೆ. ಹಾಗೆಯೇ, ನಿರ್ಗುಣಶ್ರುತಿಯು ಎಲ್ಲಾ ಗುಣಗಳನ್ನೂ ನಿಷೇಧಮಾಡಿದರೆ, ನಿರ್ಗುಣಶ್ರುತಿಯ ಬಂಧುಗಳಾದ ಬ್ರಹ್ಮನ ಸರ್ವಜ್ಞತ್ವಾದಿಗುಣಗಳನ್ನು ಹೇಳುವ ಅನೇಕಾನೇಕ ಶ್ರುತಿಗಳೆಲ್ಲವೂ ವಿಷಯಾಭಾವ ಪ್ರಯುಕ್ತ ಸತ್ತುಹೋಗುತ್ತವೆ. ಆದರೆ ನಿರ್ಗುಣಶ್ರುತಿಯು ಒಳ್ಳೆಯ ಮರ್ಯಾದೆ ಮತ್ತು ನಡತೆಯುಳ್ಳದ್ದು. ಆದ್ದರಿಂದ ಅದು ಕೇವಲ ಪ್ರಾಕೃತಗುಣವನ್ನು ನಿಷೇಧಮಾಡಿ, ಸರ್ವಜ್ಞತ್ವಾದಿಗುಣಗಳನ್ನು ನಿಷೇಧಮಾಡದೆ, ಸರ್ವಜ್ಞತ್ವಾದಿಗುಣಗಳನ್ನು ಹೇಳುವ ಅನೇಕಾನೇಕ ವಾಕ್ಯಗಳ ಪ್ರಾಣವನ್ನು ಸಂರಕ್ಷಿಸುತ್ತದೆ.

**ನಿಷೇಧಬಲವತ್ತ್ವೇ ತು ಭೇದವಾಗ್ ಬಾಧಿಕಾ ತವ ।**
**ತಾದಾತ್ಮ್ಯಪ್ರತಿಷೇಧತ್ವಂ ಭೇದಸ್ಯಾಖಿಲಸಮ್ಮತಮ್ ॥ ೯೨೦ ॥**

**ಅರ್ಥ–** ನಿಷೇಧಬಲವತ್ತ್ವೇತು= ನಿಷೇಧವಾಕ್ಯವು ಪ್ರಬಲವಾಗುವುದಾದರೆ, ಭೇದವಾಕ್= 'ದ್ವಾ ಸುಪರ್ಣಾ' ಮೊದಲಾದ ಭೇದವಾಕ್ಯವು, ತವ= ನಿನಗೆ, ಬಾಧಿಕಾ= ಬಾಧಕವಾಗುತ್ತದೆ, ಭೇದಸ್ಯ= ಭೇದಕ್ಕೆ, ತಾದಾತ್ಮ್ಯಪ್ರತಿಷೇಧತ್ವಂ= ತಾದಾತ್ಮ್ಯಪ್ರತಿಷೇಧ ರೂಪತ್ವವು, ಅಖಿಲಸಮ್ಮತಂ= ಎಲ್ಲರಿಗೂ ಸಮ್ಮತವಾಗಿದೆ.

**ಅನುವಾದ–** ನಿರ್ಗುಣವಾಕ್ಯವು ನಿಷೇಧವಾಕ್ಯವಾದುದರಿಂದ ಪ್ರಬಲವಾದುದು ಎಂದು ಹೇಳಿದರೆ, ಭೇದವು ತಾದಾತ್ಮ್ಯಪ್ರತಿಷೇಧರೂಪವೆಂದು ಸರ್ವಸಮ್ಮತಿ ಇರುವುದರಿಂದ ಭೇದವಾಕ್ಯವೂ ಪ್ರಬಲ ಎಂದು ನನ್ನ ಉತ್ತರ.

**ಭಾವವಿಲಾಸಿನೀ–** ನಿಷೇಧರೂಪತ್ವಾನ್ನಿರ್ಗುಣವಾಕ್ಯಂ ಬಲವದಿತ್ಯಾಶಂಕಾಂ ಪರಿಹರತಿ– **ನಿಷೇಧೇತಿ** ॥ ತವ ಅದ್ವೈತವಾದಿನಃ ॥ ೯೨೦ ॥

**ವಿವರಣೆ–** ನಿರ್ಗುಣ ಎಂಬ ಶಬ್ದವು ಗುಣವನ್ನು ನಿಷೇಧಮಾಡುತ್ತದೆ. ನಿಷೇಧ-ಮಾಡುವ ವಾಕ್ಯವು ವಿಧಾನಮಾಡುವ ವಾಕ್ಯಕ್ಕಿಂತಲೂ ಪ್ರಬಲ ಎಂದು ಸ್ವೀಕರಿಸಿ, ಸರ್ವಜ್ಞತ್ವಾದಿಗುಣಗಳನ್ನು ಹೇಳುವ ವಾಕ್ಯಕ್ಕಿಂತಲೂ ನಿರ್ಗುಣವಾಕ್ಯವು ಪ್ರಬಲವಾದ್ದರಿಂದ ಸರ್ವಜ್ಞತ್ವಾದಿಗುಣಗಳು ಬಾಧಿತವಾಗುತ್ತವೆ ಎಂದು ಹೇಳಿದರೆ, ಭೇದವು ತಾದಾತ್ಮ್ಯಪ್ರತಿಷೇಧರೂಪವಾದ್ದರಿಂದ ಭೇದವನ್ನು ಹೇಳುವ ವಾಕ್ಯಗಳು ನಿಷೇಧವಾಕ್ಯಗಳು. ಜೊತೆಗೆ ಈ ಭೇದವನ್ನು ಹೇಳುವ ವಾಕ್ಯಗಳೇ ವೇದದಲ್ಲಿ ಬಹಳವಾಗಿವೆ. ನಿಷೇಧವಾಕ್ಯತ್ವ ಮತ್ತು ಬಹುತ್ವ ಈ ಎರಡೂ ಪ್ರಾಬಲ್ಯಗಳಿಂದ ಕೂಡಿದವುಗಳಾಗಿ ವೇದವಾಕ್ಯಗಳಿಂದ ದೊರಕುವ ಸರ್ವಜ್ಞತ್ವಾದಿಭೇದಕಧರ್ಮಗಳೇ ನಿರ್ಗುಣತ್ವವನ್ನು ಬಾಧಿಸುತ್ತವೆ ಎಂದು ಅಂಗೀಕರಿಸು ಎಂದು ನಮ್ಮ ಅಭಿಪ್ರಾಯ.

**ಅಂಧಾನಾಂ ನಾಸ್ತಿತಾವಾಕ್ಯೈರ್ಬಾಧ್ಯಂ ಸ್ಯಾದಸ್ತಿತಾವಚಃ ।**
**ಶೂನ್ಯೋಕ್ತಿರ್ಬ್ರಹ್ಮಸತ್ತ್ವೋಕ್ತೇರ್ಬಾಧಿಕೇತ್ಯತಿಸಂಕಟಮ್ ॥ ೯೨೧ ॥**

**ಅರ್ಥ–** ಅಂಧಾನಾಂ= ಅಂಧರ, ನಾಸ್ತಿತಾವಾಕ್ಯೈಃ= ಅಸ್ತಿತ್ವವನ್ನು ನಿಷೇಧಮಾಡುವ ವಾಕ್ಯಗಳಿಂದ, ಅಸ್ತಿತಾವಚಃ= ಕಣ್ಣಿದ್ದವರು ಹೇಳುವ ಅಸ್ತಿತ್ವ ವಾಕ್ಯವು, ಬಾಧ್ಯಂ ಸ್ಯಾತ್= ಬಾಧ್ಯವಾಗಲಿ, ಶೂನ್ಯೋಕ್ತಿಃ= ಶೂನ್ಯವೇ ತತ್ವವೆಂಬ ಉಕ್ತಿಯು, ಬ್ರಹ್ಮಸತ್ತ್ವೋಕ್ತೇಃ= ಬ್ರಹ್ಮನು ಸತ್ಯವೆಂದು ಹೇಳುವ ಉಕ್ತಿಗೆ, ಬಾಧಿಕಾ ಸ್ಯಾತ್= ಬಾಧಕವಾಗಲಿ, ಇತಿ= ಈ ರೀತಿಯಾಗಿ, ಅತಿ ಸಂಕಟಮ್= ಮಹಾಸಂಕಟವು ಪ್ರಾಪ್ತವಾಗುತ್ತದೆ.

**ಅನುವಾದ–** ನಿಷೇಧವಾಕ್ಯವಾದ ಕಾರಣದಿಂದಲೇ ಒಂದು ವಾಕ್ಯವು ಪ್ರಬಲವಾಗುವುದಾದರೆ, ಕಣ್ಣಿದ್ದವನು ಒಂದು ವಸ್ತುವಿದೆ ಎಂದು ಹೇಳಿದ ವಾಕ್ಯಕ್ಕಿಂತಲೂ ಅಂಧನು ವಸ್ತುವಿಲ್ಲ ಎಂದು ಹೇಳಿದ ವಾಕ್ಯವು ಪ್ರಬಲವಾಗಿ ಬಾಧಕವಾದೀತು. ಬ್ರಹ್ಮಸತ್ವವನ್ನು ಹೇಳುವ ವಾಕ್ಯಕ್ಕಿಂತಲೂ ಶೂನ್ಯತತ್ವವನ್ನು ಹೇಳುವ ವಾಕ್ಯವು ಸರ್ವನಿಷೇಧರೂಪವಾದುದರಿಂದ ಬ್ರಹ್ಮಸತ್ವವನ್ನು ಬಾಧಿಸೀತು.

**ಭಾವವಿಲಾಸಿನೀ–** ಪುನರಪಿ ದೂಷಣದ್ವಯಮಾಹ– **ಅಂಧಾನಾಮಿತ್ಯಾದಿನಾ** ॥ ೯೨೧ ॥

**ವಿವರಣೆ–** ವಿಧಿವಾಕ್ಯಕ್ಕಿಂತಲೂ ನಿಷೇಧವಾಕ್ಯವೇ ಪ್ರಬಲವಾಗುವುದಾದರೆ, ಈ ಶ್ಲೋಕದಲ್ಲಿ ಪುನಃ ಎರಡು ಅತಿಪ್ರಸಂಗಗಳನ್ನು ಹೇಳುತ್ತಾರೆ.

**ವಿರುದ್ಧಾರ್ಥಮತೋ ಬಾಧ್ಯಮವಿರುದ್ಧಂ ನ ಬಾಧ್ಯತೇ ।**
**ಅಹೇಃ ಪುಚ್ಛಂ ಹಿ ಕಶ್ಛಿಂದ್ಯಾನ್ಮುಖಂ ಛಿಂದಂತಿ ಸರ್ವಶಃ ॥ ೯೨೨ ॥**

**ಅರ್ಥ–** ಅತಃ= ಆದ್ದರಿಂದ, ವಿರುದ್ಧಾರ್ಥಂ= ಪ್ರಮಾಣವಿರುದ್ಧವಾದ ಅರ್ಥವನ್ನು ಹೇಳುವ ವಾಕ್ಯವು, ಬಾಧ್ಯಂ= ಬಾಧಿತವಾಗುತ್ತದೆ, ಅವಿರುದ್ಧಂ= ಪ್ರಮಾಣಕ್ಕೆ ಅವಿರುದ್ಧವಾಗಿ ಹೇಳುವ ವಾಕ್ಯವು, ನ ಬಾಧ್ಯತೇ= ಬಾಧಿತವಾಗುವುದಿಲ್ಲ, ಅಹೇಃ= ಸರ್ಪದ, ಪುಚ್ಛಂ= ಬಾಲವನ್ನು, ಕಃ= ಯಾವನು, ಛಿಂದ್ಯಾತ್= ಕತ್ತರಿಸುತ್ತಾನೆ, ಸರ್ವಶಃ= ಎಲ್ಲ ಕಡೆಯಲ್ಲಿಯೂ, ಮುಖಂ= ತಲೆಯನ್ನು ಛಿಂದಂತಿ ಹಿ= ಕತ್ತರಿಸುತ್ತಾರಷ್ಟೇ.

**ಅನುವಾದ– ಆದ್ದರಿಂದ ವಿರುದ್ಧಾರ್ಥವನ್ನು ಹೇಳುವ ವಾಕ್ಯವು ಬಾಧಿತವಾಗುತ್ತದೆ. ಅವಿರುದ್ಧವಾದ ಅರ್ಥವನ್ನು ಹೇಳುವ ವಾಕ್ಯವು ಬಾಧಿಸಲ್ಪಡುವುದಿಲ್ಲ. ಯಾವನುತಾನೆ ಸರ್ಪದ ಬಾಲವನ್ನು ಕತ್ತರಿಸುತ್ತಾನೆ? ಸರ್ಪದ ತಲೆಯನ್ನಷ್ಟೇ ಎಲ್ಲರೂ ಕತ್ತರಿಸುತ್ತಾರೆ.**

**ಭಾವವಿಲಾಸಿನೀ–** ಅತಃ ನಿಷೇಧರೂಪಸ್ಯಾಪ್ರಯೋಜಕತ್ವಾತ್ । ವಿರುದ್ಧಾರ್ಥಂ ಗುಣಪ್ರತಿಪಾದಕಶ್ರುತಿವಿಘಾತಕನೈರ್ಗುಣ್ಯಾರ್ಥಂ ಹಿಂಸಕವಿಷಾಖ್ಯವಿರುದ್ಧಾರ್ಥಃ ವತ್ತ್ವಂ ದೃಷ್ಟಾಂತೇ ದ್ರಷ್ಟವ್ಯಮ್ । ತಮೇವ ದೃಷ್ಟಾಂತಮಾಹ– **ಅಹೇಃ ಪುಚ್ಛಮಿತಿ ॥ ೯೨೨ ॥**

**ವಿವರಣೆ–** ನಿಷೇಧವಾಕ್ಯವು ಪ್ರಬಲ ಎಂದು ಹೇಳಿದರೆ ಅನೇಕ ದೋಷಗಳು ಬರುವುದರಿಂದ ಯಾವುದು ಪ್ರಮಾಣಪ್ರಮಿತವಾದ ಅರ್ಥಕ್ಕೆ ವಿರುದ್ಧವಾದ ಅರ್ಥವನ್ನು ಹೇಳುತ್ತದೆಯೋ, ಅದು ಬಾಧ್ಯವಾಗುತ್ತದೆ, ಪ್ರಮಾಣಪ್ರಮಿತವಾದ ಅರ್ಥವನ್ನು ಹೇಳುವ ವಾಕ್ಯವು ಬಾಧಕವಾಗುತ್ತದೆ ಎಂದು ಹೇಳಬೇಕು. ಇದನ್ನು ಒಂದು ದೃಷ್ಟಾಂತದಿಂದ ಉಪಪಾದನೆ ಮಾಡುತ್ತಾರೆ.

ವಿಷವು ಹಿಂಸೆಯನ್ನು ಮಾಡಿ ಮರಣವನ್ನು ಉಂಟುಮಾಡುವುದರಿಂದ ಅದು ಎಲ್ಲರಿಂದ ಅಪೇಕ್ಷಿತವಾದ ಜೀವನಕ್ಕೆ ವಿರುದ್ಧವಾದ ಅರ್ಥ. ಸರ್ಪವನ್ನು ಹಿಡಿದವರು ಅಂತಹ ವಿಷವನ್ನು ಹೊಂದಿದ ತಲೆಯನ್ನು ಮಾತ್ರ ಕತ್ತರಿಸುತ್ತಾರೆ, ಬಾಲವನ್ನಲ್ಲ. ಏಕೆಂದರೆ, ತಲೆಯು ವಿರುದ್ಧಾರ್ಥವಾದ ವಿಷಕ್ಕೆ ಆಶ್ರಯವಾಗಿದೆ. ಹಾಗೆಯೇ, ಅನೇಕ ಪ್ರಮಾಣಗಳಿಂದ ಗುಣಗಳು ಹೇಳಲ್ಪಡುವಾಗ ನಿರ್ಗುಣವಾಕ್ಯವು ನಿರ್ಗುಣತ್ವರೂಪವಾದ ವಿರುದ್ಧವಾದ ವಿಷಸ್ಥಾನೀಯವಾದ ಅರ್ಥವನ್ನು ಹೊಂದಿರುವ ಕಾರಣ ನಿರ್ಗುಣತ್ವವನ್ನು ಹೇಳುವ ವಾಕ್ಯವೇ ಬಾಧಿತವಾಗಬೇಕೇ ಹೊರತು ಗುಣವನ್ನು ಹೇಳುವ ವಾಕ್ಯವು ಬಾಧಿತವಾಗುವುದಿಲ್ಲ.

**ಸರ್ವಧರ್ಮೋಽಷ ಸರ್ವಜ್ಞಃ ಸರ್ವಸ್ಯೇಶಾನ ಇತ್ಯಪಿ ।**
**ಶ್ರುತಯಃ ಸ್ಮೃತಯೋ ಗಾಯನ್ ಗುಣಾನಿತ್ಯಾದಯೋ ನ ಕಿಮ್ ॥೯೨೩॥**

ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ ॥ ೬೨೪ ॥

ಜನ್ಮಕರ್ಮಾಭಿಧಾನಾನಿ ಸಂತಿ ಮೇಽಂಗ ಸಹಸ್ರಶಃ ।
ನ ಶಕ್ಯಂತೇಽನುಸಂಖ್ಯಾತುಮನಂತತ್ವಾನ್ಮಯಾಽಪಿ ಹಿ ॥ ೬೨೫ ॥

ಇತ್ಯಾದಿಭಗವದ್ವಾಕ್ಯಂ ಶ್ಲೋಕ್ಯಂ ಸ ಹಿ ಭುಜಂಗಜಿತ್ ॥ ೬೨೬ ॥

**ಅರ್ಥ–** ಸರ್ವಧರ್ಮಾ= ಸರ್ವಧರ್ಮಾ ಎಂಬ ಶ್ರುತಿಯು, ಏಷ ಸರ್ವಜ್ಞಃ= ಏಷ ಸರ್ವಜ್ಞಃ ಎಂಬ ಶ್ರುತಿಯು, ಸರ್ವಸ್ಯೇಶಾನಃ ಇತ್ಯಪಿ ಶ್ರುತಯಃ= ಮತ್ತು ಸರ್ವಸ್ಯೇಶಾನಃ ಎಂಬ ಶ್ರುತಿಯು, ಗಾಯನ್ ಗುಣಾನ್ ಇತ್ಯಾದಯಃ= ಗಾಯನ್ ಗುಣಾನ್ ಮುಂತಾದ ಭಾಗವತಾದಿ ವಾಕ್ಯಗಳು, ಕಿಂ ನ= ಇಲ್ಲವೇನು?

ಅನಂತಗುಣೇ= ಅನಂತಗುಣಗಳನ್ನು ಹೊಂದಿರುವ, ಗುಣತೋಽನಂತೇ= ಒಂದೊಂದು ಗುಣವೂ ಅನಂತವಾಗಿರುವ, ಅನಂತವಿಗ್ರಹೇ= ಅನಂತ ರೂಪವನ್ನು ಧರಿಸಿದ, ಮಯಿ= ನನ್ನಲ್ಲಿ ಎಂಬ ಇತ್ಯಾದಿ ಭಾಗವತವಾಕ್ಯವು ಇಲ್ಲವೇನು? ಅಂಗ= ಪ್ರೀತಿಪಾತ್ರನೇ, ಮೇ= ನನ್ನ, ಜನ್ಮಕರ್ಮಾಭಿಧಾನಾನಿ= ಅವತಾರಗಳು, ಕ್ರಿಯೆಗಳು, ನಾಮಗಳು, ಸಹಸ್ರಶಃ= ಸಹಸ್ರಾರು ಸಂಖ್ಯೆಯಲ್ಲಿ, ಸಂತಿ= ಇವೆ, ಅನಂತತ್ವಾತ್= ಅವು ಅನಂತವಾಗಿರುವುದರಿಂದ, ಮಯಾಽಪಿ= ನನ್ನಿಂದಲೂ ಕೂಡ, ಅನುಸಂಖ್ಯಾತುಂ= ಎಣಿಸಲು, ನ ಶಕ್ಯಂತೇ= ಸಾಧ್ಯವಾಗುವುದಿಲ್ಲ.

ಇತ್ಯಾದಿ ಭಗವದ್ವಾಕ್ಯಂ= ಇವೇ ಮೊದಲಾದ ಭಾಗವತದಲ್ಲಿರುವ ಭಗವದ್ ವಾಕ್ಯಗಳು, ಶ್ಲೋಕ್ಯಂ= ಮಾನ್ಯವಾದವು, ಸಃ= ಅವನೇ, ಭುಜಂಗಜಿತ್ ಹಿ= ಕಾಳಿಯ ಸರ್ಪವನ್ನು ಮರ್ದನ ಮಾಡಿದವನಷ್ಟೇ.

**ಅನುವಾದ– 'ಸರ್ವಧರ್ಮಾ, ಸರ್ವಕರ್ಮಾ', 'ಏಷ ಸರ್ವೇಶ್ವರಃ', 'ಯಃ ಸರ್ವಜ್ಞಃ ಸರ್ವವಿತ್', 'ಸವಾ ಏಷ ಅಸ್ಯ ಸರ್ವಸ್ಯ ವಶೀ ಸರ್ವಸ್ಯೇಶಾನಃ' ಎಂಬ ಇವೇ ಮೊದಲಾದ ಶ್ರುತಿಗಳೂ, 'ಗಾಯನ್ ಗುಣಾನ್' ಎಂಬ ಸ್ಮೃತಿಯೂ, 'ಮಯಿ ಅನಂತ ಗುಣೇಽನಂತೇ ಗುಣತೋಽನಂತ ವಿಗ್ರಹೇ' ಎಂಬ ಭಾಗವತವಾಕ್ಯವೂ, 'ಜನ್ಮಕರ್ಮಾಭಿಧಾನಾನಿ ಸಂತಿ ಮೇಽಂಗ ಸಹಸ್ರಶಃ', ನಽಶಕ್ಯಂತೇ ಅನುಸಂಖ್ಯಾತುಮನಂತತ್ವಾನ್ ಮಯಾಽಪಿ ಹಿ' ಎಂಬ ಭಾಗವತವಾಕ್ಯವೂ ಅಂಗೀಕಾರಾರ್ಹವಾದುದು. ಇಂತಹ ಗುಣಪೂರ್ಣನಾದ ಕೃಷ್ಣನು ಕಾಲೀಯ-ಮರ್ದನವನ್ನು ಮಾಡಿದವನಷ್ಟೇ?**

**ಭಾವವಿಲಾಸಿನೀ–** ಗುಣಪ್ರತಿಪಾದಕವಾಕ್ಯಾನಿ ಸಂಗೃಹ್ಣಾತಿ– **ಸರ್ವ ಧರ್ಮೇತ್ಯಾದಿನಾ** ॥ ಸರ್ವ-ಧರ್ಮೇತ್ಯನೇನ 'ಸರ್ವಧರ್ಮಾ ಸರ್ವಕರ್ಮಾ' ಇತಿ ಶ್ರುತಿಮುಪಾದತ್ತೇ ॥ ೬೨೩-೬೨೫ ॥

**ಶ್ಲೋಕ್ಯಮ್ ಅಂಗೀಕಾರ್ಯಮಿತ್ಯರ್ಥಃ । ಸ ಭಗವಾನ್ ಭುಜಂಗಜಿತ್ಕಾಲಿಯಮರ್ದನಃ । ಪೂರ್ವೋಕ್ತನಿರ್ಗುಣತ್ವಾಖ್ಯಸರ್ಪಮುಖಮರ್ದನಶಕ್ತಿಸೂಚನಾಯೇದಂ ವಿಶೇಷಣಮ್ ॥ ೯೨೬ ॥**

**ವಿವರಣೆ–** 'ಸರ್ವಧರ್ಮಾ, ಸರ್ವಕರ್ಮಾ' ಮೊದಲಾದ ಶ್ರುತಿಗಳು ಅವನಲ್ಲಿ ಧರ್ಮ ಮೊದಲಾದ ಎಲ್ಲಾ ಗುಣಗಳನ್ನು ಹೇಳುತ್ತವೆ. 'ಗಾಯನ್ ಗುಣಾನ್ ದಶಶತಾನನ ಆದಿದೇವಃ ಶೇಷೋಽಧುನಾಪಿ ಸಮವಸ್ಯತಿ ನಾಸ್ಯ ಪಾರಮ್' ಎಂಬುದು ಭಾಗವತ ಶ್ಲೋಕ. (2.7.41.) ಸಹಸ್ರವದನಗಳುಳ್ಳ ಶೇಷನು ಬಹುಕಾಲದಿಂದ ಭಗವಂತನ ಗುಣಗಳನ್ನು ಗಾನ ಮಾಡುತ್ತಿದ್ದರೂ ಆ ಗುಣಗಾನವು ಇನ್ನೂ ಮುಗಿದಿಲ್ಲ ಎಂದು ಈ ವಾಕ್ಯದಲ್ಲಿ ಹೇಳುವುದರಿಂದ ಅನಂತಗುಣಗಳು ಸಿದ್ಧವಾಗುತ್ತವೆ.

'ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ' ಎಂಬುದು ಭಾಗವತದ ಚತುರ್ಥಸ್ಕಂಧದ ವಾಕ್ಯ. ಈ ವಾಕ್ಯದಲ್ಲಿ ತನ್ನಲ್ಲಿ ಅನಂತಗುಣಗಳು ಇವೆ ಎಂದೂ ಮತ್ತು ಒಂದೊಂದು ಗುಣವೂ ಅನಂತವೆಂದೂ ದೇವರೇ ಹೇಳುತ್ತಾರೆ. ಜನ್ಮಕರ್ಮಾಭಿಧಾನಾನಿ - ಇದೂ ಸಹ ಭಾಗವತದ ಶ್ಲೋಕ. ಇದೂ ದೇವರ ವಾಕ್ಯವೇ. ಇದರಲ್ಲಿ ತನ್ನ ಗುಣಕರ್ಮಗಳನ್ನು ನಿಮಿತ್ತೀಕರಿಸಿಕೊಂಡ ತನ್ನ ನಾಮಗಳು ಅನಂತವಾದುದರಿಂದ ತನಗೂ ಅವುಗಳನ್ನು ಗಣನೆ ಮಾಡಲು ಸಾಧ್ಯವಿಲ್ಲ ಎಂದು ದೇವರೇ ಹೇಳುತ್ತಾರೆ. ಆದ್ದರಿಂದ ಇಂತಹ ಶ್ರುತಿಸ್ಮೃತಿವಾಕ್ಯಗಳಲ್ಲಿ ಹೇಳಲ್ಪಟ್ಟ ದೇವರ ಗುಣಗಳು ಸ್ವೀಕಾರಾರ್ಹವಾದುವು. ಕಾಲೀಯಸರ್ಪವನ್ನು ದಮನ ಮಾಡಿದ ಕೃಷ್ಣನು ವಿಷಸ್ಥಾನದಲ್ಲಿರುವ ನೈರ್ಗುಣ್ಯವನ್ನು ದಮನಮಾಡಲು ಸಮರ್ಥನಾಗಿದ್ದಾನೆ.

**ಕಿಂಚಾನಿರ್ಗುಣ ಇತ್ಯೇವ ಪದಚ್ಛೇದೇ ಲಸತ್ಪದಮ್ ।**
**ವಾಕ್ಯಂ ಸ್ಯಾನ್ನಾಂಗವಿಚ್ಛೇದಸ್ತಸ್ಯೇತ್ಯತಿಸಮಂಜಸಮ್ ॥ ೯೨೭ ॥**

**ಅರ್ಥ–** ಕಿಂಚ= ಮತ್ತು, ಅನಿರ್ಗುಣ ಇತ್ಯೇವ= ಅನಿರ್ಗುಣ ಎಂಬುದಾಗಿಯೇ, ಪದಚ್ಛೇದೇ= ಪದಚ್ಛೇದವನ್ನು ಮಾಡಿದರೆ, ಪದಂ ವಾಕ್ಯಂ= ಪದವು ಮತ್ತು ವಾಕ್ಯವು, ಲಸತ್ಪದಂ= ಶೋಭಿಸುತ್ತದೆ, ತಸ್ಯ= ಆ ಪದಕ್ಕೆ, ಅಂಗವಿಚ್ಛೇದಃ= 'ಅ' ಕಾರವನ್ನು ಬಿಟ್ಟು ನಿರ್ಗುಣ ಎಂದು ವಿಚ್ಛೇದ ಮಾಡುವುದು, ನ= ಸರಿಯಾಗುವುದಿಲ್ಲ, ಇತಿ= ಎಂದು, ಅತಿಸಮಂಜಸಮ್= ಎಲ್ಲವೂ ಸಮಂಜಸವಾಗುತ್ತದೆ.

**ಅನುವಾದ–** **ಅದೂ ಅಲ್ಲದೆ, ಅನಿರ್ಗುಣಃ ಎಂದು ಪದಚ್ಛೇದ ಮಾಡುವುದರಿಂದಲೇ ಪದವೂ ಮತ್ತು ವಾಕ್ಯವೂ ಶೋಭಿಸುವುದರಿಂದ ಆ ಪದಕ್ಕೆ ಅಂಗವಿಚ್ಛೇದವನ್ನು ಮಾಡದಿದ್ದರೆ, ಅತ್ಯಂತ ಸಮಂಜಸವಾಗುತ್ತದೆ.**

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ– **ಕಿಂಚೇತಿ** ॥ ಲಸತ್ತದಂ ಪೂರ್ವೋತ್ತರಾವಿರುದ್ಧಾರ್ಥ-ಪದಮ್ । ಅಂಗವಿಚ್ಛೇದಃ ನಿರ್ಗುಣಪದಾತಿರಿಕ್ತಸಕಲ- ವಾಕ್ಯಾವಯವಾಪ್ರಾಮಾಣ್ಯಮ್ । ತಸ್ಯ ವಾಕ್ಯಸ್ಯ ॥ ೯೨೭ ॥

**ವಿವರಣೆ–** 'ಕೇವಲೋ ನಿರ್ಗುಣಶ್ಚ' ಎಂಬುದು ಕಾಠಕೋಪನಿಷತ್ತಿನ ವಾಕ್ಯ. ಇದನ್ನು 'ಕೇವಲಃ ನಿರ್ಗುಣಶ್ಚ' ಎಂತಲೂ, 'ಕೇವಲಃ ಅನಿರ್ಗುಣಶ್ಚ' ಎಂತಲೂ ಪದಚ್ಛೇದ ಮಾಡಬಹುದು. 'ಅನಿರ್ಗುಣಃ' ಎಂಬ ಪದಚ್ಛೇದವೇ ಸಮಂಜಸವಾದುದು. ಆಗ ಹಿಂದೆ ಹೇಳಿದ ಗುಣಗಳಿಗೆ ವಿರೋಧವು ಬರದಿರುವ ಕಾರಣ ವಾಕ್ಯವು ಅಬಾಧಿತಾರ್ಥವಿಷಯಕವಾಗುತ್ತದೆ. 'ಅನಿರ್ಗುಣಃ' ಎಂಬ ಪದದಲ್ಲಿ 'ಅ' ಕಾರವನ್ನು ತೆಗೆದು 'ನಿರ್ಗುಣಃ' ಎಂದು ಪದಚ್ಛೇದವನ್ನು ಮಾಡಿದರೆ, ಆ ಪದಕ್ಕೆ ಅಂಗಚ್ಛೇದವನ್ನು ಮಾಡಿದಂತಾಗುತ್ತದೆ. ಆದ್ದರಿಂದ 'ಅನಿರ್ಗುಣಃ' ಎಂಬ ಪದಚ್ಛೇದವನ್ನು ಇಟ್ಟುಕೊಂಡು ದೇವರು ನಿರ್ಗುಣನಲ್ಲ ಎಂದು ಅರ್ಥಮಾಡುವುದೇ ಒಳ್ಳೆಯದು.

ಸಮಯಪ್ರಾಪ್ತನೈರ್ಗುಣ್ಯತ್ಯಾಜನಂ ಚ ಫಲಂ ಭವೇತ್ ॥ ೯೨೮ ॥

**ಅರ್ಥ–** ಸಮಯಪ್ರಾಪ್ತನೈರ್ಗುಣ್ಯತ್ಯಾಜನಂ ಚ= ದುರ್ಮತಗಳಿಂದ ಪ್ರಾಪ್ತವಾದ ನೈರ್ಗುಣ್ಯಪರಿತ್ಯಾಗವೂ ಸಹ, ಫಲಂ ಭವೇತ್= ಪ್ರಯೋಜನವಾಗುತ್ತದೆ.

**ಅನುವಾದ–** ಸಮಯಪ್ರಾಪ್ತವಾದ ನೈರ್ಗುಣ್ಯವನ್ನು ಪ್ರತಿಷೇಧ ಮಾಡುವುದೇ ಈ ವಾಕ್ಯದ ಫಲವಾಗುತ್ತದೆ.

**ಭಾವವಿಲಾಸಿನೀ–** ಸಮಯಪ್ರಾಪ್ತಸ್ಯ ಮಾಯಾವಾದಿಸಮಯಪ್ರಾಪ್ತಸ್ಯ ನೈರ್ಗುಣ್ಯಸ್ಯ ತ್ಯಾಜನಮ್ । ಫಲಮನಿರ್ಗುಣ ಇತಿ ಪದಚ್ಛೇದಸ್ಯ ಫಲಮ್ ॥ ೯೨೮ ॥

**ವಿವರಣೆ–** 'ಅನಿರ್ಗುಣಃ' ಎಂದು ಪದಚ್ಛೇದ ಮಾಡಿದರೆ ನಿರ್ಗುಣನು ಅಲ್ಲ ಎಂದು ಹೇಳಿ ನೈರ್ಗುಣ್ಯವನ್ನು ಪ್ರತಿಷೇಧ ಮಾಡಿದಂತಾಗುತ್ತದೆ. ಪ್ರತಿಷೇಧ ಮಾಡಬೇಕಾದರೆ ಪ್ರತಿಯೋಗಿಗೆ ಪ್ರಸಕ್ತಿ ಬೇಕು. ಆದ್ದರಿಂದ ನೈರ್ಗುಣ್ಯದ ಪ್ರಸಕ್ತಿ ಇಲ್ಲಿ ಬೇಕು. ಅದಕ್ಕಾಗಿ 'ನಿರ್ಗುಣಃ' ಎಂಬ ಪದಚ್ಛೇದವನ್ನು ಅಂಗೀಕಾರಮಾಡಬೇಕಾಗಿಲ್ಲ. ಶ್ರುತಿಯು ಬೇರೆ ಮತಗಳ ಅಭಿಪ್ರಾಯವನ್ನು ಅನುವಾದ ಮಾಡಿ ನಿರಾಕರಿಸುವ ಪದ್ಧತಿ ಇದೆ. ಆದ್ದರಿಂದ ಇಲ್ಲಿ ಶ್ರುತಿಯು ತಾನೇ ನಿರ್ಗುಣತ್ವವನ್ನು ಹೇಳದೆ, ದುರ್ಮತಗಳ ವಾದಗಳಿಂದ ಪ್ರಸಕ್ತವಾದ ನಿರ್ಗುಣತ್ವವನ್ನು ಇಲ್ಲಿ ಪ್ರತಿಷೇಧ ಮಾಡುತ್ತದೆ ಎಂದು ಹೇಳಿದರೆ, ಪ್ರತಿಷೇಧಕ್ಕೆ ಫಲವೂ ದೊರಕುತ್ತದೆ ಮತ್ತು ಎಲ್ಲವೂ ಸಮಂಜಸವಾಗುತ್ತದೆ.

ಶ್ರುತಿಃ ಸ್ವೋಕ್ತಗುಣಸ್ಥೇಮ್ನೇ ನೈರ್ಗುಣ್ಯಂ ಪ್ರತಿಷೇಧತಿ ।
ಇತಿ ಸಂಗತಿರಪ್ಯಸ್ತಿ ವಾಕ್ಯಸ್ಯಾಪ್ಯೇಕವಾಕ್ಯತಾ ॥ ೯೨೯ ॥

**ಅರ್ಥ–** ಶ್ರುತಿಃ= ವೇದವಾಕ್ಯವು, ಸ್ವೋಕ್ತಗುಣಸ್ಥೇಮ್ನೇ= ತಾನು ಹೇಳಿದ ಗುಣಗಳನ್ನು ದೃಢಪಡಿಸಲು, ನೈರ್ಗುಣ್ಯಂ= ಗುಣಾಭಾವವನ್ನು, ಪ್ರತಿಷೇಧತಿ= ನಿಷೇಧ ಮಾಡುತ್ತದೆ, ಇತಿ= ಎಂದು, ಸಂಗತಿರಪಿ= ಸಂಗತಿಯೂ ಸಹ, ಅಸ್ತಿ= ಇರುತ್ತದೆ, ವಾಕ್ಯಸ್ಯಾಪಿ= ವಾಕ್ಯಕ್ಕೂ ಕೂಡ, ಏಕವಾಕ್ಯತಾ= ಏಕವಾಕ್ಯತೆಯು ಉಂಟಾಗುತ್ತದೆ.

**ಅನುವಾದ–** ಶ್ರುತಿಯು ತಾನು ಹೇಳಿದ ಗುಣಗಳ ಸಮರ್ಥನೆಗಾಗಿ ನೈರ್ಗುಣ್ಯವನ್ನು ಪ್ರತಿಷೇಧ ಮಾಡುತ್ತದೆ ಎಂಬ ಸಂಗತಿಯೂ ಈ ಪಕ್ಷದಲ್ಲಿ ಕೂಡುತ್ತದೆ ಮತ್ತು ಸಮಗ್ರವಾದ ವಾಕ್ಯಕ್ಕೆ ಏಕವಾಕ್ಯತೆಯೂ ಉಪಪನ್ನವಾಗುತ್ತದೆ.

**ಭಾವವಿಲಾಸಿನೀ–** ಸಂಗತಿಃ ಗುಣಪ್ರತಿಪಾದಕಭಾಗಸ್ಯ ನೈರ್ಗುಣ್ಯಮತೇನ ವಿರೋಧೇ ಆಶಂಕಿತೇ ತದೇವ ನೇತ್ಯಾಹೇತಿ ಸಂಗತಿಃ ॥ ೯೨೯ ॥

**ವಿವರಣೆ–** ಹಿಂದೆ ಉದಾಹರಿಸಿದ ಶ್ರುತಿಗಳು ಮತ್ತು 'ಏಕೋ ದೇವಃ' ಎಂಬ ಈ ವಾಕ್ಯವೂ ದೇವರಲ್ಲಿ ಅನೇಕ ಗುಣಗಳನ್ನು ಹೇಳುತ್ತವೆ. ಹೀಗೆ ಹೇಳಿದ ಗುಣಗಳನ್ನು ದೃಢೀಕರಿಸುವುದಕ್ಕೆ ಅವನು ನಿರ್ಗುಣನಲ್ಲ ಎಂದು ಹೇಳುವುದಕ್ಕೆ ಬಹಳ ಸಂಗತಿಯಿದೆ. ಆದ್ದರಿಂದ 'ಅನಿರ್ಗುಣಃ' ಎಂದು ಪದಚ್ಛೇದ ಮಾಡಿದರೆ, 'ಏಕೋದೇವಃ' ಎಂಬ ವಾಕ್ಯದಲ್ಲಿ 'ಏಕಃ' ಮೊದಲಾದ ಶಬ್ದಗಳಿಂದ ಹೇಳಲ್ಪಟ್ಟ ಗುಣಗಳಿಗೆ ಯಾವ ವಿರೋಧವೂ ಬರುವುದಿಲ್ಲ, ಏಕವಾಕ್ಯತೆಯು ಲಭಿಸುತ್ತದೆ. 'ನಿರ್ಗುಣಃ' ಎಂದು ಪದಚ್ಛೇದ ಮಾಡಿದರೆ, ಆ ಪದವು ಹೇಳುವ ನೈರ್ಗುಣ್ಯವು ಏಕತ್ವಾದಿಗುಣಗಳಿಗೆ ವಿರುದ್ಧವಾದ್ದರಿಂದ ವಿರುದ್ಧವಾದ ಅರ್ಥವನ್ನು ಹೇಳುವ ವಾಕ್ಯವು ಏಕವಾಕ್ಯತೆಯನ್ನು ಕಳೆದುಕೊಳ್ಳುತ್ತದೆ.

**ಕಿಂಚ ನಿರ್ಗುಣತಾವಾಕ್ ತೇ ಗುಣಮಾತ್ರನಿಷೇಧನೇ ।**
**ಜ್ಞಾನಾನಂದಾದ್ಯಭಿಮತಗುಣಾನಾಂ ಸ್ಯಾನ್ನಿಷೇಧಿಕಾ ॥ ೯೩೦ ॥**

**ಅರ್ಥ–** ಕಿಂಚ= ಮತ್ತು, ತೇ= ನಿನ್ನ, ನಿರ್ಗುಣತಾವಾಕ್= ನಿರ್ಗುಣ ಎಂಬ ವಾಕ್ಯವು, ಗುಣಮಾತ್ರನಿಷೇಧನೇ= ಎಲ್ಲ ಗುಣಗಳನ್ನೂ ನಿಷೇಧಿಸುವುದಾದರೆ, ಜ್ಞಾನಾನಂದಾದ್ಯ-ಭಿಮತಗುಣಾನಾಂ= ಜ್ಞಾನ ಆನಂದ ಮೊದಲಾದ ನಿನ್ನಿಂದ ಅಂಗೀಕೃತವಾದ ಗುಣಗಳಿಗೂ, ನಿಷೇಧಿಕಾ ಸ್ಯಾತ್= ನಿಷೇಧಕವಾದೀತು.

**ಅನುವಾದ–** ಅದೂ ಅಲ್ಲದೆ, ನಿರ್ಗುಣವಾಕ್ಯವು ಎಲ್ಲಾ ಗುಣಗಳನ್ನೂ ನಿಷೇಧ ಮಾಡಿದರೆ, ನಿನಗೆ ಅಭಿಮತವಾದ ಜ್ಞಾನಾನಂದಾದಿಗುಣಗಳೂ ನಿಷೇಧಿಸಲ್ಪಡುತ್ತವೆ.

**ಭಾವವಿಲಾಸಿನೀ**– ನಿರ್ಗುಣಶಬ್ದೇನ ಗುಣಮಾತ್ರನಿಷೇಧನೇ ಮಾಯಾವಾದಿನಃ ಸ್ವಸ್ಯಾಪ್ಯಪೇಕ್ಷಿತ-ಜ್ಞಾನಾನನ್ದಾದಿಗುಣಾನಾಮಭಾವಪ್ರಸಂಗೇನ ಸ್ವಮತವಿರೋಧಃ ಸ್ಯಾದಿತ್ಯಾಹ– **ಕಿಂಚೇತಿ**।। ತೇ ನಿರ್ಗುಣತಾವಾಕ್ ನಿಷೇಧಿಕಾ ಸ್ಯಾದಿತ್ಯುತ್ತರೇಣಾನ್ವಯಃ ।। ೯೩೦ ।।

**ವಿವರಣೆ**– ಕರ್ತೃತ್ವ, ಭೋಕ್ತೃತ್ವ, ಜ್ಞಾನ, ಆನಂದ ಎಲ್ಲವನ್ನೂ ಶಾಸ್ತ್ರದಲ್ಲಿ ಗುಣಗಳೆಂದು ವ್ಯವಹರಿಸುತ್ತಾರೆ. ಅದ್ವೈತಿಗಳು ಬ್ರಹ್ಮನಲ್ಲಿ ಕರ್ತೃತ್ವ, ಭೋಕ್ತೃತ್ವರೂಪವಾದ ಗುಣಗಳನ್ನು ಒಪ್ಪುವುದಿಲ್ಲ. ಜ್ಞಾನಾನಂದಾದಿಗುಣಗಳನ್ನು ಒಪ್ಪುತ್ತಾರೆ. ಎಲ್ಲಾ ಗುಣಗಳನ್ನು ನಿಷೇಧಮಾಡಿದರೆ, ಕರ್ತೃತ್ವ, ಭೋಕ್ತೃತ್ವಗಳು ಹೇಗೆ ಬ್ರಹ್ಮನಿಂದ ನಿವೃತ್ತವಾಗುತ್ತವೆಯೋ ಹಾಗೆ ಜ್ಞಾನಾನಂದಾದಿಗಳೂ ಸಹ ನಿವೃತ್ತವಾಗುವುದರಿಂದ ಬ್ರಹ್ಮಭಾವಪ್ರಾಪ್ತಿಯು ಪುರುಷಾರ್ಥವೇ ಆಗುವುದಿಲ್ಲ ಎಂಬ ಪ್ರಸಂಗವು ಬರುತ್ತದೆ.

**ಯದ್ಯಭಿನ್ನಂ ಸುಖಂ ಜ್ಞಾನಂ ಗುಣಾಃ ಸರ್ವೇಽಪ್ಯಭೇದಿನಃ ।**
**ಸಂತು ನೇಹೇತಿವಾಕ್ಯಸ್ಯ ಭಯಾದ್ ಗರ್ಭಗತಾ ಹರೇಃ ।। ೯೩೧ ।।**

**ಅರ್ಥ**– ಯದಿ= ಒಂದು ಪಕ್ಷ, ಸುಖಂ ಜ್ಞಾನಂ= ಸುಖ ಮತ್ತು ಜ್ಞಾನಗಳು, ಅಭಿನ್ನಂ= ಅಭಿನ್ನವಾದವು ಎಂದು ಹೇಳಿದರೆ, ಸರ್ವೇ ಗುಣಾಃ= ಸರ್ವಜ್ಞತ್ವ, ಜಗತ್ಕರ್ತೃತ್ವ ಎಂಬ ಎಲ್ಲಾ ಗುಣಗಳು, ಅಭೇದಿನಃ= ಅಭಿನ್ನಗಳಾಗಲಿ. ನೇಹೇತಿ ವಾಕ್ಯಸ್ಯ ಭಯಾದ್= ಬ್ರಹ್ಮನಲ್ಲಿ ಯಾವುದೂ ಭಿನ್ನವಾಗಿಲ್ಲ ಎಂಬ ವಾಕ್ಯದ ಭಯದಿಂದ, ಸರ್ವೇ= ಎಲ್ಲಾ ಗುಣಗಳೂ, ಹರೇಃ= ಹರಿಯ, ಗರ್ಭಗತಾಃ ಸಂತು= ಗರ್ಭಗತವೇ ಆಗಲಿ (ಹರಿಯಿಂದ ಅಭಿನ್ನವೇ ಆಗಲಿ).

**ಅನುವಾದ**– ಸುಖಜ್ಞಾನ ಮೊದಲಾದ ಗುಣಗಳು ಅಭಿನ್ನವಾದುದರಿಂದ ಆ ಗುಣಗಳಿಗೆ ನಿಷೇಧವಿಲ್ಲ ಎಂದು ಹೇಳುವುದಾದರೆ, ಸರ್ವಜ್ಞತ್ವಾದಿಗುಣಗಳೂ ಸಹ ಹಾಗೆಯೇ ಅಭಿನ್ನವಾಗಲಿ. ಭಿನ್ನವಾದರೆ, ನಿಷೇಧವನ್ನು ಹೊಂದುವ ಭಯದಿಂದ ಅವೆಲ್ಲವೂ ಹರಿಯ ಗರ್ಭದೊಳಗೇ ಸೇರಲಿ.

**ಭಾವವಿಲಾಸಿನೀ**– ಜ್ಞಾನಾನನ್ದಾದೀನಾಮಭೇದೇನ ನ ತನ್ನಿಷೇಧಿಕಾ ನಿರ್ಗುಣವಾಗಿತ್ಯಾಶಂಕಾಂ ಪ್ರತಿಬನ್ದ್ಯಾ ಪರಿಹರತಿ– **ಯದೀತಿ** ।। 'ನೇಹ ನಾನಾ' ಇತಿ ವಾಕ್ಯಾದ್ ಭೀತಾ ಗರ್ಭಗತಾ ಭೂತ್ವಾಽಭೇದಿನಃ ಸನ್ತ್ವಿತಿ ಯೋಜನಾ । 'ನೇಹ ನಾನಾ' ಇತಿ ವಾಕ್ಯಬಲಾತ್ ಜ್ಞಾನಾನಂದಾ-ದಿವತ್ ಸಾರ್ವಜ್ಞಾದೀನಾಮಪ್ಯಭೇದಸಾಮ್ಯಾದಿತಿಭಾವಃ । ಭೀತೋಽಪಿ ಕಸ್ಯಚಿದುದರಂ ಪ್ರವಿಶತಿ ತಥಾ ಗುಣಾ ಅಪೀತಿ ಸಾಹಿತ್ಯಮುದ್ರಾ ।। ೯೩೧ ।।

**ವಿವರಣೆ**– ಅದ್ವೈತಿಗಳು ಬ್ರಹ್ಮನ ಜ್ಞಾನಾನಂದಾದಿಗುಣಗಳು ಅಭಿನ್ನವಾದ್ದರಿಂದ ಅವುಗಳಿಗೆ ನಿಷೇಧವಿಲ್ಲವೆಂದೂ, ಸರ್ವಜ್ಞತ್ವಾದಿಗುಣಗಳು ಭಿನ್ನವಾದುದರಿಂದ

ಅವುಗಳಿಗೆ ನಿಷೇಧವಿದೆ ಎಂದೂ ಹೇಳುತ್ತಾರೆ. ಈ ಶ್ಲೋಕದಲ್ಲಿ ಗ್ರಂಥಕಾರರು ಸರ್ವಜ್ಞತ್ವಾದಿಗುಣಗಳಿಗೂ ಅಭೇದವನ್ನೇ ಅಂಗೀಕಾರ ಮಾಡಿ. ಭೇದವನ್ನು ಅಂಗೀಕಾರ ಮಾಡಿದರೆ, 'ನೇಹ ನಾನಾऽಸ್ತಿ ಕಿಂಚನ' ಎಂಬ ವಾಕ್ಯದ ವಿರೋಧವು ಬರುವುದರಿಂದ ಅಭೇದವನ್ನೂ ಮತ್ತು ಗುಣತ್ವವನ್ನೂ ಅಂಗೀಕಾರ ಮಾಡಿ ಎಂದು ಹೇಳುತ್ತಾರೆ. ವಿರೋಧಿಯ ಭಯವಿರುವವನು ಒಂದು ಕಡೆ ಅಡಗಿಕೊಳ್ಳುವಂತೆ ಸರ್ವಜ್ಞತ್ವಾದಿ-ಗುಣಗಳೂ ಸಹ ಹರಿಯಿಂದ ಭಿನ್ನವಾದರೆ, 'ನೇಹ ನಾನಾऽಸ್ತಿ ಕಿಂಚನ' ಎಂಬ ಶ್ರುತಿಯ ವಿರೋಧಕ್ಕೆ ಹೆದರಿ, ಹರಿಯ ಒಳಗೇ ಸೇರಿಕೊಳ್ಳಲಿ ಎಂದರೆ, ಹರಿಯಿಂದ ಅಭಿನ್ನವಾಗಿರಲಿ ಎಂದು ತಾತ್ಪರ್ಯ.

**ಅನಯೈವ ಗುಣಾದೀನಾಮಭೇದೋಕ್ತ್ಯಾಸ್ತ್ವಭಿನ್ನತಾ ।**
**ಗುಣತ್ವೋಕ್ತಿಶತೈಶ್ಚೋಕ್ತ್ಯೈರ್ಗುಣತಾऽಪ್ಯಸ್ತು ಕಾ ಹತಿಃ (ಕ್ಷತಿಃ) ॥ ೯೩೨ ॥**

**ಅರ್ಥ–** ಅನಯೈವ= ನೇಹ ನಾನಾऽಸ್ತಿ ಎಂಬ ಶ್ರುತಿಯಿಂದಲೇ, ಗುಣಾದೀನಾಂ= ಬ್ರಹ್ಮನ ಗುಣಕ್ರಿಯಾದಿಗಳಿಗೆ, ಅಭೇದೋಕ್ತ್ಯಾ= ಅಭೇದವು ಹೇಳಲ್ಪಡುವುದರಿಂದ, ಅಭಿನ್ನತಾ ಅಸ್ತು= ಅಭೇದವು ಇರಲಿ, ಗುಣತ್ವೋಕ್ತಿಶತೈಶ್ಚ= ಮತ್ತು ಸರ್ವಜ್ಞತ್ವ, ಸರ್ವಕರ್ತೃತ್ವಾದಿ-ಗಳಿಗೆ ಗುಣತ್ವವನ್ನು ಹೇಳುವ ನೂರಾರು ವಾಕ್ಯಗಳ ಬಲದಿಂದ, ಗುಣತಾ ಅಪಿ ಅಸ್ತು= ಅವುಗಳಲ್ಲಿ ಗುಣತ್ವವು ಇರಲಿ, ಕಾ ಹತಿಃ (ಕ್ಷತಿಃ)= ಇದರಿಂದ ಏನು ಹಾನಿಯಾಗುತ್ತದೆ?

**ಅನುವಾದ– 'ನೇಹ ನಾನಾऽಸ್ತಿ ಕಿಂಚನ' ಎಂಬ ಶ್ರುತಿಯು ಗುಣಗಳಿಗೆ ಭೇದವನ್ನು ಹೇಳುವುದರಿಂದಲೇ, ಗುಣಾದಿಗಳಿಗೆ ಅಭೇದವನ್ನು ಅಂಗೀಕಾರ ಮಾಡಿ. ಸರ್ವಜ್ಞತ್ವಾದಿಗಳನ್ನು ಗುಣ ಎಂದು ಹೇಳುವ ನೂರಾರು ಶ್ರುತಿವಾಕ್ಯಗಳು ಇರುವುದರಿಂದ ಅವುಗಳಿಗೆ ಗುಣತ್ವವನ್ನೂ ಅಂಗೀಕಾರಮಾಡಿ. ಇದರಲ್ಲಿ ಯಾವ ಹಾನಿ ಇದೆ?**

**ಭಾವವಿಲಾಸಿನೀ– ಅಭಿನ್ನತ್ವೇ ಗುಣತಾ ನ ಸ್ಯಾದಿತ್ಯತ ಆಹ– ಅನಯೇತಿ ॥ ಅನಯಾ 'ನೇಹ ನಾನಾ' ಇತಿ ಶ್ರುತ್ಯಾ ಅಭಿನ್ನತಾ ಅಸ್ತ್ವಿತಿ ಸಂಬಂಧಃ । ಉಕ್ತೈಃ ಸರ್ವಧರ್ಮೇತ್ಯಾದಿನೋಕ್ತೈಃ ॥ ೯೩೨ ॥**

**ವಿವರಣೆ–** 'ನೇಹ ನಾನಾऽಸ್ತಿ ಕಿಂಚನ' ಎಂಬ ವಾಕ್ಯವು ಗುಣಗಳಿಗೆ ಅಭೇದವನ್ನು ನಿಷೇಧಮಾಡುತ್ತದೆ. ಹಿಂದೆ ಹೇಳಿದ ಸರ್ವಧರ್ಮಾ ಮೊದಲಾದ ಶ್ರುತಿಗಳು, ಗುಣವನ್ನು ಹೇಳುತ್ತವೆ. ಎರಡೂ ಶ್ರುತಿಗಳೂ ಪ್ರಮಾಣವಾದುದರಿಂದ ಗುಣಗಳಿಗೆ ಅಭೇದವನ್ನೂ ಮತ್ತು ಗುಣತ್ವವನ್ನೂ ಒಪ್ಪಿದರೆ, ಯಾವ ತೊಂದರೆಯೂ ಇಲ್ಲ ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ.

**ನಿರ್ಗುಣೋಕ್ತಿಶ್ಚ ಭಿನ್ನಾನಾಂ ಗುಣಾನಾಮಸ್ತು ಬಾಧಿಕಾ ॥ ೯೩೩ ॥**

**ಅರ್ಥ–** ನಿರ್ಗುಣೋಕ್ತಿಶ್ಚ= ನಿರ್ಗುಣ ಎಂಬ ಉಕ್ತಿಯಾದರೂ, ಭಿನ್ನಾನಾಂ ಗುಣಾನಾಂ= ಭಿನ್ನವಾದ ಗುಣಗಳಿಗೆ, ಬಾಧಿಕಾ ಅಸ್ತು= ಬಾಧಕವಾಗಲಿ.

**ಅನುವಾದ– ನಿರ್ಗುಣಶ್ರುತಿಯು ಭಿನ್ನವಾದ ಗುಣಗಳನ್ನು ಬಾಧಿಸಲಿ.**

**ಭಾವವಿಲಾಸಿನೀ– ಅಭಿನ್ನಭಗವದ್ಗುಣಸಿದ್ಧ್ಯಾ ಲಬ್ಧಂ ನಿರ್ಗುಣೋಕ್ತೇರರ್ಥಾಂತರಮಾಹ– ನಿರ್ಗುಣೋಕ್ತಿಶ್ಚೇತಿ** ॥ ೯೩೩ ॥

**ವಿವರಣೆ–** 'ನೇಹ ನಾನಾऽಸ್ತಿ ಕಿಂಚನ' ಎಂಬ ಶ್ರುತಿಯ ಬಲದಿಂದ ಗುಣಗಳಿಗೆ ಅಭೇದವನ್ನು ಒಪ್ಪಿದ ಮೇಲೆ ನಿರ್ಗುಣಶ್ರುತಿಗೆ ಹೊಸದಾದ ಒಂದು ಅರ್ಥವು ಮೂಡುತ್ತದೆ. ಅದೇನೆಂದರೆ, ದೇವರ ಗುಣಗಳೆಲ್ಲವೂ ದೇವರಿಂದ ಅಭಿನ್ನವಾಗಿರುವುದರಿಂದ ದೇವರಲ್ಲಿ ಭಿನ್ನವಾದ ಗುಣಗಳಿಲ್ಲ ಎಂಬುದು. ಗುಣಶಬ್ದಕ್ಕೆ ಭಿನ್ನಗುಣ ಎಂದು ಅರ್ಥವನ್ನು ತಿಳಿದು, ನಿರ್ಗುಣ ಶಬ್ದಕ್ಕೆ ಭಿನ್ನಗುಣಗಳಿಂದ ಶೂನ್ಯನಾದವನು ಎಂದು ಅರ್ಥವನ್ನು ಗ್ರಹಿಸಬಹುದು.

**ಭೇದಾಭೇದಪ್ರಮಾಣಾಭ್ಯಾಂ ಭೇದಾಭೇದೌ ಯಥಾ ತವ ।**
**ಘಟಾದೌ ಗುಣಕರ್ಮಾದೇಸ್ತಥಾऽತ್ರ ಸ್ತಾಂ ಗುಣೈಕತೇ ॥**
**ನಾಮುಖ್ಯಾ ತತ್ರ ಗುಣತಾ ಯಥಾऽತ್ರಾಪಿ ತಥೈವ ನ** ॥ ೯೩೪ ॥

**ಅರ್ಥ–** ಘಟಾದೌ= ಘಟ ಮೊದಲಾದವುಗಳಲ್ಲಿ, ಗುಣಕರ್ಮಾದೇಃ= ಗುಣ, ಕ್ರಿಯಾ ಮೊದಲಾದವುಗಳಿಗೆ, ಭೇದಾಭೇದಪ್ರಮಾಣಾಭ್ಯಾಂ= ಭೇದ ಮತ್ತು ಅಭೇದ-ಗಳೆರಡರಲ್ಲಿಯೂ ಪ್ರಮಾಣ ಇರುವುದರಿಂದ, ಯಥಾ= ಹೇಗೆ, ತವ= ನಿನಗೆ, ಭೇದಾಭೇದೌ= ಭೇದ ಮತ್ತು ಅಭೇದಗಳು ಸಿದ್ಧವಾಗುತ್ತವೆಯೋ, ತಥಾ= ಹಾಗೇ, ಅತ್ರ = ಈ ಬ್ರಹ್ಮನಲ್ಲಿ, ಗುಣೈಕತಾ= ಗುಣತ್ವ ಮತ್ತು ಏಕತ್ವಗಳು, ಸ್ತಾಂ= ಇರಲಿ, ತತ್ರ= ಘಟಾದಿ ವಿಷಯದಲ್ಲಿ, ಗುಣತಾ= ರೂಪಾದಿಗಳಿಗೆ ಗುಣತ್ವವು, ಯಥಾ= ಹೇಗೆ, ನಾಮುಖ್ಯಾ= ಅಮುಖ್ಯವಲ್ಲವೋ, ತಥೈವ= ಹಾಗೆಯೇ, ಅತ್ರಾಪಿ= ಈ ಬ್ರಹ್ಮನಲ್ಲಿಯೂ ಸಹ, ನ= ಗುಣತ್ವವು ಅಮುಖ್ಯವಲ್ಲ.

**ಅನುವಾದ– ಘಟಕ್ಕೂ ಮತ್ತು ಘಟರೂಪಕ್ರಿಯೆಗಳಿಗೂ ಭೇದಾಭೇದವಿಷಯದಲ್ಲಿ ಪ್ರಮಾಣವಿರುವುದರಿಂದ ಹೇಗೆ ನೀವು ಭೇದವನ್ನೂ ಮತ್ತು ಅಭೇದವನ್ನೂ ಒಪ್ಪುತ್ತೀರೋ ಹಾಗೆಯೇ ಸರ್ವಜ್ಞತ್ವಾದಿಗಳಿಗೆ ಬ್ರಹ್ಮನಿಂದ ಅಭೇದವನ್ನೂ ಮತ್ತು ಗುಣತ್ವವನ್ನೂ ಹೇಳುವ ಪ್ರಮಾಣವಿರುವುದರಿಂದ ಗುಣತ್ವವನ್ನೂ ಒಪ್ಪಿರಿ. ಹೊರತಾಗಿ ಗುಣತ್ವವು ಅಮುಖ್ಯ ಎಂದು ಹೇಳಬೇಡಿ. ಘಟರೂಪದಲ್ಲಿರುವ ಗುಣತ್ವವು ಹೇಗೆ ಅಮುಖ್ಯವಲ್ಲವೋ, ಹಾಗೆ ಬ್ರಹ್ಮನಲ್ಲಿರುವ ಸರ್ವಜ್ಞತ್ವಾದಿ-ಗುಣಗಳೂ ಸಹ ಅಮುಖ್ಯವಲ್ಲ. ಎರಡೂ ಮುಖ್ಯವಾದುವೇ.**

**ಭಾವವಿಲಾಸಿನೀ–** ಗುಣತ್ವಾಭೇದಯೋರ್ಮಧ್ಯೇ ಏಕಮುಪಚರಿತಮಸ್ತ್ವಿತ್ಯಾಶಂಕಾಂ ದೃಷ್ಟಾಂತಮುಖೇನ ಪರಿಹರತಿ– **ಭೇದಾಭೇದೇತಿ** ॥ ತಥಾ ಗುಣ್ಯೈಕತೇ ಭಗವದ್ಧರ್ಮಾಣಾಂ ಗುಣತಾ ಏಕತಾ ಚೇತಿ ಗುಣ್ಯೈಕತೇ ಸ್ತಾಮಿತಿ ಲೋಟಿ ಪ್ರಥಮಪುರುಷದ್ವಿವಚನಮ್ । ತತ್ರ ಘಟಾದೌ ರೂಪಾದೀನಾಮಭೇದೇಽಪಿ ಗುಣತಾ ಯಥಾಽಮುಖ್ಯಾ ನ ತಥಾಽತ್ರಾಪಿ ಭಗವದ್ಧರ್ಮೇಷ್ವಪಿ ಗುಣತಾಽಮುಖ್ಯಾ ನೇತ್ಯಾವೃತ್ತ್ಯಾ ಯೋಜನೀಯಮ್ ॥ ೯೩೪ ॥

**ವಿವರಣೆ–** ಗುಣ ಮತ್ತು ಅಭೇದಗಳ ಮಧ್ಯೆ ಒಂದು ಉಪಚರಿತ ಮತ್ತು ಇನ್ನೊಂದು ಮುಖ್ಯವಾದುದು ಎಂಬ ಶಂಕೆಯನ್ನು ದೃಷ್ಟಾಂತೋಕ್ತಿಪೂರ್ವಕವಾಗಿ ನಿರಾಕರಿಸುತ್ತಾರೆ. ಘಟಕ್ಕೂ ಮತ್ತು ಘಟರೂಪಕ್ಕೂ ಅದ್ವೈತಿಗಳು ಭೇದಾಭೇದವನ್ನು ಒಪ್ಪುತ್ತಾರೆ. ಭೇದಾಭೇದಗಳು ವಿರುದ್ಧವಾದರೂ ಪ್ರಮಾಣವಿದೆ ಎಂಬ ಕಾರಣದಿಂದ ಅದನ್ನು ಒಪ್ಪುತ್ತಾರೆ. ಭೇದಾಭೇದಗಳಲ್ಲಿ ಒಂದು ಮುಖ್ಯ, ಇನ್ನೊಂದು ಉಪಚರಿತ ಎಂದು ಹೇಳುವುದಿಲ್ಲ. ಹಾಗೆಯೇ, ಬ್ರಹ್ಮನ ಗುಣಗಳಿಗೆ ಅಭೇದವನ್ನೂ ಮತ್ತು ಗುಣತ್ವವನ್ನೂ ಹೇಳುವ ಪ್ರಮಾಣಗಳು ಇರುವ ಕಾರಣ ಅಭೇದವನ್ನೂ ಮತ್ತು ಗುಣತ್ವವನ್ನೂ ಅಂಗೀಕಾರಮಾಡಿ. ಹೊರತಾಗಿ ಅಭೇದವು ಮುಖ್ಯ, ಗುಣತ್ವವು ಉಪಚರಿತ ಎಂದು ಹೇಳಬೇಡಿ. ಘಟರೂಪದ ಸ್ಥಳದಲ್ಲಿ ರೂಪದಲ್ಲಿರುವ ಗುಣತ್ವವು ಹೇಗೆ ಉಪಚರಿತವಲ್ಲವೋ ಹಾಗೆಯೇ ಇಲ್ಲೂ ಉಪಚರಿತವಲ್ಲ.

**ನೇಹ ನಾನೇತಿ ಭೇದಸ್ಯ ಸಾಕ್ಷಾದತ್ರ ನಿಷೇಧನಾತ್ ।**
**ಗುಣತ್ವಘಟಕಂ ಚಾನ್ಯತ್ ಕಲ್ಪ್ಯಮಂಕುರಕರ್ತೃವತ್ ॥ ೯೩೫ ॥**

**ಅರ್ಥ–** ನೇಹ ನಾನೇತಿ= 'ನೇಹ ನಾನಾ' ಎಂಬ ವಾಕ್ಯವು, ಅತ್ರ= ಈ ಬ್ರಹ್ಮನಲ್ಲಿ, ಭೇದಸ್ಯ= ಬ್ರಹ್ಮನಿಗೂ ಮತ್ತು ಗುಣಗಳಿಗೂ ಭೇದವನ್ನು, ಸಾಕ್ಷಾದ್ ನಿಷೇಧನಾತ್= ಸಾಕ್ಷಾತ್ತಾಗಿ ನಿಷೇಧ ಮಾಡುವುದರಿಂದ, ಗುಣತ್ವಘಟಕಂ= ಗುಣತ್ವವನ್ನು ನಿರ್ವಾಹ ಮಾಡುವ, ಅನ್ಯತ್= ಇನ್ನೊಂದು ವಸ್ತುವನ್ನು, ಅಂಕುರಕರ್ತೃವತ್= ಅಂಕುರಕರ್ತೃವನ್ನು ಕಲ್ಪನೆ ಮಾಡುವಂತೆ, ಕಲ್ಪ್ಯಂ= ಕಲ್ಪನೆ ಮಾಡಬೇಕು.

**ಅನುವಾದ–** 'ನೇಹ ನಾನಾ' ಎಂಬ ವಾಕ್ಯವು ಇಲ್ಲಿ ಸಾಕ್ಷಾತ್ತಾಗಿ ಭೇದವನ್ನು ನಿಷೇಧಮಾಡುವುದರಿಂದ ಕ್ಷಿತ್ಯಾದಿಸ್ಥಳದಲ್ಲಿ ಒಬ್ಬ ಹೊಸ ಕರ್ತೃವನ್ನು ಕಲ್ಪನೆ ಮಾಡಿದಂತೆ, ಇಲ್ಲಿಯೂ ಗುಣತ್ವವನ್ನು ನಿರ್ವಾಹ ಮಾಡಲು ಒಂದು ಹೊಸ ಪದಾರ್ಥವನ್ನು ಕಲ್ಪನೆ ಮಾಡಿರಿ.

**ಭಾವವಿಲಾಸಿನೀ–** ನನು ಘಟರೂಪಾದೌ ಗುಣತ್ವಘಟಕೋ ಭೇದೋಽಪ್ಯಸ್ತಿ ಭಗವದ್ಗುಣೇಷು ಕಿಂ ಘಟಕಮಿತ್ಯತ ಆಹ– **ನೇಹೇತಿ** ॥ ಅತ್ರ ಭಗವದ್ಧರ್ಮೇಷು । ಅನ್ಯದ್ ಭೇದಾದನ್ಯತ್ । ಘಟರೂಪಾದೌ ಪ್ರಮಾಣಸಿದ್ಧಗುಣಗುಣಿಭಾವಾನ್ಯಥಾನುಪಪತ್ತ್ಯಾ ಕಲ್ಪ್ಯೋ ಭೇದಃ ನತು

**ಘಟಪಟಯೋರಿವ ಸ್ವರಸಸುನ್ದರಃ । ಇಹ ತು ಭೇದಸ್ಯ ಶ್ರುತಿನಿಷಿದ್ಧತ್ವಾತ್ ತತ್ಪ್ರತಿನಿಧಿರನ್ಯಃ ಕಲ್ಪನೀಯಃ, ನತು ಕಲ್ಪಕಾದರ್ಶನಾತ್ ಪ್ರಮಾಣಸಿದ್ಧವ್ಯವಹಾರಾಪಲಾಪ ಇತಿ ಭಾವಃ ॥೯೩೫॥**

**ವಿವರಣೆ–** ಘಟರೂಪದ ಸ್ಥಳದಲ್ಲಿಯಾದರೆ, ಘಟಕ್ಕೂ ಮತ್ತು ರೂಪಕ್ಕೂ ಭೇದವು ಇರುವುದರಿಂದ ಅಲ್ಲಿ ಗುಣತ್ವವನ್ನು ಕೂಡಿಸಬಹುದು. ಬ್ರಹ್ಮನಿಗೂ ಮತ್ತು ಅವನ ಸರ್ವಜ್ಞತ್ವಾದಿಗಳಿಗೂ ಭೇದವಿಲ್ಲದಿರುವುದರಿಂದ ಇಲ್ಲಿ ಗುಣತ್ವವನ್ನು ಕೂಡಿಸುವುದು ಹೇಗೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಭೇದವನ್ನು ನಿಷೇಧಮಾಡದಿದ್ದರೆ ಇಲ್ಲಿಯೂ ಭೇದವನ್ನು ಹೇಳಬಹುದಾಗಿದ್ದಿತು. ಆದರೆ, ಶ್ರುತಿಯು ಭೇದವನ್ನು ಸಾಕ್ಷಾತ್ತಾಗಿ ನಿಷೇಧಮಾಡುವುದರಿಂದ ಭೇದವು ಗುಣತ್ವನಿರ್ವಾಹಕವಾಗುವುದಿಲ್ಲ. ಆದ್ದರಿಂದ ಭೇದದ ಸ್ಥಾನದಲ್ಲಿ ಭೇದದ ಕಾರ್ಯವನ್ನು ಮಾಡುವ ಇನ್ನೊಂದು ಪದಾರ್ಥವನ್ನು ಅಂಗೀಕರಿಸಬೇಕು. ಅಂತಹ ಪದಾರ್ಥವೇ ನಮ್ಮ ಸಿದ್ಧಾಂತದಲ್ಲಿ ಪ್ರತಿಪಾದಿಸಲ್ಪಡುವ ವಿಶೇಷವೆಂಬ ವಸ್ತುವಿನ ಶಕ್ತಿ ಎಂದು ಅಭಿಪ್ರಾಯ.

**ನಹ್ಯಬಾಧಿತಕಾರ್ಯಸ್ಯ ದೃಷ್ಟಹೇತೋರಭಾವತಃ ।**
**ಅಭಾವಂ ಮನ್ಯ(ನ್ವ)ತೇ ಲೋಕಃ ಕಿಂತ್ವನ್ಯಮನುಮನ್ಯತೇ ॥ ೯೩೬ ॥**

**ಅರ್ಥ–** ಅಬಾಧಿತಕಾರ್ಯಸ್ಯ= ಅಬಾಧಿತವಾದ ಕಾರ್ಯಕ್ಕೆ, ದೃಷ್ಟಹೇತೋಃ= ನಮಗೆ ಗೋಚರಿಸುವ ಕಾರಣವು, ಅಭಾವತಃ= ಇಲ್ಲವಾದ್ದರಿಂದ, ಲೋಕಃ= ಲೋಕವು, ಅಭಾವಂ= ಕಾರಣವೇ ಇಲ್ಲವೆಂದು, ನಹಿ ಮನ್ಯತೇ= ತಿಳಿಯುವುದಿಲ್ಲ. ಕಿಂತು= ಆದರೆ, ಅನ್ಯಂ= ನಮಗೆ ತಿಳಿಯದ ಬೇರೆ ಕಾರಣವಿದೆ ಎಂದು, ಅನುಮನ್ಯತೇ= ಅನುಮೋದಿಸುತ್ತದೆ.

**ಅನುವಾದ–** ಅಬಾಧಿತವಾದ ಒಂದು ಕಾರ್ಯಕ್ಕೆ ನಮಗೆ ಯಾವ ಕಾರಣವೂ ಕಾಣಿಸುತ್ತಿಲ್ಲ ಎಂಬ ಕಾರಣದಿಂದಾಗಿ ಲೋಕದಲ್ಲಿ ಅದನ್ನು ಯಾರೂ ಕಾರ್ಯವೇ ಅಲ್ಲ ಎಂದು ಅಪಲಾಪ ಮಾಡುವುದಿಲ್ಲ. ಆದರೆ, ನಮಗೆ ಗೊತ್ತಾಗದಿರುವ ಇನ್ನೊಂದು ಕಾರಣವಿದೆ ಎಂದು ಕಲ್ಪನೆ ಮಾಡುತ್ತಾರೆ.

**ಭಾವವಿಲಾಸಿನೀ– ಉಕ್ತಮೇವೋಪಪಾದಯತಿ– ನಹೀತಿ ॥ ಅಬಾಧಿತಕಾರ್ಯಸ್ಯ ಸಸ್ಯಾದೇಃ ದೃಷ್ಟಹೇತೋಃ ಪ್ರತ್ಯಕ್ಷಸಿದ್ಧಕರ್ತುಃ ಅನ್ಯಮಲೌಕಿಕಂ ಕರ್ತಾರಮ್ ॥ ೯೩೬ ॥**

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಅರ್ಥವನ್ನೇ ಉಪಪಾದನೆ ಮಾಡುತ್ತಾರೆ. ರೂಪಾದಿಗಳ ಸ್ಥಳದಲ್ಲಿ ಭೇದವು ರೂಪಾದಿಗಳ ಗುಣತ್ವವನ್ನು ನಿರ್ವಾಹ ಮಾಡುತ್ತದೆ. ಭಗವದ್ಗುಣಗಳ ಸ್ಥಳದಲ್ಲಿ ಭೇದವಿಲ್ಲ. ಆದ್ದರಿಂದ ಭೇದವ್ಯವಹಾರವನ್ನು ನಿರ್ವಾಹಮಾಡುವ ಇನ್ನೊಂದು ಪದಾರ್ಥವನ್ನು ಕಲ್ಪನೆ ಮಾಡಬೇಕೇ ಹೊರತು ಪ್ರಾಮಾಣಿಕವಾದ ಗುಣವ್ಯವಹಾರವನ್ನೇ ನಿಷೇಧ ಮಾಡಬಾರದು. ಕ್ಷಿತ್ಯಂಕುರಾದಿ-

ಸ್ಥಳದಲ್ಲಿ ಅಲೌಕಿಕನಾದ ಕರ್ತೃವನ್ನು ಅಂಗೀಕಾರ ಮಾಡಿದಂತೆ ಇಲ್ಲಿಯೂ ಸಹ ಭೇದಪ್ರತಿನಿಧಿಯಾದ ವಿಶೇಷವನ್ನು ಅಂಗೀಕಾರಮಾಡಬೇಕು.

ನ ಶಕ್ಯಂತೇಽನುಸಂಖ್ಯಾತುಮನಂತತ್ವಾನ್ಮಯಾಽಪಿ ಹಿ ।
ಇತೀರಯನ್ ಗುಣಾದೀನಾಮಾನಂತ್ಯಂ ಸ್ವಗುಣಾದಿಷು ॥
ಗುಣಾದಿತ್ವಂ ಚ ಕಿಂ ತತ್ವಮುತ್ಸಿಸೃಕ್ಷತಿ ಸ ಪ್ರಭುಃ ॥ ೯೩೭ ॥

**ಅರ್ಥ–** ಅನಂತತ್ವಾತ್= ಅನಂತಗಳಾದ ಕಾರಣ, ಮಯಾಪಿ= ನನ್ನಿಂದಲೂ ಕೂಡ, ಅನುಸಂಖ್ಯಾತುಂ= ಪರಿಗಣನೆ ಮಾಡಲು, ನ ಶಕ್ಯಂತೇ= ಸಾಧ್ಯವಾಗುವುದಿಲ್ಲ, ಇತಿ= ಹೀಗೆ, ಈರಯನ್= ಹೇಳುವ, ಸ ಪ್ರಭುಃ= ಆ ಪ್ರಭುವು, ಗುಣಾದೀನಾಂ= ಗುಣಾದಿಗಳಿಗೆ, ಆನಂತ್ಯಂ= ಅನಂತತ್ವವನ್ನು, ಸ್ವಗುಣಾದಿಷು= ತನ್ನ ಗುಣಾದಿಗಳಲ್ಲಿ, ಗುಣಾದಿತ್ವಂ ಚ= ಗುಣತ್ವ ಕ್ರಿಯಾತ್ವ ಮೊದಲಾದವುಗಳನ್ನೂ ಸಹ, ತತ್ತ್ವಂ= ಈ ತತ್ತ್ವವನ್ನು, ಉತ್ಸಿಸೃಕ್ಷತಿ ಕಿಂ= ಪರಿತ್ಯಾಗ ಮಾಡಲು ಬಯಸುವನೇನು?

**ಅನುವಾದ–** ಅನಂತವಾದ ಕಾರಣದಿಂದ ನನ್ನ ಗುಣಗಳನ್ನು ನಾನು ಎಣಿಸಲು ಸಾಧ್ಯವಿಲ್ಲ ಎಂದು ಹೇಳುವ ಭಗವಂತನು ತನ್ನ ಗುಣಗಳಲ್ಲಿ ಗುಣತ್ವವನ್ನಾಗಲೀ ಅಥವಾ ಅನಂತತ್ವವನ್ನಾಗಲೀ, ಪರಿತ್ಯಾಗ ಮಾಡುತ್ತಾನೆಯೇ?

**ಭಾವವಿಲಾಸಿನೀ–** ಭಗವತೋಽನುಪಚರಿತಸಾರ್ವಜ್ಞಾದಿಗುಣಾನ್ ಅನುಪಚರಿತಂ ಗುಣಾನನ್ತ್ಯಂ ಚ ಸಯುಕ್ತಿಕಂ ಪ್ರಸಾಧಯದ್ ಭಾಗವತಸ್ಥಭಗವದ್ವಚನಮುದಾಹೃತ್ಯ ತದುಪಾತ್ತಯುಕ್ತಿಂ ಚ ದ್ರಢಯತಿ– ನ ಶಕ್ಯತ ಇತ್ಯಾದಿನಾ ॥ ತತ್ತ್ವಂ ಉತ್ಸಿಸೃಕ್ಷತಿ ಕಿಮ್? ಇತಿ ಸಂಬಂಧಃ ॥ ೯೩೭ ॥

**ವಿವರಣೆ–** 'ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ' ಎಂಬ ಭಾಗವತಶ್ಲೋಕದಲ್ಲಿ 'ಅನಂತಗುಣೇ' ಎಂಬ ಶಬ್ದದಿಂದ ಅನಂತಗುಣವುಳ್ಳವನು ಎಂಬ ಅರ್ಥವನ್ನೂ, 'ಗುಣತೋಽನಂತೇ' ಎಂಬ ಶಬ್ದದಿಂದ ಒಂದೊಂದು ಗುಣವೂ ಅನಂತವೆಂದೂ, ಅನಂತಶಬ್ದದಿಂದ ಆ ಕಾರಣದಿಂದಲೇ ತಾನು ಅನಂತ ಶಬ್ದವಾಚ್ಯನೆಂದು ಭಗವಂತನೇ ಹೇಳಿಕೊಂಡಿದ್ದಾನೆ. ಭಗವಂತನ ಗುಣಗಳು ಉಪಚರಿತವೆಂದಾದರೆ, ಅವನ ಗುಣಗಳನ್ನೂ ಮತ್ತು ಆ ಗುಣಗಳಲ್ಲಿರುವ ಅನಂತತ್ವವನ್ನೂ ತ್ಯಾಗ ಮಾಡಬೇಕಾದೀತು. ಹಾಗೆ ಮಾಡಿದರೆ, ಈ ಶ್ಲೋಕದಲ್ಲಿ ಹೇಳಿರುವ ಮೂರು ಅನಂತಶಬ್ದಗಳೂ ವ್ಯರ್ಥವಾಗುತ್ತವೆ. ಆದ್ದರಿಂದ ಗುಣವನ್ನು ತ್ಯಾಗಮಾಡುವುದು ಎಂದಿಗೂ ಈ ವಾಕ್ಯವನ್ನು ಹೇಳುವ ಭಗವಂತನಿಗೆ ಸಮ್ಮತವಾದುದಲ್ಲ.

ಪಕ್ಷೀಕೃತ್ಯ ಗುಣಾನ್ ಹೇತೂಕೃತ್ಯಾನಂತತ್ವಮಂಜಸಾ ।
ಅನಂತಜೀವಸಂಸ್ಥಾತ್ಮತನುವತ್ ಸಂಖ್ಯಯೋಜ್ಝಿತಿಮ್ ॥ ೯೩೮ ॥

ಪ್ರಸಾಧಯನ್ ಪ್ರಭುಃ ಪಕ್ಷಾಸಿದ್ಧಿಂ ಹೇತೋರಸಿದ್ಧತಾಮ್ ।
ಯತೋ ನ ಸಹತೇ ತಸ್ಮಾದನಂತತ್ವಂ ಗುಣಾಶ್ಚ ತೇ ॥ ೯೩೯ ॥

**ಅರ್ಥ–** ಗುಣಾನ್= ಗುಣಗಳನ್ನು, ಪಕ್ಷೀಕೃತ್ಯ= ಪಕ್ಷವನ್ನಾಗಿ ಮಾಡಿ, ಅನಂತತ್ವಂ= ಅನಂತತ್ವವನ್ನು, ಅಂಜಸಾ= ಚೆನ್ನಾಗಿ, ಹೇತೂಕೃತ್ಯ= ಹೇತುವನ್ನಾಗಿ ಮಾಡಿ, ಅನಂತಜೀವ-ಸಂಸ್ಥಾತ್ಮತನುವತ್= ಅನಂತಜೀವರಲ್ಲಿರುವ ತನ್ನ ರೂಪಗಳಂತೆ, ಸಂಖ್ಯಯೋಜ್ಝಿತಿಮ್= ಸಂಖ್ಯಾಶೂನ್ಯತ್ವವನ್ನು, ಪ್ರಸಾಧಯನ್= ಸಾಧಿಸುವ, ಪ್ರಭುಃ= ಪ್ರಭುವಾದ ಕೃಷ್ಣನು, ಯತಃ= ಯಾವ ಕಾರಣದಿಂದ, ಪಕ್ಷಾಸಿದ್ಧಿಂ= ಆಶ್ರಯಾಸಿದ್ಧಿಯನ್ನು, ಹೇತೋಃ= ಹೇತುವಿನ, ಅಸಿದ್ಧತಾಮ್= ಸ್ವರೂಪಾಸಿದ್ಧಿಯನ್ನು, ನ ಸಹತೇ= ಸಹಿಸುವುದಿಲ್ಲವೋ, ತಸ್ಮಾತ್= ಆ ಕಾರಣದಿಂದ, ಅನಂತತ್ವಂ= ಅವು ಅನಂತವಾಗಿವೆ. ತೇ= ಅವು, ಗುಣಾಶ್ಚ= ಗುಣಗಳೂ ಆಗಿವೆ.

**ಅನುವಾದ–** ತನ್ನ ಗುಣವನ್ನು ಪಕ್ಷವನ್ನಾಗಿ ಮಾಡಿ, ಅನಂತತ್ವವನ್ನು ಹೇತುವನ್ನಾಗಿ ಮಾಡಿ, ಅನಂತಜೀವರಲ್ಲಿರುವ ತನ್ನ ರೂಪಗಳನ್ನು ದೃಷ್ಟಾಂತವನ್ನು ಮಾಡಿ, ಸಂಖ್ಯಾಭಾವವನ್ನು ಸಾಧನೆಮಾಡುವ ಪ್ರಭುವಾದ ಹರಿಯು ತನ್ನ ಈ ಅನುಮಾನಕ್ಕೆ ಪಕ್ಷಾಸಿದ್ಧಿದೋಷವನ್ನಾಗಲೀ ಅಥವಾ ಹೇತ್ವಸಿದ್ಧಿದೋಷವನ್ನಾಗಲೀ ಸಹಿಸು-ವುದಿಲ್ಲವಾದ ಕಾರಣ ಸರ್ವಜ್ಞತ್ವಾದಿಗಳಲ್ಲಿ ಗುಣತ್ವವೂ ಮತ್ತು ಅನಂತತ್ವವೂ ಸಿದ್ಧವಾಗುತ್ತವೆ.

**ಭಾವವಿಲಾಸಿನೀ–** ಕುತಃ ಇತ್ಯತ ಆಹ– **ಪಕ್ಷೀಕೃತೇತಿ** ॥ ಗುಣಾನ್ ಪಕ್ಷೀಕೃತ್ಯ ಅನಂತತ್ವಂ ಹೇತೂಕೃತ್ಯೇತಿ ಸಂಬಂಧಃ। ಅತ್ರಾಸ್ಮದುಕ್ತದೃಷ್ಟಾನ್ತೋ 'ಮಯ್ಯನಂತಗುಣೇಽನಂತೇ' ಇತಿ ತದುಕ್ತ-ಗ್ರನ್ಥಸೂಚಿತ ಏವೇತಿ ದ್ರಷ್ಟವ್ಯಮ್ । ತಸ್ಮಾದ್ಧೇತೂಕರಣಾತ್ ಪಕ್ಷೀಕರಣಾಚ್ಚ ॥೯೩೮-೯೩೯॥

**ವಿವರಣೆ–** 'ನ ಶಕ್ಯಂತೇಽನುಸಂಖ್ಯಾತುಮನಂತತ್ವಾನ್ ಮಯಾಽಪಿ ಹಿ' ಎಂಬ ಶ್ಲೋಕದಲ್ಲಿ ಒಂದು ಅನುಮಾನಪ್ರಯೋಗವು ಅಭಿಪ್ರೇತವಾಗಿದೆ. 'ಮಮ ಗುಣಾಃ, ನ ಸಂಖ್ಯಾತುಂ ಶಕ್ಯಾಃ, ಅನಂತತ್ವಾತ್, ಅನಂತಜೀವಗತ ಮದ್ರೂಪವತ್' ಎಂಬುದು ಆ ಅನುಮಾನ. ನನ್ನ ಗುಣಗಳು ಎಣಿಸಲ್ಪಡಲು ಸಾಧ್ಯವಿಲ್ಲ. ಅನಂತವಾದ್ದರಿಂದ ಅನಂತಜೀವರಲ್ಲಿರುವ ನನ್ನ ರೂಪಗಳಂತೆ, ಎಂದು ಈ ಅನುಮಾನವಷ್ಟೇ. ಈಗ ದೇವರಿಗೆ ಗುಣಗಳನ್ನೇ ಅಂಗೀಕಾರಮಾಡದಿದ್ದರೆ, ಈ ಅನುಮಾನಕ್ಕೆ ಪಕ್ಷಾಸಿದ್ಧಿ ಎಂಬ ದೋಷವು ಬರುತ್ತದೆ. ದೇವರ ಗುಣಗಳಿಗೆ ಅನಂತತ್ವವನ್ನು ಅಂಗೀಕಾರ ಮಾಡದಿದ್ದರೆ

ಹೇತುವಿಗೆ ಅಸಿದ್ಧಿ ಎಂಬ ದೋಷವು ಬರುತ್ತದೆ. ದೇವರೇ ಗುಣವನ್ನು ಪಕ್ಷವನ್ನಾಗಿ ಮಾಡಿ ಅನಂತತ್ವವನ್ನು ಹೇತುವನ್ನಾಗಿ ಮಾಡಿರುವುದರಿಂದ ದೇವರು ಪ್ರಯೋಗ-ಮಾಡುವ ಅನುಮಾನದಲ್ಲಿ ಪಕ್ಷಾಸಿದ್ಧಿರೂಪವಾದ ದೋಷವಾಗಲೀ ಹೇತ್ವಸಿದ್ಧಿರೂಪ ದೋಷವಾಗಲೀ ಬರಲು ಸಾಧ್ಯವಿಲ್ಲ. ಆದ್ದರಿಂದ ದೇವರಲ್ಲಿ ಗುಣಗಳು ಇವೆ ಎಂದೂ ಆ ಗುಣಗಳಲ್ಲಿ ಸಂಖ್ಯೆಯಿಲ್ಲದ ಕಾರಣ ಅವು ಅನಂತವೆಂದೂ ಸಿದ್ಧವಾಗುತ್ತವೆ.

**ನೋಪಚಾರಾದಿತಃ ಸಿದ್ಧಾಸ್ತತ್ಸರ್ವಂ ಚ ಸ ಸರ್ವದಾ ।**
**ಆತ್ಮಶಕ್ತಿವಿಶೇಷೇಣ ಸರ್ವಥಾ ನಿರ್ವಹೇತ್ ಪರಮ್ ॥ ೯೪೦ ॥**

**ಅರ್ಥ–** ಉಪಚಾರಾದಿತಃ= ಗೌಣವಾಗಿ, ಸಿದ್ಧಾಃ ನ= ಅನಂತತ್ವ ಮತ್ತು ಗುಣತ್ವಗಳು ಸಿದ್ಧವಾಗಿಲ್ಲ, ಪರಂ= ಆದರೆ, ತತ್ಸರ್ವಂ= ಅಭೇದ, ಗುಣತ್ವ ಎಲ್ಲವನ್ನೂ, ಸರ್ವದಾ= ಯಾವಾಗಲೂ, ಪರಂ= ಕೇವಲ, ಆತ್ಮಶಕ್ತಿವಿಶೇಷೇಣ= ತನ್ನ ಸಾಮರ್ಥ್ಯ ವಿಶೇಷದಿಂದ, ಸರ್ವಥಾ= ಎಲ್ಲ ರೀತಿಯಿಂದಲೂ, ನಿರ್ವಹೇತ್= ನಿರ್ವಾಹ ಮಾಡುತ್ತಾನೆ.

**ಅನುವಾದ–** ಸರ್ವಜ್ಞತ್ವಾದಿಗುಣಗಳು ಉಪಚಾರದಿಂದ ಸಿದ್ಧವಾಗುವುದಿಲ್ಲ. ಆದ್ದರಿಂದ ಅವೆಲ್ಲವನ್ನೂ ಸಮರ್ಥನಾದ ಬ್ರಹ್ಮನು ತನ್ನ ಶಕ್ತಿವಿಶೇಷದಿಂದ ಸರ್ವ-ಪ್ರಕಾರದಲ್ಲಿಯೂ ನಿರ್ವಾಹ ಮಾಡುತ್ತಾನೆ.

**ಭಾವವಿಲಾಸಿನೀ–** ನೋಪಚಾರಾದಿತ ಇತ್ಯತ್ರಾದಿಪದೇನ ಭ್ರಾನ್ತಿರ್ಗ್ರಾಹ್ಯಾ । ಉಪಚಾರಾದಿ-ಸಿದ್ಧಸ್ಯಾಪಿ ಹೇತೂಕರಣೇ ಸಿಂಹತ್ವೇನ ದೇವದತ್ತಸ್ಯಾಪಿ ಪಶುತ್ವಸಾಧನಂ ಬಾಷ್ಪಾರೋಪಿತ-ಧೂಮೇನ ವಹ್ನಿಮತ್ತ್ವಸಾಧನಂ ಚ ಪ್ರಸಜ್ಯೇತೇತಿ ಭಾವಃ। ಪ್ರಾಕ್ ಸಾಮಾನ್ಯೇನೋಕ್ತಂ ಘಟಕಂ ವಿಶಿಷ್ಯಾಹ– ತತ್ಸರ್ವಮಿತಿ ॥ ತತ್ಸರ್ವಂ ಶ್ರೌತಂ ಗುಣಗುಣ್ಯೈಕ್ಯಂ ಗುಣಗುಣಭಾವಂ ಗುಣಾನನ್ತ್ಯಂ ಚ । ಆತ್ಮಶಕ್ತಿವಿಶೇಷೇಣೇತಿ ಶಕ್ತಿವಿಶೇಷ ಏವ ಭೇದಪ್ರತಿನಿಧಿರ್ವಿಶೇಷಃ । ಸ ಏವ ಭೇದಾಭಾವ-ಸ್ಥಲೇ ಭೇದಕಾರ್ಯನಿರ್ವಾಹಕ ಇತ್ಯುಕ್ತಂ ಭವತಿ ॥ ೯೪೦ ॥

**ವಿವರಣೆ–** ಸರ್ವಜ್ಞತ್ವಾದಿಗುಣಗಳು ಉಪಚಾರದಿಂದಲಾಗಲೀ ಅಥವಾ ಭ್ರಾಂತಿಯಿಂದಲಾಗಲೀ ಸಿದ್ಧವಾದವುಗಳಲ್ಲವೆಂದು ಈ ಅನುಮಾನಪ್ರಯೋಗದಿಂದ ತಿಳಿದುಬರುತ್ತದೆ. ಉಪಚಾರದಿಂದ ಸಿದ್ಧವಾದ ಹೇತುವಿನಿಂದ ಸಾಧ್ಯವನ್ನು ಸಾಧಿಸಲು ಬರುವುದಿಲ್ಲ. ಹಾಗಲ್ಲದಿದ್ದರೆ, ಚೈತ್ರನು ಪಶುವಾಗಿದ್ದಾನೆ, ಸಿಂಹನಾಗಿರುವುದರಿಂದ ಗೋವಿನಂತೆ ಎಂದು ಅನುಮಾನಪ್ರಯೋಗವನ್ನು ಮಾಡಬಹುದು. ಏಕೆಂದರೆ, ಧೈರ್ಯಾದಿಗುಣಗಳಿಂದ 'ಚೈತ್ರಃ ಸಿಂಹಃ' ಎಂದು ಉಪಚರಿತ ಸಿಂಹತ್ವದ ಪ್ರಯೋಗವು ಚೈತ್ರನಲ್ಲಿ ಇದೆ. ಹಾಗೆಯೇ, ಭ್ರಾಂತಿಸಿದ್ಧವಾದ ಹೇತುವಿನಿಂದಲೂ ಸಾಧ್ಯವನ್ನು ಸಾಧನೆ ಮಾಡಲು ಬರುವುದಿಲ್ಲ. ಹಾಗಿಲ್ಲದಿದ್ದರೆ, ಯಾವನು ಮಂಜನ್ನು ಧೂಮವೆಂದು ತಿಳಿದುಕೊಳ್ಳುತ್ತಾನೆಯೋ ಅಂತಹವನಿಗೆ ಭ್ರಾಂತಿಸಿದ್ಧವಾದ ಧೂಮವಿರುವುದರಿಂದ

ಹ್ರದವು ವಹ್ನಿಯುತವಾಗಿದೆ ಧೂಮವಿರುವುದರಿಂದ ಎಂಬ ಪ್ರಯೋಗವು ಸಾಧುವಾಗಿ ವಹ್ನಿಯು ಸಿದ್ಧವಾಗಬೇಕಾಗುತ್ತದೆ. ಆದ್ದರಿಂದ ಇಲ್ಲಿ ಹೇತುವನ್ನಾಗಿ ಮಾಡಿದ ಅನಂತತ್ವವು ಉಪಚರಿತವೂ ಅಲ್ಲ, ಭ್ರಾಂತಿಸಿದ್ಧವೂ ಅಲ್ಲ. ಸ್ವಾಭಾವಿಕವಾದ ಅನಂತತ್ವವು ಭೇದವಿಲ್ಲದಿರುವ ಕಾರಣ ವಸ್ತುಸ್ವಭಾವಶಕ್ತಿಯಾದ ವಿಶೇಷದಿಂದ ನಿರ್ವಹಿಸಲ್ಪಡುತ್ತದೆ.

ಯತಃ ಸೂತ್ರಕೃದಪ್ಯಾಹ ವಿಚಿತ್ರಾಂ ಶಕ್ತಿಮಾತ್ಮನಿ ।
ಧನೀ ವಕ್ತಿ ಧನಾನಂತ್ಯಮನುವಕ್ತ್ಯನುಯಾಯ್ಯಪಿ ॥ ೯೪೧ ॥

ಪ್ರತಿವಕ್ತಿ ಕಥಂ ಯಸ್ತೌ ನ ಶೃಣೋತಿ ನ ಪಶ್ಯತಿ ।
ಅತೋ ವಿಷ್ಣೋರ್ಗುಣಾನಂತ್ಯಮಭೂತ್ ಸರ್ವಮನೋರಮಮ್ ॥ ೯೪೨ ॥

**ಅರ್ಥ–** ಯತಃ= ಏಕೆಂದರೆ, ಸೂತ್ರಕೃದಪಿ= ಬ್ರಹ್ಮಸೂತ್ರಕಾರರೂ ಸಹ, ವಿಚಿತ್ರಾಂ ಶಕ್ತಿಂ= ವಿಚಿತ್ರ ಶಕ್ತಿಯನ್ನು ಬ್ರಹ್ಮನಲ್ಲಿ, ಆಹ= ಹೇಳಿದ್ದಾರೆ, ಧನೀ= ಧನಿಕನಾದವನು, ಧನಾನಂತ್ಯಂ= ತನ್ನ ಧನದ ಆನಂತ್ಯವನ್ನು, ವಕ್ತಿ= ಹೇಳುತ್ತಾನೆ, ಅನುಯಾಯ್ಯಪಿ= ಅವನನ್ನು ಹಿಂಬಾಲಿಸುವವನೂ ಕೂಡ, ಅನುವಕ್ತಿ= ಹಾಗೆಯೇ ಹೇಳುತ್ತಾನೆ. ಯಃ= ಯಾವನು, ತೌ= ಆ ಇಬ್ಬರನ್ನೂ, ನ ಪಶ್ಯತಿ= ನೋಡುವುದಿಲ್ಲವೋ, ನ ಶೃಣೋತಿ= ಕೇಳುವುದಿಲ್ಲವೋ, ಅವನು, ಕಥಂ= ಹೇಗೆ, ಪ್ರತಿವಕ್ತಿ= ನಿರಾಕರಿಸುತ್ತಾನೆ, ಅತಃ= ಆ ಕಾರಣದಿಂದ, ವಿಷ್ಣೋಃ= ವಿಷ್ಣುವಿನ, ಗುಣಾನಂತ್ಯಂ= ಅನಂತಗುಣತ್ವವು, ಸರ್ವಮನೋರಮಮ್= ಎಲ್ಲರ ಮನಸ್ಸಿಗೂ ಸಂತೋಷಕೊಡುವುದಾಗಿ, ಅಭೂತ್= ಆಯಿತು.

**ಅನುವಾದ–** ಬ್ರಹ್ಮಸೂತ್ರಕರ್ತರಾದ ವ್ಯಾಸರೂ ಸಹ ಬ್ರಹ್ಮನಲ್ಲಿ ವಿಚಿತ್ರಶಕ್ತಿಯನ್ನು ಹೇಳಿದ್ದಾರೆ. ಧನವುಳ್ಳವನು ತನ್ನಲ್ಲಿರುವ ಧನವು ಅನಂತ ಎಂದು ಹೇಳುತ್ತಾನೆ. ಅವನನ್ನು ಹಿಂಬಾಲಿಸುವವನೂ ಧನಿಕನ ಧನವು ಅನಂತ ಎಂದು ಹೇಳುತ್ತಾನೆ. ಆ ಧನವನ್ನು ಯಾರು ನೋಡುವುದಿಲ್ಲವೋ ಅಥವಾ ಅವರಿಬ್ಬರ ಮಾತನ್ನು ಯಾರು ಕೇಳುವುದಿಲ್ಲವೋ ಅಂತಹ ಮನುಷ್ಯನು ಅವರ ಮಾತನ್ನು ಹೇಗೆ ನಿರಾಕರಿಸುತ್ತಾನೆ? ಆದ್ದರಿಂದ ವಿಷ್ಣುವಿನ ಅನಂತಗುಣಪರಿಪೂರ್ಣತ್ವವು ಸರ್ವ-ಮನೋಹರವಾಗಿ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಸೂತ್ರಸಮ್ಮತ್ಯಾಽಪ್ಯಯಂ ವಿಶೇಷೋಽಪ್ಯಂಗೀಕಾರ್ಯ ಇತ್ಯಾಹ– ಯತ ಇತಿ ॥ 'ವಿಚಿತ್ರಾಂ ಶಕ್ತಿಮಾತ್ಮನಿ' ಇತ್ಯನೇನ 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಇತಿ ಸೂತ್ರಮಭಿಪ್ರೈತಿ । ತತಃ ವಿಶೇಷಸ್ಯ ಪ್ರಾಮಾಣಿಕತ್ವಾತ್ ಶಕ್ತಿವಿಶೇಷೇಣ ನಿರ್ವಹೇದಿತಿ ಪೂರ್ವೇಣಾನ್ವಯಃ । ಉಕ್ತವಿಧಯಾ ಹರಿಣಾ ಸ್ವಗುಣಾನನ್ತ್ಯೇ ಕಥಿತೇ ಗುಣಪಾರಾದರ್ಶಿನಾ ಶೇಷೇಣ ಚ ಗುಣಾನ-

ನ್ಯೇऽಂಗೀಕೃತೇ ಕೋऽನ್ಯೋ ನರಸ್ತದಭಾವಂ ಭಾವಯೇದಿತ್ಯತ್ರ ಲೌಕಿಕದೃಷ್ಟಾಂತಮಾಹ– ಧನೀ ವಕ್ತೀತಿ ॥ ಉಕ್ತಮುಪಸಂಹರತಿ–ಅತ ಇತಿ ॥ ಅತಃ ಶ್ರುತಿಯುಕ್ತಿಸದ್ಭಾವಾತ್ ॥ ೯೪೧-೯೪೨ ॥

**ವಿವರಣೆ–** ಬ್ರಹ್ಮಸೂತ್ರಸಮ್ಮತಿಯಿಂದಲೂ ಬ್ರಹ್ಮನಲ್ಲಿ ಇಂತಹ ವಿಶೇಷವನ್ನು ಅಂಗೀಕಾರ ಮಾಡಬೇಕೆಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ. 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಬ್ರಹ್ಮಸೂತ್ರದಲ್ಲಿ ವೇದವ್ಯಾಸರು ಬ್ರಹ್ಮನಿಗೆ ವಿಚಿತ್ರವಾದ ಶಕ್ತಿಗಳು ಇವೆ ಎಂದು ಹೇಳಿದ್ದಾರೆ. ಆದ್ದರಿಂದ ಆ ವಿಚಿತ್ರಶಕ್ತಿಯು ವಿಶೇಷರೂಪವಾದುದು. ಹೀಗೆ ವಿಶೇಷವು ಪ್ರಾಮಾಣಿಕವಾದುದರಿಂದ ಬ್ರಹ್ಮನಲ್ಲಿ ಗುಣಾನಂತ್ಯವನ್ನೂ, ಗುಣಗುಣಿಭಾವವನ್ನೂ ಮತ್ತು ಗುಣಗುಣಿಗಳ ಐಕ್ಯವನ್ನೂ ಆ ವಿಚಿತ್ರಶಕ್ತಿಯು ನಿರ್ವಾಹ ಮಾಡುತ್ತದೆ. 'ಮಯಿ ಅನಂತ ಗುಣೇऽನಂತೇ' ಎಂಬುದಾಗಿ ಹರಿಯು ತನ್ನ ಗುಣಗಳ ಅನಂತತ್ವವನ್ನು ಹೇಳಿದ್ದಾನೆ. 'ಶೇಷೋऽಪಿ ಸಮವಸ್ಯತಿ ನಾಸ್ಯ ಪಾರಮ್' ಎಂಬ ಭಾಗವತವಾಕ್ಯವು ಈ ಗುಣಾನಂತ್ಯಕ್ಕೆ ಶೇಷದೇವರ ಸಮ್ಮತಿಯನ್ನೂ ಸೂಚಿಸುತ್ತದೆ. ಹೀಗಿರುವಾಗ ಅವರಿಬ್ಬರ ಮಾತನ್ನು ಮೀರಿ ಯಾವ ಮನುಷ್ಯನು ತಾನೆ ಹರಿಯ ಗುಣವನ್ನು ಅಪಲಾಪ ಮಾಡಲು ಸಾಧ್ಯ ಎಂದು ಅಭಿಪ್ರಾಯ.

**ಮಿಥ್ಯೋಪಾಧಿಕಸಾರ್ವಜ್ಞಮಿಥ್ಯಾತ್ವಾನ್ನೈಕತೇತಿ ಚೇತ್ ।**
**ಸತ್ಯವಿಶ್ವಸ್ಯ ಸಾಮರ್ಥ್ಯಾದಿತಿ ತಸ್ಯೋತ್ತರಂ ವದೇತ್ ॥ ೯೪೩ ॥**

**ಅರ್ಥ–** ಮಿಥ್ಯೋಪಾಧಿಕಸಾರ್ವಜ್ಞಮಿಥ್ಯಾತ್ವಾತ್= ಸಾರ್ವಜ್ಞಘಟಕವಾದ ಸರ್ವವು ಮಿಥ್ಯೆಯಾದ ಕಾರಣದಿಂದ ಸಾರ್ವಜ್ಞವೂ ಮಿಥ್ಯೆಯಾದುದರಿಂದ, ಏಕತಾ= ಬ್ರಹ್ಮ ಮತ್ತು ಸರ್ವಜ್ಞತ್ವಗಳಿಗೆ ಅಭೇದವು, ನ ಇತಿ ಚೇತ್= ಇಲ್ಲವೆಂದು ಹೇಳಿದರೆ, ಸತ್ಯವಿಶ್ವಸ್ಯ ಸಾಮರ್ಥ್ಯಾತ್= ಸತ್ಯವಾದ ಜಗತ್ತಿನ ಸರ್ವಪದಾರ್ಥ ಉಪಾಧಿಕವಾದ ಕಾರಣ ಸರ್ವಜ್ಞತ್ವವೂ ಸತ್ಯ, ಇತಿ= ಎಂದು, ತಸ್ಯ= ಆ ಆಕ್ಷೇಪಕ್ಕೆ, ಉತ್ತರಂ= ಉತ್ತರವನ್ನು, ವದೇತ್= ಹೇಳಬೇಕು.

**ಅನುವಾದ–** ಸಾರ್ವಜ್ಞವು ಮಿಥ್ಯೋಪಾಧಿಕವಾದ್ದರಿಂದ ಮಿಥ್ಯವಾಗಿದೆ. ಆದ್ದರಿಂದ ಸಾರ್ವಜ್ಞಗುಣಕ್ಕೆ ಬ್ರಹ್ಮನಿಂದ ಅಭೇದವನ್ನು ಹೇಳಲು ಬರುವುದಿಲ್ಲ, ಎಂದು ಆಕ್ಷೇಪವನ್ನು ಮಾಡಿದರೆ, ಜಗತ್ತು ಸತ್ಯವಾಗಿರುವುದರಿಂದ, ಸತ್ಯವಾದ ಜಗದುಪಾಧಿಕವಾದ ಸಾರ್ವಜ್ಞವೂ ಸತ್ಯವೇ ಆಗಿದೆ. ಸತ್ಯವಾದ ಸಾರ್ವಜ್ಞಕ್ಕೂ ಸತ್ಯವಾದ ಬ್ರಹ್ಮಸ್ವರೂಪಕ್ಕೂ ಅಭೇದವೇ ಇದೆ ಎಂದು ನಮ್ಮ ಉತ್ತರ.

**ಭಾವವಿಲಾಸಿನೀ–** ನನು ಜಗದುಪಾಧಿಕಸಾರ್ವಜ್ಞಾದೇಃ ಕಥಂ ನಿರುಪಾಧಿಕಬ್ರಹ್ಮೈಕ್ಯಮ್? ಇತಿ ಚೇತ್ ತತ್ರ ಪ್ರಷ್ಟವ್ಯಮ್ । ಕಿಂ ಜಗತೋ ಮಿಥ್ಯಾತ್ವೇನ ತದುಪಾಧಿಕಸಾರ್ವಜ್ಞಸ್ಯಾಪಿ ಮಿಥ್ಯಾತ್ವಾದ್ ಬ್ರಹ್ಮೈಕ್ಯಂ ನೇತಿ ವದಸಿ ಅಥವಾ ಜಗದುಪಾಧಿಕಸಾರ್ವಜ್ಞಸ್ಯ ಬ್ರಹ್ಮೈಕ್ಯೇ

ಜಗತೋಽಪ್ಯೈಕ್ಯಂ ಸ್ಯಾದಿತಿ ವಾ ವದಸೀತಿ । ಆದ್ಯಸ್ಯೋತ್ತರಮಾಹ– ಮಿಥ್ಯೇತಿ ॥ ಸತ್ಯವಿಶ್ವಸ್ಯ ಸಾಮರ್ಥ್ಯಾತ್ ಸತ್ಯವಿಶ್ವೋಪಾಧಿಕತ್ವೇನ ಸತ್ಯತ್ವಾದಿತ್ಯರ್ಥಃ । ಸ್ವಕಪೋಲಕಲ್ಪಿತ-ಮಿಥ್ಯಾತ್ವೇನಾನುಪಪತ್ತಿಮುದ್ ಘಾಟಯತಃ ಶ್ರುತಿಸಿದ್ಧಸತ್ಯತ್ವೇನ ಕುತೋ ನ ಸಮಾಧಾನಮ್? ಇತಿ ಭಾವಃ ॥ ೯೪೩ ॥

**ವಿವರಣೆ–** ಸರ್ವಜ್ಞತ್ವ ಎಂದರೆ ಸರ್ವವಿಷಯಕ ಜ್ಞಾನವನ್ನು ಹೊಂದಿರುವುದು. ಸರ್ವ ಎಂದರೆ ಜಗತ್ತು ಎಂದು ಅರ್ಥ. ಅದ್ವೈತಿಗಳಿಗೆ ಜಗತ್ತು ಮಿಥ್ಯಾಭೂತವಾದುದು. ಆದ್ದರಿಂದ ಸರ್ವಜ್ಞತ್ವದಲ್ಲಿ ಸರ್ವವು ಮಿಥ್ಯಾಭೂತವಾದುದರಿಂದ; ಅದರಿಂದ ಘಟಿತವಾದ ಸರ್ವಜ್ಞತ್ವವೂ ಸಹ ಮಿಥ್ಯಾಭೂತವಾದುದು. ಬ್ರಹ್ಮನ ಸ್ವರೂಪವಾದರೋ ಸತ್ಯಭೂತವಾದುದು. ಆದ್ದರಿಂದ ಸರ್ವಜ್ಞತ್ವಗುಣಕ್ಕೂ ಮತ್ತು ಬ್ರಹ್ಮನಿಗೂ ಅಭೇದವನ್ನು ಹೇಳಲು ಬರುವುದಿಲ್ಲ ಎಂದು ಅದ್ವೈತಿಗಳ ಅಭಿಪ್ರಾಯ. 'ವಿಶ್ವಂ ಸತ್ಯಂ' ಮೊದಲಾದ ಶ್ರುತಿಗಳಿಂದಲೂ, ಪ್ರತ್ಯಕ್ಷದಿಂದಲೂ ಮತ್ತು ಅನುಮಾನದಿಂದಲೂ ಜಗತ್ತು ಸತ್ಯವೆಂದು ಸಿದ್ಧವಾಗಿದೆ. ಆದ್ದರಿಂದ ಸತ್ಯವಾದ ಜಗತ್ತನ್ನು ಒಳಗೊಂಡ ಸರ್ವಜ್ಞತ್ವವು ಸತ್ಯವೇ ಆಗಿದೆ. ಸತ್ಯವಾದ ಸರ್ವಜ್ಞತ್ವಗುಣಕ್ಕೂ ಮತ್ತು ಬ್ರಹ್ಮನಿಗೂ ಅಭೇದವನ್ನು ಹೇಳಲು ಏನೂ ಬಾಧಕವಿಲ್ಲ ಎಂದು ನಮ್ಮ ಉತ್ತರ.

ಸತ್ಯತ್ವೇ ಯದಿ ಸಂದೇಹೋ ಮಿಥ್ಯಾತ್ವೇ ಕಸ್ಯ ನಿಶ್ಚಯಃ ।
ಕಲಹೇನ ವಿರುದ್ಧೇಽಸ್ಮಿಂಸ್ತತ್ಸತ್ಯತ್ವೇ ನ ಬಾಧಕಮ್ ॥ ೯೪೪ ॥

**ಅರ್ಥ–** ಸತ್ಯತ್ವೇ= ಸತ್ಯತ್ವ ವಿಷಯದಲ್ಲಿ, ಸಂದೇಹೋ ಯದಿ= ಸಂದೇಹವಿದೆ ಎಂದು ಹೇಳುವುದಾದರೆ, ಮಿಥ್ಯಾತ್ವೇ= ಮಿಥ್ಯಾತ್ವ ವಿಷಯದಲ್ಲಿ, ಕಸ್ಯ ನಿಶ್ಚಯಃ= ಯಾರಿಗೆ ನಿಶ್ಚಯವಿದೆ, ಅಸ್ಮಿನ್= ಈ ಜಗನ್ ಮಿಥ್ಯಾತ್ವವು, ಕಲಹೇನ= ವಾದಿಪ್ರತಿವಾದಿ ವಿವಾದದಿಂದ, ವಿರುದ್ಧೇ= ಸಿದ್ಧವಾಗದೇ ಇರುತ್ತಿರಲು, ಸತ್ಯತ್ವೇ= ಸರ್ವಜ್ಞತ್ವಾದಿ ಸತ್ಯತ್ವಾದಿಗಳಲ್ಲಿ, ಬಾಧಕಂ ನ= ಯಾವ ಬಾಧಕವೂ ಇರುವುದಿಲ್ಲ.

**ಅನುವಾದ–** ಜಗತ್ತಿನ ಸತ್ಯತ್ವವಿಷಯದಲ್ಲಿ ಸಂದೇಹವಿದೆ ಎಂದು ಹೇಳುವುದಾದರೆ, ಮಿಥ್ಯಾತ್ವ ವಿಷಯದಲ್ಲಿ ಯಾರಿಗೆ ನಿಶ್ಚಯವಿದೆ? ಮಿಥ್ಯಾತ್ವವು ವಿವಾದಗ್ರಸ್ತವಾಗಿ ಸಿದ್ಧವಾಗದಿರುವಾಗ ಶ್ರುತ್ಯಾದಿಗಳಿಂದ ಸಿದ್ಧವಾದ ಸತ್ಯತ್ವಕ್ಕೆ ಯಾವ ಬಾಧಕವೂ ಇಲ್ಲ.

**ಭಾವವಿಲಾಸಿನೀ–** ಕಲಹೇನ ವಾದಿಪ್ರತಿವಾದಿವಿವಾದೇನ । ಅಸ್ಮಿನ್ ಜಗನ್ಮಿಥ್ಯಾತ್ವೇ । ತತ್ಸತ್ಯತ್ವೇ ಶ್ರುತಿಸಿದ್ಧಸಾರ್ವಜ್ಞಾದಿಸತ್ಯತ್ವೇ ॥ ೯೪೪ ॥

**ವಿವರಣೆ–** ಜಗತ್ತು ಸತ್ಯವಾದರೆ, ಸರ್ವಜ್ಞತ್ವವು ಸತ್ಯವಾಗಬಹುದು. ಆದರೆ ಜಗತ್ಸತ್ಯತ್ವವು ವಿವಾದಗ್ರಸ್ತವಾಗಿದೆ ಎಂದು ಆಕ್ಷೇಪ ಮಾಡುವುದಾದರೆ, ಜಗನ್ಮಿಥ್ಯಾತ್ವವೂ

ಸಹ ವಿವಾದಗ್ರಸ್ತವೇ ಆಗಿದೆ. ಆದ್ದರಿಂದ ಸರ್ವಜ್ಞತ್ವವು ಮಿಥ್ಯಾಭೂತ ಎನ್ನುವುದೂ ವಿವಾದಗ್ರಸ್ತವೇ. ಆದರೆ, ಜಗತ್ತಿನ ಸತ್ಯತ್ವವು ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳಿಂದ ಸಿದ್ಧವಾಗಿದೆ. ಮಿಥ್ಯಾತ್ವವಿಷಯದಲ್ಲಿ ಅಂತಹ ಪ್ರಮಾಣವಿಲ್ಲ. ಆದ್ದರಿಂದ ಮಿಥ್ಯಾತ್ವವೇ ವಿವಾದಗ್ರಸ್ತವಾಗಬೇಕೇ ಹೊರತು ಸತ್ಯತ್ವವಲ್ಲ. ಆದ್ದರಿಂದ ಶ್ರುತ್ಯಾದಿಸಿದ್ಧವಾದ ಸತ್ಯತ್ವವನ್ನು ಅಂಗೀಕರಿಸಲು ಯಾವ ಬಾಧಕವೂ ಇಲ್ಲ.

**ಘಟೋಪಾಧಿಕವೃತ್ತೇಶ್ಚ ಮನೋರೂಪತ್ವಮಿಷ್ಯತೇ ।**
**ಘಟಸ್ತು ನ ಮನೋರೂಪೋ ಬಾಹ್ಯೋಽಸಾವಾಂತರಂ ಮನಃ ॥ ೯೪೫ ॥**

**ಅರ್ಥ–** ಚ= ಮತ್ತು, ಘಟೋಪಾಧಿಕವೃತ್ತೇಃ= ಘಟೋಪಾಧಿಕವಾದ ಮನಸ್ಸಿನ ವಿಕಾರಕ್ಕೆ, ಮನೋರೂಪತ್ವಂ= ಮನೋರೂಪತ್ವವು, ಇಷ್ಯತೇ= ನಿನ್ನಿಂದ ಸ್ವೀಕರಿಸಲ್ಪಡುತ್ತದೆ, ತು= ಆದರೆ, ಘಟಃ= ಘಟವು, ನ ಮನೋರೂಪಃ= ಮನೋರೂಪವಲ್ಲ, ಅಸೌ= ಈ ಘಟವು, ಬಾಹ್ಯಃ= ಬಾಹ್ಯವಾದುದು, ಮನಃ= ಮನಸ್ಸು, ಆಂತರಂ= ಆಂತರಿಕವಾದುದು.

**ಅನುವಾದ–** ಘಟೋಪಾಧಿಕವೃತ್ತಿಯು ಮನೋರೂಪವೆಂದು ಅದ್ವೈತಿಗಳು ಹೇಳುತ್ತಾರೆ. ಆದರೆ ಘಟವು ಮನೋರೂಪವಲ್ಲ. ಏಕೆಂದರೆ, ಮನಸ್ಸು ಆಂತರಿಕವಾದುದು ಮತ್ತು ಘಟವು ಬಾಹ್ಯವಾದುದು.

**ಭಾವವಿಲಾಸಿನೀ–** ದ್ವಿತೀಯಸ್ಯೋತ್ತರಮಾಹ– **ಘಟೋಪಾಧಿಕೇತಿ** ॥ ಘಟೋಪಾಧಿಕವೃತ್ತೇಃ ಘಟವಿಷಯಕಮಾನಸಜ್ಞಾನಸ್ಯ ॥ ೯೪೫ ॥

**ವಿವರಣೆ–** ಜಗತ್ತು ಮಿಥ್ಯಾಭೂತವಾದುದರಿಂದ ಸಾರ್ವಜ್ಞಾದಿಗುಣಗಳು ಮಿಥ್ಯವೇ ಆಗುವುದರಿಂದ ಬ್ರಹ್ಮೈಕ್ಯವು ಕೂಡುವುದಿಲ್ಲ ಎಂದು ಹೇಳುವವರ ಅಭಿಪ್ರಾಯವೇನು? ಸಾರ್ವಜ್ಞ ಮತ್ತು ಬ್ರಹ್ಮ ಮಿಥ್ಯಾಭೂತ ಮತ್ತು ಸತ್ಯವಾದುದರಿಂದ ಐಕ್ಯವು ಕೂಡುವುದಿಲ್ಲವೇ, ಅಥವಾ ಜಗದುಪಾಧಿಕವಾದ ಸರ್ವಜ್ಞತ್ವಕ್ಕೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ಹೇಳಿದರೆ, ಜಗತ್ತಿಗೂ ಮತ್ತು ಬ್ರಹ್ಮನಿಗೂ ಐಕ್ಯವುಂಟಾಗಲಿ ಎಂಬ ಪ್ರಸಂಗವು ಬರುತ್ತದೆ ಎಂಬ ಕಾರಣದಿಂದಲೇ ಎಂದು ಎರಡು ರೀತಿ ಪ್ರಶ್ನೆಯನ್ನು ಮಾಡಿ ಮೊದಲನೆಯ ಪ್ರಶ್ನೆಗೆ ಜಗತ್ತು ಸತ್ಯವೆಂದು ಹೇಳಿ ಪರಿಹಾರವನ್ನು ಮಾಡಿದ್ದಾರೆ. ಈ ಶ್ಲೋಕದಲ್ಲಿ ಎರಡನೆಯ ಪ್ರಶ್ನೆಗೆ ಪರಿಹಾರವನ್ನು ನೀಡುತ್ತಾರೆ. ಘಟವೃತ್ತಿಯು ಘಟೋಪಾಧಿಕವಾದುದು. ಘಟವೃತ್ತಿಯು ಮನೋರೂಪ. ಆದರೂ ಉಪಾಧಿ ಭೂತವಾದ ಘಟವು ಮನೋರೂಪವಲ್ಲ. ಒಂದು ಬಾಹ್ಯ, ಒಂದು ಆಂತರವಾದ ಕಾರಣದಿಂದ ಎಂದು ಅದ್ವೈತಿಗಳು ಹೇಳುತ್ತಾರೆ. ಆದ್ದರಿಂದ ಘಟರೂಪ ಉಪಾಧಿ ಗೆ ಮನಸ್ಸಿನಿಂದ ಅಭೇದ ಇಲ್ಲದಿದ್ದರೂ, ಘಟವೃತ್ತಿಗೆ ಅದು ಮನೋವಿಕಾರವಾದ್ದರಿಂದ,

ಉಪದಾನ ಉಪಾದೇಯಗಳಿಗೆ ಅದ್ವೈತಿಗಳು ಭೇದಾಭೇದವನ್ನು ಒಪ್ಪುವುದರಿಂದ ಮನಸ್ಸಿನಿಂದ ಅಭೇದವನ್ನು ಅಂಗೀಕರಿಸುತ್ತಾರೆ. ಹೀಗೆ ಜಗತ್ತು ಮಿಥ್ಯಾಭೂತವೆಂದು ಒಪ್ಪಿದರೂ ಸಹ ತದುಪಾಧಿಕವಾದ ಸರ್ವಜ್ಞತ್ವವು ಮಿಥ್ಯಾಭೂತವಾಗದೆ, ಬ್ರಹ್ಮನ ಸ್ವರೂಪವಾಗುವುದರಲ್ಲಿ ಯಾವ ಬಾಧಕವೂ ಇಲ್ಲ ಎಂದು ಅಭಿಪ್ರಾಯ.

**ಅತಃ ಸಾರ್ವಜ್ಞೈಕತಾಯಾಂ ಸರ್ವಸ್ಯೈಕ್ಯಂ ಚ ನೋಚ್ಯತೇ ।**
**ಮಿಥ್ಯಾರಜತದೃಷ್ಟೇಶ್ಚ ಸಾಕ್ಷಿಣಃ ಸತ್ಯತಾ ತವ ॥ ೯೪೬ ॥**

**ಅರ್ಥ–** ಅತಃ= ಆ ಕಾರಣದಿಂದ, ಸಾರ್ವಜ್ಞೈಕತಾಯಾಂ= ಸರ್ವಜ್ಞತ್ವಕ್ಕೂ ಮತ್ತು ಬ್ರಹ್ಮನಿಗೂ ಐಕ್ಯವಿದ್ದರೆ, ಸರ್ವಸ್ಯೈಕ್ಯಂ ಚ= ಸರ್ವಕ್ಕೂ ಮತ್ತು ಬ್ರಹ್ಮನಿಗೂ ಐಕ್ಯವು, ನೋಚ್ಯತೇ= ನಮ್ಮಿಂದ ಹೇಳಲ್ಪಡುವುದಿಲ್ಲ, ಚ= ಮತ್ತು, ತವ= ನಿನ್ನ ಮತದಂತೆ, ಮಿಥ್ಯಾರಜತದೃಷ್ಟೇಃ= ಮಿಥ್ಯಾಭೂತವಾದ ರಜತದ ಜ್ಞಾನವಾದ, ಸಾಕ್ಷಿಣಃ= ಸಾಕ್ಷಿಗೆ, ಸತ್ಯತಾ= ಸತ್ಯತ್ವವೇ ಇದೆ.

**ಅನುವಾದ–** ಆದ್ದರಿಂದ ಸರ್ವಜ್ಞತ್ವದ ಐಕ್ಯ ಉಂಟಾದರೆ, ಸರ್ವೈಕ್ಯದ ಪ್ರಸಂಗವು ಉಂಟಾಗುವುದಿಲ್ಲ. ಮಿಥ್ಯಾಭೂತವಾದ ರಜತದ ಜ್ಞಾನವನ್ನು ನೀನು ಸತ್ಯವಾದ ಸಾಕ್ಷಿರೂಪ ಎಂದು ಅಂಗೀಕರಿಸಿದ್ದೀಯೆ.

**ಭಾವವಿಲಾಸಿನೀ–** ಅತಃ ಘಟೋಪಾಧಿಕಜ್ಞಾನೈಕ್ಯೇ ಘಟೈಕ್ಯಾದರ್ಶನಾತ್ । ಸಿಂಹಾವಲೋಕನನ್ಯಾಯೇನ ಪುನರಪ್ಯಾದ್ಯಪಕ್ಷೇ ದೂಷಣಮಾಹ– **ಮಿಥ್ಯಾರಜತೇತಿ** ॥ ತವ ಮತೇ ಮಿಥ್ಯಾಭೂತರಜತಜ್ಞಾನತ್ವೇನಾಂಗೀಕೃತಸಾಕ್ಷಿಣಃ । ತಥಾ ಮಿಥ್ಯಾಭೂತಜಗದ್ವಿಷಯಕಸ್ಯಾಪಿ ಸಾರ್ವಜ್ಞಾದೇಃ ಸತ್ಯತಾ ಭವಿಷ್ಯತೀತಿ ಭಾವಃ ॥ ೯೪೬ ॥

**ವಿವರಣೆ–** ಸರ್ವವೂ ಮಿಥ್ಯಾಭೂತವಾದರೂ, ಸರ್ವಜ್ಞತ್ವವು ಮಿಥ್ಯಾಭೂತವಾಗಬೇಕಾಗಿಲ್ಲ ಎಂಬುದನ್ನು ಈ ಶ್ಲೋಕದಲ್ಲಿ ಇನ್ನೊಂದು ದೃಷ್ಟಾಂತವನ್ನು ಕೊಟ್ಟು ಉಪಪಾದನೆ ಮಾಡುತ್ತಾರೆ. 'ಇದಂ ರಜತಂ' ಎಂಬ ಭ್ರಮವಿದೆ. ಇಲ್ಲಿ ರಜತವು ಮಿಥ್ಯಾಭೂತವಾದುದು. ಆದರೆ 'ಇದಂ ರಜತಂ' ಎನ್ನುವ ಜ್ಞಾನವು ಸಾಕ್ಷಿರೂಪ ಎಂದು ಅಂಗೀಕರಿಸುತ್ತಾರೆ. ಸಾಕ್ಷಿಯು ಅದ್ವೈತಿಗಳಿಗೂ ಸತ್ಯವಾದದ್ದೇ. ಆದ್ದರಿಂದ ರಜತವು ಮಿಥ್ಯಾಭೂತವಾದರೂ ರಜತೋಪಾಧಿಕವಾದ ರಜತಭ್ರಮವು ಸಾಕ್ಷಿರೂಪವಾದ್ದರಿಂದ ಸತ್ಯವಾಗುವಂತೆ ಜಗತ್ತು ಮಿಥ್ಯಾಭೂತವಾದರೂ, ತದುಪಾಧಿಕವಾದ ಸರ್ವಜ್ಞತ್ವವು ಸತ್ಯವೇ ಆಗಬಹುದು ಎಂದು ಮೊದಲನೆಯ ಪ್ರಶ್ನೆಗೆ ಇಲ್ಲಿ ಇನ್ನೊಂದು ಪರಿಹಾರವನ್ನು ಸೂಚಿಸುತ್ತಿದ್ದಾರೆ.

**ಮಿಥ್ಯಾಭೂತಾರ್ಥಸಂಬಂಧಾನ್ಮಿಥ್ಯಾ ಜ್ಞಾನಂ ಯದೀಷ್ಯತೇ ।**
**ಸತ್ಯೇಶಜ್ಞಾನಸಂಬಂಧಾದರ್ಥಾಃ ಸತ್ಯಾಃ ಕಥಂ ನ ತೇ ॥ ೯೪೭ ॥**

'सत्यम ज्ञानमनन्तम ब्रह्म'

**ಅರ್ಥ–** ಮಿಥ್ಯಾಭೂತಾರ್ಥಸಂಬಂಧಾತ್= ಮಿಥ್ಯಾಭೂತವಾದ ಅರ್ಥದ ಸಂಬಂಧದಿಂದ, ಯದಿ= ಒಂದು ಪಕ್ಷ, ಜ್ಞಾನಂ= ಜ್ಞಾನವು, ಮಿಥ್ಯಾ ಇಷ್ಯತೇ= ಮಿಥ್ಯಾ ಎಂದು ಹೇಳುವುದಾದರೆ, ಸತ್ಯೇಶಜ್ಞಾನಸಂಬಂಧಾತ್= ಸತ್ಯವಾದ ಈಶ್ವರನ ಜ್ಞಾನದ ಸಂಬಂಧದಿಂದ, ಅರ್ಥಾಃ= ಅರ್ಥಗಳು, ತೇ= ನಿನಗೆ, ಕಥಂ ಸತ್ಯಾಃ ನ= ಹೇಗೆ ಸತ್ಯವಾಗುವುದಿಲ್ಲ?

**ಅನುವಾದ–** ಅರ್ಥವು ಮಿಥ್ಯಾಭೂತವಾದುದರಿಂದ ಅದರ ಸಂಬಂಧವಿರುವ ಕಾರಣ ಜ್ಞಾನವು ಮಿಥ್ಯಾಭೂತವಾಗುತ್ತದೆ ಎಂದು ಹೇಳುವುದಾದರೆ, ಈಶ್ವರಜ್ಞಾನವು ಸತ್ಯವಾದ ಕಾರಣದಿಂದ ಅಂತಹ ಜ್ಞಾನಸಂಬಂಧವನ್ನು ಹೊಂದಿದ ಅರ್ಥವು ಸತ್ಯವೇ ಆಗುತ್ತದೆ ಎಂದು ನೀನು ಏಕೆ ಹೇಳುವುದಿಲ್ಲ?

**ಭಾವವಿಲಾಸಿನೀ–** ಮಿಥ್ಯಾಭೂತಾರ್ಥಸಂಬಂಧಾತ್ ಮಿಥ್ಯಾತ್ವಮಿತಿ ವದತಃ ಸ್ವಮತವಿರೋಧಃ ಪ್ರಾಗ್ ದರ್ಶಿತಃ । ಅಧುನಾ ಉತ್ತರಾಂತರಮಾಹ– **ಮಿಥ್ಯಾಭೂತಾರ್ಥಸಂಬಂಧಾದಿತಿ** ॥೯೪೭॥

**ವಿವರಣೆ–** ಮೊದಲನೆಯ ಪ್ರಶ್ನೆಗೆ ಇನ್ನೊಂದು ಪರಿಹಾರವನ್ನು ಹೇಳುತ್ತಿದ್ದಾರೆ. ಈಶ್ವರಜ್ಞಾನವು ಸತ್ಯಭೂತವಾದದ್ದು ಮತ್ತು ಪ್ರಮಾರೂಪವಾದದ್ದು. ಅದಕ್ಕೆ ವಿಷಯವಾದ ಜಗತ್ತು ಸತ್ಯವೇ ಆಗಬೇಕು. ಅರ್ಥವನ್ನು ಮೊದಲು ಮಿಥ್ಯಾ ಎಂದು ಅಂಗೀಕರಿಸಿ ಅದಕ್ಕೆ ಸಂಬಂಧಿಸಿದ ಈಶ್ವರಜ್ಞಾನವನ್ನು ಮಿಥ್ಯಾ ಎಂದು ಹೇಳುವುದಾದರೆ, ಈಶ್ವರಜ್ಞಾನವನ್ನೇ ಮೊದಲು ಪ್ರಮಾ ಎಂದು ಅಂಗೀಕರಿಸಿ ಅದರ ಜೊತೆಯಲ್ಲಿ ವಿಷಯತ್ವರೂಪ ಸಂಬಂಧವನ್ನು ಹೊಂದಿದ ಜಗತ್ತು ಸತ್ಯವೆಂದೇ ಹೇಳಬೇಕು ಎಂಬ ಪ್ರತಿಬಂದಿಯನ್ನು ಈ ಶ್ಲೋಕದಲ್ಲಿ ಕೊಡುತ್ತಾರೆ.

**ತತ್ಪಾದಸಂಗಿಸಲಿಲಾದಶುದ್ಧಸ್ಯ ಹಿ ಶುದ್ಧತಾ ॥ ೯೪೮ ॥**

**ಅರ್ಥ–** ತತ್ಪಾದಸಂಗಿಸಲಿಲಾತ್= ಬ್ರಹ್ಮನ ಪಾದದ ಸಂಬಂಧವುಳ್ಳ ಜಲದಿಂದ, ಅಶುದ್ಧಸ್ಯ= ಅಶುದ್ಧವಾದ ವಸ್ತುವಿಗೆ, ಶುದ್ಧತಾ ಹಿ= ಶುದ್ಧತೆ ಇರುವುದಷ್ಟೇ.

**ಅನುವಾದ–** ಹರಿಯ ಪಾದಸ್ಪರ್ಶವನ್ನು ಹೊಂದಿದ ಜಲದಿಂದ ಅಶುದ್ಧವಾದ ವಸ್ತುವಿಗೂ ಶುದ್ಧಿಯು ಬರುವುದಷ್ಟೇ?

**ಭಾವವಿಲಾಸಿನೀ–** ನ ಕೇವಲಮಿಯಂ ಪ್ರತಿಬನ್ದೀ । ಕಿನ್ತು ಇದಮೇವ ಯುಕ್ತಿಯುಕ್ತಮಿತ್ಯತ್ರ ದೃಷ್ಟಾಂತಮಾಹ- **ತತ್ಪಾದಸಂಗಿಸಲಿಲಾದಿತಿ** ॥ ಗಂಗಾಜಲಾದಿತ್ಯರ್ಥಃ ॥ ೯೪೮ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದುದು ಕೇವಲ ಪ್ರತಿಬಂದಿಯಲ್ಲ. ಅದು ಯುಕ್ತಿಯುಕ್ತವೂ ಆಗುತ್ತದೆ ಎಂಬುದನ್ನು ಈ ಶ್ಲೋಕದಲ್ಲಿ ಒಂದು ದೃಷ್ಟಾಂತದಿಂದ ಉಪಪಾದನೆ ಮಾಡುತ್ತಾರೆ. 'ತೀರ್ಥೇನ ಮೂರ್ಧ್ನಿ ಅಧಿಧೃತೇನ ಶಿವಃ ಶಿವೋಽಭೂತ್'

"ಅತಃ ಶುಚಿತಮೋ ವಿಷ್ಣುಃ"

ಎಂಬುದು ಭಾಗವತಶ್ಲೋಕ. ಅಶುದ್ಧನಾದ ಶಿವನು ವಿಷ್ಣುಪಾದಸಂಗಿಯಾದ ಗಂಗಾಜಲವನ್ನು ತಲೆಯ ಮೇಲೆ ಧರಿಸಿ ಶುದ್ಧನಾದನು ಎಂದು ಆ ಶ್ಲೋಕದ ಅಭಿಪ್ರಾಯ. ಆದ್ದರಿಂದ ವಿಷ್ಣುವಿನ ಪರಂಪರಾಸಂಬಂಧದಿಂದ ಅಶುದ್ಧವಾದುದು ಶುದ್ಧವಾಗುವಂತೆ, ವಿಷ್ಣುವಿನ ಜ್ಞಾನದ ನೇರವಾದ ಸಂಬಂಧವನ್ನು ಪಡೆದ ಜಗತ್ತು ಸಹ ಶುದ್ಧವೇ ಎಂದರೆ ಸತ್ಯವೇ ಆಗಬೇಕು.

**ನಿರ್ದೋಷೇಶ್ವರಚಿದ್ಯೋಗಾತ್ ಸತ್ಯತಾ ಲೋಕಸಮ್ಮತಾ ।**
**ಅಬಾಧಿತಾರ್ಥಸಂಬಂಧಾದ್ ಬಾಧ್ಯತಾಶಾ ವೃಥಾ ತವ ॥ ೯೪೯ ॥**

**ಅರ್ಥ–** ನಿರ್ದೋಷೇಶ್ವರಚಿದ್ಯೋಗಾತ್= ನಿರ್ದೋಷವಾದ ಈಶ್ವರಜ್ಞಾನದ ಸಂಬಂಧ ಇರುವುದರಿಂದ, ಸತ್ಯತಾ= ಅರ್ಥದ ಸತ್ಯತ್ವವು, ಲೋಕಸಮ್ಮತಾ= ಲೋಕಸಮ್ಮತವಾಗಿದೆ, ಅಬಾಧಿತಾರ್ಥಸಂಬಂಧಾತ್= ಅಬಾಧಿತವಾದ ಅರ್ಥದ ಸಂಬಂಧ ಇರುವುದರಿಂದ, ತವ= ನಿನಗೆ, ಬಾಧ್ಯತಾ ಚ= ಈಶ್ವರನ ಸರ್ವಜ್ಞತ್ವಕ್ಕೆ ಬಾಧ್ಯತ್ವದ ಆಶೆಯು, ವೃಥಾ= ವ್ಯರ್ಥವಾದುದು.

**ಅನುವಾದ–** ಈಶ್ವರಜ್ಞಾನವು ನಿರ್ದುಷ್ಟವಾಗಿರುವುದರಿಂದ ಅದು ಪ್ರಮಾಭೂತವೇ ಆಗಿದೆ. ಅಂತಹ ಪ್ರಮಾಭೂತವಾದ ಜ್ಞಾನಕ್ಕೆ ವಿಷಯವಾದ ಜಗತ್ತು ಏಕೆ ಸತ್ಯವಾಗುವುದಿಲ್ಲ? ಅಬಾಧಿತವಾದ ಈಶ್ವರಜ್ಞಾನರೂಪವಾದ ಅರ್ಥದ ಸಂಬಂಧವಿರುವುದರಿಂದ ಜಗತ್ತು ಅಬಾಧ್ಯವೇ ಆಗುತ್ತದೆ. ನಿನ್ನ ಜಗತ್ತಿನ ಬಾಧ್ಯತ್ವದ ಆಸೆಯು ನಿರ್ಮೂಲವಾದುದು.

**ಭಾವವಿಲಾಸಿನೀ–** ಅಧುನಾ ಈಶ್ವರಜ್ಞಾನಸ್ಯ ಪ್ರಮಾತ್ವನಿಯಮೇನ ತದ್ವಿಷಯಸ್ಯ ಜಗತಃ ಕಥಂ ನ ಸತ್ಯತಾ? ಇತ್ಯಾಹ– **ನಿರ್ದೋಷೇತಿ** ॥ ಜಗತೋ ಬಾಧಾದರ್ಶನೇನ ಮಿಥ್ಯಾತ್ವಾಯೋಗಾಚ್ಚ ನ ತತ್ಸಂಬಂಧಾತ್ ಸಾರ್ವಜ್ಞಮಿಥ್ಯಾತ್ವಮಿತ್ಯಾಹ– **ಅಬಾಧಿತೇತಿ** ॥ ೯೪೯ ॥

**ವಿವರಣೆ–** ಕೇವಲ ಈಶ್ವರಜ್ಞಾನಸಂಬಂಧ ಎಂದು ಮಾತ್ರ ಅಲ್ಲ, ಈಶ್ವರಜ್ಞಾನವು ನಿಯಮೇನ ಯಥಾರ್ಥವಾಗಿರುವುದರಿಂದ ಅಂತಹ ಅಬಾಧ್ಯವಾದ ಜ್ಞಾನಕ್ಕೆ ವಿಷಯವಾದ ಈ ಜಗತ್ತು ಸತ್ಯವೇ ಆಗುತ್ತದೆ. ಈಶ್ವರನು ಈ ಜಗತ್ತನ್ನು ಸತ್ಯವೆಂದೇ ವಿಷಯೀಕರಿಸುತ್ತಾನೆ. ಆದ್ದರಿಂದಲೇ ಜಗತ್ತಿನ ಸೃಷ್ಟಿಸ್ಥಿತ್ಯಾದಿಗಳಲ್ಲಿ ತೊಡಗುತ್ತಾನೆ. ಹೀಗಿರುವಾಗ ವಿಷಯವು ಬಾಧ್ಯವಾಗುತ್ತದೆ ಎಂಬುದು ಕೇವಲ ನಿನ್ನ ದುರಾಸೆ ಎಂದು ಅಭಿಪ್ರಾಯ.

**ಯದಿ ಸೋಪಾಧಿಕತ್ವಂ ತೇ ಮಿಶ್ರಣಂ ಕ್ಷೀರನೀರವತ್ ।**
**ತದಾ ಸರ್ವಜ್ಞಯೋಗೀಂದ್ರಹೃದಯೇ ಸ್ಯಾದ್ ವಿದಾರಣಮ್ ॥ ೯೫೦ ॥**

**ಅರ್ಥ**– ತೇ= ನಿನಗೆ, ಯದಿ= ಒಂದು ಪಕ್ಷ, ಸೋಪಾಧಿಕತ್ವಂ= ಸೋಪಾಧಿಕತ್ವ ಎಂದರೆ, ಕ್ಷೀರನೀರವತ್= ಹಾಲು ನೀರುಗಳಂತೆ, ಮಿಶ್ರಣಂ= ಮಿಶ್ರಣ ಎಂದಾದರೆ, ತದಾ= ಆಗ, ಸರ್ವಜ್ಞಯೋಗೀಂದ್ರಹೃದಯೇ= ಸರ್ವಜ್ಞರಾದ ಯೋಗೀಂದ್ರರ ಹೃದಯದಲ್ಲಿ, ವಿದಾರಣಂ ಸ್ಯಾತ್= ವಿದಾರಣವು ಉಂಟಾಗಬೇಕಾಗುತ್ತದೆ (ಹೃದಯವು ಒಡೆಯ ಬೇಕಾಗುತ್ತದೆ).

**ಅನುವಾದ**– ಸೋಪಾಧಿಕತ್ವ ಎಂದರೆ ನೀರಕ್ಷೀರಗಳಂತೆ ಮಿಶ್ರಣ ಎಂದು ನಿನ್ನ ಅಭಿಪ್ರಾಯವಾದರೆ, ಆಗ ಸರ್ವಜ್ಞರಾದ ಯೋಗೀಂದ್ರರ ಹೃದಯವು ಬಿರಿದು ಹೋಗಬೇಕಾಗುತ್ತದೆ.

**ಭಾವವಿಲಾಸಿನೀ**– ಕಿಂಚ ಕಿಮಿದಂ ಸಾರ್ವಜ್ಞಸ್ಯ ಸೋಪಾಧಿಕತ್ವಂ ನಾಮ? ಉಪಾಧಿ ಭೂತಜಗನ್ಮಿಶ್ರಣಂ ವಾ ಉಪಾಧಿನಿರೂಪಿತತ್ವಮಾತ್ರಂ ವೇತಿ ವಿಕಲ್ಪ್ಯಾದ್ಯಂ ದೂಷಯತಿ– ಯದೀತಿ ॥ ತದಾ ಗುರುತರಮಹೀಮಹೀಧರಾದೀನಾಮಪ್ಯಾಂತರಜ್ಞಾನೇನ ಸಹ ಹೃದಯಾಂತಃಪ್ರವೇಶಾದಿತಿ ಭಾವಃ ॥ ೯೫೦ ॥

**ವಿವರಣೆ**– ಸರ್ವಜ್ಞತ್ವವು ಸೋಪಾಧಿಕ ಎಂದು ಹೇಳಿ ಅದ್ವೈತಿಗಳು ಈ ವಾದವನ್ನು ಮಾಡುತ್ತಿದ್ದಾರೆ. ಇಲ್ಲಿ ಸೋಪಾಧಿಕ ಎಂಬ ಶಬ್ದಕ್ಕೆ ಏನು ಅರ್ಥ? ನೀರು, ಹಾಲುಗಳಂತೆ ಮಿಶ್ರಿತವಾಗಿರುವುದು ಎಂದು ಅರ್ಥವಾದರೆ, ಆಗ ಯೋಗಿಗಳೂ ಸರ್ವಜ್ಞ-ರಾಗಿದ್ದಾರಷ್ಟೇ. ಅವರಿಗೂ ಸರ್ವವಿಷಯಕಜ್ಞಾನವು ಅವರ ಮನಸ್ಸಿನಲ್ಲಿಯೇ ಇದೆ. ಅದು ಸರ್ವವಸ್ತುಗಳ ಮತ್ತು ಸರ್ವವಿಷಯಕ ಜ್ಞಾನದ ಮಿಶ್ರಣ ಎಂದು ಹೇಳಿದರೆ ಸರ್ವವಸ್ತುಗಳೂ ಯೋಗಿಗಳ ಮನಸ್ಸಿನಲ್ಲಿಯೇ ಇರಬೇಕಾಗುವುದರಿಂದ ಮನಸ್ಸಿಗೆ ಆಧಾರವಾದ ಹೃದಯವು ಒಡೆದುಹೋಗಬೇಕಾಗುತ್ತದೆ ಎಂಬ ಆಪತ್ತಿಯನ್ನು ಈ ಶ್ಲೋಕದಲ್ಲಿ ಹೇಳುತ್ತಿದ್ದಾರೆ.

**ಶಬ್ದಾಚ್ಚ ಶಶಶೃಂಗಸ್ಯ ಜ್ಞಾನೇ ಶೃಂಗೀ ಭವಾನ್ ಭವೇತ್ ।**
**ಅತ್ಯಂತಾಸಚ್ಚ ತೇ ಜ್ಞಾನಂ ಸ್ಯಾತ್ ತೇನ ಹ್ಯತಿಸಂಕಟಮ್ ॥ ೯೫೧ ॥**

**ಅರ್ಥ**– ಚ= ಮತ್ತು, ಶಬ್ದಾತ್= ಶಶವಿಷಾಣಂ ಎಂಬ ಶಬ್ದಪ್ರಯೋಗದಿಂದ, ಶಶಶೃಂಗಸ್ಯ ಜ್ಞಾನೇ= ಶಶವಿಷಾಣದ ಜ್ಞಾನವು ಬಂದಾಗ, ಭವಾನ್= ನೀನು, ಶೃಂಗೀ ಭವೇತ್= ಕೋಡುವುಳ್ಳವನಾಗಬೇಕಾದೀತು, ಚ= ಮತ್ತು, ತೇ= ನಿನಗೆ, ಜ್ಞಾನಂ= ಜ್ಞಾನವು, ಅತ್ಯಂತಾಸಚ್ಚ ಸ್ಯಾತ್= ಅತ್ಯಂತ ಅಸತ್ಯವಾಗಬೇಕಾಗುತ್ತದೆ, ತೇನ= ಆದ್ದರಿಂದ, ತೇ= ನಿನಗೆ, ಅತಿಸಂಕಟಂ= ಬಹಳವಾದ ಸಂಕಟವು, ಸ್ಯಾತ್= ಪ್ರಾಪ್ತವಾಗುತ್ತದೆ.

**ಅನುವಾದ–** ಶಬ್ದದಿಂದ ಶಶವಿಷಾಣದ ಜ್ಞಾನವು ಬರುವಾಗ ನೀನು ಶೃಂಗಿಯಾಗಬೇಕಾದೀತು. ಅಸದ್ವಿಷಕವಾದ್ದರಿಂದ ಆ ಜ್ಞಾನವೂ ಅತ್ಯಂತ ಅಸತ್ತೇ ಆಗಬೇಕು ಎಂಬ ಸಂಕಟವು ನಿನಗೆ ಪ್ರಾಪ್ತವಾಗುತ್ತದೆ.

**ಭಾವವಿಲಾಸಿನೀ–** ಶಬ್ದಾತ್ ಶಶಶೃಂಗಶಬ್ದಾತ್ ಜ್ಞಾನೇನ ಸಹ ಶೃಂಗಸ್ಯಾಪಿ ಮಿಶ್ರಣಾದ್ ಜ್ಞಾನಿತ್ವಮಿವ ಶೃಂಗಿತ್ವಮಪಿ ತವ ಸ್ಯಾದಿತಿ ಭಾವಃ । ದೂಷಣಾಂತರಮಾಹ– **ಅತ್ಯನ್ತಾಸದಿತಿ** ॥ ಸಮಯೋರೇವ ಮಿಶ್ರಣಯೋಗ್ಯತ್ವಾದಿತಿ ಭಾವಃ ॥ ೯೫೧ ॥

**ವಿವರಣೆ–** ಸೋಪಾಧಿಕತ್ವ ಎಂದರೆ ಉಪಾಧಿಯ ಜೊತೆಯಲ್ಲಿ ಮಿಶ್ರಣ ಎಂಬ ಅರ್ಥವನ್ನು ಅಂಗೀಕರಿಸಿದರೆ ಇಲ್ಲಿ ಇನ್ನೊಂದು ದೋಷವನ್ನು ಹೇಳುತ್ತಾರೆ. 'ಶಶವಿಷಾಣಂ ಅಸ್ತಿ' ಎಂಬ ವಾಕ್ಯದಿಂದ ಶಶವಿಷಾಣದ ಜ್ಞಾನವುಂಟಾಗುತ್ತದೆ. ಆ ಜ್ಞಾನವು ಉಪಾಧಿಯಾದ ಶೃಂಗಮಿಶ್ರಿತವಾದುದರಿಂದ ನಿನಗೆ ಜ್ಞಾನಿತ್ವವು ಬಂದಂತೆ, ಶೃಂಗಿತ್ವವೂ ಬರಬೇಕಾದೀತು. ಮಿಶ್ರಣವಾಗಬೇಕಾದರೆ, ಸಮಾನವಾದ ವಸ್ತುಗಳಿಗೇ ಮಿಶ್ರಣವಾಗಬೇಕು. ಶಶವಿಷಾಣವು ಅಸತ್ತಾಗಿರುವುದರಿಂದ ಅದಕ್ಕೆ ಜ್ಞಾನದಿಂದ ಮಿಶ್ರಣವುಂಟಾಗುವುದಾದರೆ, ಜ್ಞಾನವೂ ಅತ್ಯಂತ ಅಸತ್ತೇ ಆಗಬೇಕು. ನೀನು ಜ್ಞಾನವನ್ನು ಮಾತ್ರ ಅಸತ್ತೆಂದು ಒಪ್ಪುವುದಿಲ್ಲ. ಆ ಕಾರಣದಿಂದ ನಿನಗೆ ಸಂಕಟವುಂಟಾಗುತ್ತದೆ.

ಜ್ಞಾನೇನಾಂತಃಸ್ಥಿತೇನೈವ ಬಹಿಃಸ್ಥಜಗತೋ ಯದಿ ।
ಸಂಬಂಧಃ ಕಶ್ಚಿದೇವ ಸ್ಯಾತ್ ತದೈಕ್ಯೇ ಕಿಂ ನು ಬಾಧಕಮ್ ॥
ಸೌರಾಲೋಕೋ ಜಗದ್ವ್ಯಾಪೀ ಮಂಡಲಾಭಿನ್ನ ಏವ ಹಿ ॥ ೯೫೨ ॥

**ಅರ್ಥ–** ಅಂತಃಸ್ಥಿತೇನ= ಒಳಗೆ ಇರುವಂತಹ, ಜ್ಞಾನೇನ= ಜ್ಞಾನದಿಂದಲೇ, ಬಹಿಃಸ್ಥಜಗತಃ= ಹೊರಗಿರುವ ಜಗತ್ತಿಗೆ, ಯದಿ= ಒಂದು ಪಕ್ಷ, ಕಶ್ಚಿದೇವ= ಯಾವುದಾದರೂ, ಸಂಬಂಧಃ ಸ್ಯಾತ್= ಸಂಬಂಧ ಇರುವುದಾದರೆ, ತದಾ= ಆಗ, ಐಕ್ಯೇ= ಸರ್ವಜ್ಞತ್ವಕ್ಕೂ ಮತ್ತು ಬ್ರಹ್ಮನಿಗೂ ಐಕ್ಯವಿರುವುದಕ್ಕೆ, ಬಾಧಕಂ ಕಿಂ= ಏನು ಬಾಧಕವಿದೆ, ಜಗದ್ವ್ಯಾಪೀ= ಜಗತ್ತನ್ನು ವ್ಯಾಪಿಸಿರುವ, ಸೌರಾಲೋಕಃ= ಸೂರ್ಯಪ್ರಕಾಶವು, ಮಂಡಲಾಭಿನ್ನ ಏವ ಹಿ= ಸೂರ್ಯಮಂಡಲದಿಂದ ಅಭಿನ್ನವಾಗಿದೆಯಷ್ಟೇ.

**ಅನುವಾದ–** ಒಳಗಿರುವ ಜ್ಞಾನಕ್ಕೂ ಹೊರಗಿರುವ ಜಗತ್ತಿಗೂ ಏನಾದರೂ ಸಂಬಂಧವನ್ನು ಅಂಗೀಕಾರ ಮಾಡಿದರೆ ಆಗ ಸರ್ವಜ್ಞತ್ವಕ್ಕೂ ಮತ್ತು ಬ್ರಹ್ಮನಿಗೂ ಐಕ್ಯವಿರುವುದಕ್ಕೆ ಏನು ಬಾಧಕವಿದೆ? ಸೂರ್ಯಪ್ರಕಾಶವು ಸೂರ್ಯಮಂಡಲದಿಂದ ಅಭಿನ್ನವಾಗಿದ್ದರೂ ಸರ್ವಜಗದ್ವ್ಯಾಪಕ ವಾಗಿದೆಯಷ್ಟೇ.

**ಭಾವವಿಲಾಸಿನೀ–** ದ್ವಿತೀಯಂ ದೂಷಯತಿ– **ಜ್ಞಾನೇನೇತಿ** ॥ ಕಶ್ಚಿತ್ಸಂಯೋಗಾತಿರಿಕ್ತೋ ವಿಷಯವಿಷಯಿಭಾವಾದಿಃ । ಐಕ್ಯೇ ಸಾರ್ವಜ್ಞಸ್ಯ ಬ್ರಹ್ಮೈಕ್ಯೇ । ಘಟವಿಷಯಕವೃತ್ತಿಜ್ಞಾನಸ್ಯ

श्री श्री, श्री, श्री सर्व ज्ञान दान "

ಮನೋರೂಪದರ್ಶನೇನ ಸಾರ್ವಜ್ಞಸ್ಯಾಪಿ ಬ್ರಹ್ಮೈಕ್ಯೇ ನ ಕಿಂಚಿದ್ಬಾಧಕಮಿತಿ ಭಾವಃ । ದೃಷ್ಟಾಂತರಮಾಹ– **ಸೌರಾಲೋಕ ಇತಿ** ॥ ೯೫೨ ॥

**ವಿವರಣೆ–** ಸೋಪಾಧಿಕತ್ವ ಎಂದರೆ ಉಪಾಧಿನಿರೂಪಿತತ್ವ ಮಾತ್ರ ಎಂದು ಹೇಳಿದರೆ, ಆ ಪಕ್ಷದಲ್ಲಿ ದೋಷವನ್ನು ಹೇಳುತ್ತಾರೆ. ಜ್ಞಾನಕ್ಕೂ ಮತ್ತು ವಿಷಯಕ್ಕೂ ನಿರೂಪ್ಯ ನಿರೂಪಕಭಾವ ಸಂಬಂಧವಿದೆ. ಆದ್ದರಿಂದ ವಿಷಯವು ಅಸತ್ತಾದರೂ ತನ್ನಿರೂಪಿತವಾದ ಜ್ಞಾನವು ಸತ್ಯವಾಗಬಹುದು ಎಂದು ಹೇಳುವುದಾದರೆ, ಜಗತ್ತು ಮಿಥ್ಯಾಭೂತವಾದರೂ ಜಗನ್ನಿರೂಪಿತವಾದ ಈಶ್ವರನ ಸರ್ವಜ್ಞತ್ವವು ಸತ್ಯವಾಗಬಹುದು ಎಂದಾಯಿತು. ಆಗ ಸತ್ಯವಾದ ಸರ್ವಜ್ಞತ್ವಕ್ಕೂ ಮತ್ತು ಸತ್ಯನಾದ ಬ್ರಹ್ಮನಿಗೂ ಅಭೇದವನ್ನು ಒಪ್ಪಲು ಏನು ಬಾಧಕವಿದೆ? ಇದಕ್ಕೆ ಇನ್ನೊಂದು ದೃಷ್ಟಾಂತವನ್ನು ಹೇಳುತ್ತಾರೆ. ಸೂರ್ಯಪ್ರಕಾಶವು ಸೂರ್ಯಮಂಡಲದಿಂದ ಅಭಿನ್ನವಾಗಿದೆ. ಸೂರ್ಯಮಂಡಲವು ಮಾತ್ರ ಆಕಾಶದಲ್ಲಿಯೇ ಇದೆ. ಸೂರ್ಯಪ್ರಕಾಶವಾದರೋ ಜಗತ್ತನ್ನೆಲ್ಲಾ ವ್ಯಾಪಿಸಿದೆ. ಹಾಗೆಯೇ, ಈ ಅಲ್ಪವೈಲಕ್ಷಣ್ಯವಿದ್ದರೂ ಅಭೇದವಿರುವಂತೆ ವಿಶೇಷಬಲದಿಂದ ಬ್ರಹ್ಮನಿಗೂ ಮತ್ತು ಸರ್ವಜ್ಞತ್ವಕ್ಕೂ ಅಭೇದವಿರುವುದಕ್ಕೆ ಯಾವ ಬಾಧಕವೂ ಇಲ್ಲ.

**ಕಿಂಚ ನಾನಾಪದಾರ್ಥಾನಾಂ ಭ್ರಮೋಽಪಿ ಬ್ರಹ್ಮಚಿತ್ ತವ ।**
**ಮಿಥ್ಯಾರ್ಥಜ್ಞಾನರೂಪಂ ತೇ ಬ್ರಹ್ಮ ಕಿಂ ನಾಭವತ್ ತದಾ ॥ ೯೫೩ ॥**

**ಅರ್ಥ–** ಕಿಂಚ= ಮತ್ತು, ತವ= ನಿನಗೆ, ನಾನಾಪದಾರ್ಥಾನಾಂ= ನಾನಾ ಪದಾರ್ಥಗಳ, ಭ್ರಮೋಽಪಿ= ಭ್ರಮೆಯೂ ಕೂಡ, ಬ್ರಹ್ಮಚಿತ್= ಬ್ರಹ್ಮಚೈತನ್ಯರೂಪವೇ ಆಗಿವೆ, ತದಾ= ಆಗ, ತೇ ಬ್ರಹ್ಮ= ನಿನ್ನ ಬ್ರಹ್ಮನು, ಮಿಥ್ಯಾರ್ಥಜ್ಞಾನರೂಪಂ= ಮಿಥ್ಯಾರ್ಥ ಜ್ಞಾನರೂಪನಾಗಿ, ಕಿಂ ನಾಭವತ್= ಆಗಲಿಲ್ಲವೇ?

**ಅನುವಾದ–** ಅದೂ ಅಲ್ಲದೆ, ನಿನ್ನ ಮತದಲ್ಲಿ ಎಲ್ಲಾ ಭ್ರಾಂತಿಗಳೂ ಬ್ರಹ್ಮಚೈತನ್ಯರೂಪವೇ ಆಗಿವೆ. ಮಿಥ್ಯಾಭೂತವಾದ ಅರ್ಥದ ಸಂಬಂಧವು ಉಂಟಾಗುವುದರಿಂದ ನಿನ್ನ ಬ್ರಹ್ಮನೂ ಮಿಥ್ಯಾಭೂತನಾಗುವುದಿಲ್ಲವೆ?

**ಭಾವವಿಲಾಸಿನೀ–** ಕಿಂಚ ಯನ್ಮಿಥ್ಯಾರ್ಥಸಂಬಂಧಿ ತನ್ಮಿಥ್ಯೇತಿ ತ್ವದುಕ್ತನ್ಯಾಯೇನ ತವ ಬ್ರಹ್ಮೈವ ಮಿಥ್ಯಾ ಸ್ಯಾದಿತ್ಯಾಹ– **ಕಿಂಚೇತಿ** ॥ ತವ ಮತೇ ತದಾ ಬ್ರಹ್ಮಚಿತ ಏವ ಭ್ರಮರೂಪತ್ವೇ । ತತಶ್ಚ ತ್ವದ್ಬ್ರಹ್ಮೈವ ಮಿಥ್ಯಾಭೂತಾರ್ಥಸಂಬಂಧ್ಯಭವದಿತಿ ಭಾವಃ ॥ ೯೫೩ ॥

**ವಿವರಣೆ–** ಮಿಥ್ಯಾಭೂತವಾದ ಅರ್ಥದ ಸಂಬಂಧಿಯಾದುದು ಮಿಥ್ಯಾಭೂತವಾಗುತ್ತದೆ ಎಂಬ ಅದ್ವೈತಿಗಳ ನ್ಯಾಯಕ್ಕೆ ಇಲ್ಲಿ ದೋಷವನ್ನು ಹೇಳುತ್ತಾರೆ. ಅವರಿಗೆ ಎಲ್ಲಾ ಭ್ರಮಗಳೂ ಸಾಕ್ಷಿಚೈತನ್ಯರೂಪವಾದುದು, ಎಂದರೆ ಬ್ರಹ್ಮಸ್ವರೂಪ-

ವಾದುದು ಎಂದೇ ಅರ್ಥ. ಭ್ರಾಂತಿಯಲ್ಲಿ ನಿಯಮೇನ ಮಿಥ್ಯಾಭೂತವಾದ ಅರ್ಥದ ಉಲ್ಲೇಖವಿದೆ. ಆದ್ದರಿಂದ ಮಿಥ್ಯಾಭೂತವಾದ ಅರ್ಥದ ಸಂಬಂಧವು ಬಂದುದರಿಂದ ಬ್ರಹ್ಮನೂ ಮಿಥ್ಯಾಭೂತನೇ ಆಗಬೇಕು.

**ಸತ್ಯಾರ್ಥಜ್ಞಾನರೂಪೋಽಸೌ ಕಥಂ ಮಿಥ್ಯಾ ಮಮ ಪ್ರಭುಃ ॥ ೯೫೪ ॥**

**ಅರ್ಥ–** ಮಮ ಪ್ರಭುಃ= ನನ್ನ ಸ್ವಾಮಿಯಾದ, ಅಸೌ= ಈ ಹರಿಯು, ಸತ್ಯಾರ್ಥ-ಜ್ಞಾನರೂಪಃ= ಸತ್ಯವಾದ ಅರ್ಥದ ಜ್ಞಾನರೂಪನಾದವನು. ಕಥಂ= ಹೇಗೆ, ಮಿಥ್ಯಾ= ಮಿಥ್ಯಾಭೂತನಾಗುತ್ತಾನೆ?

**ಅನುವಾದ–** ನನ್ನ ಮತದಲ್ಲಾದರೆ, ನಮ್ಮ ಬ್ರಹ್ಮನು ಸತ್ಯವಾದ ಜಗತ್ತಿನ ಜ್ಞಾನದಿಂದ ಅಭಿನ್ನನಾಗಿದ್ದಾನೆ. ಅವನು ಮಿಥ್ಯಾಭೂತನಾಗಲಿ ಎಂಬ ಆಪಾದನೆಗೆ ಅವಕಾಶವಿಲ್ಲ.

**ಭಾವವಿಲಾಸಿನೀ–** ನಾಯಂ ದೋಷೋ ಮಮೇತ್ಯಾಹ- **ಸತ್ಯಾರ್ಥೇತಿ** ॥ ೯೫೪ ॥

**ವಿವರಣೆ–** ಜಗತ್ತು ಸತ್ಯವಾಗಿದೆ. ಬ್ರಹ್ಮನಲ್ಲಿರುವ ಜಗತ್ತಿನ ಜ್ಞಾನವು ಕೂಡ ಸತ್ಯವಾದುದು. ಆ ಜ್ಞಾನಕ್ಕೆ ಬ್ರಹ್ಮನು ಆಶ್ರಯನಾಗಿದ್ದಾನೆ. ವಿಶೇಷಸಾಮರ್ಥ್ಯದಿಂದ ಜ್ಞಾನರೂಪನೂ ಆಗಿದ್ದಾನೆ. ಇಲ್ಲಿ ಮಿಥ್ಯಾಭೂತವಾದ ಅರ್ಥದ ಸಂಬಂಧದ ಪ್ರಸಕ್ತಿ ಇಲ್ಲವಾದುದರಿಂದ ಅಂತಹ ಸರ್ವಜ್ಞತ್ವಕ್ಕೆ ಐಕ್ಯವನ್ನು ಹೇಳುವುದಕ್ಕೆ ಯಾವ ಬಾಧಕವೂ ಇಲ್ಲ.

**ಮಿಥ್ಯಾರ್ಥಜ್ಞಾನರೂಪತ್ವಾತ್ ತ್ವದ್ಬ್ರಹ್ಮೈವಾಭವನ್ಮೃಷಾ ।**
**ಅತಸ್ತ್ವದ್ವಿಷಚೂರ್ಣೇನ ತವೈವಾಭೂದ್ಧಿ ಸಂಕಟಮ್ ॥ ೯೫೫ ॥**

**ಅರ್ಥ–** ಮಿಥ್ಯಾರ್ಥಜ್ಞಾನರೂಪತ್ವಾತ್= ಮಿಥ್ಯಾರ್ಥದ ಜ್ಞಾನರೂಪನಾದುದರಿಂದ, ತ್ವದ್ಬ್ರಹ್ಮೈವ= ನಿನ್ನ ಬ್ರಹ್ಮನೇ, ಮೃಷಾ ಅಭವತ್= ಮಿಥ್ಯಾಭೂತನಾದನು, ಅತಃ= ಆದ್ದರಿಂದ, ತ್ವದ್ವಿಷಚೂರ್ಣೇನ= ನಿನ್ನ ವಿಷಚೂರ್ಣದಿಂದ, ತವೈವ= ನಿನಗೇ, ಸಂಕಟಂ= ಸಂಕಟವು, ಅಭೂದ್ಧಿ= ಪ್ರಾಪ್ತವಾಯಿತಷ್ಟೇ.

**ಅನುವಾದ–** ನಿನ್ನ ಮತದಲ್ಲಿ ಬ್ರಹ್ಮನು ಮಿಥ್ಯಾರ್ಥಜ್ಞಾನರೂಪನಾದ್ದರಿಂದ ಮಿಥ್ಯಾಭೂತನೇ ಆಗುತ್ತಾನೆ. ನಿನ್ನ ವಿಷಚೂರ್ಣದಿಂದ ನಿನಗೇ ಸಂಕಟ ಉಂಟಾಯಿತಷ್ಟೇ.

**ಭಾವವಿಲಾಸಿನೀ–** ತವ ತೂಕ್ತನ್ಯಾಯೇನ ಮಿಥ್ಯಾಭೂತಾರ್ಥಸಂಬಂಧಾದ್ ಬ್ರಹ್ಮಣೋ ಮಿಥ್ಯಾತ್ವಮವರ್ಜನೀಯಮಿತ್ಯಾಹ- **ಮಿಥ್ಯಾರ್ಥೇತಿ** ॥ ಏವಂಚ ನಾಳೀಸ್ಥವಿಷಚೂರ್ಣಂ

**ನಿದ್ರಿತಸ್ಯ ರಿಪೋಃ ಗುದದ್ವಾರೇ ಮುಖವಾಯುನಾ ಆಪೂರ್ಯ ತಂ ನಾಶಯಾಮೀತ್ಯಾಗತಸ್ಯ ಸ್ವಸ್ಯೈವ ತದೀಯಗುದವಾಯುನಾ ಸ್ವೋದರಂ ಪ್ರವಿಷ್ಟೇನ ತೇನೈವ ವಿಷಚೂರ್ಣೇನೈವ ಮರಣಮಭೂದಿತ್ಯಾಭಾಣಕಸ್ಯ ತ್ವಮೇವ ಪಾತ್ರೀ ಭವಸೀತ್ಯಾಹ– ಅತ ಇತಿ ॥ ೯೫೫ ॥**

**ವಿವರಣೆ–** ಮಿಥ್ಯಾಭೂತದ ಅರ್ಥದ ಸಂಬಂಧಿಯಾದುದು ಮಿಥ್ಯಾಭೂತವಾದುದು ಎಂಬ ಅದ್ವೈತಿಗಳ ನ್ಯಾಯವು ವಿಷಚೂರ್ಣವಿದ್ದಂತೆ. ಈ ಚೂರ್ಣದಿಂದ ಬ್ರಹ್ಮನ ಗುಣಗಳ ಮಿಥ್ಯಾತ್ವವನ್ನು ಸಂಪಾದನೆ ಮಾಡುವುದು ಅವರ ಗುರಿ. ಇದಕ್ಕೆ ಸಮಾನವಾದ ಒಂದು ಗಾದೆಯ ಕಥೆಯನ್ನು ಹೇಳಿ ಗ್ರಂಥಕಾರರು ಪರಿಹಾಸ ಮಾಡುತ್ತಾರೆ. ಶತ್ರುವು ಮಲಗಿರುವಾಗ ಒಂದು ಕೊಳವೆಯಲ್ಲಿ ವಿಷಚೂರ್ಣವನ್ನು ತುಂಬಿ ಅವನ ಗುದದ್ವಾರದಲ್ಲಿ ಅದನ್ನು ತೂರಿಸಿ ಅದನ್ನು ಊದಿ ಶತ್ರುವಿನ ದೇಹದೊಳಗೆ ಸೇರುವಂತೆ ಮಾಡಲು ಹೊರಟ ಒಬ್ಬ ಪುರುಷನು ಊದಲು ಹೊರಡುವ ಸಮಯಕ್ಕೆ ಸರಿಯಾಗಿ ಶತ್ರುವಿನ ಅಪಾನವಾಯುವು ಉಂಟಾಗಿ ಆದರಿಂದ ಆ ವಿಷಚೂರ್ಣವೆಲ್ಲವೂ ಊದಲು ಹೊರಟ ಮನುಷ್ಯನ ಬಾಯಿಯ ಮೂಲಕ ಉದರವನ್ನೇ ಸೇರಿ ಅವನಿಗೇ ಮೃತ್ಯುವುಂಟಾಯಿತು ಎಂಬ ಒಂದು ಗಾದೆ. ಅದರಂತೆ ಇಲ್ಲಿಯೂ ಬ್ರಹ್ಮನ ಗುಣಗಳಿಗೆ ಮಿಥ್ಯಾತ್ವವನ್ನು ಸಂಪಾದಿಸಲು ಹೊರಟ ನಿನಗೆ ಬ್ರಹ್ಮನ ಸತ್ಯತ್ವವೇ ನಾಶವಾಗಿಹೋಗುತ್ತದೆ ಎಂದು ಅಭಿಪ್ರಾಯ.

**ಅತೋ ಭಗವತೋ ಧರ್ಮಾಃ ಸರ್ವೇ ಸರ್ವೇಶ್ವರಾತ್ಮಕಾಃ ।**
**ತಚ್ಛಕ್ತ್ಯಾ ಧರ್ಮಧರ್ಮಿತ್ವಮೇಕತಾಽನೇಕತಾದಿ ಚ ॥ ೯೫೬ ॥**

**ಅರ್ಥ–** ಅತಃ= ಆ ಕಾರಣದಿಂದ, ಭಗವತಃ= ಭಗವಂತನ, ಸರ್ವೇ ಧರ್ಮಾಃ= ಎಲ್ಲ ಧರ್ಮಗಳೂ, ಸರ್ವೇಶ್ವರಾತ್ಮಕಾಃ= ಸರ್ವೇಶ್ವರಾತ್ಮಕವಾದವುಗಳು, ತಚ್ಛಕ್ತ್ಯಾ= ಭಗವಂತನ ವಿಶೇಷ ಶಕ್ತಿಯಿಂದ, ಧರ್ಮಧರ್ಮಿತ್ವಂ= ಭಗವಂತನಿಗೆ ಧರ್ಮಿತ್ವವು, ಸರ್ವಜ್ಞತ್ವಾದಿಗಳಿಗೆ ಧರ್ಮತ್ವವು, ಚ= ಮತ್ತು, ಏಕತಾಽನೇಕತಾದಿ= ಭಗವಂತನಿಗೆ ಏಕತ್ವವು, ಸರ್ವಜ್ಞತ್ವಾದಿಗಳಿಗೆ ಅನೇಕತ್ವವು ಉಪಪನ್ನವಾಗುತ್ತದೆ.

**ಅನುವಾದ–** ಆದ್ದರಿಂದ ಭಗವಂತನ ಧರ್ಮಗಳೆಲ್ಲವೂ ಭಗವಂತನಿಂದ ಅಭಿನ್ನವಾದವು. ವಿಶೇಷಶಕ್ತಿಯಿಂದ ಧರ್ಮಧರ್ಮಿಭಾವವೂ, ಏಕತ್ವ ಮತ್ತು ಅನೇಕತ್ವಗಳೂ ಕೂಡುತ್ತವೆ.

**ಭಾವವಿಲಾಸಿನೀ–** ಅಸ್ತು ಸಾರ್ವಜ್ಞಾದೀನಾಂ ಬ್ರಹ್ಮೈಕ್ಯೇ ಬಾಧಕಾಭಾವಃ । ತಥಾಪಿ ಪ್ರಕೃತೇ ಕಿಮಾಗತಮ್? ಇತ್ಯತ ಆಹ– ಅತ ಇತಿ ॥ ಐಕ್ಯೇ ಬಾಧಕಾಭಾವಾದಿತ್ಯರ್ಥಃ ॥ ೯೫೬ ॥

**ವಿವರಣೆ–** ಸರ್ವಜ್ಞತ್ವಾದಿಗಳು ಬ್ರಹ್ಮನಿಂದ ಅಭಿನ್ನವಾಗಲು ಏನೂ ಬಾಧಕವಿಲ್ಲ ಎಂಬುದರಿಂದ ಪ್ರಕೃತದಲ್ಲಿ ಯಾವ ಪ್ರಯೋಜನವು ಸಿದ್ಧಿಸಿತು ಎಂಬ ವಿಷಯವನ್ನು

ಇಲ್ಲಿ ನಿರೂಪಿಸುತ್ತಾರೆ. ಭಗವಂತನ ಗುಣಗಳೆಲ್ಲವೂ ಭಗವತ್ಸ್ವರೂಪವೇ ಆಗಿವೆ. ಆದರೂ ಬ್ರಹ್ಮನಲ್ಲಿರುವ ವಿಶೇಷ ಸಾಮರ್ಥ್ಯದಿಂದ ಬ್ರಹ್ಮನು ಗುಣಿ ಮತ್ತು ಸರ್ವಜ್ಞತ್ವಾದಿಗಳು ಗುಣಗಳೆಂದೂ, ಬ್ರಹ್ಮನು ಒಬ್ಬನೇ ಆದರೂ ಸರ್ವಜ್ಞತ್ವಾದಿಗುಣಗಳು ಅನೇಕವೆಂದೂ ಸಿದ್ಧವಾಗುತ್ತದೆ ಎಂದು ತಾತ್ಪರ್ಯ.

**ತಸ್ಮಾದ್ ಗುಣಾನೃತತ್ವಾಶಾ ನಾರೀಗರ್ಭಸ್ರವೋಽಪ್ಯಭೂತ್ ।**
**ನೇಹ ನಾನೇತಿವಾಕ್ಯೇನ ಭಿನ್ನಸ್ಯೈವ ನಿಷೇಧನಾತ್ ॥ ೬೫೭ ॥**

**ಅರ್ಥ–** ನೇಹ ನಾನೇತಿವಾಕ್ಯೇನ= ನೇಹ ನಾನಾ ಎಂಬ ವಾಕ್ಯದಿಂದ, ಭಿನ್ನಸ್ಯೈವ= ಭಿನ್ನವಾದ ಗುಣಗಳನ್ನೇ, ನಿಷೇಧನಾತ್= ನಿಷೇಧ ಮಾಡುವುದರಿಂದ, ತಸ್ಮಾತ್= ಆ ಕಾರಣದಿಂದ, ಗುಣಾನೃತತ್ವಾಶಾನಾರೀಗರ್ಭಸ್ರವಃ ಅಪಿ= ಗುಣಗಳ ಅನೃತತ್ವದ ಆಶೆಯಿಂದ ನಾರಿಯ ಗರ್ಭಸ್ರಾವವು, ಅಭೂತ್= ಉಂಟಾಯಿತು.

**ಅನುವಾದ– ಆದ್ದರಿಂದ ಗುಣಗಳು ಮಿಥ್ಯಾ ಎಂಬ ನಿನ್ನ ಆಸೆಯೆಂಬ ನಾರಿಗೆ ಗರ್ಭಸ್ರಾವವಾಯಿತು. ಏಕೆಂದರೆ, 'ನೇಹ ನಾನಾ' ಎಂಬ ವಾಕ್ಯವು ಭಿನ್ನವಾದ ಗುಣಗಳನ್ನಷ್ಟೇ ನಿಷೇಧ ಮಾಡುತ್ತದೆ.**

**ಭಾವವಿಲಾಸಿನೀ– ತಸ್ಮಾದ್ ಗುಣಾನಾಂ ಬ್ರಹ್ಮಸ್ವರೂಪತ್ವಾತ್ । ಗರ್ಭಸ್ರವೇ ನಿಮಿತ್ತಮಾಹ– ನೇಹೇತಿ ॥೬೫೭॥**

**ವಿವರಣೆ–** ಗುಣಗಳೆಲ್ಲವೂ ಬ್ರಹ್ಮಸ್ವರೂಪವಾದ್ದರಿಂದ ಬ್ರಹ್ಮನು ಸತ್ಯನಾದುದರಿಂದ ಗುಣಗಳು ಮಿಥ್ಯಾ ಎಂಬ ನಿನ್ನ ಆಸೆಯು ನಾರಿ. ಗುಣಮಿಥ್ಯಾತ್ವವು ಅವಳ ಗರ್ಭ. ಅದು ಗರ್ಭಸ್ರಾವವಾಗಿ ಹೊರಟುಹೋಯಿತು. 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು ಭಿನ್ನವಾದ ಗುಣಗಳನ್ನಷ್ಟೇ ನಿಷೇಧ ಮಾಡುತ್ತದೆ, ಅಭಿನ್ನವಾದ ಗುಣಗಳನ್ನಲ್ಲ ಎಂದು ಅಭಿಪ್ರಾಯ.

**ಅತೋಽಸ್ಮದುಕ್ತಸದ್ಯುಕ್ತಿಶೃಂಖಲಾಭಿಃ ಪದೇಪದೇ ।**
**ಬದ್ಧಾಯಾ ಬ್ರಹ್ಮಸುಗುಣಸರ್ವಸ್ವದ್ರೋಹದೋಷತಃ ॥ ೬೫೮ ॥**

**ಕಾರಾಗೃಹನಿವಿಷ್ಟಾಯಾ ನಿರ್ಗುಣೋಕ್ತೇರ್ನ ಮೋಚಕಃ ।**
**ವಿನಾ ತ್ರಿಗುಣಶೂನ್ಯತ್ವರೂಪಾರ್ಥಸ್ಯ ಪ್ರದಾನತಃ ॥**
**ನಾಪರಃ ಕೋಽಪ್ಯುಪಾಯಃ ಸ್ಯಾದಿತಿ ಸರ್ವಸ್ಯ ಸಮ್ಮತಮ್ ॥ ೬೫೯ ॥**

**ಅರ್ಥ–** ಅತಃ= ಆ ಕಾರಣದಿಂದ, ಬ್ರಹ್ಮಸುಗುಣಸರ್ವಸ್ವದ್ರೋಹದೋಷತಃ= ಬ್ರಹ್ಮನ ಶ್ರೇಷ್ಠವಾದ ಸರ್ವಸುಗುಣಗಳಿಗೆ ದ್ರೋಹವನ್ನು ಮಾಡಿದ ದೋಷದಿಂದ, ಅಸ್ಮದುಕ್ತ-

ಸದ್ಯುಕ್ತಿಶ್ರಂಖಲಾಭಿಃ= ನಾವು ಹೇಳಿದ ಸದ್ಯುಕ್ತಿಗಳೆಂಬ ಸಂಕೋಲೆಗಳಿಂದ, ಪದೇಪದೇ= ಹೆಜ್ಜೆಹೆಜ್ಜೆಗಳಲ್ಲಿಯೂ, ಬದ್ಧಾಯಾಃ= ಬದ್ಧಳಾಗಿ, ಕಾರಾಗೃಹನಿವಿಷ್ಟಾಯಾಃ= ಕಾರಾಗೃಹದಲ್ಲಿ ಇಡಲ್ಪಟ್ಟಿರುವ, ನಿರ್ಗುಣೋಕ್ತೇಃ= ನಿರ್ಗುಣೋಕ್ತಿಗೆ, ಮೋಚಕಃ= ಮೋಚಕವಾದುದು, ತ್ರಿಗುಣಶೂನ್ಯತ್ವರೂಪಾರ್ಥಸ್ಯ= ತ್ರಿಗುಣಶೂನ್ಯತ್ವರೂಪಾರ್ಥವನ್ನು, ಪ್ರದಾನತಃ ವಿನಾ= ಕೊಡುವುದನ್ನು ಬಿಟ್ಟು, ನಾಪರಃ= ಬೇರೆ, ಕೋಽಪಿ ಉಪಾಯಃ= ಯಾವ ಉಪಾಯವೂ, ನ ಸ್ಯಾದಿತಿ= ಇಲ್ಲವೆಂಬುದಾಗಿ, ಸರ್ವಸ್ಯ ಸಮ್ಮತಮ್= ಎಲ್ಲರಿಗೂ ಸಮ್ಮತವಾದುದು.

**ಅನುವಾದ–** ಆದ್ದರಿಂದ ನಿರ್ಗುಣೋಕ್ತಿ ಎಂಬ, ನಿನಗೆ ಅಭಿಪ್ರೇತಳಾದ ನಾರಿಯು ನಾವು ಹೇಳಿದ ಸದ್ಯುಕ್ತಿಗಳೆಂಬ ಶೃಂಖಲೆಗಳಿಂದ ಹೆಜ್ಜೆಹೆಜ್ಜೆಗೂ ಬದ್ಧಳಾಗಿ ಬ್ರಹ್ಮನ ಸದ್ಗುಣಗಳಿಗೆ ದ್ರೋಹವನ್ನು ಮಾಡಿದ ಕಾರಣದಿಂದ ಕಾರಾಗೃಹದಲ್ಲಿ ಬಂಧಿಸಲ್ಪಟ್ಟಿದ್ದಾಳೆ. ಅವಳನ್ನು ಬಿಡಿಸುವವರು ಬೇರೆ ಯಾರೂ ಇಲ್ಲ. ಆ ನಿರ್ಗುಣಶ್ರುತಿಗೆ ತ್ರಿಗುಣಶೂನ್ಯತ್ವ ಎಂಬ ಅರ್ಥವನ್ನು ನೀಡಿದರೆ ಮಾತ್ರ ಅವಳು ಬಂಧನದಿಂದ ಬಿಡುಗಡೆಯನ್ನು ಹೊಂದುತ್ತಾಳೆ. ಅದನ್ನು ಬಿಟ್ಟು ಬೇರೆ ಯಾವ ಉಪಾಯವೂ ಇಲ್ಲ. ಆದ್ದರಿಂದ ನಾವು ಹೇಳಿದುದೆಲ್ಲಾ ಅತ್ಯಂತ ಸಮಂಜಸವಾಗಿದೆ.

**ಭಾವವಿಲಾಸಿನೀ–**ನಿರ್ಗುಣಶ್ರುತ್ಯರ್ಥಕಥನಂ ಸಾಹಿತ್ಯಮುದ್ರಯಾ ಉಪಸಂಹರತಿ–**ಅತ ಇತಿ** ॥ ಬ್ರಹ್ಮಸುಗುಣಸರ್ವಸ್ವದ್ರೋಹದೋಷತಃ ಅಸ್ಮದುಕ್ತಸದ್ಯುಕ್ತಿಶೃಙ್ಖಲಾಭಿಃ ಪದೇಪದೇ ಬದ್ಧಾಯಾಃ ಮಾಯಾವಾದಿಹೃದಯಾಖ್ಯಕಾರಾಗೃಹೇ ನಿವಿಷ್ಟಾಯಾಃ ನಿರ್ಗುಣೋಕ್ತೇಸ್ತ್ರಿಗುಣಶೂನ್ಯತ್ವ ರೂಪಾರ್ಥಸ್ಯ ಪ್ರದಾನತಃ ಪ್ರದಾನಂ ವಿನಾ ಅಪರೋ ಮೋಚಕಃ ಕೋಽಪ್ಯುಪಾಯೋ ನ ಸ್ಯಾತ್ ಸರ್ವಸ್ಯ ಯುಕ್ತಿಮತ ಇತಿ ಸಂಬಂಧಃ ॥ ೯೫೮-೯೫೯ ॥

**ವಿವರಣೆ–** ಈ ಶ್ಲೋಕದಲ್ಲಿ ಗ್ರಂಥಕಾರರು ನಿರ್ಗುಣೋಕ್ತಿಯನ್ನು ಒಬ್ಬ ವನಿತೆಗೆ ಹೋಲಿಸಿ ನಿರೂಪಿಸಿದ್ದಾರೆ. ನಿರ್ಗುಣಶ್ರುತಿಯು ಸದ್ಗುಣವನ್ನು ಹೇಳುವ ಎಲ್ಲಾ ಶ್ರುತಿಗಳಿಗೂ ವಿರೋಧವನ್ನು ಮಾಡಿ ಬ್ರಹ್ಮನ ಗುಣಸರ್ವಸ್ವವನ್ನು ಅಪಹಾರ ಮಾಡುವ ಕಾರಣದಿಂದ ಅವಳನ್ನು ನಾವು ಹೇಳಿದ ಸದ್ಯುಕ್ತಿಗಳಿಂದ ಎರಡೂ ಕಾಲುಗಳಲ್ಲಿಯೂ ಬಂಧನ ಮಾಡಿ, ಮಾಯಾವಾದಿಗಳ ಹೃದಯವೆಂಬ ಕಾರಾಗೃಹದಲ್ಲಿ ನಮ್ಮಿಂದ ಇಡಲ್ಪಟ್ಟಿದ್ದಾಳೆ. ಅವಳನ್ನು ಬಿಡಿಸಬೇಕಾದರೆ, ಯಾವುದಾದರೂ ಉಪಾಯದಿಂದ ಬಿಡಿಸಬೇಕು. ಆ ಉಪಾಯವೆಂದರೆ, ನಿರ್ಗುಣಶ್ರುತಿಯು ಬ್ರಹ್ಮನ ಎಲ್ಲಾ ಗುಣಗಳನ್ನು ನಿಷೇಧಮಾಡದೆ, ಬ್ರಹ್ಮನಿಂದ ಭಿನ್ನವಾದ ತ್ರಿಗುಣಗಳನ್ನು ಮಾತ್ರ ನಿಷೇಧ ಮಾಡುವುದು. ಅದನ್ನು ಬಿಟ್ಟು ಬೇರೆ ಯಾವ ಉಪಾಯವೂ ದೊರೆಯುವುದಿಲ್ಲ. ಆದ್ದರಿಂದ ನಾವು ನಿರೂಪಿಸಿದ ಎಲ್ಲಾ ಪ್ರಮೇಯವೂ ಅತ್ಯಂತ ಸಮಂಜಸವಾಗಿದೆ.

ಅಭಿನ್ನಗುಣಸತ್ಯತ್ವಧ್ರೌವ್ಯಾದ್ ಬ್ರಹ್ಮಸುಖಾದಿವತ್ ॥ ೯೬೦ ॥

**ಅರ್ಥ–** ಬ್ರಹ್ಮಸುಖಾದಿವತ್= ಬ್ರಹ್ಮಸುಖಾದಿಗಳಂತೆ, ಅಭಿನ್ನಗುಣಸತ್ಯತ್ವಧ್ರೌವ್ಯಾತ್= ಅಭಿನ್ನವಾದ ಗುಣಗಳಿಗೆ ಸತ್ಯತ್ವವು ಆವಶ್ಯಕವಾಗಿರುವುದರಿಂದ (ತ್ರಿಗುಣಶೂನ್ಯತ್ವ-ರೂಪವಾದ ಅರ್ಥವನ್ನು ಹೇಳುವುದು ಬಿಟ್ಟು ಬೇರೆ ಯಾವ ಉಪಾಯವೂ ಇಲ್ಲವೆಂದು ಸರ್ವಸಮ್ಮತವಾಗಿದೆ).

**ಅನುವಾದ–** ಭಿನ್ನವಾದ ಗುಣಗಳನ್ನು ನಿಷೇಧಮಾಡಿದುದರಿಂದ ಅಭಿನ್ನವಾದ ಗುಣಗಳು ಬ್ರಹ್ಮನಲ್ಲಿ ಸತ್ಯವಾಗಿ ಇವೆ ಎಂದು ಸಿದ್ಧವಾಗುವುದರಿಂದ ಬ್ರಹ್ಮನ ಸುಖದಂತೆ ಸರ್ವಜ್ಞತ್ವಾದಿಗಳೂ ಸಹ ಸತ್ಯವೇ ಆಗಿವೆ.

**ಭಾವವಿಲಾಸಿನೀ–** ಕುತ ಇತ್ಯತ ಆಹ– **ಅಭಿನ್ನೇತಿ** ॥ ಬ್ರಹ್ಮಸುಖಾದಿವದ್ ಅಭಿನ್ನಬ್ರಹ್ಮಗುಣಾನಾಂ ಸಾರ್ವಜ್ಞಾದೀನಾಮ್ । ಧ್ರೌವ್ಯಾತ್ ನಿಮಿತ್ತಾದಪರಃ ಕೋಽಪ್ಯುಪಾಯೋ ನಾಸ್ತೀತಿ ಪೂರ್ವೇಣ ಸಂಬಂಧಃ ॥ ೯೬೦ ॥

**ವಿವರಣೆ–** 'ನೇಹ ನಾನಾಸ್ತಿ' ಶ್ರುತಿಯು ಬ್ರಹ್ಮನ ಸುಖವನ್ನು ನಿಷೇಧಮಾಡುವುದಿಲ್ಲ ಎಂಬುದು ಅದ್ವೈತಿಗಳಿಗೂ ಸಮ್ಮತ. ನಾವು ಇಷ್ಟು ವಾದಗಳಿಂದ ಭಿನ್ನವಾದ ಗುಣಗಳನ್ನೇ ಅದು ನಿಷೇಧ ಮಾಡುತ್ತದೆ ಎಂದು ಹೇಳಿದ್ದೇವೆ. ಭಿನ್ನವಾದ ಗುಣಗಳು ಇಲ್ಲ ಎಂದು ಹೇಳಿದರೆ, ಅಭಿನ್ನವಾದ ಗುಣಗಳು ಇವೆ ಎಂದು ಹೇಳಿದಂತಾಯಿತು. ಇದನ್ನು ಒಪ್ಪಿದರೆ ಮಾತ್ರ ಬ್ರಹ್ಮನಲ್ಲಿ ಆನಂದಾದಿಗಳು ಸಿದ್ಧವಾಗುತ್ತವೆ. ಇದೇ ನ್ಯಾಯದಿಂದ ಸರ್ವಜ್ಞತ್ವಾದಿಗುಣಗಳೂ ಸಹ ಅಭಿನ್ನವಾದುದರಿಂದ ಸರ್ವಜ್ಞತ್ವಾದಿ-ಗುಣಗಳೂ ಸಿದ್ಧವಾಗುತ್ತವೆ.

**ಅಭೇದೇಽಪ್ಯನ್ಯಶೇಷೋ ನ ಯಥಾ ತವ ತಥಾ ಮಮ ।**
**ಅನ್ಯಥಾ ತಾರ್ಕಿಕೋ ಜೀಯಾನ್ಮೋಕ್ಷಃ ಸ್ಯಾದಪ್ರಯೋಜಕಃ ॥ ೯೬೧ ॥**

**ಅರ್ಥ–** ಅಭೇದೇಽಪಿ= ಅಭೇದವೇ ಇದ್ದರೂ, ಯಥಾ= ಹೇಗೆ, ತವ= ನಿನಗೆ, ಅನ್ಯಶೇಷೋ ನ= ಅನ್ಯತರ ಪರಿಶೇಷವಿಲ್ಲವೋ, ತಥಾ= ಹಾಗೆಯೇ, ಮಮ= ನನಗೂ ಆಗುತ್ತದೆ. ಅನ್ಯಥಾ= ಇಲ್ಲದಿದ್ದರೆ, ತಾರ್ಕಿಕಃ= ತಾರ್ಕಿಕನು, ಜೀಯಾತ್= ಜಯಿಸುತ್ತಾನೆ, ಮೋಕ್ಷಃ= ಮೋಕ್ಷವು, ಅಪ್ರಯೋಜಕಃ= ಅಪ್ರಯೋಜಕವಾಗಿ, ಸ್ಯಾತ್= ಆಗುತ್ತದೆ.

**ಅನುವಾದ–** ಹೇಗೆ ನಿನಗೆ ಬ್ರಹ್ಮ ಮತ್ತು ಸುಖಕ್ಕೆ ಅಭೇದವಿದ್ದರೂ ಅನ್ಯತರ ಪರಿಶೇಷವಿಲ್ಲವೋ, ಹಾಗೆಯೇ ನನಗೆ ಬ್ರಹ್ಮ ಮತ್ತು ಸರ್ವಜ್ಞತ್ವಗಳಿಗೆ ಅನ್ಯತರ ಪರಿಶೇಷವಿಲ್ಲ. ಇಲ್ಲದಿದ್ದರೆ ಬ್ರಹ್ಮನಲ್ಲಿ ಸುಖಾಭಾವವನ್ನು ಹೇಳುವ ತಾರ್ಕಿಕನೇ ಗೆಲ್ಲುತ್ತಾನೆ. ಮತ್ತು ಮೋಕ್ಷವು ಅಪ್ರಯೋಜಕವಾಗುತ್ತದೆ.

**ಭಾವವಿಲಾಸಿನೀ–** ನನು ಗುಣಾನಾಮಭೇದೇ ಏಕತರಪರಿಶೇಷಃ ಸ್ಯಾದಿತ್ಯತ ಆಹ– **ಅಭೇದೇಽಪೀತಿ** ॥ ಯಥಾ ತವ ಸುಖಾದಾವಭೇದೇಽಪ್ಯೇಕಶೇಷೋ ನ ಬ್ರಹ್ಮೈವಾಸ್ತಿ । ನ

**ಸುಖಂ ನಾಮ ಕಿಂಚಿದಸ್ತೀತ್ಯೇಕಸ್ಯೈವಾವಶೇಷಃ, ತಥಾ ಮಮ ಬ್ರಹ್ಮಗುಣಾನಾಮಭೇದೇಽಪ್ಯೇಕಶೇಷೋ ನೇತಿ ಯೋಜನಾ । ಅನ್ಯಥಾ ಸುಖಾದಾವೇಕಶೇಷೋ ಭವತಿ ಚೇತ್ ತಾರ್ಕಿಕಃ ಜೇಯಾತ್ । ಬ್ರಹ್ಮಣಿ ದುಃಖನಿವೃತ್ತಿರೇವಾಸ್ತಿ ನ ಸುಖಮಿತಿ ತದುಕ್ತಪ್ರಮೇಯಸ್ಯ ತ್ವಯಾಽಪ್ಯಂಗೀಕಾರಾದಿತಿ ಭಾವಃ । ಕಿಂಚೈವಂ ಸತಿ ದುಃಖನಿವೃತ್ತಿರೇವ ಮೋಕ್ಷ ಇತ್ಯುಕ್ತಂ ಸ್ಯಾತ್ । ತತಃ ಸುಖಾಭಾವಾನ್ಮುಕ್ತಿರಪುರುಷಾರ್ಥಃ ಸ್ಯಾದಿತ್ಯಾಹ– ಮೋಕ್ಷ ಇತಿ ॥ ೯೬೦ ॥**

**ವಿವರಣೆ–** ಗುಣಗಳು ಬ್ರಹ್ಮನಿಂದ ಅಭಿನ್ನವಾದರೆ ಏಕತರಪರಿಶೇಷವುಂಟಾಗಲಿ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ನಿನ್ನ ಮತದಲ್ಲಿ ಬ್ರಹ್ಮನಿಗೂ ಮತ್ತು ಬ್ರಹ್ಮನ ಸುಖಕ್ಕೂ ಅಭೇದವಿದೆ. ಆದರೂ ಬ್ರಹ್ಮನು ಮಾತ್ರ ಇದ್ದಾನೆ. ಸುಖವೆಂಬುದು ಇಲ್ಲ ಎಂಬ ಏಕತರಪರಿಶೇಷವನ್ನು ನೀನು ಒಪ್ಪುವುದಿಲ್ಲ. ಅದರಂತೆ ನನಗೂ ಸರ್ವಜ್ಞತ್ವದ ವಿಷಯದಲ್ಲಿ ಏಕತರಪರಿಶೇಷವು ಇರುವುದಿಲ್ಲ. ಸುಖಾದಿಗಳ ವಿಷಯದಲ್ಲಿ ಏಕತರಪರಿಶೇಷವನ್ನು ಒಪ್ಪಿದರೆ, ಬ್ರಹ್ಮನೇ ಇದ್ದಾನೆ ಸುಖವಿಲ್ಲ ಎಂಬುದಾಯಿತು. ಆಗ ಬ್ರಹ್ಮನಲ್ಲಿ ದುಃಖಾಭಾವಾತಿರಿಕ್ತವಾದ ಸುಖವಿಲ್ಲವೆಂದು ಹೇಳುವ ತಾರ್ಕಿಕರ ಪ್ರಮೇಯವನ್ನು ನೀನು ಅಂಗೀಕರಿಸುವುದರಿಂದ ತಾರ್ಕಿಕನೇ ಗೆಲ್ಲುತ್ತಾನೆ. ಅದೂ ಅಲ್ಲದೆ ಆಗ ಸುಖಪ್ರಾಪ್ತಿಯು ಮೋಕ್ಷ ಎಂದು ಹೇಳಲು ಬರುವುದಿಲ್ಲ. ದುಃಖನಿವೃತ್ತಿಯೇ ಮೋಕ್ಷ ಎಂದು ಹೇಳಬೇಕು. ಆಗ ಮೋಕ್ಷವು ಪುರುಷಾರ್ಥವಾಗುವುದಿಲ್ಲ. ದುಃಖನಿವೃತ್ತಿಗಿಂತ ಅತಿರಿಕ್ತವಾದ ಸುಖವನ್ನು ಒಪ್ಪದಿರುವ ಪಕ್ಷದಲ್ಲಿ ತಾರ್ಕಿಕನೇ ಗೆಲ್ಲುತ್ತಾನೆ.

**ಯಥಾ ಸುಖಾಭಾವವಾದಾದ್ ಭಿನ್ನಸ್ತ್ವಂ ಪ್ರತಿವಾದ್ಯಭೂಃ ।**
**ತಥಾ ನಿರ್ಗುಣತಾವಾದಾದ್ ಗುಣವಾದೀ ಭವಾಮ್ಯಹಮ್ ॥ ೯೬೨ ॥**

**ಅರ್ಥ–** ಸುಖಾಭಾವವಾದಾದ್= ಸುಖಾಭಾವವನ್ನು ಹೇಳುವ ವಾದಕ್ಕಿಂತಲೂ, ಭಿನ್ನಃ= ಭಿನ್ನವಾದ ಪ್ರಮೇಯ ಉಳ್ಳ, ತ್ವಂ= ನೀನು, ಯಥಾ= ಹೇಗೆ, ಪ್ರತಿವಾದ್ಯಭೂಃ= ತಾರ್ಕಿಕರಿಗೆ ಪ್ರತಿವಾದಿಯಾದೆಯೋ, ತಥಾ= ಹಾಗೆ, ನಿರ್ಗುಣವಾದಾದ್= ನಿರ್ಗುಣತ್ವ ವಾದಕ್ಕಿಂತಲೂ ಭಿನ್ನವಾದವುಳ್ಳ, ಗುಣವಾದೀ= ಗುಣವಾದಿಯಾಗಿ, ಅಹಂ= ನಾನು, ಭವಾಮಿ= ಆಗುತ್ತೇನೆ.

**ಅನುವಾದ– ತಾರ್ಕಿಕರ ಸುಖಾಭಾವಕ್ಕಿಂತಲೂ ಭಿನ್ನವಾದವುಳ್ಳ ನೀನು ಹೇಗೆ ತಾರ್ಕಿಕನಿಗೆ ಪ್ರತಿವಾದಿಯಾದೆಯೋ, ಅದರಂತೆ ನಿರ್ಗುಣವಾದಿಯಾದ ನಿನಗಿಂತ ಭಿನ್ನವಾದ ಗುಣವಾದಿಯಾದ ನಾನು ನಿನಗೆ ಪ್ರತಿವಾದಿಯಾಗುತ್ತೇನೆ.**

**ಭಾವವಿಲಾಸಿನೀ–** ಅಭಿನ್ನಗುಣತಾಪಕ್ಷೇ ಮಾಯಾವಾದ್ಯುಕ್ತಗುಣಾಭಾವಪಕ್ಷಸ್ಯ ಭವದುಕ್ತಸಗುಣವಾದಸ್ಯ ಕೋ ವಿಶೇಷ ಇತ್ಯತಃ ಅಭಿನ್ನಸುಖತಾಪಕ್ಷೇ ತಾರ್ಕಿಕೋಕ್ತಸುಖಾಭಾವಪಕ್ಷಾತ್ ಸುಖವಾದಿನಸ್ತವ ಯೋ ವಿಶೇಷಃ ಸ ಏವ ಮಮಾಪಿ ಸ್ಯಾದಿತ್ಯಾಹ–

**ಯಥೇತಿ** ॥ ಪ್ರತಿವಾದೀ ಸುಖಭಾವವಾದೀ । ಭಿನ್ನ ಇತಿ ದಾರ್ಷ್ಟಾಂತಿಕೇಽಪಿ ಯೋಜನೀಯಮ್ ॥ ೯೬೨ ॥

**ವಿವರಣೆ–** ಗುಣಗಳು ಅಭಿನ್ನ ಎಂದು ಒಪ್ಪಿದರೆ ಗುಣಗಳು ಬ್ರಹ್ಮಸ್ವರೂಪ ಎಂದಾಯಿತು. ಆಗ ಬ್ರಹ್ಮನನ್ನು ಬಿಟ್ಟು ಬೇರೆ ಗುಣವಿಲ್ಲದಿರುವುದರಿಂದ ಮಾಯಾವಾದಿಗಳು ಹೇಳುವ ಗುಣಾಭಾವಪಕ್ಷಕ್ಕೂ ಮತ್ತು ಸಿದ್ಧಾಂತಿಗಳು ಹೇಳುವ ಗುಣವಾದಕ್ಕೂ ಏನು ವೈಲಕ್ಷಣ್ಯ ಎಂದು ಕೇಳಿದರೆ ಸುಖವು ಅಭಿನ್ನವೆಂದು ಹೇಳುವ ಮಾಯಾವಾದಿಗಳ ಪಕ್ಷದಲ್ಲಿ ಬ್ರಹ್ಮನಲ್ಲಿ ಸುಖದ ಅಭಾವವಿದೆಯೆಂದು ಹೇಳುವ ತಾರ್ಕಿಕರ ಪಕ್ಷಕ್ಕಿಂತ ಹೇಗೆ ವೈಲಕ್ಷಣ್ಯವಿದೆಯೋ ಹಾಗೆಯೇ ನನಗೂ ವೈಲಕ್ಷಣ್ಯವು ಕೂಡುತ್ತದೆ ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ.

**ಗುಣತಾ ಗುಣಿತಾ ಚ ಸ್ಯಾತ್ ಸುಖತಾ ಸುಖಿತಾ ಯಥಾ ।**
**ಆನಂದಂ ಬ್ರಹ್ಮಣೋ ವಿದ್ವಾನಿತ್ಯಪ್ಯಾಹ ಶ್ರುತಿಃ ಸ್ಫುಟಮ್ ॥ ೯೬೩ ॥**

**ಅರ್ಥ–** ಯಥಾ= ಹೇಗೆ, ಸುಖತಾ ಸುಖಿತಾ= ಸುಖತ್ವ ಮತ್ತು ಸುಖಿತ್ವವು ಇವೆಯೋ, ಹಾಗೆಯೇ, ಗುಣತಾ ಗುಣಿತಾ ಚ= ಗುಣತ್ವವು ಮತ್ತು ಗುಣಿತ್ವವು, ಸ್ಯಾತ್= ಉಪಪನ್ನವಾಗುತ್ತದೆ, ಶ್ರುತಿಃ= ವೇದವು, ಆನಂದಂ ಬ್ರಹ್ಮಣೋ ವಿದ್ವಾನ್= ಬ್ರಹ್ಮನ ಆನಂದವನ್ನು ತಿಳಿದವನು, ಇತ್ಯಪಿ= ಎಂದೂ, ಸ್ಫುಟಮ್= ಸ್ಪಷ್ಟವಾಗಿ, ಆಹ= ಹೇಳಿದೆ.

**ಅನುವಾದ–** ಬ್ರಹ್ಮನಿಗೆ ಸುಖತ್ವವು ಮತ್ತು ಸುಖಿತ್ವವು ಉಪಪನ್ನವಾಗುವಂತೆ ಅಭಿನ್ನವಾದರೂ ಸರ್ವಜ್ಞತ್ವಾದಿಗಳಿಗೆ ಗುಣತ್ವವು, ಬ್ರಹ್ಮನಲ್ಲಿ ಗುಣಿತ್ವವು ಉಪಪನ್ನವಾಗುತ್ತದೆ. ಶ್ರುತಿಯು ಯಾವನು ಬ್ರಹ್ಮನ ಆನಂದವನ್ನು ತಿಳಿಯುತ್ತಾನೆಯೋ ಎಂದು ಸ್ಪಷ್ಟವಾಗಿ ಆನಂದಕ್ಕೆ ಗುಣತ್ವವನ್ನು ಹೇಳಿದೆ.

**ಭಾವವಿಲಾಸಿನೀ–** ಅಭೇದೇ ಗುಣಗುಣಿಭಾವಃ ಕಥಮ್? ಇತ್ಯತ ಆಹ– **ಗುಣತೇತಿ** ॥ ಅಸ್ಯ ಸುಖಸ್ಯ ಬ್ರಹ್ಮಣಶ್ಚ ಸುಖತಾ ಸುಖಿತಾ ಯಥಾ, ತಥಾ ಅಸ್ಯ ಬ್ರಹ್ಮಣಃ ತತ್ಸಾರ್ವಜ್ಞಾದೇಶ್ಚ ಗುಣತಾ ಗುಣಿತಾ ಚ ಸ್ಯಾದಿತಿ ಯೋಜನಾ । ನನು ಬ್ರಹ್ಮಣಿ 'ವಿಜ್ಞಾನಮಾನನ್ದಂ ಬ್ರಹ್ಮ' ಇತಿ ಸುಖತೈವಾಸ್ತಿ ನ ಸುಖಿತೇತಿ ಚೇತ್ ತತ್ರಾಹ– **ಆನಂದಮಿತಿ** ॥ ೯೬೩ ॥

**ವಿವರಣೆ–** ಅಭೇದವಿದ್ದರೆ ಗುಣಗುಣಿಭಾವವು ಹೇಗೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಸುಖಕ್ಕೂ ಮತ್ತು ಬ್ರಹ್ಮನಿಗೆ ಸುಖತ್ವ ಮತ್ತು ಸುಖಿತ್ವವು ಹೇಗೆ ಕೂಡುತ್ತದೆಯೋ, ಹಾಗೆಯೇ ಸರ್ವಜ್ಞತ್ವಾದಿಗಳಿಗೆ ಗುಣತ್ವವು, ಬ್ರಹ್ಮನಿಗೆ ಗುಣಿತ್ವವು ಕೂಡುತ್ತದೆ. ಬ್ರಹ್ಮನು 'ವಿಜ್ಞಾನಂ ಆನಂದಂ ಬ್ರಹ್ಮ' ಎಂಬ ಶ್ರುತಿಯಲ್ಲಿ ಆನಂದರೂಪನಾಗಿ ಹೇಳಲ್ಪಡುತ್ತಾನೆ. ಹೀಗಿರುವಾಗ ಬ್ರಹ್ಮನಲ್ಲಿ ಸುಖಿತ್ವವಿಲ್ಲವೆಂದು

ಹೇಳಿದರೆ ಅದಕ್ಕೆ 'ಆನಂದಂ ಬ್ರಹ್ಮಣೋ ವಿದ್ವಾನ್' ಎಂಬ ಶ್ರುತಿಯು ಬ್ರಹ್ಮನ ಆನಂದವೆಂದು ಹೇಳಿ, ಆನಂದಾಶ್ರಯನಾದವನು ಬ್ರಹ್ಮನೆಂದು ತಿಳಿಸುತ್ತಾ ಬ್ರಹ್ಮನಿಗೆ ಸುಖಿತ್ವವನ್ನು ಹೇಳಿದೆ. ಆದ್ದರಿಂದ ಅದರಂತೆ ನನಗೂ ಉಪಪನ್ನವಾಗುತ್ತದೆ ಎಂದು ತಾತ್ಪರ್ಯ.

**ಯದ್ಯಮುಷ್ಯೋಪಚಾರತ್ವಂ ಜಿತಂ ತಾರ್ಕಿಕಬಾಲಕೈಃ ।**
**ದುಃಖಾಭಾವಪರತ್ವಂ ಹಿ ಶ್ರುತೀನಾಂ ವಕ್ತ್ಯಸೌ ಖಲಃ ॥ ೯೬೪ ॥**

**ಅರ್ಥ–** ಅಮುಷ್ಯ= 'ಆನಂದಂ ಬ್ರಹ್ಮಣೋ ವಿದ್ವಾನ್' ಎಂಬ ವಾಕ್ಯಕ್ಕೆ, ಉಪಚಾರತ್ವಂ ಯದಿ= ಉಪಚಾರತ್ವವನ್ನು ಹೇಳುವುದಾದರೆ, ತಾರ್ಕಿಕಬಾಲಕೈಃ= ತಾರ್ಕಿಕ ಬಾಲಕರಿಂದ, ಜಿತಂ= ನೀನು ಗೆಲ್ಲಲ್ಪಡುತ್ತೀಯೆ, ಅಸೌ ಖಲಃ= ಈ ತಾರ್ಕಿಕಕನು, ಶ್ರುತೀನಾಂ= ಆನಂದ ಶ್ರುತಿಗಳಿಗೆ, ದುಃಖಾಭಾವಪರತ್ವಂ= ದುಃಖಾಭಾವಪರತ್ವವನ್ನು, ವಕ್ತಿ ಹಿ= ಹೇಳುತ್ತಾನಷ್ಟೇ?

**ಅನುವಾದ–** 'ಆನಂದಂ ಬ್ರಹ್ಮಣಃ' ಎಂಬ ಷಷ್ಠೀಪ್ರಯೋಗವು ಉಪಚರಿತ-ಪ್ರಯೋಗವೆಂದು ಹೇಳುವುದಿದ್ದರೆ ತಾರ್ಕಿಕಬಾಲಕರಿಂದ ಪರಾಜಿತನಾಗುತ್ತೀಯೆ, ಏಕೆಂದರೆ ಆ ಖಳನು ಸುಖಶ್ರುತಿಗಳಿಗೆ ದುಃಖಾಭಾವಪರತ್ವವನ್ನು ಹೇಳುತ್ತಾನೆ.

**ಭಾವವಿಲಾಸಿನೀ–** ಅಮುಷ್ಯ ಬ್ರಹ್ಮಣ ಇತಿ ಷಷ್ಠೀಪ್ರಯೋಗಸ್ಯ । ತರ್ಹಿ ಆನನ್ದಮಿತ್ಯತ್ರ ತಾರ್ಕಿಕಬಾಲಕೈರಪ್ಯುಪಚಾರಸ್ಯ ವಕ್ತುಂ ಶಕ್ಯತ್ವಾದಿತಿ ಭಾವಃ । ಕಥಮುಪಚಾರ ಇತ್ಯತ ಆಹ– **ದುಃಖಾಭಾವೇತಿ** ॥ ಶ್ರುತೀನಾಮಾನನ್ದಪ್ರತಿಪಾದಕವಾಕ್ಯಾನಾಮ್ ॥ ೯೬೪॥

**ವಿವರಣೆ–** 'ಆನಂದಂ ಬ್ರಹ್ಮಣಃ' ಎಂಬಲ್ಲಿ ಷಷ್ಠೀಪ್ರಯೋಗವು ಆನಂದ ಮತ್ತು ಬ್ರಹ್ಮರಿಗೆ ಆಧೇಯಾಧಾರಭಾವವನ್ನು ತಿಳಿಸುತ್ತದೆ. ಆದ್ದರಿಂದ ಬ್ರಹ್ಮನಲ್ಲಿ ಸುಖಾಧಾರತ್ವವನ್ನೂ ಸುಖಿತ್ವವನ್ನೂ ಅಂಗೀಕಾರ ಮಾಡಬೇಕು. ಇದು ಆಧಾರಾಧೇಯಭಾವವನ್ನು ಹೇಳುವುದಿಲ್ಲ. ಏಕೆಂದರೆ ಇದು ಉಪಚರಿತಪ್ರಯೋಗ ಎಂದು ಹೇಳುವುದಾದರೆ, ಆನಂದಶ್ರುತಿಯು ಉಪಚರಿತಪ್ರಯೋಗ, ಅದು ಆನಂದವನ್ನು ಹೇಳುವುದಿಲ್ಲ. ದುಃಖಾಭಾವವನ್ನೇ ಹೇಳುತ್ತದೆ ಎಂಬ ತಾರ್ಕಿಕರ ಮಾತನ್ನು ನೀನು ಅನುಸರಿಸಿದಂತಾಗುತ್ತದೆ. ಆದ್ದರಿಂದ ತಾರ್ಕಿಕಬಾಲಕನು ನಿನ್ನನ್ನು ಗೆಲ್ಲುತ್ತಾನೆ ಎಂದು ತಾತ್ಪರ್ಯ.

**ಅತೋ ಗುಣ್ಯಾತ್ಮಕಾ ಏತೇ ಗುಣಾ ಗ್ರಾಹ್ಯಾ ಯಥಾಶ್ರುತಮ್ ।**
**ಪರ್ಯಾಯಶಬ್ದಾವಾಚ್ಯತ್ವಂ ತವಾಪಿ ಚ ಮಮಾಪಿ ಚ ॥ ೯೬೫ ॥**

**ಅರ್ಥ–** ಅತಃ= ಆದ್ದರಿಂದ, ಏತೇ ಗುಣಾಃ= ಈ ಗುಣಗಳು, ಯಥಾಶ್ರುತಂ= ವೇದದಲ್ಲಿ ಹೇಳಿದಂತೆ, ಗುಣ್ಯಾತ್ಮಕಾ ಗ್ರಾಹ್ಯಾಃ= ಗುಣ್ಯಾತ್ಮಕಗಳೆಂದೇ ತಿಳಿಯಬೇಕು, ಪರ್ಯಾಯ-

ಶಬ್ದಾವಾಚ್ಯತ್ವಂ= ಪರ್ಯಾಯಶಬ್ದವಾಚ್ಯತ್ವಾಭಾವವು, ತವಾಪಿ ಚ= ನಿನಗೂ ಇದೆ, ಮಮಾಪಿ ಚ= ಮತ್ತು ನನಗೂ ಇದೆ.

**ಅನುವಾದ–** ಆದ್ದರಿಂದ ಈ ಗುಣಗಳೆಲ್ಲವನ್ನೂ ವೇದದಲ್ಲಿ ಹೇಳಿದಂತೆ ಗುಣಿಯಿಂದ ಅಭಿನ್ನ ಎಂದೇ ಸ್ವೀಕರಿಸಬೇಕು. ಪರ್ಯಾಯಶಬ್ದವಾಚ್ಯತ್ವಾಭಾವವು ನಿನಗೂ ನನಗೂ ಇಬ್ಬರಿಗೂ ಸಮಾನವಾದುದು.

**ಭಾವವಿಲಾಸಿನೀ–** ಅತಃ ಉಪಚಾರಸ್ಯ ವಕ್ತುಮಶಕ್ಯತ್ವಾತ್ । ಆನನ್ದಾದೀನಾಮಭಿನ್ನಗುಣತ್ವೇ ಯುಕ್ತಿಂ ಚಾಹ– **ಪರ್ಯಾಯಶಬ್ದಾವಾಚ್ಯತ್ವಮಿತಿ** ॥ ಆನನ್ದೋ ಬ್ರಹ್ಮೇತಿ ಸಹೈವ ಪ್ರಯುಜ್ಯ-ಮಾನಶಬ್ದವಾಚ್ಯತ್ವಮಿತ್ಯರ್ಥಃ ॥ ೯೬೫ ॥

**ವಿವರಣೆ–** 'ಆನಂದಂ ಬ್ರಹ್ಮಣಃ' ಎಂಬ ಪ್ರಯೋಗವು ಉಪಚರಿತಪ್ರಯೋಗ ಎಂದು ಹೇಳಲು ಸಾಧ್ಯವಿಲ್ಲವಾದ್ದರಿಂದ ಆನಂದಸರ್ವಜ್ಞತ್ವಾದಿಗುಣಗಳು ಬ್ರಹ್ಮನಿಂದ ಅಭಿನ್ನ ಎಂದೇ ಅಂಗೀಕರಿಸಬೇಕು. ಬ್ರಹ್ಮನಿಂದ ಅಭಿನ್ನವಾದರೆ ಪರ್ಯಾಯಶಬ್ದ ವಾಚ್ಯತ್ವವು ಬರಲಿ ಎಂಬ ಆಪತ್ತಿಯು ನನಗೂ ಇಲ್ಲ. ನಿನಗೂ ಇಲ್ಲ. ನೀನು ಬ್ರಹ್ಮನಿಗೂ ಮತ್ತು ಸುಖಕ್ಕೂ ಅಭೇದವನ್ನು ಒಪ್ಪಿದರೂ ಅವೆರಡಕ್ಕೆ ಪರ್ಯಾಯಶಬ್ದವಾಚ್ಯತ್ವವನ್ನು ಒಪ್ಪುವುದಿಲ್ಲ. ಹಾಗೆಯೇ ನಾನು ಬ್ರಹ್ಮನಿಗೂ ಮತ್ತು ಸರ್ವಜ್ಞತ್ವಕ್ಕೂ ಅಭೇದವನ್ನು ಒಪ್ಪಿದರೂ ಪರ್ಯಾಯಶಬ್ದವಾಚ್ಯತ್ವವು ಇಲ್ಲವೆಂದು ಹೇಳುತ್ತೇನೆ.

**ಅತಸ್ತನ್ಮಾತ್ರತೈತೇಷಾಂ ನ ವಾಚ್ಯಾ ಶಬ್ದಕೋವಿದೈಃ ।**
**ಪ್ರಭೋಃ ಶಕ್ತಿವಿಶೇಷೇಣ ಸರ್ವಂ ತದ್ಧಿ ಸಮಂಜಸಮ್ ॥ ೯೬೬ ॥**

**ಅರ್ಥ–** ಅತಃ= ಆದ್ದರಿಂದ, ಶಬ್ದಕೋವಿದೈಃ= ಶಬ್ದವನ್ನು ತಿಳಿದ ವಿದ್ವಾಂಸರಿಂದ, ಏತೇಷಾಂ= ಈ ಗುಣಗಳಿಗೆ, ತನ್ಮಾತ್ರತಾ= ಕೇವಲ ಬ್ರಹ್ಮಸ್ವರೂಪತ್ವವು, ನ ವಾಚ್ಯಾ= ಹೇಳಲ್ಪಡಬಾರದು, ಪ್ರಭೋಃ= ಸಮರ್ಥನಾದ ಪರಮಾತ್ಮನ, ಶಕ್ತಿವಿಶೇಷೇಣ= ವಿಶೇಷ ಶಕ್ತಿಯಿಂದ, ತತ್ ಸರ್ವಂ= ಅವೆಲ್ಲವೂ, ಸಮಂಜಸಂ ಹಿ= ಸಮಂಜಸವೇ ಆಗುತ್ತದೆಯಷ್ಟೇ.

**ಅನುವಾದ–** ಅಪರ್ಯಾಯಶಬ್ದವಾಚ್ಯತ್ವವು ಇರುವುದರಿಂದ ಶಬ್ದಜ್ಞಾನವುಳ್ಳ ವಿದ್ವಾಂಸರು ಈ ಗುಣಗಳಿಗೆ ಕೇವಲ ಬ್ರಹ್ಮಮಾತ್ರತ್ವವನ್ನು ಹೇಳಬಾರದು. ಸಮರ್ಥನಾದ ಪ್ರಭುವಿನ ಶಕ್ತಿವಿಶೇಷದಿಂದ ಎಲ್ಲವೂ ಸಮಂಜಸವಾಗುತ್ತದೆ.

**ಭಾವವಿಲಾಸಿನೀ–** ಅತಃ ಅಪರ್ಯಾಯಶಬ್ದವಾಚ್ಯತ್ವಾತ್ । ತನ್ಮಾತ್ರತಾ ಕೇವಲಬ್ರಹ್ಮತಾ । ಏತೇಷಾಮಾನನ್ದಾದೀನಾಮ್ । ಶಬ್ದಕೋವಿದೈರಿತ್ಯನೇನ ಕೇವಲಾಭಿನ್ನೇಷು ಘಟಕರೀರ-ಕಲಶಾದ್ಯರ್ಥೇಷು ಸಹಪ್ರಯೋಗಾಭಾವಂ ಕೇವಲಭಿನ್ನೇಷು ಚ ಸಾಮಾನಾಧಿಕರಣ್ಯ-

ಪ್ರಯೋಗಾಭಾವಂ ಚ ಧ್ವನಯತಿ । ಅಭೇದಸ್ಯ ಗುಣಗುಣಿಭಾವಸ್ಯ ಚ ಘಟಕಮಾಹ– **ಪ್ರಭೋಃ ಶಕ್ತಿವಿಶೇಷೇಣೇತಿ** ॥ ೯೬೬ ॥

**ವಿವರಣೆ–** ಆನಂದ ಸರ್ವಜ್ಞತ್ವಾದಿಗಳು ಕೇವಲ ಬ್ರಹ್ಮರೂಪವಾಗಿದ್ದರೆ ಪರ್ಯಾಯಶಬ್ದವಾಚ್ಯತ್ವವು ಬರುತ್ತಿತ್ತು. ಆದರೆ ಈಗ ಪರ್ಯಾಯಶಬ್ದವಾಚ್ಯತ್ವವು ಇಲ್ಲದಿರುವುದರಿಂದ ಅಲ್ಲಿ ಏನಾದರೂ ಒಂದು ವಿಶೇಷವನ್ನು ಅಂಗೀಕಾರ ಮಾಡಬೇಕು. ಏಕೆಂದರೆ ಶಬ್ದಕೋವಿದರಾದವರು ಕೇವಲಾಭಿನ್ನವಾದ ಘಟಕಲಶಾದಿಪದಾರ್ಥಗಳಲ್ಲಿ ಸಹಪ್ರಯೋಗವು ಇಲ್ಲವೆಂದೂ ಕೇವಲ ಭಿನ್ನವಾದ ಪದಾರ್ಥಗಳನ್ನು ಹೇಳುವ ಪದಗಳಲ್ಲಿ ಸಮಾನವಿಭಕ್ತಿಕತ್ವರೂಪವಾದ ಸಾಮಾನಾಧಿಕರಣ್ಯವು ಇಲ್ಲವೆಂದೂ ಅಂಗೀಕರಿಸುತ್ತಾರೆ. ಆದ್ದರಿಂದ ಅಲ್ಲಿ ಗುಣಗುಣಿಭಾವವನ್ನು ಘಟನೆ ಮಾಡುವ ಪ್ರಭುವಿನ ಶಕ್ತಿವಿಶೇಷವನ್ನು ಅಂಗೀಕರಿಸಬೇಕು.

**ನಿರ್ಗುಣತ್ವಶ್ರುತಿಸ್ತಸ್ಮಾನ್ನೈವಂ ಸದ್ಗುಣಬಾಧಿಕಾ ।**
**ಅಧರ್ಮಧರ್ಮದುಃಖೇರ್ಷ್ಯಾದ್ವೇಷಾದೀನ್ ಪ್ರತಿಷೇಧತಿ ॥ ೯೬೭ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಏವಂ= ನಾವು ಹಿಂದೆ ಹೇಳಿದ ರೀತಿಯಲ್ಲಿ, ನಿರ್ಗುಣತ್ವ ಶ್ರುತಿಃ= ನಿರ್ಗುಣತ್ವಬೋಧಕಶ್ರುತಿಗಳು, ಸದ್ಗುಣಬಾಧಿಕಾ ನ= ಬ್ರಹ್ಮನ ಸದ್ಗುಣಗಳನ್ನು ಬಾಧಿಸುವುದಿಲ್ಲ, ಅಧರ್ಮಧರ್ಮದುಃಖೇರ್ಷ್ಯಾದ್ವೇಷಾದೀನ್= ಪುಣ್ಯ, ಪಾಪ, ದುಃಖ, ಅಸೂಯೆ, ದ್ವೇಷ ಮೊದಲಾದ ಗುಣಗಳನ್ನು, ಪ್ರತಿಷೇಧತಿ= ನಿಷೇಧ ಮಾಡುತ್ತದೆ.

**ಅನುವಾದ–** ಆದ್ದರಿಂದ ನಿರ್ಗುಣಶ್ರುತಿಯು ಹಿಂದೆ ಹೇಳಿದ ಅನೇಕ ಪ್ರಕಾರಗಳಿಂದ ಸದ್ಗುಣಗಳನ್ನು ಎಂದೂ ಬಾಧಿಸುವುದಿಲ್ಲ. ಪಾಪ, ಪುಣ್ಯ, ದುಃಖ, ಅಸೂಯೆ, ದ್ವೇಷ ಮೊದಲಾದ ದುರ್ಗುಣಗಳನ್ನು ಮಾತ್ರ ನಿಷೇಧ ಮಾಡುತ್ತದೆ.

**ಭಾವವಿಲಾಸಿನೀ–** ಸಗುಣವಾದಮುಪಸಂಹರತಿ– **ನಿರ್ಗುಣತ್ವೇತಿ** ॥ ತಸ್ಮಾತ್ ಸಾರ್ವಜ್ಞಾದಿ-ಗುಣಾನಾಮಾನನ್ದಾದಿ-ಗುಣಸಮಾನಯೋಗಕ್ಷೇಮತ್ವಾತ್ । ನಿರ್ಗುಣಶ್ರುತೇ ರತ್ಯಲ್ಪ-ಗ್ರಾಸೇನಾರ್ಥಪುಷ್ಟ್ಯಾಖ್ಯಪುಷ್ಟೇರಭಾವಂ ಪರಿಹರ್ತುಮಧರ್ಮೇತ್ಯಾದ್ಯುಕ್ತಮ್ । ದ್ವೇಷಾದೀನಿತ್ಯತ್ರಾದಿಪದೇನ ಪ್ರಾಕೃತರೂಪರಸಗಂಧಸ್ಪರ್ಶಾದೀನಾಂ ಗ್ರಹಣಮ್ ॥ ೯೬೭ ॥

**ವಿವರಣೆ–** ಈ ಶ್ಲೋಕದಲ್ಲಿ ಸಗುಣವಾದವನ್ನು ಉಪಸಂಹಾರ ಮಾಡುತ್ತಾರೆ. ಸರ್ವಜ್ಞತ್ವಾದಿಗುಣಗಳು ಜ್ಞಾನಾನಂದಾದಿಗುಣಗಳ ಸಮಾನಯೋಗಕ್ಷೇಮವನ್ನು ಹೊಂದುವುದರಿಂದ ನಿರ್ಗುಣಶ್ರುತಿಯು ಸದ್ಗುಣಗಳನ್ನು ಎಂದೂ ನಿಷೇಧ ಮಾಡುವುದಿಲ್ಲ. ಆದರೆ ನಿರ್ಗುಣಶ್ರುತಿಯು ನಿಷೇಧ ಮಾಡುವ ಗುಣಗಳು ಅಲ್ಪವಾದುದರಿಂದ ಶ್ರುತಿಗೆ ಮಹಾರ್ಥತ್ವವು ಬರುವುದಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ.

ಪಾಪ-ಪುಣ್ಯಗಳು, ದುಃಖ-ಅಸೂಯೆಗಳು, ದ್ವೇಷ, ಪ್ರಾಕೃತವಾದ ರೂಪರಸ-ಗಂಧಸ್ಪರ್ಶಗಳು ಇಂತಹ ಅನೇಕ ದುರ್ಗುಣವನ್ನು ನಿಷೇಧಮಾಡುವುದರಿಂದ ಶ್ರುತಿಯ ಮಹಾರ್ಥತ್ವಕ್ಕೆ ಯಾವ ಬಾಧಕವೂ ಇಲ್ಲ.

**ಯಸ್ಯ ಯಸ್ಮಿನ್ ಮನೋದ್ವೇಷಸ್ತದ್ಗುಣಸ್ತೇನ ನೇಕ್ಷ್ಯತೇ ।**
**ನ ಚೇದ್ ಬ್ರಹ್ಮಾನಂತಗುಣಂ ಕಥಂ ನಿರ್ಗುಣಮಬ್ರವೀತ್ ॥ ೯೬೮ ॥**

**ಅರ್ಥ–** ಯಸ್ಯ= ಯಾವ ವ್ಯಕ್ತಿಗೆ, ಯಸ್ಮಿನ್= ಯಾವ ವಸ್ತುವಿನಲ್ಲಿ, ಮನೋದ್ವೇಷಃ= ಮಾನಸಿಕ ದ್ವೇಷವಿರುತ್ತದೆಯೋ, ತದ್ಗುಣಃ= ಆ ವಸ್ತುವಿನ ಗುಣವು, ತೇನ= ಆ ವ್ಯಕ್ತಿಯಿಂದ, ನೇಕ್ಷ್ಯತೇ= ನೋಡಲ್ಪಡುವುದಿಲ್ಲ. ನ ಚೇದ್= ಇಲ್ಲದಿದ್ದರೆ, ಅನಂತಗುಣಂ= ಅನಂತ ಗುಣಪೂರ್ಣನಾದ, ಬ್ರಹ್ಮ= ಬ್ರಹ್ಮನನ್ನು, ಕಥಂ= ಹೇಗೆ, ನಿರ್ಗುಣಂ= ನಿರ್ಗುಣನೆಂದು, ಅಬ್ರವೀತ್= ಹೇಳಿದನು?

**ಅನುವಾದ–** ಯಾವನ ಮನಸ್ಸಿನಲ್ಲಿ ಯಾವುದರ ವಿಷಯದಲ್ಲಿ ದ್ವೇಷವಿರುತ್ತದೆಯೋ, ಆ ವಸ್ತುವಿನಲ್ಲಿರುವ ಗುಣಗಳು ಅವನಿಗೆ ಕಾಣುವುದಿಲ್ಲ. ಹಾಗಿಲ್ಲದಿದ್ದರೆ ಅನಂತಗುಣಪೂರ್ಣನಾದ ಬ್ರಹ್ಮನನ್ನು ಹೇಗೆ ನಿರ್ಗುಣನೆಂದು ಹೇಳುತ್ತಾನೆ?

**ಭಾವವಿಲಾಸಿನೀ– ತರ್ಹಿ ಕಿಂ ಮೂಲಂ ನಿರ್ಗುಣವಾದಸ್ಯೇತ್ಯತೋ ಭಗವತಿ ದ್ವೇಷ ಏವೇತಿ ಸದೃಷ್ಟಾಂತಮಾಹ– ಯಸ್ಯ ಯಸ್ಮಿನ್ನಿತ್ಯಾದಿನಾ ॥ ನ ಚೇದ್ ಗುಣಾದರ್ಶನಂ ದ್ವೇಷಮೂಲಕಂ ನ ಚೇತ್ ॥ ೯೬೮ ॥**

**ವಿವರಣೆ–** ಹಾಗಾದರೆ ನಿರ್ಗುಣವಾದಕ್ಕೆ ಏನು ಮೂಲವೆಂದು ಕೇಳಿದರೆ ಭಗವಂತನಲ್ಲಿ ದ್ವೇಷವೇ ಅದಕ್ಕೆ ಮೂಲ ಎಂಬುದನ್ನು ದೃಷ್ಟಾಂತಪೂರ್ವಕವಾಗಿ ಹೇಳುತ್ತಾರೆ. ಯಾವನಲ್ಲಿ ದ್ವೇಷವಿದೆಯೋ, ಅಂಥವನಿಗೆ ದ್ವೇಷ್ಯವಸ್ತುವಿನಲ್ಲಿರುವ ಗುಣಗಳು ಕಾಣುವುದಿಲ್ಲ. ಹಾಗೆಯೇ ಮಾಯಾವಾದಿಗಳಿಗೆ ಭಗವದ್ದ್ವೇಷ-ನಿಮಿತ್ತದಿಂದ ಭಗವಂತನಲ್ಲಿರುವ ಗುಣಗಳು ಕಾಣುವುದಿಲ್ಲವಾದ್ದರಿಂದ ಅವರು ನಿರ್ಗುಣವಾದವನ್ನು ಹೇಳುತ್ತಾರೆ ಎಂದು ಉತ್ತರವನ್ನು ಕೊಡುತ್ತಾರೆ.

**ಯತ್ನಃ ಕೃತ್ಸ್ನೋಽಪಿ ವಿಜ್ಞಾನಶಕ್ತ್ಯಾದ್ಯರ್ಥಂ ಹಿ ಯೋಗಿನಾಮ್ ।**
**ಸಾರ್ವಜ್ಞಶೌರ್ಯಸೌಂದರ್ಯಪೂರ್ವೈಶ್ವರ್ಯಾಣಿ ಕಸ್ಯ ಜೇತ್ ॥ ೯೬೯ ॥**

**ಅರ್ಥ–** ಯೋಗಿನಾಮ್= ಯೋಗಿಗಳ, ಕೃತ್ಸ್ನಃ= ಸಮಗ್ರವಾದ, ಯತ್ನೋಽಪಿ= ಪ್ರಯತ್ನವೂ ಕೂಡ, ವಿಜ್ಞಾನಶಕ್ತ್ಯಾದ್ಯರ್ಥಂ= ವಿಜ್ಞಾನ ಶಕ್ತಿ ಮುಂತಾದ ಗುಣಗಳನ್ನು ಸಂಪಾದಿಸುವುದಕ್ಕಷ್ಟೇ, ಸಾರ್ವಜ್ಞಶೌರ್ಯಸೌಂದರ್ಯಪೂರ್ವೈಶ್ವರ್ಯಾಣಿ=

ಸಾರ್ವಜ್ಞ, ಪರಾಕ್ರಮ, ಸೌಂದರ್ಯ ಮೊದಲಾದ ಐಶ್ವರ್ಯಗಳನ್ನು, ಕಃ= ಯಾವನು, ತ್ಯಜೇತ್= ಪರಿತ್ಯಾಗ ಮಾಡುತ್ತಾನೆ?

**ಅನುವಾದ–** **ಯೋಗಿಗಳ ಸರ್ವಪ್ರಯತ್ನವೂ ಶಕ್ತಿ, ವಿಜ್ಞಾನ ಮೊದಲಾದ ಗುಣಗಳನ್ನು ಸಂಪಾದಿಸುವುದಕ್ಕಾಗಿಯೇ ಇದೆ. ಸರ್ವಜ್ಞತ್ವ, ಶೌರ್ಯ, ಸೌಂದರ್ಯ ಮೊದಲಾದ ಐಶ್ವರ್ಯವನ್ನು ಯಾವನು ಪರಿತ್ಯಾಗ ಮಾಡುತ್ತಾನೆ?**

**ಭಾವವಿಲಾಸಿನೀ–** ವಿಜ್ಞಾನಂ ಚ ಶಕ್ತಿಶ್ಚ । ಆದಿಪದೇನ ಅಣಿಮಾದ್ಯೈಶ್ವರ್ಯಂ ಗೃಹ್ಯತೇ । ಯೋಗಿನಾಮಿತ್ಯನೇನ ಸರ್ವತ್ರ ವೈರಾಗ್ಯೇಽಪಿ ನ ಜ್ಞಾನಾದಿಗುಣೇಷು ವೈರಾಗ್ಯಂ ಯುಕ್ತಮಿತಿ ಸೂಚಯತಿ । ಕಸ್ತ್ಯಜೇನ್ನ ಕೋಽಪೀತ್ಯನೇನ ಯೋಗೀಶ್ವರೋ ಭಗವಾಂಶ್ಚ ಶುಭಗುಣಾನೇತಾನ್ ನೈವ ವಿಸೃಜೇದಿತಿ ಧ್ವನಿತಮ್ ॥ ೯೬೯ ॥

**ವಿವರಣೆ–** ಯೋಗಿಗಳಾದವರು ವಿಜ್ಞಾನ, ಶಕ್ತಿ ಅಣಿಮಾದಿ ಐಶ್ವರ್ಯಕ್ಕಾಗಿ ಪ್ರಯತ್ನ ಪಡುತ್ತಾರೆ. ಅವರಿಗೆ ಉಳಿದ ಎಲ್ಲಾ ವಸ್ತುಗಳಲ್ಲಿ ವೈರಾಗ್ಯವಿದ್ದರೂ ಜ್ಞಾನಾದಿಗುಣಗಳಲ್ಲಿ ವೈರಾಗ್ಯವಿಲ್ಲ. ಆದ್ದರಿಂದ ಜ್ಞಾನಾದಿಗುಣಗಳನ್ನು ಅವರು ತ್ಯಜಿಸುವುದಿಲ್ಲ. ಇನ್ನು ಯೋಗೀಶ್ವರನಾದ ಪರಮಾತ್ಮನು ಜ್ಞಾನಾನಂದಐಶ್ವರ್ಯಾದಿ ಶುಭಗುಣಗಳನ್ನು ಹೇಗೆ ತ್ಯಜಿಸುತ್ತಾನೆ ಎಂಬ ಧ್ವನಿಯನ್ನು ಸೂಚಿಸುತ್ತಾರೆ.

**ಗುಣೋಽಣುರಪಿ ಸಂಪೋಷ್ಯೋ ದೋಷೋ ದೂಷ್ಯೋ ಬುಭೂಷುಭಿಃ ।**
**ಗುಣಾಂಸ್ತ್ಯಜೇತ್ ಕಥಂ ದೋಷಾನ್ ಭಜೇದ್ ವಾ ತತ್ಪರಃ ಪ್ರಭುಃ**
**॥ ೯೭೦ ॥**

नैव परः → तत्परः

**ಅರ್ಥ–** ಬುಭೂಷುಭಿಃ= ಶ್ರೇಯಸ್ಕಾಮಿಗಳಿಂದ, ಅಣುಃ= ಅತ್ಯಲ್ಪಪ್ರಮಾಣದ, ಗುಣೋಽಪಿ= ಗುಣವೂ ಸಹ, ಸಂಪೋಷ್ಯಃ= ಚೆನ್ನಾಗಿ ಪೋಷಿಸಲ್ಪಡಬೇಕು, ದೋಷಃ= ದೋಷವು, ಅಣುರಪಿ= ಅಲ್ಪವೇ ಆದರೂ, ದೂಷ್ಯಃ= ದೂಷಿಸಲ್ಪಡಬೇಕು, ತತ್ಪರಃ= ಗುಣವನ್ನು ಪೋಷಿಸುವುದರಲ್ಲಿ ಮತ್ತು ದೋಷವನ್ನು ದೂಷಿಸುವುದರಲ್ಲಿ ತಾತ್ಪರ್ಯವುಳ್ಳಂತಹ, ಪ್ರಭುಃ= ಸಮರ್ಥನಾದ ಹರಿಯು, ಕಥಂ= ಹೇಗೆ, ಗುಣಾನ್= ಗುಣಗಳನ್ನು, ತ್ಯಜೇತ್= ಬಿಟ್ಟಾನು? ದೋಷಾನ್= ದೋಷಗಳನ್ನು, ಕಥಂ= ಹೇಗೆ, ಭಜೇತ್= ಸಂಪಾದಿಸಿಯಾನು?

**ಅನುವಾದ–** **ಶ್ರೇಯಸ್ಕಾಮಿಗಳಾದವರು ಅಲ್ಪವಾದ ಗುಣವನ್ನೂ ಪೋಷಿಸಬೇಕು, ಅಲ್ಪವಾದ ದೋಷಗಳನ್ನೂ ದೂಷಣೆ ಮಾಡಬೇಕು. ಗುಣಸಂಗ್ರಹದಲ್ಲಿ ಮತ್ತು ದೋಷಪರಿತ್ಯಾಗದಲ್ಲಿ ತತ್ಪರನಾದ ಪ್ರಭುವಾದ ಹರಿಯು ಗುಣಗಳನ್ನು ಹೇಗೆ ತ್ಯಜಿಸುತ್ತಾನೆ ಅಥವಾ ದೋಷಗಳನ್ನು ಹೇಗೆ ಸಂಪಾದಿಸುತ್ತಾನೆ?**

**ಭಾವವಿಲಾಸಿನೀ**– ದೋಷಾನ್ನಾಯಾವಾದ್ಯುಕ್ತಾಜ್ಞಾನಸಂಸಾರದುಃಖನೀಚೈಕ್ಯಾದೀನ್ । ತತ್ ತಸ್ಮಾದ್ ಗುಣಸ್ಯ ಪೋಷಕತ್ವಾದ್ ದೋಷಸ್ಯ ದೂಷಕತ್ವಾಚ್ಚ ॥ ೯೭೦ ॥

**ವಿವರಣೆ**– ವಿವೇಕಿಗಳಾದವರು ಗುಣದ ಪೋಷಣೆಯಲ್ಲಿಯೂ, ದೋಷದ ದೂಷಣೆಯಲ್ಲಿಯೂ ತೊಡಗಿರುತ್ತಾರೆ. ಭಗವಂತನು ಈ ವಿಷಯದಲ್ಲಿ ಗುಣಿಗಳಲ್ಲಿ ಅಗ್ರಗಣ್ಯನಾದವನು. ಆದ್ದರಿಂದ ಅವನು ಗುಣಗಳನ್ನು ಪೋಷಣೆ ಮಾಡಿದರೆ ಅದರ ಸಂಗ್ರಹಗಳನ್ನು, ದೋಷವನ್ನು ದೂಷಣೆ ಮಾಡಿದರೆ ಅದರ ಪರಿತ್ಯಾಗ ಮಾಡುವುದರಲ್ಲಿ ದೊಡ್ಡ ಆಸಕ್ತಿಯುಳ್ಳವನು, ಹೀಗಿರುವಾಗ, ಅವನು ಗುಣಗಳನ್ನು ತ್ಯಜಿಸಿ, ದೋಷಗಳನ್ನು ಸ್ವೀಕರಿಸುವುದು ಹೇಗೆ ಎಂದು ಅಭಿಪ್ರಾಯ.

**ಸರ್ವಂ ಹರತು ಸರ್ವಸ್ವಂ ವಿದ್ಯಾಂ ಕೋ ವಿದುಷೋ ಹರೇತ್ ।**
**ಕಿಂ ಗುಣಾಂಸ್ತ್ಯಾಜಯನ್ ವಿಷ್ಣೋರ್ನಿರ್ಗುಣತ್ವಗುಣಂ ತ್ಯಜೇತ್ ॥ ೯೭೧ ॥**

**ಅರ್ಥ**– ಸರ್ವಂ= ಎಲ್ಲ, ಸರ್ವಸ್ವಂ= ಆಸ್ತಿಯನ್ನು, ಹರತು= ಅಪಹರಣ ಮಾಡಲಿ ಆದರೆ, ವಿದುಷಃ= ವಿದ್ವಾಂಸನ, ವಿದ್ಯಾಂ= ಜ್ಞಾನವನ್ನು, ಕಃ= ಯಾವನು, ಹರೇತ್= ಅಪಹರಿಸುತ್ತಾನೆ, ವಿಷ್ಣೋಃ= ವಿಷ್ಣುವಿನಿಂದ, ಗುಣಾನ್= ಗುಣಗಳನ್ನು, ತ್ಯಾಜಯನ್= ಬಿಡಿಸುವವನು, ನಿರ್ಗುಣತ್ವಗುಣಂ= ನಿರ್ಗುಣತ್ವ ಎಂಬ ಗುಣವನ್ನಾದರೂ, ತ್ಯಜೇತ್ ಕಿಂ= ತ್ಯಜಿಸುತ್ತಾನೆಯೇ? (ತ್ಯಜಿಸಲು ಸಾಧ್ಯವೇ?)

**ಅನುವಾದ**– ಒಬ್ಬ ವಿದ್ವಾಂಸನ ಸರ್ವಸ್ವವನ್ನೂ ಇನ್ನೊಬ್ಬನು ಹರಣ ಮಾಡಲಿ. ಆದರೆ ಅವನ ವಿದ್ಯೆಯನ್ನು ಯಾರಿಗೆ ಹರಣ ಮಾಡಲು ಸಾಧ್ಯ? ವಿಷ್ಣುವಿನಲ್ಲಿ ಗುಣವಿಲ್ಲ ಎಂದು ಹೇಳುವವನು, ನಿರ್ಗುಣತ್ವರೂಪವಾದ ಗುಣವನ್ನಾದರೂ ಪರಿತ್ಯಾಗ ಮಾಡಲು ಸಾಧ್ಯವೇ?

**ಭಾವವಿಲಾಸಿನೀ**– ವಿದುಷೋ ವಿದ್ಯಾಂ ಕೋ ಹರೇದಿತ್ಯನೇನ ಸರ್ವಸ್ವಹರಣೇ ಸತಿ ವೈರಾಗ್ಯದಾರ್ಢ್ಯೇನ ವಿದ್ಯಾಭಿವೃದ್ಧಿರೇವ ಭವತೀತಿ ಸೂಚಯತಿ । ತತ್ರ ದೃಷ್ಟಾಂತಮಾಹ– ಕಿಂ **ಗುಣಾನಿತಿ** ॥ ಅತ್ರಾಪಿ ಯಾವಾನ್ ಗುಣತ್ಯಾಗಃ ತಾವತ್ ತಾವನ್ನಿರ್ಗುಣತ್ವಾಖ್ಯಗುಣೋ ದೃಢೋ ಭವತೀತಿ ಭಾವಃ ॥ ೯೭೧ ॥

**ವಿವರಣೆ**– ವಿದ್ವಾಂಸನ ವಿದ್ಯೆಯನ್ನು ಯಾರಿಗೂ ಅಪಹರಿಸಲು ಸಾಧ್ಯವಿಲ್ಲ ಎಂದು ಹೇಳುವುದರಿಂದ ಸರ್ವಸ್ವವನ್ನು ಹರಣ ಮಾಡಿದರೆ ವೈರಾಗ್ಯವೇ ದೃಢವಾಗಿ ವಿದ್ಯೆಯು ಅಭಿವೃದ್ಧಿಯನ್ನು ಹೊಂದುತ್ತದೆ ಎಂದು ಸೂಚಿಸುತ್ತಾರೆ. ದೇವರಲ್ಲಿ ಗುಣಗಳನ್ನು ನಿಷೇಧಿಸಿದರೆ ನಿರ್ಗುಣತ್ವವು ಬರುತ್ತದೆ. ನಿರ್ಗುಣತ್ವವೂ ಒಂದು ಗುಣ, ಅದನ್ನು ನಿಷೇಧಮಾಡುವುದಕ್ಕೆ ಆಗುತ್ತದೆಯೇ ಎಂದು ಪ್ರಶ್ನೆ ಮಾಡುತ್ತಾರೆ.

**ಜ್ಯೋತಿಷ್ಟ್ವೇನ ಹಿ ಚಂದ್ರಸ್ಯ ಸ್ವರೂಪಜ್ಞಾನವಾನ್ ಪುನಃ ।**
**ಚಂದ್ರತ್ವೇನೈವ ತಂ ಜ್ಞಾತುಂ ಕಶ್ಚಂದ್ರ ಇತಿ ಪೃಚ್ಛತಿ ॥ ೯೭೨ ॥**

**ಅರ್ಥ–** ಜ್ಯೋತಿಷ್ಟ್ವೇನ= ಪ್ರಕಾಶರೂಪನೆಂದು, ಚಂದ್ರಸ್ಯ= ಚಂದ್ರನ, ಸ್ವರೂಪಜ್ಞಾನವಾನ್ ಹಿ= ಸ್ವರೂಪಜ್ಞಾನವುಳ್ಳವನೇ, ಪುನಃ= ಮತ್ತೆ, ತಂ= ಆ ಚಂದ್ರನನ್ನು, ಚಂದ್ರತ್ವೇನೈವ= ಚಂದ್ರನೆಂಬುದಾಗಿಯೇ, ಜ್ಞಾತುಂ= ತಿಳಿದುಕೊಳ್ಳಲು, ಚಂದ್ರಃ ಕಃ= ಚಂದ್ರನು ಯಾರು, ಇತಿ ಪೃಚ್ಛತಿ= ಎಂದು ಪ್ರಶ್ನೆ ಮಾಡುತ್ತಾನೆ.

**ಅನುವಾದ– ಚಂದ್ರನು ಪ್ರಕಾಶರೂಪನಾದವನು ಎಂದು ಚಂದ್ರನ ಸ್ವರೂಪ-ಜ್ಞಾನವುಳ್ಳವನೇ ಪುನಃ ಚಂದ್ರತ್ವೇನ ಅವನನ್ನು ತಿಳಿದುಕೊಳ್ಳಲು 'ಕಃ ಚಂದ್ರಃ' ಎಂದು ಪ್ರಶ್ನೆಯನ್ನು ಮಾಡುತ್ತಾನೆ.**

**ಭಾವವಿಲಾಸಿನೀ–** ಪರೋದೀರಿತಾಖಣ್ಡಾರ್ಥವಾದಸ್ಯಾಪಿ ಸತ್ಯತ್ವಾದಿಗುಣವಿರೋಧಿತ್ವೇನ ನೈರ್ಗುಣ್ಯವಾದಾಂತಃ ಪಾತಿತ್ ತಮಪ್ಯತ್ರೈವ ದೂಷಯತಿ– **ಜ್ಯೋತಿಷ್ಟ್ವೇನೇತ್ಯಾದಿನಾ** ॥ ಹಿ ಯಸ್ಮಾದಸ್ಮಿನ್ ಜ್ಯೋತಿರ್ಮಣ್ಡಲೇ ಕಶ್ಚನ್ದ್ರ ಇತಿ ಪ್ರಶ್ನಂ ಕುರ್ವನ್ ಜ್ಯೋತಿಷ್ಟ್ವೇನ ಚಂದ್ರಸ್ಯ ಜ್ಞಾನವಾನೇವ । ತಸ್ಮಾತ್ ಸಾಮಾನ್ಯತಃ ಜ್ಯೋತಿಷ್ಟ್ವೇನ ಚಂದ್ರಸ್ವರೂಪಜ್ಞಾನವತ್ತ್ವಾತ್ ಪುನಸ್ತಂ ಚಂದ್ರತ್ವೇನ ಇತರಜ್ಯೋತಿರ್ವಿಲಕ್ಷಣಚಂದ್ರತ್ವೇನೈವ ಜ್ಞಾತುಂ ಕಶ್ಚಂದ್ರ ಇತಿ ಪೃಚ್ಛತಿ । ನತು ಜ್ಯೋತಿಷ್ಟ್ವೇನ ಪ್ರಾಗೇವ ಜ್ಞಾತಸ್ವರೂಪಮಾತ್ರಜ್ಞಾನಾರ್ಥಮ್ ॥ ೯೭೨ ॥

**ವಿವರಣೆ–** ಮಾಯಾವಾದಿಗಳು ಹೇಳುವ ಅಖಂಡಾರ್ಥವಾದವೂ ಸಹ ಸತ್ಯತ್ವಾದಿ-ಗುಣಗಳಿಗೆ ವಿರೋಧಿಯಾಗಿರುವುದರಿಂದ ನಿರ್ಗುಣವಾದದ ವ್ಯಾಪ್ತಿಯಲ್ಲಿಯೇ ಬರುವ ಕಾರಣ ಈ ಸಂದರ್ಭದಲ್ಲಿಯೇ ಅಖಂಡವಾದವನ್ನು ನಿರಾಕರಿಸುತ್ತಾರೆ. ಈ ಜ್ಯೋತಿರ್ಮಂಡಲದಲ್ಲಿ ಚಂದ್ರನು ಯಾರೆಂದು ಪ್ರಶ್ನೆ ಮಾಡುವವನು ಚಂದ್ರನು ಜ್ಯೋತೀರೂಪನಾದವನು ಎಂದು ತಿಳಿದೇ ಇತರ ಜ್ಯೋತಿಗಳಿಂದ ವೈಲಕ್ಷಣ್ಯವನ್ನು ತಿಳಿದುಕೊಳ್ಳಲು ಚಂದ್ರನು ಯಾವನು ಎಂದು ಪ್ರಶ್ನೆ ಮಾಡುತ್ತಾನೆ. ಪ್ರಕಾಶರೂಪತ್ವೇನ ಮೊದಲೇ ತಿಳಿದಿರುವ ಚಂದ್ರನ ಸ್ವರೂಪ ವಿಷಯದಲ್ಲಿ ಪ್ರಶ್ನೆಯನ್ನು ಮಾಡುವುದಿಲ್ಲ.

**ಅತಃ ಕಶ್ಚಂದ್ರ ಇತ್ಯೇಷ ಪ್ರಶ್ನಃ ಪ್ರಶ್ನವಿದಾಂ ಮತೇ ।**
**ಕಿಂಲಕ್ಷಣಕ ಇತ್ಯೇವ ಸ್ವಾರ್ಥಮರ್ಥಾತುರೋ ಭಜೇತ್ ॥ ೯೭೩ ॥**

**ಅರ್ಥ–** ಅತಃ= ಆದ್ದರಿಂದ, ಪ್ರಶ್ನವಿದಾಂ ಮತೇ= ಪ್ರಶ್ನೆಯನ್ನು ವಿಶ್ಲೇಷಿಸುವ ವಿವೇಕಿಗಳ ಅಭಿಪ್ರಾಯದಲ್ಲಿ, ಕಶ್ಚಂದ್ರ ಇತ್ಯೇಷ ಪ್ರಶ್ನಃ= ಚಂದ್ರನು ಯಾರು ಎಂಬ ಈ ಪ್ರಶ್ನೆಯು, ಅರ್ಥಾತುರಃ= ಬೇರೆ ಅರ್ಥವು ಇಲ್ಲದ ಕಾರಣದಿಂದ, ಕಿಂಲಕ್ಷಣಕಃ= ಯಾವ ಲಕ್ಷಣದಿಂದ ಕೂಡಿದವನು, ಇತಿ= ಎಂಬ, ಸ್ವಾರ್ಥಂ= ತನ್ನ ಅರ್ಥವನ್ನು, ಭಜೇತ್ ಏವ= ಹೊಂದಿಯೇ ತೀರುತ್ತದೆ.

**ಅನುವಾದ–** ಆದ್ದರಿಂದ ಪ್ರಶ್ನೆಯ ಸ್ವರೂಪವನ್ನು ಚೆನ್ನಾಗಿ ತಿಳಿದಿರುವವರ ಮತದಲ್ಲಿ ಚಂದ್ರನು ಯಾವನು ಎಂಬ ಪ್ರಶ್ನೆಗೆ ಚಂದ್ರನ ಲಕ್ಷಣ ಏನು ಎಂದೇ ಅರ್ಥವಾಗುತ್ತದೆ.

**ಭಾವವಿಲಾಸಿನೀ–** ಅತಃ ಸ್ವರೂಪಮಾತ್ರಪ್ರಶ್ನಾಯೋಗಾತ್ । ಅರ್ಥಾತುರಃ ಮಾಯಾವಾದ್ಯುಕ್ತಸ್ವರೂಪ ಮಾತ್ರಾತಿರಿಕ್ತಸಜಾತೀಯವಿಜಾತೀಯವ್ಯಾವೃತ್ತತಯಾ ಚಂದ್ರತ್ವಾಖ್ಯಾಸಾಧಾರಣಾಕಾರವ್ಯಂಜಕಪ್ರಕೃಷ್ಟಪ್ರಕಾಶರೂಪಾರ್ಥಾಂತರೇ ಔತ್ಕಣ್ಠ್ಯವಾನ್ ॥ ೯೭೩॥

**ವಿವರಣೆ–** ಸ್ವರೂಪಮಾತ್ರದಲ್ಲಿ ಪ್ರಶ್ನೆಯು ಕೂಡುವುದಿಲ್ಲ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ್ದಾರೆ. ಪ್ರಶ್ನವಾಕ್ಯವು ಚಂದ್ರನನ್ನು ಸಜಾತೀಯ, ವಿಜಾತೀಯ ವ್ಯಾವೃತ್ತಿಪೂರ್ವಕವಾಗಿ ಚಂದ್ರತ್ವರೂಪವಾದ ಅಸಾಧಾರಣಧರ್ಮವನ್ನು ಅಭಿವ್ಯಕ್ತಿ ಮಾಡುವ ಅರ್ಥಾಂತರದಲ್ಲಿ ಔತ್ಕಂಠ್ಯವನ್ನು ಹೊಂದಿದೆ. ಆ ಅರ್ಥಾಂತರವು ಪ್ರಕೃಷ್ಟಪ್ರಕಾಶರೂಪವಾದುದು ಎಂದು ಪ್ರತಿವಚನದಿಂದ ತಿಳಿದುಬರುತ್ತದೆ.

ಚಂದ್ರತ್ವವಾನ್ ಕ ಇತ್ಯೇವ ವಾಕ್ಯಸ್ಯಾರ್ಥೋ ಯತಃ ಸ್ಫುಟಃ ।
ಸ್ವರೂಪಮಾತ್ರಪ್ರಶ್ನತ್ವಂ ಸ್ವರೂಪಾಸಿದ್ಧಮೇವ ತೇ ॥ ೯೭೪ ॥

**ಅರ್ಥ–** ಯತಃ= ಯಾವ ಕಾರಣದಿಂದ, ಚಂದ್ರತ್ವವಾನ್= ಚಂದ್ರತ್ವವುಳ್ಳವನು, ಕಃ= ಯಾವನು, ಇತ್ಯೇವ= ಎಂಬ ರೀತಿಯಲ್ಲಿಯೇ, ವಾಕ್ಯಸ್ಯಾರ್ಥಃ= ವಾಕ್ಯದ ಅರ್ಥವು, ಸ್ಫುಟಃ= ಸ್ಪಷ್ಟವಾಗಿ ತೋರುತ್ತದೆಯೋ, ಆದ್ದರಿಂದ, ಸ್ವರೂಪಮಾತ್ರಪ್ರಶ್ನತ್ವಂ= ಸ್ವರೂಪಮಾತ್ರಪ್ರಶ್ನತ್ವ ಎಂಬ, ತೇ= ನಿನ್ನ ಹೇತುವು, ಸ್ವರೂಪಾಸಿದ್ಧಮೇವ= ಸ್ವರೂಪಾಸಿದ್ಧಿ ದೋಷದಿಂದ ಕೂಡಿರುವುದೇ ಆಗಿದೆ.

**ಅನುವಾದ–** ಚಂದ್ರತ್ವವುಳ್ಳವನು ಯಾವನು ಎಂಬುದೇ ಪ್ರಶ್ನವಾಕ್ಯದ ಸ್ಪಷ್ಟವಾದ ಅರ್ಥ. ಆದ್ದರಿಂದ ಸ್ವರೂಪಮಾತ್ರಪ್ರಶ್ನತ್ವರೂಪವಾದ ನಿನ್ನ ಹೇತುವಿಗೆ ಸ್ವರೂಪಾಸಿದ್ಧಿಯು ಬರುತ್ತದೆ.

**ಭಾವವಿಲಾಸಿನೀ–** ಕಶ್ಚನ್ದ್ರ ಇತಿ ಪ್ರಶ್ನಸ್ಯಾಪಾತತಃ ಸ್ವರೂಪಮಾತ್ರಾರ್ಥತ್ವದರ್ಶನೇಽಪಿ ನ ತ್ವದಭಿಲಷಿತಸಿದ್ಧಿರಿತ್ಯಾಹ– ಚನ್ದ್ರತ್ವವಾನಿತಿ ॥ ಚನ್ದ್ರಾಸಾಧಾರಣಧರ್ಮವಾನಿತ್ಯರ್ಥಃ । ಏವಂಚ ಕಶ್ಚನ್ದ್ರ ಇತ್ಯಸ್ಯ ಚನ್ದ್ರತ್ವವಾನ್ ಕ ಇತ್ಯರ್ಥಲಾಭೇನಾಸಾಧಾರಣಧರ್ಮಪ್ರಶ್ನ ಏವ ಕಥಂ ನಾಭೂದಿತಿ ಭಾವಃ । ಜಾತಿಪ್ರಶ್ನಶ್ಚ ತದ್ವ್ಯಂಜಕಪ್ರಶ್ನನಾಂತರೀಯ ಇತಿ ಸುಪ್ರಸಿದ್ಧಮ್ ॥೯೭೪॥

**ವಿವರಣೆ–** 'ಕಃ ಚಂದ್ರಃ' ಎಂಬ ಪ್ರಶ್ನೆಗೆ ಚಂದ್ರತ್ವವುಳ್ಳವನು ಯಾವನು ಎಂದೇ ಅರ್ಥ. ಆದ್ದರಿಂದ ಪ್ರಶ್ನೆಯು ಚಂದ್ರತ್ವದ ವಿಷಯದಲ್ಲಿ ಇದೆ. ಆ ಕಾರಣದಿಂದ ನಿನ್ನ ಅನುಮಾನವಾದ 'ಸತ್ಯಜ್ಞಾನಾದಿವಾಕ್ಯಂ ಬ್ರಹ್ಮಸ್ವರೂಪಮಾತ್ರಪರಮ್ ತನ್ಮಾತ್ರ-

ಪ್ರಶ್ನೋತ್ತರತ್ವಾತ್ ಪ್ರಕೃಷ್ಟಪ್ರಕಾಶಶ್ಚಂದ್ರ ಇತಿ ವಾಕ್ಯವತ್' ಎಂಬಲ್ಲಿ ಹೇತುವಿಗೆ ಸ್ವರೂಪಾಸಿದ್ಧಿರೂಪವಾದ ದೋಷವು ಬರುತ್ತದೆ.

**ಏವಂ ಲಕ್ಷಣವಾಕ್ಯಂ ಚ ಲಕ್ಷಣಂ ವಕ್ತಿ ನಾಪರಮ್ ।**
**ಅಪೃಷ್ಟೋತ್ತರಮೇವ ಸ್ಯಾದ್ ರೂಪಮಾತ್ರನಿರೂಪಣೇ ॥ ೯೭೫ ॥**

**ಅರ್ಥ–** ಏವಂ= ಈ ರೀತಿಯಾಗಿ, ಲಕ್ಷಣವಾಕ್ಯಂ ಚ= ಲಕ್ಷಣವಾಕ್ಯವೂ ಕೂಡ, ಲಕ್ಷಣಂ ವಕ್ತಿ= ಲಕ್ಷಣವನ್ನೇ ಹೇಳುತ್ತದೆ, ಅಪರಂ ನ= ಬೇರೆ ಏನನ್ನೂ ಹೇಳುವುದಿಲ್ಲ, ರೂಪಮಾತ್ರ ನಿರೂಪಣೇ= ಚಂದ್ರಸ್ವರೂಪವನ್ನು ಮಾತ್ರ ತಿಳಿಸಿದರೆ, ಅಪೃಷ್ಟೋತ್ತರಂ= ಕೇಳದೇ ಇದ್ದ ಪ್ರಶ್ನೆಗೆ ಉತ್ತರವಾಗಿ, ಸ್ಯಾತ್ ಏವ= ಆಗಿಯೇ ಆಗುತ್ತದೆ.

**ಅನುವಾದ–** ಈ ರೀತಿಯಲ್ಲಿ ಲಕ್ಷಣವಾಕ್ಯವು ಲಕ್ಷಣವನ್ನೇ ಹೇಳುತ್ತದೆ ಹೊರತಾಗಿ, ಬೇರೆ ಏನನ್ನೂ ಹೇಳುವುದಿಲ್ಲ. ಚಂದ್ರಸ್ವರೂಪವನ್ನು ಮಾತ್ರ ಹೇಳಿದರೆ ಲಕ್ಷಣವಾಕ್ಯವು ಕೇಳದಿದ್ದ ಪ್ರಶ್ನೆಗೆ ಉತ್ತರವನ್ನು ಹೇಳಿದಂತಾಗುತ್ತದೆ.

**ಭಾವವಿಲಾಸಿನೀ–** ಸ್ವರೂಪಮಾತ್ರಪ್ರಶ್ನತ್ವೇ ದೋಷಾಂತರಮಾಹ– ಏವಮಿತಿ ॥ ಏವಂ ಸ್ವರೂಪ-ಮಾತ್ರಪ್ರಶ್ನಸ್ಯ ವ್ಯಾವರ್ತಕಧರ್ಮಪರತ್ವವತ್ ॥ ೯೭೫ ॥

**ವಿವರಣೆ–** ಪ್ರಶ್ನವಾಕ್ಯದಲ್ಲಿ ಲಕ್ಷಣವನ್ನೇ ಕೇಳಿರುವುದರಿಂದ ಉತ್ತರವಾಕ್ಯವು ಲಕ್ಷಣವನ್ನೇ ಹೇಳಬೇಕು. ಅದನ್ನು ಬಿಟ್ಟು ಉತ್ತರವಾಕ್ಯವು ಚಂದ್ರಸ್ವರೂಪವನ್ನು ಹೇಳಿದರೆ ಆ ವಿಷಯದಲ್ಲಿ ಪ್ರಶ್ನೆಯಿಲ್ಲವಾದ್ದರಿಂದ ಉತ್ತರವು ಅಸಂಗತವಾಗುತ್ತದೆ.

**ಅತೋ ಲಕ್ಷಣವಾಕ್ಯತ್ವಂ ವಿರುದ್ಧೋ ಹೇತುರೇವ ತೇ ॥ ೯೭೬ ॥**

**ಅರ್ಥ–** ಅತಃ= ಆದ್ದರಿಂದ, ಲಕ್ಷಣವಾಕ್ಯತ್ವಂ= ಲಕ್ಷಣವಾಕ್ಯತ್ವ ಎಂಬ, ತೇ= ನಿನ್ನ, ಹೇತುಃ= ಹೇತುವು, ವಿರುದ್ಧ ಏವ= ವಿರುದ್ಧವಾದುದೇ.

**ಅನುವಾದ–** ಆದ್ದರಿಂದ ಲಕ್ಷಣವಾಕ್ಯತ್ವ ಎಂಬ ನಿನ್ನ ಹೇತುವು ವಿರುದ್ಧಹೇತುವಾಗಿ ಪರಿಣಮಿಸುತ್ತದೆ.

**ಭಾವವಿಲಾಸಿನೀ–** ಅತಃ ಲಕ್ಷಣವಾಕ್ಯೇ ಲಕ್ಷಣಸ್ಯ ಕಥನೇನ ಪ್ರಶ್ನೋತ್ತರಯೋರಾನುಗುಣ್ಯಾಯ ಪ್ರಶ್ನಸ್ಯಾಪಿ ಲಕ್ಷಣವಿಷಯತ್ವಾವಶ್ಯಮ್ಭಾವಾತ್ ಸತ್ಯಜ್ಞಾನಾದಿವಾಕ್ಯಂ ಬ್ರಹ್ಮಸ್ವರೂಪಮಾತ್ರಪರಂ ಲಕ್ಷಣವಾಕ್ಯತ್ವಾತ್ ಪ್ರಕೃಷ್ಟಪ್ರಕಾಶಶ್ಚನ್ದ್ರ ಇತಿ ವಾಕ್ಯವದಿತ್ಯತ್ರ ತೇ ಹೇತುರ್ವಿರುದ್ಧ ಏವ ॥೯೭೬॥

**ವಿವರಣೆ–** ಮಾಯಾವಾದಿಗಳು ಸತ್ಯಜ್ಞಾನಾದಿವಾಕ್ಯಮ್, ಬ್ರಹ್ಮಸ್ವರೂಪ-ಮಾತ್ರಪರಮ್, ಲಕ್ಷಣವಾಕ್ಯತ್ವಾತ್ ಪ್ರಕೃಷ್ಟಪ್ರಕಾಶಶ್ಚಂದ್ರ ಇತಿ ವಾಕ್ಯವತ್ ಎಂಬ

ಅನುಮಾನವನ್ನು ಪ್ರಯೋಗಮಾಡಿ, ಸತ್ಯಜ್ಞಾನಾದಿ ವಾಕ್ಯಗಳಿಗೆ ಬ್ರಹ್ಮಸ್ವರೂಪ-ಮಾತ್ರಪರತ್ವವನ್ನು ಸಾಧಿಸಲು ಪ್ರಯತ್ನಿಸುತ್ತಾರೆ. ಆದರೆ ಲಕ್ಷಣವಾಕ್ಯವು ಎಂದೂ ಸ್ವರೂಪಮಾತ್ರಪರವಲ್ಲ. ಕಿಂತು ಅಸಾಧಾರಣಧರ್ಮಪರವಾಗಿರುತ್ತದೆ. ಆದ್ದರಿಂದ ಸಾಧ್ಯಾಭಾವವ್ಯಾಪ್ತವಾದ ಹೇತುವು ವಿರುದ್ಧವಾದುದರಿಂದ ಲಕ್ಷಣವಾಕ್ಯತ್ವ ಎಂಬ ಹೇತುವಿಗೆ ವಿರುದ್ಧತ್ವರೂಪವಾದ ದೋಷವು ಬರುತ್ತದೆ ಎಂದು ತಾತ್ಪರ್ಯ.

ಸತ್ಯಜ್ಞಾನಾದಿವಾಕ್ಯಂ ತದ್ ವಿಶಿಷ್ಟಬ್ರಹ್ಮತತ್ಪರಮ್ ।
ಲಕ್ಷಣಪ್ರಶ್ನವಾಕ್ಯತ್ವಾಚ್ಚಂದ್ರಲಕ್ಷಣವಾಕ್ಯವತ್ ॥ ೯೭೭ ॥

**ಅರ್ಥ–** ತತ್= ಆದ್ದರಿಂದ, ಸತ್ಯಜ್ಞಾನಾದಿವಾಕ್ಯಂ= ಸತ್ಯಜ್ಞಾನಾದಿವಾಕ್ಯವು, ವಿಶಿಷ್ಟ ಬ್ರಹ್ಮತತ್ಪರಮ್= ಗುಣವಿಶಿಷ್ಟಬ್ರಹ್ಮನಲ್ಲಿ ತಾತ್ಪರ್ಯವುಳ್ಳದ್ದಾಗಿದೆ, ಲಕ್ಷಣಪ್ರಶ್ನವಾಕ್ಯತ್ವಾತ್= ಲಕ್ಷಣಪ್ರಶ್ನೆಗೆ ಉತ್ತರವಾದ ವಾಕ್ಯವಾದ್ದರಿಂದ, ಚಂದ್ರಲಕ್ಷಣವಾಕ್ಯವತ್= ಚಂದ್ರನ ಲಕ್ಷಣವನ್ನು ಹೇಳುವ ವಾಕ್ಯದಂತೆ (ಎಂಬ ಅನುಮಾನದಿಂದ ನಾವು ನಿಮ್ಮ ಅನುಮಾನದ ಸಾಧ್ಯದ ಅಭಾವವನ್ನೇ ಸಾಧಿಸುತ್ತೇವೆ. ಆದ್ದರಿಂದ ನಿಮ್ಮ ಹೇತುವು ವಿರುದ್ಧವಾದುದು).

**ಅನುವಾದ–** ಸತ್ಯಜ್ಞಾನಾದಿವಾಕ್ಯವು ಸತ್ಯತ್ವಾದಿ ವಿಶಿಷ್ಟಬ್ರಹ್ಮನಲ್ಲಿ ತಾತ್ಪರ್ಯ-ವುಳ್ಳದ್ದಾಗಿದೆ. ಲಕ್ಷಣಪ್ರಶ್ನವಾಕ್ಯದ ಉತ್ತರವಾದ್ದರಿಂದ ಚಂದ್ರಲಕ್ಷಣವಾಕ್ಯದಂತೆ ಎಂಬ ನಮ್ಮ ಅನುಮಾನವು ನಿಮ್ಮ ಅನುಮಾನಕ್ಕೆ ಪ್ರತಿಪಕ್ಷವಾಗಿರುತ್ತದೆ.

**ಭಾವವಿಲಾಸಿನೀ–** ಅತ ಏವ ಮದಭಿಲಷಿತಪ್ರತ್ಯನುಮಾನಸಿದ್ಧಿರಿತ್ಯಾಹ– **ಸತ್ಯಜ್ಞಾನಾದೀತಿ** ॥ ತತ್ ತಸ್ಮಾಲ್ಲಕ್ಷಣೋತ್ತರಪ್ರಶ್ನಸ್ಯಾಪಿ ಲಕ್ಷಣವಿಷಯತ್ವನಿಯಮಾತ್ ॥ ೯೭೭ ॥

**ವಿವರಣೆ–** ಸ್ವರೂಪಮಾತ್ರದಲ್ಲಿ ಪ್ರಶ್ನೆಯಿಲ್ಲದಿರುವುದರಿಂದ ನನಗೆ ನಿನ್ನ ಅನುಮಾನಕ್ಕೆ ಪ್ರತ್ಯನುಮಾನವು ಸಿದ್ಧವಾಗುತ್ತದೆ ಎಂದು ಹೇಳಿ, ಆ ಪ್ರತ್ಯನುಮಾನದ ಆಕಾರವನ್ನು ತಿಳಿಸುತ್ತಾರೆ. 'ಸತ್ಯಜ್ಞಾನಾದಿವಾಕ್ಯಮ್ ಸತ್ಯತ್ವಾದಿವಿಶಿಷ್ಟಬ್ರಹ್ಮಪರಮ್ ಲಕ್ಷಣಪ್ರಶ್ನೋತ್ತರ-ವಾಕ್ಯತ್ವಾತ್ ಚಂದ್ರಲಕ್ಷಣವಾಕ್ಯವತ್' ಎಂಬುದು ನಮ್ಮ ಪ್ರತ್ಯನುಮಾನ.

ಸ್ವರೂಪಮಾತ್ರಜ್ಞಾನಸ್ಯ ಪದೇನೈಕೇನ ಸಂಭವಾತ್ ।
ವ್ಯರ್ಥಂ ಪದಾಂತರಂ ಚ ಸ್ಯಾಜ್ಜ್ಞಾತಸ್ಯ ಜ್ಞಾಪನೇನ ಕಿಮ್ ॥ ೯೭೮ ॥

**ಅರ್ಥ–**ಸ್ವರೂಪಮಾತ್ರಜ್ಞಾನಸ್ಯ= ಚಂದ್ರನ ಸ್ವರೂಪಮಾತ್ರ ಜ್ಞಾನವು, ಏಕೇನ ಪದೇನ= ಒಂದೇ ಪದದಿಂದ, ಸಂಭವಾತ್= ಉಂಟಾಗುವ ಕಾರಣದಿಂದ, ಪದಾಂತರಂ ಚ= ಉಳಿದ ಎರಡು ಪದಗಳು, ವ್ಯರ್ಥಂ ಸ್ಯಾತ್= ವ್ಯರ್ಥವಾಗುತ್ತವೆ, ಜ್ಞಾತಸ್ಯ= ಮೊದಲೇ ತಿಳಿದಿರುವುದನ್ನು, ಜ್ಞಾಪನೇನ= ಇನ್ನೊಮ್ಮೆ ತಿಳಿಸುವುದರಿಂದ, ಕಿಂ= ಏನು ಪ್ರಯೋಜನವಿದೆ?

**ಅನುವಾದ–** ಲಕ್ಷಣವಾಕ್ಯವು ಸ್ವರೂಪಮಾತ್ರಜ್ಞಾನವನ್ನೇ ಮಾಡಿಕೊಡುವುದಾದರೆ ಅದು ಒಂದೇ ಪದದಿಂದ ಉಂಟಾಗುವುದರಿಂದ, ಪದಾಂತರವು ವ್ಯರ್ಥ-ವಾಗುತ್ತದೆ. ಪದಾಂತರಗಳು ಮೊದಲನೆಯ ಪದದಿಂದ ಜ್ಞಾತವಾದದ್ದನ್ನೇ ಜ್ಞಾಪಿಸಿದರೆ ಏನು ಪ್ರಯೋಜನ?

**ಭಾವವಿಲಾಸಿನೀ–** ಪ್ರಶ್ನೋತ್ತರಯೋಃ ಸ್ವರೂಪಮಾತ್ರಪರತ್ವೇ ದೂಷಣಾಂತರಮಾಹ– **ಸ್ವರೂಪಮಾತ್ರೇತಿ** ॥ ಏಕೇನ ಪದೇನ ಸತ್ಯಪದೇನ। ಕಿಂ ಫಲಮ್? ನ ಕಿಮಪೀತ್ಯರ್ಥಃ॥೯೭೮॥

**ವಿವರಣೆ–** ಪ್ರಶ್ನೋತ್ತರವಾಕ್ಯಗಳು ಸ್ವರೂಪಮಾತ್ರಪರ ಎನ್ನುವ ಪಕ್ಷದಲ್ಲಿ ಇಲ್ಲಿ ದೂಷಣಾಂತರವನ್ನು ಹೇಳುತ್ತಾರೆ. 'ಪ್ರಕೃಷ್ಟಪ್ರಕಾಶಃ ಚಂದ್ರಃ ಎಂಬ ಉತ್ತರವಾಕ್ಯದಲ್ಲಿ ಇರುವ ಮೂರು ಪದಗಳು ಚಂದ್ರನ ಸ್ವರೂಪವನ್ನೇ ಬೋಧಿಸುತ್ತವೆ ಎಂದಾದರೆ ಅದನ್ನು ಬೋಧನೆ ಮಾಡಲು ಒಂದೇ ಪದವು ಸಾಕು. ಉಳಿದ ಎರಡು ಪದಗಳು ವ್ಯರ್ಥವಾಗುತ್ತವೆ. ಆದ್ದರಿಂದ ಸ್ವರೂಪಮಾತ್ರಬೋಧನೆಗಾಗಿ ಉತ್ತರವಾಕ್ಯವು ಪ್ರವೃತ್ತವಾಗುವುದಿಲ್ಲ ಎಂದು ಅಭಿಪ್ರಾಯ.

**ಯದಿ ಸತ್ಯಾದಿಪದತೋ ಲಕ್ಷ್ಯೇ ಬ್ರಹ್ಮಣಿ ಕೇವಲಮ್ ।**
**ವ್ಯಾವೃತ್ತಿಃ ಸ್ಯಾದಸತ್ಯಾದೇಸ್ತೇನ ಸಾರ್ಥಕ್ಯಮಿಷ್ಯತೇ ॥ ೯೭೯ ॥**

**ತರ್ಹಿ ಗಂಗಾಪದಾಲ್ಲಕ್ಷ್ಯೇ ತೀರೇಽಪಿ ನ್ಯಾಯಸಾಮ್ಯತಃ ।**
**ವ್ಯಾವೃತ್ತಿಃ ಸ್ಯಾದಗಂಗಾಯಾಸ್ತೀರೇ ಸ್ಯಾನ್ಮಜ್ಜನಂ ಸದಾ ॥ ೯೮೦ ॥**

**ಅರ್ಥ–** ಯದಿ= ಒಂದು ಪಕ್ಷ, ಸತ್ಯಾದಿಪದತಃ= ಸತ್ಯ ಮೊದಲಾದ ಪದಗಳಿಂದ, ಲಕ್ಷ್ಯೇ= ಲಕ್ಷ್ಯನಾದ, ಬ್ರಹ್ಮಣಿ= ಬ್ರಹ್ಮನಲ್ಲಿ, ಕೇವಲಮ್= ಕೇವಲ, ಅಸತ್ಯಾದೇಃ= ಅಸತ್ಯ ಅಜ್ಞಾನಾದಿಗಳ ದೆಸೆಯಿಂದ, ವ್ಯಾವೃತ್ತಿಃ= ವ್ಯಾವೃತ್ತಿಯು, ಸ್ಯಾತ್= ಅರ್ಥವಾಗುತ್ತದೆ, ತೇನ= ಆ ಕಾರಣದಿಂದ, ಸಾರ್ಥಕ್ಯಂ= ಅಸತ್ಯತ್ವಾದಿ ವ್ಯಾವೃತ್ತಿರೂಪ ಪ್ರಯೋಜನವಿರುವುದರಿಂದ ಸಾರ್ಥಕ್ಯವು, ಇಷ್ಯತೇ= ಅಂಗೀಕರಿಸಲ್ಪಡುವುದಾದರೆ, ತರ್ಹಿ= ಆಗ, ಗಂಗಾಪದಾಲ್ಲಕ್ಷ್ಯೇ= ಗಂಗಾಪದದಿಂದ ಲಕ್ಷ್ಯವಾದ, ತೀರೇಽಪಿ= ತೀರದಲ್ಲಿಯೂ ಕೂಡ, ನ್ಯಾಯಸಾಮ್ಯತಃ= ನೀನು ಹೇಳುವ ಸಮಾನವಾದ ನ್ಯಾಯದಿಂದ, ಅಗಂಗಾಯಾಃ= ಅಗಂಗಾತ್ವದ, ವ್ಯಾವೃತ್ತಿಃ= ಅಭಾವವು, ಸ್ಯಾತ್= ಉಂಟಾಗಲಿ, ಸದಾ= ಯಾವಾಗಲೂ, ತೀರೇ= ತೀರದಲ್ಲಿಯೇ, ಮಜ್ಜನಂ= ಸ್ನಾನವು, ಸ್ಯಾತ್= ಆಗಲಿ.

**ಅನುವಾದ–** ಸತ್ಯಾದಿಪದಗಳಿಂದ ಬ್ರಹ್ಮಸ್ವರೂಪವು ಲಕ್ಷ್ಯವಾದರೂ ಅಸತ್ಯಾದಿ ವ್ಯಾವೃತ್ತಿರೂಪವಾದ ಪ್ರಯೋಜನವಿರುವುದರಿಂದ ಪದಾಂತರಗಳು ವ್ಯರ್ಥ-ವಾಗುವುದಿಲ್ಲ ಎಂದು ಹೇಳಿದರೆ ಗಂಗಾಪದಲಕ್ಷ್ಯವಾದ ತೀರದಲ್ಲಿಯೂ ಅದೇ

ನ್ಯಾಯದಿಂದ ಅಗಂಗಾವ್ಯಾವೃತ್ತಿಯು ಸಿದ್ಧವಾಗಿ ಯಾವಾಗಲೂ ತೀರದಲ್ಲಿಯೇ ಮಜ್ಜನ ಉಂಟಾಗಲಿ ಎಂಬ ಆಪತ್ತಿಯು ಬರುತ್ತದೆ.

**ಭಾವವಿಲಾಸಿನೀ–** ಅಸತ್ಯಾದಿವ್ಯಾವೃತ್ತಿಸಮ್ಪಾದನೇನ ಸಾರ್ಥಕ್ಯಮಾಶಂಕ್ಯ ಪರಿಹರತಿ– ಯದೀತ್ಯಾದಿನಾ ॥ ಕೇವಲಂ ಸತ್ಯತ್ವಾದಿಧರ್ಮಪ್ರತಿಪಾದನಂ ವಿನಾ ॥ ೯೭೯ ॥

ಅಗಂಗಾಯಾಃ ವ್ಯಾವೃತ್ತಿರಿತಿ ಸಂಬಂಧಃ ॥ ೯೮೦ ॥

**ವಿವರಣೆ–** 'ಸತ್ಯಂ ಜ್ಞಾನಮನತಂ ಬ್ರಹ್ಮ' ವಾಕ್ಯವು ಬ್ರಹ್ಮನ ಸ್ವರೂಪವನ್ನೇ ಹೇಳುತ್ತದೆ. ಮೂರುಪದವು ಬ್ರಹ್ಮಸ್ವರೂಪವನ್ನೇ ಹೇಳಿದರೂ ಅವುಗಳಿಗೆ ವೈಯರ್ಥ್ಯವಿಲ್ಲ. ಸತ್ಯಪದವು ಅಸತ್ಯವ್ಯಾವೃತ್ತಿಯನ್ನೂ ಜ್ಞಾನಪದವು ಅಜ್ಞಾನವ್ಯಾವೃತ್ತಿಯನ್ನೂ, ಅನಂತಪದವು ಪರಿಚ್ಛಿನ್ನವ್ಯಾವೃತ್ತಿಯನ್ನು ಹೇಳುವುದರಿಂದ ಸಾರ್ಥಕ್ಯವಿದೆ ಎಂದು ಅದ್ವೈತಿಗಳು ಹೇಳುತ್ತಾರೆ. ಆ ಉತ್ತರವನ್ನು ಇಲ್ಲಿ ನಿರಾಕರಿಸುತ್ತಾರೆ. ಸತ್ಯಪದವು ಬ್ರಹ್ಮಸ್ವರೂಪವನ್ನು ಮಾತ್ರ ಹೇಳಿದರೂ ಅಸತ್ಯವ್ಯಾವೃತ್ತಿಯನ್ನು ಉಂಟುಮಾಡಿ ಕೊಳ್ಳುವುದಾದರೆ, ಗಂಗಾಪದವು ಲಕ್ಷಣಾವೃತ್ತಿಯಿಂದ ತೀರವನ್ನು ಹೇಳಿದರೂ ಅಲ್ಲಿ ಅಗಂಗಾತ್ವವ್ಯಾವೃತ್ತಿಯನ್ನು ಉಂಟುಮಾಡಿಕೊಡುವುದರಿಂದ ಅಗಂಗಾತ್ವವ್ಯಾವೃತ್ತಿ ಇದ್ದಲ್ಲಿಯೇ ಸ್ನಾನವನ್ನು ಮಾಡುವುದರಿಂದ ಗಂಗೆಯ ತೀರದಲ್ಲಿಯೇ ಸ್ನಾನವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಆದ್ದರಿಂದ ಹಾಗೆ ವೈಯರ್ಥ್ಯವನ್ನು ಪರಿಹಾರ ಮಾಡಬಾರದು ಎಂದು ಅಭಿಪ್ರಾಯ.

**ಅನ್ಯವ್ಯಾವೃತ್ತಿರಪಿ ಹಿ ತದಾ ಸ್ಯಾದ್ ಯದಿ ತತ್ಪದಮ್ ।**
**ಸ್ವಾರ್ಥಂ ಸಮರ್ಪಯೇತ್ ತರ್ಹಿ ಸಾಽಪ್ಯಾರ್ಥಾಲ್ಲಭ್ಯತೇ ಪರಮ್ ॥೯೮೧॥**

**ಅರ್ಥ–** ಯದಿ= ಒಂದು ಪಕ್ಷ, ತತ್ಪದಂ= ಸತ್ಯಾದಿ ಪದವು, ಸ್ವಾರ್ಥಂ= ತನ್ನ ಅರ್ಥವನ್ನು, ಸಮರ್ಪಯೇತ್= ಸಮರ್ಪಿಸಿದರೆ, ತರ್ಹಿ= ಆಗ, ಅನ್ಯವ್ಯಾವೃತ್ತಿರಪಿ= ಅನ್ಯವ್ಯಾವೃತ್ತಿಯೂ ಕೂಡ, ಸ್ಯಾದ್ ಹಿ= ಆಗುವುದಷ್ಟೇ, ಪರಂ= ಆದರೆ, ಸಾಪಿ= ಆ ಅನ್ಯವ್ಯಾವೃತ್ತಿಯೂ ಕೂಡ, ಅರ್ಥಾತ್= ಆರ್ಥಿಕವಾಗಿ, ಲಭ್ಯತೇ= ಲಭಿಸುತ್ತದೆ (ಶಬ್ದ ಶಕ್ತಿಯಿಂದ ಲಭಿಸುವುದಿಲ್ಲ).

**ಅನುವಾದ–** ಸತ್ಯಾದಿಪದಗಳು ತಮ್ಮ ಅರ್ಥವಾದ ಸತ್ಯತ್ವಾದಿಗಳನ್ನು ಬ್ರಹ್ಮನಲ್ಲಿ ಸಮರ್ಪಣೆ ಮಾಡಿದರೆ, ಆಗ ಅಸತ್ಯಾದಿಗಳ ವ್ಯಾವೃತ್ತಿಯು ಲಭ್ಯವಾಗುತ್ತದೆ. ಅಸತ್ಯಾದಿವ್ಯಾವೃತ್ತಿಯೂ ಸಹ ಆರ್ಥಿಕವಾಗಿ ಲಭ್ಯವಾಗುತ್ತವೆ.

**ಭಾವವಿಲಾಸಿನೀ–** ಅಧುನಾ ಸತ್ಯತ್ವಾದಿಧರ್ಮಾಪ್ರತಿಪಾದನೇ ತ್ವದಭಿಲಷಿತಾ ವ್ಯಾವೃತ್ತಿರೇವ ದುರ್ಲಭೇತ್ಯಾಹ–ಅನ್ಯವ್ಯಾವೃತ್ತಿರಪೀತಿ ॥ ತತ್ಪದಂಸತ್ಯಾದಿಪದಮ್ । ಸ್ವಾರ್ಥಂ ಸತ್ಯತ್ವಾದಿಕಮ್ । ಸಾಪಿ ಅಸತ್ಯಾದಿವ್ಯಾವೃತ್ತಿರಪಿ ॥ ೯೮೧ ॥

**ವಿವರಣೆ–** ಈಗ ಸತ್ಯಾದಿಪದಗಳು ಸತ್ಯತ್ವಾದಿಧರ್ಮಗಳನ್ನು ಬ್ರಹ್ಮನಲ್ಲಿ ಅರ್ಪಿಸದಿದ್ದರೆ, ನಿನಗೆ ಅಭಿಮತವಾದ ಅಸತ್ಯಾದಿವ್ಯಾವೃತ್ತಿಯೇ ಸಿದ್ಧವಾಗುವುದಿಲ್ಲವೆಂದು ಹೇಳುತ್ತಾರೆ.

**ಸಾಕ್ಷಾದನ್ಯಾಪೋಹ ಏವ ನಹ್ಯರ್ಥೋ ಭವತೋ ಮತೇ ।**
**ಅತಃ ಸತ್ಯತ್ವಪೂರ್ವಾರ್ಥಂ ಯದಿ ಬ್ರಹ್ಮಣಿ ನಾರ್ಪಯೇತ್ ॥**
**ಕಥಂ ವ್ಯಾವರ್ತಯೇದ್ ಬ್ರಹ್ಮ ವಿಪಕ್ಷೇ ತೂಕ್ತಮೇವ ಹಿ ॥ ೯೮೨ ॥**

**ಅರ್ಥ–** ಭವತೋ ಮತೇ= ನಿನ್ನ ಮತದಲ್ಲಿ, ಅನ್ಯಾಪೋಹ ಏವ= ಅನ್ಯವ್ಯಾವೃತ್ತಿಯೇ, ಸಾಕ್ಷಾದರ್ಥಃ ನ ಹಿ= ವಾಚ್ಯವಾದ ಅರ್ಥವಲ್ಲವಷ್ಟೇ, ಅತಃ= ಆದ್ದರಿಂದ, ಯದಿ= ಒಂದು ಪಕ್ಷ, ಬ್ರಹ್ಮಣಿ= ಬ್ರಹ್ಮನಲ್ಲಿ, ಸತ್ಯತ್ವಪೂರ್ವಾರ್ಥಂ= ಸತ್ಯತ್ವ ಮೊದಲಾದ ಅರ್ಥವನ್ನು, ನಾರ್ಪಯೇತ್= ಅರ್ಪಿಸದಿದ್ದರೆ, ಬ್ರಹ್ಮ= ಬ್ರಹ್ಮನನ್ನು, ಕಥಂ= ಹೇಗೆ, ವ್ಯಾವರ್ತಯೇತ್= ಇತರ ವ್ಯಾವೃತ್ತಿಯ ಉಳ್ಳವನನಾಗಿ ಪ್ರತಿಪಾದಿಸುತ್ತದೆ, ವಿಪಕ್ಷೇ= ಸತ್ಯತ್ವಾದಿ ಧರ್ಮಗಳನ್ನು ಅರ್ಪಿಸದಿದ್ದರೂ ಅಸತ್ಯಾದಿವ್ಯಾವೃತ್ತಿಯು ದೊರೆಯುತ್ತದೆ ಎಂಬ ಪಕ್ಷದಲ್ಲಿ, ಉಕ್ತಮೇವ ಹಿ= ತೀರದಲ್ಲಿಯೇ ಮಜ್ಜನವಾಗಲಿ ಎಂಬ ದೋಷವನ್ನು ಹಿಂದೆಯೇ ಹೇಳಿದ್ದೇವಷ್ಟೇ?

**ಅನುವಾದ–** ನಿನ್ನ ಮತದಲ್ಲಿ ಅನ್ಯಾಪೋಹವೇ ಸಾಕ್ಷಾತ್ತಾಗಿ ಶಬ್ದಾರ್ಥವಲ್ಲ. ಆದ್ದರಿಂದ ಸತ್ಯತ್ವಾದಿರೂಪವಾದ ಅರ್ಥವನ್ನು ಬ್ರಹ್ಮನಲ್ಲಿ ಹೇಳದಿದ್ದರೆ ಅದು ಹೇಗೆ ವ್ಯಾವರ್ತಕವಾಗುತ್ತದೆ. ವ್ಯಾವೃತ್ತಿಯಾಗದಿದ್ದರೆ ಬಾಧಕವನ್ನು ಮೊದಲೇ ಹೇಳಿದ್ದೇವೆ.

**ಭಾವವಿಲಾಸಿನೀ–** ಅತಃ ಸಾಕ್ಷಾದನ್ಯಾಪೋಹಸ್ಯ ಪದಾರ್ಥತ್ವಾಭಾವಾತ್ । ವಿಪಕ್ಷೇ ಧರ್ಮಾರ್ಪಣಾಭಾವೇಽಪಿ ವ್ಯಾವೃತ್ತ್ಯಂಗೀಕಾರೇ ಬಾಧಕಮುಕ್ತಂ 'ತೀರೇ ಸ್ಯಾನ್ಮಜ್ಜನಂ ಸದಾ' ಇತ್ಯಾದಿಕಮೇವೇತಿ ಯೋಜನಾ ॥ ೯೮೨ ॥

**ವಿವರಣೆ–** ಸತ್ಯಾದಿಪದಗಳಿಗೆ ಸತ್ಯತ್ವವೇ ಅರ್ಥ. ಹೊರತು, ಅಸತ್ಯವ್ಯಾವೃತ್ತಿಯು ಅರ್ಥವಲ್ಲ. ಬೌದ್ಧರು ಮಾತ್ರ ಪದಗಳಿಗೆ ಅನ್ಯಾಪೋಹವೇ ಅರ್ಥ ಎಂದು ಹೇಳುವುದರಿಂದ ಅವರ ಮತದಲ್ಲಿ ಮಾತ್ರ ಸತ್ಯಶಬ್ದಕ್ಕೆ ಅಸತ್ಯವ್ಯಾವೃತ್ತಿಯೇ ಸಾಕ್ಷಾತ್ತಾಗಿ ಅರ್ಥ. ಅದ್ವೈತಮತದಲ್ಲಿ ಹಾಗಲ್ಲ. ಆದ್ದರಿಂದ ಸತ್ಯಾದಿಪದಗಳು ಸತ್ಯತ್ವಾದಿಧರ್ಮಗಳನ್ನು ಬ್ರಹ್ಮನಲ್ಲಿ ಹೇಳದಿದ್ದರೆ ಅಸತ್ಯಾದಿವ್ಯಾವೃತ್ತಿಯು ಹೇಗೆ ಸಿದ್ಧವಾಗುತ್ತದೆ? ಹಾಗೇ ವ್ಯಾವೃತ್ತಿಯು ಸಿದ್ಧವಾಗದಿದ್ದರೆ ತೀರದಲ್ಲೇ ಸ್ನಾನವುಂಟಾಗಲಿ ಎಂಬ ದೋಷವನ್ನು ಮೊದಲೇ ಹೇಳಿದ್ದೇವೆ.

**ಕಿಂಚ ಮುಖ್ಯಾರ್ಥಬಾಧೇ ಹಿ ಲಕ್ಷಣಾ ತೇನ ಸತ್ಯತಾ ।**
**ಜ್ಞಾನತಾಽನಂತತಾ ನೈವ ಭವೇದ್ ಬ್ರಹ್ಮಣಿ ಬೋಧಿತಾ ॥ ೯೮೩ ॥**

**ಅರ್ಥ–** ಕಿಂಚ= ಮತ್ತು, ಮುಖ್ಯಾರ್ಥಬಾಧೇ ಹಿ= ಮುಖ್ಯಾರ್ಥಕ್ಕೆ ಬಾಧವಿದ್ದರೆ ಮಾತ್ರ, ಲಕ್ಷಣಾ= ಲಕ್ಷಣಾವೃತ್ತಿಯು ಕೂಡುತ್ತದೆ, ತೇನ= ಆ ಕಾರಣದಿಂದ (ಲಕ್ಷಣಾವೃತ್ತಿಯನ್ನು ಆಶ್ರಯಿಸಿದ ಕಾರಣದಿಂದ), ಸತ್ಯತಾ ಜ್ಞಾನತಾಽನಂತತಾ= ಸತ್ಯತ್ವ, ಜ್ಞಾನತ್ವ ಮತ್ತು ಅನಂತತ್ವಗಳು, ಬ್ರಹ್ಮಣಿ= ಬ್ರಹ್ಮನಲ್ಲಿ, ನೈವ ಬೋಧಿತಾ ಭವೇದ್= ಬೋಧಿಸಲ್ಪಡಲಾರವು.

**ಅನುವಾದ–** ಅದೂ ಅಲ್ಲದೆ ಮುಖ್ಯಾರ್ಥಬಾಧವನ್ನು ಅಂಗೀಕರಿಸಿದರೆ ಮಾತ್ರ ಲಕ್ಷಣಾವೃತ್ತಿಯು ಕೂಡುತ್ತದೆ. ಆ ಪಕ್ಷದಲ್ಲಿ ಸತ್ಯ, ಜ್ಞಾನ, ಅನಂತಪದಗಳ ಮುಖ್ಯಾರ್ಥವಾದ, ಸತ್ಯತ್ವ, ಜ್ಞಾನತ್ವ ಮತ್ತು ಅನಂತತ್ವಗಳು ಎಂದೂ ಬ್ರಹ್ಮನಲ್ಲಿ ಬೋಧಿತವಾಗಲಾರವು.

**ಭಾವವಿಲಾಸಿನೀ–** ಸತ್ಯಾದಿಪದಾನಾಂ ಬ್ರಹ್ಮಣಿ ಲಕ್ಷಣಾಂಗೀಕಾರೇ ಬಾಧಕಾಂತರಂ ಚಾಹ– ಕಿಂಚೇತ್ಯಾದಿನಾ ॥ ೯೮೩ ॥

**ವಿವರಣೆ–** ಸತ್ಯಾದಿಪದಗಳಿಗೆ ಬ್ರಹ್ಮನಲ್ಲಿ ಲಕ್ಷಣಾವೃತ್ತಿಯನ್ನು ಅಂಗೀಕರಿಸುವುದರಿಂದ, ಮುಖ್ಯಾರ್ಥವಾದ ಸತ್ಯತ್ವ-ಜ್ಞಾನತ್ವಾದಿಗಳು ಬ್ರಹ್ಮನಲ್ಲಿ ಸಿದ್ಧವಾಗದೇ ಹೋಗಬೇಕಾಗುತ್ತದೆ ಎಂಬ ಪ್ರಸಂಗವನ್ನು ಇಲ್ಲಿ ಹೇಳುತ್ತಾರೆ.

ಸತ್ಯತ್ವರಹಿತಂ ಬ್ರಹ್ಮ ಮಿಥ್ಯೈವ ಸ್ಯಾದ್ ಘಟಾದಿವತ್ ।
ಸದ್ರೂಪಮಪಿ ತನ್ನ ಸ್ಯಾತ್ ತದ್ವತ್ ತೇನೈವ ಹೇತುನಾ ॥ ೯೮೪ ॥

**ಅರ್ಥ–** ಸತ್ಯತ್ವರಹಿತಂ= ಸತ್ಯತ್ವರಹಿತನಾದ, ಬ್ರಹ್ಮ= ಬ್ರಹ್ಮನು, ಘಟಾದಿವತ್= ಘಟಾದಿಗಳಂತೆ, ಮಿಥ್ಯೈವ ಸ್ಯಾತ್= ಮಿಥ್ಯಾಭೂತನೇ ಆಗುತ್ತಾನೆ, ತತ್= ಆ ಬ್ರಹ್ಮನು, ತೇನೈವ ಹೇತುನಾ= ಸತ್ಯತ್ವರಾಹಿತ್ಯರೂಪವಾದ ಅದೇ ಹೇತುವಿನಿಂದಲೇ, ಸದ್ರೂಪಮಪಿ= ಸದ್ರೂಪನಾಗಿಯೂ ಕೂಡ, ನ ಸ್ಯಾತ್= ಆಗಲಾರನು.

**ಅನುವಾದ–** ಸತ್ಯತ್ವರಹಿತವಾದ ಬ್ರಹ್ಮನು ಘಟದಂತೆ ಮಿಥ್ಯಾಭೂತನೇ ಆಗಬೇಕಾಗುತ್ತದೆ. ಸತ್ವರಹಿತನಾದ ಬ್ರಹ್ಮನಿಗೆ ಅದೇ ಹೇತುವಿನಿಂದ ಸದ್ರೂಪತ್ವವೂ ಸಹ ಉಪಪನ್ನವಾಗುವುದಿಲ್ಲ.

**ಭಾವವಿಲಾಸಿನೀ–** ಸತ್ಯತ್ವರಹಿತಮಿತಿ ಹೇತುಗರ್ಭವಿಶೇಷಣಮ್ । ಸತ್ಯತ್ವರಹಿತತ್ವಾದಿತ್ಯರ್ಥಃ । ನನು ಸತ್ಯತ್ವಾಭಾವೇಽಪಿ ಸದ್ರೂಪತ್ವೇನೈವ ಬ್ರಹ್ಮಣೋ ನ ಮಿಥ್ಯಾತ್ವಮಿತ್ಯತ ಆಹ– **ಸದ್ರೂಪಮಪೀ** ॥ ತದ್ ಬ್ರಹ್ಮ । ತದ್ವದ್ ಘಟವತ್ । ಪರರೀತ್ಯಾಯಂ ದೃಷ್ಟಾಂತಃ । ತೇನೈವ ಸತ್ತ್ವಾಭಾವೇನೈವ ॥ ೯೮೪ ॥

**ವಿವರಣೆ–** ಬ್ರಹ್ಮನಲ್ಲಿ ಸತ್ಯತ್ವವನ್ನು ಒಪ್ಪದಿದ್ದರೆ ಇಲ್ಲಿ ಬಾಧಕವನ್ನು ಹೇಳುತ್ತಾರೆ. ಬ್ರಹ್ಮ ಮಿಥ್ಯಾ, ಸತ್ವರಹಿತತ್ವಾತ್ ಘಟವತ್ ಎಂಬ ಅನುಮಾನದಿಂದ ಬ್ರಹ್ಮನಿಗೆ ಮಿಥ್ಯಾತ್ವದ ಸಾಧನೆಯನ್ನು ಮಾಡಲು ಬರುತ್ತದೆ ಎಂದು ದೋಷವನ್ನು ಹೇಳುತ್ತಾರೆ. ಬ್ರಹ್ಮನಲ್ಲಿ ಸತ್ವವಿಲ್ಲದಿದ್ದರೂ ಬ್ರಹ್ಮನು ಸದ್ರೂಪನಾದುದರಿಂದ ಮಿಥ್ಯಾಭೂತನಾಗುವುದಿಲ್ಲ ಎಂದು ಹೇಳಿದರೆ ಸತ್ವರಹಿತನಾದ ಮೇಲೆ ಸದ್ರೂಪತ್ವವು ಉಪಪನ್ನವಾಗುವುದಿಲ್ಲ ಎಂದು ಹೇಳುತ್ತಾರೆ. 'ಬ್ರಹ್ಮ ನ ಸದ್ರೂಪಂ ಸತ್ವರಹಿತತ್ವಾತ್ ಘಟವತ್' ಎಂಬ ಅನುಮಾನದಿಂದ ಸದ್ರೂಪತ್ವಾಭಾವವು ಸಿದ್ಧವಾಗುತ್ತದೆ.

**ನ ಚೇಚ್ಛಶವಿಷಾಣಂ ಚ ಸದ್ರೂಪಂ ಬ್ರಹ್ಮವದ್ ಭವೇತ್ ।**
**ಕೇವಲಾನ್ವಯಿಧರ್ಮತ್ವಾತ್ ಸತ್ತ್ವೇ ಸತ್ತ್ವಂ ಚ ವರ್ತತೇ ॥ ೯೮೫ ॥**

**ಅರ್ಥ–** ನ ಚೇತ್= ಇಲ್ಲದಿದ್ದರೆ, ಶಶವಿಷಾಣಂ= ಶಶವಿಷಾಣವೂ ಸಹ, ಬ್ರಹ್ಮವತ್= ಬ್ರಹ್ಮನಂತೆ, ಸದ್ರೂಪಂ ಭವೇತ್= ಸದ್ರೂಪವೇ ಆಗಲಿ, ಸತ್ವಂ= ಸತ್ವವು, ಕೇವಲಾನ್ವಯಿ-ಧರ್ಮತ್ವಾತ್= ಕೇವಲಾನ್ವಯಿ ಧರ್ಮವಾದ ಕಾರಣದಿಂದ, ಸತ್ತ್ವೇ ಚ= ಸತ್ತ್ವದಲ್ಲಿಯೂ, ವರ್ತತೇ= ಇರುತ್ತದೆ.

**ಅನುವಾದ–** ಹಾಗಿಲ್ಲದಿದ್ದರೆ ಶಶವಿಷಾಣವೂ ಸಹ ಬ್ರಹ್ಮನಂತೆ ಸದ್ರೂಪವಾಗಲಿ ಎಂಬ ಆಪತ್ತಿಯು ಬರುತ್ತದೆ. ಸತ್ವದಲ್ಲಿ ಸತ್ವವಿಲ್ಲದಿದ್ದರೂ ಮಿಥ್ಯಾತ್ವವಿಲ್ಲದಿರುವಂತೆ ಬ್ರಹ್ಮನಲ್ಲಿ ಸತ್ವವಿಲ್ಲದಿದ್ದರೂ ಮಿಥ್ಯಾತ್ವವು ಬರುವುದಿಲ್ಲ ಎಂಬ ಪರಿಹಾರವು ಸರಿಯಲ್ಲ. ಏಕೆಂದರೆ ಸತ್ವವು ಕೇವಲಾನ್ವಯಿಧರ್ಮವಾದ್ದರಿಂದ ಸತ್ವದಲ್ಲಿ ಸತ್ವವು ಇದ್ದೇ ಇದೆ.

**ಭಾವವಿಲಾಸಿನೀ–** ವಿಪಕ್ಷೇ ಬಾಧಕಮಾಹ– **ನಚೇದಿತಿ** ॥ ಸತ್ತ್ವಾಭಾವೇ ಸದ್ರೂಪತ್ವಾಭಾವೋ ನ ಚೇತ್ । ಸತ್ತ್ವಾಭಾವೇ ಸದ್ರೂಪತ್ವಾಭಾವಸ್ಯ ಸತ್ತಾಯಾಂ ವ್ಯಭಿಚಾರಮಾಶಂಕ್ಯ ಪರಿಹರತಿ– **ಕೇವಲಾನ್ವಯೀತಿ** ॥ ೯೮೫ ॥

**ವಿವರಣೆ–** ಸತ್ವವಿಲ್ಲದಿದ್ದರೂ ಸದ್ರೂಪತ್ವವು ಕೂಡಬಹುದಾದರೆ 'ಶಶವಿಷಾಣಂ ಸದ್ರೂಪಂ ಸತ್ವರಹಿತತ್ವಾತ್ ಬ್ರಹ್ಮವತ್' ಎಂಬ ಅನುಮಾನದಿಂದ ಶಶವಿಷಾಣಕ್ಕೂ ಸದ್ರೂಪತ್ವವನ್ನು ಸಾಧಿಸಬಹುದು. 'ಬ್ರಹ್ಮ ಮಿಥ್ಯಾಭೂತಂ ಸತ್ವರಹಿತ್ವಾತ್ ಘಟವತ್' ಎಂಬ ಅನುಮಾನಕ್ಕೆ ಸತ್ವದಲ್ಲಿಯೇ ವ್ಯಭಿಚಾರ ಬರುತ್ತದೆ. ಏಕೆಂದರೆ ಸತ್ವದಲ್ಲಿ ಸತ್ವವಿಲ್ಲ. ಆದ್ದರಿಂದ ಸತ್ವರಹಿತತ್ವರೂಪವಾದ ಹೇತುವು ಬರುತ್ತದೆ. ಆದರೆ ಸತ್ವವು ಮಿಥ್ಯಾಭೂತವಲ್ಲ. ಆದ್ದರಿಂದ ಸಾಧ್ಯಾಭಾವ ಬರುತ್ತದೆ. ಹೀಗಾಗಿ ವ್ಯಭಿಚಾರ ಬರುತ್ತದೆ ಎಂದು ಶಂಕೆಯನ್ನು ಮಾಡಿದರೆ ಅದಕ್ಕೆ ಗ್ರಂಥಕಾರರು ಸತ್ವದಲ್ಲಿ ಸತ್ವವು ಇದ್ದೇ ಇದೆ. ಏಕೆಂದರೆ ಸತ್ವವು ಕೇವಲಾನ್ವಯಿಧರ್ಮ. ಆದ್ದರಿಂದ ಸತ್ವದಲ್ಲಿ ಸತ್ವರಾಹಿತ್ಯರೂಪವಾದ

ಹೇತುವು ಇಲ್ಲದಿರುವುದರಿಂದ ಹೇತುವೂ ಇಲ್ಲ, ಸಾಧ್ಯವೂ ಇಲ್ಲ ಎಂದು ವ್ಯಭಿಚಾರವು ಪರಿಹೃತವಾಗುತ್ತದೆ ಎಂದು ಉತ್ತರವನ್ನು ಕೊಡುತ್ತಾರೆ.

**ಅತಃ ಸತ್ಯತ್ವರಹಿತಂ ಮಿಥ್ಯೈವ ಸ್ಯಾನ್ನ ಸಂಶಯಃ ।**
**ಶಿರಸೋ ಮುಂಡನೇ ತಸ್ಮಾಚ್ಛಿಖಾಮುಂಡನಮಪ್ಯಭೂತ್ ॥ ೯೮೬ ॥**

**ಅರ್ಥ–** ಅತಃ= ಆದ್ದರಿಂದ, ಸತ್ಯತ್ವರಹಿತಂ= ಸತ್ಯತ್ವರಹಿತವಾದ ವಸ್ತುವು, ಮಿಥ್ಯೈವ ಸ್ಯಾತ್= ಮಿಥ್ಯವೇ ಆಗಬೇಕಾಗುತ್ತದೆ, ನ ಸಂಶಯಃ= ಈ ವಿಷಯದಲ್ಲಿ ಸಂಶಯವಿಲ್ಲ, ಶಿರಸಃ ಮುಂಡನೇ= ತಲೆಯನ್ನು ಬೋಳಿಸಿದರೆ, ತಸ್ಮಾತ್= ಶಿರೋಮುಂಡನದಿಂದ, ಶಿಖಾಮುಂಡನಂ= ಶಿಖೆಯ ಮುಂಡನವೂ, ಅಭೂತ್= ಆಯಿತಷ್ಟೇ.

**ಅನುವಾದ–** ಆದ್ದರಿಂದ ಸತ್ಯತ್ವರಹಿತವಾದುದು ಮಿಥ್ಯಾಭೂತವೇ ಆಗುತ್ತದೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ತಲೆಯನ್ನೇ ಮುಂಡನ ಮಾಡಿದಾಗ ಅಲ್ಲಿರುವ ಶಿಖೆಯೂ ಮುಂಡಿತವಾಗುತ್ತದಷ್ಟೇ?

**ಭಾವವಿಲಾಸಿನೀ–** ಅತಃ ಸತ್ತ್ವೇಽಪಿ ಸತ್ತ್ವಸ್ಯದ್ಭಾವಾತ್ । ತಸ್ಮಾತ್ ಸತ್ತ್ವಾಭಾವಕಥನೇ ಸದ್ರೂಪತ್ವಾಭಾವಸ್ಯಾವರ್ಜನೀಯತ್ವಾತ್ । ಶಿರಸೋ ಮುಣ್ಡನೇ ಶಿಖಾಮುಣ್ಡನವತ್ ಸತ್ತ್ವಾಭಾವೇ ತ್ವದಭಿಲಷಿತಸದ್ರೂಪತ್ವಮಪಿ ಗತಮಿತಿ ಭಾವಃ ॥ ೯೮೬ ॥

**ವಿವರಣೆ–** ಸತ್ವವಿಲ್ಲದಿದ್ದರೆ ಸದ್ರೂಪತ್ವವು ಇರುವುದಿಲ್ಲ. ಆದ್ದರಿಂದ ನೀನು ಸತ್ವಾಭಾವವನ್ನು ಒಪ್ಪಿದರೆ ಸದ್ರೂಪತ್ವಾಭಾವವನ್ನು ಒಪ್ಪಬೇಕು. ತಲೆಯನ್ನು ಕ್ಷೌರಮಾಡಿದಾಗ ಶಿಖೆಯೂ ಹೋಗುವಂತೆ ಸತ್ವವನ್ನು ನಿಷೇಧ ಮಾಡಿದರೆ ನಿನಗೆ ಅಭಿಲಷಿತವಾದ ಸದ್ರೂಪತ್ವವೂ ಹೊರಟುಹೋಗುತ್ತದೆ ಎಂದು ಅಭಿಪ್ರಾಯ.

**ಯದಿ ಸತ್ಯಪದೇನಾಪಿ ಬ್ರಹ್ಮ ಲಕ್ಷ್ಯಂ ಭವೇತ್ ತವ ।**
**ತರ್ಹಿ ತತ್ಪದವಾಚ್ಯಂ ಮೇ ಜಗತ್ ಸತ್ಯಂ ಭವಿಷ್ಯತಿ ॥ ೯೮೭ ॥**

**ಅರ್ಥ–** ಯದಿ= ಒಂದು ಪಕ್ಷ, ಸತ್ಯಪದೇನಾಪಿ= ಸತ್ಯಪದದಿಂದಲೂ ಕೂಡ, ತವ = ನಿನಗೆ, ಬ್ರಹ್ಮ= ಬ್ರಹ್ಮನು, ಲಕ್ಷ್ಯಂ ಭವೇತ್= ಲಕ್ಷ್ಯನಾಗುವುದಾದರೆ, ತರ್ಹಿ= ಆಗ, ಮೇ= ನನಗೆ, ತತ್ಪದವಾಚ್ಯಂ= ಸತ್ಯಪದದಿಂದ ವಾಚ್ಯವಾದ, ಜಗತ್= ಜಗತ್ತು, ಸತ್ಯಂ ಭವಿಷ್ಯತಿ= ಸತ್ಯವಾಗುವುದು.

**ಅನುವಾದ–** ಒಂದು ಪಕ್ಷ ನಿನ್ನ ಬ್ರಹ್ಮನು ಸತ್ಯಪದದಿಂದ ಲಕ್ಷ್ಯನಾಗುವುದಾದರೆ ಆಗ ಸತ್ಯಪದವಾಚ್ಯವಾದ ಜಗತ್ತು ನನಗೆ ಸತ್ಯವಾಗುತ್ತದೆ.

**ಭಾವವಿಲಾಸಿನೀ–** ಸತ್ಯಪದಸ್ಯ ಬ್ರಹ್ಮಣಿ ಲಕ್ಷಣಾಂಗೀಕಾರೇ ಪುನರಪಿ ಬಾಧಕಮಾಹ–ಯದೀತಿ ॥ ಬ್ರಹ್ಮಣಿ ಸತ್ಯಪದಲಕ್ಷಣಾಂಗೀಕಾರೇ ತತ್ಪದವಾಚ್ಯಂ ಕಿಂಚಿದವಶ್ಯಂ ವಕ್ತವ್ಯಮ್ ।

ಶಬ್ದಸ್ಯಾಭಿಧಾಯಕತ್ವನಿಯಮಾತ್ । ತಚ್ಚ ಪರಿಶೇಷಾಜ್ಜಗದೇವ ಸ್ಯಾತ್ । ತೇನ ಚೈತನ್ಯಸ್ಯ ಸತ್ಯತ್ವಂ ನ ಸಿದ್ಧ್ಯತೀತಿ ಭಾವೇನಾಹ– **ತರ್ಹೀತಿ** ॥ ತತ್ಪದವಾಚ್ಯಂ ಸತ್ಯಪದವಾಚ್ಯಮ್ । ಹೇತುಗರ್ಭ-ವಿಶೇಷಣಮೇತತ್ । ಸತ್ಯಪದವಾಚ್ಯತ್ವಾದಿತ್ಯರ್ಥಃ । ವಾಚಕಸ್ಯ ಸತ್ಯಪದಸ್ಯ ಸತ್ಯತ್ವರೂಪಪ್ರವೃತ್ತಿ-ನಿಮಿತ್ತಪುರಸ್ಕಾರಿತ್ವಾದಿತಿ ಭಾವಃ ॥ ೯೮೭ ॥

**ವಿವರಣೆ–** ಸತ್ಯಪದಕ್ಕೆ ಬ್ರಹ್ಮನಲ್ಲಿ ಲಕ್ಷಣಾವೃತ್ತಿಯನ್ನು ಅಂಗೀಕಾರ ಮಾಡಿದರೆ ಪುನಃ ಬಾಧಕವನ್ನು ಹೇಳುತ್ತಾರೆ. ಸತ್ಯಪದಕ್ಕೆ ಬ್ರಹ್ಮನಲ್ಲಿ ಲಕ್ಷಣಾವನ್ನು ಮಾಡಿದಾಗ ಸತ್ಯಪದವಾಚ್ಯವು ಯಾವುದು ಎಂದು ಹೇಳಬೇಕು. ಬ್ರಹ್ಮನಂತೂ ಅಲ್ಲ. ಆಗ ಉಳಿದಿರುವ ಜಗತ್ತೇ ಸತ್ಯಪದವಾಚ್ಯವಾಗಬೇಕು. ಅದೇ ಸತ್ಯವೆಂದು ಸಿದ್ಧವಾಗುತ್ತದೆ. ಏಕೆಂದರೆ ವಾಚಕವಾದ ಸತ್ಯಪದವು ಸತ್ಯತ್ವರೂಪವಾದ ಪ್ರವೃತ್ತಿನಿಮಿತ್ತವನ್ನೇ ಅವಲಂಬಿಸಿ ಪ್ರವೃತ್ತವಾಗುವುದರಿಂದ ಜಗತ್ತಿನಲ್ಲಿ ಸತ್ಯತ್ವವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಗಂಗಾಪದೇನ ಯಾ ವಾಚ್ಯಾ ಸೈವ ಗಂಗಾ ಯತೋ ನೃಣಾಮ್ ।**
**ಅತಸ್ತ್ವಲ್ಲಕ್ಷಣಾ ಸರ್ವಜಗತೋ ರಕ್ಷಣಾಯ ಮೇ ॥ ೯೮೮ ॥**

**ಅರ್ಥ–** ಯತಃ= ಏಕೆಂದರೆ, ಯಾ= ಯಾವುದು, ಗಂಗಾಪದೇನ= ಗಂಗಾಪದದಿಂದ, ವಾಚ್ಯಾ= ವಾಚ್ಯವೋ, ಸೈವ= ಅದೇ, ನೃಣಾಮ್= ಮನುಷ್ಯರಿಗೆ, ಗಂಗಾ= ಗಂಗೆಯಷ್ಟೇ. ಅತಃ= ಆದ್ದರಿಂದ, ತ್ವಲ್ಲಕ್ಷಣಾ= ನೀನು ಮಾಡುವ ಲಕ್ಷಣಾವೃತ್ತಿಯು, ಮೇ= ನನಗೆ, ಸರ್ವಜಗತಃ= ಎಲ್ಲಾ ಜಗತ್ತಿನ, ರಕ್ಷಣಾಯ= ರಕ್ಷಣೆಗೋಸ್ಕರವಾಗಿ ಆಗುತ್ತದೆ (ರಕ್ಷಣೆಯನ್ನು ಮಾಡುತ್ತದೆ).

**ಅನುವಾದ–** ಏಕೆಂದರೆ ಯಾವುದು ಗಂಗಾಪದವಾಚ್ಯವೋ, ಅದೇ ಗಂಗಾತ್ವವುಳ್ಳದ್ದು ಎಂದು ಎಲ್ಲರೂ ತಿಳಿಯುತ್ತಾರೆ. ಆದ್ದರಿಂದ ನೀನು ಮಾಡುವ ಲಕ್ಷಣಾವೃತ್ತಿಯು ನನ್ನ ಜಗತ್ತನ್ನು ಉಳಿಸುತ್ತದೆ.

**ಭಾವವಿಲಾಸಿನೀ–** ತತ್ರ ದೃಷ್ಟಾಂತಮಾಹ– **ಗಂಗೇತಿ** ॥ ೯೮೮ ॥

**ವಿವರಣೆ–** ಗಂಗಾಪದವಾಚ್ಯವಾದುದು ಯಾವುದೋ, ಆ ಗಂಗಾಪದವಾಚ್ಯವಾದ ಪ್ರವಾಹವೇ ಗಂಗಾತ್ವ ಉಳ್ಳದ್ದಾಗುತ್ತದೆ. ಆದ್ದರಿಂದ ಸತ್ಯಪದಕ್ಕೆ ಬ್ರಹ್ಮನಲ್ಲಿ ಲಕ್ಷಣಾವೃತ್ತಿಯನ್ನು ಅಂಗೀಕಾರ ಮಾಡುವ ಪಕ್ಷದಲ್ಲಿ ಸತ್ಯಪದವಾಚ್ಯವಾದ ಜಗತ್ತೇ ಸತ್ಯತ್ವವು ಉಳ್ಳದ್ದಾಗುತ್ತದೆ. ಆದ್ದರಿಂದ ಜಗತ್ತಿನ ರಕ್ಷಣೆಯಾಗುತ್ತದೆ ಎಂದು ಅಭಿಪ್ರಾಯ.

**ಬ್ರಹ್ಮೈಕ್ಯವಾಕ್ಯಮಪಿ ತೇ ಸ್ವರೂಪಪರಮೇವ ಹಿ ।**
**ಏವಂ ಚೇದ್ ಗತಮದ್ವೈತಮಮಾನತ್ವಾನ್ ನೃಶೃಂಗವತ್ ।**
**ಭೇದಶ್ಚ ಶ್ರುತಿಮುಖ್ಯಾರ್ಥಃ ಸುಸ್ಥಿರೋಽಭೂದಿತಿ ಸ್ಥಿತಮ್ ॥ ೯೮೯ ॥**

**ಅರ್ಥ–** ತೇ= ನಿನಗೆ, ಬ್ರಹ್ಮೈಕ್ಯವಾಕ್ಯಮಪಿ= ಬ್ರಹ್ಮೈಕ್ಯವನ್ನು ಹೇಳುವ ವಾಕ್ಯವೂ ಸಹ, ಸ್ವರೂಪಪರಮೇವ ಹಿ= ಚೈತನ್ಯ ಸ್ವರೂಪಮಾತ್ರಪ್ರತಿಪಾದಕವಷ್ಟೇ, ಏವಂ ಚೇತ್= ಹಾಗಾದರೆ, ಅದ್ವೈತಂ= ಅದ್ವೈತವು, ಅಮಾನತ್ವಾತ್= ಪ್ರಮಾಣವಿಲ್ಲದಿರುವುದರಿಂದ, ನೃಶೃಂಗವತ್= ಮನುಷ್ಯನ ಕೋಡಿನಂತೆ, ಗತಮ್= ಹೊರಟುಹೋಯಿತು, ಶ್ರುತಿಮುಖ್ಯಾರ್ಥಃ= ಶ್ರುತಿಮುಖ್ಯಾರ್ಥವಾದ, ಭೇದಶ್ಚ= ಭೇದವಾದರೂ, ಸುಸ್ಥಿರೋऽಭೂತ್= ಸುಸ್ಥಿರವಾಯಿತು, ಇತಿ= ಎಂದು, ಸ್ಥಿತಮ್= ಸಿದ್ಧವಾಯಿತು.

**ಅನುವಾದ– ಐಕ್ಯಪರವಾಕ್ಯಗಳೂ ಸಹ ನಿನಗೆ ಸ್ವರೂಪಪರವೇ ಆಗಿವೆಯಷ್ಟೇ? ಹಾಗಾದರೆ ಐಕ್ಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ನರವಿಷಾಣದಂತೆ ನಿನ್ನ ಐಕ್ಯವು ಹೊರಟುಹೋಯಿತು. ಭೇದಶ್ರುತಿಯ ಮುಖ್ಯಾರ್ಥವಾದ ಭೇದಕ್ಕೆ ಈಗ ಐಕ್ಯಶ್ರುತಿಯಿಂದ ವಿರೋಧವಿಲ್ಲದಿರುವುದರಿಂದ ಆ ಭೇದವು ಸುಸ್ಥಿರವಾಯಿತು.**

**ಭಾವವಿಲಾಸಿನೀ–** 'ತತ್ ತ್ವಮಸಿ' ಇತ್ಯತ್ರ ಪರೋದೀರಿತತತ್ಪದಾರ್ಥನಿಷ್ಠಸತ್ಯಾದಿಪದಾನಾಮಖಂಡಾರ್ಥತ್ವಂ ನಿರಾಕೃತ್ಯೇದಾನೀಮ್ ಐಕ್ಯರೂಪವಾಕ್ಯಾರ್ಥಪರವಾಕ್ಯಸ್ಯಾಪ್ಯಖಂಡಾರ್ಥತ್ವಂ ನಿರಾಕರೋತಿ– **ಬ್ರಹ್ಮೈಕ್ಯವಾಕ್ಯಮಪೀತಿ** ॥ ಅಮಾನತ್ವಾತ್ ಸ್ವಪ್ರತಿಪಾದಕಪ್ರಮಾಣರಹಿತತ್ವಾತ್ ॥ ೯೮೯ ॥

**ವಿವರಣೆ–** ಅದ್ವೈತಿಗಳು ಕೆಲವು ವಾಕ್ಯಗಳನ್ನು ತತ್‌ಪದಾರ್ಥಪರವೆಂದೂ, ಮತ್ತು ಕೆಲವು ವಾಕ್ಯಗಳನ್ನು ತ್ವಂಪದಾರ್ಥಪರವೆಂದೂ, ಇನ್ನು ಕೆಲವು ವಾಕ್ಯಗಳು ಐಕ್ಯತಾತ್ಪರ್ಯವುಳ್ಳವುಗಳೆಂದೂ ಹೇಳುತ್ತಾರೆ. ತತ್‌ಪದಾರ್ಥಪರವಾದ ಸತ್ಯಜ್ಞಾನಾದಿವಾಕ್ಯಗಳಲ್ಲಿ ಲಕ್ಷಣಾವೃತ್ತಿಯನ್ನು ಸ್ವೀಕಾರ ಮಾಡಿದರೆ ಉಂಟಾಗುವ ಬಾಧಕಗಳನ್ನು ಇದುವರೆಗೆ ಹೇಳಿದ್ದಾಯಿತು. ಈಗ ಐಕ್ಯಪರ ವಾಕ್ಯಕ್ಕೆ ಲಕ್ಷಣಾವೃತ್ತಿಯನ್ನು ಅಂಗೀಕರಿಸಿ ಅಖಂಡಾರ್ಥತ್ವವನ್ನು ಹೇಳಿದರೆ ಬಾಧಕವನ್ನು ಹೇಳುತ್ತಾರೆ. 'ತತ್ ತ್ವಮಸಿ' ಎಂಬುದು ಐಕ್ಯಪರವಾದ ಒಂದು ವಾಕ್ಯ. ಇಲ್ಲಿ ಇರುವ ಮೂರು ಪದಗಳಿಗೂ ಲಕ್ಷಣಾವೃತ್ತಿಯಿಂದ ಚೈತನ್ಯ ಎಂದೇ ಅರ್ಥ. ಆದ್ದರಿಂದ ಈ ವಾಕ್ಯವು ಐಕ್ಯವನ್ನು ಹೇಳುವುದಿಲ್ಲ. ಐಕ್ಯವನ್ನು ಹೇಳಿದ್ದರೆ ಈ ವಾಕ್ಯದಿಂದ ಭೇದಶ್ರುತಿಗೆ ವಿರೋಧ ಬರುತ್ತಿತ್ತು. ಆದರೆ ಈ ವಾಕ್ಯವು ಐಕ್ಯವನ್ನೇ ಹೇಳದಿರುವುದರಿಂದ ಭೇದಶ್ರುತಿಗೆ ಯಾವ ವಿರೋಧವೂ ಇಲ್ಲದೆ ಅದರ ಅರ್ಥವಾದ ಭೇದವು ಸುಸ್ಥಾಪಿತವಾಗುತ್ತದೆ ಎಂದು ಗ್ರಂಥಕಾರರು ಹೇಳುತ್ತಾರೆ.

**ದುರ್ಜನಃ ಸಜ್ಜನಸ್ಯಾರ್ಥಮುಜ್ಜಿಹೀರ್ಷೇಚ್ಛನೈಃಶನೈಃ ।
ಕಿಂ ನೋಚುರ್ವೇದವಾಚ್ಯಸ್ಯ ಸ್ವಪದೈರಪ್ಯವಾಚ್ಯತಾಮ್ ।
ಅಂಧಸ್ಯಾಂಧ್ಯಂ ಹಿ ಸಂದಧ್ಯುರಪದೇ ಪದಸಂಪದಃ ॥ ೯೯೦ ॥**

**ಅರ್ಥ–** ದುರ್ಜನಃ= ದುರ್ಜನನಾದವನು, ಸಜ್ಜನಸ್ಯಾರ್ಥಂ= ಸಜ್ಜನರಿಗೆ ಸೇರಿದ ಅರ್ಥವನ್ನು, ಶನೈಃಶನೈಃ= ಮೆಲ್ಲಮೆಲ್ಲನೆ, ಉಜ್ಜಿಹೀರ್ಷೇತ್= ಅಪಹರಿಸಲು ಇಚ್ಛಿಸುತ್ತಾನೆ, ವೇದವಾಚ್ಯಸ್ಯ= ಸಮಸ್ತ ವೇದದಲ್ಲಿರುವ ಪದಗಳಿಂದಲೂ ವಾಚ್ಯನಾದ ಬ್ರಹ್ಮನಿಗೆ, ಸ್ವಪದೈರಪಿ= ಅವನನ್ನೇ ಹೇಳುವ ಬ್ರಹ್ಮಾದಿಪದಗಳಿಂದಲೂ, ಅವಾಚ್ಯತಾಮ್= ಅವಾಚ್ಯತ್ವವನ್ನು, ಕಿಂ ನೋಚುಃ= ಹೇಳಲಿಲ್ಲವೇನು, ಅಂಧಸ್ಯ= ಕುರುಡನಿಗೆ, ಆಂಧ್ಯಂ= ಕುರುಡುತನವನ್ನೇ, ಸಂದಧ್ಯುಃ ಹಿ= ಅವರು ಅನುಸಂಧಾನ ಮಾಡುತ್ತಾರೆ, ಅಪದೇ= ಪಾದವಿಡಲು ಎಡೆಯಿಲ್ಲದ ಸ್ಥಳದಲ್ಲಿ, ಪದಸಂಪದಃ= ಪಾದವಿಕ್ಷೇಪವನ್ನು, ಸಂದಧ್ಯುಃ= ಚಿಂತಿಸುತ್ತಾರೆ.

**ಅನುವಾದ–** ದುರ್ಜನನು ಸಜ್ಜನರ ದ್ರವ್ಯವನ್ನು ನಿಧಾನವಾಗಿ ಅಪಹರಿಸಲು ಇಚ್ಛಿಸುತ್ತಾನೆ. ವೇದದಲ್ಲಿರುವ ಎಲ್ಲಾ ಪದಗಳಿಂದಲೂ ವಾಚ್ಯನಾದ ಬ್ರಹ್ಮನನ್ನು, ಬ್ರಹ್ಮನನ್ನೇ ಸಾಕ್ಷಾತ್ತಾಗಿ ಹೇಳುವ ಸತ್ಯಜ್ಞಾನಾದಿ ಪದಗಳಿಂದಲೂ ಅವಾಚ್ಯನೆಂದು ಹೇಳಲಿಲ್ಲವೇ? ಅಂತಹವರು ಇನ್ನೊಬ್ಬರ ಆಂಧ್ಯವನ್ನು ಬಯಸುತ್ತಾರೆ. ಪಾದವಿಡಲು ಸಾಧ್ಯವಿಲ್ಲದ ಸ್ಥಳದಲ್ಲಿ ಪಾದವಿಕ್ಷೇಪವನ್ನು ಚಿಂತಿಸುತ್ತಾರೆ.

**ಭಾವವಿಲಾಸಿನೀ–** ಅಖಂಡಾರ್ಥತ್ವಂ ಲೋಕಪ್ರವಾದದೃಷ್ಟಾಂತತಯಾಪಿ ನಿರಾಕರೋತಿ– ದುರ್ಜನ ಇತ್ಯಾದಿನಾ ॥ ಅರ್ಥಂ ದ್ರವ್ಯಮ್ । ಉಜ್ಜಿಹೀರ್ಷೇದ್ ಉತ್ಕೃಷ್ಟತಯಾಽ- ಪಹರ್ತುಮಿಚ್ಛೇತ್ । ತತ್ರ ದೃಷ್ಟಾಂತಮಾಹ– ಕಿಂ ನೋಚುರಿತಿ ॥ ಅನಂತವೇದಪದವಾಚ್ಯಸ್ಯ ಸ್ವಪದೈಃ ಸತ್ಯಜ್ಞಾನಾದಿಪದೈಃ । ಅಂಧಸ್ಯ ಭಾವಃ ಆಂಧ್ಯಮ್ । ಅಪದೇ ಪದಪ್ರಕ್ಷೇಪಣಾ ಯೋಗ್ಯಕಣ್ಟಕಾದಿಸ್ಥಲೇ ॥ ೯೯೦ ॥

**ವಿವರಣೆ–** ದುರ್ಜನರು ಸಜ್ಜನರ ದ್ರವ್ಯವನ್ನು ಅಪಹರಿಸಲು ಇಚ್ಛಿಸುತ್ತಾರೆ. ಈ ವಿಷಯವನ್ನು ಅರ್ಥಾಂತರನ್ಯಾಸಾಲಂಕಾರದಿಂದ ಸಮರ್ಥಿಸುತ್ತಾರೆ. ವೇದದಲ್ಲಿರುವ ಎಲ್ಲಾ ಪದಗಳಿಂದಲೂ ವಾಚ್ಯನಾದವನು ಬ್ರಹ್ಮ. ಅವನನ್ನು ಸತ್ಯಜ್ಞಾನಾದಿ- ಪದಗಳಿಂದಲೂ ವಾಚ್ಯನಲ್ಲ ಎಂದು ಹೇಳುವವರು ನಿಧಾನವಾಗಿ ಒಂದೊಂದು ಪದದ ವಾಚ್ಯತ್ವವನ್ನು ಅಪಹಾರ ಮಾಡುವುದರಿಂದ ಆ ದುರ್ಜನರಿಗೆ ಸಮಾನರಾಗುತ್ತಾರೆ. ಅಂತಹವರು ಇನ್ನೊಬ್ಬನಿಗೆ ಕುರುಡುತನವನ್ನೂ ಪಾದಕ್ಷೇಪಕ್ಕೆ ಅವಕಾಶವಿಲ್ಲದ ಸ್ಥಳದಲ್ಲಿ ಪಾದಕ್ಷೇಪವನ್ನೂ ಚಿಂತಿಸುತ್ತಾರೆ.

**ಅಲಕ್ಷಣಂ ಕಿಲಾರ್ಥೋಽರ್ಥೋ ಲಕ್ಷಣೋಕ್ತೇರ್ನ ಲಕ್ಷಣಮ್ ।**
**ಸ್ವಯಂ ಭೂತ್ವಾ ಸ್ವಮಾತೈವ ವಂಧ್ಯೇತ್ಯತಿಖಲೋ ವದೇತ್ ।**
**ವ್ಯಾವರ್ತಕೋಕ್ತಿರ್ವ್ಯಾವೃತ್ತ್ಯೈ ನ ವ್ಯಾವರ್ತಕವಾಕ್ ಕಿಲ ॥ ೯೯೧ ॥**

**ಅರ್ಥ–** ತೇ= ನಿನಗೆ, ಬ್ರಹ್ಮೈಕ್ಯವಾಕ್ಯಮಪಿ= ಬ್ರಹ್ಮೈಕ್ಯವನ್ನು ಹೇಳುವ ವಾಕ್ಯವೂ ಸಹ, ಸ್ವರೂಪಪರಮೇವ ಹಿ= ಚೈತನ್ಯ ಸ್ವರೂಪಮಾತ್ರಪ್ರತಿಪಾದಕವಷ್ಟೇ, ಏವಂ ಚೇತ್= ಹಾಗಾದರೆ, ಅದ್ವೈತಂ= ಅದ್ವೈತವು, ಅಮಾನತ್ವಾತ್= ಪ್ರಮಾಣವಿಲ್ಲದಿರುವುದರಿಂದ, ನೃಶೃಂಗವತ್= ಮನುಷ್ಯನ ಕೋಡಿನಂತೆ, ಗತಮ್= ಹೊರಟುಹೋಯಿತು, ಶ್ರುತಿಮುಖ್ಯಾರ್ಥಃ= ಶ್ರುತಿಮುಖ್ಯಾರ್ಥವಾದ, ಭೇದಶ್ಚ= ಭೇದವಾದರೂ, ಸುಸ್ಥಿರೋಽಭೂತ್= ಸುಸ್ಥಿರವಾಯಿತು, ಇತಿ= ಎಂದು, ಸ್ಥಿತಮ್= ಸಿದ್ಧವಾಯಿತು.

**ಅನುವಾದ–** ಐಕ್ಯಪರವಾಕ್ಯಗಳೂ ಸಹ ನಿನಗೆ ಸ್ವರೂಪಪರವೇ ಆಗಿವೆಯಷ್ಟೇ? ಹಾಗಾದರೆ ಐಕ್ಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ನರವಿಷಾಣದಂತೆ ನಿನ್ನ ಐಕ್ಯವು ಹೊರಟುಹೋಯಿತು. ಭೇದಶ್ರುತಿಯ ಮುಖ್ಯಾರ್ಥವಾದ ಭೇದಕ್ಕೆ ಈಗ ಐಕ್ಯಶ್ರುತಿಯಿಂದ ವಿರೋಧವಿಲ್ಲದಿರುವುದರಿಂದ ಆ ಭೇದವು ಸುಸ್ಥಿರವಾಯಿತು.

**ಭಾವವಿಲಾಸಿನೀ–** 'ತತ್ ತ್ವಮಸಿ' ಇತ್ಯತ್ರ ಪರೋದೀರಿತತ್ಪದಾರ್ಥನಿಷ್ಠಸತ್ಯಾದಿಪದಾನಾಮಖಂಡಾರ್ಥತ್ವಂ ನಿರಾಕೃತ್ಯೇದಾನೀಮ್ ಐಕ್ಯರೂಪವಾಕ್ಯಾರ್ಥಪರವಾಕ್ಯಸ್ಯಾಪ್ಯಖಂಡಾರ್ಥತ್ವಂ ನಿರಾಕರೋತಿ– **ಬ್ರಹ್ಮೈಕ್ಯವಾಕ್ಯಮಪೀತಿ** ॥ ಅಮಾನತ್ವಾತ್ ಸ್ವಪ್ರತಿಪಾದಕಪ್ರಮಾಣರಹಿತತ್ವಾತ್ ॥ ೯೮ ॥

**ವಿವರಣೆ–** ಅದ್ವೈತಿಗಳು ಕೆಲವು ವಾಕ್ಯಗಳನ್ನು ತತ್‌ಪದಾರ್ಥಪರವೆಂದೂ, ಮತ್ತು ಕೆಲವು ವಾಕ್ಯಗಳನ್ನು ತ್ವಂಪದಾರ್ಥಪರವೆಂದೂ, ಇನ್ನು ಕೆಲವು ವಾಕ್ಯಗಳು ಐಕ್ಯತಾತ್ಪರ್ಯವುಳ್ಳವುಗಳೆಂದೂ ಹೇಳುತ್ತಾರೆ. ತತ್‌ಪದಾರ್ಥಪರವಾದ ಸತ್ಯಜ್ಞಾನಾದಿವಾಕ್ಯಗಳಲ್ಲಿ ಲಕ್ಷಣಾವೃತ್ತಿಯನ್ನು ಸ್ವೀಕಾರ ಮಾಡಿದರೆ ಉಂಟಾಗುವ ಬಾಧಕಗಳನ್ನು ಇದುವರೆಗೆ ಹೇಳಿದ್ದಾಯಿತು. ಈಗ ಐಕ್ಯಪರ ವಾಕ್ಯಕ್ಕೆ ಲಕ್ಷಣಾವೃತ್ತಿಯನ್ನು ಅಂಗೀಕರಿಸಿ ಅಖಂಡಾರ್ಥತ್ವವನ್ನು ಹೇಳಿದರೆ ಬಾಧಕವನ್ನು ಹೇಳುತ್ತಾರೆ. 'ತತ್ ತ್ವಮಸಿ' ಎಂಬುದು ಐಕ್ಯಪರವಾದ ಒಂದು ವಾಕ್ಯ. ಇಲ್ಲಿ ಇರುವ ಮೂರು ಪದಗಳಿಗೂ ಲಕ್ಷಣಾವೃತ್ತಿಯಿಂದ ಚೈತನ್ಯ ಎಂದೇ ಅರ್ಥ. ಆದ್ದರಿಂದ ಈ ವಾಕ್ಯವು ಐಕ್ಯವನ್ನು ಹೇಳುವುದಿಲ್ಲ. ಐಕ್ಯವನ್ನು ಹೇಳಿದ್ದರೆ ಈ ವಾಕ್ಯದಿಂದ ಭೇದಶ್ರುತಿಗೆ ವಿರೋಧ ಬರುತ್ತಿತ್ತು. ಆದರೆ ಈ ವಾಕ್ಯವು ಐಕ್ಯವನ್ನೇ ಹೇಳದಿರುವುದರಿಂದ ಭೇದಶ್ರುತಿಗೆ ಯಾವ ವಿರೋಧವೂ ಇಲ್ಲದೆ ಅದರ ಅರ್ಥವಾದ ಭೇದವು ಸುಸ್ಥಾಪಿತವಾಗುತ್ತದೆ ಎಂದು ಗ್ರಂಥಕಾರರು ಹೇಳುತ್ತಾರೆ.

ದುರ್ಜನಃ ಸಜ್ಜನಸ್ಯಾರ್ಥಮುಜ್ಜಿಹೀರ್ಷೇಚ್ಛನೈಃಶನೈಃ ।
ಕಿಂ ನೋಚುರ್ವೇದವಾಚ್ಯಸ್ಯ ಸ್ವಪದೈರಪ್ಯವಾಚ್ಯತಾಮ್ ।
ಅಂಧಸ್ಯಾಂಧ್ಯಂ ಹಿ ಸಂದಧ್ಯುರಪದೇ ಪದಸಂಪದಃ ॥ ೯೯ ॥

**ಅರ್ಥ–** ದುರ್ಜನಃ= ದುರ್ಜನನಾದವನು, ಸಜ್ಜನಸ್ಯಾರ್ಥಂ= ಸಜ್ಜನರಿಗೆ ಸೇರಿದ ಅರ್ಥವನ್ನು, ಶನೈಃಶನೈಃ= ಮೆಲ್ಲಮೆಲ್ಲನೆ, ಉಜ್ಜಿಹೀರ್ಷೇತ್= ಅಪಹರಿಸಲು ಇಚ್ಛಿಸುತ್ತಾನೆ, ವೇದವಾಚ್ಯಸ್ಯ= ಸಮಸ್ತ ವೇದದಲ್ಲಿರುವ ಪದಗಳಿಂದಲೂ ವಾಚ್ಯನಾದ ಬ್ರಹ್ಮನಿಗೆ, ಸ್ವಪದೈರಪಿ= ಅವನನ್ನೇ ಹೇಳುವ ಬ್ರಹ್ಮಾದಿಪದಗಳಿಂದಲೂ, ಅವಾಚ್ಯತಾಮ್= ಅವಾಚ್ಯತ್ವವನ್ನು, ಕಿಂ ನೋಚುಃ= ಹೇಳಲಿಲ್ಲವೇನು, ಅಂಧಸ್ಯ= ಕುರುಡನಿಗೆ, ಆಂಧ್ಯಂ= ಕುರುಡುತನವನ್ನೇ, ಸಂದಧ್ಯುಃ ಹಿ= ಅವರು ಅನುಸಂಧಾನ ಮಾಡುತ್ತಾರೆ, ಅಪದೇ= ಪಾದವಿಡಲು ಎಡೆಯಿಲ್ಲದ ಸ್ಥಳದಲ್ಲಿ, ಪದಸಂಪದಃ= ಪಾದವಿಕ್ಷೇಪವನ್ನು, ಸಂದಧ್ಯುಃ= ಚಿಂತಿಸುತ್ತಾರೆ.

**ಅನುವಾದ–** ದುರ್ಜನನು ಸಜ್ಜನರ ದ್ರವ್ಯವನ್ನು ನಿಧಾನವಾಗಿ ಅಪಹರಿಸಲು ಇಚ್ಛಿಸುತ್ತಾನೆ. ವೇದದಲ್ಲಿರುವ ಎಲ್ಲಾ ಪದಗಳಿಂದಲೂ ವಾಚ್ಯನಾದ ಬ್ರಹ್ಮನನ್ನು ಬ್ರಹ್ಮನನ್ನೇ ಸಾಕ್ಷಾತ್ತಾಗಿ ಹೇಳುವ ಸತ್ಯಜ್ಞಾನಾದಿ ಪದಗಳಿಂದಲೂ ಅವಾಚ್ಯನೆಂದು ಹೇಳಲಿಲ್ಲವೇ? ಅಂತಹವರು ಇನ್ನೊಬ್ಬರ ಆಂಧ್ಯವನ್ನು ಬಯಸುತ್ತಾರೆ. ಪಾದವಿಡಲು ಸಾಧ್ಯವಿಲ್ಲದ ಸ್ಥಳದಲ್ಲಿ ಪಾದವಿಕ್ಷೇಪವನ್ನು ಚಿಂತಿಸುತ್ತಾರೆ.

**ಭಾವವಿಲಾಸಿನೀ–** ಅಖಂಡಾರ್ಥತ್ವಂ ಲೋಕಪ್ರವಾದದೃಷ್ಟಾಂತತಯಾಪಿ ನಿರಾಕರೋತಿ– ದುರ್ಜನ ಇತ್ಯಾದಿನಾ ॥ ಅರ್ಥಂ ದ್ರವ್ಯಮ್ । ಉಜ್ಜಿಹೀರ್ಷೇದ್ ಉತ್ಕೃಷ್ಟತಯಾಽ-ಪಹರ್ತುಮಿಚ್ಛೇತ್ । ತತ್ರ ದೃಷ್ಟಾಂತಮಾಹ– ಕಿಂ ನೋಚುರಿತಿ ॥ ಅನಂತವೇದಪದವಾಚ್ಯಸ್ಯ ಸ್ವಪದೈಃ ಸತ್ಯಜ್ಞಾನಾದಿಪದೈಃ । ಅಂಧಸ್ಯ ಭಾವಃ ಆಂಧ್ಯಮ್ । ಅಪದೇ ಪದಪ್ರಕ್ಷೇಪಣಾ ಯೋಗ್ಯಕಣ್ಟಕಾದಿಸ್ಥಲೇ ॥ ೯೯೦ ॥

**ವಿವರಣೆ–** ದುರ್ಜನರು ಸಜ್ಜನರ ದ್ರವ್ಯವನ್ನು ಅಪಹರಿಸಲು ಇಚ್ಛಿಸುತ್ತಾರೆ. ಈ ವಿಷಯವನ್ನು ಅರ್ಥಾಂತರನ್ಯಾಸಾಲಂಕಾರದಿಂದ ಸಮರ್ಥಿಸುತ್ತಾರೆ. ವೇದದಲ್ಲಿರುವ ಎಲ್ಲಾ ಪದಗಳಿಂದಲೂ ವಾಚ್ಯನಾದವನು ಬ್ರಹ್ಮ. ಅವನನ್ನು ಸತ್ಯಜ್ಞಾನಾದಿ-ಪದಗಳಿಂದಲೂ ವಾಚ್ಯನಲ್ಲ ಎಂದು ಹೇಳುವವರು ನಿಧಾನವಾಗಿ ಒಂದೊಂದು ಪದದ ವಾಚ್ಯತ್ವವನ್ನು ಅಪಹಾರ ಮಾಡುವುದರಿಂದ ಆ ದುರ್ಜನರಿಗೆ ಸಮಾನರಾಗುತ್ತಾರೆ. ಅಂತಹವರು ಇನ್ನೊಬ್ಬನಿಗೆ ಕುರುಡುತನವನ್ನೂ ಪಾದಕ್ಷೇಪಕ್ಕೆ ಅವಕಾಶವಿಲ್ಲದ ಸ್ಥಳದಲ್ಲಿ ಪಾದಕ್ಷೇಪವನ್ನೂ ಚಿಂತಿಸುತ್ತಾರೆ.

ಅಲಕ್ಷಣಂ ಕಿಲಾರ್ಥೋಽರ್ಥೋ ಲಕ್ಷಣೋಕ್ತೇರ್ನ ಲಕ್ಷಣಮ್ ।
ಸ್ವಯಂ ಭೂತ್ವಾ ಸ್ವಮಾತೈವ ವಂಧ್ಯೇತ್ಯತಿಖಲೋ ವದೇತ್ ।
ವ್ಯಾವರ್ತಕೋಕ್ತಿರ್ವ್ಯಾವೃತ್ತ್ಯೈ ನ ವ್ಯಾವರ್ತಕವಾಕ್ ಕಿಲ ॥ ೯೯೧ ॥

**ಅರ್ಥ–** ಲಕ್ಷಣೋಕ್ತೇಃ= ಲಕ್ಷಣವಾಕ್ಯಕ್ಕೆ, ಅಲಕ್ಷಣಂ= ಲಕ್ಷಣವಲ್ಲದುದು, ಅರ್ಥಃ ಕಿಲ= ಅರ್ಥವಷ್ಟೇ, ಲಕ್ಷಣಂ= ಲಕ್ಷಣವು, ನ ಅರ್ಥಃ ಕಿಲ= ಅರ್ಥವಲ್ಲವಷ್ಟೇ, ಸ್ವಯಂ= ತಾನೇ, ಭೂತ್ವಾ= ಇದ್ದು, ಸ್ವಮಾತಾ= ತನ್ನ ತಾಯಿಯು, ವಂಧ್ಯಾ ಏವ= ವಂಧ್ಯೆಯೇ, ಇತಿ= ಎಂಬುದಾಗಿ, ಅತಿಖಲಃ= ಮಹಾದುಷ್ಟನು, ವದೇತ್= ಹೇಳಿಯಾನು.

**ಅನುವಾದ–** ಲಕ್ಷಣವಾಕ್ಯಕ್ಕೆ ಅಲಕ್ಷಣವೇ ಅರ್ಥ. ಲಕ್ಷಣವು ವಾಕ್ಯಾರ್ಥವಲ್ಲ. ತಾನೇ ಇದ್ದು ತನ್ನ ತಾಯಿಯನ್ನು ವಂಧ್ಯೆ ಎಂದು ಹೇಳುವವನು ಖಳನೇ ಸರಿ. ವ್ಯಾವರ್ತಕೋಕ್ತಿಯು ಇದೆ. ಆದರಿಂದ ವ್ಯಾವೃತ್ತಿಯು ಉಂಟಾಗುವುದಿಲ್ಲ. ಆದರೂ ಅದು ವ್ಯಾವರ್ತಕೋಕ್ತಿ ಎಂದು ಹೇಳುತ್ತಾರಷ್ಟೇ?

**ಭಾವವಿಲಾಸಿನೀ–** ಅಲಕ್ಷಣಂ ಲಕ್ಷಣವ್ಯತಿರಿಕ್ತಂ ಚನ್ದ್ರಸ್ವರೂಪಮಾತ್ರಮ್ । ಸ ಏವಾರ್ಥಃ ಅಭಿಧೇಯಃ । ಲಕ್ಷಣೋಕ್ತೇಃ ಪ್ರಕೃಷ್ಟಪ್ರಕಾಶ ಇತಿ ಲಕ್ಷಣೋಕ್ತೇಃ ಅರ್ಥಃ ಪ್ರತಿಪಾದ್ಯಃ । ಲಕ್ಷಣಂ ಪ್ರಕೃಷ್ಟಪ್ರಕಾಶತ್ವರೂಪಾಸಾಧಾರಣಧರ್ಮಃ ಅರ್ಥೋ ನ ಕಿಲೇತಿ ಸಂಬಂಧಃ । ಏವಂ ವದನ್ ಘಟಪದಸ್ಯ ಘಟೋ ನಾರ್ಥಃ । ಅಪಿತು ಅಘಟಃ ಪಟಾದಿರೇವಾರ್ಥ ಇತಿ ವದನ್ನಿವ ಅಯಂ ಕ ಇತಿ ಸಾಮಾನ್ಯಪ್ರಶ್ನಸ್ಯ ಸ್ವರೂಪಮಾತ್ರಪರತಾಂ ನಿಶ್ಚಿತ್ಯ ತದ್ಬಲಾಲ್ಲಕ್ಷಣೋಕ್ತಿಮನ್ಯಥೀಕುರ್ವನ್ ವಿಸ್ಪಷ್ಟಲಕ್ಷಣೋಕ್ತಿಬಲಾತ್ ಪ್ರಶ್ನಮೇವ ಲಕ್ಷಣವಿಷಯಂ ಕುತೋ ನ ಬ್ರೂತೇ? ಅತ ಏವ ಮಹಾಮೂರ್ಖ ಇತಿ ಭಾವಃ । ಯಾ ವ್ಯಾವರ್ತಕೋಕ್ತಿಃ ಲಕ್ಷಣೋಕ್ತಿಃ । ವ್ಯಾವೃತ್ತ್ಯೈ ಸಜಾತೀಯವಿಜಾತೀಯವ್ಯಾವೃತ್ತ್ಯೈ ನ ಭವತಿ ಕಿಲ । ಸಾ ವ್ಯಾವರ್ತಕವಾಗ್ ಭವತಿ ಕಿಲ ವ್ಯಾವರ್ತಕವಾಗ್ ವ್ಯಾವೃತ್ತಿರೂಪಸ್ವಫಲಂ ನೋತ್ಪಾದಯತಿ ಚೇತ್ ಮಾತಾ ಭವತಿ ಸುತಂ ನ ಸೂತ ಇತಿವದ್ ವ್ಯಾಹತಮಿತಿ ಭಾವಃ ॥ ೯೧ ॥

**ವಿವರಣೆ–** 'ಪ್ರಕೃಷ್ಟಪ್ರಕಾಶಃ ಚಂದ್ರಃ' ಎಂಬುದು ಲಕ್ಷಣವಾಕ್ಯ. ಅದ್ವೈತಿಗಳಂತೆ ಈ ಲಕ್ಷಣವಾಕ್ಯದ ಅರ್ಥವೇನೆಂದರೆ ಚಂದ್ರಸ್ವರೂಪ ಮಾತ್ರ ಹೊರತಾಗಿ, ಪ್ರಕೃಷ್ಟಪ್ರಕಾಶಾದಿರೂಪವಾದ ಅಸಾಧಾರಣಧರ್ಮರೂಪವಾದ ಲಕ್ಷಣವು ವಾಕ್ಯಾರ್ಥವಲ್ಲ. ಹೀಗೆ ಹೇಳುವವನು ಘಟಪದಕ್ಕೆ ಘಟವು ಅರ್ಥವಲ್ಲ; ಆದರೆ ಘಟಭಿನ್ನವಾದ ಪಟಾದಿಗಳೇ ಅರ್ಥವೆಂದು ಹೇಳುವಂತೆ ಮಹಾಮೂರ್ಖನಾಗುತ್ತಾನೆ. ಇವರು ಯಾರು ಎಂಬ ಸಾಮಾನ್ಯಪ್ರಶ್ನವಾಕ್ಯಕ್ಕೆ ಸ್ವರೂಪಮಾತ್ರಪರತ್ವವನ್ನು ನಿಶ್ಚಯಿಸಿ ಅದರ ಬಲದಿಂದ ಲಕ್ಷಣೋಕ್ತಿಯನ್ನೇ ಅನ್ಯಥಾನಯನ ಮಾಡುವವನು ಸುಸ್ಪಷ್ಟವಾದ ಲಕ್ಷಣೋಕ್ತಿಯ ಬಲದಿಂದ ಪ್ರಶ್ನವಾಕ್ಯಕ್ಕೆ ಏಕೆ ಲಕ್ಷಣವಿಷಯತ್ವವನ್ನು ಅಂಗೀಕಾರ ಮಾಡಬಾರದು. ವ್ಯಾವರ್ತಕೋಕ್ತಿಯು ಯಾವಾಗಲೂ ಸಜಾತೀಯ-ವಿಜಾತೀಯ ವ್ಯಾವೃತ್ತಿಯ ಸಲುವಾಗಿ ಇರುತ್ತದೆ. 'ಪ್ರಕೃಷ್ಟಪ್ರಕಾಶಃ ಚಂದ್ರಃ' ಎಂಬುದು ವ್ಯಾವರ್ತಕೋಕ್ತಿಯು ಎಂದು ಅಂಗೀಕಾರ ಮಾಡುವುದು ಆದರೆ ಆ ವಾಕ್ಯಘಟಕವಾದ ಪದಗಳು ಯಾವ ವ್ಯಾವೃತ್ತಿಯನ್ನು ಹೇಳದೆ, ಕೇವಲ ಚಂದ್ರಸ್ವರೂಪವನ್ನು ಮಾತ್ರ

ಹೇಳುತ್ತವೆ ಎಂದು ಅಂಗೀಕಾರಮಾಡುವುದು ತಾಯಿಯೂ ಹೌದು. ಆದರೆ ಮಗನನ್ನು ಪಡೆಯುವುದಿಲ್ಲ ಎಂಬ ವಾಕ್ಯದಂತೆ ವ್ಯಾಹತವಾಗುತ್ತದೆ.

**ನಾಸಾಂ ಛಿತ್ವಾಪಿ ದುಷ್ಟಃ ಸ್ವಾಮನ್ಯಸ್ಯಾಶಕುನಂ ಚರೇತ್ ।**
**ಸತ್ಯಾದಿಪದಮುಖ್ಯಾರ್ಥಃ ಸತ್ಯಾದನ್ಯತ್ ಕಿಲಾನೃತಮ್ ॥ ೯೯೨ ॥**

**ಅರ್ಥ–** ದುಷ್ಟಃ= ದುಷ್ಟನಾದವನು, ಸ್ವಾಂ= ತನ್ನ, ನಾಸಾಂ= ಮೂಗನ್ನು, ಛಿತ್ವಾಪಿ= ಕೊಯ್ದುಕೊಂಡಾದರೂ, ಅನ್ಯಸ್ಯ= ಇನ್ನೊಬ್ಬನಿಗೆ, ಅಶಕುನಂ= ಅಪಶಕುನವನ್ನು, ಚರೇತ್= ಆಚರಿಸುತ್ತಾನೆ, ಸತ್ಯಾದಿಪದಮುಖ್ಯಾರ್ಥಃ= ಸತ್ಯಾದಿಪದಗಳ ಮುಖ್ಯವಾದ ಅರ್ಥವು, ಸತ್ಯಾದನ್ಯತ್= ಸತ್ಯದಿಂದ ಭಿನ್ನವಾದ, ಅನೃತಂ ಕಿಲ= ಅನೃತವಾದುದಷ್ಟೇ?

**ಅನುವಾದ– ತನ್ನ ಮೂಗನ್ನು ಕೊಯ್ದುಕೊಂಡಾದರೂ ದುಷ್ಟನಾದವನು ಇನ್ನೊಬ್ಬನಿಗೆ ಅಪಶಕುನವನ್ನು ಆಚರಿಸುತ್ತಾನೆ. ಸತ್ಯಾದಿಪದದ ಮುಖ್ಯಾರ್ಥವು ಸತ್ಯವಲ್ಲ. ಅನೃತವು ಸತ್ಯಾದಿಪದದ ಮುಖ್ಯಾರ್ಥ ಎಂದು ಹೇಳುವವರೂ ಸಹ ಹಾಗೆಯೇ.**

**ಭಾವವಿಲಾಸಿನೀ–** ಸ್ವಾಂ ನಾಸಾಮಿತಿ ಸಂಬಂಧಃ । ಸತ್ಯಾದ್ ಬ್ರಹ್ಮಣಃ ಅನ್ಯದ್ ಅನೃತಂ ಜಗತ್ ಕಿಲ । ಜಗತಃ ಸ್ವಾಭಿಮತಮಿಥ್ಯಾತ್ವಹಾನಿಂ ಸೋಢ್ವಾಪಿ ಬ್ರಹ್ಮಣಃ ಸತ್ಯಪದಮುಖ್ಯಾರ್ಥತಾಯಾ ನಿವಾರಣಾದಿತಿ ಭಾವಃ ॥ ೯೯೨ ॥

**ವಿವರಣೆ–** ಸತ್ಯಾದಿಪದಗಳಿಗೆ ಬ್ರಹ್ಮನಲ್ಲಿ ಲಕ್ಷಣಾವನ್ನು ಹೇಳುವವನು ಅನೃತವಾದ ಜಗತ್ತಿಗೆ ಸತ್ಯಪದವಾಚ್ಯತ್ವವನ್ನು ಹೇಳಬೇಕಾಗುತ್ತದೆ. ಆಗ ಜಗತ್ತಿನ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ. ಜಗತ್‌ಮಿಥ್ಯಾತ್ವಹಾನಿಯನ್ನು ಸಹಿಸಿಕೊಂಡಾದರೂ ಸತ್ಯಾದಿಪದಗಳಿಗೆ ಬ್ರಹ್ಮನಲ್ಲಿ ಲಕ್ಷಣಾವೃತ್ತಿಯನ್ನು ಹೇಳುವವನು ತನ್ನ ನಾಸಿಕವನ್ನೇ ಕತ್ತರಿಸಿಕೊಂಡು ಅಪಶಕುನವನ್ನು ಮಾಡುವ ದುಷ್ಟನಿಗೆ ಸಮಾನನಾಗುತ್ತಾನೆ.

**ಇಚ್ಛತೋ ವೃದ್ಧಿಮಲ್ಪಸ್ಯ ಮೂಲಂ ನಷ್ಟಂ ಭವೇದ್ ಧ್ರುವಮ್ ।**
**ಸತ್ತ್ವಾದಿಮುಂಡನೇ ಕಿಂ ನ ಲಕ್ಷ್ಯತ್ವಾದ್ಯೈಃ ಸಖಂಡತಾ ॥ ೯೯೩ ॥**

**ಅರ್ಥ–** ವೃದ್ಧಿಂ= ತನ್ನ ಬಳಿಯಿರುವ ಧನದ ಅಭಿವೃದ್ಧಿಯನ್ನು, ಇಚ್ಛತಃ= ಬಯಸುವ, ಅಲ್ಪಸ್ಯ= ಮಂದಭಾಗ್ಯನಿಗೆ, ಮೂಲಂ= ಮೂಲವೂ ಸಹ, ಧ್ರುವಮ್= ಖಂಡಿತವಾಗಿ, ನಷ್ಟಂ ಭವೇತ್= ನಷ್ಟವಾಗುತ್ತದೆ, ಸತ್ತ್ವಾದಿಮುಂಡನೇ= ಸತ್ತ್ವಾದಿಧರ್ಮಗಳನ್ನು ನಿಷೇಧ ಮಾಡಿದರೆ, ಲಕ್ಷ್ಯತ್ವಾದ್ಯೈಃ= ಲಕ್ಷ್ಯತ್ವ ಮೊದಲಾದ ಧರ್ಮಗಳಿಂದ, ಸಖಂಡತಾ= ಸಖಂಡತ್ವವು, ಕಿಂ ನ= ಉಂಟಾಗುವುದಿಲ್ಲವೇ?

**ಅನುವಾದ–** ಮೂಲವೃದ್ಧಿಯನ್ನು ಬಯಸುವ ಅಲ್ಪನಿಗೆ ನಿಶ್ಚಿತವಾಗಿ ಮೂಲವು ನಷ್ಟವಾಗುತ್ತದೆ. ಬ್ರಹ್ಮನಲ್ಲಿ ಸತ್ಯತ್ವಾದಿಮುಂಡನವನ್ನು ಮಾಡಿದರೆ ಲಕ್ಷತ್ವಾದಿಗಳಿಂದ ಸಖಂಡತ್ವವು ಉಂಟಾಗುವುದಿಲ್ಲವೇ?

**ಭಾವವಿಲಾಸಿನೀ–** ಅಲ್ಪಸ್ಯಾಭಾಗ್ಯಸ್ಯ ವೃದ್ಧಿಮಿಚ್ಛತಃ ಸತ್ತ್ವಾದಿಮುಣ್ಡನೇ ಸತ್ಯಾದಿಪದಾನಾಂ ಬ್ರಹ್ಮಣಿ ಲಕ್ಷಣಾಂಗೀಕಾರೇಣ ಸತ್ತ್ವಾದಿಧರ್ಮತ್ಯಾಗಾದಖಣ್ಡತ್ವಂ ಸಿಷಾಧಯಿಷತೋ ಮಾಯಾವಾದಿನಃ ಪ್ರಕ್ರಿಯಯೈವ ಲಕ್ಷ್ಯತ್ವಾಮುಖ್ಯಾರ್ಥಸಂಬಂಧಾದ್ಯೈಃ ಸಖಣ್ಡತಾ ನ ಕಿಮ್? ನ ಭವೇತ್ ಕಿಮ್? ಭವೇದೇವೇತ್ಯರ್ಥಃ ॥ ೯೯೩ ॥

**ವಿವರಣೆ–** 'ವೃದ್ಧಿಮಿಚ್ಛತೋ ಮೂಲಕ್ಷಯಾಪತ್ತಿಃ' ಎಂದು ಒಂದು ಗಾದೆಯಿದೆ. ಧನದ ವೃದ್ಧಿಯನ್ನು ಬಯಸಿ ಬಡ್ಡಿಗೆ ಕೊಟ್ಟರೆ ಮೂಲವೂ ಹೊರಟು ಹೋಗುತ್ತದೆ ಎಂದು ಅದರ ಅರ್ಥ. ಬ್ರಹ್ಮನಲ್ಲಿ ಲಕ್ಷಣಾವೃತ್ತಿಯನ್ನು ಅನುಸರಿಸಿ, ಸತ್ತ್ವಾದಿಧರ್ಮಗಳನ್ನು ತ್ಯಾಗಮಾಡಿ, ಅಖಂಡಾರ್ಥತ್ವವನ್ನು ಸಾಧಿಸಲು ಮಾಯಾವಾದಿಗಳು ಪ್ರವೃತ್ತರಾಗುತ್ತಾರೆ. ಆದರೆ ಲಕ್ಷಣಾವೃತ್ತಿಯನ್ನು ಒಪ್ಪಿದ ತಕ್ಷಣ ಲಕ್ಷ್ಯತ್ವ, ಅಮುಖ್ಯಾರ್ಥತ್ವ, ಮುಖ್ಯಾರ್ಥಸಂಬಂಧ ಮೊದಲಾದ ಧರ್ಮಗಳನ್ನು ಬ್ರಹ್ಮನಲ್ಲಿ ಒಪ್ಪಬೇಕಾಗಿ ಬರುವುದರಿಂದ ಬ್ರಹ್ಮನು ಸಖಂಡನೇ ಆಗುತ್ತಾನೆ. ಆದ್ದರಿಂದ ಅಖಂಡತ್ವವು ಹೊರಟು ಹೋಗುವುದರಿಂದ ಮೂಲಕ್ಷಯವೇ ಉಂಟಾಯಿತು.

ಶಾಂತಿಕರ್ಮಣಿ ವೇತಾಲೋತ್ಥಾನಂ ಸ್ಯಾದಬುಧಸ್ಯ ಹಿ ।
ಅಖಂಡತ್ವಾದ್ಯಭಾವೇ ತು ಸೈವಾಯಾದ್ಧಿ ಸಖಂಡತಾ ॥ ೯೯೪ ॥

**ಅರ್ಥ–** ಅಬುಧಸ್ಯ= ಅವಿವೇಕಿಯಾದವನಿಗೆ, ಶಾಂತಿಕರ್ಮಣಿ= ಶಾಂತಿಕರ್ಮದ ಮಧ್ಯದಲ್ಲಿ, ವೇತಾಲೋತ್ಥಾನಂ= ಬೇತಾಳದ ಉತ್ಥಾನವು, ಸ್ಯಾತ್ ಹಿ= ಆಗುವುದಷ್ಟೇ, ಅಖಂಡತ್ವಾದ್ಯಭಾವೇ ತು= ಅಖಂಡತ್ವಾದಿಗಳು ಇಲ್ಲವೆಂದು ಹೇಳಿದರೆ, ಸೈವ= ಅದೇ, ಸಖಂಡತಾ= ಸಖಂಡತ್ವವು, ಆಯಾದ್ಧಿ= ಪ್ರಾಪ್ತವಾಯಿತಷ್ಟೇ?

**ಅನುವಾದ–** ಅವಿವೇಕಿಯಾದ ನರನಿಗೆ ಶಾಂತಿಕರ್ಮದಲ್ಲಿ ಬೇತಾಳವು ಎದ್ದಂತಾಯಿತು. ಅಖಂಡತ್ವವು ಒಂದು ಧರ್ಮವಾದುದರಿಂದ ಅಖಂಡತ್ವವು ಬ್ರಹ್ಮನಲ್ಲಿಲ್ಲವೆಂದರೆ ಬ್ರಹ್ಮನಿಗೆ ಸಖಂಡತ್ವವೇ ಉಂಟಾಗುತ್ತದೆಯಷ್ಟೇ?

**ಭಾವವಿಲಾಸಿನೀ–** ಯಾ ನಿರಾಕರ್ತುಮಭೀಪ್ಸಿತಾ ಸೈವ ಸಖಣ್ಡತಾ । ಅಖಣ್ಡತ್ವಾದ್ಯಭಾವೇ ಅಖಣ್ಡತ್ವಸ್ಯಾಪಿ ಧರ್ಮತ್ವೇನ ಸಖಣ್ಡತ್ವಭೀತ್ಯಾ ತಸ್ಯಾಪ್ಯಭಾವಾಂಗೀಕಾರೇ 'ದ್ವೌ ನಞೌ ಪ್ರಕೃತಮರ್ಥಂ ಸಾತಿಶಯಂ ಗಮಯತಃ' ಇತಿ ನ್ಯಾಯೇನ ಪುನಃ ಸಖಣ್ಡತೈವಾಯಾದ್ಧಿ । ಅತಃ ಶಾನ್ತಿಕರ್ಮಣಿ ವೇತಾಲೋತ್ಥಾನಮಭೂದಿತಿ ಭಾವಃ ॥ ೯೯೪ ॥

**ವಿವರಣೆ—** ಧರ್ಮಗಳನ್ನು ಒಪ್ಪಿದರೆ ಬ್ರಹ್ಮನಿಗೆ ಸಖಂಡತ್ವ ಬರುತ್ತದೆಂದು ಆಲೋಚಿಸಿ ಬ್ರಹ್ಮನಿಗೆ ಅಖಂಡತ್ವವನ್ನು ಒಪ್ಪಿದರೆ, ಅಖಂಡತ್ವವೂ ಒಂದು ಧರ್ಮವಾದುದರಿಂದ ಬ್ರಹ್ಮನಿಗೆ ಸಖಂಡತ್ವವೇ ಬರುತ್ತದೆ. ಬ್ರಹ್ಮನಲ್ಲಿ ಅಖಂಡತ್ವವೂ ಇಲ್ಲ ಎಂದು ಹೇಳಿದರೆ ಎರಡು ನಿಷೇಧಗಳು ಪ್ರಕೃತವಾದ ಅರ್ಥವನ್ನು ದೃಢವಾಗಿ ಸಾಧಿಸುತ್ತವೆ ಎಂಬ ನ್ಯಾಯದಿಂದ ಅಖಂಡತ್ವ ಎಂಬಲ್ಲಿರುವ ಒಂದು ನಿಷೇಧ. ಇಲ್ಲ ಎಂಬಲ್ಲಿರುವ ಇನ್ನೊಂದು ನಿಷೇಧ ಎರಡೂ ಸೇರಿ ಸಖಂಡತ್ವವನ್ನೇ ಬ್ರಹ್ಮನಲ್ಲಿ ದೃಢಪಡಿಸುತ್ತವೆ. ಇದು ಶಾಂತಿಕರ್ಮದಲ್ಲಿ ಬೇತಾಳವಿದ್ದಂತೆ ಆಯಿತು.

**ಪರಾಯುಧೈಃ ಪರಂ ಛಿಂದ್ಯಾಚ್ಛಸ್ತ್ರಶಿಕ್ಷಾವಿಚಕ್ಷಣಃ ।**
**ಅವಾಚ್ಯಪದಲಕ್ಷ್ಯತ್ವೇ ಮುಖ್ಯಾರ್ಥಾವಾಚ್ಯತಾಕ್ಷತೇಃ ॥ ೯೯೫ ॥**

**ಅರ್ಥ—** ಅವಾಚ್ಯಪದಲಕ್ಷ್ಯತ್ವೇ= ಅವಾಚ್ಯಪದದಿಂದ ಬ್ರಹ್ಮನು ಲಕ್ಷ್ಯ ಎಂದು ಹೇಳಿದರೆ, ಮುಖ್ಯಾರ್ಥಾವಾಚ್ಯತಾಕ್ಷತೇಃ= ಮುಖ್ಯಾರ್ಥವಾದ ಅವಾಚ್ಯತ್ವವು ಹೊರಟು ಹೋಗುವುದರಿಂದ, ಶಸ್ತ್ರಶಿಕ್ಷಾವಿಚಕ್ಷಣಃ= ಶಸ್ತ್ರಚಿಕಿತ್ಸೆಯಲ್ಲಿ ವಿಚಕ್ಷಣನಾದವನು, ಪರಾಯುಧೈಃ= ಶತ್ರುಗಳ ಆಯುಧಗಳಿಂದಲೇ, ಪರಂ= ಶತ್ರುಗಳನ್ನು ಛಿಂದ್ಯಾತ್= ಭೇದಿಸಬೇಕು.

**ಅನುವಾದ—** ಶಸ್ತ್ರಶಿಕ್ಷೆಯಲ್ಲಿ ವಿಚಕ್ಷಣನಾದವನು ಪರಾಯುಧದಿಂದಲೇ ಪರರನ್ನು ಛೇದಿಸುತ್ತಾನೆ. ಬ್ರಹ್ಮನು ಅವಾಚ್ಯಪದಲಕ್ಷ್ಯನೆಂದು ಹೇಳಿದರೆ ಅವಾಚ್ಯಪದದ ಮುಖ್ಯಾರ್ಥವಾದ ಅವಾಚ್ಯತ್ವವೂ ಸಹ ಬ್ರಹ್ಮನಿಂದ ಹೊರಟುಹೋಗುತ್ತದೆ.

**ಭಾವವಿಲಾಸಿನೀ—** ಅವಾಚ್ಯಪದಲಕ್ಷ್ಯತ್ವೇ ಅವಾಚ್ಯಮಿತಿ ಪದೇನ ಲಕ್ಷ್ಯತ್ವೇ ಬ್ರಹ್ಮಣೋ ಲಕ್ಷ್ಯತ್ವಾಂಗೀಕಾರೇ ಲಕ್ಷಣಾಯಾ ಮುಖ್ಯಾರ್ಥಬಾಧಮೂಲತ್ವೇನ ಮುಖ್ಯಭೂತಾಯಾಃ ಪದಾಭಿಲಷಿತಾ ವಾಚ್ಯತಾಯಾ ಏವ ಕ್ಷತೇಃ। ಶಸ್ತ್ರಶಿಕ್ಷಾವಿಚಕ್ಷಣಃ ಪರಾಯುಧೈಃ ಪರಂ ಛಿನ್ದ್ಯಾದಿತಿ ಪೂರ್ವೇಣಾನ್ವಯಃ ॥ ೯೯೫ ॥

**ವಿವರಣೆ—** ಗಂಗಾಪದಲಕ್ಷ್ಯದಲ್ಲಿ ಗಂಗಾತ್ವವು ಇಲ್ಲದಿರುವಂತೆ ಅವಾಚ್ಯಪದಲಕ್ಷ್ಯನಾದ ಬ್ರಹ್ಮನಲ್ಲಿ ಅವಾಚ್ಯತ್ವವು ಇಲ್ಲವೆಂದು ಸಿದ್ಧವಾಗುತ್ತದೆ. ಅವಾಚ್ಯಪದವಾಚ್ಯತ್ವವನ್ನು ಒಪ್ಪಿದರೆ ಬ್ರಹ್ಮನಿಗೆ ವಾಚ್ಯತ್ವವೇ ಬರುವುದರಿಂದ ಅದನ್ನು ಒಪ್ಪದಿರುವ ಮಾಯಾವಾದಿಗಳು ಅವಾಚ್ಯಪದಲಕ್ಷ್ಯತ್ವವನ್ನು ಹೇಳುತ್ತಾರೆ. ಆಗ ಬ್ರಹ್ಮನಲ್ಲಿ ಅವಾಚ್ಯತ್ವವು ಇಲ್ಲದಿರುವುದರಿಂದ ಪುನಃ ವಾಚ್ಯತ್ವವೇ ಪ್ರಾಪ್ತವಾಗುತ್ತದೆ ಎಂಬುದನ್ನು ಗಮನಿಸುವುದಿಲ್ಲ.

**ವಿರುದ್ಧಯೋಃ ಸತೋರ್ಯೋಗಃ ಸ್ವಮೂಲಾಘಾತಿನೋರ್ಭವೇತ್ ।**
**॥ ೯೯೬ ॥**

**ಅರ್ಥ–** ಸ್ವಮೂಲಾಘಾತಿನೋಃ= ತಮ್ಮ ಮೂಲವನ್ನು ನಾಶಮಾಡದಿರುವಂತಹ, ವಿರುದ್ಧಯೋಃ= ವಿರುದ್ಧವಾದ, ಸತೋಃ= ಸದ್ಧರ್ಮಗಳಿಗೆ, ಯೋಗಃ= ಸಮಾಗಮವು, ಭವೇತ್= ಉಂಟಾಗುವುದು.

**ಅನುವಾದ–** ವಿರುದ್ಧವಾದ ಸತ್ಯವಾದ ಧರ್ಮಗಳ ಯೋಗವು ತಮ್ಮ ಮೂಲವನ್ನೇ ನಾಶಮಾಡುವುದಿಲ್ಲವಷ್ಟೇ.

**ಭಾವವಿಲಾಸಿನೀ–** ಅಧುನಾ ಗುಣಗುಣಿಭಾವಘಟಕತ್ವೇನ ಸಂಗತತ್ವಾತ್ ಸ್ವಸ್ಯಾಪಿ ಸಾಮರ್ಥ್ಯ-ರೂಪತಯಾ ಗುಣಾಂತಃಪಾತಿತ್ವಾಚ್ಚ ವಿಶೇಷಂ ಸಮರ್ಥಯತೇ– ವಿರುದ್ಧಯೋರಿತಿ ॥ ವಿರುದ್ಧಯೋಃ ಸತೋರ್ವಿರೋಧಿಭೂತಯೋರಿತ್ಯರ್ಥಃ । ಸ್ವಮೂಲಾಘಾತಿನೋಃ ಘಟಕೀ-ಭೂತಮೂಲಶಕ್ತೇರವಿಘಾತಕಯೋರಣುತ್ವಮಹತ್ತ್ವಾದಿವಿರುದ್ಧಧರ್ಮಯೋಃ ಅಣೋರೇವ ವಾಮನಸ್ಯ ಕಾರ್ಯವಿಶೇಷಾಯ ಮಹತ್ತ್ವೇ ಮಹತ ಏವ ನಾರಾಯಣಸ್ಯ ಕೃಷ್ಣಾದಿರೂಪೇಣ ಶಿಶುಭಾವೇ ಚ ಸಾಮರ್ಥ್ಯವಿಶೇಷಸ್ಯೈವ ದರ್ಶನೇನ ಸ್ವಮೂಲಾಘಾತಿನೋರನಯೋರೇವ ಗೋಬ್ರಹ್ಮಣಿ ಭವೇತ್ । ನತು ಘಟಕಶಕ್ತೇರೇವ ಘಾತಕಯೋರ್ಬದ್ಧತ್ವಮುಕ್ತತ್ವಾದಿ-ರೂಪಯೋರಿತಿ ಭಾವಃ ॥ ೯೯೬॥

**ವಿವರಣೆ–** ಈಗ ಗುಣಗುಣಿಭಾವವನ್ನು ನಿರ್ವಾಹ ಮಾಡುವುದರಿಂದ, ಈ ಪ್ರಕರಣಕ್ಕೆ ಸಂಗತವಾದುದರಿಂದ ಮತ್ತು ಸಾಮರ್ಥ್ಯರೂಪವಾದ ತಾನೂ ಸಹ ಒಂದು ಗುಣವಾದ್ದರಿಂದ ಅಂತಹ ವಿಶೇಷವನ್ನು ಸಮರ್ಥನೆ ಮಾಡುತ್ತಾರೆ. ಅಣುತ್ವಮಹತ್ವಾದಿಗಳು ವಿರುದ್ಧಧರ್ಮಗಳು. ಬ್ರಹ್ಮನಲ್ಲಿ ಅವೆರಡೂ ಉಪಪನ್ನ-ವಾಗುತ್ತವೆ. ಏಕೆಂದರೆ ಬ್ರಹ್ಮನಲ್ಲಿ ಅವರೆಡನ್ನೂ ನಿರ್ವಾಹ ಮಾಡುವ ಶಕ್ತಿಯಿದೆ. ಆದ್ದರಿಂದ ಅಣುತ್ವ-ಮಹತ್ವಾದಿ ವಿರುದ್ಧಧರ್ಮಗಳು ತಮಗೆ ಮೂಲವಾದ ಬ್ರಹ್ಮನಲ್ಲಿರುವ ಆ ಶಕ್ತಿಯನ್ನೇ ವಿಘಾತ ಮಾಡುವುದಿಲ್ಲ. ಅಣುವಾದ ವಾಮನನು ಕಾರ್ಯವಿಶೇಷದ ಸಲುವಾಗಿ ಮಹತ್ವವನ್ನು ತೆಗೆದುಕೊಂಡಿರುವುದರಿಂದ ಮಹತ್ತರನಾದ ನಾರಾಯಣನು ಕೃಷ್ಣನಾಗಿ ಶಿಶುಭಾವವನ್ನು ಹೊಂದಿದ ಕಾರಣ ಅವನಲ್ಲಿ ಸಾಮರ್ಥ್ಯವಿಶೇಷವೇ ಲಭ್ಯವಾಗುತ್ತದೆ. ಇಂತಹ ಧರ್ಮಗಳು ಬ್ರಹ್ಮನಲ್ಲಿ ಸಾಮರ್ಥ್ಯವಿಶೇಷವನ್ನು ಸಾಧಿಸಿ ಕೊಡುತ್ತವೆ. ಆದರೆ ಎಲ್ಲಾ ವಿರುದ್ಧಧರ್ಮಗಳೂ ಹಾಗಲ್ಲ. ಬದ್ಧತ್ವ ಮುಕ್ತತ್ವರೂಪವಾದ ವಿರುದ್ಧಧರ್ಮಗಳು ಬ್ರಹ್ಮನ ಸ್ವರೂಪವನ್ನೇ ನಾಶಮಾಡುವುದರಿಂದ ಬ್ರಹ್ಮನಲ್ಲಿ ಅವುಗಳನ್ನು ಒಪ್ಪುವುದಿಲ್ಲ.

ಮುನೇಃ ಶಕ್ತ್ಯಾ ಕಿಂ ನ ವನೇ ವೈರಿಣಃ ಸಹ ಶೇರತೇ ।
ತಚ್ಛಕ್ತ್ಯಾಪಿ ನ ವೈರಾಗ್ಯಂ ಕಾಮೇನ ಸಹ ತದ್ಧೃದಿ ।
ಬಹಿರ್ವಾ ತಪಸೋ ವಿಘ್ನಕಾರಿಣಃ ಸಂತಿ ರಾಕ್ಷಸಾಃ ॥ ೯೯೭ ॥

**ಅರ್ಥ–** ವನೇ= ತಪೋವನದಲ್ಲಿ, ಮುನೇಃ ಶಕ್ತ್ಯಾ= ಮುನಿಗಳ ಶಕ್ತಿಯಿಂದ, ವೈರಿಣಃ= ಸಹಜ ವೈರಿಗಳಾದ ಪ್ರಾಣಿಗಳು, ಸಹ= ಜೊತೆಯಲ್ಲಿ, ಕಿಂ ನ ಶೇರತೇ= ವಾಸ ಮಾಡುವುದಿಲ್ಲವೇ. ತಚ್ಛಕ್ತ್ಯಾಪಿ= ಆ ಮುನಿಯ ಶಕ್ತಿಯಿಂದಲೂ ಕೂಡ, ತದ್ಧೃದಿ= ಆ ಮುನಿಯ ಹೃದಯದಲ್ಲಿ, ವೈರಾಗ್ಯಂ= ವೈರಾಗ್ಯವು, ಕಾಮೇನ ಸಹ= ರಾಗದ ಜೊತೆಯಲ್ಲಿ, ನ= ಇರುವುದಿಲ್ಲ, ಬಹಿರ್ವಾ= ಆಶ್ರಮದ ಹೊರಗಡೆಯಾದರೂ, ತಪಸಃ= ತಪಸ್ಸಿಗೆ, ವಿಘ್ನಕಾರಿಣಃ= ವಿಘ್ನವನ್ನು ಮಾಡುವ, ರಾಕ್ಷಸಾಃ= ರಾಕ್ಷಸರು, ಸಂತಿ= ಇರುತ್ತಾರೆ.

**ಅನುವಾದ–** ಋಷಿಗಳ ತಪಶ್ಶಕ್ತಿಯಿಂದ ತಪೋವನದಲ್ಲಿ ಸಹಜವಾದ ವೈರಿಗಳಾದ ಪ್ರಾಣಿಗಳು ಜೊತೆಯಲ್ಲಿ ವಾಸಮಾಡುವುದಿಲ್ಲವೇ? ಆದರೆ ಋಷಿಗಳ ತಪಶ್ಶಕ್ತಿಯಿಂದಲೂ ಕಾಮ ಮತ್ತು ರಾಗಗಳು ಋಷಿಗಳ ಹೃದಯದಲ್ಲಿ ಜೊತೆಯಲ್ಲಿ ವಾಸಮಾಡುವುದಿಲ್ಲ. ಅಥವಾ ತಪೋವಿಘ್ನಕಾರಿಗಳಾದ ರಾಕ್ಷಸರು ಆಶ್ರಮದ ಹೊರಗೆ ಇಲ್ಲವೇನು?

**ಭಾವವಿಲಾಸಿನೀ–** ಉಭಯತ್ರಾಪಿ ದೃಷ್ಟಾಂತಮಾಹ– **ಮುನೇಃ ಶಕ್ತ್ಯೇತ್ಯಾದಿನಾ** ॥ ವೈರಿಣಃ ಗಜಸಿಂಹಗೋಶಾರ್ದೂಲಾದಯಃ । ತಚ್ಛಕ್ತ್ಯಾ ಮುನಿಶಕ್ತ್ಯಾ । ತದ್ಧೃದಿ ಮುನಿಹೃದಿ । ತಪಸಃ ವಿಘ್ನಕಾರಿಣೋ ರಾಕ್ಷಸಾಃ ಮುನಿನಾ ಸ್ಹ ವನೇ ಸನ್ತಿ ಕಿಮಿತಿ ಸಂಬಂಧಃ । ಯಥಾ ಮುನಿಃ ಸ್ವತಪಃಶಕ್ತ್ಯಾವಿಘಾತಿನೋ ಗಜಸಿಂಹಾದೇಃ ಸ್ವಾಶ್ರಮೇ ಸಹವಾಸಂ ಘಟಯತಿ, ನತು ಕಾಮಂ ವೈರಾಗ್ಯೇಣ ಸಹ ರಾಕ್ಷಸಾನ್ ಸ್ವೇನ ಸಹ । ಪ್ರತ್ಯುತ ಕಾಮಂ ಸ್ವಹೃದಯಾದ್ ರಾಕ್ಷಸಾನ್ ಸ್ವತಪೋವನಾದ್ ಬಹಿಷ್ಕರೋತಿ । ಏವಂ ಹರಿರಿತಿ ಭಾವಃ ॥ ೯೯೭ ॥

**ವಿವರಣೆ–** ಹಿಂದೆ ಹೇಳಿದ ಎರಡು ಸ್ಥಳಗಳಿಗೂ ಇಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ. ಗೋವು-ಶಾರ್ದೂಲ ಮೊದಲಾದ ಸಹಜವಾದ ವೈರಿಪ್ರಾಣಿಗಳು ಋಷಿಗಳ ಆಶ್ರಮದಲ್ಲಿ ವೈರವನ್ನು ತೊರೆದು ಜೊತೆಯಲ್ಲಿ ಇರುತ್ತವೆ. ಇದಕ್ಕೆ ಋಷಿಗಳ ಶಕ್ತಿವಿಶೇಷವೂ ಕಾರಣ. ಶಕ್ತಿವಿಶೇಷವಿದೆಯೆಂಬ ಮಾತ್ರದಿಂದ ಎಲ್ಲಾ ವಿರೋಧಿಧರ್ಮಗಳೂ ಜೊತೆಯಲ್ಲಿರುತ್ತವೆಯೆಂದು ಹೇಳಬಾರದು. ಏಕೆಂದರೆ ರಾಗ ಮತ್ತು ವಿರಾಗಗಳು ವಿರುದ್ಧವಾದವುಗಳು. ಮುನಿಯ ಶಕ್ತಿಯಿಂದ ಮುನಿಯ ಹೃದಯದಲ್ಲಿ ರಾಗ-ವಿರಾಗಗಳು ಜೊತೆಯಲ್ಲಿಯೇ ಇವೆ ಎಂದು ಹೇಳುವಂತಿಲ್ಲ. ಏಕೆಂದರೆ ವಿರಾಗದ ಜೊತೆಯಲ್ಲಿ ರಾಗವಿದ್ದರೆ ಅದು ಅವನ ಮುನಿತ್ವವನ್ನೇ ಹಾಳುಮಾಡುತ್ತದೆ. ಹಾಗೆಯೇ ಮುನಿಯು ತಪೋವಿಘ್ನಕಾರರಾದ ರಾಕ್ಷಸರನ್ನು ತನ್ನ ಆಶ್ರಮದಿಂದ ಹೊರಗೆ ಅಟ್ಟುತ್ತಾನೆ. ಅವರ ಜೊತೆಯಲ್ಲಿ ತಪೋವನದಲ್ಲಿ ವಾಸಮಾಡಿದರೆ ತನ್ನ ತಪಸ್ಸೇ ಹಾಳಾಗುವುದರಿಂದ ಮುನಿತ್ವವೇ ಹೋಗುತ್ತದೆ. ಹಾಗೆ ನಾರಾಯಣನೂ ಸಹ ತನ್ನ ಶಕ್ತಿವಿಶೇಷದಿಂದ ತನ್ನ ಐಶ್ವರ್ಯಕ್ಕೆ ವಿರೋಧಿಯಲ್ಲದ ಎಲ್ಲಾ ವಿರುದ್ಧಧರ್ಮಗಳನ್ನೂ ತನ್ನಲ್ಲಿ ಸಂಘಟಿಸುತ್ತಾನೆ. ತನ್ನ ಐಶ್ವರ್ಯವಿರೋಧಿಯಾದ ಯಾವ ಧರ್ಮವನ್ನೂ ತನ್ನಲ್ಲಿ ಸಂಘಟಿಸುವುದಿಲ್ಲ ಎಂದು

ಅಭಿಪ್ರಾಯ. ಹಾಗೆಯೇ ಪರಮಾತ್ಮನು ತನ್ನ ಸರ್ವಜ್ಞತ್ವಾದಿಧರ್ಮಗಳಿಗೆ ವಿರುದ್ಧವಾದ ಅಲ್ಪಜ್ಞತ್ವಾದಿ ಧರ್ಮಗಳನ್ನು ತನ್ನಿಂದ ಹೊರಗೆ ಜೀವನಲ್ಲಿಯೇ ಇಡುತ್ತಾನೆ. ಪರಮಾತ್ಮನಲ್ಲಿ ಅವನ ಶಕ್ತಿಯಿಂದಲೂ, ಜ್ಞಾನ ಮತ್ತು ಅಜ್ಞಾನರೂಪವಾದ ವಿರೋಧಿ ಧರ್ಮಗಳು ಸಂಘಟಿಸುವುದಿಲ್ಲ ಎಂದು ಅಭಿಪ್ರಾಯ.

**ಅಣುತ್ವಂ ಚ ಮಹತ್ತ್ವಂ ಚ ತಥೈವ ಘಟಯೇಚ್ಛ್ರುತಮ್ ।**
**ಸ್ವೈಶ್ವರ್ಯಸ್ಯ ವಿರೋಧೀನಿ ಘಟಯೇನ್ನಾತ್ಮನಿ ಪ್ರಭುಃ ॥ ೯೯೮ ॥**

**ಅರ್ಥ–** ಶ್ರುತಮ್= ವೇದದಲ್ಲಿ ಹೇಳಲ್ಪಟ್ಟ, ಅಣುತ್ವಂ ಚ ಮಹತ್ತ್ವಂ ಚ= ಅಣುತ್ವವನ್ನು ಮತ್ತು ಮಹತ್ವವನ್ನು, ತಥೈವ= ತನ್ನ ಶಕ್ತಿವಿಶೇಷದಿಂದ ಹಾಗೆಯೇ, ಘಟಯೇತ್= ಘಟನೆ ಮಾಡುತ್ತಾನೆ, ಪ್ರಭುಃ= ಸಮರ್ಥನಾದ ಅವನು, ಆತ್ಮನಿ= ತನ್ನಲ್ಲಿ, ಸ್ವೈಶ್ವರ್ಯಸ್ಯ= ತನ್ನ ಐಶ್ವರ್ಯಕ್ಕೆ, ವಿರೋಧೀನಿ= ವಿರೋಧಿಗಳಾದ ಧರ್ಮಗಳನ್ನು, ನ ಘಟಯೇತ್= ಘಟನೆ ಮಾಡುವುದಿಲ್ಲ.

**ಅನುವಾದ–** ಅದರಂತೆ ಶ್ರುತಿಸಿದ್ಧವಾದ ಅಣುತ್ವ-ಮಹತ್ವಗಳನ್ನು ತನ್ನಲ್ಲಿ ಘಟನೆ ಮಾಡುತ್ತಾನೆ. ತನ್ನ ಐಶ್ವರ್ಯವಿರೋಧಿಯಾದ ಯಾವ ಧರ್ಮವನ್ನೂ ಪ್ರಭುವಾದ ಅವನು ತನ್ನಲ್ಲಿ ಘಟನೆ ಮಾಡಿಕೊಳ್ಳುವುದಿಲ್ಲ.

**ಭಾವವಿಲಾಸಿನೀ–** ಏತದೇವ ವಿವೇಚಯತಿ– **ಅಣುತ್ವಂ ಚೇತಿ** ॥ ತಥೈವ ಗಜಸಿಂಹಾದಿವತ್ । ಐಶ್ವರ್ಯಸ್ಯ ವಿರೋಧೀನಿ ದುಃಖನೀಚೈಕ್ಯಾದೀನಿ । ತಥೈವ ಕಾಮವದ್ ರಾಕ್ಷಸವಚ್ಚ ॥ ೯೯೮ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಅರ್ಥವನ್ನೇ ಸ್ಪಷ್ಟಪಡಿಸುತ್ತಾರೆ. ಅಣುತ್ವ-ಮಹತ್ವಗಳು ಹರಿಯ ಐಶ್ವರ್ಯಕ್ಕೆ ಅವಿರುದ್ಧವಾದವು. ಆದ್ದರಿಂದ ಅದನ್ನು ತನ್ನಲ್ಲಿ ಘಟನೆ ಮಾಡಿಕೊಳ್ಳುತ್ತಾನೆ. ದುಃಖ ಮತ್ತು ಜೀವೈಕ್ಯ ಮೊದಲಾದವುಗಳು ತನ್ನ ಐಶ್ವರ್ಯಕ್ಕೆ ವಿರೋಧಿಯಾದವು. ಅದನ್ನು ಎಂದೂ ತನ್ನಲ್ಲಿ ಘಟನೆ ಮಾಡಿಕೊಳ್ಳುವುದಿಲ್ಲ. ಅಣುತ್ವ-ಮಹತ್ವಗಳು ಗೋ-ಶಾರ್ದೂಲಗಳಿದ್ದಂತೆ, ದುಃಖ ಮತ್ತು ನೀಚೈಕ್ಯಾದಿಗಳು ಕಾಮದಂತೆ ಮತ್ತು ಆಶ್ರಮದ ಹೊರಗಿರುವ ರಾಕ್ಷಸನಂತೆ.

**ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ।**
**ಯದೈಶ್ವರ್ಯಮತಃ ಶಕ್ತ್ಯಾ ಘಟಯೇದಿದಮಾತ್ಮನಿ ॥ ೯೯೯ ॥**

**ಅರ್ಥ–** ಯದಿ= ಯಾವ ಕಾರಣದಿಂದ, ಅಣಿಮಾ= ಅಣಿಮೆಯು, ಮಹಿಮಾ= ಮಹಿಮೆಯು, ಗರಿಮಾ ಚೈವ= ಮತ್ತು ಗುರುತ್ವವು, ತಥಾ ಲಘಿಮಾ= ಹಾಗೆಯೇ ಲಘುತ್ವವು, ಐಶ್ವರ್ಯಂ= ಐಶ್ವರ್ಯರೂಪವಾದುದೋ, ಅತಃ= ಆ ಕಾರಣದಿಂದ, ಶಕ್ತ್ಯಾ=

ತನ್ನ ಸಾಮರ್ಥ್ಯದಿಂದ, ಇದಂ= ಈ ವಿರುದ್ಧ ಐಶ್ವರ್ಯ ಧರ್ಮವನ್ನು, ಆತ್ಮನಿ= ತನ್ನಲ್ಲಿ, ಘಟಯೇತ್= ಘಟನೆ ಮಾಡುತ್ತಾನೆ.

**ಅನುವಾದ– ಅಣಿಮಾ, ಮಹಿಮಾ, ಗರಿಮಾ, ಲಘಿಮಾ ಇವೆಲ್ಲವೂ ಐಶ್ವರ್ಯಗಳಾದುದರಿಂದ ತನ್ನ ಶಕ್ತಿಯಿಂದ ತನ್ನಲ್ಲಿ ಹರಿಯು ಆ ಎಲ್ಲಾ ಧರ್ಮಗಳನ್ನೂ ಘಟನೆ ಮಾಡಿಕೊಳ್ಳುತ್ತಾನೆ.**

**ಭಾವವಿಲಾಸಿನೀ– ನನ್ವಣಿಮ್ನಃ ಕಥಮೈಶ್ವರ್ಯತ್ವಮಿತ್ಯತ ಆಹ–ಅಣಿಮೇತಿ । ಯದ್ ಯಸ್ಮಾತ್ । ಆತಃ ಐಶ್ವರ್ಯರೂಪತ್ವಾತ್ । ಉಪಪಾದನಂ ತು ಪೂರ್ವಮೇವ ಕೃತಮ್ ॥ ೯೯೯ ॥**

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಅಣುತ್ವವು ಹೇಗೆ ಐಶ್ವರ್ಯ-ರೂಪವಾಗುತ್ತದೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಯೋಗಸಿದ್ಧಿಗಳಾದ ಅಣಿಮಾ-ಮಹಿಮಾ ಮೊದಲಾದವುಗಳು ಅಷ್ಟೈಶ್ವರ್ಯಗಳೆಂದು ಪ್ರಸಿದ್ಧವಾಗಿವೆ. ಅಣಿಮಾ ಎಂದರೂ ಅಣುತ್ವವೆಂದರೂ ಒಂದೇ. ಆದ್ದರಿಂದ ಅಣುತ್ವವು ಐಶ್ವರ್ಯರೂಪವಾಗಿದೆಯೆಂದು ತಿಳಿಯಬೇಕು.

**ಅನಂತಸುಗುಣಸ್ತೋಮಮನಂತಾಕಾರಸೌಭಗಮ್ ।**
**ತಥಾಪ್ಯನನ್ಯತಾಂ ತೇಷು ಸರ್ವೇಷ್ವೈಶ್ವರ್ಯಸಿದ್ಧಿತಃ ॥**
**ನಿಜೈಶ್ವರ್ಯಾಭಿವೃದ್ಧ್ಯರ್ಥಂ ಘಟಯೇಚ್ಛಕ್ತಿತಃ ಪ್ರಭುಃ ॥ ೧೦೦೦ ॥**

**ಅರ್ಥ–** ಪ್ರಭುಃ= ಸಮರ್ಥನಾದ ಪರಮಾತ್ಮನು, ಅನಂತಸುಗುಣಸ್ತೋಮಂ= ಅನಂತ ಸುಗುಣ ಸಮುದಾಯವನ್ನು, ಅನಂತಾಕಾರಸೌಭಗಮ್= ಅನಂತ ರೂಪಗಳನ್ನು ಮತ್ತು ಅನಂತ ಸೌಂದರ್ಯಗಳನ್ನು, ತಥಾಪಿ= ಆದರೂ, ತೇಷು ಸರ್ವೇಷು= ಆ ಎಲ್ಲಾ ಗುಣಗಳಲ್ಲಿ, ಆ ಆಕಾರಗಳಲ್ಲಿ ಮತ್ತು ಆ ಸೌಂದರ್ಯಗಳಲ್ಲಿ, ಅನನ್ಯತಾಂ= ಅಭೇದವನ್ನು, ಐಶ್ವರ್ಯ ಸಿದ್ಧಿತಃ= ತನ್ನ ಐಶ್ವರ್ಯದ ಸಿದ್ಧಿಯ ಸಲುವಾಗಿ, ನಿಜೈಶ್ವರ್ಯಾಭಿವೃದ್ಧ್ಯರ್ಥಂ= ತನ್ನ ಭಕ್ತರ ಐಶ್ವರ್ಯದ ಅಭಿವೃದ್ಧಿಗಾಗಿ, ಶಕ್ತಿತಃ= ತನ್ನ ಸಾಮರ್ಥ್ಯವಿಶೇಷದಿಂದ, ಘಟಯೇತ್= ಘಟನೆ ಮಾಡುತ್ತಾನೆ.

**ಅನುವಾದ– ಪ್ರಭುವಾದ ಅವನು ತನ್ನ ಶಕ್ತಿಯಿಂದ ತನ್ನಲ್ಲಿ ಅನಂತಗುಣ-ಸಮುದಾಯವನ್ನೂ, ಅನಂತಾಕಾರವನ್ನೂ ಸೌಂದರ್ಯವನ್ನೂ ಆ ಗುಣಗಳಿಗೂ, ಆಕಾರಗಳಿಗೂ ತನ್ನಿಂದ ಅಭೇದವನ್ನೂ, ತನ್ನ ಐಶ್ವರ್ಯದ ಅಭಿವೃದ್ಧಿಗಾಗಿ ಸಂಘಟಿಸುತ್ತಾನೆ.**

**ಭಾವವಿಲಾಸಿನೀ– ಗುಣಾಂತರೇಷ್ವಪಿ ವಿಶೇಷಕೃತೋಪಕಾರಂ ದರ್ಶಯತಿ– ಅನಂತಸುಗುಣ-ಸ್ತೋಮಮಿತಿ ॥ ತಥಾಪಿ ಅನಂತತ್ವೇऽಪಿ ತೇಷು ಗುಣೇಷು ಐಶ್ವರ್ಯಸಿದ್ಧಿತಃ ಗುಣಾನಾಮ-**

ಹೀಶ್ವರತ್ವಪ್ರಾಪ್ತೇರಿತ್ಯರ್ಥಃ। ನಿಜೈಶ್ವರ್ಯಾಭಿವೃದ್ಧ್ಯರ್ಥಂ ಸರ್ವೇಶ್ವರಾತ್ಮಕಾನಂತಗುಣವತ್ತ್ವಾಖ್ಯ- ನಿಜೈಶ್ವರ್ಯಸಿದ್ಧ್ಯರ್ಥಂ ಶಕ್ತಿತಃ ಸಾಮರ್ಥ್ಯಾತ್ । ಶಕ್ತಿವಿಶೇಷಸ್ಯೈವ ವಿಶೇಷತ್ವ- ದ್ಯೋತನಾರ್ಥಮಿದಮುಕ್ತಮ್ ॥ ೧೦೦೦ ॥

**ವಿವರಣೆ–** ಈ ಶ್ಲೋಕದಲ್ಲಿ ವಿಶೇಷಮಹಿಮೆಯಿಂದ ಗುಣಾಂತರಗಳಲ್ಲಿಯೂ ಉಂಟಾಗುವ ಉಪಕಾರಗಳನ್ನು ಪ್ರದರ್ಶಿಸುತ್ತಾರೆ. ಅನಂತಗುಣಗಳಿವೆ. ತನ್ನ ಐಶ್ವರ್ಯಸಿದ್ಧಿಯಿಂದ ಆ ಗುಣಗಳೆಲ್ಲವೂ ಪರಮೇಶ್ವರರೂಪವೇ ಆಗಿದೆ. ತನ್ನ ಐಶ್ವರ್ಯಾಭಿವೃದ್ಧಿಗಾಗಿ ಸರ್ವೇಶ್ವರಾತ್ಮಕವಾದ ಅನಂತಗುಣಗಳನ್ನು ಹೊಂದಿರುವ ತನ್ನ ಐಶ್ವರ್ಯದ ಸಿದ್ಧಿಗಾಗಿ ತನ್ನ ಶಕ್ತಿವಿಶೇಷವನ್ನು ಉಪಯೋಗಿಸುತ್ತಾನೆ ಎಂದು ಅಭಿಪ್ರಾಯ. ವಿಶೇಷ ಎಂದರೆ ವಸ್ತುವಿನ ಶಕ್ತಿವಿಶೇಷವೇ ಎಂದು ತಿಳಿಸಲು ಶಕ್ತಿತಃ ಎಂಬ ಪದವನ್ನು ಬಳಸಿದ್ದಾರೆ.

ಬಲಜ್ಞಾನಕ್ರಿಯಾದೀನಾಂ ಸಿಸೃಕ್ಷಾಸಂಜಿಹೀರ್ಷಯೋಃ ।
ನಿತ್ಯತ್ವೇ ಮಹಿಮೋನ್ನತ್ಯಾ ಶಕ್ತಿವ್ಯಕ್ತ್ಯಾತ್ಮನಾ ಸ್ಥಿತಿಮ್ ।
ಸ್ವಸಾಮರ್ಥ್ಯವಿಶೇಷೇಣ ಘಟಯೇತ್ ಸರ್ವಮೀದೃಶಮ್ ॥ ೧೦೦೧ ॥

**ಅರ್ಥ–** ಬಲಜ್ಞಾನಕ್ರಿಯಾದೀನಾಂ= ಬಲಜ್ಞಾನ ಕ್ರಿಯಾ ಮೊದಲಾದವುಗಳು, ಸಿಸೃಕ್ಷಾ ಸಂಜಿಹೀರ್ಷಯೋಃ= ಸೃಷ್ಟೀಚ್ಛಾ ಮತ್ತು ಸಂಹಾರ ಇಚ್ಛೆಗಳು, ನಿತ್ಯತ್ವೇ= ನಿತ್ಯವಾದರೆ, ಮಹಿಮೋನ್ನತ್ಯಾ= ಉನ್ನತ ಮಹಿಮೆಯು ಸಿದ್ಧವಾಗುವುದರಿಂದ, ಸ್ವಸಾಮರ್ಥ್ಯ ವಿಶೇಷೇಣ= ತನ್ನ ಸಾಮರ್ಥ್ಯವಿಶೇಷದಿಂದ, ಈದೃಶಂ ಸರ್ವಮ್= ಇಂತಹ ಎಲ್ಲವನ್ನೂ, ಶಕ್ತಿವ್ಯಕ್ತ್ಯಾತ್ಮನಾ ಸ್ಥಿತಿಮ್= ಶಕ್ತಿ ಮತ್ತು ವ್ಯಕ್ತಿರೂಪದಿಂದ ಇರುವಂತೆ ಮಾಡಿ, ಘಟಯೇತ್= ಘಟನೆಯನ್ನು ಮಾಡುತ್ತಾನೆ.

**ಅನುವಾದ–** ಬಲ, ಜ್ಞಾನ, ಕ್ರಿಯಾ, ಸೃಷ್ಟೀಚ್ಛಾ, ಸಂಹಾರೇಚ್ಛಾ ಮೊದಲಾದವುಗಳು ನಿತ್ಯವಾದರೆ ಹರಿಗೆ ಮಹಿಮಾವಿಶೇಷವು ಸಿದ್ಧವಾಗುವುದರಿಂದ ಇಂತಹ ಪ್ರಾಮಾಣಿಕವಾದ ಎಲ್ಲ ಗುಣಗಳನ್ನು ತನ್ನ ಸಾಮರ್ಥ್ಯವಿಶೇಷದಿಂದ ಶಕ್ತಿವ್ಯಕ್ತಿರೂಪಗಳಿಂದ ಇರುವಂತೆ ಹರಿಯು ನಿರ್ವಹಿಸುತ್ತಾನೆ.

**ಭಾವವಿಲಾಸಿನೀ–** ಸಿಸೃಕ್ಷಾಸಂಜಿಹೀರ್ಷಯೋಃ ಸಿಸೃಕ್ಷಾ ಸ್ರಷ್ಟುಮಿಚ್ಛಾ। ಸಂಜಿಹೀರ್ಷಾ ಸಂಹರ್ತುಮಿಚ್ಛಾ । ರಾವಣಹನನಾದಿಕ್ರಿಯಾಯಾಃ ಸದಾತನತ್ವಸ್ಯ ಸಿಸೃಕ್ಷಾಕಾಲೇ ಸಂಜಿಹೀರ್ಷಾಯಾಶ್ಚ ವಿರೋಧಂ ಪರಿಹರ್ತುಂ ಫಲಕಾಲೇ ವ್ಯಕ್ತ್ಯಾತ್ಮನಾ ಅನ್ಯದಾ ಶಕ್ತ್ಯಾತ್ಮನಾ ಸ್ಥಿತಿಮ್ ॥ ೧೦೦೧ ॥

**ವಿವರಣೆ–** ಬಲ, ಜ್ಞಾನಾದಿಗಳೆಲ್ಲವೂ ನಿತ್ಯವಾದವು. ರಾವಣಹರಣಾದಿಕ್ರಿಯೆ, ಸೃಷ್ಟಿಸಂಹಾರ ಇಚ್ಛೆ ಇವುಗಳೂ ನಿತ್ಯವಾದವುಗಳೇ. ಹಾಗಾದರೆ ರಾವಣಹರಣವು

ಸರ್ವದಾ ನಡೆಯಲಿ ಎಂದು ಆಪತ್ತಿಯು ಬರುತ್ತದೆ. ಅದಕ್ಕಾಗಿ ಈ ಕ್ರಿಯೆಗಳಿಗೆ ಶಕ್ತ್ಯಾತ್ಮನಾ ಮತ್ತು ವ್ಯಕ್ತ್ಯಾತ್ಮನಾ ಸ್ಥಿತಿಯನ್ನು ಒಪ್ಪಿ, ಯಾವಾಗಲೂ ಶಕ್ತ್ಯಾತ್ಮನಾ ಸ್ಥಿತಿಯನ್ನೂ ಮತ್ತು ಕಾರ್ಯವುಂಟಾದಾಗ, ವ್ಯಕ್ತ್ಯಾತ್ಮನಾ ಸ್ಥಿತಿಯನ್ನೂ ಹರಿಯ ಸಾಮರ್ಥ್ಯವಿಶೇಷವೇ ನಿರ್ವಹಿಸುತ್ತದೆ ಎಂದು ಹೇಳುತ್ತಾರೆ.

**ಭೇದಹೀನೇಽಪಿ ಭೇದಸ್ಯ ಕಾರ್ಯಂ ಯೋ ಘಟಯೇಚ್ಛ್ರುತಮ್ ।**
**ಸ ಸಾಮರ್ಥ್ಯವಿಶೇಷೋ ಹಿ ವಿಶೇಷ ಇತಿ ಗೀಯತೇ ॥ ೧೦೦೨ ॥**

**ಅರ್ಥ–** ಯಃ= ಯಾವುದು, ಭೇದಹೀನೇಽಪಿ= ಭೇದವು ಇಲ್ಲದ ಕಡೆಯಲ್ಲಿಯೂ, ಶ್ರುತಂ= ವೇದದಲ್ಲಿ ಹೇಳಲ್ಪಟ್ಟ, ಭೇದಸ್ಯ ಕಾರ್ಯಂ= ಭೇದದ ಕಾರ್ಯವನ್ನು, ಘಟಯೇತ್= ನಿರ್ವಾಹ ಮಾಡುತ್ತದೆಯೋ, ಸಃ= ಅಂತಹ, ಸಾಮರ್ಥ್ಯವಿಶೇಷಃ= ಸಾಮರ್ಥ್ಯ ವಿಶೇಷವು, ವಿಶೇಷ ಇತಿ= ವಿಶೇಷ ಎಂದು, ಗೀಯತೇ ಹಿ= ಹೇಳಲ್ಪಡುತ್ತದೆಯಷ್ಟೇ.

**ಅನುವಾದ–** ಭೇದವಿಲ್ಲದಿರುವ ಕಡೆಯಲ್ಲಿ ಭೇದಕಾರ್ಯವನ್ನು ನಿರ್ವಹಿಸುವ ಸಾಮರ್ಥ್ಯವಿಶೇಷಕ್ಕೆ 'ವಿಶೇಷ' ಎಂದು ಹೆಸರು.

**ಭಾವವಿಲಾಸಿನೀ–** ವಿಶೇಷಸ್ಯ ಲಕ್ಷಣಮುಕ್ತ್ವಾ ಶೃಂಗಗ್ರಾಹಕತಯಾ ದರ್ಶಯತಿ– **ಭೇದಹೀನೇಽಪೀತಿ** ॥ ಶ್ರುತಂ ಶ್ರುತ್ಯುಕ್ತಂ ಕಾರ್ಯಮ್ ಅನೇನ ವಿಶೇಷೋಽಸ್ತೀತಿ ಕೃತ್ವಾ ಯಸ್ಯ ಕಸ್ಯಚಿದಪ್ರಾಮಾಣಿಕಸ್ಯ ಘಟನಾ ನ । ಕಿನ್ತು ಪ್ರಮಾಣಸಿದ್ಧಸ್ಯೇತಿ ಸೂಚಯತಿ । ಅತೋಽಪ್ಯಪ್ರಾಮಾಣಿಕಾನಾಂ ದುಃಖಜೀವಾಭೇದಾದೀನಾಂ ಭಗವತಿ ವಿಶೇಷತೋಽಪಿ ನ ಘಟನೇತ್ಯುಕ್ತಂ ಭವತಿ ॥ ೧೦೦೨॥

**ವಿವರಣೆ–** ಇಲ್ಲಿ ವಿಶೇಷದ ಲಕ್ಷಣವನ್ನು ಹೇಳಿ ಅದರ ಅಸಾಧಾರಣಕಾರ್ಯವನ್ನು ನಿರೂಪಿಸುತ್ತಾರೆ. ಅಭೇದವಿರುವಲ್ಲಿ ಶ್ರುತಿಯು ಹೇಳಿದ ಎಂದರೆ ಪ್ರಾಮಾಣಿಕವಾದ ಭೇದಕಾರ್ಯವನ್ನು ನಿರ್ವಹಿಸುವ ವಸ್ತುವಿನ ಶಕ್ತಿವಿಶೇಷವೇ ವಿಶೇಷವೆಂದು ಕರೆಯಲ್ಪಡುತ್ತದೆ ಎಂದು ಅರ್ಥ.

**ಪರಪ್ರಕಾಶಕೋ ದೀಪೋ ನ ಕಿಂ ಸ್ವಸ್ಯ ಪ್ರಕಾಶಕಃ ।**
**ವಿಶೇಷೋಽನ್ಯತ್ರ ನಿರ್ವಾಹೀ ಸ್ವನಿರ್ವಾಹೀ ಕಥಂ ನ ಸಃ ॥ ೧೦೦೩ ॥**

**ಅರ್ಥ–** ಪರಪ್ರಕಾಶಕಃ= ಇನ್ನೊಂದು ವಸ್ತುವನ್ನು ಪ್ರಕಾಶಿಸುವ, ದೀಪಃ= ದೀಪವು, ಸ್ವಸ್ಯ= ತನಗೆ, ಪ್ರಕಾಶಕಃ= ಪ್ರಕಾಶಕವಾಗಿ, ಕಿಂ ನ= ಇರುವುದಿಲ್ಲವೇನು? ಅನ್ಯತ್ರ= ಬೇರೆ ಕಾರ್ಯವನ್ನು, ನಿರ್ವಾಹೀ= ನಿರ್ವಾಹ ಮಾಡುವ, ಸಃ ವಿಶೇಷಃ= ಆ ವಿಶೇಷವು, ಕಥಂ= ಹೇಗೆ, ಸ್ವನಿರ್ವಾಹೀ ನ= ತನ್ನ ನಿರ್ವಾಹಕವಾಗುವುದಿಲ್ಲ?

**ಅನುವಾದ–** ಇನ್ನೊಂದು ವಸ್ತುವನ್ನು ಪ್ರಕಾಶಿಸುವ ದೀಪವು ಹೇಗೆ ತನ್ನನ್ನೂ ಪ್ರಕಾಶಿಸುತ್ತದೆಯೋ, ಹಾಗೆಯೇ ಇನ್ನೊಂದನ್ನು ನಿರ್ವಾಹ ಮಾಡುವ ವಿಶೇಷವು ತನ್ನನ್ನೂ ನಿರ್ವಾಹ ಮಾಡಿಕೊಳ್ಳುತ್ತದೆ.

**ಭಾವವಿಲಾಸಿನೀ–** ನನು ವಿಶೇಷಸ್ಯಾಪಿ ವಿಶೇಷಿಣಾಽಭೇದಘಟನಾಯ ವಿಶೇಷಾಂತರಗವೇಷಣಾಯಾಮನವಸ್ಥಾ ಸ್ಯಾದಿತ್ಯಾಶಂಕ್ಯ ದೃಷ್ಟಾಂತಮುಖೇನ ವಿಶೇಷಸ್ಯ ಸ್ವನಿರ್ವಾಹಕತಾಮುಪಪಾದಯತಿ– **ಪರಪ್ರಕಾಶಕ ಇತಿ** ॥ ೧೦೦೩ ॥

**ವಿವರಣೆ–** ಧರ್ಮ-ಧರ್ಮಿಗಳಲ್ಲಿ ಅಭೇದವಿದ್ದರೂ ಧರ್ಮ-ಧರ್ಮಿಗಳ ಮಧ್ಯೆ ಒಂದು ವಿಶೇಷವನ್ನು ಅಂಗೀಕಾರಮಾಡಿದಂತೆ ವಿಶೇಷಕ್ಕೂ ಮತ್ತು ಧರ್ಮಕ್ಕೂ ಅಭೇದವಿದ್ದರೂ ಅಲ್ಲಿಯೂ ಧರ್ಮಧರ್ಮಿಭಾವವನ್ನು ಅಂಗೀಕರಿಸಲು ಇನ್ನೊಂದು ವಿಶೇಷವನ್ನು ಕಲ್ಪನೆಮಾಡಬೇಕಾದ್ದರಿಂದ ಅನವಸ್ಥಾದೋಷವು ಬರುತ್ತದೆ ಎಂಬ ಆಪತ್ತಿಯಿಲ್ಲ. ಏಕೆಂದರೆ ಧರ್ಮಗಳಿಗೆ ಅಭೇದವಿದ್ದರೂ ಧರ್ಮತ್ವವನ್ನು ನಿರ್ವಹಿಸುವ ವಿಶೇಷವು ತನಗೆ ಧರ್ಮಿಯಿಂದ ಅಭೇದವಿದ್ದರೂ ತನ್ನ ಧರ್ಮತ್ವವನ್ನೂ ಸಹ ನಿರ್ವಹಿಸುತ್ತದೆ.

ಬಂಧಂ ಮೋಕ್ಷಂ ಸುಖಂ ದುಃಖಂ ಭಿನ್ನಾಭಿನ್ನತ್ವಮನ್ಯತಃ ।
ಜನ್ಮನಿತ್ಯತ್ವಮಿತ್ಯಾದಿಮಹಾಪಾಪಫಲಂ ನೃಣಾಮ್ ।
ಅತಿನೈಚ್ಯಕರಂ ಸ್ವಸ್ಯ ಘಟಯೇತ್ ಕಥಮಾತ್ಮನಿ ॥ ೧೦೦೪ ॥

**ಅರ್ಥ–** ಬಂಧಂ= ಬಂಧವು, ಮೋಕ್ಷಂ= ಮೋಕ್ಷವು, ಸುಖಂ= ಪ್ರಾಕೃತಸುಖವು, ದುಃಖಂ= ದುಃಖವು, ಅನ್ಯತಃ ಭಿನ್ನಾಭಿನ್ನತ್ವಂ= ಇನ್ನೊಂದು ಪದಾರ್ಥದಿಂದ ಭೇದಾಭೇದವು, ಜನ್ಮನಿತ್ಯತ್ವಂ= ಯಾವಾಗಲೂ ಹುಟ್ಟುವುದು, ಇತ್ಯಾದಿ= ಮುಂತಾದವುಗಳು, ನೃಣಾಂ= ಮನುಷ್ಯರಿಗೆ, ಮಹಾಪಾಪಫಲಂ= ದೊಡ್ಡ ಪಾಪದ ಫಲವಾಗಿದೆ, ಸ್ವಸ್ಯ= ತನಗೆ, ಅತಿನೈಚ್ಯಕರಂ= ಅತ್ಯಂತನೀಚತ್ವವನ್ನು ಉಂಟುಮಾಡುವ ಈ ಧರ್ಮಗಳನ್ನು ಹರಿಯು, ಆತ್ಮನಿ= ತನ್ನಲ್ಲಿ, ಕಥಂ ಘಟಯೇತ್= ಹೇಗೆ ಘಟನೆ ಮಾಡಿಕೊಳ್ಳುತ್ತಾನೆ?

**ಅನುವಾದ–** ಬಂಧ, ಮೋಕ್ಷ, ದುಃಖಮಿಶ್ರಿತವಾದ ಸುಖ ಇನ್ನೊಂದು ವಸ್ತುವಿನಿಂದ ಭೇದಾಭೇದ, ಸರ್ವದಾ ಜನ್ಮ ಮೊದಲಾದವುಗಳು ಜೀವರಿಗೆ ಮಹಾಪಾಪದ ಫಲಗಳು. ಅವು ಅತ್ಯಂತ ನೀಚತಾಪಾದಕವಾದವುಗಳು. ಅದನ್ನು ಹರಿಯು ಹೇಗೆ ತನ್ನಲ್ಲಿ ಘಟನೆ ಮಾಡಿಕೊಳ್ಳುತ್ತಾನೆ?

**ಭಾವವಿಲಾಸಿನೀ–** ಸ್ವೈಶ್ವರ್ಯಸ್ಯ ವಿರೋಧಿನೀತಿ ಪ್ರಾಕ್ ಸಾಮಾನ್ಯೇನೋಕ್ತಮಧುನಾ ಪ್ರಪಂಚಯತಿ– **ಬಂಧಮಿತ್ಯಾದಿನಾ** ॥ ಅನ್ಯತಃ ಜೀವಜಡಾತ್ । ನೃಣಾಂ ಮಹಾಪಾಪಫಲಂ

ಬಂಧಜನನಮರಣಾದಿಕಮ್ । ಪಾಪಫಲತ್ವಾಚ್ಚ ನಿಷ್ಪಾಪೇ ಪರಮಾತ್ಮನಿ ನೈತೇಷಾಂ ಘಟನೇತಿ ಭಾವಃ । ಏವಂಚ ಐಶ್ವರ್ಯವಿರೋಧಿತ್ವಾದ್ ಅಪ್ರಾಮಾಣಿಕತ್ವಾತ್ ಪಾಪಫಲತ್ವಾಚ್ಚ ಭಗವತಿ ದುಃಖಾದೀನಾಂ ನ ಘಟನೇತ್ಯುಕ್ತಂ ಭವತಿ ॥ ೧೦೦೪ ॥

**ವಿವರಣೆ–** ಹಿಂದೆ ಐಶ್ವರ್ಯ- ವಿರೋಧಿಯಾದ ಧರ್ಮಗಳನ್ನು ತನ್ನಲ್ಲಿ ಘಟನೆ ಮಾಡಿಕೊಳ್ಳುವುದಿಲ್ಲ ಎಂದು ಹೇಳಿದುದನ್ನು ಇಲ್ಲಿ ವಿಸ್ತಾರ ಮಾಡಿ ತೋರಿಸುತ್ತಾರೆ. ಬಂಧಾದಿಗಳೆಲ್ಲವೂ ಪಾಪದ ಫಲ ಮತ್ತು ನೈಚ್ಯಾಪಾದಕಗಳಾದವುಗಳು. ಅದೆಲ್ಲವೂ ಐಶ್ವರ್ಯವಿರೋಧಿಯಾದವು. ಆದರೆ ನಿಷ್ಪಾಪನಾದ ಪರಮಾತ್ಮನಲ್ಲಿ ಅವೆಲ್ಲವೂ ಅಪ್ರಾಮಾಣಿಕವಾದವುಗಳು. ಆದ್ದರಿಂದ ತನ್ನಲ್ಲಿ ಅವುಗಳನ್ನು ಘಟನೆ ಮಾಡಿಕೊಳ್ಳುವುದಿಲ್ಲ ಎಂದು ಅಭಿಪ್ರಾಯ.

**ಶಕ್ತಃ ಸ್ವದೋಷಂ ಪ್ರದಹೇದ್ ಗೃಹ್ಣೀಯಾಚ್ಚೇತ್ ತ್ವಶಕ್ತತಾ ।**
**ನೃಹರೇರ್ನಖರಕ್ರೌರ್ಯಂ ಕಿಂ ಸ್ವೋದರವಿದಾರಣಮ್ ॥ ೧೦೦೫ ॥**

**ಅರ್ಥ–** ಶಕ್ತಃ= ಸಮರ್ಥನಾದರೆ, ಸ್ವದೋಷಂ= ತನ್ನ ದೋಷವನ್ನು, ಪ್ರದಹೇತ್= ಸುಟ್ಟು ಹಾಕುವನು, ಗೃಹ್ಣೀಯಾಚ್ಚೇತ್= ದೋಷವನ್ನು ಸ್ವೀಕರಿಸಿದರೆ, ಅಶಕ್ತತಾ= ಅಶಕ್ತಿ ಉಂಟೆಂದು ಸಿದ್ಧವಾಗುವುದು, ನೃಹರೇಃ= ನರಸಿಂಹದೇವರ, ನಖರಕ್ರೌರ್ಯಂ= ಉಗುರುಗಳ ಕ್ರೌರ್ಯವು, ಸ್ವೋದರವಿದಾರಣಮ್= ತನ್ನ ಹೊಟ್ಟೆಯನ್ನೇ ಸೀಳಿಕೊಳ್ಳಲು ಸಮರ್ಥವಾದುದಾಗಿ, ಕಿಂ= ಆಗುವುದೇನು?

**ಅನುವಾದ–** ಸಮರ್ಥನಾದವನು ತನ್ನ ದೋಷವನ್ನು ಸುಟ್ಟುಹಾಕುತ್ತಾನೆ. ಅಶಕ್ತನಾದವನು ಮಾತ್ರ ತನ್ನ ದೋಷವನ್ನು ಸ್ವೀಕರಿಸುತ್ತಾನೆ. ನರಸಿಂಹದೇವರ ಉಗುರುಗಳ ಕ್ರೌರ್ಯವು ತನ್ನ ಉದರವನ್ನು ಸೀಳಿಕೊಳ್ಳಲು ಉದ್ಯುಕ್ತ-ವಾಗುತ್ತದೆಯೇ?

**ಭಾವವಿಲಾಸಿನೀ–** ಅಧುನಾ ದುಃಖಾದಿಘಟನಾಯಾಂ ಘಟಕಶಕ್ತೇರೇವಾಭಾವಪ್ರಸಂಗಾಚ್ಚ ನ ದುಃಖಾದೀನಾಂ ಘಟನೇತ್ಯಾಹ– **ಶಕ್ತ** ಇತಿ ॥ ದೋಷಮಿತ್ಯಾವರ್ತ್ಯ ಗೃಹ್ಣೀಯಾದಿತಿ ಯೋಜನೀಯಮ್ । ತತ್ರ ದೃಷ್ಟಾಂತಮಾಹ– **ನೃಹರೇರಿತಿ** ॥ ನಖರಾಃ ನಖಾಃ ॥ ೧೦೦೫ ॥

**ವಿವರಣೆ–** ತನ್ನಲ್ಲಿ ದುಃಖಾದಿಗಳನ್ನು ಘಟನೆ ಮಾಡಿಕೊಂಡರೆ ತನ್ನ ಅಚಿಂತ್ಯಾದ್ಭುತಶಕ್ತಿಯು ನಾಶಹೊಂದುವುದರಿಂದ ದೇವರು ಹಾಗೆ ಮಾಡಿಕೊಳ್ಳುವುದಿಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ನರಸಿಂಹದೇವರ ಉಗುರುಗಳ ಹರಿತವಾದ ಅಲುಗುಗಳು ಹಿರಣ್ಯಕಶಿಪುವಿನ ಉದರವನ್ನು ಸೀಳುತ್ತವೆ. ನರಸಿಂಹನ ಉದರವನ್ನೇ ಸೀಳುವುದಿಲ್ಲ. ವಿಶೇಷವೂ ಹಾಗೆಯೇ. ತನ್ನ ಐಶ್ವರ್ಯಕ್ಕೆ ವಿರುದ್ಧವಾದ ವಸ್ತುಗಳನ್ನು

ಅಥವಾ ಧರ್ಮಗಳನ್ನು ಸೀಳಿಹಾಕುತ್ತದೆ. ತನ್ನ ಐಶ್ವರ್ಯಕ್ಕೆ ಅವಿರೋಧಿಯಾದ ಧರ್ಮಗಳನ್ನು ನಾಶಮಾಡುವುದಿಲ್ಲ.

**ಅಶನ್ಯಯೋಯೋಗಹೇತೋರದೃಷ್ಟೌ ನಹ್ಯಯೋ ನ ತತ್ ।**
**ಕಿಂ ಮೃಷಾ ಘಟಕಾದೃಷ್ಟೇರ್ಬಹುಶ್ರುತ್ಯುಕ್ತಸದ್ಗುಣಃ ॥ ೧೦೦೬ ॥**

**ಅರ್ಥ–** ಅಶನ್ಯಯೋಯೋಗಹೇತೋಃ= ಅಗ್ನಿ ಮತ್ತು ಕಬ್ಬಿಣಗಳ ಸಂಬಂಧಕ್ಕೆ ಕಾರಣವಾದುದು, ಅದೃಷ್ಟೌ= ಕಾಣದಿದ್ದರೂ, ತತ್= ಅದು, ಅಯೋ ನ= ಕಬ್ಬಿಣವಲ್ಲ ಎಂದು, ನ= ಅಲ್ಲ, ಬಹುಶ್ರುತ್ಯುಕ್ತಸದ್ಗುಣಃ= ಅನೇಕ ಶ್ರುತಿಗಳಲ್ಲಿ ಹೇಳಿದ ಸದ್ಗುಣವು, ಘಟಕಾದೃಷ್ಟೇಃ= ನಿರ್ವಾಹಕವಾದುದು ಕಾಣದಿರುವ ಪ್ರಯುಕ್ತ, ಮೃಷಾ ಕಿಂ= ಸುಳ್ಳಾದುದೇನು?

**ಅನುವಾದ– ಅಗ್ನಿ ಮತ್ತು ಕಬ್ಬಿಣಗಳ ಸಂಬಂಧಕ್ಕೆ ಕಾರಣವಾದ ಲೋಹಕಾರನು ಕಾಣದಿದ್ದರೂ ಕಬ್ಬಿಣವು ಹೇಗೆ ಕಬ್ಬಿಣವೇ ಆಗುತ್ತದೆಯೋ, ಹಾಗೆಯೇ ಅನಂತಗುಣಗಳಿಗೆ ಘಟಕವಾದುದು ಕಾಣದಿದ್ದರೂ ಅನಂತಗುಣಗಳು ಅನಂತಗುಣಗಳೇ ಆಗುತ್ತವೆ.**

**ಭಾವವಿಲಾಸಿನೀ–** ಅಧುನಾ ವಿಶೇಷೇ ಪ್ರಮಾಣಾಭಾವಮಾಶಂಕ್ಯ ದೃಷ್ಟಕಾರ್ಯಾನ್ಯಥಾನುಪಪತ್ತಿರೇವ ಪ್ರಮಾಣಮಿತಿ ಗೂಢೇನಾಭಿಸಂಧಿನಾ ದೃಷ್ಟಾಂತಮೇವ ದಾರ್ಷ್ಟಾನ್ತಿಕೀಕುರ್ವನ್ನುಪಪಾದಯತಿ– **ಅಶನೀತಿ** ॥ ಅಶನ್ಯಯೋ ಯೋಗಹೇತೋಃ ಅಶನೇರಯಸಶ್ಚ ಯೋಗಹೇತೋಃ ಕಾರ್ಮಾದೇಃ । ತದ್ ಅಯೋ ನೇತಿ ನಹಿ । ಕಿಂತ್ವದೃಷ್ಟವೇವ ಹೇತ್ವಂತರಮಾದಾಯ ತದಯೋ ಭವತ್ಯೇವೇತಿ ಯೋಜನಾ । ತತ್ರ ದೃಷ್ಟಾಂತಮಾಹ– **ಕಿಂ ಮೃಷೇತಿ** ॥ ಘಟಕಾದೃಷ್ಟೇಃ ಅಭೇದೇ ಗುಣಗುಣಿಭಾವಸ್ಯ ಘಟಕಾದೃಷ್ಟೇಃ ಬಹುಶ್ರುತ್ಯುಕ್ತಸದ್ಗುಣಾ ಮೃಷಾ ಕಿಮ್? ನ ಮೃಷೇತ್ಯರ್ಥಃ । ಶ್ರುತ್ಯುಕ್ತೇತಿ ಹೇತುಗರ್ಭವಿಶೇಷಣೇನ ಸ್ವೋಕ್ತವಿಶೇಷಸಮರ್ಥನಸ್ಯ ಶ್ರೌತತಯಾ ಸುನಿಶ್ಚಿತತ್ವಾದ್ ದೃಷ್ಟಾಂತೀಕರಣಮಿತ್ಯಭಿಸಂಧಿ ಮುದ್ಘಾಟಯತಿ ಗ್ರಂಥಕಾರಃ ॥ ೧೦೦೬॥

**ವಿವರಣೆ–** ಈಗ ವಿಶೇಷದಲ್ಲಿ ಪ್ರಮಾಣವಿಲ್ಲವೆಂದು ಆಶಂಕಿಸಿ, ದೃಷ್ಟಪ್ರಮಾಣವಿಲ್ಲದಿದ್ದರೆ ಅನ್ಯಥಾನುಪಪತ್ತಿರೂಪವಾದ ಪ್ರಮಾಣದಿಂದ ಕಲ್ಪನೆ ಮಾಡಬೇಕೆಂಬ ಗೂಢಾಭಿಸ್ಸಂಧಿಯಿಂದ ದೃಷ್ಟಾಂತವನ್ನೇ ದಾರ್ಷ್ಟಾಂತಿಕವನ್ನಾಗಿ ಮಾಡಿ ಉಪಪಾದನೆ ಮಾಡುತ್ತಾರೆ. ಈ ವಿಷಯದಲ್ಲಿ ದೃಷ್ಟಾಂತವನ್ನು ಕೊಡುತ್ತಾರೆ. ಎದುರಿಗೆ ಕಾಣುವ ಅಗ್ನಿಯಲ್ಲಿ ಹದಮಾಡಿದ ಕಬ್ಬಿಣದ ಒಂದು ತುಂಡನ್ನು ಲೋಹಕಾರನು ಒಂದು ಆಯುಧವನ್ನು ಮಾಡುತ್ತಾನೆ. ನಂತರ ಆಯುಧವೂ ಕಾಣುತ್ತದೆ. ಲೋಹಕಾರನು ಕಾಣಲಾರ. ಲೋಹಕಾರನು ಎದುರಿಗೆ ಕಾಣುವುದಿಲ್ಲ ಎಂಬ ಕಾರಣದಿಂದ ಕಬ್ಬಿಣದ

ಆಯುಧವೇ ಅಲ್ಲ ಎಂದು ಹೇಳಲಾಗುವುದಿಲ್ಲ. ಲೋಹಕಾರನು ಕಣ್ಣಿಗೆ ಕಾಣದಿದ್ದರೂ, ಲೋಹಕಾರನು ಇಲ್ಲದೆ ಆ ಆಯುಧವು ಉಂಟಾಗುವುದಿಲ್ಲವಾದ್ದರಿಂದ, ಲೋಹಕಾರನನ್ನು ಕಲ್ಪನೆ ಮಾಡುತ್ತೇವೆ. ಗುಣಗುಣಿಭಾವದಲ್ಲಿಯೂ ಹೀಗೆಯೇ. ಅಭೇದವಿರುವಾಗ ಗುಣಗುಣಿಭಾವವನ್ನು ನಿರ್ವಹಿಸುವ ಯಾವ ಪದಾರ್ಥವೂ ಕಾಣುವುದಿಲ್ಲವಾದ್ದರಿಂದ ಗುಣಗಳೇ ಮಿಥ್ಯಾಭೂತವಾದವೇನು? ಗುಣಗಳು ಎಂದೂ ಮಿಥ್ಯಾಭೂತವಾದುದಲ್ಲ. ಏಕೆಂದರೆ ಅವು ಶ್ರುತಿಯಲ್ಲಿ ಹೇಳಲ್ಪಟ್ಟಿವೆ. ಎಂದು ಹೇಳಿ ತಾವು ಮಾಡುವ ವಿಶೇಷಸಮರ್ಥನೆಯು ಶ್ರುತಿಮೂಲವಾದುದು ಎಂದು ತಿಳಿಸಿ. ಆದ್ದರಿಂದಲೇ ಗುಣಗಳನ್ನು ದೃಷ್ಟಾಂತವಾಗಿ ಕೊಡಬಹುದು ಎಂದು ಗ್ರಂಥಕಾರರು ಸೂಚಿಸುತ್ತಾರೆ.

**ಅನ್ನಂ ದದದ್ಧಿ ಪುರುಷೋ ದರ್ವೀಂ ಕಾಂಚಿತ್ ಪ್ರಕಲ್ಪಯೇತ್ ।**
**ಅಭಿನ್ನಧರ್ಮತಾಂ ವೇದೋ ಯಥಾ ತಚ್ಛಕ್ತಿಕಲ್ಪಕಃ ॥ ೧೦೦೭ ॥**

**ಅರ್ಥ–** ಅನ್ನಂ= ಅನ್ನವನ್ನು, ದದತ್= ಬಡಿಸುವ, ಪುರುಷಃ= ಪುರುಷನು, ಕಾಂಚಿತ್= ಯಾವುದೋ ಒಂದು, ದರ್ವೀಂ= ಸೌಟನ್ನು, ಪ್ರಕಲ್ಪಯೇತ್ ಹಿ= ಕಲ್ಪಿಸುತ್ತಾನಷ್ಟೇ, ಯಥಾ= ಹೇಗೆ, ಅಭಿನ್ನಧರ್ಮತಾಂ= ಅಭಿನ್ನವಾದ ಧರ್ಮಗಳನ್ನು ಹೇಳುವ, ವೇದಃ= ವೇದವು, ತಚ್ಛಕ್ತಿಕಲ್ಪಕಃ= ವಸ್ತುವಿನ ಸಾಮರ್ಥ್ಯವಿಶೇಷವನ್ನು ಕಲ್ಪನೆ ಮಾಡಿದಂತೆ (ಧರ್ಮತ್ವವನ್ನು ನಿರ್ವಾಹ ಮಾಡುವ ಶಕ್ತಿಯನ್ನು ಕಲ್ಪನೆ ಮಾಡಿದಂತೆ).

**ಅನುವಾದ–** ಅನ್ನವನ್ನು ಬಡಿಸುವ ಪುರುಷನು ಯಾವುದಾದರೊಂದು ಸಟ್ಟುಗ (ಅನ್ನವನ್ನು ಬಡಿಸುವ ಸಾಧನ) ಕಲ್ಪಿಸುತ್ತಾನೆ. ಹಾಗೆಯೇ ಅಭಿನ್ನವಾದ ಧರ್ಮವನ್ನು ಹೇಳುವ ವೇದವು ಧರ್ಮತ್ವವನ್ನು ಉಪಪಾದನೆ ಮಾಡುವ ಒಂದು ಶಕ್ತಿಯನ್ನು ಕಲ್ಪಿಸುತ್ತದೆ.

**ಭಾವವಿಲಾಸಿನೀ–** ಪೂರ್ವೋಕ್ತರೀತ್ಯಾ ದಾರ್ಷ್ಟಾಂತಿಕಾಂತರಮಾಹ– **ಅನ್ನಮಿತಿ** ॥ ಕಾಂಚಿದ್ ದರ್ವ್ಯಭಾವೇ ಕಾಷ್ಠಾದಿರೂಪಾಂ ನತು ಪ್ರಸಿದ್ಧದರ್ವ್ಯಭಾವಾದ್ ಅನ್ನಮೇವ ನ ದದಾತಿ । ತತ್ರ ದೃಷ್ಟಾಂತಮಾಹ– **ಅಭಿನ್ನೇತಿ** ॥ ತಚ್ಛಕ್ತಿಕಲ್ಪಕಃ ಭಗವಚ್ಛಕ್ತಿಕಲ್ಪಕಃ । ಗುಣಗುಣಿಭಾವ- ಘಟಕಭೇದಾಭಾವೇಽಪಿ ತತ್ಪ್ರತಿನಿಧಿನಾ ವಿಶೇಷೇಣ ಸ್ವೋಕ್ತಗುಣಗುಣಿಭಾವಂ ಯಥಾ ನಿರ್ವಹತಿ ತಥೇತ್ಯರ್ಥಃ। ಅತ್ರಾಪಿ ವೇದ ಇತ್ಯನೇನ ವೈದಿಕತ್ವೇನಾಸ್ಯಾರ್ಥಸ್ಯಸುನಿಶ್ಚಿತತ್ವಮಭಿಪ್ರೈತಿ॥೧೦೦೭॥

**ವಿವರಣೆ–** ಈ ಶ್ಲೋಕದಲ್ಲಿ ಇನ್ನೊಂದು ದಾರ್ಷ್ಟಾಂತಿಕವನ್ನು ಹೇಳುತ್ತಾರೆ. ಅನ್ನವನ್ನು ಬಡಿಸುವ ಪುರುಷನಿಗೆ ಲೋಹದ ಸಟ್ಟುಗ ಸಿಗದಿದ್ದರೆ, ಒಂದು ಮರದ ಚಕ್ಕೆಯಿಂದಲಾದರೂ ಅನ್ನವನ್ನು ಬಡಿಸುತ್ತಾನೆಯೇ ಹೊರತು, ಅನ್ನವನ್ನು ಬಡಿಸುವುದನ್ನೇ ನಿಲ್ಲಿಸುವುದಿಲ್ಲ. ಅದರಂತೆ ಅಭಿನ್ನವಾದ ಗುಣಗಳಿಗೆ ಧರ್ಮತ್ವವನ್ನು ಹೇಳುವ ವೇದವು

ಗುಣಗುಣಿಭಾವವನ್ನು ನಿರ್ವಹಿಸುವ ಭೇದವೆಂಬ ಮುಖ್ಯ ನಿರ್ವಾಹಕವು ಇಲ್ಲದಿದ್ದರೂ ಭೇದಪ್ರತಿನಿಧಿಯಾದ ವಿಶೇಷವೆಂಬ ಶಕ್ತಿವಿಶೇಷವನ್ನು ಕಲ್ಪಿಸುತ್ತದೆ. ವೇದೋಕ್ತವಾದ ಗುಣಗುಣಿಭಾವವು ಸತ್ಯವಾಗಿರುವುದರಿಂದ ಅದನ್ನು ನಿರ್ವಹಿಸಲು ಇಂತಹ ಕಲ್ಪನೆಯನ್ನು ಮಾಡಲೇಬೇಕು.

**ಮೂಲಾಭೇದೇऽಪಿ ಕೃಷ್ಣಾದ್ಯಾ ನಾನಂತಾಃ ಕಿಂ ನ ಸಂತಿ ಕಿಮ್ ।**
**ಯಥಾನಂತಾಶ್ಚ ಸಂತಶ್ಚ ನ ಭಿನ್ನಾ ಮೂಲಸದ್ಗುಣಾಃ ॥ ೧೦೦೮ ॥**

**ಅರ್ಥ–** ಮೂಲಾಭೇದೇऽಪಿ= ಮೂಲರೂಪದಿಂದ ಅಭಿನ್ನವಾದರೂ, ಕೃಷ್ಣಾದ್ಯಾಃ= ಕೃಷ್ಣಾದಿ ಅವತಾರಗಳು, ಅನಂತಾಃ ಕಿಂ ನ= ಅನಂತವಲ್ಲವೇನು, ಕಿಂ ನ ಸಂತಿ= ಅಥವಾ ಇಲ್ಲವೇನು, ಯಥಾ= ಅದರಂತೆ, ಮೂಲಸದ್ಗುಣಾಃ= ಮೂಲರೂಪದಲ್ಲಿರುವ ಸದ್ಗುಣಗಳು, ಅನಂತಾಶ್ಚ= ಅನಂತಗಳಾಗಿವೆ, ಸಂತಶ್ಚ= ವಿದ್ಯಮಾನಗಳಾಗಿವೆ, ನ ಭಿನ್ನಾಃ= ಭೇದ ರಹಿತಗಳಾಗಿವೆ.

**ಅನುವಾದ–** ಮೂಲರೂಪದಿಂದ ಭಿನ್ನಗಳಾದರೂ, ಅಥವಾ ಅಭಿನ್ನಗಳಾದರೂ ಕೃಷ್ಣಾದಿ ಅವತಾರಗಳು ಅನಂತವಲ್ಲವೇ, ಮತ್ತು ಸತ್ಯವಲ್ಲವೇ? ಹಾಗೆಯೇ ಮೂಲದಿಂದ ಅಭಿನ್ನವಾದ ಸದ್ಗುಣಗಳೂ ಸಹ ಅನಂತವಾಗಿಯೂ ಮತ್ತು ಸತ್ಯವಾಗಿಯೂ ಇವೆ.

**ಭಾವವಿಲಾಸಿನೀ–** ಅಧುನಾऽಂತರಂಗದೃಷ್ಟಾಂತಮಾಹ– **ಮೂಲಾಭೇದೇತಿ** ॥ ಮೂಲೇನ ಮೂಲರೂಪೇಣ ಸಹಾಭೇದೇऽಪೀತ್ಯರ್ಥಃ । ಕೃಷ್ಣಾದ್ಯಾಃ ಅವತಾರಾಃ ಅನನ್ತಾ ನ ಕಿಮ್? ಅನನ್ತಾ ಏವ, ನ ಸನ್ತಿ ಕಿಮ್? ಸನ್ತ್ಯೇವೇತ್ಯರ್ಥಃ । ಸರ್ವಜನಸಮ್ಪ್ರತಿಪನ್ನತ್ವಾದಸ್ಯ ದೃಷ್ಟಾಂತೀಕರಣಮ್ । ದಾರ್ಷ್ಟಾನ್ತಿಕಮಾಹ– **ತಥೇತಿ** ॥ ಮೂಲಸದ್ಗುಣಾಃ ಮೂಲರೂಪಸ್ಯ ನಾರಾಯಣಸ್ಯ ಸದ್ಗುಣಾಃ ಸಾರ್ವಜ್ಞಾದಿಶೋಭನಗುಣಾಃ ನ ಭಿನ್ನಾಃ ಮೂಲರೂಪೇಣಾನ್ಯೋನ್ಯಮ್ ಅಭಿನ್ನಾಶ್ಚ ॥ ೧೦೦೮ ॥

**ವಿವರಣೆ–** ಈಗ ಅಂತರಂಗ ದೃಷ್ಟಾಂತವನ್ನು ಹೇಳುತ್ತಾರೆ. ಕೃಷ್ಣಾದಿ ಅವತಾರಗಳು ಮೂಲರೂಪದಿಂದ ಅಭಿನ್ನವಾಗಿದ್ದರೂ ಅನಂತವಾಗಿವೆ. ಮತ್ತು ಸತ್ಯವಾಗಿವೆ. ಇದು ಸರ್ವಜನಸಂಪ್ರತಿಪನ್ನವಾದದ್ದರಿಂದ ಇದನ್ನು ದೃಷ್ಟಾಂತವಾಗಿ ಕೊಡಬಹುದು. ಅದರಂತೆ ಮೂಲರೂಪನಾದ ನಾರಾಯಣನ ಸದ್ಗುಣಗಳು ಎಂದರೆ ಸಾರ್ವಜ್ಞಾದಿ-ಶೋಭನಗುಣಗಳು ನಾರಾಯಣನಿಂದ ಅಭಿನ್ನವಾಗಿವೆ ಮತ್ತು ಅನಂತವಾಗಿವೆ ಮತ್ತು ಸತ್ಯವಾಗಿವೆ ಎಂದು ಅರ್ಥ.

**ಅನ್ಯಾರ್ಥಶೂನ್ಯಾ ವಾಕ್ ಚೇತ್ಸ್ಯಾದಯುಕ್ತಾರ್ಥಾऽರ್ಥಿಕಾರ್ಥವಾಕ್ ।**
**ಯಥೇಶಾಭಿನ್ನಗುಣವಾಗರ್ಥಾಚ್ಛಕ್ತಿವಿಶೇಷವಾಕ್ ॥ ೧೦೦೯ ॥**

**ಅರ್ಥ–** ಅನ್ಯಾರ್ಥಶೂನ್ಯಾ ವಾಕ್= ಬೇರೆ ಅರ್ಥವನ್ನು ಮಾಡಲು ಸಾಧ್ಯವಿಲ್ಲದ ವಾಕ್ಯವು, ಅಯುಕ್ತಾರ್ಥಾ= ಅಯುಕ್ತವಾದ ಅರ್ಥವನ್ನು ಹೊಂದಿರುವುದಾಗಿ, ಸ್ಯಾತ್ ಚೇತ್= ಇರುವುದಾದರೆ (ತೋರುವುದಾದರೆ), ಅದೇ, ಆರ್ಥಿಕಾರ್ಥವಾಕ್= ಆರ್ಥಿಕವಾದ ಅರ್ಥವನ್ನು ಹೇಳುವ ವಾಕ್ಯ, ಯಥಾ= ಹೇಗೆ, ಈಶಾಭಿನ್ನಗುಣವಾಕ್= ಈಶನಿಂದ ಅಭಿನ್ನವಾದ ಗುಣಗಳನ್ನು ಹೇಳುವ ವಾಕ್ಯವು, ಶಕ್ತಿವಿಶೇಷವಾಕ್= ಆರ್ಥಿಕವಾದ ಶಕ್ತಿ ವಿಶೇಷವನ್ನು ಹೇಳುವ ವಾಕ್ಯವಾಗುತ್ತದೆಯೋ ಅದರಂತೆ.

**ಅನುವಾದ–** ಒಂದು ವಾಕ್ಯಕ್ಕೆ ಸಹಜವಾಗಿ ತೋರುವ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಮಾಡಲು ಸಾಧ್ಯವೇ ಇಲ್ಲದಿದ್ದಾಗ, ಹಾಗೆ ತೋರುವ ಅರ್ಥವು ವಿರುದ್ಧವಾಗಿದ್ದ ಪಕ್ಷದಲ್ಲಿ ಆ ವಾಕ್ಯವೇ ತನ್ನ ಆರ್ಥಿಕವಾದ ಅರ್ಥವನ್ನು ಹೇಳುವ ವಾಕ್ಯವಾಗುತ್ತದೆ. ಹೇಗೆಂದರೆ, ಬ್ರಹ್ಮನಿಂದ ಗುಣಗಳು ಅಭಿನ್ನ ಎಂದು ಹೇಳಿ, ಆದರೂ ಬ್ರಹ್ಮನ ಗುಣಗಳು ಧರ್ಮ ಎಂದು ಹೇಳುವ ವಾಕ್ಯವು ಹೇಗೆ ಗುಣಗುಣಿಭಾವವು ನಿರ್ವಹಿಸುವ ಆರ್ಥಿಕವಾದ ಶಕ್ತಿವಿಶೇಷವನ್ನು ಹೇಳುವ ವಾಕ್ಯವಾಗುತ್ತದೆಯೋ ಅದರಂತೆ.

**ಭಾವವಿಲಾಸಿನೀ–** ಅಧುನಾ ವಿಶೇಷಸ್ಯ ಶ್ರುತ್ಯುಕ್ತೇತಿ ಪ್ರಾಕ್ ಸೂಚಿತಂ ಶ್ರೌತಾರ್ಥಾಪತ್ತಿಸಿದ್ಧತ್ವಂ ಪ್ರಪಂಚಮುಪಪಾದಯತಿ– **ಅನ್ಯಾರ್ಥಶೂನ್ಯೇತಿ** ॥ ವಾಗ್ ವೇದವಾಕ್ । ಅಯುಕ್ತಾರ್ಥಾ ಆಪಾತತಃ ಅಯುಕ್ತಾರ್ಥಾ । ಆರ್ಥಿಕಾರ್ಥವಾಕ್ ಆರ್ಥಿಕಾರ್ಥಸ್ಯೋಪದಕಾರ್ಥಸ್ಯ ವಾಕ್ ಪ್ರಮಾಣಮ್ । ಕುತ್ರೇದಂ ದೃಷ್ಟಮ್? ಇತ್ಯತ ಆಹ– **ಯಥೇತಿ** ॥ ೧೦೦೯ ॥

**ವಿವರಣೆ–** ಒಂದು ವಾಕ್ಯಕ್ಕೆ ಪದಗಳ ಶಕ್ತಿಯಿಂದ ಲಭ್ಯವಾದ ಅರ್ಥ ಮತ್ತು ಆರ್ಥಿಕವಾದ ಅರ್ಥ ಎಂದು ಎರಡು ಅರ್ಥಗಳು ಇರಬಹುದು. ಪದಗಳ ಶಕ್ತಿಯಿಂದ ತೋರುವ ಅರ್ಥವು ಪ್ರಮಾಣ ವಿರುದ್ಧವಾಗಿ ಕಂಡರೆ ಮತ್ತು ಆ ವಾಕ್ಯಕ್ಕೆ ಬೇರೆ ಅರ್ಥವನ್ನು ಮಾಡಲು ಸಾಧ್ಯವೇ ಇಲ್ಲದಿದ್ದರೆ ಅದು ವೇದವಾಕ್ಯವಾದ ಕಾರಣ ಅದಕ್ಕೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲವಾದ್ದರಿಂದ, ಪದಗಳ ಶಕ್ತಿಯಿಂದ ಲಭ್ಯವಾದ ಅರ್ಥವನ್ನು ಬಿಟ್ಟು ಆರ್ಥಿಕವಾದ ಅರ್ಥವನ್ನು ಸ್ವೀಕರಿಸಬೇಕು. ಹೇಗೆಂದರೆ, ಈಶನಲ್ಲಿ ಅನೇಕ ಗುಣಗಳು ಇವೆ ಎಂದೂ ಈಶನು ಒಬ್ಬನೇ ಎಂದೂ, ಹಾಗೆಯೇ ಈಶನು ಧರ್ಮಿ ಎಂದು ಮತ್ತು ಗುಣಗಳು ಧರ್ಮವೆಂದೂ ಹೇಳುವ ವಾಕ್ಯವು ಆಪಾತತಃ ಅನುಪಪನ್ನವಾಗುತ್ತದೆ. ಒಂದಕ್ಕೂ ಅನೇಕಕ್ಕೂ ಅಭೇದವು ಹೇಗೆ, ಗುಣಕ್ಕೂ ಮತ್ತು ಗುಣಿತ್ವಕ್ಕೂ ಅಭೇದವು ಹೇಗೆ ಎಂದು ಅನುಪಪತ್ತಿ ತೋರುತ್ತದೆ. ಆಗ ಆ ವಾಕ್ಯವೇ ಇವೆಲ್ಲವೂ ಪ್ರಾಮಾಣಿಕವಾದ್ದರಿಂದ ಇಂತಹ ವಿರೋಧವನ್ನು ಪರಿಹಾರ ಮಾಡಿ ಅನೇಕತ್ವಾದಿವ್ಯವಹಾರಗಳನ್ನು ನಿರ್ವಹಿಸುವ ವಸ್ತುವಿನ ಶಕ್ತಿವಿಶೇಷವನ್ನು ಆರ್ಥಿಕವಾಗಿ ಹೇಳುತ್ತದೆ. ಅದರಂತೆ ಎಂದು ದಾರ್ಷ್ಟಾಂತಿಕವನ್ನು ದೃಷ್ಟಾಂತವನ್ನಾಗಿ ಕೊಟ್ಟಿದ್ದಾರೆ.

**ಗುಣತ್ವಸ್ಯ ಗುಣಿತ್ವಸ್ಯ ತದಭೇದಸ್ಯ ಚೇಶ್ವರೇ ।**
**ಪ್ರಾಮಾಣಿಕಸ್ಯ ಘಟನಾ ಶಕ್ತ್ಯೈವ ಸ್ಯಾತ್ ಸುಖಾದಿವತ್ ॥ ೧೦೧೦ ॥**

**ಅರ್ಥ–** ಈಶ್ವರೇ= ಈಶ್ವರನಲ್ಲಿ, ಪ್ರಾಮಾಣಿಕಸ್ಯ= ಪ್ರಾಮಾಣಿಕವಾದ, ಗುಣತ್ವಸ್ಯ= ಗುಣತ್ವದ ಗುಣಿತ್ವಸ್ಯ= ಗುಣಿತ್ವದ, ತದಭೇದಸ್ಯ ಚ= ಮತ್ತು ಗುಣಗುಣಿಗಳ ಅಭೇದದ, ಘಟನಾ= ಘಟನೆಯು, ಸುಖಾದಿವತ್= ಈಶ್ವರನ ಸುಖಾದಿಗಳಲ್ಲಿದ್ದಂತೆ, ಶಕ್ತ್ಯೈವ= ಈಶ್ವರನ ಶಕ್ತಿವಿಶೇಷದಿಂದಲೇ, ಸ್ಯಾತ್= ಆಗುತ್ತದೆ.

**ಅನುವಾದ– ದೇವರಲ್ಲಿ ಗುಣಿತ್ವ ಸರ್ವಜ್ಞತ್ವಾದಿಗಳಲ್ಲಿ ಗುಣತ್ವ, ಗುಣಗುಣಿಗಳ ಅಭೇದ ಇವೆಲ್ಲವೂ ವೇದೋಕ್ತವಾದುದರಿಂದ ಪ್ರಾಮಾಣಿಕವಾದವು. ಸುಖಾದಿಗಳಂತೆ ಪರಮಾತ್ಮನು ತನ್ನ ಶಕ್ತಿವಿಶೇಷದಿಂದಲೇ ಎಲ್ಲವನ್ನೂ ಘಟನೆ ಮಾಡುತ್ತಾನೆ.**

**ಭಾವವಿಲಾಸಿನೀ–** ಪ್ರಾಮಾಣಿಕಸ್ಯೇತಿ ಗುಣತ್ವಾದೇಸ್ತ್ರಿತಯಸ್ಯಾಪಿ ವಿಶೇಷಣಮ್ । ಸುಖಾದಿವದ್ ಬ್ರಹ್ಮಾಭಿನ್ನೇ ಸುಖೇಽಸಾಧಾರಣತತ್ಪದವಾಚ್ಯತ್ವಸ್ಯ ಶಕ್ತಿವಿಶೇಷಾತ್ ಸಿದ್ಧಿವದಿತ್ಯರ್ಥಃ। ಆದಿಪದೇನ ಜ್ಞಾನಂ ಗೃಹ್ಯತೇ ॥ ೧೦೧೦ ॥

**ವಿವರಣೆ–** ಸುಖವು ಬ್ರಹ್ಮನ ಗುಣವಾಗಿದೆ. ಆದ್ದರಿಂದ ಧರ್ಮವೂ ಆಗಿದೆ. ಬ್ರಹ್ಮನು ಧರ್ಮಿ. ಆದರೂ ಬ್ರಹ್ಮನೇ ಸುಖರೂಪನಾದುದರಿಂದ ಬ್ರಹ್ಮನಿಗೂ ಮತ್ತು ಸುಖಕ್ಕೂ ಅಭೇದವಿದೆ. ಹೀಗಿದ್ದರೂ ಸುಖವು ಪ್ರಾಮಾಣಿಕವಾದುದರಿಂದ ಅಲ್ಲಿ ಹೇಗೆ ಅಭೇದವಿದ್ದರೂ ಧರ್ಮಭಾವವನ್ನು ವಿಶೇಷಶಕ್ತಿಯಿಂದ ಅಂಗೀಕರಿಸುತ್ತೇವೆಯೋ, ಸರ್ವಜ್ಞತ್ವಾದಿಗುಣಗಳ ವಿಷಯದಲ್ಲಿಯೂ ಹಾಗೆಯೇ ಅಂಗೀಕರಿಸಬೇಕು.

ಐಶ್ವರ್ಯದ್ಯೋತಕವಾದ ಪ್ರಾಮಾಣಿಕವಾದ ಎಷ್ಟು ವಿಷಯಗಳಿವೆಯೋ, ಅವುಗಳೆಲ್ಲವನ್ನೂ ಹರಿಯಲ್ಲಿ ಘಟನೆ ಮಾಡಬೇಕು ಎಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ.

**ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।**
**ಏವಂ ಧರ್ಮಾನ್ ಪೃಥಕ್‌ಪಶ್ಯಂಸ್ತಾನೇವಾನುವಿಧಾವತಿ ॥ ೧೦೧೧ ॥**

**ಅರ್ಥ–** ಯಥಾ= ಹೇಗೆ, ದುರ್ಗೇ= ಪರ್ವತಶಿಖರದಲ್ಲಿ, ವೃಷ್ಟಂ= ಬಿದ್ದ, ಉದಕಂ= ನೀರು, ಪರ್ವತೇಷು= ಪರ್ವತದ ತಪ್ಪಲುಗಳ ಕಡೆಗೆ, ವಿಧಾವತಿ= ವಿಧವಿಧವಾಗಿ ಅಧೋಮುಖವಾಗಿ ಹರಿಯುತ್ತದೆಯೋ, ಏವಂ= ಅದೇ ರೀತಿ, ಧರ್ಮಾನ್= ಭಗವದ್ ಧರ್ಮಗಳನ್ನು, ಪೃಥಕ್‌ಪಶ್ಯನ್= ಭಿನ್ನವೆಂದು ತಿಳಿದವನು, ತಾನೇವ= ಆ ಗುಣಗಳನ್ನು ಭಿನ್ನವೆಂದು ತಿಳಿದ ಸಮನಾಂತರದಲ್ಲಿಯೇ, ಅನುವಿಧಾವತಿ= ವಿಧವಿಧವಾದ ಅಧಃಪಾತಕ್ಕೆ ಒಳಗಾಗುತ್ತಾನೆ.

**ಅನುವಾದ–** 'ಪರ್ವತದಶಿಖರದಲ್ಲಿ ಬಿದ್ದ ಮಳೆಯು ಹೇಗೆ ತಪ್ಪಲಿನ ಪ್ರದೇಶದ ಕಡೆಗೆ ವಿಧವಿಧವಾಗಿ ಅಧೋಮುಖವಾಗಿ ಹರಿಯುತ್ತದೆಯೋ ಹಾಗೆ ಭಗವದ್ಧರ್ಮಗಳನ್ನು ಭಗವಂತನಿಂದ ಭಿನ್ನವಾಗಿ ಕಾಣುವ ಜೀವನು ತಕ್ಷಣದಲ್ಲಿ ಹಾಗೆಯೇ ವಿಧವಿಧವಾಗಿ ಅಧಃಪಾತಕ್ಕೆ ಗುರಿಯಾಗುತ್ತಾನೆ'. ಈ ಶ್ರುತಿಯು ಧರ್ಮಬಾಹುಲ್ಯವನ್ನು ಪ್ರತಿಪಾದನೆ ಮಾಡಿ ಭೇದವನ್ನು ನಿಷೇಧ ಮಾಡುವುದರಿಂದ ಇದೇ ವಿಶೇಷವನ್ನು ಪ್ರತಿಪಾದಿಸುವ ವಾಕ್ಯವಾಗುತ್ತದೆ.

**ಭಾವವಿಲಾಸಿನೀ–** ಸಾರ್ವಜ್ಞಾದಿಗುಣಾನಾಂ ಬ್ರಹ್ಮಣಶ್ಚಾಭೇದೇ ಧರ್ಮಧರ್ಮಿಭಾವೇ ಧರ್ಮಬಾಹುಲ್ಯೇ ಚ ಸ್ಪಷ್ಟಾಂ ಶ್ರುತಿಮಾಹ– **ಯಥೋದಕಮಿತಿ** ॥ ವಿಧಾವತಿ ವಿವಿಧಪ್ರಕಾರೇಣಾಧಃ ಪತತಿ । ತಾನೇವ ಧರ್ಮಭೇದಬೋಧಾನೇವ ಅನು ಅನುಸೃತ್ಯ ವಿಧಾವತಿ ತಮಸಿ ವಿಧಾವತಿ । ಮಿಥ್ಯಾಜ್ಞಾನತಾರತಮ್ಯೇನ ಪತತೀತ್ಯರ್ಥಃ ॥ ೧೦೧೧ ॥

**ವಿವರಣೆ–** ಸಾರ್ವಜ್ಞಾದ್ಧಿಗುಣಗಳಿಗೂ ಮತ್ತು ಬ್ರಹ್ಮನಿಗೂ ಅಭೇದವಿದೆಯೆಂಬ ವಿಷಯದಲ್ಲಿ ಧರ್ಮಧರ್ಮಿಭಾವವು ಇದೆಯೆಂಬ ವಿಷಯದಲ್ಲಿ ಮತ್ತು ಅನೇಕ ಧರ್ಮಗಳು ಇವೆ ಎಂಬ ವಿಷಯದಲ್ಲಿ ಸ್ಪಷ್ಟವಾದ ಶ್ರುತಿಯನ್ನು ಪ್ರಮಾಣತಯಾ ಉದಾಹರಿಸುತ್ತಾರೆ. ಶ್ರುತಿಯಲ್ಲಿ ವಿಧಾವತಿ ಎಂದರೆ ವಿಧವಿಧವಾಗಿ ಕೆಳಗೆ ಹರಿಯುತ್ತದೆ ಎಂದು ಅರ್ಥ. ಅದರಂತೆ ನಿತ್ಯಾಜ್ಞಾನಿಯಾದ ಜೀವನು ತನ್ನ ನಿತ್ಯಾಜ್ಞಾನಕ್ಕೆ ಅನುಗುಣವಾಗಿ ತಮಸ್ಸಿನೆಡೆಗೆ ಧಾವಿಸುತ್ತಾನೆ ಎಂಬ ಅರ್ಥವು ಸೂಚಿಸಲ್ಪಡುತ್ತದೆ. ಈ ಶ್ರುತಿಯೇ ವಿಶೇಷವನ್ನು ಪ್ರತಿಪಾದನೆ ಮಾಡುವ ಶ್ರುತಿ ಎಂದು ಗ್ರಂಥಕಾರರ ಅಭಿಪ್ರಾಯ.

**ಇತಿ ಶ್ರುತಿರ್ಯತೋ ಧರ್ಮಬಾಹುಲ್ಯಪ್ರತಿಪಾದಿಕಾ ।**
**ನಿಷೇಧತಿ ಪೃಥಗ್ಭಾವಮಾತ್ರಂ ಸೈವ ವಿಶೇಷವಾಕ್ ॥ ೧೦೧೨ ॥**

**ಆಪಾತಾನುಪಪನ್ನಾರ್ಥಾ ಸೋಪಪಾದಕವಾಙ್ ನ ಚೇತ್ ।**
**ಅಮಾನಂ ಸ್ಯಾನ್ನ ತದ್ ಯುಕ್ತಮತಸ್ತಂ ಚ ಬಲಾತ್ ಸ್ಪೃಶೇತ್ ॥ ೧೦೧೩ ॥**

**ಅರ್ಥ–** ಇತಿ= ಈ ರೀತಿಯಾಗಿ, ಧರ್ಮಬಾಹುಲ್ಯಪ್ರತಿಪಾದಿಕಾ= ಅನೇಕ ಧರ್ಮಗಳನ್ನು ಪ್ರತಿಪಾದನೆ ಮಾಡುವ, ಶ್ರುತಿಃ= ವೇದವಾಕ್ಯವು, ಯತಃ= ಯಾವ ಕಾರಣದಿಂದ, ಪೃಥಗ್ಭಾವಮಾತ್ರಂ= ಪೃಥಕ್‌ತ್ವವನ್ನು ಮಾತ್ರ, ನಿಷೇಧತಿ= ನಿಷೇಧ ಮಾಡುತ್ತದೆಯೋ, ಸೈವ= ಆ ವಾಕ್ಯವೇ, ವಿಶೇಷವಾಕ್= ವಿಶೇಷವನ್ನು ಪ್ರತಿಪಾದಿಸುವ ವಾಕ್ಯ.

ಆಪಾತಾನುಪಪನ್ನಾರ್ಥಾ= ಆಪಾತತಃ ಅನುಪಪನ್ನವಾದ ಅರ್ಥವನ್ನು ಹೇಳುವ, ಸಾ= ಆ ವಾಕ್ಯವು, ಉಪಪಾದಕವಾಕ್= ಉಪಪಾದಕವಾಕ್ಯವಾಗಿ, ನಚೇತ್= ಆಗದಿದ್ದರೆ, ಅಮಾನಂ ಸ್ಯಾತ್= ಅಪ್ರಮಾಣವಾಗುತ್ತದೆ, ತತ್= ಆ ಅಪ್ರಾಮಾಣ್ಯವು, ಯುಕ್ತಂ ನ= ವೇದವಾಕ್ಯಕ್ಕೆ ಯೋಗ್ಯವಾದುದಲ್ಲ, ಅತಃ= ಆ ಕಾರಣದಿಂದ, ತಂ ಚ= ಆ ಉಪಪಾದಕವನ್ನು ಸಹ, ಬಲಾತ್= ತನ್ನ ಸಾಮರ್ಥ್ಯದಿಂದಲೇ, ಸ್ಪೃಶೇತ್= ಸ್ಪರ್ಶಿಸುತ್ತದೆ (ಪ್ರತಿಪಾದನೆ ಮಾಡುತ್ತದೆ).

**ಅನುವಾದ–** **ಯಾವ ವೇದವಾಕ್ಯವು ಆಪಾತತಃ ಅನುಪಪನ್ನವಾದ ಅರ್ಥವನ್ನು ಹೇಳುತ್ತದೆಯೋ, ಅದೇ ಅನುಪಪತ್ತಿಯನ್ನು ಪರಿಹಾರ ಮಾಡುವ ಉಪಾಯವನ್ನೂ ಹೇಳುವ ವಾಕ್ಯವಾಗುತ್ತದೆ. ಇಲ್ಲದಿದ್ದರೆ ವೇದವಾಕ್ಯವು ಅಪ್ರಮಾಣವೆಂದಾಗುತ್ತದೆ. ಹಾಗೆ ಎಂದೂ ಅಂಗೀಕರಿಸಲು ಬರುವುದಿಲ್ಲ. ಆದ್ದರಿಂದ ಆ ವಾಕ್ಯವು ಉಪಪಾದಕವನ್ನು ತನ್ನ ಸಾಮರ್ಥ್ಯದಿಂದ ಸ್ಪರ್ಶಿಸಿ ಪ್ರತಿಪಾದನೆ ಮಾಡುತ್ತದೆ.**

**ಭಾವವಿಲಾಸಿನೀ–ಸೈವ ಉಕ್ತೇಯಂ ಶ್ರುತಿರೇವ ವಿಶೇಷವಾಕ್ ವಿಶೇಷ ಸಾಧಕವಾಕ್ ॥೧೦೧೨॥**

**ಕಥಮ್? ಇತ್ಯತಸ್ತದುಪಪಾದಯತಿ– ಆಪಾತೇತಿ ॥ ಅಭೇದೇ ಧರ್ಮಧರ್ಮಿಭಾವಸ್ಯಾನುಪ-'ಪನ್ನತಯಾ ಪ್ರತೀಯಮಾನತ್ವಾದಾಪಾತತೋಽನುಪ ಪನ್ನಾರ್ಥಾ ಇಯಂ ಶ್ರುತಿಃ ಸೋಪಪಾದಕವಾಗ್ ಉಪಪವಾದಕಶಕ್ತಿವಿಶೇಷವಾ ಚೇದ್ ಅಮಾನಂ ಸ್ಯಾದಿತಿ ಸಂಬಂಧಃ। ಅಯುಕ್ತಾರ್ಥಸ್ಯಾಗ್ನಿನಾ ಸಿಂಚೇದಿತ್ಯಾದಿವಾಕ್ಯವದಪ್ರಾಮಾಣ್ಯಾಪರಿಹಾರಾದಿತಿ ಭಾವಃ। ತದಪೌರುಷೇಯಶ್ರುತೇರಪ್ರಾಮಾಣ್ಯಮ್ । ಅತಃ ಉಕ್ತಾಭೇದಧರ್ಮಧರ್ಮಿ-ಭಾವಯೋರಪ್ರಾಮಾಣಿಕತ್ವಾಯೋಗಾತ್ । ತಮ್ ಉಪಪಾದಕಭೇದಪ್ರತಿನಿಧಿ ಭಗವಚ್ಛಕ್ತಿವಿಶೇಷಮ್ ॥ ೧೦೧೩ ॥**

**ವಿವರಣೆ–** ಹಿಂದೆ ಹೇಳಿದ ವಾಕ್ಯವು ಹೇಗೆ ವಿಶೇಷವನ್ನು ಉಪಪಾದನೆ ಮಾಡುವ ವಾಕ್ಯವಾಗುತ್ತದೆ ಎಂಬುದನ್ನು ಇಲ್ಲಿ ಸಮರ್ಥಿಸುತ್ತಾರೆ. ಅಭೇದವಿದ್ದರೆ ಧರ್ಮಧರ್ಮಿಭಾವ ಕೂಡುವುದಿಲ್ಲವಾದ್ದರಿಂದ ಅಭೇದವನ್ನು ಮತ್ತು ಧರ್ಮಧರ್ಮಿಭಾವವನ್ನು ಹೇಳುವ ಈ ಶ್ರುತಿವಾಕ್ಯವು ಆಪಾತತಃ ಎಂದರೆ ಮೇಲುನೋಟಕ್ಕೆ ಅನುಪಪನ್ನಾರ್ಥವನ್ನು ಹೇಳುತ್ತದೆ. ಈ ವಾಕ್ಯವು ಉಪಪಾದಕವನ್ನು ಹೇಳದಿದ್ದರೆ ಅಗ್ನಿನಾ ಸಿಂಚತಿ ಎಂಬ ವಾಕ್ಯವು ಹೇಗೆ ಅಪ್ರಮಾಣವಾಗುತ್ತದೆಯೋ ಅದರಂತೆ ಅಪ್ರಮಾಣವಾಗುತ್ತದೆ. ಅಪೌರುಷೇಯಶ್ರುತಿಯನ್ನು ಅಪ್ರಮಾಣವೆಂದು ಅಂಗೀಕರಿಸಲು ಬರುವುದಿಲ್ಲ. ಆದ್ದರಿಂದ ಅಭೇದವೂ ಧರ್ಮಧರ್ಮಿಭಾವವೂ ಪ್ರಾಮಾಣಿಕವಾದುದರಿಂದ ಅದಕ್ಕೆ ಉಪಪಾದಕವಾದ ಶಕ್ತಿವಿಶೇಷವನ್ನು ಈ ವಾಕ್ಯವೇ ಹೇಳುತ್ತದೆ.

**ತ್ರಿಕ್ಷಣಸ್ಥಾಯಿಯಾಗಾಖ್ಯಕರ್ಮಣಃ ಸ್ವರ್ಗಹೇತುತಾಮ್ ।**
**ಕಾಲಕ್ಷೇಪೇಽಪಿ ಶಂಸಂತೀ ಯಥಾರ್ಥೀ ಸೈವ ಪುಣ್ಯವಾಕ್ ॥ ೧೦೧೪ ॥**

**ಅರ್ಥ–** ತ್ರಿಕ್ಷಣಸ್ಥಾಯಿಯಾಗಾಖ್ಯಕರ್ಮಣಃ= ಮೂರು ಕ್ಷಣದಲ್ಲಿ ಮಾತ್ರ ಇರುವ ಯಾಗವೆಂಬ ಕರ್ಮಕ್ಕೆ, ಕಾಲಕ್ಷೇಪೇಽಪಿ= ಕಾಲದ ವ್ಯವಧಾನವಿದ್ದರೂ ಸಹ, ಸ್ವರ್ಗಹೇತುತಾಮ್= ಸ್ವರ್ಗಕಾರಣತ್ವವನ್ನು, ಶಂಸಂತೀ= ಹೇಳುವ ವಾಕ್ಯವು, ಯಥಾ= ಹೇಗೆ, ಸೈವ= ಅದೇ ವಾಕ್ಯವೇ, ಪುಣ್ಯವಾಕ್= ಅದೃಷ್ಟವನ್ನು ಹೇಳುವ ವಾಕ್ಯವಾಗಿ, ಅರ್ಥೀ= ಅರ್ಥವುಳ್ಳದ್ದಾಗುತ್ತದೆಯೋ, ಅದರಂತೆ ಈ ವಾಕ್ಯವೂ ಕೂಡ.

**ಅನುವಾದ–** ಕೇವಲ ಮೂರುಕ್ಷಣವಿರುವ ಯಾಗರೂಪವಾದ ಕ್ರಿಯೆಗೆ ಕಾಲಾಂತರದಲ್ಲಿ ದೊರೆಯುವ ಸ್ವರ್ಗಹೇತುತ್ವವನ್ನು ಹೇಳುವ ಶ್ರುತಿಯು ಹೇಗೆ ಪುಣ್ಯವನ್ನು ಹೇಳುವ (ಅದೃಷ್ಟರೂಪವನ್ನು ಹೇಳುವ) ವಾಕ್ಯವಾಗುತ್ತದೆಯೋ, ಹಾಗೆಯೇ ಹಿಂದೆ ಹೇಳಿದ ಶ್ರುತಿವಾಕ್ಯವೂ ಸಹ ವಿಶೇಷವನ್ನು ಹೇಳುವ ವಾಕ್ಯವಾಗುತ್ತದೆ.

**ಭಾವವಿಲಾಸಿನೀ–** ತತ್ರ ಪ್ರಾಕ್ ಸೂಚಿತಂ ಶ್ರೌತಂ ದೃಷ್ಟಾಂತಮಾಹ– **ತ್ರಿಕ್ಷಣೇತಿ** ॥ ತ್ರಿಕ್ಷಣಾವಸ್ಥಾಯಿಕರ್ಮಾತ್ಮಕಯಾಗನಿಷ್ಠಕಾಲಾಂತರಭಾವಿಸ್ವರ್ಗಸಾಧನತ್ವಾನ್ಯಥಾನುಪಪತ್ತ್ಯಾ ಸ್ವಪ್ನಪ್ರಮಾಣಾದೃಷ್ಟಸ್ಯಾಪಿ ತದ್ಘಟಕಾದೃಷ್ಟಸ್ಯ ಕಲ್ಪನವತ್ ಶ್ರುತ್ಯಾಽಮ್ರೇಡಿತಗುಣಗುಣಿ-ಭಾವಾನ್ಯಥಾನುಪಪತ್ತ್ಯೈವ ಘಟಕೀಭೂತೇಶ್ವರಶಕ್ತಿವಿಶೇಷಸಿದ್ಧಿರಿತಿ ಭಾವಃ ॥ ೧೦೧೪ ॥

**ವಿವರಣೆ–** ಹಿಂದೆ ಸೂಚಿಸಿದ ವೇದೋಕ್ತ ದೃಷ್ಟಾಂತವನ್ನು ಇಲ್ಲಿ ಹೇಳುತ್ತಾರೆ. ಯಾಗವು ಒಂದು ಕರ್ಮ, ಎಲ್ಲ ಕರ್ಮಗಳೂ ತ್ರಿಕ್ಷಣಾವಸ್ಥಾಯಿ ಎಂದು ಮೀಮಾಂಸಕರ ಮತ. ಯಾಗದಿಂದ ಸ್ವರ್ಗವುಂಟಾಗುತ್ತದೆ. ಆದರೆ ಸ್ವರ್ಗವುಂಟಾಗುವ ವೇಳೆಗೆ ಅದಕ್ಕಿಂತ ಬಹಳ ಮುಂಚೆಯೇ ಯಾಗವು ನಷ್ಟವಾಗಿ ಹೋಗಿದೆ. ಆದ್ದರಿಂದ ಕಾರ್ಯಅವ್ಯವಹಿತ ಪೂರ್ವಕ್ಷಣದಲ್ಲಿ ಇಲ್ಲದಿರುವುದು ಹೇಗೆ ಕಾರಣವಾಗುತ್ತದೆ ಎಂಬ ಅನುಪಪತ್ತಿಯನ್ನು ಪರಿಹಾರ ಮಾಡುವುದಕ್ಕಾಗಿ ಮಧ್ಯೆ ಅದೃಷ್ಟವನ್ನು ಕಲ್ಪನೆ ಮಾಡಿ, ಯಾಗದಿಂದ ಅದೃಷ್ಟವೂ, ಅದೃಷ್ಟದಿಂದ ಸ್ವರ್ಗವೂ ಉಂಟಾಗುತ್ತದೆ ಎಂದು ಹೇಳುತ್ತಾರೆ. ಆ ಅದೃಷ್ಟವನ್ನು ಕಲ್ಪನೆಮಾಡುವುದಕ್ಕೂ ಇದೇ ವಾಕ್ಯ ಎಂದರೆ 'ಸ್ವರ್ಗಕಾಮೋಯಜೇತ' ಎಂಬ ವಾಕ್ಯವೇ ಸಾಧಕವಾಗುತ್ತದೆ. ಹಾಗೇ ಇಲ್ಲಿ ಧರ್ಮಧರ್ಮಿಭಾವವನ್ನು ಹೇಳಿ ಭೇದವನ್ನು ನಿಷೇಧಿಸುವ ವಾಕ್ಯಕ್ಕೆ ವಿಶೇಷವೇ ಸಾಧಕವಾಗುತ್ತದೆ ಎಂದು ಅಭಿಪ್ರಾಯ.

**ನ ಸಹೇತ ಗುಣಶ್ಲೋಕಾನ್ ದೋಷಶ್ಲೋಕಾನ್ ಖಲೋಽರ್ಜಯೇತ್ ।**
**ತ್ಯಕ್ತ್ವಾನೇಕಗುಣೋಕ್ತೀನಾಂ ಕಿಂ ನ ವೈಗುಣ್ಯವಾಗ್ಭರಃ ॥ ೧೦೧೫ ॥**

**ಅರ್ಥ–** ಖಲಃ= ದುಷ್ಟನಾದವನು, ಗುಣಶ್ಲೋಕಾನ್= ಗುಣಗಳನ್ನು ಪ್ರತಿಪಾದಿಸುವ ಶ್ಲೋಕಗಳನ್ನು, ನ ಸಹೇತ= ಸಹಿಸುವುದಿಲ್ಲ, ದೋಷಶ್ಲೋಕಾನ್= ದೋಷಗಳನ್ನು ಹೇಳುವ ಶ್ಲೋಕಗಳನ್ನು, ಆರ್ಜಯೇತ್= ಸಂಪಾದಿಸುತ್ತಾನೆ, ಅನೇಕಗುಣೋಕ್ತೀನಾಂ= ಅನೇಕ ಗುಣೋಕ್ತಿಗಳನ್ನು, ತ್ಯಕ್ತ್ವಾ= ಪರಿತ್ಯಾಗ ಮಾಡಿ, ವೈಗುಣ್ಯವಾಗ್ಭರಃ= ನಿರ್ಗುಣತ್ವ ವಾಕ್ಯದಲ್ಲಿ ಆಗ್ರಹ ಉಳ್ಳವರು, ಕಿಂ ನ= ಇಲ್ಲವೇನು?

**ಅನುವಾದ–** ದುಷ್ಟನಾದವನು ಸಜ್ಜನರ ಗುಣಗಳನ್ನು ಹೇಳುವ ಶ್ಲೋಕಗಳನ್ನು ಸಹಿಸದೆ, ಇಲ್ಲದಿರುವ ಅವರ ದೋಷಗಳನ್ನು ಹೇಳುವ ಶ್ಲೋಕಗಳನ್ನು ಸಂಗ್ರಹ ಮಾಡುತ್ತಾನೆ. ಮಾಯಾವಾದಿಗಳು ಅನೇಕ ಗುಣೋಕ್ತಿಗಳನ್ನು ಪರಿತ್ಯಾಗಮಾಡಿ. ನಿರ್ಗುಣ-ವಾಕ್ಯವನ್ನೇ ಆದರಿಸಿಲ್ಲವೇನು?

**ಭಾವವಿಲಾಸಿನೀ–** ಲೌಕಿಕನೀತಿವಿರುದ್ಧತಯಾಽಪಿ ನೈರ್ಗುಣ್ಯವಾದಮುಪಹಸತಿ–ನ **ಸಹೇತೇತಿ** ॥ ಖಲಃ ಪರಗುಣಾಸಹಿಷ್ಣುರ್ದುರ್ಜನಃ ಪರೇಷಾಂ ಗುಣಪ್ರತಿಪಾದಕಶ್ಲೋಕಾನ್ ನ ಸಹೇತ । ದೋಷಪ್ರತಿಪಾದಕಶ್ಲೋಕಾನಾರ್ಜಯೇತ್ ಪ್ರಯತ್ನೇನ ಸಂಗೃಹ್ಣಾತಿ । ತತ್ ಕುತ್ರ ದೃಷ್ಟಮ್? ಇತ್ಯತ ಆಹ– **ತ್ಯಕ್ತ್ವೇತಿ** ॥ ತ್ಯಕ್ತಾಃ ಅನೇಕಾಃ ಸಾರ್ವಜ್ಞಾದಿಗುಣೋಕ್ತಯೋ ಯೈಸ್ತೇಷಾಂ ಮಾಯಾವಾದಿನಾಂ ನೈರ್ಗುಣ್ಯವಾಗ್ಭರಃ ನಿರ್ಗುಣತ್ವರೂಪದೋಷಪ್ರತಿಪಾದಕವಾಕ್ಯೇ ಆಗ್ರಹಃ ॥ ೧೦೧೫ ॥

**ವಿವರಣೆ–** ನೈಗುರ್ಣ್ಯವಾದವು ಲೋಕನೀತಿವಿರುದ್ಧವಾದದು ಎಂದು ಹೇಳಿ ಅಪಹಾಸವನ್ನು ಮಾಡುತ್ತಾರೆ. ಇನ್ನೊಬ್ಬರ ಗುಣವನ್ನು ಸಹಿಸದಿರುವ ದುರ್ಜನನು ಅವನ ಗುಣಗಳನ್ನು ಹೇಳುವ ಶ್ಲೋಕಗಳನ್ನು ಸಹಿಸುವುದಿಲ್ಲ. ಅವರಲ್ಲಿ ಇಲ್ಲದಿರುವ ದೋಷಗಳನ್ನು ಹೇಳುವ ಶ್ಲೋಕಗಳನ್ನು ಪ್ರಯತ್ನಪೂರ್ವಕವಾಗಿ ಸಂಗ್ರಹಿಸುತ್ತಾನೆ. ಇದಕ್ಕೆ ಉದಾಹರಣೆಯೆಂದರೆ ಮಾಯಾವಾದಿಗಳು. ದೇವರಲ್ಲಿ ಅನೇಕಾನೇಕ ಸಾರ್ವಜ್ಞ್ಯಾದಿ-ಗುಣಗಳನ್ನು ಹೇಳುವ ವಾಕ್ಯಗಳಿವೆ. ಅವರು ಅವುಗಳಲ್ಲಿ ಆದರವನ್ನು ಮಾಡದೆ 'ಕೇವಲೋ ನಿರ್ಗುಣಶ್ಚ ' ಎಂಬ ಒಂದು ವಾಕ್ಯದಲ್ಲಿ ನಿರ್ಗುಣತ್ವವನ್ನು ಹೇಳಿದ ಕಾರಣದಿಂದ ನಿರ್ಗುಣತ್ವದಲ್ಲೇ ಆಗ್ರಹಮಾಡುತ್ತಾರಷ್ಟೇ.

**ನಿಷ್ಫಲಂ ಜನ್ಮಿನಾಂ ಜನ್ಮ ಪರಲೋಕಫಲಂ ನ ಚೇತ್ ।**
**ಯಥಾ ತ್ರಿಗುಣಶೂನ್ಯತ್ವಾದ್ ಗುಣಪೂರ್ಣೋಽಪಿ ನಿರ್ಗುಣಃ ॥ ೧೦೧೬ ॥**

**ಅರ್ಥ–** ಯಥಾ= ಹೇಗೆ, ಗುಣಪೂರ್ಣೋಽಪಿ= ಹರಿಯು ಗುಣಪೂರ್ಣನಾದರೂ, ತ್ರಿಗುಣಶೂನ್ಯತ್ವಾತ್= ಸತ್ವಾದಿಗುಣರಹಿತನಾದುದರಿಂದ, ನಿರ್ಗುಣಃ= ನಿರ್ಗುಣನೆಂದು ಕರೆಸಿಕೊಳ್ಳಲ್ಪಡುತ್ತಾನೆಯೋ, ಜನ್ಮಿನಾಂ= ಜನ್ಮವುಳ್ಳವರ, ಜನ್ಮ= ಜನನವು, ಪರಲೋಕ-ಫಲಂ= ಪರಲೋಕವನ್ನು ಉಂಟುಮಾಡುವುದಾಗಿ, ನ ಚೇತ್= ಆಗದಿದ್ದರೆ, ನಿಷ್ಫಲಂ=

ವ್ಯರ್ಥವೆಂದು ಹೇಗೆ ಹೇಳಲ್ಪಡುತ್ತದೆಯೋ (ಆದರಂತೆ ಗುಣಪೂರ್ಣನು ಸತ್ತ್ವಾದಿಗುಣರಹಿತನಾದುದರಿಂದ ನಿರ್ಗುಣನೆಂದು ಹೇಳಲ್ಪಡುತ್ತಾನೆ).

**ಅನುವಾದ– ಪರಲೋಕವನ್ನು ಸಂಪಾದನೆ ಮಾಡದಿದ್ದರೆ ಜೀವನ ಜನ್ಮವು ನಿಷ್ಫಲವಾದುದು. ಹೇಗೆ ತ್ರಿಗುಣಶೂನ್ಯನಾದ ಕಾರಣದಿಂದ ಗುಣಪೂರ್ಣನಾದವನೂ ನಿರ್ಗುಣನೆಂದು ಕರೆಸಿಕೊಳ್ಳುತ್ತಾನೆಯೋ ಅದರಂತೆ.**

**ಭಾವವಿಲಾಸಿನೀ–** ಅಧುನಾ ನಿರ್ಗುಣವಾಕ್ಯಸ್ಯ ಗುಣತ್ರಯನಿಷೇಧಪರತ್ವಂ ಲೋಕನೀತ್ಯೋಪಪಾದಯತಿ– ನಿಷ್ಫಲಮಿತಿ ॥ ಜನ್ಮಿನಾಂ ಪ್ರಾಣಿನಾಂ ಯಥಾ ಫಲವಿಶೇಷಾಭಾವಮಾದಾಯ ನಿಷ್ಫಲಮಿತಿ ಸಾಮಾನ್ಯವಚನಂ ತಥಾ ಗುಣತ್ರಯಾಖ್ಯಗುಣನಿಷೇಧಮಭಿಪ್ರೇತ್ಯ ನೈರ್ಗುಣ್ಯೋಕ್ತಿರಿತಿ ಭಾವಃ ॥ ೧೦೧೬ ॥

**ವಿವರಣೆ–** ಈ ಶ್ಲೋಕದಲ್ಲಿ ನಿರ್ಗುಣವಾಕ್ಯಕ್ಕೆ ಗುಣತ್ರಯನಿಷೇಧಪರತ್ವವನ್ನು ಅರ್ಥವೆಂದು ಹೇಳಬೇಕೆಂದು ಲೋಕನೀತಿಯಿಂದ ಸಮರ್ಥಿಸುತ್ತಾರೆ. ಪರಲೋಕವನ್ನು ಸಂಪಾದಿಸದಿದ್ದರೆ ಮನುಷ್ಯನ ಜನ್ಮವು ವ್ಯರ್ಥ ಎಂದು ಹೇಳುತ್ತಾರೆ. ವಸ್ತುತಃ ವ್ಯರ್ಥವಲ್ಲ. ಈ ಲೋಕದಲ್ಲಿ ಅವನು ಅನುಭವಿಸುವ ಸುಖಾದಿಗಳು ಫಲವಾಗಿ ಇದ್ದೇ ಇವೆ. ಆದರೂ ವಿಶೇಷಫಲವಾದ ಪರಲೋಕವನ್ನು ಪಡೆಯದಿದ್ದರೆ ಜನ್ಮವು ವ್ಯರ್ಥವೆಂದು ಹೇಗೆ ಲೋಕರೂಢಿಯಲ್ಲಿದೆಯೋ, ಆದರಂತೆ ಗುಣಪೂರ್ಣನಾದ ಬ್ರಹ್ಮನು ನಿರ್ಗುಣನೆಂದು ಕರೆಯಲ್ಪಡುತ್ತಾನೆ. ನಿಗುರ್ಣನೆಂದರೆ ಯಾವ ಗುಣವೂ ಇಲ್ಲವೆಂದು ಅರ್ಥವಲ್ಲ. ಪ್ರಕೃತಿಯ ಮೂರುಗುಣಗಳಿಂದ ರಹಿತನಾದವನು ಎಂದು ಇಷ್ಟೇ ಅರ್ಥ. ಫಲವಿಶೇಷಾಭಾವವನ್ನು ವಿವಕ್ಷೆಮಾಡಿ ನಿಷ್ಫಲ ಎಂದು ಸಾಮಾನ್ಯವಚನವನ್ನು ಹೇಳುವಂತೆ ಗುಣವಿಶೇಷಾಭಾವವನ್ನು ವಿವಕ್ಷೆ ಮಾಡಿ ನಿರ್ಗುಣ ಎಂಬ ಸಾಮಾನ್ಯೋಕ್ತಿಯು ಪ್ರವೃತ್ತವಾಗುತ್ತದೆ ಎಂದು ಅಭಿಪ್ರಾಯ.

**ಜ್ಞಾನಾದಿಗುಣಶೂನ್ಯತ್ವಂ ಚೇತನಸ್ಯ ನ ಹಿ ಕ್ವಚಿತ್ ।**
**ಅತೋ ನಿರ್ಗುಣವಾಕ್ಯಾರ್ಥೋ ನ ಸರ್ವಗುಣಶೂನ್ಯತಾ ॥ ೧೦೧೭ ॥**

**ಅರ್ಥ–** ಚೇತನಸ್ಯ= ಚೇತನನಿಗೆ, ಜ್ಞಾನಾದಿಗುಣಶೂನ್ಯತ್ವಂ= ಜ್ಞಾನಾದಿಗುಣಶೂನ್ಯತ್ವವು, ಕ್ವಚಿತ್ ನಹಿ= ಯಾವಕಾಲದಲ್ಲಿಯೂ ಉಂಟಾಗುವುದಿಲ್ಲ, ಅತಃ= ಆದ್ದರಿಂದ, ಸರ್ವಗುಣಶೂನ್ಯತಾ= ಸರ್ವಗುಣರಾಹಿತ್ಯವು, ನಿರ್ಗುಣವಾಕ್ಯಾರ್ಥೋ ನ= ನಿರ್ಗುಣವಾಕ್ಯದ ಅರ್ಥವಲ್ಲ.

**ಅನುವಾದ–** ನಿರ್ಗುಣ ಎಂಬ ಶಬ್ದಕ್ಕೆ ಸರ್ವಗುಣಶೂನ್ಯತ್ವವನ್ನು ಅರ್ಥವೆಂದು ಹೇಳಬಾರದು. ಏಕೆಂದರೆ ಚೇತನನಿಗೆ ಸರ್ವಗುಣಾಂತರ್ಗತವಾದ ಜ್ಞಾನರೂಪವಾದ ಗುಣದ ಶೂನ್ಯತ್ವವು ಎಂದೂ ಬರುವುದಿಲ್ಲ. ಆದ್ದರಿಂದ ಯಾವ

ವಾದಿಗಳೂ ಸಹ ನಿರ್ಗುಣಶಬ್ದಕ್ಕೆ ಸರ್ವಗುಣಶೂನ್ಯ ಎಂಬ ಅರ್ಥವನ್ನು ಮಾಡಲೇ ಬಾರದು.

**ಭಾವವಿಲಾಸಿನೀ–** ಇದಾನೀಂ ಸರ್ವೈರಪಿ ನಿರ್ಗುಣಶ್ರುತೇಃ ಸಙ್ಕೋಚ ಏವಾಶ್ರಯಣೀಯ ಇತಿ ಭಾವೇನಾಹ– **ಜ್ಞಾನಾದಿಗುಣಶೂನ್ಯತ್ವಮಿತಿ** ॥ ಚೇತನಸ್ಯೇತಿ ಹೇತುಗರ್ಭವಿಶೇಷಣಮ್ । ಅನ್ಯಥಾ ಚೇತನತ್ವಹಾನೇರಿತಿ ಭಾವಃ । ಅತಃ ಜ್ಞಾನಾದಿಗುಣಾನಾಮಾವಶ್ಯಕತ್ವಾತ್ ॥೧೦೧೭॥

**ವಿವರಣೆ–** ಈ ಶ್ಲೋಕದಲ್ಲಿ ನಿರ್ಗುಣಶ್ರುತಿಗೆ ಎಲ್ಲರೂ ಅರ್ಥಸಂಕೋಚವನ್ನೇ ಮಾಡಬೇಕು ಎಂದು ಉಪಪಾದನೆ ಮಾಡುತ್ತಾರೆ. ನಿರ್ಗುಣಶಬ್ದಕ್ಕೆ ಯಾವಗುಣವೂ ಇಲ್ಲ ಎಂದು ಅರ್ಥವನ್ನು ಮಾಡಿದರೆ ಜ್ಞಾನರೂಪಗುಣವೂ ಇಲ್ಲವೆಂದು ಅರ್ಥವಾಗುತ್ತದೆ. ಆದರೆ ಜೀವನು ಚೇತನನಾದ ಕಾರಣದಿಂದಲೇ ಅವನಲ್ಲಿ ಜ್ಞಾನರೂಪವಾದ ಗುಣವು ಯಾವಾಗಲೂ ಇದ್ದೇ ಇರುತ್ತದೆ. ಆದ್ದರಿಂದ ಜ್ಞಾನರೂಪವಾದ ಗುಣವನ್ನು ನಿಷೇಧಮಾಡಲು ಬರುವುದಿಲ್ಲ ಆದ್ದರಿಂದ ಹೇಗಾದರೂ ಸಂಕೋಚವನ್ನು ಮಾಡಲೇಬೇಕು. ಆದ್ದರಿಂದ ಗುಣತ್ರಯಪರವಾಗಿ ಸಂಕೋಚ ಮಾಡುವುದು ಒಳ್ಳೆಯದು.

**ತಸ್ಮಾದ್ ವಿಷ್ಣೋರ್ಗುಣಾಃ ಸರ್ವೇ ನಿತ್ಯಾಃ ಸತ್ಯಾಶ್ಚ ಸರ್ವದಾ ।**
**ಅನಂತಾಃ ಶ್ರುತಿಸದ್ಯುಕ್ತಿಸಿದ್ಧಾಶ್ಚೇತ್ಯತಿಮಂಗಲಮ್ ॥ ೧೦೧೮ ॥**

**ಅರ್ಥ–** ತಸ್ಮಾತ್= ಆ ಕಾರಣದಿಂದ, ವಿಷ್ಣೋಃ= ವಿಷ್ಣುವಿನ, ಸರ್ವೇ= ಎಲ್ಲಾ, ಗುಣಾಃ= ಗುಣಗಳು, ನಿತ್ಯಾಃ= ನಿತ್ಯವಾದವುಗಳು, ಸರ್ವದಾ= ಯಾವಾಗಲೂ, ಸತ್ಯಾಶ್ಚ= ಸತ್ಯವಾದವುಗಳು, ಅನಂತಾಃ= ಅನಂತವಾದವುಗಳು, ಶ್ರುತಿಸದ್ಯುಕ್ತಿಸಿದ್ಧಾಶ್ಚ= ವೇದಗಳಿಂದ ಮತ್ತು ಸದ್ಯುಕ್ತಿಗಳಿಂದ ಸಿದ್ಧವಾದವು, ಇತಿ= ಎಂದು, ಅತಿ ಮಂಗಲಂ= ಪರಮ ಮಂಗಲ.

**ಅನುವಾದ–** ಆದ್ದರಿಂದ ವಿಷ್ಣುವಿನ ಎಲ್ಲಾ ಗುಣಗಳೂ ಯಾವಾಗಲೂ ಸತ್ಯವಾದುವು ಮತ್ತು ನಿತ್ಯವಾದುವುಗಳು. ಅವು ಅನಂತವಾಗಿವೆ. ಮತ್ತು ಶ್ರುತಿಗಳಿಂದಲೂ ನಿರ್ದುಷ್ಟಯುಕ್ತಿಗಳಿಂದಲೂ ಸಿದ್ಧವಾಗಿವೆ ಎಂಬಲ್ಲಿ ಪರಮಮಂಗಳ.

**ಭಾವವಿಲಾಸಿನೀ–** ಗುಣಸೌರಭಪ್ರಮೇಯಮುಪಸಂಹರತಿ– **ತಸ್ಮಾದಿತಿ** ॥ ತಸ್ಮಾತ್ ಸರ್ವಗುಣಪೂರ್ಣತ್ವಸ್ಯ ಶ್ರುತಿಯುಕ್ತಿರೂಪಸಾಧಕಸದ್ಭಾವಾದ್ ಬಾಧಕಾಭಾವಾಚ್ಚ ಸರ್ವದಾ ನಿತ್ಯಾಃ ಸತ್ಯಾಶ್ಚೇತಿ ಸಂಬಂಧಃ । ತೇನ ಬಹುಕಾಲೀನತ್ವರೂಪನಿತ್ಯತ್ವಂ ವ್ಯಾವಹಾರಿಕಸತ್ಯತ್ವಂ ಚ ವ್ಯಾವರ್ತ್ಯತೇ । ಇತಿ ಉಕ್ತಂ ಸರ್ವಂ ಪ್ರಮೇಯಮ್ ಅತಿಮಂಗಲಂ ಪರಮಮಂಗಲಮ್ ॥ ೧೦೧೮ ॥

**ವಿವರಣೆ–** ಈ ಶ್ಲೋಕದಲ್ಲಿ ಗ್ರಂಥಕಾರರಾದ ಶ್ರೀವಾದಿರಾಜರು ಗುಣಸೌರಭಪ್ರಮೇಯವನ್ನು ಉಪಸಂಹಾರ ಮಾಡುತ್ತಾರೆ. ವಿಷ್ಣುವಿನ ಗುಣಪೂರ್ಣತ್ವದ

ವಿಷಯದಲ್ಲಿ ಶ್ರುತಿ ಮತ್ತು ಯುಕ್ತಿರೂಪವಾದ ಸಾಧಕವಿರುವುದರಿಂದ ಮತ್ತು ಬಾಧಕವಿಲ್ಲದಿರುವುದರಿಂದ ಗುಣಗಳು ಯಾವಾಗಲೂ ನಿತ್ಯವಾಗಿವೆ ಮತ್ತು ಸತ್ಯವಾಗಿವೆ ಎಂದು ಅರ್ಥ. ಆದ್ದರಿಂದ ನಿತ್ಯತ್ವಕ್ಕೆ ಬಹುಕಾಲಸ್ಥಿತಿರೂಪವಾದ ಅರ್ಥವನ್ನಾಗಲೀ, ಸತ್ಯ ಎಂದರೆ ವ್ಯಾವಹಾರಿಕಸತ್ಯ ಎಂಬ ಅರ್ಥವನ್ನಾಗಲೀ ಮಾಡಬಾರದು ಎಂದು ಗ್ರಂಥಕಾರರು ಸೂಚಿಸುತ್ತಾರೆ. ಹೀಗೆ ತಾವು ಹೇಳಿದ ಪ್ರಮೇಯವು ಪರಮಮಂಗಳಕರವಾದುದು ಎಂದು ಹೇಳಿ ಉಪಸಂಹಾರ ಮಾಡುತ್ತಾರೆ.

**ವಾದಿರಾಜಾಖ್ಯಯತಿನಾ ಸಾಧಿತಾ ಯುಕ್ತಿಮಲ್ಲಿಕಾ ।**
**ಗುಣಸೌರಭಸರ್ವಸ್ವಂ ಮುದೇ ವಿಷ್ಣೋರ್ನ್ಯವೇದಯತ್ ॥ ೧೦೧೯ ॥**

**ಅರ್ಥ–** ವಾದಿರಾಜಾಖ್ಯಯತಿನಾ= ವಾದಿರಾಜ ಎಂಬ ಯತಿಗಳಿಂದ, ಸಾಧಿತಾ= ಸಂಪಾದಿಸಲ್ಪಟ್ಟ, ಯುಕ್ತಿಮಲ್ಲಿಕಾ= ಈ ಯುಕ್ತಿಮಲ್ಲಿಕಾ ಗ್ರಂಥವು (ಯುಕ್ತಿಮಲ್ಲಿಕಾ ಅಭಿಮಾನಿಯಾದ ಭಾರತೀದೇವಿಯು), ಗುಣಸೌರಭಸರ್ವಸ್ವಂ= ಗುಣಸೌರಭದ ಸಾರಸರ್ವಸ್ವವನ್ನು, ವಿಷ್ಣೋಃ ಮುದೇ= ವಿಷ್ಣುವಿಗೆ ಪ್ರೀತ್ಯರ್ಥವಾಗಿ, ವಿಷ್ಣೋರ್ನ್ಯವೇದಯತ್= ವಿಷ್ಣುವಿಗೆ ಅರ್ಪಿಸಿತು (ಅರ್ಪಿಸಿದಳು).

**ಅನುವಾದ–** ವಾದಿರಾಜರೆಂಬ ಯತಿಯಾದ ನನ್ನಿಂದ ಸಾಧಿತವಾದ ಯುಕ್ತಿಮಲ್ಲಿಕೆಯು ಗುಣಸೌರಭದ ಸರ್ವಸ್ವವನ್ನು ಸಂತೋಷದಿಂದ ವಿಷ್ಣುವಿಗೆ ಅರ್ಪಿಸಿದಳು.

**ಭಾವವಿಲಾಸಿನೀ–** ಇದಾನೀಂ ಗ್ರನ್ಥಕಾರಃ ಸ್ವಕೃತಯುಕ್ತಿಮಲ್ಲಿಕಾಪ್ರಥಮಪರಿಚ್ಛೇದಸ್ಯ ಗುಣೋಚಿತಂ ನಾಮ ಕುರ್ವನ್ ಭಾರತೀಕೃಪಯಾಽಸ್ಯ ಗ್ರನ್ಥಸ್ಯ ಕೃತತ್ವಾದ್ ಗ್ರನ್ಥಾಭಿಮಾನಿನ್ಯಾ ತಯೈವ ತಂ ಪರಿಚ್ಛೇದಾರ್ಥಂ ಹರಾವರ್ಪಯತಿ– **ವಾದಿರಾಜೇತಿ** ॥ ಸಾಧಿತಾ ಸಮ್ಪಾದಿತಾ । ಭಾರತೀಪಕ್ಷೇ ಸ್ವವಾಗ್‌ವೈಖರೀಪ್ರದತ್ವೇನ ಸಮ್ಪಾದಿತಾ ಯುಕ್ತಿಮಲ್ಲಿಕಾಗ್ರನ್ಥಃ ಯುಕ್ತಯೋ ಮಲ್ಲಿಕಾ ಇವ ಬುಧಜನಮನೋ ವಾಸಯನ್ತ್ಯೋ ಯಸ್ಯಾಸ್ಸೇತಿ ಗ್ರನ್ಥಾಭಿಮಾನಿನೀ ಭಾರತೀ ಚ ಗುಣಸೌರಭಸರ್ವಸ್ವಂ ಗುಣಪ್ರತಿಪಾದಕಶ್ರೌತಪದವಾಸನಾಭರಿತತ್ವಾದ್ ಗುಣಸೌರಭಾಖ್ಯ-ಸ್ವಪ್ರಮೇಯಪರಿಚ್ಛೇದಸಮ್ಪದಂ ವಿಷ್ಣೋರ್ನ್ಯವೇದಯತ್ । ಅನಯಾ ತ್ವಂ ಪ್ರೀತೋ ಭವೇತಿ ವಿಷ್ಣವೇ ನಿವೇದಿತವತೀತ್ಯರ್ಥಃ। ಯಥಾ ಹರಿಚರಣಸಮರ್ಪಿತಾ ಮಲ್ಲಿಕಾ ಸ್ವಸೌರಭಂ ಹರಯೇ ಸಮರ್ಪಯತಿ, ತಥೇತಿ ರೂಪಕಾಂತರ್ಲೀನೋಪಮಾ ಚ ಧ್ವನಿತೇತಿ ದ್ರಷ್ಟವ್ಯಮ್ ॥೧೦೧೯॥

**ವಿವರಣೆ–** ಹೀಗೆ ಗ್ರಂಥಕಾರರು ತಾವು ರಚಿಸಿದ ಯುಕ್ತಿಮಲ್ಲಿಕಾಗ್ರಂಥದ ಪ್ರಥಮಪರಿಚ್ಛೇದಕ್ಕೆ ಗುಣಸೌರಭ ಎಂಬ ಉಚಿತವಾದ ನಾಮಕರಣವನ್ನು ಮಾಡುತ್ತಾ ಭಾರತೀದೇವಿಯ ಕೃಪೆಯಿಂದ ಈ ಗ್ರಂಥವು ಮಾಡಲ್ಪಟ್ಟಿರುವುದರಿಂದ ಗ್ರಂಥಾಭಿಮಾನಿನಿಯಾದ ಭಾರತೀದೇವಿಯ ಮುಖಾಂತರವೇ ಈ ಪರಿಚ್ಛೇದವನ್ನು ಹರಿಗೆ ಅರ್ಪಿಸುತ್ತಾರೆ. ಯುಕ್ತಿಮಲ್ಲಿಕಾಗ್ರಂಥವು ವಾದಿರಾಜರಿಂದ ಸಾಧಿತ ಎಂದರೆ

ಸಂಪಾದಿಸಲ್ಪಟ್ಟಿದೆ. ಭಾರತೀದೇವಿಯ ಪಕ್ಷದಲ್ಲಿ ತಮಗೆ ವಾಗ್ವೈಖರಿಯನ್ನು ನೀಡುವಂತೆ ಪ್ರಸನ್ನೀಕರಿಸಿಕೊಳ್ಳಲ್ಪಟ್ಟ ಭಾರತೀದೇವಿಯೂ ಸಹ ಯುಕ್ತಿಮಲ್ಲಿಕಾ ಎಂದರೆ ಯುಕ್ತಿಗಳೆಂಬ ಮಲ್ಲಿಗೆ ಹೂಗಳನ್ನು ಮುಡಿದವಳು. ಹೇಗೆ ಮಲ್ಲಿಗೆ ಹೂಗಳು ತಮ್ಮ ಸುವಾಸನೆಯಿಂದ ಎಲ್ಲರ ಮನಸ್ಸನ್ನೂ ಸಂತೋಷಪಡಿಸುತ್ತವೆಯೋ, ಅದರಂತೆ ಯುಕ್ತಿಮಲ್ಲಿಕಾಗ್ರಂಥವೂ ಅದಕ್ಕೆ ಅಭಿಮಾನಿನಿಯಾದ ಭಾರತೀದೇವಿಯೂ ಎಲ್ಲ ಸಜ್ಜನರನ್ನು ಸಂತೋಷಪಡಿಸುವವಳು. ಅಂತಹ ಭಾರತಿಯು ಗುಣಸೌರಭಸರ್ವಸ್ವ ಎಂದರೆ ಗುಣವನ್ನು ಪ್ರತಿಪಾದಿಸುವ ಶ್ರುತಿಪದಗಳ ಸುವಾಸನೆಯಿಂದ ಭರಿತವಾದ ಗುಣಸೌರಭ ಎಂಬ ಪ್ರಮೇಯಪರಿಚ್ಛೇದದ ಸಂಪತ್ತನ್ನು ಹರಿಗೆ ಅರ್ಪಿಸಿದಳು. ಇದರಿಂದ ನೀನು ಪ್ರಸನ್ನನಾಗು ಎಂದು ಹರಿಗೆ ಅರ್ಪಿಸಿದಳು ಎಂದು ಅರ್ಥ. ಹೇಗೆ ಹರಿಯ ಚರಣದಲ್ಲಿ ಸಮರ್ಪಿತವಾದ ಮಲ್ಲಿಗೆಯ ಹೂವು ತನ್ನ ಸೌರಭವನ್ನು ಹರಿಗೆ ಸಮರ್ಪಿಸುತ್ತದೆಯೋ, ಅದರಂತೆ ಭಾರತೀದೇವಿಯು ಈ ಗ್ರಂಥದ ಸರ್ವಸಾರಸೌಂದರ್ಯವನ್ನು ಹರಿಗೆ ಅರ್ಪಿಸಿದಳು ಎಂದು ಅರ್ಥ.

ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮದ್ವಾದಿರಾಜಭಗವತ್ಪಾದ
ವಿರಚಿತಾಯಾಃ ಯುಕ್ತಿಮಲ್ಲಿಕಾಯಾಃ ಟೀಕಾಯಾಂ
ಸುರೋತ್ತಮತೀರ್ಥಕೃತಾಯಾಂ ಭಾವವಿಲಾಸಿನ್ಯಾಂ
ಗುಣಸೌರಭಸರ್ವಸ್ವವ್ಯಾಖ್ಯಾ ಸಂಪೂರ್ಣಾ

—0—

# ಗುಣಸೌರಭೋದಾಹೃತಸ್ವಾರಸಿಕಯುಕ್ತಯಃ

ಶ್ರೀಶಸ್ತೇ ಸುಶ್ರಿಯಂ ದದ್ಯಾದಾಯುರ್ವಾಯುಸುತಪ್ರಿಯಃ ।
ಭೂಮಿಂ (ತೇ) ಶ್ರೀವಾಮನೋ ದದ್ಯಾದರೀನ್ ಹಂತು ನೃಕೇಸರೀ ॥ ೫ ॥

ಲಕ್ಷ್ಮೀಪತಿಯಾದ ಶ್ರೀಕರನು ಈ ಗ್ರಂಥವನ್ನು ಅಧ್ಯಯನ-ಅಧ್ಯಾಪನ ಮಾಡುವವರಿಗೆ ಯೋಗ್ಯವಾದ ಸಂಪತ್ತನ್ನು ನೀಡಲಿ. ರಾಮನು ಬಹುಕಾಲ ಅಧ್ಯಯನಕ್ಕೆ ಬೇಕಾದ ಆಯುಷ್ಯವನ್ನು ನೀಡಲಿ! ವಾಮನನು ಅಧ್ಯಯನಕ್ಕೆ ಉಚಿತವಾದ ಸ್ಥಾನವನ್ನು ಕಲ್ಪಿಸಿಕೊಡಲಿ. ನರಸಿಂಹನು ವಿಘ್ನಕಾರಕರಾದ ಒಳ-ಹೊರಗಿನ ಶತ್ರುಗಳನ್ನು ಸದೆಬಡೆಯಲಿ!!

ಬೌದ್ಧಜೈನಾಗಮೌ ಪೂರ್ವಪಕ್ಷೌ ಸರ್ವಾಗಮಸ್ಯ ಹಿ ।
ತತಃ ಪರಸ್ತಾಜ್ಜಾತೇಷು ಮತೇಷು ಚ ಯಥಾಕ್ರಮಮ್ ।
ಪೂರ್ವಃ ಪೂರ್ವಃ ಪೂರ್ವಪಕ್ಷಃ ಯಾವನ್ಮಧ್ವಮತೋದಯಃ ॥ ೮ ॥

ಅಂತೇ ಸಿದ್ಧಸ್ತು ಸಿದ್ಧಾಂತೋ ಮಧ್ವಸ್ಯಾಗಮ ಏವ ಹಿ ।
ನಿರ್ಣೇತುಂ ಶಕ್ಯತೇ ಯುಕ್ತಾಯುಕ್ತಪಕ್ಷವಿಮರ್ಶಿಭಿಃ ॥ ೯ ॥

ಜಗತ್ತಿನ ಅನೇಕ ಮತಗಳ ನಡುವೆ ಬೌದ್ಧ-ಜೈನ ಮತಗಳು ಮೊತ್ತ ಮೊದಲಿನ ಮತಗಳು. ಆದ್ದರಿಂದ ಆ ಮತಗಳು (ಎಲ್ಲ ಮತಗಳಿಗೂ) ಪೂರ್ವಪಕ್ಷ ಎಂದು ಪರಿಗಣಿಸಲ್ಪಡುವುವು. ಇವೆರಡು ಮತಗಳು ಪ್ರವೃತ್ತಿಯಾದ ಬಳಿಕ ಅನೇಕ ಮತಗಳು ಪ್ರವೃತ್ತವಾಗಿವೆ. ಅನಂತರ ಪ್ರವೃತ್ತವಾದ ಮತಗಳಲ್ಲಿ ಮೊದಲು ಪ್ರವೃತ್ತವಾದ ಮತವು ಪೂರ್ವಪಕ್ಷವೆಂದೂ (ಆ ಮತದ ಅಭಿಪ್ರಾಯವು ನಿರಾಕಾರ್ಯವೆಂದೂ) ನಂತರ ಬರುವ ಮತವು ಸಿದ್ಧಾಂತವೆಂದೂ ಎಲ್ಲರೂ ಒಪ್ಪಬೇಕಾಗುತ್ತದೆ. ಅನಂತರ ಬಂದ ಮತವು ತನಗಿಂತ ಮೊದಲು ಬಂದ ಮತವನ್ನು ನಿರಾಕರಿಸುತ್ತದೆ ಎಂದು ನಿರ್ಣಯವಾಗಿದೆ. ಈ ಮತಗಳ ಪಟ್ಟಿಯಲ್ಲಿ ಕೊನೆಗೆ ಸಿದ್ಧವಾದುದು ಮಧ್ವಮತ. ಆದ್ದರಿಂದ ಹಿಂದಿನ ಮತಗಳೆಲ್ಲವೂ ಪೂರ್ವಪಕ್ಷವೆಂದೇ ನಿರ್ಣಯವಾಯಿತು. ಮಧ್ವಮತದ ಉದಯವಾದ ಬಳಿಕ, ಇಲ್ಲಿಯ ತನಕ ಇದನ್ನು ನಿರಾಕರಿಸುವ ಸಯುಕ್ತಿಕವಾದ ಇನ್ನೊಂದು ಯಾವ ಮತವೂ ತಲೆ ಎತ್ತಿಲ್ಲವಾದ ಕಾರಣ, ಮಧ್ವಮತವೇ ಸಿದ್ಧಾಂತವೆಂದು ಯುಕ್ತಾಯುಕ್ತವನ್ನು ವಿಮರ್ಶಿಸುವ ವಿದ್ವಾಂಸರಿಂದ ನಿರ್ಣಯಿಸಲು ಸಾಧ್ಯವಾಗುತ್ತದೆ.

ಅತೋ ಮಾಯಾವಾದಮತಾನ್ನಾಮ್ನೈವಾತಿಜುಗುಪ್ಸಿತಾತ್ ।
ಭೀತೋಽಹಮಭಜಂ ತತ್ವವಾದಿನಾಮೇವ ಪದ್ಧತಿಮ್ ॥ ೨೦ ॥

ಮಾಯಾ ಎಂಬ ಶಬ್ದವೇ ವಂಚನೆಯನ್ನು ಸೂಚಿಸುವುದರಿಂದ ಮಾಯಾವಾದ ಎಂಬ ಶಬ್ದವು ಬಹಳ ಜುಗುಪ್ಸಿತವಾದದು. ತತ್ವವಾದವೆಂಬ ಹೆಸರಾದರೋ ತತ್ವ ಎಂದರೆ

ಯಥಾರ್ಥಜ್ಞಾನವಿಷಯ ಎಂದು ಅರ್ಥವಾದ್ದರಿಂದ ಹೆಸರಿನಿಂದಲೇ ಆಕರ್ಷಕವಾದದು. ಆದ್ದರಿಂದ ತತ್ತ್ವವಾದವನ್ನೇ ಅನುಸರಿಸಿದ್ದೇನೆ.

**ತತ್ಪರತ್ವಾನ್ನಿಷೇದ್ಧೃತ್ವಾದಂತೇಃ ಸಿದ್ಧೇಃ ಪ್ರಭುಸ್ತುತೇಃ ।**
**ನಾಮ್ನಾ ಚಾತ್ಯುಲ್ಲಸಂತ್ಯಾಸೀತ್ ವಲ್ಲೀ ತೇ ಯುಕ್ತಿಮಲ್ಲಿಕೇ ॥ ೨೩ ॥**

೧. ಎಲ್ಲಾ ಸಿದ್ಧಾಂತಗಳ ನಂತರ ಸಿದ್ಧವಾದ ಕಾರಣದಿಂದ, ೨. ಎಲ್ಲಾ ಸಿದ್ಧಾಂತಗಳನ್ನು ನಿರಾಕರಿಸುವ ಕಾರಣದಿಂದ, ೩. ಎಲ್ಲಾ ಆಗಮಗಳ ಪ್ರವೃತ್ತಿಯು ಕೊನೆಗೊಳ್ಳುತ್ತಿರಲು, ಮೂರು ಸಾಧಕ ಪ್ರಮಾಣಗಳ ಮೂಲಕ ನಿಷ್ಪನ್ನವಾದ ಮತವಾದುದರಿಂದ, ೪. ನಾರಾಯಣನ ಗುಣಪೂರ್ಣತ್ವವನ್ನು ವರ್ಣನೆ ಮಾಡುವ ಕಾರಣದಿಂದ, ೫. ಜಗತ್ಸತ್ಯತ್ವ ವನ್ನು ಹೇಳುವ 'ತತ್ವವಾದ' ಎಂಬ ನಾಮ ಇರುವ ಕಾರಣದಿಂದಲೂ, ಹೇ ಯುಕ್ತಿಮಲ್ಲಿಕೆಯೇ! ನಿನಗೆ ಆಶ್ರಯಭೂತವಾದ ಮಧ್ವಮತವೆಂಬ ಬಳ್ಳಿಯು ಐದು ಕಾರಣಗಳಿಂದ ಅತಿಶಯವಾಗಿ ಬಲವನ್ನು ಹೊಂದಿ ಶೋಭಿಸುತ್ತಿದೆ.

**ನ ಸ್ನೇಹಾನ್ನಚ ವಿಸ್ನೇಹಾದ್ಯುಕ್ತ್ಯಾಕೃಷ್ಟೇನ ಕೇವಲಮ್ ।**
**ಯತಃ ಕೃತಾಽಸಿ ತತ್ತರ್ಕರಸಿಕಾನಾಂ ಮುದೇ ಭವ ॥ ೨೪ ॥**

ರಾಜರು ತಮ್ಮ ಗ್ರಂಥಾಭಿಮಾನಿಯನ್ನೇ ಸಂಬೋಧಿಸಿ ಹೇಳುತ್ತಿದ್ದಾರೆ. 'ಹೇ ಯುಕ್ತಿಮಲ್ಲಿಕೆಯೇ ! ನಿನ್ನನ್ನು ಪೋಣಿಸುವ ನನಗೆ ಯಾರ ಬಗ್ಗೆಯೂ ಸಿಟ್ಟು ಮಮತೆಗಳಿಲ್ಲ. ಪರಮತದ್ವೇಷದಿಂದಾದಗಲೀ, ಸ್ವಮತಸ್ನೇಹದಿಂದಾಗಲೀ ನಿನ್ನನ್ನು ರಚಿಸಿಲ್ಲ. ಯುಕ್ತಿಗಳಿಗೆ ಆಕರ್ಷಿತನಾಗಿ ನಿನ್ನನ್ನು ರಚಿಸಿದ್ದೇನೆ. ಆದ ಕಾರಣ ಯುಕ್ತಿವಾದ-ಕುಶಲರಾದ ಸಜ್ಜನರ ಮನಸ್ಸಿಗೆಲ್ಲ ಸಂತೋಷದಾಯಕಳಾಗಿರು.

**ಹೃದ್ಯಪದ್ಯರಸಸ್ನಿಗ್ಧಾಂ ಸದ್ಯೋ ಹೃದ್ರೋಚನೋದ್ಯತಾಮ್ ।**
**ವಿದ್ಯಾಮದ್ಯಾನವದ್ಯಾಂ ಮೇ ಕೋ ದ್ವೇಷ್ಟ್ಯುದ್ಧತಪದ್ಧತಿಃ ॥ ೨೫ ॥**

ನನ್ನ ಈ ಗ್ರಂಥವು ಮನಸ್ಸಿನಲ್ಲಿ ಚಿರಕಾಲ ನಿಲ್ಲುವಂತಹ ಪದ್ಯಗಳಿಂದ, ಅಲಂಕಾರ ರಸಗಳಿಂದ ಮನೋಹರವಾಗಿದೆ. ಓದಿದ ಮಾತ್ರಕ್ಕೆ ಹೃದಯಾಹ್ಲಾದವನ್ನುಂಟು ಮಾಡುವುದರಲ್ಲಿ ಸಮರ್ಥವಾಗಿದೆ. ಇಂತಹ ನಿರ್ದುಷ್ಟವಾದ ನನ್ನ ವಿದ್ಯೆಯನ್ನು ಇಂದು ದ್ವೇಷಿಸುವ ವ್ಯಕ್ತಿಯಾರಿದ್ದಾನೆ? ಉದ್ಧಟ ಸ್ವಭಾವವಿಲ್ಲದವನು ದ್ವೇಷ ಮಾಡದೆ ಗುಣದಿಂದ ಆಕರ್ಷಿತನಾಗುತ್ತಾನೆ. ಒಂದು ವೇಳೆ ದ್ವೇಷವನ್ನೇ ಮಾಡುತ್ತಾನೆಂದಾದರೆ ಅವನು ಉದ್ಧಟಸ್ವಭಾವದವನೆಂದರ್ಥ.

**ಅಧುನಾ ವಿಧುನಾ ರುದ್ಧಂ ಮಧು ನಾಸೀನ್ಮಧುವ್ರತ ।**
**ಉದಿತೇ ಮುದಿತೇಽಬ್ಜೇ ಸ್ಯಾದದಿತೇರ್ವಿದಿತೇ ಸುತೇ ॥ ೨೬ ॥**

ರಾತ್ರಿಯಲ್ಲಿ ಕಳಂಕ ಉಳ್ಳ ಚಂದ್ರನ ಉದಯವಾದಾಗ ಕಮಲ ಪುಷ್ಪಗಳೆಲ್ಲವೂ ಮುಚ್ಚಿಕೊಳ್ಳುತ್ತವೆ. ಇದರಿಂದ ದುಂಬಿಗಳಿಗೆ ಕಮಲದ ಮಕರಂದವನ್ನು

ಆಸ್ವಾದಿಸಲಾಗುವುದಿಲ್ಲ. ಮರುದಿನ ಆದಿತ್ಯೋದಯ ಆದೊಡನೆ ಕಮಲವು ಅರಳುತ್ತದೆ. ದುಂಬಿಗೆ ಬೇಕಾದ ಮಕರಂದವು ದೊರೆಯುತ್ತದೆ. ಇದರಂತೆ ಈ ಕಾಲದಲ್ಲಿ ಮಾತ್ಸರ್ಯಾದಿಗಳಿಂದ ಕೂಡಿದ ಕೆಲವು ಪಂಡಿತರಿಂದ ದೂಷಿಸಲ್ಪಟ್ಟು ಈ ಗ್ರಂಥದ ಅರ್ಥಜ್ಞಾನವೆಂಬ ರಸವು ಭ್ರಮರದಂತಹ ಜಿಜ್ಞಾಸುರಸಿಕರಿಗೆ ದೊರೆಯದಿದ್ದರೂ ನಿರ್ಮತ್ಸರರಾದ ಯೋಗ್ಯ ಪಂಡಿತರು ಕಾಲಾಂತರದಲ್ಲಿ ಪ್ರಚಾರ ಪಡಿಸಿ ಎಲ್ಲ ಜಿಜ್ಞಾಸು ರಸಿಕರಿಗೆ ಈ ಗ್ರಂಥದ ಅರ್ಥಜ್ಞಾನವೆಂಬ ರಸವು ದೊರೆಯುವಂತೆ ಮಾಡುತ್ತಾರೆ.

**ತಾರ್ಣೇ ವೌಕಸಿ ಪಾರ್ಣೇ ವಾ ತಾಪಸೋ ಭೂಪ ಸೋಽವಸತ್ ।**
**ತಿಥೌ ತೇಽತಿಥಿರೇತದ್ವದ್ವಿದ್ವಾನ್ ಕ್ವಾಗಣ್ಯಪುಣ್ಯದಃ ॥ ೨೭ ॥**

ಜೈನಾಗಮಬದ್ಧಾದರನಾದ ರಾಜನೇ ! ನಿನ್ನ ಅರಮನೆಗೆ ಪುಣ್ಯತಿಥಿಯ ದಿವಸ ಒಬ್ಬ ಶ್ರೇಷ್ಠನಾದ ಅಗಣ್ಯ ಪುಣ್ಯರಾಶಿಯನ್ನೇ ನೀಡುವ ಆತಿಥಿಯು ಬಂದಾಗ ಸತ್ಕರಿಸುವುದು ನಿನ್ನ ಶ್ರೇಯಸ್ಸಿಗೇ ಕಾರಣ. ಒಂದು ವೇಳೆ ದುರಾಗ್ರಹದಿಂದ ಕೂಡಿದವನಾಗಿ ನೀನು ಆಹ್ವಾನಿಸಿ ಸತ್ಕರಿಸದಿದ್ದರೆ, ಅವನಿಗೆ ಯಾವ ಹಾನಿಯೂ ಆಗುವುದಿಲ್ಲ. ಆದರೆ ನಿನಗೆ ಪುಣ್ಯ ಕೊಡುವವರು ಇಲ್ಲದ ಕಾರಣದಿಂದ ಹಾನಿಯು ನಿನಗೇ ಉಂಟಾಗುತ್ತದೆ. ತಾಪಸನು ಎಲ್ಲಿ ಬೇಕಾದರೂ ವಾಸ ಮಾಡಿ ಸುಖ ಹೊಂದುತ್ತಾನೆ. ಹುಲ್ಲಿನ ಮನೆಯೂ ಆಗಬಹುದು. ಎಲೆಯ ಮನೆಯೂ ಆಗಬಹುದು. ಅವನು ನಿತ್ಯತೃಪ್ತ

**ತುಲಯಾ ಮಲಯಾದ್ರ್ಯುತ್ಥಚಂದನೇನೇಂಧನಂ ಖಲಃ ।**
**ಸಮಂ ಸಮಂತಾತ್ಕುರುತಾತ್ ಗ್ರಂಥೌ ಗಂಧಂ ಕರೋತಿ ಕಃ ॥ ೨೮ ॥**

ಒಬ್ಬ ದುಷ್ಟನು ಮಲಯ ಪರ್ವತದಲ್ಲಿ ಹುಟ್ಟಿದ ದಿವ್ಯವಾದ ಗಂಧದ ತುಂಡಿಗೆ ಸರಿಯಾಗಿ ಒಂದು ಸಾಮಾನ್ಯ ಕಟ್ಟಿಗೆಯ ತುಂಡನ್ನು ತಂದು ಒಂದೇ ಭಾರವನ್ನಾಗಿಸಲು ತಕ್ಕಡಿಯ ಎರಡು ಭಾಗಗಳಲ್ಲಿಟ್ಟು ಸಮಾನವಾಗಿ ತೂಗುತ್ತಾನೆ. ಸಮಾನವಾಗಿ ತೂಗಿದ ಮಾತ್ರಕ್ಕೆ ಸಾಮಾನ್ಯ ಕಟ್ಟಿಗೆಯಲ್ಲಿ ಗಂಧದ ಕೊರಡಿನ ದಿವ್ಯ ಗಂಧವು ಉಂಟಾಗುವುದೇ? ಭಾರಸಾಮ್ಯವಿದ್ದರೂ ಗಂಧದ ಮೌಲ್ಯ ಕಟ್ಟಿಗೆಯ ತುಂಡಿಗೆ ಬರುವುದಿಲ್ಲ. ಕಟ್ಟಿಗೆಯಲ್ಲಿ ಗಂಧವನ್ನು ತುಂಬುವ ಸಾಮರ್ಥ್ಯ ಯಾರಿಗೂ ಇಲ್ಲ. ಅಂತೆಯೇ ಈ ಗ್ರಂಥಕ್ಕೆ ಸರಿಯಾಗಿ ಇನ್ನೊಂದು ಗ್ರಂಥವನ್ನು ಸರಿಹೋಲಿಸಿದರೂ ಇದರಲ್ಲಿರತಕ್ಕ ರಸಿಕಮನೋರಂಜಕಗಳಾದ ಯುಕ್ತಿಪುಂಜಗಳು ಇನ್ನಿತರ ಯಾವ ಗ್ರಂಥಗಳಲ್ಲೂ ಬರಲಾರವು.

**ಸೂಕ್ತಿರತ್ನಸ್ವಭಾವಾಭಾ ಪೂಜ್ಯಾ ತ್ಯಾಜ್ಯಾ ನ ಕೋವಿದೈಃ ।**
**ಗುಣೇ ಮಣೇರ್ಹಿ ಮಾತ್ಸರ್ಯಂ ನಾರ್ಯೈಃ ಕಾರ್ಯಂ ಕದಾಚನ ॥೨೯॥**

ಯುಕ್ತಿಯುಕ್ತವಾದ ವಚನಗಳೆಂಬ ರತ್ನಗಳ ಸ್ವಾಭಾವಿಕ ಕಾಂತಿಯಿಂದ ಕೂಡಿರುವ ಈ ಗ್ರಂಥವನ್ನು ಸಜ್ಜನರಾದ ವಿದ್ವಜ್ಜನರು ಖಂಡಿತವಾಗಿಯೂ ಆದರದಿಂದ ಸ್ವೀಕರಿಸುತ್ತಾರೆ.

ತಿರಸ್ಕರಿಸುವುದಿಲ್ಲ. ರತ್ನಮಣಿಯ ಪ್ರಕಾಶದಲ್ಲಿ ಜ್ಞಾನಿಗಳು ಎಂದಿಗೂ ಮಾತ್ಸರ್ಯ ಪಡಲಾರರು.

**ವಿದುಷೋಽವಿದುಷೋಽಪೀಷ್ಟಾ ಕಂ ಜನಂ ರಂಜಯೇನ್ನ ಗೀಃ ।**
**ಅಮರೈರ್ಭ್ರಮರೈಶ್ಚಾರ್ಥ್ಯಂ ಕುಸುಮಂ ಕೋಽಸುಮಾಂಸ್ತ್ಯಜೇತ್ ॥ ೩೦ ॥**

ಈ ಗ್ರಂಥದಲ್ಲಿ ಉತ್ತಮ ಯುಕ್ತಿಗಳು ಇರುವುದರಿಂದ ಪಂಡಿತರು ಮಾನ್ಯ ಮಾಡುತ್ತಾರೆ. ಅಲಂಕಾರಾದಿ ಕಾವ್ಯ ರಸಗಳಿಂದ ಕೂಡಿರುವ ಕಾರಣ ಸಾಮಾನ್ಯ ಜನರಿಗೂ ಇಷ್ಟವಾಗುತ್ತದೆ. ಹಾಗಾಗಿ, ಎಲ್ಲರನ್ನೂ ಸಂತೋಷ ಪಡಿಸುತ್ತದೆ. ಇದನ್ನು ಅರ್ಥಾಂತರನ್ಯಾಸ ಅಲಂಕಾರದಿಂದ ಸಮರ್ಥಿಸುತ್ತಾರೆ. ಒಂದು ಪುಷ್ಪವನ್ನು ದುಂಬಿಗಳೂ ದೇವತೆಗಳೂ ಬಯಸುತ್ತಾರೆಂದರೆ ಬದುಕಿರುವ ಯಾವ ಮನುಷ್ಯನು ಬಿಟ್ಟಾನು?

**ವಿದ್ಯಾಽವಿದ್ಯಾವಿಭಾಗಜ್ಞಃ ಕಿಮಜ್ಞಃ ಪ್ರಾಜ್ಞವದ್ಭವೇತ್ ।**
**ಅಂಧಸ್ಯೇಂದೂದಯೇಽಪಾಂಧ್ಯಂ ಅಂಧಕಾರೋದಯೇಽಪಿ ಹಿ ॥ ೩೧ ॥**

ಚಂದ್ರೋದಯವಾಗಲೀ, ಕತ್ತಲೆಯಾಗಲೀ ಕುರುಡನ ಅಂಧತ್ವದಲ್ಲಿ ಯಾವ ಬದಲಾವಣೆಯೂ ಇರುವುದಿಲ್ಲ. ಪದಾರ್ಥದ ಅದರ್ಶನವು ಉಭಯತ್ರ ಸಮಾನ. ಹೀಗೆಯೇ ವಿದ್ಯೆ-ಅವಿದ್ಯೆಗಳ ವಿಭಾಗವನ್ನು ತಿಳಿಯದ ಜ್ಞಾನಾಂಧನು ಈ ಗ್ರಂಥದ ಯುಕ್ತಿಸ್ವಾರಸ್ಯವನ್ನು ಪ್ರಾಜ್ಞನಂತೆ ಗ್ರಹಿಸಲು ಅಸಮರ್ಥನಾಗುತ್ತಾನೆ ಎಂದು ಅರ್ಥಾಂತರನ್ಯಾಸ ಅಲಂಕಾರದಿಂದ ವರ್ಣಿಸಿದ್ದಾರೆ.

**ಗೃಹೀತಮರ್ಥಂ ಯಃ ಪಶ್ಚಾನ್ನ ಜಹಾತಿ ಸ ವೈ ಮಹಾನ್ ।**
**ತೃಣಗ್ರಾಹೀ ಮಣಿರ್ಮಾನ್ಯಃ ಪೌರ್ಣಮಾಸೀ ವಿಧುಶ್ಶಶೀ ॥ ೩೨ ॥**

ರತ್ನಗಳಲ್ಲಿ ಹುಲ್ಲು ಕಡ್ಡಿಯನ್ನು ಹಿಡಿಯುವ ರತ್ನವು ಶ್ರೇಷ್ಠವಾದುದು. ಇದರಂತೆ ಹೇಳಿದ ಅರ್ಥವನ್ನು ಗ್ರಹಿಸುವವನು ಶ್ರೇಷ್ಠನು. ಹುಣ್ಣಿಮೆ ಚಂದ್ರನು ತನ್ನಲ್ಲಿರುವ ಶಶವನ್ನು (ಮೊಲದ ಚಿಹ್ನವನ್ನು) ಬಿಡದೆ ತಾನು ಬೆಳಗುತ್ತಾನೆ. ಹಿಡಿದದ್ದನ್ನು ಬಿಡದಿರುವುದು ಗುಣ. ಹಾಗೇ ಯಾವನು ಈ ಗ್ರಂಥದ ಅರ್ಥವನ್ನು ಸ್ವೀಕರಿಸಿ ಮರೆತು ಬಿಡುವುದಿಲ್ಲವೋ, ಅವನೇ ಉತ್ತಮನೆನಿಸುತ್ತಾನೆ.

**ಗೃಹ್ಣೀಯಾತ್ತಿಂತ್ರಿಣೀಶಾಖಾಂ ಶಿಗ್ರುಶಾಖಾಗ್ರಹೇಣ ಕಿಮ್ ।**
**ಜಗೃಹುಸ್ತದ್ವಿದೋ ವೇದಂ ವಾದಿವಾಕ್ಯಾನ್ಯಕೋವಿದಾಃ ॥ ೩೩ ॥**

ಮೇಲಿಂದ ಜಾರಿ ಬೀಳುವವನಿಗೆ, ಅಥವಾ ನೀರಿನ ಪ್ರವಾಹದಲ್ಲಿದ್ದವನಿಗೆ ಆಶ್ರಯ ಬೇಕು. ಆಶ್ರಯ ಬಯಸಿದಾಗ ಒಂದು ಹುಣಸೆಮರ-ನುಗ್ಗೇಮರ ಎರಡು ಕಾಣುತ್ತವೆ ಎಂದಿಟ್ಟುಕೊಳ್ಳಿ. ಜಾಣನಾದವ ಟೊಳ್ಳಾದ ನುಗ್ಗೇ ಗಿಡದ ಟೊಂಗೆಯನ್ನಾಶ್ರಯಿಸದೆ ಹುಣಸೇಮರದ ಗೆಲ್ಲನ್ನೇ ಆಶ್ರಯಿಸುತ್ತಾನೆ. ಇದರಂತೆ ಸಂಸಾರಪ್ರವಾಹದಲ್ಲಿ ಸಿಲುಕಿ ಉದ್ಧಾರದ ಮಾರ್ಗವನ್ನು ಅರಸುವ ನಮಗೆ ಹುಣಸೇ ಮರದಂತಹ ದೃಢವಾದ ಗುರಿಯುಳ್ಳ

ವೇದಗಳು ಕೈಬೀಸಿ ಕರೆಯುತ್ತಿವೆ. ಜೊತೆಗೆ ದುರ್ಬಲವಾದ ಇತರ ಮತಗಳೂ ನುಗ್ಗೇ ಮರದಂತೆ ತೋರುತ್ತಿವೆ. ಇಂತಹ ವಿಷಮಸ್ಥಿತಿಯಲ್ಲಿ ಜ್ಞಾನನಾದವನು ವೇದವನ್ನೇ ಆಶ್ರಯಿಸುತ್ತಾನೆ. ದಡ್ಡನಾದವ ಹುಣಸೇ ಮರದ ಗೆಲ್ಲಿಗಿಂತಲೂ ಕೆಳಗೆ ಸಿಗುವ ಗೆಲ್ಲು ಎಂದು ನುಗ್ಗೇ ಮರವನ್ನು ಆಶ್ರಯಿಸಿದಂತೆ ಸುಲಭದಂತೆ ಕಾಣುವ ಇತರ ಮತಗಳನ್ನೇ ಆಶ್ರಯಿಸುತ್ತಾನೆ.

**ಪುನರುಕ್ತತ್ವಯುಕ್ತ್ಯಾ ಚ ಮಂತ್ರಾವೃತ್ತಿಂ ಪರಿತ್ಯಜೇತ್ ।**
**ಪರೋಪಕಾರಯುಕ್ತ್ಯಾ ಚ ಗಚ್ಛೇತ್ ಕಾಮಾತುರಾಂಗನಾಮ್ ॥ ೪೧ ॥**
**ದೇಹಬಂಧಾದ್ಬಹಿರ್ಜೀವಾನ್ ಕುರ್ಯಾತ್ಕಾರಾಗೃಹಾದಿವ ।**
**ಅನಾದಿನಿತ್ಯಾ ವಾಗ್ ವಾಚ್ಯಾ ಧರ್ಮಸಿದ್ಧ್ಯೈ ತತೋಽಖಿಲೈಃ ॥ ೪೨ ॥**

ಮಂತ್ರಗಳನ್ನು ಪುನಃಪುನಃ ಹೇಳುವುದು ಗೌರವಗ್ರಸ್ತವಾಗುತ್ತದೆ, 'ಪುನರುಕ್ತಿ'ದೋಷವೂ ಬರುತ್ತದೆ ಎಂಬ ಯುಕ್ತಿಯನ್ನು ಆಶ್ರಯಿಸಿ ಮಂತ್ರಾವೃತ್ತಿಯನ್ನು ಬಿಟ್ಟುಬಿಡಲಿ! ಕಾಮಾತುರಳಾದ ಅಂಗನೆಯು ನನಗೆ ದೇಹಸುಖ ನೀಡೆಂದು ಬಯಸಿ ಬಂದರೆ ಮಹಾಪಾಪಕಾರಿಯಾದ ಸ್ತ್ರೀಗಮನ ಕರ್ಮವನ್ನು ಪರೋಪಕಾರಯುಕ್ತಿಯನ್ನಾಶ್ರಯಿಸಿ ಮಾಡಬೇಕಾಗುತ್ತದೆ. ಅಪರಾಧಿಗಳನ್ನು ಕಾರಾಗೃಹಬಂಧನದಿಂದ ಬಿಡಿಸುವುದು ಒಂದು 'ಲೋಕೋಪಕಾರ'. ಈ ಯುಕ್ತಿಯನ್ನಾಶ್ರಯಿಸಿ ಜೀವರು ದೇಹವೆಂಬ ಬಂಧನದಲ್ಲಿದ್ದಾರೆಂದು ಲೋಕೋಪಕಾರಬುದ್ಧಿಯಿಂದ ಜೀವರ ಶಿರಶ್ಛೇದನ ಮಾಡಿ ಅವರನ್ನು ದೇಹಬಂಧನದಿಂದ ಮುಕ್ತರನ್ನಾಗಿಸಲಿ! ಎಲ್ಲಾ ಪ್ರಾಣಿಹಿಂಸೆಯೂ ಲೋಕೋಪಕಾರವೇ ಆಗಲಿ!! ಆದ್ದರಿಂದ ಕೇವಲ ಯುಕ್ತಿಯನ್ನೇ ಆಶ್ರಯಿಸಿ ಮತಸ್ಥಾಪನೆ ಮಾಡಹೊರಟರೆ ಅಧರ್ಮಯುಕ್ತ ಅನರ್ಥಪರಂಪರೆಯೇ ಬಂದೊದಗುತ್ತದೆ. ಆದ್ದರಿಂದ ಧರ್ಮಾಧರ್ಮವ್ಯವಸ್ಥೆಗೆ ಅನಾದಿನಿತ್ಯವಾದ ಅಪೌರುಷೇಯವಾದ ವೇದವಾಣಿಯನ್ನೇ ಅಂಗೀಕರಿಸಬೇಕು !!

**ನಿದ್ರಾವಿದ್ರಾವಣೇ ಯಸ್ಯ ಛಂದಾಂಸಿ ಕಿಲ (ವ)ಬಂದಿನಃ ।**
**ತಂ ವೇದಂ ಸ ಕಥಂ ಕುರ್ಯಾತ್ ದುರ್ಗಾಸ್ಯಾತ್ತಾಗ್ವಿನಿರ್ಗತಮ್ ॥ ೫೫ ॥**

ಪ್ರಳಯಕಾಲದಲ್ಲಿ ಯೋಗನಿದ್ರಾವಶನಾದ ಹರಿಯನ್ನು ಸೃಷ್ಟಿಕಾಲದಲ್ಲಿ ಎಬ್ಬಿಸಬೇಕೆಂದು ದುರ್ಗೆಯು ವೇದಮಂತ್ರಗಳಿಂದ ಸ್ತೋತ್ರಮಾಡುತ್ತಾಳೆ. ಆಗ ಈ ಮಂತ್ರಗಳು ಸ್ತುತಿಪಾಠಕರಂತೆ ಹರಿಯನ್ನು ಎಬ್ಬಿಸುತ್ತವೆ. ಇದು ಪುರಾಣದಲ್ಲಿ ಪ್ರಸಿದ್ಧ. ಆದ ಕಾರಣ ಪರಮಾತ್ಮನು ಯೋಗನಿದ್ರೆಯಿಂದ ಏಳುವ ಮುನ್ನವೇ ದುರ್ಗಾಮುಖದಿಂದ ಹೊರಹೊಮ್ಮಿದ ವೇದಗಳನ್ನು ಶ್ರೀಹರಿಯು ರಚಿಸಿದ ಎಂದು ಹೇಳುವುದು ಎಷ್ಟು ಸಮಂಜಸ?

**ಅನಾದೇಃ ಪೃಷ್ಠಲಗ್ನಸ್ಯಾಪ್ಯನಾದಿತ್ವಂ ಹಿ ಯುಕ್ತಿಮತ್ ।**
**ಯಾವದ್ಯಾವದ್ಗಜೋ ಗಚ್ಛೇತ್ತಾವತ್ಪುಚ್ಛಂ ಚ ಗಚ್ಛತಿ ॥ ೭೦ ॥**

ಅನಾದಿಯಾದುದನ್ನು ಹಿಂಬಾಲಿಸಿ ಹೋಗುವ ವಸ್ತುಗಳಿಗೂ ಅನಾದಿತ್ವವು ಯುಕ್ತವಾಗಿಯೇ ಇರುತ್ತದೆ. ಆನೆಯು ಎಷ್ಟೆಷ್ಟು ದೂರವನ್ನು ಹೋಗುತ್ತದೋ, ಆನೆಯ ಬಾಲವೂ ಸಹ ಅಷ್ಟೇ ದೂರ ಹಿಂಬಾಲಿಸುವುದಷ್ಟೇ.

ಪುರಾಣಕೃಚ್ಚ ವೇದಾನಾಂ ವ್ಯಾಸಕೃನ್ನ ತು ಕಾರಕಃ ।
ಯೋ ವೇದವ್ಯಾಸನಾಮ್ನೈವ ವಿಖ್ಯಾತೋ ಮುನಿಮಂಡಲೇ ॥ ೯೭ ॥

ಯಾವ ಉಪಾಧ್ಯಾಯರು ವೇದವನ್ನು ಉಚ್ಚಾರ ಮಾಡುತ್ತಾರೆಯೋ, ಅವರು ತಮ್ಮ ಅಧ್ಯಾಪಕರನ್ನು ಅನುಸರಿಸಿಯೇ ಉಚ್ಚಾರವನ್ನು ಮಾಡುತ್ತಾರೆ. ಪುರಾಣಕರ್ತೃಗಳಾದ ವೇದವ್ಯಾಸರು ವೇದಗಳನ್ನು ವಿಸ್ತಾರ ಮಾಡಿದವರು ಎಂಬ ಕಾರಣದಿಂದಲೇ ಭೂಮಂಡಲದಲ್ಲಿ ವೇದವ್ಯಾಸರು ಎಂಬ ಹೆಸರಿನಿಂದ ಪ್ರಖ್ಯಾತರಾಗಿದ್ದಾರೆ. ಅವರು ವೇದವನ್ನು ವಿಸ್ತಾರ ಮಾಡಿದವರೇ ಹೊರತು, ವೇದವನ್ನು ರಚಿಸಿದವರಲ್ಲ.

ಕನ್ಯಾಕುಮಾರೀ ಕನ್ಯಾತ್ವಂ ಯಥಾ ಭರ್ತುರಭಾವತಃ ।
ಲೇಭೇ ಶ್ರುತಿಕುಮಾರೀಯಂ ತಥಾ ಕರ್ತುರಭಾವತಃ ।
ಅಕರ್ತೃತ್ವಂ ಧ್ರುವಂ ಲೇಭೇ ಯಾ ನಿತ್ಯೇತಿ ಶ್ರುತೌ ಶ್ರುತಾ ॥ ೧೦೧ ॥

ಭರ್ತೃವಿಲ್ಲದ ಕಾರಣ ಹೇಗೆ ಕನ್ಯಾಕುಮಾರಿಯು ಕನ್ಯಾತ್ವವನ್ನು ಹೊಂದಿದಳೋ, ಹಾಗೇಯೇ ಕರ್ತೃವು ಇಲ್ಲದಿರುವ ಕಾರಣ ಶ್ರುತಿಕುಮಾರಿಯೂ ಸಹ ನಿಶ್ಚಯವಾಗಿ ಅಕರ್ತೃತ್ವವನ್ನು ಹೊಂದಿದಳು. ಅಷ್ಟೇ ಅಲ್ಲ ಈ ಅಕರ್ತೃಕತ್ವವು ಯಾನಿತ್ಯಾ ಮುಂತಾದ ಶ್ರುತಿಗಳಲ್ಲಿಯೂ ಹೇಳಲ್ಪಟ್ಟಿದೆ.

ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ ।
ತದುಕ್ತೌ ಕಸ್ಯ ನ ಶ್ರದ್ಧಾ ಯದುಚ್ಛಿಷ್ಟಂ ಜಗತ್ತ್ರಯಮ್ ॥ ೧೧೭ ॥

ಸತ್ಯವತೀಸುತರಾದ ವ್ಯಾಸರು ಅಷ್ಟಾದಶಪುರಾಣಗಳ ಕರ್ತೃಗಳು. ಮೂರುಲೋಕಗಳಲ್ಲಿರುವ ಎಲ್ಲಾ ಸಾಹಿತ್ಯ ಪ್ರಭೇದಗಳಿಗೂ ಅವರ ಕೃತಿಗಳೇ ಆಧಾರವಾಗಿದೆ ಅಂತಹ ವ್ಯಾಸರ ಮಾತಿನಲ್ಲಿ ಯಾರಿಗೆ ಶ್ರದ್ಧೆ ಇಲ್ಲ?

ಸ್ವಬಂಧುಷು ಕೃತಃಸ್ನೇಹಸ್ಯಾದ್ಧಿ ರಾಗಾದಿದೋಷತಃ ।
ಪಾಂಥೇಷು ತು ಕೃತಃ ಸ್ನೇಹೋ ಧರ್ಮಂ ಶ್ರುತ್ವೈವತನ್ಮುಖಾತ್ ॥ ೧೨೮ ॥

ನಮ್ಮ ನಮ್ಮ ಬಂಧುಗಳಲ್ಲಿ ರಾಗಾದಿಗಳಿಗೆ ಒಳಗಾಗಿ ಸ್ನೇಹ ಮಾಡುತ್ತೇವೆ. ಆದರೆ ಒಬ್ಬ ದಾರಿಹೋಕನಲ್ಲಿ ರಾಗಾದಿಗಳಿಲ್ಲದೆ ಧರ್ಮವನ್ನು ಹೇಳುತ್ತಾನೆಂಬ ಕಾರಣಕ್ಕೆ ಸ್ನೇಹತೋರುತ್ತೇವೆ.

ಸುವಿತ್ತಸ್ಯೈವ ಚೋರೋಽಸ್ತಿ ದುರ್ವಿತ್ತಸ್ಯ ನ ತಸ್ಕರಃ ।
ಅಮಾನಂ ಚೇತ್ ಸ್ವತೋ ಜೀರ್ಣಃ ಕುತೋ ವೇದಮಚೂಚುರತ್ ॥ ೧೩೦ ॥

ರತ್ನಾದಿ ಒಳ್ಳೆ ಸಂಪತ್ತಿಗೆ ಕದಿಯುವ ಕಳ್ಳರಿರುತ್ತಾರೆ. ಗಡಿಗೆ ಇದರ ಚೂರುಗಳು ಮುಂತಾದ ಕೆಟ್ಟಸಂಪತ್ತಿಗೆ ಕಳ್ಳರಿರುತ್ತಾರೆಯೆ? ವೇದವು ಅಪ್ರಮಾಣವಾಗಿ ದುರ್ವಿತ್ತವಾಗಿದ್ದೊಡೆ ತಮ, ಮಧು, ಕೈಟಭ ಮುಂತಾದ ದೈತ್ಯರು ಅದನ್ನು ಕದಿಯುತ್ತಿದ್ದರೆ?

**ಹಯಗ್ರೀವಮುಖೋದ್ಗೀರ್ಣಾ ಸಾ ವಾಣೀ ಧರ್ಮಶಾಸನಮ್ ।**
**ಅತಸ್ತದುದಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ॥ ೧೩೧ ॥**

**ಅನುವಾದ–** ವೇದವು ಹಯಗ್ರೀವದೇವರ ಮುಖದಿಂದ ಉದ್ಗೀರ್ಣ - ಉಪದಿಷ್ಟ ವಾದುದು ಮಾತ್ರ, ರಚಿತವಾದುದಲ್ಲ. ಆದ್ದರಿಂದಲೇ ಅದು ಅಪೌರುಷೇಯ. ಅಪೌರುಷೇಯವಾಗಿ ನಿರ್ದೋಷವಾದುದರಿಂದಲೇ ವೇದವೇ ಧರ್ಮಾ ನುಶಾಸನ. ವೇದವಿಹಿತವಾದುದು ಧರ್ಮ. ವೇದನಿಷಿದ್ಧವಾದುದು ಅಧರ್ಮ.

**ಗುರುಶ್ಚಾರ್ವಾಕವಿದ್ಯಾಯಾ ಗುರುರ್ಮೇ ನಾಕಿನಾಂ ಗುರುಃ ।**
**ಅತಸ್ತತ್ಕೃಪಯಾ ಶ್ರೌತಮತಸ್ಥಿತಿರಪೀರಿತಾ ॥ ೨೦೯ ॥**

ನಿಮ್ಮ ಚಾರ್ವಾಕ ಸಿದ್ಧಾಂತಕ್ಕೆ ಬೃಹಸ್ಪತಿಗಳೇ ಗುರುಗಳು. ನಮ್ಮ ಸಿದ್ಧಾಂತಕ್ಕಾದರೂ ಬೃಹಸ್ಪತಿ, ಇಂದ್ರ, ಮೊದಲಾದ ಎಲ್ಲ ದೇವತೆಗಳಿಗೂ ಗುರುಗಳಾದ ಮುಖ್ಯಪ್ರಾಣರೇ ಗುರುಗಳಾಗಿದ್ದಾರೆ. ಆದ್ದರಿಂದ ನಮ್ಮ ಆಚಾರ್ಯರು ನಿಮ್ಮ ಗುರುಗಳಿಗಿಂತ ಉತ್ತಮರಾದ್ದರಿಂದ ನಿಮ್ಮ ಮತವು ತ್ಯಾಜ್ಯವಾಗಿದೆ ಮತ್ತು ಆ ಮುಖ್ಯಪ್ರಾಣದೇವರ ಕೃಪೆಯಿಂದ ವೇದಪುರಾಣಾದಿಗಳ ಯಥಾರ್ಥ ಸಿದ್ಧಾಂತವು ನಮ್ಮ ತತ್ತ್ವವಾದದ ರೂಪದಲ್ಲಿ ಈ ಲೋಕದಲ್ಲಿ ನೆಲೆಕಂಡುಕೊಂಡಿದೆ.

**ಕ್ಷೀರಸ್ಯೋತ್ಸೇಚನಂ ಕೋ ವಾ ನಿರುಣದ್ಧ್ಯಾಜ್ಞಯಾ ಜನಃ ।**
**ವಸ್ತ್ರೇಣಾಪಿ ಗ್ರಹಃ ಪ್ರೋಕ್ತೋ ರಾಜಮಂದಿರಸರ್ಪಿಷಃ ॥ ೨೧೦ ॥**

ಚಾರ್ವಾಕ ಸಿದ್ಧಾಂತದ ವಿಮರ್ಶವು ನಡೆಯುತ್ತಿರುವಾಗ ಅದ್ವೈತ ಸಿದ್ಧಾಂತದ ಖಂಡನವನ್ನೂ ಇಲ್ಲೇಕೆ ಮಾಡಲಾಗಿದೆ ಎಂಬ ಶಂಕೆಗೆ ಮೂಲಕಾರರು ಹೀಗೆ ಉತ್ತರವನ್ನು ಹೇಳುತ್ತಿದ್ದಾರೆ : ಉಕ್ಕುತ್ತಿರುವ ಹಾಲನ್ನು ಉಕ್ಕಬೇಡವೆಂದು ಆಜ್ಞೆ ಮಾಡಿ ನಿಲ್ಲಿಸಲಾದೀತೆ? ಜೀವರಿಗೆ ಸಾಕಾರತ್ವವನ್ನು ಸಮರ್ಥಿಸುವಾಗ ಚಾರ್ವಾಕರಂತೆ ಮಾಯಾವಾದಿಗಳೂ ಪ್ರತಿವಾದಿಗಳಾಗಿದ್ದಾರೆ. ಹಾಗಾಗಿ ಅವರನ್ನು ಖಂಡಿಸುವಾಗ ಮೂಲಕಾರರ ಉತ್ಸಾಹವು ಹಾಲಿನಂತೆ ಉಕ್ಕುತ್ತದೆ. ಅದನ್ನು ಆಜ್ಞೆ ಮಾಡಿ ತಡೆಯುವ ಶಕ್ತಿ ಯಾರಿಗಿದೆ? ರಾಜರ ಅರಮನೆಯಲ್ಲಿ ತುಪ್ಪದ ದಾನವು ನಡೆಯುತ್ತಿದ್ದಾಗ ಕೈಯಲ್ಲಿ ಪಾತ್ರೆಯಿಲ್ಲವೆಂದು ಆ ತುಪ್ಪವನ್ನು ತಿರಸ್ಕರಿಸಬಾರದು; ಹೊರತು ಬಳಿಯಲ್ಲಿರುವ ಬಟ್ಟೆಯನ್ನಾದರೂ ಆ ತುಪ್ಪದಲ್ಲಿ ಎದ್ದಿ ಮನೆಗೆ ಬಂದು ಆ ಬಟ್ಟೆಯನ್ನು ಹಿಂಡಿ ತುಪ್ಪವನ್ನು ಪಾತ್ರೆಯಲ್ಲಿ ಸಂಗ್ರಹಿಸಿಕೊಳ್ಳಬೇಕು. ಅದರಂತೆ ವಾದಿರಾಜರ ಮುಖದಿಂದ ಅದ್ವೈತದ ಖಂಡನವು ಹೊರಬರುತ್ತಿರುವಾಗ ಅದ್ವೈತ ಖಂಡನಕ್ಕೆ ಇದು ಸಂದರ್ಭವಲ್ಲವೆಂದು ಶಂಕಿಸದೆ ಯೋಗ್ಯತಾನುಸಾರವಾಗಿ ಆ ಖಂಡನವನ್ನು ಮನಸ್ಸಿನಿಂದ ಗ್ರಹಿಸಬೇಕು.

**ದುಃಖೋಜ್ಝಿತಂ ಸುಖಂ ಪ್ರಾರ್ಥ್ಯಂ ನ ತು ದುಃಖಾನ್ವಿತಂ ಸುಖಮ್ ।**
**ದುಃಖೋದರ್ಕಸುಖೇಽತ್ಯಲ್ಪೇ ಕೋ ನೂನ್ಮತ್ತಃ ಪ್ರವರ್ತತೇ ॥ ೨೨೦ ॥**

ಮನುಷ್ಯನು ದುಃಖದ ಸ್ಪರ್ಶವಿಲ್ಲದ ಸುಖವನ್ನೇ ಬಯಸಿ ಅದಕ್ಕಾಗಿ ಪ್ರಯತ್ನಿಸಬೇಕೇ ಹೊರತು ದುಃಖಮಿಶ್ರವಾದ ಸುಖಕ್ಕಾಗಿ ಅಲ್ಲ. ತತ್ಕಾಲದಲ್ಲಿ ಸ್ವಲ್ಪ ಸುಖಕೊಟ್ಟು ಕಾಲಾಂತರದಲ್ಲಿ ಮಹಾದುಃಖವನ್ನು ಕೊಡುವ ಕಾರ್ಯಕ್ಕೆ ಕೈ ಹಾಕುವ ಮೂರ್ಖ ಯಾರವನು?

**ಯಃ ಸ್ತಂಭಸಂಭವೋ ಡಿಂಭಂ ಹಿರಣ್ಯಕಶಿಪೋರಪಾತ್ ।**
**ಸೋಽಂತರ್ಯಾಮೀ ಮಮ ಸ್ವಾಮೀ ಕಸ್ಯ ನ ಸ್ಯಾದ್ವಿಚಾರಯ ॥ ೨೫೭ ॥**

**ಅನುವಾದ–** ಶಿಲಾಸ್ತಂಭದ ಮಧ್ಯದಿಂದ ಆವಿರ್ಭೂತನಾದ ಶ್ರೀ ನರಸಿಂಹದೇವರು ಹಿರಣ್ಯಕಶಿಪುವಿನ ಪುತ್ರನಾದ ಪ್ರಹ್ಲಾದನನ್ನು ರಕ್ಷಿಸಿದನು. ಈ ರಕ್ಷಣೆಯಕ್ರಮದಿಂದ ಶ್ರೀ ಪರಮಾತ್ಮನಿಗೆ ಸರ್ಪ-ಅಗ್ನಿ-ನೀರು-ಶಸ್ತ್ರ ಇವುಗಳಲ್ಲಿದ್ದು ಆ ಪದಾರ್ಥಗಳ ಸ್ವಭಾವ ತಿರಸ್ಕಾರದ ಕರ್ತೃತ್ವವು ಇದೆ ಎಂಬುದು ತಿಳಿದುಬರುತ್ತದೆ. ಇಂತಹ ನನ್ನ ಸ್ವಾಮಿಯು ಎಲ್ಲಿಲ್ಲ? ಎಲ್ಲ ಕಡೆಯೂ ಇದ್ದಾನೆಂಬುದನ್ನು ಯುಕ್ತಿಯಿಂದ ವಿಚಾರಿಸಿ ನೋಡು. ಅತ್ಯಂತ ಗಟ್ಟಿಯಾದ ಕಲ್ಲಿನ ಮಧ್ಯದಲ್ಲಿ ಇರುವ ಪರಮಾತ್ಮನು ಬೇರೆ ಕಡೆ ಅಂದರೆ ವಾಯ್ವಾದಿ ಮೃದು ಪದಾರ್ಥಗಳಲ್ಲಿ ಯಾಕಿಲ್ಲ? ಎಲ್ಲ ಕಡೆಗೂ ಇದ್ದಾನೆ.

**ವಿಷಮಾರೋಹತೀಶಸ್ಯ ಸತ್ತ್ವಾದೇವ ನತು ಸ್ವತಃ ।**
**ಕಿಂವಿಷಾದೋ ವಿಷಾದಾಸೀಚ್ಛಿಶೋಸ್ತಸ್ಯ ಶಿವಸ್ಯ ವಾ ॥ ೨೬೩ ॥**

ವಿಷಾಂತರ್ಗತನಾದ ಶ್ರೀಹರಿಯ ಸಾಮರ್ಥ್ಯದಿಂದಲೇ ವಿಷವು ಮೇಲೆ ಹೋಗುತ್ತದೆ. ಶಿಶುವಾದ ಪ್ರಹ್ಲಾದನಿಗೆ, ಶಿಶುವಾದ ಶ್ರೀಕೃಷ್ಣನಿಗೆ, ಹಾಗು ಶಿವನಿಗೆ ಕ್ರಮವಾಗಿ ಸರ್ಪದಂಶನ ವಿಷದಿಂದ, ಪೂತನಾಳಿಂದ ಕೊಡಲ್ಪಟ್ಟ ವಿಷದಿಂದ ಹಾಗು ಕಾಲಕೂಟ ವಿಷದಿಂದಲೂ ದುಃಖವು ಆಯಿತೇನು? ಇಲ್ಲವಲ್ಲ. ಆದ್ದರಿಂದ ಶ್ರೀಪರಮಾತ್ಮನ ಅನುಗ್ರಹವಿಲ್ಲದಲೆ ವಿಷಕ್ಕೂ ಕೂಡ ದೇಹವನ್ನು ವ್ಯಾಪಿಸುವ ಶಕ್ತಿಯು ಇಲ್ಲವೆಂಬುದು ಸರ್ವ ಅನುಭವ ಸಿದ್ಧವಾಗಿದೆ ಎಂದು ಭಾವ.

**ನಾರ್ಯೈಶ್ಚ ವಾರ್ಯಃ ಕಾರ್ಯೇಽಸೌ ಹರ್ಯೈಶ್ವರ್ಯೇರ್ಯವೀರ್ಯವಾನ್ ।**
**ನಿರ್ದೈವಮೃದ್ಧ್ಯೈ ತಂ ವಿದ್ವಾನ್ ಕೋಽದ್ಯಾದದ್ಯಾದ್ಧಿ ಬೌದ್ಧವತ್ ॥ ೨೬೭ ॥**

ಪರಮಾತ್ಮನ ಸಾಮರ್ಥ್ಯದಿಂದ ಆಗುವ ಕಾರ್ಯದಲ್ಲಿ ವಸ್ತು ಸ್ವಭಾವಾದಿಗಳು ತ್ಯಾಜ್ಯಗಳಲ್ಲ. ಸ್ವಭಾವಾದಿಗಳು ಪರಮಾತ್ಮನ ಅಧೀನಗಳಾಗಿ ಕಾರ್ಯವನ್ನು ಹುಟ್ಟಿಸುವುದರಲ್ಲಿ ಪರಂಪರಾ ಕಾರಣಗಳಾಗಿವೆ ವಿನಃ ಸ್ವತಂತ್ರ ಕಾರಣಗಳಲ್ಲವೆಂದು ಅಭಿಪ್ರಾಯ. ಬೌದ್ಧರು ಮಾತ್ರ ಸ್ವಭಾವಕ್ಕೆ ಸ್ವತಂತ್ರ ಕಾರಣತ್ವವನ್ನು ಹೇಳುವರು.

ವಿಧೇಃ (ಪಾ) ಪದಾನುಸರಣೇ ವಿಧಿತಾತಸ್ಯ ಕಿಂ ಭಯಮ್ ।
ಕರಣಾತ್ ಪ್ರೇರಣಾದ್ಯಸ್ಯ ನ ಭೀರಿತಿ ಸ ಗರ್ಜತಿ ॥ ೨೮೪ ॥

ವಿಧಿವಾಕ್ಯವನ್ನು ಅನುಸರಿಸಿದರೆ ವಿಧಿಯನ್ನು ಉಪದೇಶಿಸುವವನಿಗೆ ಏನು ಭಯ? ವಿಧಿ ವಾಕ್ಯರೂಪವಾದ ಶ್ರುತಿಯು ಪರಮಾತ್ಮನು ಯಾವ ಕರ್ಮವನ್ನು ಮಾಡಿದರೂ, ಯಾವ ಕರ್ಮವನ್ನು ಪ್ರೇರಿಸಿದರೂ ಅವನಿಗೆ ದೋಷವಿಲ್ಲವೆಂದು ಗರ್ಜಿಸುತ್ತಿದೆಯಷ್ಟೆ?

ವ್ರತಸ್ಥಾ ಹಸ್ತವಿನ್ಯಸ್ತಸೂತ್ರಾತ್ ತೇ ಸೂತಕಾಂಹಸಾ ।
ನ ಲಿಪ್ಯತೇ ಕಿಲ ಸ್ತ್ರೀ ಚ ಹಂತೇಶೋ ಲಿಪ್ಯತೇ ಕಿಲ ॥ ೨೮೭ ॥

ವ್ರತಧಾರಿಣಿಯಾದ ನಿನ್ನ (ಜೈನನ) ಪತ್ನಿಯೂ ಕೈಯಲ್ಲಿ ಮಂತ್ರಿಸಿದ ಸೂತ್ರವನ್ನು ಕಟ್ಟಿಕೊಂಡರೆ ರಜೋದರ್ಶನ ರೂಪ ಸೂತಕದೋಷದಿಂದ ಲಿಪ್ತಳಾಗುವುದಿಲ್ಲ. ಇನ್ನು ಸರ್ವೇಶ್ವರನಾದ ಪರಮಾತ್ಮನು ಲಿಪ್ತನಾಗಲಿ ಎಂದು ಆಕ್ಷೇಪಿಸಿದರೆ ಎಂತಹ ಆಶ್ಚರ್ಯ.

ನಿತ್ಯಮುಕ್ತಾ ಚ ಸಾ ಭಾರ್ಯಾ ನಿತ್ಯಮುಕ್ತಃ ಪತಿಶ್ಚ ಸಃ ।
ಬಾಹುಭ್ಯಾಮೇವ ಬಂಧೋಸ್ತಿ ನ ತಯೋರ್ಭವಬಂಧನಂ ॥ ೨೯೪ ॥

ಪತಿಯಾದ ನಾರಾಯಣನು ನಿತ್ಯಮುಕ್ತನಾಗಿದ್ದರೆ ಪತ್ನಿಯಾದ ಲಕ್ಷ್ಮೀದೇವಿಯೂ ನಿತ್ಯಮುಕ್ತಳಾಗಿದ್ದಾಳೆ. ಅವರಿಬ್ಬರಿಗೆ ಸಂಸಾರದ ಯಾವ ಬಂಧನವೂ ಇಲ್ಲ; ಇರುವ ಒಂದೇ ಬಂಧನವೆಂದರೆ ಪರಸ್ಪರ ಬಾಹುಗಳ ಪ್ರೇಮಬಂಧನ. ಆದ್ದರಿಂದ ನಾರಾಯಣನು ಸಪತ್ನೀಕನಾದರೂ ಆತನಿಗೆ ಸಂಸಾರವಿಲ್ಲ.

ಅತಃ ಸ ಭರಣಾದ್ ಭರ್ತಾ ಸಾ ಭಾರ್ಯಾ ಬ್ರಿಯತೇ ಯತಃ ।
ತತ್ತಯೋರ್ನಿತ್ಯಸುಖಿನೋರ್ನ ಸಂಸಾರೋಸ್ತ್ಯದುಃಖಿನೋಃ ॥ ೨೯೬ ॥

ಆದ್ದರಿಂದ ಪೋಷಿಸುವುದರಿಂದಲೇ ನಾರಾಯಣನು ಭರ್ತಾ. ಪೋಷಿಸಲ್ಪಡುವುದರಿಂದಲೇ ಲಕ್ಷ್ಮಿಯು ಭಾರ್ಯೆ. ನಿತ್ಯಸುಖಿಗಳಾದ ಮತ್ತು ಶಾಶ್ವತವಾಗಿ ದುಃಖರಹಿತರಾದ ಅವರಿಗೆ ಸಂಸಾರವಿಲ್ಲ.

ಅತಃ ಸ ಭರಣಾದ್ ಭರ್ತಾ ಸಾ ಭಾರ್ಯಾ ಬ್ರಿಯತೇ ಯತಃ ।
ತತ್ತಯೋರ್ನಿತ್ಯಸುಖಿನೋರ್ನ ಸಂಸಾರೋಸ್ತ್ಯದುಃಖಿನೋಃ ॥ ೨೯೬ ॥

ಆದ್ದರಿಂದ ಪೋಷಿಸುವುದರಿಂದಲೇ ನಾರಾಯಣನು ಭರ್ತಾ. ಪೋಷಿಸಲ್ಪಡುವುದರಿಂದಲೇ ಲಕ್ಷ್ಮಿಯು ಭಾರ್ಯೆ. ನಿತ್ಯಸುಖಿಗಳಾದ ಮತ್ತು ಶಾಶ್ವತವಾಗಿ ದುಃಖರಹಿತರಾದ ಅವರಿಗೆ ಸಂಸಾರವಿಲ್ಲ.

ನ ಚೇತ್ತಂಡುಲಪಾನೀಯವಸ್ತ್ರಭಾರ್ಯಾಸುತಾದಿಷು ।
ಗೃಹಸ್ಥಿತೇಷು ಗೃಹಿಣೋ ನವೇಷು ಸ್ಯಾನ್ನ ನಿರ್ಣಯಃ ॥ ೩೨೦ ॥

ಸಮೀಪದಲ್ಲಿರುವ ವಸ್ತುಗಳ ಜ್ಞಾನ ಬಂದಾಗಲೂ ಪ್ರಾಮಾಣ್ಯವು ತಿಳಿಯದೇ ಹೋದಲ್ಲಿ ಗೃಹಸ್ಥನಿಗೆ ಮನೆಯಲ್ಲಿರುವ ಹೊಸದಾದ (ಇದುವರೆಗೆ ನೋಡದ) ಅಕ್ಕಿ, ನೀರು, ಬಟ್ಟೆ ಪತ್ನಿ, ಮಕ್ಕಳ ಬಗ್ಗೆಯೂ ನಿರ್ಧಾರ ಇಲ್ಲದೇ ಹೋದೀತು.

**ಶಿಶುಃ ಕಿಂ ಜಾತಮಾತ್ರೋಽಂಬಾಸ್ತನಂ ಸಂದಿಹ್ಯ ಚುಂಬತಿ ।**
**ಪಶುಶ್ಚ ನವಘಾಸಾದೌ ನ ವಿಶ್ವಸಿತಿ ಕಿಂ ವನೇ ॥ ೩೨೧ ॥**

ಆಗ ತಾನೇ ಹುಟ್ಟಿದ ಮಗುವು ತನ್ನ ತಾಯಿಯ ಸ್ತನವನ್ನು ಸಂದೇಹದಿಂದ ಚೀಪುವುದೇನು? ಕಾಡಿನಲ್ಲಿ ಪ್ರಾಣಿಗಳು ಹೊಸದಾದ ಹುಲ್ಲಿನಲ್ಲಿ ವಿಶ್ವಾಸವಿಡುವುದಿಲ್ಲವೇನು?

**ಅನಾನುಭವಿಕೀ ಸರ್ವತ್ರಾಪಿ ಸಂದಿಗ್ಧತಾ ನೃಣಾಂ ।**
**ವಿನೋನ್ಮತ್ತಶಿರಃಪಿತ್ತಿಪಿಶಾಚಗ್ರಸ್ತಚೇತನಾನ್ ॥ ೩೨೨ ॥**

ಹುಚ್ಚರು, ಪಿತ್ತನೆತ್ತಿಗೇರಿದವರು, ಪಿಶಾಚಬಾಧೆಗೆ ಒಳಗಾದವರು ಇಂತಹವರನ್ನು ಬಿಟ್ಟು ಉಳಿದ ಯಾರಿಗೂಜ್ಞಾನಬಂದಾಗಲೆಲ್ಲಾ ಸಂದೇಹ ಪಡುವುದು ಅನುಭವಸಿದ್ಧವಲ್ಲ.

**ನಿರೋಧಮಾತ್ರನಾಶಾಯ ನದೀರುದ್ಧೇನ ನೌರಿವ ।**
**ಪರೀಕ್ಷಾಪೇಕ್ಷ್ಯತೇ ಕ್ವಾಪಿ ತದಭಾವೇ ಸ್ವಯಂ ಪಟುಃ ।**
**ನಹಿ ರಾಜಪಥೇ ಗಂತ್ರಾ ಗಮನೇ ನೌರಪೇಕ್ಷ್ಯತೇ ॥ ೩೩೮ ॥**

ದಾರಿಹೋಕನಿಗೆ ನದಿಯು ಅಡ್ಡಬಂದಾಗ ನೌಕೆಯಂತೆ ಕೆಲವೊಮ್ಮೆ ಸಾಕ್ಷಿಯಿಂದಲೂ ಪ್ರತಿಬಂಧಕದ ನಾಶಕ್ಕಾಗಿಯಷ್ಟೇ ವಿಮರ್ಶೆಯು ಅಪೇಕ್ಷಿಸಲ್ಪಡುತ್ತದೆ. ಪ್ರತಿಬಂಧಕ ಗಳಿಲ್ಲದಿದ್ದಾಗ ಸಾಕ್ಷಿಯು ತಾನೇ ತಾನಾಗಿ ಪ್ರಾಮಾಣ್ಯಗ್ರಹಣಮಾಡಲು ಸಮರ್ಥವಾಗಿದೆ. ರಾಜಮಾರ್ಗದಲ್ಲಿ ಹೋಗವುವನೆಂದೂ ನೌಕೆಯನ್ನು ಅಪೇಕ್ಷಿಸುವುದಿಲ್ಲ ತಾನೆ.

**ಸಾಕ್ಷ್ಯುಚ್ಛಿಷ್ಟಕೃತಾಹಾರಾ ತೇಽನುಮಾಽಸ್ಯೋಪಜೀವಿನೀ ।**
**ಸಾಕ್ಷೀ ತದಕ್ಷಾದ್ಯಧ್ಯಕ್ಷೋ ನೋಪೇಕ್ಷ್ಯೋಽಯಂ ಮುಮುಕ್ಷುಭಿಃ ॥ ೪೦೭ ॥**

ಆದ್ದರಿಂದ ನಿನ್ನ ಅನುಮಾನವೆಲ್ಲವೂ ಸಾಕ್ಷಿ ಎಂಜಲನ್ನು ತಿಂದು ಬದುಕುವಂತಹದು. ಆದ್ದರಿಂದ ಜಲಾದಿಜ್ಞಾನ ಪ್ರತ್ಯಕ್ಷರೂಪವಾದ ಸಾಕ್ಷಿಯನ್ನು ಮುಮುಕ್ಷುಗಳಾದವರು ಪ್ರಾಮಾಣ್ಯನಿಶ್ಚಯವಿಷಯದಲ್ಲಿ ಎಂದೂ ಉಪೇಕ್ಷೆ ಮಾಡಬಾರದು.

**ಗೋವತ್ಸಜನನೇ ಗೋಭಿರ್ಗೋರ್ವೃಷೈರೇವ ಪೂರ್ಯತೇ ।**
**ವಿಜಾತೀಯಸ್ಯ ವತ್ಸಸ್ಯ ತತ್ಸದೃಕ್ಷೋಽಪರೋಽಪಿ ಚ ॥ ೪೫೯ ॥**
**ಮಹಿಷೋ ವಾ ಪಿಶಾಚೋ ವಾ ಕಶ್ಚಿನ್ನಿಶ್ಚೀಯತೇ ಯತಃ ।**
**ಅತಃ ಸ್ವಯೋಗ್ಯಾರ್ಥಬೋಧೇ ಚಕ್ಷುಷಾಽನ್ಯನ್ನ ಮಾನ್ಯತೇ ॥ ೪೬೦ ॥**

ಹಸುವಿನ ಕರು ಹುಟ್ಟಬೇಕಾದರೆ ಹಸು ಮತ್ತು ಹೋರಿ ಎರಡು ಇದ್ದರೆ ಸಾಕು. ಆದರೆ ವಿಜಾತೀಯವಾದ ಕರು ಉಂಟಾಗಬೇಕಾದರೆ ಹಸುವಿಗೆ ಸದೃಶವಾದದ್ದಾಗಲೀ ಅಥವಾ ಹಸುವಿಗೆ ವಿಸದೃಶವಾದುದ್ದಾಗಲೀ ಇನ್ನೊಂದು ಪ್ರಾಣಿಯು ಬೇಕು. ನಾಲ್ಕು ಕಾಲುಳ್ಳ ಹಸುವಿನಂತಿರುವ ಇನ್ನೊಂದು ವಿಜಾತೀಯ ಪ್ರಾಣಿಯು ಬೇಕಾದರೆ ಕೋಣವು ಬೇಕು. ಅಥವಾ ವಿಚಿತ್ರವಾದ ಕೈಕಾಲುಗಳುಳ್ಳ ಪ್ರಾಣಿಯು ಬೇಕಾದರೆ ಪಿಶಾಚಿಯು ಬೇಕು. ಆದ್ದರಿಂದ ಚಕ್ಷುಸ್ಸು ಸ್ವಯೋಗ್ಯವಾದ ಅರ್ಥದ ಜ್ಞಾನವನ್ನುಂಟುಮಾಡಿಕೊಡಬೇಕಾದರೆ ಬೇರೆ ಏನನ್ನೂ ಅಪೇಕ್ಷಿಸುವುದಿಲ್ಲ.

ವಿಸ್ತರಸ್ತ್ವಸ್ಯ ಸರ್ವಸ್ಯ ಮೂಲಶಾಸ್ತ್ರಮಹಾರ್ಣವೇ ।
ದ್ರಷ್ಟವ್ಯಸ್ತತ್ತಟಸ್ಥಾಣುಮಣಿಸಂಗ್ರಾಹಿಣೋ ವಯಮ್ ॥ ೪೯೨ ॥

ಈ ಪ್ರಾಮಾಣ್ಯಸ್ವತಸ್ತ್ವದ ಬಗ್ಗೆ ಹೆಚ್ಚಿನ ವಿಷಯಗಳನ್ನು ಅರಿಯ ಬಯಸುವವರು ಆಚಾರ್ಯ ಮಧ್ವರ ಸರ್ವಮೂಲ ಗ್ರಂಥಗಳೆಂಬ ಮಹಾಸಮುದ್ರವನ್ನೇ ನೋಡಬೇಕು. ಆ ಸಮುದ್ರದಾಳದಿಂದ ವಾಯುವಿನ ಪ್ರೇರಣೆಯಿಂದ ತೀರಕ್ಕೆ ಬಂದು ಬಿದ್ದಿರುವ ಸಣ್ಣ ಸಣ್ಣ ಯುಕ್ತಿಗಳೆಂಬ ಮುತ್ತು, ಮಣಿಗಳನ್ನು ಮಾತ್ರ ಸಂಗ್ರಹಿಸುವ ಸ್ವಭಾವವುಳ್ಳವರು ನಾವು.

ಸಂಧ್ಯಾಯಾಂ ವಂದತೇ ಯೋಗೀ ಸಂಧ್ಯಾಂ ಭೋಗೀ ತು ಸುಂದರೀಮ್ ।
ಯುಗಪನ್ಮತಿಭೇದಸ್ತದ್ಭಿನ್ನಯೋರೇವ ನಾನ್ಯಥಾ ॥ ೫೩೪ ॥

ಸಂಧ್ಯಾಕಾಲವು ಬಂದಾಗ ಯೋಗಿಯು ಸಂಧ್ಯಾವಂದನೆಯನ್ನು ಮಾಡುತ್ತಾನೆ. ಭೋಗಿಯು ಸುಂದರಿಯನ್ನು ಭೋಗಿಸುತ್ತಾನೆ. ಏಕಕಾಲದಲ್ಲಿ ಉಂಟಾದ ಮತಿಭೇದವು ಆ ಮತಿಗೆ ಆಶ್ರಯನಾದ ಚೇತನರಿಗೆ ಭೇದವಿಲ್ಲದಿದ್ದರೆ ಕೂಡುವುದಿಲ್ಲ. ಆದ್ದರಿಂದ ಮತಿಭೇದವನ್ನು ಚೇತನಭೇದದಿಂದಲೇ ಕೂಡಿಸಬೇಕು.

ಸಖಾಯೌ ಸಯುಜೌ ಚೇತಿ ಮತಿಸ್ಥಾನಭಿದೇ ಸ್ಫುಟಮ್ ।
ಯತ್ಪ್ರತ್ಯಾಹ ತತೋಽಪ್ಯಾಹ ಭೇದವಾಗ್ ಭೇದಮೇವ ಹಿ ॥ ೫೩೫ ॥

ವೇದವಾಕ್ಯದ 'ಸಖಾಯೌ ಸಯುಜೌ' ಎಂಬ ಶಬ್ದವನ್ನು ಪ್ರಯೋಗಮಾಡಿದೆ. ಸಾಯುಜ್ಯ ಇರಬೇಕಾದರೆ ಸ್ಥಾನಭೇದವಿರಲು ಸಾಧ್ಯವಿಲ್ಲ. ಸಖಿತ್ವವು ಇರಬೇಕಾದರೆ ಮತಿಭೇದವಿರಲು ಸಾಧ್ಯವಿಲ್ಲ. ಆದ್ದರಿಂದ ಜೀವೇಶ್ವರರಿಗೆ 'ಸಯುಜೌ ಸಖಾಯೌ' ಎಂದು ಹೇಳಿ ಸ್ಥಾನಭೇದವನ್ನೂ, ಮತಿಭೇದವನ್ನೂ ನಿರಾಕರಿಸುವುದರಿಂದ ಭೇದವಾಕ್ಯಕ್ಕೆ ಮುಖ್ಯವಾದ ಭೇದರೂಪವಾದ ಅರ್ಥವನ್ನೇ ಹೇಳಬೇಕಾಗುತ್ತದೆ.

ನಾರಾಯಣಃ ಪರಂ ಬ್ರಹ್ಮ ನಾನ್ಯದ್ ಬ್ರಹ್ಮ ತತಃ ಪರಮ್ ।
ಪ್ರಾಕ್ ಸೃಷ್ಟೇರಪ್ಸು ಯಃ ಶೇತೇ ವಟಪತ್ರಪುಟೇ ಪ್ರಭುಃ ॥ ೫೩೭ ॥

ನಾರಾಯಣನೇ ಪರಬ್ರಹ್ಮ. ಅವನಿಗಿಂತ ಶ್ರೇಷ್ಠನಾದ ಇನ್ನೊಬ್ಬ ಬ್ರಹ್ಮನಿಲ್ಲ. ಪ್ರಭುವಾದ ಅವನು ಸೃಷ್ಟಿಗಿಂತಲೂ ಮೊದಲು ಪ್ರಳಯೋದಕದಲ್ಲಿ ವಟಪತ್ರದಲ್ಲಿ ಮಲಗಿರುತ್ತಾನೆ.

**ತಸ್ಯಾಪಿ ಸೂತೇ ಯುಕ್ತಿಸ್ತ್ರೀ ಸದುತ್ತರಕುಮಾರಕಮ್ ।**
**ಯಃ ಪರೇಷಾಂ ಕಂಠಮಣಿಂ ಜಿಘೃಕ್ಷತಿ ರಣಾಂಕಣೇ ॥ ೬೦೭ ॥**

**ಅನುವಾದ–** ಹೀಗೆ ಶ್ರುತಿಯನ್ನು ವ್ಯಾಖ್ಯಾನ ಮಾಡುವ ತಾರ್ಕಿಕನಿಗೆ ಸರಿಯಾದ ಉತ್ತರವನ್ನು ಯುಕ್ತಿಯೇ ನೀಡುತ್ತದೆ. ಯಾವ ರೀತಿಯಾಗಿ ಗೋಗ್ರಹಣ ಕಾಲದಲ್ಲಿ ಉತ್ತರಕುಮಾರನು ಶತ್ರುಗಳಾದ ಕೌರವರ ಕಂಠದಲ್ಲಿರುವ ರತ್ನಗಳನ್ನು ಅಪಹರಿಸಿದನೋ, ಅದರಂತೆ ತಾರ್ಕಿಕನ ಯುಕ್ತಿ ಎಂಬ ಸ್ತ್ರೀಯಿಂದ ಹುಟ್ಟಿದ ಸಮರ್ಥನಾದ ಉತ್ತರ ಎಂಬ ಕುಮಾರನು ತಾರ್ಕಿಕನೆಂಬ ಶತ್ರುವಿನ ಕಂಠದಲ್ಲಿರುವ ವಾಗ್ವಿಲಾಸವೆಂಬ ಮಣಿಯನ್ನು ಅಪಹರಿಸುತ್ತಾನೆ.

**ನ(ಗ್ನಾ)ಗ್ನಸ್ತ್ರೀ ಚ ಸ್ವನಯನೈಃ ಸ್ವಸಖೀನಯನೈರಪಿ ।**
**ರಂತೃಣಾಂ ರಾಗಕಲುಷಚಕ್ಷುಷಾ ಚೇಕ್ಷ್ಯತೇ ಕಿಲ ॥ ೬೦೮ ॥**

ಇದರಂತೆ ಬೆತ್ತಲೆಯಾದ ಸ್ತ್ರೀಯೂ ಸಹ ತನ್ನ ಬೆತ್ತಲೆ ದೇಹವನ್ನು ನೋಡಿಕೊಳ್ಳುತ್ತಾಳೆ. ಸಖಿ ಜನರಿಗೂ ಕಾಣಿಸಿಕೊಳ್ಳುತ್ತಾಳೆ. ಅಲ್ಲದೆ, ಇವಳನ್ನು ಕಾಮಿಸುವ ಕಾಮುಕ ಜನರ ರಾಗಕಲುಷಿತವಾದ ಕಣ್ಣುಗಳಿಗೆ ಕೂಡ ಕಾಣಿಸಿಕೊಳ್ಳುತ್ತಾಳೆ.

**ಶ್ರುತಿಶ್ಚ ಚಕ್ಷುಷೈವೈಷಾಂ ವೀಕ್ಷಣಂ ನಾನುಮನ್ಯತೇ ।**
**ಈಕ್ಷಾ ಹಿ ಚಾಕ್ಷುಷಜ್ಞಾನಮನುಮಾನಾಗಮಾದಿಭಿಃ ॥**
**ಅನ್ವಮಂಸ್ತ ಚ ತಜ್‌ಜ್ಞಾನಮತಸ್ತದ್ಬಾಧನಂ ಕುತಃ ॥ ೬೧೦ ॥**

'ನೇಕ್ಷೇತೋದ್ಯಂತಮಾದಿತ್ಯಂ ನಚ ನಗ್ನಾಂ ಪರಸ್ತ್ರಿಯಮ್' ಎಂಬ ಶ್ರುತಿಯು ಚಕ್ಷುರಿಂದ್ರಿಯಜ್ಞಾನವನ್ನಷ್ಟೇ ನಿಷೇಧ ಮಾಡುತ್ತಿದೆ. ಹೊರತು, ಜ್ಞಾನಸಾಮಾನ್ಯವನ್ನು ನಿಷೇಧ ಮಾಡುತ್ತಿಲ್ಲ. ಜ್ಞಾನಸಾಮಾನ್ಯವನ್ನು ನಿಷೇಧ ಮಾಡಿದ್ದಲ್ಲಿ ಸೂರ್ಯೋದಯಾದಿಗಳೇ ಇಲ್ಲವೆಂದು ಅರ್ಥೈಸಬಹುದಿತ್ತು. ಚಕ್ಷುರಿಂದ್ರಿಯಜ್ಞಾನವನ್ನಷ್ಟೇ ನಿಷೇಧ ಮಾಡಿದ್ದರಿಂದ ಅನುಮಾನ, ಆಗಮ ಮೊದಲಾದವುಗಳಿಂದ ಅವುಗಳ ಜ್ಞಾನವನ್ನು ಪಡೆಯಬಹುದೆಂದು ಶ್ರುತಿಯು ಅನುಮೋದಿಸುತ್ತಿದೆ. ಹೀಗಿರುವಾಗ ಸೂರ್ಯೋದಯಾದಿಗಳೇ ಇಲ್ಲವೆಂದು ಹೇಳಲು ಹೇಗೆ ಸಾಧ್ಯ?

**ಸೃಜಾಮಿ ತನ್ನಿಯುಕ್ತೋಽಹಂ ಹರೋ ಹರತಿ ತದ್ವಶಃ ।**
**ವಿಶ್ವಂ ಪುರುಷರೂಪೇಣ ಪರಿಪಾತಿ ತ್ರಿಶಕ್ತಿಧೃ(ಭೃ)ತ್ ॥ ೬೩೫ ॥**

ನಾನು ವಿಷ್ಣುವಿಗೆ ಅಧೀನನಾಗಿ ಸೃಷ್ಟಿಯನ್ನು ಮಾಡುತ್ತೇನೆ. ಈಶ್ವರನು ವಿಷ್ಣುವಿಗೆ ಅಧೀನನಾಗಿ ಸಂಹಾರ ಮಾಡುತ್ತಾನೆ. ಸೃಷ್ಟಿಸ್ಥಿತಿಸಂಹಾರ ಶಕ್ತಿಯನ್ನು ಹೊಂದಿದ ವಿಷ್ಣುವು, ಪುರುಷರೂಪದಿಂದ ಎಲ್ಲ ಜಗತ್ತನ್ನು ಪಾಲನೆ ಮಾಡುತ್ತಾನೆ.

**ಸ ಏವ ಭಗವಾನ್ ಲಿಂಗೈಸ್ತ್ರಿಭಿರೇತೈರಧೋಕ್ಷಜಃ ।**
**ಸ್ವಲಕ್ಷಿತಗತಿರ್ಬ್ರಹ್ಮನ್ ಸರ್ವೇಷಾಂ ಮಮ ಚೇಶ್ವರಃ ॥ ೬೯೬ ॥**

ಎಲೈ ನಾರದರೇ! ಸೃಷ್ಟಿಸ್ಥಿತಿಸಂಹಾರಕಾರಣತ್ವರೂಪವಾದ ತನ್ನ ಸ್ವಲಕ್ಷಣಗಳಿಂದ ಲಕ್ಷಿತನಾದ ಪೂರ್ಣಷಡ್ಗುಣೈಶ್ವರ್ಯಸಂಪನ್ನನಾದ ಈ ಅಧೋಕ್ಷಜನೇ ಎಲ್ಲ ಜೀವರಿಗೂ ಮತ್ತು ನನಗೂ ಪ್ರಭುವಾದವನು.

**ಏಷ ನಿಷ್ಕಂಟಕಃ ಪಂಥಾ ಯತ್ರ ಸಂಪೂಜ್ಯತೇ ಹರಿಃ ।**
**ಕುಪಥಂ ತಂ ವಿಜಾನೀಯಾದ್ ಗೋವಿಂದರಹಿತಾಗಮಮ್ ॥ ೭೩೫ ॥**

ಎಲ್ಲಿ ಹರಿಯು ಚೆನ್ನಾಗಿ ಪೂಜಿಸಲ್ಪಡುತ್ತಾನೆಯೋ, ಅದೇ ನಿಷ್ಕಂಟಕವಾದ ಮಾರ್ಗ. ಗೋವಿಂದನ ಶ್ರೇಷ್ಠತೆಯನ್ನು ಪ್ರತಿಪಾದನೆ ಮಾಡದಿರುವ ಆಗಮವು ದುರ್ಮಾರ್ಗ.

**ಷಟ್ಕಂ ಷಟ್ಕಂ ಪುರಾಣಾನಾಂ ರಾಜಸಂ ತಾಮಸಂ ಕಿಲ ।**
**ಷಟ್ಕಂ ತು ವಿಷ್ಣುವಿಷಯಂ ಸಾತ್ವಿಕಂ ಮೋಕ್ಷದಂ ಕಿಲ ॥ ೭೪೨ ॥**

ಆರು ಪುರಾಣಗಳು ರಾಜಸ, ಆರು ಪುರಾಣಗಳು ತಾಮಸವೆಂದು ಪ್ರಸಿದ್ಧವಷ್ಟೇ? ವಿಷ್ಣುವಿಷಯಕವಾದ ಆರುಪುರಾಣಗಳು ಸಾತ್ವಿಕ ಮತ್ತು ಮೋಕ್ಷದಾಯಕವೆಂತಲೂ ಪ್ರಸಿದ್ಧವಷ್ಟೇ?

**ಪಾದ್ಮಸ್ಯ ಪೂರ್ವಕಾಂಡಸ್ತು ಪೂರ್ವಪಕ್ಷೋ ಭವೇದ್ ಧ್ರುವಮ್ ।**
**ಯತಃ ಪಂಚಪುರಾಣೇಭ್ಯಃ ಸಾತ್ವಿಕೇಭ್ಯೋ ಬಹಿಷ್ಕೃತಃ ॥ ೭೪೩ ॥**

ಪದ್ಮಪುರಾಣದ ಪೂರ್ವಕಾಂಡದಲ್ಲಿ ಹೇಳಿದ ವಿಷಯವು ಐದು ಸಾತ್ವಿಕಪುರಾಣಗಳಲ್ಲಿ ಹೇಳಿದ ವಿಷಯಗಳಿಗಿಂತ ಬಾಹ್ಯವೇ (ವಿರುದ್ಧವೇ) ಆಗಿರುವ ಕಾರಣದಿಂದ ಪಾದ್ಮಪುರಾಣದ ಪೂರ್ವಕಾಂಡವು ನಿಶ್ಚಿತವಾಗಿ ಪೂರ್ವಪಕ್ಷವೇ ಆಗುತ್ತವೆ.

**ಆತ್ಮಹತ್ಯೇವ ಯಲ್ಲೋಕೇ ಪರಹತ್ಯಾಪಿ ದೂಷಣಮ್ ।**
**ಅತಃ ಸ್ವವ್ಯಾಹತೇರ್ಭೀತೌ ಭಯಂ ಭೇದಶ್ರುತೇರ್ನ ಕಿಮ್ ॥ ೮೧೨ ॥**

ಲೋಕದಲ್ಲಿ ಆತ್ಮಹತ್ಯೆಯಂತೆ ಪರಹತ್ಯೆಯೂ ದೂಷಣವಾಗುತ್ತದೆ. ಆದ್ದರಿಂದ ನಿನಗೆ (ನಿರ್ಗುಣಶ್ರುತಿಗೆ) ಸ್ವವ್ಯಾಹತಿಯ ಹೆದರಿಕೆ ಇದ್ದರೆ, ಭೇದಶ್ರುತಿಯ ಹೆದರಿಕೆಯು ಏಕೆ ಇಲ್ಲ?

**ನಹಿ ವಂಧ್ಯಾ ಸುತಂ ಸೂತೇ ನಾಪ್ಯಾತ್ಮಾನಂ ಜಿಘಾಂಸತಿ ।**
**ಅತೋ ಭಾವಾಭಾವತಯಾ ನ ವಿಭಾಗೋ ಮಮೋಚಿತಃ ॥ ೮೪೭ ॥**

**ತದ್ಯತ್ರ ನಾಸ್ತಿ ತತ್ತತ್ರ ನಿಷೇಧಾಮೀತಿ ವಾಗಿಯಮ್ ।**
**ತ್ರೈಗುಣ್ಯವರ್ಜಿತೇ ವಿಷ್ಣೌ ಗುಣತ್ರಯಮದೂಷಯತ್ ॥ ೮೪೮ ॥**

ವಂಧ್ಯೆಯಾದ ವನಿತೆಯು ಸುತನನ್ನು ಪ್ರಸವಿಸುವುದಿಲ್ಲ ಅಥವಾ ತನ್ನನ್ನು ತಾನು ಕೊಂದುಕೊಳ್ಳುವುದಿಲ್ಲ. ಆದ್ದರಿಂದ ಭಾವಾಭಾವರೂಪವಾದ ಈ ವಿಭಾಗವು ನನಗೆ ಸಮ್ಮತವಾದುದಲ್ಲ. ಆದ್ದರಿಂದ ಯಾವುದು ಎಲ್ಲಿ ಇಲ್ಲವೋ ಅಲ್ಲಿ ಅದನ್ನು ನಿಷೇಧ ಮಾಡುತ್ತೇನೆ ಎಂದು ಚಿಂತಿಸಿದ ನಿರ್ಗುಣವಾಕ್ಯವು ಗುಣತ್ರಯ- ವರ್ಜಿತನಾದ ವಿಷ್ಣುವಿನಲ್ಲಿ ಪ್ರಕೃತಿಯ ಗುಣತ್ರಯಗಳನ್ನು ನಿಷೇಧ ಮಾಡುತ್ತದೆ.

ಸುಂದೋಪಸುಂದನ್ಯಾಯೇನ ನಿರ್ಗುಣ್ಯೈಕ್ಯಶ್ರುತೀ ಮಿಥಃ ।
ವಿರೋಧೇನ ಹತೇ ಕುರ್ಯಾನ್ಮಾಯಾಮತತಿಲೋತ್ತಮಾ ॥ ೮೫೨ ॥

ಮಾಯಾಮತವೆಂಬ ತಿಲೋತ್ತಮೆಯು ನಿರ್ಗುಣಶ್ರುತಿ ಮತ್ತು ಐಕ್ಯಶ್ರುತಿಗಳಿಗೆ ಪರಸ್ಪರವಿರೋಧವನ್ನುಂಟುಮಾಡಿ ಸುಂದೋಪಸುಂದ- ನ್ಯಾಯದಿಂದ ಅವುಗಳನ್ನು ಪರಸ್ಪರವಾಗಿ ಕೊಲ್ಲಿಸುತ್ತಾಳೆ.

ಇತ್ಯಾದ್ಯಾಲೋಚ್ಯ ನೈರ್ಗುಣ್ಯಶ್ರುತಿರೈಕ್ಯಶ್ರುತಿಃ ಸಖೀಮ್ ।
ಆದಾಯ ಭಾರತೀಪ್ರಾಣನಾಥಂ ಶರಣಮೀಯುಷೀ ।
ಸ್ವಮಿಥ್ಯಾತ್ವಭಯಾಭಾವಾತ್ ತದುಕ್ತಾರ್ಥೇಷ್ವವರ್ತತ ॥ ೮೫೩ ॥

ಹೀಗೆಲ್ಲಾ ಆಲೋಚನೆಯನ್ನು ಮಾಡಿ ನಿರ್ಗುಣಶ್ರುತಿಯು ತನ್ನ ಸಖಿಯಾದ ಐಕ್ಯಶ್ರುತಿಯನ್ನು ಕರೆದುಕೊಂಡು ಭಾರತೀರಮಣನಾದ ಪ್ರಾಣನಾಥನಿಗೆ ಶರಣಾಗತಳಾಗಿ ತನಗೆ ಮಿಥ್ಯಾತ್ವ ಉಂಟಾಗುವ ಭಯವಿಲ್ಲದ ಕಾರಣ ಅವರು ಹೇಳಿದ ಅರ್ಥವನ್ನೇ ಸ್ವೀಕರಿಸಿತು.

ಕನ್ಯಕಾಽನುದರೇತ್ಯುಕ್ತೇ ಕಾಷ್ಠಂ ಸಂಯೋಜಯಂತಿ ಕಿಮ್ ॥ ೮೬೦ ॥

ಕನ್ಯೆಯು ಅನುದರಳು ಎಂದರೆ ಯಾರಾದರೂ ಕಟ್ಟಿಗೆಯನ್ನು ಜೋಡಿಸುತ್ತಾರೆಯೇ?

ಮೋಕ್ಷಸ್ಯ ನಿರ್ಗುಣತ್ವಂ ಚ ತ್ರೈಗುಣ್ಯೋಜ್ಝಿತತೈವ ಹಿ ।
ಸಮಸ್ತಧರ್ಮಶೂನ್ಯತ್ವೇ ಮೋಕ್ಷಾಯ ಪ್ರಯತೇತ ಕಃ ॥ ೮೬೧ ॥
ಧರ್ಮಾಯ ಯಶಸೇಽರ್ಥಾಯ ಜ್ಞಾನಾಯ ಯತತೇ ಜನಃ ।
ಲುಪ್ತ್ಯೈ ಸಮಸ್ತಭಾಗ್ಯಾನಾಂ ಕೋ ನೂನ್ಮತ್ತಃ ಪ್ರವರ್ತತೇ ॥ ೮೬೨ ॥

ಮೂರೂ ಧರ್ಮಗಳಿಂದ ರಹಿತವಾದ ಕಾರಣದಿಂದಲೇ ಮೋಕ್ಷವನ್ನು ನಿರ್ಗುಣ ಎಂದು ಕರೆಯುತ್ತಾರೆ. ಅದನ್ನು ಬಿಟ್ಟು ಮೋಕ್ಷವು ಸಮಸ್ತಧರ್ಮಶೂನ್ಯ ಎಂದು ಹೇಳಿದರೆ, ಅಂತಹ ಮೋಕ್ಷಕ್ಕಾಗಿ ಯಾರು ಪ್ರಯತ್ನಪಡುತ್ತಾರೆ? ಎಲ್ಲರೂ ಧರ್ಮಕ್ಕಾಗಿ, ಕೀರ್ತಿಗಾಗಿ, ಧನಕ್ಕಾಗಿ, ಜ್ಞಾನಕ್ಕಾಗಿ ಪ್ರಯತ್ನಪಡುತ್ತಾರೆ. ಅವುಗಳೆಲ್ಲ ಭಾಗ್ಯಗಳು ಎಂದು ಪರಿಗಣಿಸಲ್ಪಡುತ್ತವೆ. ಅಂತಹ ಸಮಸ್ತಭಾಗ್ಯಗಳ ಲೋಪಕ್ಕಾಗಿ ಯಾವ ಹುಚ್ಚನು ತಾನೆ ಪ್ರಯತ್ನಪಡುತ್ತಾನೆ?

ನಹಿ ನಿರ್ಗುಣಶಬ್ದೋऽಯಂ ಚಿನ್ಮಾತ್ರಸ್ಯ ವಿವಕ್ಷಯಾ ।
ಭಾವಿನೈರ್ಗುಣ್ಯದೃಷ್ಟ್ಯಾ ವಾ ಶಿವಸ್ಯಾಪಿ ಪ್ರಸಕ್ತಿತಃ ॥ ೮೭೪ ॥

ಭಾಗವತದಲ್ಲಿರುವ ನಿರ್ಗುಣ ಶಬ್ದವು ಕೇವಲ ಚಿನ್ಮಾತ್ರವನ್ನು ಹೇಳುವುದಿಲ್ಲ. ಹಾಗೆ ಹೇಳುವುದಾದರೆ, ಈಗ ಗುಣಗಳಿದ್ದರೂ ಭವಿಷ್ಯತ್ಕಾಲದಲ್ಲಿ ನಿರ್ಗುಣತ್ವ ಉಂಟಾಗುತ್ತದೆ ಎಂಬ ದೃಷ್ಟಿಯಿಂದ ಹೇಳಬೇಕು. ಹಾಗೆ ಹೇಳಿದರೆ, ಶಿವನಿಗೂ ಭವಿಷ್ಯತ್ಕಾಲದಲ್ಲಿ ಅಂತಹ ನಿರ್ಗುಣತ್ವ ಉಂಟಾಗುವುದರಿಂದ ಹರಿಯೇ ನಿರ್ಗುಣ ಎಂದು ಹೇಳುವುದು ಅನುಪಪನ್ನವಾಗುತ್ತದೆ.

ಅತೋ ನಿರ್ಗುಣಶಬ್ದೋऽಯಂ ಹರೌ ತ್ರಿಗುಣವರ್ಜನಾತ್ ।
ಮುಕ್ತೋऽಪಿ ತೇನ ತಚ್ಛಬ್ದೋ ಗುಣಬದ್ಧಾಃ ಶಿವಾದಯಃ ॥ ೮೭೫ ॥

ಆದ್ದರಿಂದ ನಿರ್ಗುಣಶಬ್ದವು ಹರಿಯಲ್ಲಿ ತ್ರಿಗುಣರಾಹಿತ್ಯವನ್ನೇ ಹೇಳುತ್ತದೆ. ಮುಕ್ತನಲ್ಲಿಯೂ ನಿರ್ಗುಣಶಬ್ದವು ತ್ರಿಗುಣರಾಹಿತ್ಯವನ್ನೇ ಹೇಳುತ್ತದೆ. ಶಿವಾದಿಗಳು ತ್ರಿಗುಣಬದ್ಧರಾದವರು.

ಇಯಂ ರಾಜವಧೂಃ ಕಾಮಚಾರಾ ವಾರಾಂಗನಾ ನ ತೇ ।
ಸ್ವೇಚ್ಛಾನುಸಾರಸಂಚಾರೋ ಮಾನಚ್ಛೇದಾಯ ತೇ ಭವೇತ್ ॥ ೮೯೦ ॥

ಏಕೋ ದೇವಃ ಎಂಬ ವಾಕ್ಯವು ರಾಜಪತ್ನಿಯೇ ಹೊರತು ಮನಸ್ಸಿಗೆ ಬಂದಂತೆ ಸಂಚರಿಸುವ ನಿನ್ನ ವಾರಾಂಗನೆಯಲ್ಲ. ಮನಸ್ಸಿಗೆ ಬಂದಂತೆ ಸಂಚರಿಸಿದರೆ ಅದು ನಿನ್ನ ಮಾನಹಾನಿಗೆ ಕಾರಣವಾಗುತ್ತದೆ.

ವ್ಯಾಸಃ ಶ್ರೌತಗುಣಾಂಭೋಧೌ ನೈಕತ್ಯಾಗಂ ಚ ಮನ್ಯತೇ ।
ಸರ್ವಧರ್ಮೋಪಪತ್ತೇಶ್ಚೇತ್ಯಾಹ ಯತ್ ಸ್ವಯಮಂಜಸಾ ॥ ೮೯೧ ॥

ಸೂತ್ರಕಾರರಾದ ವೇದವ್ಯಾಸರು ತಾವೇ ಸೂತ್ರಗಳನ್ನು ರಚಿಸಿ ಸರ್ವಧರ್ಮೋಪಪತ್ತೇಶ್ಚ ಎಂಬ ಸೂತ್ರದಲ್ಲಿ ಸ್ಪಷ್ಟವಾಗಿ ಎಲ್ಲ ಗುಣಗಳನ್ನೂ ಭಗವಂತನಲ್ಲಿ ಹೇಳಿರುವುದರಿಂದ ಅವರು ಶ್ರುತಿಯು ಹೇಳಿದ ಭಗವಂತನ ಗುಣಗಳ ಸಮುದ್ರದಲ್ಲಿ ಒಂದು ಗುಣದ ತ್ಯಾಗವನ್ನೂ ಸಹ ಅಂಗೀಕರಿಸುವುದಿಲ್ಲ.

ವೇದ ವೇದಾರ್ಥಮಖಿಲಂ ವೇದವ್ಯಾಸಃ ಸತಾಂ ಪತಿಃ ।
ಸ ಹಿ ಶ್ರುತಿಸತೀಕಂಠಸೂತ್ರಸೂತ್ರಕೃದೀಶ್ವರಃ ॥ ೮೯೨ ॥

ಸಜ್ಜನರ ಒಡೆಯರಾದ ವೇದವ್ಯಾಸರೇ ಅಖಿಲವೇದಾರ್ಥಗಳನ್ನೂ ತಿಳಿದವರು. ಪ್ರಭುಗಳಾದ ಅವರೇ ಶ್ರುತಿ ಎಂಬ ಸಾಧ್ವಿಗೆ ಕಂಠದ ಮಂಗಲ- ಸೂತ್ರದಂತಿರುವ ಬ್ರಹ್ಮಸೂತ್ರಗಳನ್ನು ರಚಿಸಿದವರಷ್ಟೇ?

ವಿರುದ್ಧಾರ್ಥಮತೋ ಬಾಧ್ಯಮವಿರುದ್ಧಂ ನ ಬಾಧ್ಯತೇ ।
ಅಹೇಃ ಪುಚ್ಛಂ ಹಿ ಕಶ್ಛಿಂದ್ಯಾನ್ಮುಖಂ ಛಿಂದಂತಿ ಸರ್ವಶಃ ॥ ೬೨೨ ॥

ಆದ್ದರಿಂದ ವಿರುದ್ಧಾರ್ಥವನ್ನು ಹೇಳುವ ವಾಕ್ಯವು ಬಾಧಿತವಾಗುತ್ತದೆ. ಅವಿರುದ್ಧವಾದ ಅರ್ಥವನ್ನು ಹೇಳುವ ವಾಕ್ಯವು ಬಾಧಿಸಲ್ಪಡುವುದಿಲ್ಲ. ಯಾವನುತಾನೆ ಸರ್ಪದ ಬಾಲವನ್ನು ಕತ್ತರಿಸುತ್ತಾನೆ? ಸರ್ಪದ ತಲೆಯನ್ನಷ್ಟೇ ಎಲ್ಲರೂ ಕತ್ತರಿಸುತ್ತಾರೆ.

ಸರ್ವಂ ಹರತು ಸರ್ವಸ್ವಂ ವಿದ್ಯಾಂ ಕೋ ವಿದುಷೋ ಹರೇತ್ ।
ಕಿಂ ಗುಣಾಂಸ್ತ್ಯಾಜಯನ್ ವಿಷ್ಣೋರ್ನಿರ್ಗುಣತ್ವಗುಣಂ ತ್ಯಜೇತ್ ॥ ೬೭೧ ॥

ಒಬ್ಬ ವಿದ್ವಾಂಸನ ಸರ್ವಸ್ವವನ್ನೂ ಇನ್ನೊಬ್ಬನು ಹರಣ ಮಾಡಲಿ. ಆದರೆ ಅವನ ವಿದ್ಯೆಯನ್ನು ಯಾರಿಗೆ ಹರಣ ಮಾಡಲು ಸಾಧ್ಯ? ವಿಷ್ಣುವಿನಲ್ಲಿ ಗುಣವಿಲ್ಲ ಎಂದು ಹೇಳುವವನು, ನಿರ್ಗುಣತ್ವರೂಪವಾದ ಗುಣವನ್ನಾದರೂ ಪರಿತ್ಯಾಗ ಮಾಡಲು ಸಾಧ್ಯವೇ?

ಅತಃ ಸತ್ಯತ್ವರಹಿತಂ ಮಿಥ್ಯೈವ ಸ್ಯಾನ್ನ ಸಂಶಯಃ ।
ಶಿರಸೋ ಮುಂಡನೇ ತಸ್ಮಾಚ್ಛಿಖಾಮುಂಡನಮಪ್ಯಭೂತ್ ॥ ೬೮೬ ॥

ಆದ್ದರಿಂದ ಸತ್ಯತ್ವರಹಿತವಾದುದು ಮಿಥ್ಯಾಭೂತವೇ ಆಗುತ್ತದೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ತಲೆಯನ್ನೇ ಮುಂಡನ ಮಾಡಿದಾಗ ಅಲ್ಲಿರುವ ಶಿಖೆಯೂ ಮುಂಡಿತವಾಗುತ್ತದಷ್ಟೇ?

ಯದಿ ಸತ್ಯಪದೇನಾಪಿ ಬ್ರಹ್ಮ ಲಕ್ಷ್ಯಂ ಭವೇತ್ ತವ ।
ತರ್ಹಿ ತತ್ಪದವಾಚ್ಯಂ ಮೇ ಜಗತ್ ಸತ್ಯಂ ಭವಿಷ್ಯತಿ ॥ ೬೮೭ ॥

ಒಂದು ಪಕ್ಷ ನಿನ್ನ ಬ್ರಹ್ಮನು ಸತ್ಯಪದದಿಂದ ಲಕ್ಷ್ಯನಾಗುವುದಾದರೆ ಆಗ ಸತ್ಯಪದವಾಚ್ಯವಾದ ಜಗತ್ತು ನನಗೆ ಸತ್ಯವಾಗುತ್ತದೆ.

ದುರ್ಜನಃ ಸಜ್ಜನಸ್ಯಾರ್ಥಮುಜ್ಜಿಹೀರ್ಷೇಚ್ಛನೈಃಶನೈಃ ।
ಕಿಂ ನೋಚುರ್ವೇದವಾಚ್ಯಸ್ಯ ಸ್ವಪದೈರಪ್ಯವಾಚ್ಯತಾಮ್ ।
ಅಂಧಸ್ಯಾಂಧ್ಯಂ ಹಿ ಸಂದಧ್ಯುರಪದೇ ಪದಸಂಪದಃ ॥ ೬೯೦ ॥

ದುರ್ಜನನು ಸಜ್ಜನರ ದ್ರವ್ಯವನ್ನು ನಿಧಾನವಾಗಿ ಅಪಹರಿಸಲು ಇಚ್ಛಿಸುತ್ತಾನೆ. ವೇದದಲ್ಲಿರುವ ಎಲ್ಲಾ ಪದಗಳಿಂದಲೂ ವಾಚ್ಯನಾದ ಬ್ರಹ್ಮನನ್ನು, ಬ್ರಹ್ಮನನ್ನೇ ಸಾಕ್ಷಾತ್ತಾಗಿ ಹೇಳುವ ಸತ್ಯಜ್ಞಾನಾದಿ ಪದಗಳಿಂದಲೂ ಅವಾಚ್ಯನೆಂದು ಹೇಳಲಿಲ್ಲವೇ? ಅಂತಹವರು ಇನ್ನೊಬ್ಬರ ಆಂಧ್ಯವನ್ನು ಬಯಸುತ್ತಾರೆ. ಪಾದವಿಡಲು ಸಾಧ್ಯವಿಲ್ಲದ ಸ್ಥಳದಲ್ಲಿ ಪಾದವಿಕ್ಷೇಪವನ್ನು ಚಿಂತಿಸುತ್ತಾರೆ.

**ನಾಸಾಂ ಛಿತ್ವಾಪಿ ದುಷ್ಟಃ ಸ್ಯಾದನ್ಯಸ್ಯಾಶಕುನಂ ಚರೇತ್ ।**
**ಸತ್ಯಾದಿಪದಮುಖ್ಯಾರ್ಥಃ ಸತ್ಯಾದನ್ಯತ್ ಕಿಲಾನೃತಮ್ ॥ ೯೯೨ ॥**

ತನ್ನ ಮೂಗನ್ನು ಕೊಯ್ದುಕೊಂಡಾದರೂ ದುಷ್ಟನಾದವನು ಇನ್ನೊಬ್ಬನಿಗೆ ಅಪಶಕುನವನ್ನು ಆಚರಿಸುತ್ತಾನೆ. ಸತ್ಯಾದಿಪದದ ಮುಖ್ಯಾರ್ಥವು ಸತ್ಯವಲ್ಲ, ಅನೃತವು ಸತ್ಯಾದಿಪದದ ಮುಖ್ಯಾರ್ಥ ಎಂದು ಹೇಳುವವರೂ ಸಹ ಹಾಗೆಯೇ.

**ಶಾಂತಿಕರ್ಮಣಿ ವೇತಾಲೋತ್ಥಾನಂ ಸ್ಯಾದಬುಧಸ್ಯ ಹಿ ।**
**ಅಖಂಡತ್ವಾದ್ಯಭಾವೇ ತು ಸ್ಯೈವಾಯಾದ್ಧಿ ಸಖಂಡತಾ ॥ ೯೯೪ ॥**

ಅವಿವೇಕಿಯಾದ ನರನಿಗೆ ಶಾಂತಿಕರ್ಮದಲ್ಲಿ ಬೇತಾಳವು ಎದ್ದಂತಾಯಿತು. ಅಖಂಡತ್ವವು ಒಂದು ಧರ್ಮವಾದುದರಿಂದ ಅಖಂಡತ್ವವು ಬ್ರಹ್ಮನಲ್ಲಿಲ್ಲವೆಂದರೆ ಬ್ರಹ್ಮನಿಗೆ ಸಖಂಡತ್ವವೇ ಉಂಟಾಗುತ್ತದೆಯಷ್ಟೇ?

**ಪರಾಯುಧೈಃ ಪರಂ ಛಿಂದ್ಯಾಚ್ಛಸ್ತ್ರಶಿಕ್ಷಾವಿಚಕ್ಷಣಃ ।**
**ಅವಾಚ್ಯಪದಲಕ್ಷ್ಯತ್ವೇ ಮುಖ್ಯಾರ್ಥಾವಾಚ್ಯತಾಕ್ಷತೇಃ ॥ ೯೯೫ ॥**

ಶಸ್ತ್ರಶಿಕ್ಷೆಯಲ್ಲಿ ವಿಚಕ್ಷಣನಾದವನು ಪರಾಯುಧದಿಂದಲೇ ಪರರನ್ನು ಛೇದಿಸುತ್ತಾನೆ. ಬ್ರಹ್ಮನು ಅವಾಚ್ಯಪದಲಕ್ಷ್ಯನೆಂದು ಹೇಳಿದರೆ ಅವಾಚ್ಯಪದದ ಮುಖ್ಯಾರ್ಥವಾದ ಅವಾಚ್ಯತ್ವವೂ ಸಹ ಬ್ರಹ್ಮನಿಂದ ಹೊರಟುಹೋಗುತ್ತದೆ.

**ಪರಪ್ರಕಾಶಕೋ ದೀಪೋ ನ ಕಿಂ ಸ್ವಸ್ಯ ಪ್ರಕಾಶಕಃ ।**
**ವಿಶೇಷೋಽನ್ಯತ್ರ ನಿರ್ವಾಹೀ ಸ್ವನಿರ್ವಾಹೀ ಕಥಂ ನ ಸಃ ॥ ೧೦೦೩ ॥**

ಇನ್ನೊಂದು ವಸ್ತುವನ್ನು ಪ್ರಕಾಶಿಸುವ ದೀಪವು ಹೇಗೆ ತನ್ನನ್ನೂ ಪ್ರಕಾಶಿಸುತ್ತದೆಯೋ, ಹಾಗೆಯೇ ಇನ್ನೊಂದನ್ನು ನಿರ್ವಾಹ ಮಾಡುವ ವಿಶೇಷವು ತನ್ನನ್ನೂ ನಿರ್ವಾಹ ಮಾಡಿಕೊಳ್ಳುತ್ತದೆ.

**ಅನ್ನಂ ದದದ್ಧಿ ಪುರುಷೋ ದರ್ವೀಂ ಕಾಂಚಿತ್ ಪ್ರಕಲ್ಪಯೇತ್ ।**
**ಅಭಿನ್ನಧರ್ಮತಾಂ ವೇದೋ ಯಥಾ ತಚ್ಛಕ್ತಿಕಲ್ಪಕಃ ॥ ೧೦೦೭ ॥**

ಅನ್ನವನ್ನು ಬಡಿಸುವ ಪುರುಷನು ಯಾವುದಾದರೊಂದು ಸಟ್ಟುಗ (ಅನ್ನವನ್ನು ಬಡಿಸುವ ಸಾಧನ) ಕಲ್ಪಿಸುತ್ತಾನೆ. ಹಾಗೆಯೇ ಅಭಿನ್ನವಾದ ಧರ್ಮವನ್ನು ಹೇಳುವ ವೇದವು ಧರ್ಮತ್ವವನ್ನು ಉಪಪಾದನೆ ಮಾಡುವ ಒಂದು ಶಕ್ತಿಯನ್ನು ಕಲ್ಪಿಸುತ್ತದೆ.

**ನಿಷ್ಫಲಂ ಜನ್ಮಿನಾಂ ಜನ್ಮ ಪರಲೋಕಫಲಂ ನ ಚೇತ್ ।**
**ಯಥಾ ತ್ರಿಗುಣಶೂನ್ಯತ್ವಾದ್ ಗುಣಪೂರ್ಣೋಽಪಿ ನಿರ್ಗುಣಃ ॥ ೧೦೧೬ ॥**

ಪರಲೋಕವನ್ನು ಸಂಪಾದನೆ ಮಾಡದಿದ್ದರೆ ಜೀವನ ಜನ್ಮವು ನಿಷ್ಫಲವಾದುದು. ಹೇಗೆ ತ್ರಿಗುಣಶೂನ್ಯನಾದ ಕಾರಣದಿಂದ ಗುಣಪೂರ್ಣನಾದವನೂ ನಿರ್ಗುಣನೆಂದು ಕರೆಸಿಕೊಳ್ಳುತ್ತಾನೆಯೋ ಅದರಂತೆ.

**ಜ್ಞಾನಾದಿಗುಣಶೂನ್ಯತ್ವಂ ಚೇತನಸ್ಯ ನ ಹಿ ಕ್ವಚಿತ್ ।**
**ಅತೋ ನಿರ್ಗುಣವಾಕ್ಯಾರ್ಥೋ ನ ಸರ್ವಗುಣಶೂನ್ಯತಾ ॥ ೧೦೧೭ ॥**

ನಿರ್ಗುಣ ಎಂಬ ಶಬ್ದಕ್ಕೆ ಸರ್ವಗುಣಶೂನ್ಯತ್ವವನ್ನು ಅರ್ಥವೆಂದು ಹೇಳಬಾರದು. ಏಕೆಂದರೆ ಚೇತನನಿಗೆ ಸರ್ವಗುಣಾಂತರ್ಗತವಾದ ಜ್ಞಾನರೂಪವಾದ ಗುಣದ ಶೂನ್ಯತ್ವವು ಎಂದೂ ಬರುವುದಿಲ್ಲ. ಆದ್ದರಿಂದ ಯಾವ ವಾದಿಗಳೂ ಸಹ ನಿರ್ಗುಣಶಬ್ದಕ್ಕೆ ಸರ್ವಗುಣಶೂನ್ಯ ಎಂಬ ಅರ್ಥವನ್ನು ಮಾಡಲೇ ಬಾರದು.

**ತಸ್ಮಾದ್ ವಿಷ್ಣೋರ್ಗುಣಾಃ ಸರ್ವೇ ನಿತ್ಯಾಃ ಸತ್ಯಾಶ್ಚ ಸರ್ವದಾ ।**
**ಅನಂತಾಃ ಶ್ರುತಿಸದ್ಯುಕ್ತಿಸಿದ್ಧಾಶ್ಚೇತ್ಯತಿಮಂಗಲಮ್ ॥ ೧೦೧೮ ॥**

ಆದ್ದರಿಂದ ವಿಷ್ಣುವಿನ ಎಲ್ಲಾ ಗುಣಗಳೂ ಯಾವಾಗಲೂ ಸತ್ಯವಾದುವು ಮತ್ತು ನಿತ್ಯವಾದುವುಗಳು. ಅವು ಅನಂತವಾಗಿವೆ. ಮತ್ತು ಶ್ರುತಿಗಳಿಂದಲೂ ನಿರ್ದುಷ್ಟಯುಕ್ತಿಗಳಿಂದಲೂ ಸಿದ್ಧವಾಗಿವೆ ಎಂಬಲ್ಲಿ ಪರಮಮಂಗಳ.

**ವಾದಿರಾಜಾಖ್ಯಯತಿನಾ ಸಾಧಿತಾ ಯುಕ್ತಿಮಲ್ಲಿಕಾ ।**
**ಗುಣಸೌರಭಸರ್ವಸ್ವಂ ಮುದೇ ವಿಷ್ಣೋರ್ನ್ಯವೇದಯತ್ ॥ ೧೦೧೯ ॥**

ವಾದಿರಾಜರೆಂಬ ಯತಿಯಾದ ನನ್ನಿಂದ ಸಾಧಿತವಾದ ಯುಕ್ತಿಮಲ್ಲಿಕೆಯು ಗುಣಸೌರಭದ ಸರ್ವಸ್ವವನ್ನು ಸಂತೋಷದಿಂದ ವಿಷ್ಣುವಿಗೆ ಅರ್ಪಿಸಿದಳು.

॥ ಶ್ರೀಕೃಷ್ಣಾರ್ಪಣಮಸ್ತು ॥

—o—



## ರಾಜಸುಭಾಷಿತ

ಹಯಗ್ರೀವಪದಾಂಭೋಜಮಧುಮತ್ತಮಧುವ್ರತೈಃ ।
ಸದಾ ಸೇವ್ಯಾ ವಾದಿರಾಜರಚಿತಾ ಯುಕ್ತಿಮಲ್ಲಿಕಾ ॥

ವಾದಿರಾಜರು ರಚಿಸಿದ ಈ ಯುಕ್ತಿಮಲ್ಲಿಕಾ ಗ್ರಂಥವು
ಹಯಗ್ರೀವದೇವರ ಪಾದಕಮಲಗಳ ಮಧುವಿನಿಂದ ಮತ್ತರಾದ
ದುಂಬಿಗಳಂತಿರುವ ಸಜ್ಜನರಿಂದ ಯಾವಾಗಲೂ ಸೇವ್ಯವಾದುದು.

